# ಗೌರೀಶ ಕಾಯ್ಕಿಣಿ

# ಸಮಗ್ರ ಸಾಹಿತ್ಯ

ಸಂಪುಟ : ೩ ಪಾಶ್ಚಾತ್ಯ ಪ್ರತಿಭೆ

ಅರವತ್ನಾಲ್ಕನೆಯ ಪ್ರಕಟಣೆ

# ಸಮಗ್ರ ಸಾಹಿತ್ಯ

## ಸಂಪುಟ : ಮೂರು

## ಪಾಶ್ಚಾತ್ಯ ಪ್ರತಿಭೆ

ಗೌರೀಶ ಕಾಯ್ಕಿಣಿ




೧೯೯೪

' SAMAGRA SĀHITYA ' by Gourish Kaikini, Gokarna Uttar Kannada [ Karnataka ]. Edited by Vishnu Naik and Published by Shri Raghavendra Prakashana Ambarkodla, Ankola - 581 314.

First Impression : December, 1994. Pages : 462

Price Rs. 125-00 ಬೆಲೆ : ೧೨೫-೦೦



ಮುದ್ರಣ :

ಶ್ರೀ ರಾಘವೇಂದ್ರ ಪ್ರಿಂಟರ್ಸ್, ಕಾರವಾರ (ಉ. ಕ.)

---

# ಪರಿವಿಡಿ

# ಮೊದಲ ಮಾತು

ಹತ್ತು ಸಂಪುಟಗಳಲ್ಲಿ ನಾವು ಪ್ರಕಟಿಸಬೇಕೆಂದಿರುವ ಶ್ರೀಮಾನ್ ಗೌರೀಶ ಕಾಯ್ಕಿಣಿಯವರ 'ಸಮಗ್ರ ಸಾಹಿತ್ಯ'ದ ಮೂರನೆಯ ಸಂಪುಟವೀಗ ಹೊರ ಬರುತ್ತಿದೆ.

ಗೌರೀಶರ ಬಹುಹಿಂದಿನ ಹಾಗೂ ಬಹುಮಹತ್ವದ್ದಾದ, 'ಪಶ್ಚಿಮದ ಪ್ರತಿಭೆ ಭಾಗ-೧', 'ಪಶ್ಚಿಮದ ಪ್ರತಿಭೆ ಭಾಗ-೨' ಮತ್ತು 'ಸತ್ಯಾರ್ಥಿ' ಗ್ರಂಥಗಳು ಈ ಸಂಪುಟದೊಳಗೆ ಸೇರಿವೆ. ಮೇಲಾಗಿ ಗೌರೀಶರು ಇತ್ತೀಚೆ ಹೊರತಂದ, 'ನವ್ಯದ ನಾಲ್ಕು ನಾಯಕರು' ಎಂಬ ಕಿರಿಹೊತ್ತಿಗೆಯೊಂದು ಇದರಲ್ಲಿ ಸ್ಥಳ ಪಡೆದಿದೆ. ಒಟ್ಟಾರೆ, ಜಗತ್ತಿನ ಕಣ್ಣು ತೆರೆಸಲು ಅಥವಾ ಬೌದ್ಧಿಕ ಪ್ರಪಂಚಕ್ಕೆ ಹೊಸದಿಕ್ಕನ್ನೂ ದಾರಿಯನ್ನೂ ತೋರಿಸಲು, ಪ್ರಾಮಾಣಿಕವಾಗಿ-ಮನಮುಟ್ಟಿ ಬದುಕಿನಾದ್ಯಂತ ಹೆಣಗಾಡಿದ-ವಿವಿಧ ರಂಗಗಳನ್ನು ಪ್ರತಿನಿಧಿಸುತ್ತಿರುವ-ಪಶ್ಚಿಮದ ಪ್ರತಿಭಾ ಸಂಪನ್ನರ/ವಿದ್ವಾಂಸರ/ದಾರ್ಶನಿಕರ ಬಗೆಗೆ ಸಾಕಷ್ಟು ವಿವರವಾಗಿಯೇ ಪರಿಚಯವನ್ನು ಕಟ್ಟಿಕೊಡುವ ಸಂಪುಟ ಇದಾಗಿದೆ.

ರಾಜ್ಯದ ರಾಜಧಾನಿಯಿಂದ ಬಹು ದೂರದ ಒಂದು ಗ್ರಾಮಾಂತರ ಭಾಗದಲ್ಲಿ ಕೆಲಸ ಮಾಡುತ್ತಿರುವ ನಮ್ಮ ಪ್ರಕಾಶನವು-ಸುಮಾರು ೫ ಲಕ್ಷ ರೂಪಾಯಿ ಅಂದಾಜು ವೆಚ್ಚದ ಈ ಯೋಜನೆಯನ್ನು ಕೈಗೆತ್ತಿಕೊಂಡಾಗ ಬಹಳಷ್ಟು ಜನ ಸಾಹಿತಿಮಿತ್ರರು ನನ್ನ ಧೈರ್ಯದ ಬಗ್ಗೆ ಮೆಚ್ಚಿಗೆಯ ಮಾತು ಹೇಳುತ್ತಲೇ, ಭವಿಷ್ಯದಲ್ಲಿ ನಾನು ಬೀಳಬಹುದಾದ ಬಾವಿಯ ಆಳವನ್ನು ಲೆಕ್ಕ ಹಾಕುತ್ತ ಅನುಕಂಪ ವ್ಯಕ್ತಪಡಿಸಿದ್ದೂ ಉಂಟು. 'ವಿಶ್ವವಿದ್ಯಾಲಯಗಳೇ ಹಿಂದೇಟು ಹಾಕುವಂಥ ಕಷ್ಟದ ಕೆಲಸವನ್ನು ಕುತ್ತಿಗೆಗೆ ಕಟ್ಟಿಕೊಳ್ಳಬೇಡಿ' ಎಂದು-ನನ್ನ ಮೇಲಿನ ಪ್ರಾಮಾಣಿಕ ಸಹಾನುಭೂತಿಯಿಂದ ಕೆಲವರು ಕಿವಿಮಾತು ಹೇಳಿದ್ದೂ ಉಂಟು. ಪ್ರಥಮ ಸಂಪುಟ ಹೊರ ಬರುತ್ತಲೇ, ಈ ಯೋಜನೆಗೆ, ಪ್ರಕಟಣ ಪೂರ್ವ ಬೆಲೆತೆತ್ತೊ, ಪೋಷಕ-ಮಹಾಪೋಷಕರಾಗಿಯೋ ನನ್ನ ಬೆನ್ನುತಟ್ಟಿದವರೂ ಇದ್ದಾರೆ. ಇವರೆಲ್ಲರನ್ನು ಕೃತಜ್ಞತೆಗಳೊಂದಿಗೆ ನೆನೆಯುವುದು ನನ್ನ ಪ್ರಥಮ ಕರ್ತವ್ಯವಾಗಿದೆ.

ಕನ್ನಡ ಪುಸ್ತಕ ಪ್ರಾಧಿಕಾರವು, ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯದ ಸಂಪುಟಗಳು ಹೊರಬಂದಂತೆಲ್ಲ, ಪ್ರತಿ ಸಂಪುಟದ ನೂರು ಪ್ರತಿಗಳನ್ನು

ಖರೀದಿಸುವುದಾಗಿ ೧೯೯೩ ರ ನವೆಂಬರ ೨೯ ಮತ್ತು ೩೦ ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಒಂದು ನಿರ್ಣಯವನ್ನೇ ಅಂಗೀಕರಿಸಿ, ನನಗೆ ಕಿಂಚಿತ್ ಬಲ ನೀಡಿದ್ದಾರೆ. ಈ ಬಗ್ಗೆ ನಾನು ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಿಗೆ ಹಾಗೂ ಪ್ರಾಧಿಕಾರದ ಎಲ್ಲ ಸದಸ್ಯರಿಗೆ ಉಪಕೃತನಾಗಿದ್ದೇನೆ. ಪ್ರತಿಸಂಪುಟದ ಕನಿಷ್ಠ ೫೦೦ ಪ್ರತಿಗಳು–ಅದು ಪ್ರಕಟವಾದ ಒಂದು ವರ್ಷದೊಳಗೆ–ಮಾರಾಟವಾಗದಿದ್ದಲ್ಲಿ ಹಣತೊಡಗಿಸಿದ ವ್ಯಕ್ತಿ ತಲೆಯೆತ್ತುವುದಕ್ಕೆ ಸಾಧ್ಯವಿಲ್ಲ. ಸರಕಾರದ ವತಿಯಿಂದ ಪುಸ್ತಕೋದ್ಯಮದ ಬಗ್ಗೆ ಕಾಳಜಿ ತೆಗೆದುಕೊಳ್ಳಬೇಕಾಗಿರುವ ಸಾರ್ವಜನಿಕ ಗ್ರಂಥಾಲಯ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕನ್ನಡ ಪುಸ್ತಕ ಪ್ರಾಧಿಕಾರಿಗಳು ಸೇರಿ ಕನಿಷ್ಠ ಪ್ರತಿ ಪುಟದ ೩೦೦ ಪ್ರತಿಗಳನ್ನಾದರೂ ಖರೀದಿಸದೆ ಹೋದಲ್ಲಿ-ಇನ್ನೂ ಏಳು ಸಂಪುಟಗಳನ್ನು ಪ್ರಕಟಿಸಬೇಕಾಗಿರುವ–ರಾಘವೇಂದ್ರ ಪ್ರಕಾಶನವು ಸಂಪೂರ್ಣ ಆರ್ಥಿಕ ನಷ್ಟಕ್ಕೊಳಗಾಗಿ ಕುಸಿಯುವುದೆಂಬ ಭಯ ನಮ್ಮನ್ನು ಕಾಡುತ್ತಿದೆ. ಹಾಗಾಗದಂತೆ ನೋಡಿಕೊಳ್ಳಲು ಮೇಲೆ ಹೆಸರಿಸಿದ ಸರಕಾರಿ ಇಲಾಖೆಗಳೂ, ಸಾಹಿತ್ಯ–ಸಂಸ್ಕೃತಿಯ ಬಗ್ಗೆ ಪ್ರೀತ್ಯಾದರವುಳ್ಳ ಸಾರ್ವಜನಿಕ ಸಂಘ–ಸಂಸ್ಥೆಗಳೂ, ಮಾನ್ಯ ಓದುಗರೂ ನನ್ನ ಬಲಕ್ಕೆ ನಿಲ್ಲಬೇಕೆಂದು ಅರಿಕೆಮಾಡಿಕೊಳ್ಳುತ್ತೇನೆ.

ಈ ಸಂಪುಟದ ಕೆಲಸದಲ್ಲಿ ನನಗೆ ವಿಶೇಷವಾಗಿ ಸಹಕರಿಸಿದ ಗೌರೀಶ ಕಾಯ್ಕಿಣಿ ಕುಟುಂಬದ ಸದಸ್ಯರಿಗೆ, ಸಂಪಾದಕ ಸಲಹಾ ಸಮಿತಿಗೆ ಹಾಗೂ ಅತ್ಯಂತ ಶ್ರದ್ಧೆಯಿಂದ ಮುದ್ರಿಸಿದ ನನ್ನ ತಮ್ಮ ರಾಮಾ ನಾಯ್ಕ ಹಾಗೂ ಅವರ ಮುದ್ರಣಾಲಯದ ಸಿಬ್ಬಂದಿ ವರ್ಗಕ್ಕೆ ನಾನು ಆಭಾರಿಯಾಗಿದ್ದೇನೆ.

ಅಂಕೋಲಾ

೧೫–೧೨–೧೯೯೪

ವಿಷ್ಣು ನಾಯ್ಕ

ಸಂಪಾದಕ–ಪ್ರಕಾಶಕ

# ಪ್ರಸ್ತಾವನೆ

'ಗೌರೀಶ ಕಾಯ್ಕಿಣಿ ಸಮಗ್ರಸಾಹಿತ್ಯ ಪ್ರಕಟಣೆ' ಯೋಜನೆಗೆ ಪ್ರಸ್ತಾವನೆಯಾಗಬಲ್ಲ ನನ್ನ ಕೆಲವು ಮಾತುಗಳು ಇರಬೇಕು ಎಂದು ಯೋಜನೆಯ ಸಂಚಾಲನ-ಶಕ್ತಿಯಾದ ಮಿತ್ರ ವಿಷ್ಣು ನಾಯ್ಕರು ಬಯಸಿದ್ದಾರೆ. ನಾನು ತುಂಬಾ ಖುಶಿಯಿಂದ, ಹೆಮ್ಮೆಯಿಂದ ಒಪ್ಪಿದ್ದೇನೆ.

ನನ್ನ ಸಾಹಿತ್ಯ ಹಾಗೂ ಬದುಕು ಎರಡರ ಮೇಲೂ ಅಸಾಧಾರಣ ಪ್ರಭಾವ ಬೀರಿದ, ಅವುಗಳಿಗೊಂದು ಆಕಾರ ಕೊಡುವಲ್ಲಿ ಹಿರಿಯ ಪಾತ್ರವಹಿಸಿದ ಒಂದು ಧೀಮಂತ ಚೈತನ್ಯಕ್ಕೆ ಕೃತಜ್ಞತೆಯಿಂದ ತಲೆಬಾಗುವ ಒಂದು ಹೊಸ ಅವಕಾಶವಿದು ಎಂಬ ತಿಳಿವಳಿಕೆ ಈ 'ಪ್ರಸ್ತಾವನೆ'ಯ ಹಿಂದೆ ಕೆಲಸ ಮಾಡಿದ ಪ್ರೇರಣೆಯಾಗಿದೆ ಎನ್ನುವುದನ್ನು ಮೊದಲು ನೆನೆಯಬಯಸುತ್ತೇನೆ. ಹಾಗೂ ಈ ಅವಕಾಶವನ್ನು ಒದಗಿಸುವ ಮೂಲಕ ನನ್ನ ಬಗ್ಗೆ ಪ್ರೀತಿ ವಿಶ್ವಾಸಗಳನ್ನು ತೋರಿದ ವಿಷ್ಣು ನಾಯ್ಕರಿಗೆ ವಂದನೆಗಳನ್ನರ್ಪಿಸುತ್ತೇನೆ.

ನನಗೆ ಈ ಯೋಜನೆಯ ಬಗ್ಗೆ ಮೊದಲು ಗೊತ್ತಾದದ್ದು ನಾನು ಕಾರವಾರಕ್ಕೆ ಹೋಗಿದ್ದಾಗ. ಗೌರೀಶರನ್ನು ಸನ್ಮಾನಿಸುವ ಒಂದು ಸಮಾರಂಭವನ್ನು ಹಾಗೂ ಅವರ 'ಬದುಕು-ಸಾಹಿತ್ಯ'ಗಳನ್ನು ಕುರಿತ ವಿಚಾರ ಸಂಕಿರಣವನ್ನು ಜೊತೆಯಾಗಿ ಹಮ್ಮಿಕೊಂಡ ಒಂದು ಕಾರ್ಯಕ್ರಮದಲ್ಲಿ ಉಪಸ್ಥಿತನಿರುವ ಒಂದು ಸಂತೋಷದಾಯಕ ಯೋಗಾಯೋಗ ಒದಗಿಬಂದಿತ್ತು. ಗೆಳೆಯರ ಒತ್ತಾಯಕ್ಕೆ ಆಗ ಕೆಲವು ಮಾತುಗಳನ್ನು ಆಡಿದ್ದೆ: ಕೇವಲ ಮಾತಿನಲ್ಲಿ ಸಂದ ಸನ್ಮಾನ, ಭಾಷಣ ರೂಪದ ವಿಮರ್ಶೆ ಗೌರೀಶರಿಗೆ ತೃಪ್ತಿ ಕೊಡುವಂಥದ್ದಲ್ಲವೆಂದು ತಿಳಿಸುತ್ತ, ವಿಪುಲವಾಗಿ ಸೃಷ್ಟಿಗೊಂಡ ಅವರ ಸಾಹಿತ್ಯದ 'ಸಮಗ್ರ ವಿಮರ್ಶೆ' ನಡೆಯುವುದು ಹಾಗೂ ಆ ವಿಮರ್ಶೆಯನ್ನು ಒಂದು ಬೃಹತ್-ಗ್ರಂಥದ ರೂಪದಲ್ಲಿ ಗೌರೀಶರಿಗೆ ಸಮರ್ಪಿಸುವದು ಅವರಿಗೆ ಪ್ರಿಯವಾಗಬಹುದಾದ ಸನ್ಮಾನವೆಂದು ಸೂಚಿಸಿದ್ದೆ.

ಸಂದರ್ಭಕ್ಕೆ ಉಚಿತವಾಗಿ ಬಂದ ಈ ಮಾತುಗಳಲ್ಲಿ ಅಂಥ ವಿಶೇಷವಾದದ್ದು ಇಲ್ಲವೇ ಹೊಸತಾದದ್ದು ಏನೂ ಇರಲಿಲ್ಲ. 'ಅಭಿನಂದನ-ಗ್ರಂಥ' ಕನ್ನಡದ ವಾತಾವರಣದಲ್ಲೀ ಇಂದು ನೆಲೆನಿಂತ ಸಂಗತಿಯಾಗಿದೆ. ನನ್ನ ಸೂಚನೆಗೂ ಅಂಥ

ಆಕಾರ ಬಂದದ್ದು ಆಶ್ಚರ್ಯವಲ್ಲವೇನೋ. ಆದರೆ ಜಿಲ್ಲೆಯ ಸಾಹಿತ್ಯಿಕ ಕ್ಷೇತ್ರಕ್ಕೆ ಸದಾ ಲವಲವಿಕೆ ತುಂಬುತ್ತಿರುವ ವಿಷ್ಣು ನಾಯ್ಕ ಹಾಗೂ ಅವರ ಮಿತ್ರರ ಉತ್ಸಾಹ ಇನ್ನೂ ಒಂದು ಹೆಜ್ಜೆ ಮುಂದೆ ಹೋದದ್ದು ಅಥವಾ ಒಳ್ಳೆಯ ಅರ್ಥ ದಲ್ಲಿ 'ಹಿಂದೆ ಹೋದದ್ದು' ಆ ಮೇಲೆ ಗೊತ್ತಾಯಿತು. 'ಸಮಗ್ರ ವಿಮರ್ಶೆ'ಗಿಂತ ಮೊದಲು 'ಸಮಗ್ರ ಸಾಹಿತ್ಯ' ಇರಬೇಡವೆ ? ಕಳೆದ ಐದು ದಶಕಗಳಿಗೂ ಮಿಕ್ಕಿದ ಕಾಲದಲ್ಲಿ ಬರೆದು ಪ್ರಕಟಿಸಿದ, ಆದರೆ ಮರು ಮುದ್ರಣ ಕಾಣದೇ ಈಗ ಸುಲಭವಾಗಿ ಸಿಗಲಾರದ ಪುಸ್ತಕಗಳಲ್ಲಿ; ಪುಸ್ತಕರೂಪದಲ್ಲಿ ಸಂಕಲಿತವಾಗದೇ ಬರೇ ಹಲವಾರು ಪ್ರತಿಕೆಗಳಲ್ಲಿ; ಅಥವಾ ಮುದ್ರಣವನ್ನೇ ಕಾಣದೆ ಇನ್ನೂ ಹಸ್ತಪ್ರತಿಗಳಲ್ಲಿ–ಒಟ್ಟಿನಲ್ಲಿ, ಚೆಲ್ಲಾಪಿಲ್ಲಿಯಾಗಿ ಹರಡಿ ಬಿದ್ದ ಸಾಹಿತ್ಯ ಮೊದಲು ಒಂದೆಡೆ ಬರುವಂತಾಗಬೇಡವೆ ? ಹಾಗೆ ಬರುವಂತೆ ಮಾಡಲು ಈ ಗೆಳೆಯರು ಹಾಕಿಕೊಂಡ ಯೋಜನೆಯು ಕಲ್ಪನೆಯಿಂದ ಎಷ್ಟೊಂದು ಬೆರಗುಗೊಂಡಿದ್ದೆನೆಂದರೆ ಕೇಳಿದಾಗ ನಂಬುವುದು ಕಷ್ಟವಾಯಿತು: ಜಿಲ್ಲೆಯ ಕರ್ತೃತ್ವ ಶಕ್ತಿಗೆ ಈ ಸಾಹಸ-ಸದೃಶ ಯೋಜನೆ ದಕ್ಕಬಹುದೆ ? ಅಥವಾ ಇಲ್ಲದ ಆಸೆ ಹುಟ್ಟಿಸಿ ಬರಿಯ ಮಾತಾಗಿಯೇ ಉಳಿಯಬಹುದೆ ? ಎಂದು ಅಧೀರನಾಗಿದ್ದೆ. ಆದರೀಗ, 'ಇದು ಬರಿ ಮಾತಲ್ಲೋ ಅಣ್ಣಾ' ಎಂದು ಉಲ್ಲಾಸದಿಂದ ಸಾರುತ್ತ ಕುಣಿಯುತ್ತ ಎಂಬಂತೆ ಕಣ್ಣೆದುರು ಬಂದು ನಿಂತು ಬಿಟ್ಟ; ಅಷ್ಟೇಕೆ, ಕೈಯಲ್ಲಿ ಬಂದು ಕುಳಿತು ಬಿಟ್ಟ ಸಂಪುಟ ಎಲ್ಲ ಅನುಮಾನಗಳನ್ನೂ ದೂರ ಮಾಡುವಂಥದ್ದಾಗಿದೆ. ಇಂಥ ಈ ಸಾಹಸಕ್ಕೆ ಕೈ ಹಾಕಿದ ವಿಷ್ಣು ನಾಯ್ಕ ಹಾಗೂ ಅವರ ಪ್ರಕಾಶನ ಸಂಸ್ಥೆಯ ಬಗೆಗೆ; ಅವರ ಬೆನ್ನಾಸರೆಗೆ ನಿಂತ ಅವರ ಗೆಳೆಯರ ಬಗೆಗೆ; ಪ್ರೋತ್ಸಾಹವಿತ್ತ ಎಲ್ಲ ಜನರ ಬಗೆಗೆ ಅಭಿಮಾನ ಹುಟ್ಟಿಸುವಂತಹದಾಗಿದೆ.

೫೦೦೦ ಪುಟಗಳಷ್ಟು ಗಾತ್ರದ ಸಾಹಿತ್ಯವನ್ನು ೧೨ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಪೂರ್ಣಗೊಂಡಾಗ ನಮ್ಮ ಜಿಲ್ಲೆಯ ಸಾಂಸ್ಕೃತಿಕ ಜೀವನದ ಅಭೂತ ಪೂರ್ವ ಘಟನೆಯಾಗುತ್ತದೆ ಎನ್ನುವುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಕೈಗೆ ಬಂದ ಮೂರು ಸಂಪುಟವೇ ಅಂಥ ಭರವಸೆಗೆ ಪುಟ ನೀಡುತ್ತದೆ.

ಗೌರೀಶ–ಸಾಹಿತ್ಯದ ಬಹು ಮುಖ್ಯ ಸಾಧನೆ ವೈಚಾರಿಕ ಕ್ಷೇತ್ರಕ್ಕೆ ಸೇರಿದ್ದೆನ್ನ ಬೇಕು. ಗೌರೀಶರು ನಮಗೆ ಮುಖ್ಯರಾಗುವುದು, ಪ್ರಿಯರಾಗುವುದು ಒಬ್ಬ ಶ್ರೇಷ್ಠ ವಿಚಾರವಾದಿಯಾಗಿ. ವಿಶ್ವವನ್ನು, ಬದುಕನ್ನು ವಿಚಾರಗಳ ಮೂಲಕ ಅರಿಯುವ ಸಾಮರ್ಥ್ಯ ಮನುಷ್ಯನ ಬುದ್ಧಿಗಿದೆ ಎನ್ನುವುದರಲ್ಲಿ ಎಲ್ಲ ವಿಚಾರ ವಾದಿಗಳಿಗೆ ದೃಢವಾದ ನಂಬಿಕೆಯಿದೆ.

ಪ್ರಶ್ನೆ ಕೇಳಿ ಉತ್ತರ ಪಡೆಯುವ ಹಾಗೂ ಆ ಮೂಲಕ ವಿಚಾರಗಳನ್ನು ಸೃಷ್ಟಿಸುವ 'ವೈಚಾರಿಕ ಪದ್ಧತಿ'ಗೆ ಮನುಷ್ಯನಷ್ಟೇ-ಹಳೆಯ ಇತಿಹಾಸವಿದೆ, ತನ್ನದೇ ಆದ ಪರಂಪರೆಯಿದೆ. ಆದರೂ ಈ 'ಪದ್ಧತಿ'ಯ ಸಾಮರ್ಥ್ಯ, ಯಶಸ್ಸು ತಮ್ಮ ಪರಾಕಾಷ್ಠೆಯನ್ನು ಮುಟ್ಟಿದ್ದು ಮಾತ್ರ ಇತ್ತೀಚಿನ ಶತಮಾನಗಳಲ್ಲೇ ಎನ್ನಬಹುದು. ಈ 'ಪದ್ಧತಿ' ಬೆಳೆದು ಬಂದ ರೀತಿಯ ಪರಿಚಯ-ಸಂಕ್ಷಿಪ್ತವಾದರೂ ಕೂಡ-ಗೌರೀಶ-ಸಾಹಿತ್ಯದ ಮಹತ್ವವನ್ನು, ವೈಶಿಷ್ಟ್ಯವನ್ನು ಅರಿಯಲು ನೆರವಾಗಬಹುದೆಂದು ನನಗೆ ತೋರಿದೆ.

ಮನುಷ್ಯನ ಮೆದುಳಿನಲ್ಲಿ 'ಭಾಷೆ' ಹುಟ್ಟಿದ ಘಟನೆಯಷ್ಟೇ ಅದ್ಭುತವಾದ ಘಟನೆ ಮನುಷ್ಯನ ಭಾಷೆಯಲ್ಲಿ 'ಪ್ರಶ್ನೆ' ಹುಟ್ಟಿದ್ದಿರಬೇಕು. ಪ್ರಾಣಿ ವರ್ಗದಲ್ಲಿ 'ಮನುಷ್ಯ' ಹುಟ್ಟಿಕೊಂಡಿದ್ದರ ಕುರುಹು ಒಂದು ಘಟನೆಯಾದರೆ ಇನ್ನೊಂದು, ಮನುಷ್ಯನಲ್ಲಿ 'ಬುದ್ಧಿ' ಹುಟ್ಟಿಕೊಂಡಿದ್ದರ ಕುರುಹು ಆಯಿತು. ಹಾಗೆಂದೇ ಮಾನವ ಪ್ರಜ್ಞೆಯ ಇತಿಹಾಸದಲ್ಲಿ 'ಪ್ರಶ್ನೆ' ಹುಟ್ಟಿದ ಕ್ಷಣ 'ಶಬ್ದ' ಹುಟ್ಟಿದ ಕ್ಷಣದಷ್ಟೇ ಕ್ರಾಂತಿಕಾರಿಯಾದುದಾಗಿದೆ.

ಮನುಷ್ಯ ಕೇಳಿಕೊಂಡ ಮೊಟ್ಟ ಮೊದಲ ಪ್ರಶ್ನೆಯಲ್ಲಿ 'ವಿಚಾರ'ದ ಉಗಮವಾಯಿತು; ಚಿಂತನಶೀಲತೆ ಹುಟ್ಟಿಕೊಂಡಿತು. ಜಗತ್ತಿನ ಎಲ್ಲ ಬಗೆಯ ಚಿಂತನಕಾರರಿಗೆ-ವಿಜ್ಞಾನಿ, ದಾರ್ಶನಿಕ, ಅನುಭಾವಿಗಳಿಗೆಲ್ಲ-ವಿಶ್ವದ ಸಮ್ಮುಖದಲ್ಲಿ ನಿಂತು ವಿಸ್ಮಯದಿಂದ 'ಇದು ಏನು ?' ಎಂದು ಪ್ರಶ್ನೆ ಕೇಳಿಕೊಂಡ ಮೊಟ್ಟಮೊದಲ ಮನುಷ್ಯನೇ ಮೂಲ ಪುರುಷನಾಗಿದ್ದಾನೆ ಎನ್ನುವುದನ್ನು ನೆನೆಯಬೇಕು. ನೆನೆಯಬೇಕಾದ ಇನ್ನೊಂದು ಸಂಗತಿಯೆಂದರೆ ಮನುಷ್ಯ ತಾನು ಹುಟ್ಟಿದಂದಿನಿಂದಲೂ ಕಂಡುಕೊಂಡ ಅಸಂಖ್ಯ ಉತ್ತರಗಳಿಗೆ ಹೋಲಿಸಿದರೆ ಉತ್ತರಗಳನ್ನು ಆಹ್ವಾನಿಸಿದ ಪ್ರಶ್ನೆಗಳು ಕೇವಲ ಬೆರಳೆಣಿಕೆಯವು : ಏನು ? ಯಾರು ? ಹೇಗೆ ? ಏಕೆ ? ಎಲ್ಲಿ ? ಎಂದು ? ಎಷ್ಟು ? ಎಂದು ಮುಂತಾದ ಅಥವಾ 'ಹೌದು-ಅಲ್ಲ' ಎಂಬಂಥ ಎರಡರಲ್ಲೊಂದು ಉತ್ತರವಾಗಬಲ್ಲ ಪ್ರಶ್ನೆಗಳು. ಇದಕ್ಕೆ ಭಾಷೆಯ ಮಿತಿ ಕಾರಣವಾಗಿರಬಹುದೆ ? ಬುದ್ಧಿಯ ಮಿತಿ ಕಾರಣವಾಗಿರಬಹುದೆ ? ವಾಸ್ತವಕ್ಕಿರುವ ಮಗ್ಗಲುಗಳ ಸ್ವರೂಪವೇ ಅಂಥದ್ದಾಗಿರಬಹುದೆ ?

ನಮ್ಮ ಕುತೂಹಲಕ್ಕೆ ಕಾರಣವಾಗಬೇಕಾದದ್ದು ಪ್ರಶ್ನೆಗಳ ಸೀಮಿತತೆಯಲ್ಲ. ಈ ಸೀಮಿತ ಪ್ರಶ್ನೆಗಳೊಳಗಿಂದಲೇ ಅಪರಿಮಿತ ವಿಚಾರಗಳನ್ನು ಹುಟ್ಟಿಸುವಲ್ಲಿ ಬುದ್ಧಿ ಪ್ರಕಟಿಸಿದ ಅತ್ಯದ್ಭುತ ಶಕ್ತಿ : ಪ್ರಶ್ನೆಗಳು ಸೀಮಿತವಾಗಿರಬಹುದು; ಆದರೆ ಪ್ರಶ್ನೆ

ಯೆತ್ತುವ ರೀತಿಗಳಲ್ಲಿಯು ಮಿತಿ ! ಪ್ರಶ್ನೆಗೆ ಒಳಪಡುವ ವಾಸ್ತವದ ಮಗ್ಗಲುಗಳಿಗೆ ಮಿತಿಯಿದೆಯೇ ? ಪ್ರಶ್ನೆ ಹುಟ್ಟಿಕೊಳ್ಳುವ ಸನ್ನಿವೇಶಗಳಿಗೆ ಮಿತಿಯಿದೆಯೇ ? ಪ್ರಶ್ನೆಯು ಮಟ್ಟಿಗೆ 'ಪ್ರಶ್ನಾತೀತ'ವಾದ ಸಂಗತಿಯೇ ಇಲ್ಲ !

ತನ್ನನ್ನು, ತಾನು ಬಿಟ್ಟಿರದ ಈ ವಿಶ್ವವನ್ನು ವಿಚಾರದ ರೂಪದಲ್ಲಿ, ಜ್ಞಾನದ ರೂಪದಲ್ಲಿ ಪರಿಗ್ರಹಿಸಲು ಮನುಷ್ಯ ತೊಡಗಿಸಿಕೊಂಡ ಬೌದ್ಧಿಕ ಸಾಹಸದ ಗುಟ್ಟೇ ಇಲ್ಲಿದೆ : 'ಸರಿಯಾದ ಉತ್ತರ ಬೇಕಾದರೆ ಸರಿಯಾದ ಪ್ರಶ್ನೆಯನ್ನು ಕೇಳು' ಎನ್ನುವ ಅವರ ಸೂತ್ರನಲ್ಲಿ. ಮನುಷ್ಯ ಜಗತ್ತಿನಲ್ಲಿ ಹುಟ್ಟಿಕೊಂಡ ಪ್ರತಿಯೊಂದು ಕ್ರಾಂತಿಕಾರೀ ವಿಚಾರದ ಹಿಂದೆ ಕ್ರಾಂತಿಕಾರೀ ಪ್ರಶ್ನೆಯಿದೆ ಎಂದರೆ ಅತಿಶಯೋಕ್ತಿ ಆಗಲಾರದು. ಇಂದಿನ ವಿಜ್ಞಾನದಲ್ಲಿ ನಡೆದ ಎಲ್ಲ ಕ್ರಾಂತಿಕಾರೀ ಬೆಳವಣಿಗೆಗಳನ್ನು, ಬುದ್ಧಿಯು ಕಕ್ಷೆಗೆ ಬಂದಿರುವ–ದಂಗು ಬಡೆಸುವಷ್ಟು ಹೊಸ ಜ್ಞಾನ ಕ್ಷೇತ್ರಗಳನ್ನು ಲಕ್ಷಕ್ಕೆ ತೆಗೆದುಕೊಂಡರೆ ನನ್ನ ಮಾತಿನ ಅರ್ಥ ಸ್ಪಷ್ಟ ವಾದೀತು.

ಮನುಕುಲದ ಇತಿಹಾಸವನ್ನು ವಿಚಾರಗಳ ಇತಿಹಾಸವೆಂದು ಅಭ್ಯಾಸ ಮಾಡಿದ ಒಂದು ಪ್ರಖ್ಯಾತ ಪುಸ್ತಕದ ಹೆಸರೇ 'Adventure of Idas' ('ವಿಚಾರಗಳ ಸಾಹಸ') ಎಂಬುದಾಗಿದೆ. ನನ್ನ ಮೇಲಿನ ಮಾತಿನ ಬೆಳಕಿನಲ್ಲಿ ಈ ಶೀರ್ಷಿಕೆಯನ್ನು 'ಪ್ರಶ್ನೆಯ ಸಾಹಸ'ವೆಂದು ಬದಲಾಯಿಸ ಬಹುದಾಗಿದೆಯೆಂದರೆ ವಿಚಾರಗಳ ವಿಕಾಸದಲ್ಲಿ ಪ್ರಶ್ನೆಗಿರುವ ಮಹತ್ವ ಹೊಳೆದೀತು. ಸ್ವಲ್ಪದರಲ್ಲಿ ಬುದ್ಧಿ ವಿಚಾರ ಗಳನ್ನು ಸೃಷ್ಟಿಸುವ ತನ್ನ ಮಿತಿಗಳನ್ನು ಕಳಕೊಳ್ಳುವನು ಪ್ರಶ್ನೆ ಕೇಳುವ ತನ್ನ ಸಾಮರ್ಥ್ಯವನ್ನು ಹೆಚ್ಚಿಸುತ್ತ ಈ ಸಾಮರ್ಥ್ಯವೇ ವೈಚಾರಿಕತೆಯ ಜೀವಾಳ ವಾಗಿದೆ.

ಪ್ರಶ್ನೆಯ ಕಕ್ಷೆಗೆ ಬರುವದು ಈ ವರೆಗೂ ಬಂದಿರದ ಹೊಸ ಜ್ಞಾನ ಕ್ಷೇತ್ರಗಳು ಮಾತ್ರವಲ್ಲ; ಹಳೆಯ ಕ್ಷೇತ್ರಗಳು ಈಗಾಗಲೇ ಕಂಡುಕೊಂಡ ಉತ್ತರಗಳು ಕೂಡ : ಸಾವಿರಾರು ವರ್ಷ ಪ್ರಶ್ನಾತೀತವಾಗಿ ನೆಲೆ ನಿಂತ ವಿಚಾರಗಳು ಬುಡ ಮೇಲಾದದ್ದು ಅವುಗಳನ್ನು ಪ್ರಶ್ನಿಸುವ ಎದೆಗಾರಿಕೆ ಪ್ರಕಟಗೊಂಡಾಗ. ಈ ಎದೆಗಾರಿಕೆಯಿಂದಾಗಿಯೇ ಮನುಷ್ಯ ಜಗತ್ತಿನಲ್ಲಿಂದು ಕೊನೆಯ ಉತ್ತರವೆಂಬುದಿಲ್ಲ. ಯಾಕೆಂದರೆ ಪ್ರಶ್ನೆ ಅಂಥದ್ದಕ್ಕೆ ಎಡೆ ಕೊಡುವದಿಲ್ಲ. ನಮ್ಮ ಕಾಲದ ವೈಚಾರಿಕ ಕ್ರಾಂತಿಯ ಮಹತ್ಸಾಧನೆಯೆಂದರೆ ಎಲ್ಲ ಉತ್ತರಗಳೂ ಕೊನೆಯಲ್ಲಿ ತಾತ್ಪೂರ್ತಿಕ ವಾದವುಗಳು ಎನ್ನುವ ತಿಳಿವಳಿಕೆಯನ್ನು ನಮ್ಮಲ್ಲಿ ಮೂಡಿಸಿದ್ದು. ಇಂಥ ತಿಳಿವಳಿಕೆಯನ್ನು ಮೂಡಿಸಿದ–ಕೋಪರ್ನಿಕಸ್–ಕೆಪ್ಲರ್; ಗೆಲಿಲಿಯೋ–ನ್ಯೂಟನ್–

ಐನ್‌ಸ್ಟೈನ್; ಫ್ರಾಯ್ಡ್-ಯುಂಗ್; ಡಾರ್ವಿನ್; ಮಾರ್ಕ್ಸ್-ರಾಯ್ ಇವರೆಲ್ಲ ವಿಚಾರಗಳ ಇತಿಹಾಸದಲ್ಲಿ ಹುಟ್ಟಿ ಬಂದ ಮಹಾನ್ ಪ್ರಶ್ನಕಾರರಾಗಿದ್ದಾರೆ.

ಗೌರೀಶರ 'ಸಮಗ್ರ ಸಾಹಿತ್ಯ' ಎನ್ನುವ ಈ ಅದ್ಭುತ ವೈಚಾರಿಕ ಸಾಹಸಕ್ಕೆ ಇಂಥ ಪ್ರಶ್ನಕಾರರೇ ಸ್ಫೂರ್ತಿಯಾಗಿದ್ದಾರೆ ಮಾತ್ರವಲ್ಲ ಹಲವು ಸಾರೆ ಅವರೇ ಅದರ ವಿಷಯವೂ ಆಗಿದ್ದಾರೆ. ಇವರು ನಿರ್ಮಿಸಿದ ಒಂದು ಸದೃಢ ಪರಂಪರೆಯಲ್ಲೇ ಬೆಳೆದು ಬಂದ ಗೌರೀಶರಲ್ಲಿ ಪ್ರಶ್ನೆಕೆರಳಿಸಿರದ ಕ್ಷೇತ್ರವಿದ್ದಿರಲಾರದು, ವಿಷಯವಿದ್ದಿರಲಾರದು. ತುಂಬಾ ವಿಶಾಲವಾದ, ಅಷ್ಟೇ ವೈವಿಧ್ಯಮಯವಾದ ಅವರ ಸಾಹಿತ್ಯವೇ ಪ್ರಶ್ನೆಯ ಮಹತ್ವಕ್ಕೆ ಜ್ವಲಂತ ಸಾಕ್ಷಿಯಾಗಿದೆ. ತಮ್ಮೊಬ್ಬರ ಸಲುವಾಗಿಯೇ ಕೇಳಿಕೊಂಡ ಪ್ರಶ್ನೆಗಳಲ್ಲ ಅವು; ಸಂಕುಚಿತ ಸ್ವಾರ್ಥದಲ್ಲಿ ಹುಟ್ಟಿಕೊಂಡವುಗಳಲ್ಲ. ಅವುಗಳ ಕೇಂದ್ರಲಕ್ಷ್ಯ ನಮ್ಮೊಳಗಿನ ಮನುಷ್ಯನಾಗಿದ್ದಾನೆ. ಮನುಷ್ಯನ ಆಸ್ಥೆಗೆ ಯೋಗ್ಯವಾದುದ್ದೆಲ್ಲವೂ, ನಾವು ಮನುಷ್ಯರಾಗಿ ಬಿಚ್ಚಿಕೊಳ್ಳಲು ನೆರವಾಗಬಲ್ಲುದೆಲ್ಲವೂ ಈ ಸಾಹಿತ್ಯಕ್ಕೆ ವಸ್ತು ಒದಗಿಸಿದೆ. ಹಾಗೆಂದೇ ಅದು ನಮಗೆ ತಟ್ಟನೆ ಪ್ರಸ್ತುತವಾಗುತ್ತದೆ.

ಅದು ಕೇಳಿಕೊಂಡ ಪ್ರಶ್ನೆಗಳನ್ನಾಗಲಿ, ಅವುಗಳ ಆಸ್ಥೆಗೆ ಒಳಪಟ್ಟ ವಿಷಯಗಳನ್ನಾಗಲೀ 'ಪಟ್ಟಿ' ಮಾಡಲಾರೆ. 'ಪಟ್ಟಿ' ಮಾಡುವ ದುಶ್ಚಟವೇ ಮೊದಲು ಸೃಜನಕಾರ್ಯದ ಪ್ರಥಮ ವೈರಿಯಾಗಿದೆ. ಇಲ್ಲಿ ಕೆಲಸ ಮಾಡಿದ್ದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗು ತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆಯಲ್ಲ; ಅಂಥದ್ದರ ಸೋಂಕೂ ಇಲ್ಲಿಲ್ಲ. ಇಲ್ಲಿಯ ಕುತೂಹಲಕ್ಕೆ ಆಸಕ್ತಿಯಿದ್ದದ್ದು ವಾಸ್ತವದ ಬಗೆಗೆ 'ಮಾಹಿತಿ' ಸಂಗ್ರಹಿಸುವುದರಲ್ಲಲ್ಲ-ಬುದ್ಧಿಗೆ ಆ ಶಕ್ತಿಯೂ ಇದೆ. ಬುದ್ಧಿ ತನ್ನನ್ನು ಅಂತಹ ಸಂಗ್ರಹ ಕಾರ್ಯದಲ್ಲೇ ತೊಡಗಿಸಿಕೊಂಡು ಬಿಟ್ಟರೆ ಅದು ಕೇವಲ ಬುದ್ಧಿವಂತಿಕೆಯನ್ನು ಮೆರೆಸಬಹುದೇ ಹೊರತು ಬೌದ್ಧಿಕ ಸಾಹಸದ ಅಂತಿಮ ಲಕ್ಷ್ಯವಾದ ಪ್ರಜ್ಞಾವಂತಿಕೆಯನ್ನಲ್ಲ. ಕೇವಲ ಮೆದುಳು (ಪ್ರವೃತ್ತಿ) ಆಗಿದ್ದದ್ದು ಮನಸ್ಸು (ಬುದ್ಧಿ) ಆಗಿ; ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವುದರ ಕಡೆಗೆ ಗೌರೀಶ-ಸಾಹಿತ್ಯದ ತುಡಿತವಿದೆ ಎನ್ನುವುದರಲ್ಲೇ ಅದರ ಹೆಚ್ಚುಗಾರಿಕೆ ಇದೆ. ನಾವು ಕೇವಲ ಬುದ್ಧಿವಂತರಾಗಿ ಉಳಿಯದೇ ಪ್ರಜ್ಞಾವಂತರಾಗಿ ತೆರೆದುಕೊಳ್ಳಬೇಕು ಎನ್ನುವುದು ಈ ಮಾನವತಾವಾದಿಸಾಹಿತ್ಯದ ಮುಖ್ಯ ಆಶಯವಾಗಿದೆ. ಮಾನವ ವಿಕಾಸದ ಪರಮಲಕ್ಷ್ಯ ಪ್ರಜ್ಞಾವಂತ ಮನುಷ್ಯನೆಂದೂ, ಮನುಷ್ಯ ಜೀವನದ ಪರಮೋಚ್ಚ ಮೌಲ್ಯಗಳಾದ 'ಸ್ವಾತಂತ್ರ್ಯ' ಹಾಗೂ 'ನೈತಿಕತೆ' ಈ ಸ್ಥಿತಿಯಲ್ಲಷ್ಟೇ ಸಾಧ್ಯವೆಂದೂ ಎಲ್ಲ ಮಾನವತಾವಾದಿಗಳು ನಂಬುತ್ತಾರೆ.

ಮನಸ್ಸು ಪ್ರಜ್ಞೆಯ ಸ್ಥಿತಿಯನ್ನು ಮುಟ್ಟಿದಾಗ ಅದಕ್ಕೆ ಆಸಕ್ತಿ ಹುಟ್ಟುವದು ಬದುಕಿನ 'ಅರ್ಥ'ದಲ್ಲಿ, ಅದರ 'ಅರ್ಥಪೂರ್ಣತೆ'ಯಲ್ಲಿ ಹೊರತು ಅದರ 'ವಾಸ್ತವಿಕತೆ'ಯಲ್ಲಲ್ಲ–ಕೇವಲ 'ವಸ್ತು'ವಾದದ್ದರಲ್ಲಲ್ಲ. 'ನಮ್ಮನ್ನು ಕತ್ತಲೆಯಿಂದ ಬೆಳಕಿಗೆ ಒಯ್ಯು' ಎನ್ನುವ ನಮ್ಮ ಪುರಾತನದ ಪ್ರಾರ್ಥನೆ ಹಾಗೂ 'ನಮ್ಮನ್ನು ವಾಸ್ತವಿಕತೆಯಿಂದ ಅರ್ಥಪೂರ್ಣತೆಗೆ ಒಯ್ಯು' (Lead me from facticity to meaning) ಎನ್ನುವ ಮಾನತಾವಾದಿಗಳ ಕೋರಿಕೆ ಎರಡೂ ಸಮಾನ ಅರ್ಥ ಉಳ್ಳವುಗಳೆಂದು ನಾನು ತಿಳಿಯುತ್ತೇನೆ. ಈ ಅರ್ಥದಲ್ಲಿ ಮನುಷ್ಯನ ಬೌದ್ಧಿಕ ಸಾಹಸದ ಗುರಿ ಕೂಡ ಅಂತಿಮವಾಗಿ 'ಆಧ್ಯಾತ್ಮಿಕ'ವಾಗಿದೆಯೆನ್ನಬಹುದು. ಹಾಗೆಂದೇ ಗೌರೀಶ–ಸಾಹಿತ್ಯವನ್ನು 'ಪ್ರಶ್ನೋಪನಿಷತ್ತು' ಎಂದು ಕರೆಯುವ ತವಕವಾಗುತ್ತದೆ, ಹಾಗೆ ಕರೆಯುವುದರಿಂದ ಅದಕ್ಕೆ ಜನ್ಮವಿತ್ತ ಮನಸ್ಸಿನ ನಿಜ ಸ್ವರೂಪದ ಬಗ್ಗೆ ನಾನು ಹೇಳ ಬಯಸಿದ್ದು ಸ್ಪಷ್ಟವಾದೀತು ಎನ್ನುವ ಆಸೆಯಿಂದ.

'ಪ್ರಶ್ನೆ' ಸ್ವತಃ ತಾನೇ ಪ್ರಜ್ಞೆಯಲ್ಲ, ಬೆಳಕಲ್ಲ. ಆದರೆ ಪ್ರಜ್ಞೆಯ ಸ್ಥಿತಿ ಮುಟ್ಟಿ ಬೆಳಕು ಕಾಣುವ–ತಾನೇ ಬೆಳಕಾಗುವ ಅಭೀಪ್ಸೆಯುಳ್ಳದ್ದು. ಗೌರೀಶ–ಸಾಹಿತ್ಯದ ಅಭೀಪ್ಸೆಚಿಂತನವೂ ಅದೇ : ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಶಡಕಾಟ ಪ್ರಜ್ಞೆಯ ಹಂಬಲವಾಗಿ, ಬೆಳಕಿನ ಹಂಬಲವಾಗಿ ಉತ್ತರೋತ್ತರ ವಾಗಿದೆ. ಕನ್ನಡದಲ್ಲಿ ಇಂಥದ್ದು ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು. ಕನ್ನಡ ಸಾಹಿತ್ಯಕ್ಕೆ ಉತ್ತರಕನ್ನಡವಿತ್ತ ಅತಿ ದೊಡ್ಡ ಕೊಡುಗೆಯಾದ ಅದಕ್ಕೆ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ಸ್ಥಾನವಿದೆ–ಇದು ನಿರ್ವಿವಾದ.

ನಮ್ಮನ್ನು ಕತ್ತಲೆಯಿಂದ ಬೆಳಕಿಗೆ ಒಯ್ಯುವ ಹಂಬಲ ಹೊತ್ತು ಹುಟ್ಟಿ ಬಂದ ಸಂಗತಿಯೊಂದು ತಾನೇ ಕತ್ತಲೆಯಲ್ಲಿ ಅಡಗಿರ ಬೇಕಾಗುವಂಥ ದುರಂತ ಇನ್ನೊಂದಿರಲಾರದು ಎನ್ನುವುದನ್ನು ನಾವು ಒಪ್ಪಿಕೊಂಡರೆ ವಿಷ್ಣು ನಾಯ್ಕ ಹಾಗೂ ಅವರ ಸನ್ಮಿತ್ರರು ತಮ್ಮ ಮೇಲೆ ಹೊತ್ತು ಕೊಂಡ 'ಪ್ರಕಾಶನ'ದ ಪ್ರಚಂಡ ಜವಾಬ್ದಾರಿಯ ನಿಜವಾದ ಮಹತ್ವ ನಮಗೆ ಹೊಳೆಯದೇ ಇರದು. ಹಾಗೆ ಹೊಳೆಯಿಸುವ ನಮ್ರ ಪ್ರಯತ್ನವಾಗಿದೆ, ಈ 'ಪ್ರಸ್ತಾವನೆ'. 'ಗೌರೀಶ–ಸಾಹಿತ್ಯ'ದ ವಿಮರ್ಶೆ ಅದರ ಉದ್ದೇಶವಲ್ಲ. ಆದರೆ ಆ ಸಾಹಿತ್ಯದ ಸಮಗ್ರ ವಿಮರ್ಶೆಗೆ ಅದು ಆಹ್ವಾನವೀಯುತ್ತದೆ.

ಯಶವಂತ ಚಿತ್ತಾಲ

# ತತ್ವ - ಪ್ರತಿಭೆ

ಜನಾಂಗದ ಅಭ್ಯುದಯಕ್ಕೆ ಮೂರು ಮುಖ : ಜ್ಞಾನದ ಜಾಗೃತಿ, ಆತ್ಮದ ಸಂಸ್ಕೃತಿ, ರಾಜ್ಯದ ಪ್ರಗತಿ. ಪಾಶ್ಚಾತ್ಯ ನಾಗರಿಕತೆಯ ತ್ರಿವರ್ಗಗಳಿಗೆ ಮೂಲರಾದ ರತ್ನತ್ರಯರ ಪರಿಚಯ ಮಾಡಿಕೊಳ್ಳುವ.

* ಸೊಕ್ರೆಟಿಸ್
* ಅರಿಸ್ಟೊಟಲ್
* ನಿಕೊಲೊ ಮ್ಯಾಕಿಯಾವೆಲ್ಲಿ

# ಸೊಕ್ರೆಟಿಸ್

ಸೊಕ್ರೆಟಿಸ್‌ನು ಕುರೂಪಿ, ಮೊಂಡ ಮೂಗಿನ, ಗುಂಡುಕಣ್ಣಿನ ಡೊಳ್ಳು ಬಲಿತ ಕುಳ್ಳಮನುಷ್ಯನಾಗಿದ್ದನು. ಅವನು ಮಾಡಿದ್ದೇನು ? ಬರೇ ಮಾತು-ಮಾತುಕತೆ. ಮಾತಿಗಿಂತಲೂ ಕೃತಿ ಲೇಸೆಂದು ನಾವು ನೀವು ನಂಬಿದ್ದೇವೆ. ನಾವು ಅಲ್ಪಾತ್ಮರು. ನಮ್ಮ ಕೃತಿಯಲ್ಲಿಯೇ ಸತ್ವ ಕಡಿಮೆ. ಮಾತಿನಲ್ಲಿ ಏನು ಮಣ್ಣು ಬಂದೀತು ? ಆದರೆ ಮಹಾತ್ಮರ ಮಾತು ಯಾವ ಕೃತಿಗೂ ಮೇಲು. ಅಂಥವರ ಮಾತಿನ ಹಿಂದೆ ಅರ್ಥ ಓಡಿ ಬರುತ್ತದೆ-ಭಕ್ತನ ಹಿಂದೆ ಭಗವಂತ ಓತು ಬಂದಂತೆ ! ಸೊಕ್ರೆಟಿಸ್ ಅಂಥ ಮಹಾತ್ಮ. ಮಾತೇ ಅವನ ಜ್ವಲಂತ ಕೃತಿ ಆಯಿತು. ಅವನು ಯಾವ ಕೆಲಸವನ್ನೂ ಮಾಡುತ್ತಿದ್ದಿಲ್ಲ. ಚೇಳಿನ ಬಲ ಕೊಂಡಿಯಲ್ಲಿ, ಆನೆಯ ಬಲ ಸೊಂಡಿಲಲ್ಲಿ, ಧೀರನ ಬಲ ಅವನ ಎದೆಯಲ್ಲಿ, ನ್ಯಾಯದ ಬಲ ಸತ್ಯದಲ್ಲಿ ಇರುವಂತೆ ಸೊಕ್ರೆಟಿಸ್‌ನ ಬಲ ಅವನ ನಾಲಿಗೆಯಲ್ಲಿ ಇತ್ತು: ಅಂದರೆ ಅವನು ಡೆಮೊಸ್ತೆನೀಜನ ಪೂರ್ವಾವತಾರವೆಂತಲ್ಲ. ಅವನು ವಾಗ್ಮಿ ಆಗಿದ್ದಿಲ್ಲ. 'ಅಮೋಘ ವಾದ ಭಾಷಣ'ವನ್ನು 'ಅಖಂಡ ಒಂದುವರೆ ತಾಸು' ಮಾಡುವ ಮಾತಿನ ಮಲ್ಲನಲ್ಲ. ಅವನ ವಿಚಾರದ ತುಂಬು ಹುರುಳು. ವಿಮರ್ಶೆಯ ತೀಕ್ಷ್ಣ ಹರಿತವುಳ್ಳ ಪ್ರಶ್ನೆಗಳನ್ನು ಕೇಳಿ ಅಂದಿನ ಗ್ರೀಕ್ ಧರ್ಮದೇವತೆಯನ್ನು ದಿಗ್ಭ್ರಮೆಗೊಳಿಸಿದ ಯಕ್ಷನು ಅವನು. 'ತತ್‌ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ !' ಎಂದು ಗೀತೆ ಸತ್ಯಶೋಧನೆಯ ಉಪಾಯತ್ರಯವನ್ನು ಬೋಧಿಸಿದೆ. ಅದನ್ನು ಓದದ ಸೊಕ್ರೆಟಿಸ್‌ನು 'ಪರಿಪ್ರಶ್ನೆ'ಯ ಮೊನೆಮಾತುಗಳಿಂದ ಅಂದಿನ ಆಡಂಬರ, ಮಿಥ್ಯಾವಾದ, ಪ್ರತಿನಿವಿಷ್ಟ ಮೂರ್ಖತನದ ಪ್ರತಿಷ್ಠಿತ ಅಜ್ಞಾನದ ಬಣ್ಣಬಣ್ಣದ ನೊರೆಗುಳ್ಳೆಗಳನ್ನು ಪಟಪಟನೆ ಒಡೆದು ಒಳಗಿನ ಘೋರ ಪೊಳ್ಳನ್ನು ಬಯಲು ಮಾಡಿದನು. ಅವನಿಗೇನೇ ಜನ 'ಪ್ರಣಿಪಾತ' ಮಾಡಿದರು. ಅವನ ತತ್ವದ ಮಾರ್ಗವನ್ನು ಅನುಸರಿಸಿದರು.

ಅವನು ಬರೆದು ಪ್ರಕಟಿಸಿದ್ದು ಏನೂ ಇಲ್ಲ. ಅವನ ಮಿತ್ರರೂ ಶಿಷ್ಯರೂ ಏನಾದರೂ ಬರೆದಿಟ್ಟ ಸಂಗತಿಗಳಿಂದ ಅವನ ವಿಷಯ ನಾವು ಅರಿತುಕೊಳ್ಳುವಂತಾಗಿದೆ. ಪ್ಲೇಟೊ ಅವನ ಶಿಷ್ಯೋತ್ತಮ. ರೆವಿನೊ ಫೋನ್ ಅಂದಿನ ಇತಿಹಾಸಕಾರ. ಪ್ಲೇಟೊ ತನ್ನ ಸಂವಾದಗಳಲ್ಲಿ ಸೊಕ್ರೆಟಿಸ್‌ನನ್ನು ಸಜೀವವಾಗಿ ಒಡಮೂಡಿಸಿದ್ದಾನೆ. ಸೊಕ್ರೆಟಿಸ್‌ನ ಮಾತುಕತೆ,-ಅವನ ಮಾತೇ ಅವನ ಕತೆ.-ಅವನ ಯುಕ್ತಿವಾದ, ತರ್ಕವಿಧಾನ, ಸತ್ಯಶೋಧನೆಯ ದಕ್ಷಪ್ರಶ್ನೆಗಳು, ಅವನ ಮತ-ಮಂತವ್ಯಗಳು,

ಬಾಳು–ಸಾವುಗಳ ಕುರಿತು ಅವನ ನಿಲುವೆ–ನಿಟ್ಟುಗಳು ಮತ್ತು ಆವನ ಮಹಿಮೆ–ಮಹಾತ್ಮ್ಯಗಳು–ಇವೆಲ್ಲವೂ ಪ್ಲೇಟೊನು ಬರೆದಿಟ್ಟ ಪರಿಸಂವಾದಗಳಲ್ಲಿ ಪರಿಪರಿಯಾಗಿ ಪರಿಪೂರ್ಣವಾಗಿ ಪ್ರಕಟವಾಗಿವೆ. ಅವನು ಮಾತನಾಡಿದ್ದು ಕೆಲವೇ. ಅದೂ ಕೆಲವರಿಗಾಗಿಯೇ. ಅವನ ಮಾತುಕತೆ ತೀರ ಹತ್ತಿರದ ಸಲಿಗೆಯ ಶಿಷ್ಯ ಮಂಡಳಿಯಲ್ಲಿ ನಡೆಯಿತು. ಆದರೆ ಅವನ ಕತೆ ಸತ್ಯದ ಮಹಾಕಾವ್ಯವಾಯಿತು–ಪ್ರಪಂಚದ ಇ ತಿ ಹಾ ಸ ವೆ ೦ ಬ ಕಪ್ಪು–ಕೆಂಪಿನ ದೀರ್ಘಪಟದಲ್ಲಿ ಹಾಯ್ದು ಹೊಳೆಯುವ ಚಿನ್ನದ ಎಳೆಯಾಯಿತು: ಮತ್ತು ಅವನ ಮಾತು ಸಂಸ್ಕೃತಿಯ ಗುಡಿಯಲ್ಲಿ ಈಗಲೂ–ಅಲ್ಲ, ಸದಾಕಾಲವೂ–ಮೊ ಳ ಗು ತ್ತಿ ರು ವ ಮಹಾಧ್ವನಿಯಾಯಿತು !

ಅವನು 'ದೇವರ ಪ್ರತಿನಿಧಿ', 'ಆಕಾಶದಲ್ಲಿಯ ತಂದೆಯ ಮೆಚ್ಚಿನ ಮಗ', 'ಪ್ರಭುವಿನ ಸಂದೇಶವಾಹಕ', 'ಪರಮಾತ್ಮನ ಅವತಾರ' ಎಂದೇನೂ ಅನಿಸಿಕೊಳ್ಳಲಿಲ್ಲ; ಯಾವ ಮತವನ್ನೂ ಸಾರಲಿಲ್ಲ; ಯಾವ ಮಠವನ್ನೂ ಸ್ಥಾಪಿಸಲಿಲ್ಲ; ಯಾವ ಆಶ್ರಮವನ್ನೂ ತೆರೆಯಲಿಲ್ಲ; ಯಾವ ಸಂಪ್ರದಾಯವನ್ನೂ ಆರಂಭಿಸಲಿಲ್ಲ. ಕೇವಲ ಜೀವಾಳದ ಸತ್ಯವನ್ನು ಅರಸುತ್ತ ಅದಕ್ಕಾಗಿ ವಾದಿಸುತ್ತ ಬಾಳಿದನು. ಜನದ ಮನವನ್ನೆಲ್ಲ ಒಂದೇ ನಿಟ್ಟಿನಲ್ಲಿ ಹೊರಳಿ ನೋಡುವಂತೆ ತಿದ್ದುವದು ಅವನ ಗುರಿಯಾಗಿತ್ತು. ಒಳಿತಿನ ತಿಳುವಳಿಕೆ ಆ ತಿದ್ದಿನ ನೋಟದ ಗುರಿಯಾಗಿತ್ತು. ಒಳಿತನ್ನು ವಿಂಗಡಿಸಿ ತಿಳಿಯುವ ಹದ ಬಂದರೆ ಸಾಕು, ಜನರ ಬಾಳಿಗೆ ಅದೊಂದೇ ಬೆಳಕು–ಎಂದು ಅವನ ಹಟವಿತ್ತು. ಈ ಹಟಕ್ಕಾಗಿ ಅಥೆನ್ಸ್‌ದ ಜನ ಅವನನ್ನು ಕೊಂದಿತು; ಮತ್ತು ಅವನ ಜೀವಜ್ಯೋತಿ ಎಂದೂ ನಂದದಂತೆ ಬೆಳಗಿಸಿ ಅವನ ಅಲ್ಪ ಜೀವನಕ್ಕೆ ಕಲ್ಪಾಂತ ಮಹಿಮೆಯ ಮುಕುಟವನ್ನು ಕಟ್ಟಿತು !

ಸೊಕ್ರೆಟಿಸನು ಪ್ರಾಚೀನ ಜಗತ್ತಿನ ತತ್ತ್ವವೇತ್ತರಲ್ಲಿ ಒಬ್ಬ ಅತ್ಯುತ್ತಮ ಜ್ಞಾನಿಯು; ಅಥೆನ್ಸ್‌ದ ಮಹಾಪುರುಷರಲ್ಲಿ ಮಹತ್ತಮ ಮೇಧಾವಿಯು. ಅವನ ಪ್ರತಿಭೆ ಅಂದಿನ ಲೋಕಕ್ಕೆ ವಿಭುವಾಯಿತು. ಈ ವಿಭುತಿಯೇ ಅವನಿಗೆ ಮರಣದ ದಂಡನೆಯನ್ನು ತಂದಿತು–ವಿಷದ ಬಟ್ಟಲನ್ನು ಕುಡಿಸಿತು. ಏಕೆ ? ಪೂರ್ಣ ಪ್ರಾಮಾಣಿಕ ಮನುಷ್ಯನನ್ನು ಪ್ರಪಂಚವು ಸಹಿಸಲಾರದು. ಸತ್ಯಶೋಧಕನಿಗೆ ಸಂಸಾರವು ಸುರಕ್ಷಿತ ಸ್ಥಳವಲ್ಲ. ಲೋಕವು ಗತಾನುಗತಿಕ ರೂಢಿಯ ಮುಗುದಾಣಕ್ಕೆ ಕಟ್ಟುಬಿದ್ದು ಮೂಗಿನ ನೇರಕ್ಕೆ ನಡೆಯುವ ಮಂದಿಯ ಮಂದೆಯು. ಅಲ್ಲಿ ಸತ್ಯವನ್ನು ಸಾರುವವನು ಘಾತುಕನೆನಿಸುವನು. ಸೌಮ್ಯನೂ ಸೋಮಾರಿಯೂ ಆದ ಸೊಕ್ರೆಟಿಸ್‌ನು ಅಥೆನ್ಸಿಗೆ ಹಾಗೆ ಘಾತುಕನಾಗಿ ಕಂಡನು.

ಸೊಕ್ರೆಟಿಸನು ಹುಟ್ಟಿದ್ದು ಕ್ರಿಸ್ತಪೂರ್ವ ೪೬೯ರಲ್ಲಿ. ಅವನು ಬದುಕಿದ್ದ ಕಾಲ ಅಥೆನ್ಸಿನ ಸುವರ್ಣಯುಗದ ಕಾಲ. ಗ್ರೀಕ ರಾಜ್ಯಗಳಲ್ಲಿಯೇ ಆಗ ಅಥೆನ್ಸ್ ಅತಿ ಪ್ರಬಲ ಸಂಸ್ಥಾನವಾಗಿತ್ತು. ವಿದ್ಯೆ, ವಾಣಿಜ್ಯ, ಕಲೆ ಇವೆಲ್ಲ ಅಂದಿನಷ್ಟು ಹಿಂದೆ ಎಂದೂ ಉಚ್ಛ್ರಾಯವನ್ನು ಹೊಂದಿದ್ದಿಲ್ಲ. ಅವನ ತಂದೆಯು ಶಿಲ್ಪಿ-ಮೂರ್ತಿಶಿಲ್ಪಿ ಯಾಗಿದ್ದನು. ಕೆಲವು ಕಾಲ ತರುಣ ಸೊಕ್ರೆಟಿಸ್‌ನೂ ತಂದೆಯ ಕಸಬನ್ನೇ ಕೈಗೊಂಡು ನಡಿಸಿದನು. ಅವನ ತಾಯಿಯು ದಾಯಿ (ಸೂಲಗಿತ್ತಿ) ಆಗಿದ್ದಳು. ಮುಂದೆ ಸೊಕ್ರೆಟಿಸ್‌ನೂ ತಾಯಿಯ ಕಸಬನ್ನೇ ಪರ್ಯಾಯವಾಗಿ ನಡಿಸಿದನು! ತಾನು ಹೊಸ ವಿಚಾರಗಳಿಗೆ ಸೂಲಗಿತ್ತಿಯೇ (ಸೂಲಗಾರನೇ?) ಸರಿಯೆಂದು ಅವನು ಆಧ್ಯತೆಯಿಂದ ಅಂದುಕೊಳ್ಳುತಿದ್ದನು. ವಿಚಾರಗಳ ಹುಟ್ಟಿಗೆ ಅವನ ಪ್ರಶ್ನೆ-ಪರಿಪ್ರಶ್ನೆಗಳು ನೆರವಾಗುತಿದ್ದವು. ಜಿಜ್ಞಾಸುಗಳನ್ನೇ ಚಾತುರ್ಯದಿಂದ ಪ್ರಶ್ನೆಗಳಿಗೆ ಗುರಿಮಾಡಿ ಅವರ ಮಿದುಳಿನಿಂದಲೇ ಹೊಸತಥ್ಯಗಳನ್ನೂ ಸತ್ಯದ ಹೊಸ ತತ್ವಗಳನ್ನೂ ಅವನು ಹೊರಡಿಸುತಿದ್ದನು. ಹೀಗೆ ಪ್ರಮೇಯಗಳ ಪ್ರಸೂತಿಗೆ ಅವನು ಪರಿಚಾರಿಕೆಯಾಗುತಿದ್ದನು ! ತನ್ನನ್ನು ಹೀಗೆ ಕರೆದುಕೊಳ್ಳುವದರಲ್ಲಿ ಈ ಮಹಾಜ್ಞಾನಿಯು ವಿನಯದೊಂದಿಗೆ ತಿಳಿಯಾದ ವಿನೋದವನ್ನೂ ಕಾಣಿಸಿದನು.

ವಿನಯ ಮತ್ತು ವಿನೋದಗಳೊಡನೆ ಅವನಲ್ಲಿ ವೀರತನವೂ ಸಾಕಷ್ಟು ಇತ್ತು. ಮುಂದೆ ಸೌಮ್ಯನೂ ಸೋಮಾರಿಯೂ ಕೆಲಸವಿಲ್ಲದ ಕಿಡಿಗೇಡಿಯೂ ಎಂದು ಕಂಡುಬಂದ ಸೊಕ್ರೆಟಿಸ್‌ನು ಅಥೆನ್ಸ್‌ದ ಮಿಕ್ಕ ನಾಗರಿಕರಂತೆ ದಂಡಿನ ಚಾಕರಿ ಯನ್ನೂ ಮಾಡಿ ಬಂದವನಾಗಿದ್ದನು. ಅಥೆನ್ಸ್‌ದ ನಾಗರಿಕರಿಗೆ ದಂಡಿನಲ್ಲಿ ಸೇರುವದು ಕಡ್ಡಾಯದ ಕೆಲಸವಾಗಿತ್ತು. ಅವನೂ ಸೈನಿಕನಾದನು. ಒಂದೆರಡು ಕಾಳಗಗಳಲ್ಲಿ ಕಾದಿದನು. ಚೆನ್ನಾಗಿ ಎದೆಗೊಟ್ಟು ಹೋರಾಡಿದನು. ಇಂಥ ಒಂದು ಕದನದಲ್ಲಿ ಅವನು ಅಲ್ಕಿಬಿಯಾಡಿಸ್ ಎಂಬ ಒಬ್ಬನ ಪ್ರಾಣ ಉಳಿಸಿದನು. ಆತನು ಮುಂದೆ ಸೊಕ್ರೆಟಿಸ್‌ನ ಶಿಷ್ಯನೂ ಮಿತ್ರನೂ ಆಗಿಬಿಟ್ಟನು. ಪೋಟಿಡಿಯಾ, ಡೆಲಿಯಮ್, ಎಂಫೆಪೋಲಿಸ್ ಯುದ್ಧರಂಗಗಳಲ್ಲಿ ಅವನು ತೋರಿಸಿದ ಧೈರ್ಯ-ಸ್ಥೈರ್ಯಗಳು ಮುಂದೆ ನಾಗರಿಕ ಜೀವನದಲ್ಲಿ ಅವನು ಎದುರಿಸಬೇಕಾಗಿ ಬಂದ ದುರ್ಧರ ಸಾಹಸಕ್ಕೆ ಯಾವ ತೂಕದಿಂದಲೂ ಕಡಿಮೆ ಇದ್ದಿಲ್ಲ. ಇಷ್ಟೇ-ಯುದ್ಧ ರಂಗದ ಸಾಹಸ ಹೆಚ್ಚು ಪ್ರೇಕ್ಷಣೀಯವಿದ್ದರೂ ನಾಗರಿಕ ಜೀವನದ ಅಪ್ರತಿಮ ಧೈರ್ಯದ ಅಚಲ ಸ್ಥೈರ್ಯದ ಪ್ರಸಂಗವು ಹೆಚ್ಚು ದುರಂತದ್ದಾಯಿತು !

ಕಾಳಗಗಳನ್ನೆಲ್ಲ ಮುಗಿಸಿ ಮರಳಿದ ಮೇಲೆ ಮಾತ್ರ ಸೊಕ್ರೆಟಿಸ್‌ನು ತನ್ನ ಶೇಷಾ ಯುಷ್ಯವನ್ನು ಪೂರ್ತಿ ಮಾತಿನಲ್ಲಿಯೇ ಕಳೆದನು. ಅಂಥ ಮಾತುಗಾರನೂ ಮಾತು ಗುಳಿಯೂ ಮತ್ತೊಬ್ಬನಾಗಲಿಲ್ಲ. ಆ ಮಾತಿಗೆ ಇತಿ ಇದ್ದಿಲ್ಲ; ಮಿತಿ ಇದ್ದಿಲ್ಲ. ಏನು

ಮಾತಾಡಲಿ ಎಂಬ ಇತಿ-ಮಿತಿಯೂ ಬಿದ್ದಿರಲಿಲ್ಲ. ಮಾತು ಎಷ್ಟು ಉಚಿತವೋ ಅಷ್ಟೇ ಖಚಿತ; ಎಷ್ಟು ರುಚಿಯೋ ಅಷ್ಟೇ ಶುಚಿ. ಅವನ ಜೀವಮಾನದಲ್ಲಿಯೇ ಅವನ ಮಾತುಕತೆಯ ಮಾರ್ಮಿಕ ಗುಣವು ಅವನಿಗೆ ಅಂದಿನ ಪ್ರಪಂಚಕ್ಕೇ ಜಾಣರ ಹಿರಿಯನೆಂಬ ಹೆಸರನ್ನೂ ತಂದುಕೊಟ್ಟಿತು. ಮುಂಜಾನೆ ನಸುಕಿನಲ್ಲಿಯೇ ಅವನು ಮನೆಯ ಹೊರಗೆ ಬಿದ್ದು ಬಯಲಲ್ಲಿ ಅಡ್ಡಾಡಲು ತೆರಳುತ್ತಿದ್ದನು. ಅಥೆನ್ಸ್‌ದ ಕೇರಿಗಳಿಗೆಲ್ಲ ಅವನ ದೆಸೆಗೆಟ್ಟ ವೇಷ ತೀರ ಪರಿಚಿತವಾಗಿತ್ತು. ಅವನ ವೃತ್ತಿಯು ಅವಧೂತನದಾಗಿತ್ತು. ಶೀತೋಷ್ಣ ಸುಖ-ದುಃಖಗಳು ಅವನಿಗೆ ಬಾಧಿಸುತ್ತಿದ್ದಿಲ್ಲವೋ ಏನೋ. ಚಳಿಯಿರಲಿ, ಸೆಕೆಯಿರಲಿ ಅವನು ಕೋಟು ತೊಟ್ಟದ್ದೇ ಕಂಡವರಿಲ್ಲ. ಅವನ ಕಾಲುಗಳೂ ಪಾದಗಳೂ ಎಂದಿಗೂ ಬರಿದೇ ಇರುತಿದ್ದವು. ಆದರೆ ಅವನ ಬಡತನದಲ್ಲಿ ಒಂದು ಪ್ರದರ್ಶನವೃತ್ತಿ ಇರುತ್ತಿದ್ದಿಲ್ಲ. ತಾವು ಸಾಧುಗಳು ಎಂಬ ಮನವರಿಕೆಯಿಂದಷ್ಟೇ ಕೆಲವರಿಗೆ ಸಮಾಧಾನವಾಗುವದಿಲ್ಲ; ತನ್ನ ಸಾಧುತ್ವ ಜನ ವರಿಕೆಯಾಗಬೇಕೆಂಬ ಹಟ-ಹಟಕ್ಕೆ ತಕ್ಕ ಚಟುವಟಿಕೆ ಅವರಿಗೆ ಬಿಟ್ಟಿರುವದಿಲ್ಲ. ತಾವು ನಿರಹಂಕಾರಿಗಳೆಂದು ಒಡೆದುಕಾಣಬೇಕೆಂಬ ಒಂದು ಬುಡಮೇಲಾದ ದುರಹಂಕಾರ ಅವರಿಗೆ ಇರುತ್ತದೆ. 'ಪಾಪ ! ಆಸಾಮಿ, ಎಂಥ ಸಾಧೂ ! ಅರಿವೆಯ ಪರಿವೆ ಕೂಡ ಬಡವನಿಗೆ ಇರುವದಿಲ್ಲ !' ಎಂದು ಕಂಡವರು ಆಡಬೇಕೆಂಬ ಆಸೆ ಅವರ ಅಂತರಾಳದಲ್ಲಿ ಎಡಬಿಡದೆ ಎಚ್ಚರವಾಗಿರುತ್ತದೆ. ಸಾಧುತ್ವದ ಪ್ರಶಂಸೆಗಾಗಿ ಅಲ್ಲವಾದರೂ ಬಡವನೆಂಬ ಕನಿಕರ ಸೆಳೆದುಕೊಳ್ಳಬೇಕೆಂಬ ಆಸೆಯಿಂದಲಾದರೂ ಇಂಥ ಜನ ತಮ್ಮ ಬಡತನವನ್ನು ನಡೆ-ನುಡಿ, ಉಡಿಗೆ-ತೊಡಿಗೆಗಳಲ್ಲಿ ಪ್ರದರ್ಶಿಸದೇ ಹೋಗುವದಿಲ್ಲ. ಸೊಕ್ರೆಟಿಸ್‌ನಲ್ಲಿ ಈ ಪ್ರದರ್ಶನಪ್ರಿಯತೆ ಸ್ವಲ್ಪವೂ ಇದ್ದಿಲ್ಲ. ಅವನು ಶಾರೀರಕ ದುಃಖ ಕಷ್ಟಗಳನ್ನು ಕುರಿತು ಅಲಿಪ್ತನಾಗಿರುವ ಕಲೆ ಯನ್ನು ಕಲಿತಿದ್ದನು. ಕೇವಲ ಮನಸ್ಸು ಮತ್ತು ಆತ್ಮಗಳ ವಿಷಯಗಳಲ್ಲಿಯೇ ಅವನು ಲೀನವಾಗಿರುತ್ತಿದ್ದನು. ಇದಕ್ಕಾಗಿ ಅವನು ಸುಖ-ಸೌಕರ್ಯಗಳ ವಿಷಯಕ್ಕೆ ಉದಾಸೀನನಾಗಿದ್ದನು. 'ಸೊಕ್ರೆಟಿಸ್ ಬಾಳುವಂತೆ ಒಬ್ಬ ಗುಲಾಮನನ್ನು ಇಟ್ಟರೆ ಆತನು ಆ ಬಾಳಿಗೆ ಬೇಸತ್ತು ಫರಾರಿಯಾಗುವದು ಖಂಡಿತ !' ಎಂದು ಅಂದಿನವ ರೊಬ್ಬರು ಅಂದಿದ್ದಾರೆ.

ಆದರೆ ಸೊಕ್ರೆಟಿಸ್ ಫರಾರಿಯಾಗಲಿಲ್ಲ. ಅವನು ವೈರಾಗ್ಯವನ್ನು ಭಾಗ್ಯವೆಂದೂ ಭಾವಿಸಲಿಲ್ಲ. ಸಂಸಾರವನ್ನು ವೈರಿಯೆಂದೂ ತಿಳಿಯಲಿಲ್ಲ. ಅನಾಸಕ್ತಿಯ ಯೋಗ ವನ್ನು ಸಾಧಿಸಿ ಆ ಸಾಧನೆಯನ್ನು ಸಹಜವಾಗಿ ನಡೆಸಿದನು. ಫರಾರಿಯಾಗುವದಿರಲಿ, ಅವನು ಅಥೆನ್ಸ್‌ದ ಅಗಸೆಯ ಬಾಗಿಲನ್ನು ಕೂಡ ದಾಟಲಿಲ್ಲ. ಪ್ರವಾಸ, ಸುಖ ಸಂಚಾರ, ಆ ನಿಸರ್ಗದ ಸೌಂದರ್ಯ ನಿರೀಕ್ಷಣೆ, ಪ್ರಕೃತಿಯ ನಿಯಮಗಳ ಪರೀಕ್ಷಣೆ-ಇವು ಯಾವವೂ ಅವನ ಮನಸ್ಸನ್ನು ಸೆಳೆಯಲಿಲ್ಲ. ಜನರು,-

ಸ್ತ್ರೀಪುರುಷರು-ಅವರ ಬಾಳುವೆ ತಿಳುವಳಿಕೆಗಳು ಅವನ ಅಭ್ಯಾಸದ ವಿಷಯವಾಗಿದ್ದವು. ಅವರಿಗಾಗಿ ವ್ಯಕ್ತಿ ವ್ಯಕ್ತಿಯ ಜೀವನಕ್ಕಾಗಿ-ಜೀವನದ ಮನಃಶಾಂತಿ, ಮನಃಶುದ್ಧಿಗಾಗಿ ಅವನ ಕರ್ತೃತ್ವವು ಮುಡಿಪಾಯಿತು. ಬೀದಿ-ಕೇರಿಗಳಲ್ಲಿ ಅಲೆದಾಡುತ್ತ ಅವನು ಸಂತೆಪೇಟೆಯ ಸ್ಥಳವನ್ನು ಸೇರುತ್ತಿದ್ದನು. ಅಲ್ಲಿ ತನ್ನ ವ್ಯಾಪಾರವನ್ನು-ಅಂದರೆ ಪ್ರಶ್ನೋತ್ತರಗಳ ವಾಙ್ಮಯ ವ್ಯಾಪಾರವನ್ನು.-ಅವನು ಆರಂಭಿಸುತ್ತಿದ್ದನು. ಅವನಿಗೆ ಮಾತನಾಡಿಸಲು ಇಂಥವರೇ ಬೇಕೆಂದಿಲ್ಲ. ಯಾವನನ್ನೂ ಮಾತನಾಡಿಸಿ, ಪ್ರಶ್ನೆಕೇಳಿ ಸಂಶಯದಲ್ಲಿ ಸಿಲುಕಿಸಿ, ವಿಚಾರ ಕೆಣಕಿಸಿ ತಿಳುವಳಿಕೆಯ ಬೆಳಕಿನಿಂದ ಮುಂಕುಗೊಳಿಸುತ್ತಿದ್ದನು. 'ಮೂಕಂ ಕರೋತಿ ವಾಚಾಲಂ' ಎಂಬ ವಾಕ್ಯ ಸೊಕ್ರೆಟಿಸ್‌ನಿಗೂ ಅನ್ವಯಿಸುತಿತ್ತು: ಯಾವ ಮೂಕನನ್ನೂ ಅವನು ಮಾತನಾಡಿಸುತಿದ್ದನು. ಯಾವ ವಾಚಾಲನನ್ನೂ ಅವನು ಮೂಕನಗಿಸುತಿದ್ದನು ! ಒಡೆಯರು, ಬಡವರು, ಪ್ರೌಢರು, ಮೂಢರು, ಕುಲೀನರು, ಮಲಿನರು, ಹಿರಿಯರು, ಕಿರಿಯರು, ಶ್ರೇಷ್ಠಿಗಳು, ಹಳ್ಳಿಗರು, ಆಗಂತುಕರು, ಅನಾಮಿಕರು,-ಎಲ್ಲರನ್ನೂ ತಡೆದು ತಡುರಿ, ಮಾತನಾಡಿಸಿ ಸತ್ಯ ತಥ್ಯಗಳ ತೀರ್ಮಾನ ಮಾಡುತ್ತಿದ್ದನು-ಅವರಿಂದಲೇ ಮಾಡಿಸುತ್ತಿದ್ದನು. ಅವರೆಲ್ಲರೂ ಕೂಡ ಅವನ ಪ್ರಶ್ನೆಗಳಿಗೆ ಸವಿಗೊಂಡು ಕಿವಿಗೊಡುತ್ತಿದ್ದರು. ತಾನು ಬಿಂಬಿಸಬೇಕಾದ ವಿಚಾರಗಳನ್ನು ಚತುರ ಪ್ರಶ್ನೆಗಳಿಂದ ಅವರ ಉತ್ತರಗಳಲ್ಲಿಯೇ ಹೊರಡಿಸುವ ತತ್ತ್ವಬೋಧದ ಹೊಸ ತಂತ್ರವನ್ನೇ ಅವನು ಹದಗೊಳಿಸಿದನು, ರೂಢಿಗೊಳಿಸಿದನು.

ಆ ತಂತ್ರದ ಚೋದ್ಯವಾದರೂ ಏನು ? ಒಂದು ಚರ್ಚೆ ಆರಂಭವಾಗುತ್ತದೆ. ಚರ್ಚೆಯ ಮೊದಲಿಗೆ ಸೊಕ್ರೆಟಿಸ್‌ನ ಪ್ರಶ್ನೆ. ಪ್ರಶ್ನೆಯಲ್ಲಿ ಅವನು ವ್ಯಕ್ತ ಮಾಡುವದೇನು ? ಚರ್ಚೆಯ ವಿಷಯದ ಕುರಿತು ಜ್ಞಾನವೆ ? ಪಾಂಡಿತ್ಯವೆ ? ಛೇ. ಕೇವಲ ತನ್ನ ಆ ವಿಷಯದ ಅಜ್ಞಾನ ! ಅಂದರೆ ಅವನು ನಿಜವಾಗಿಯೂ ಅಜ್ಞಾನಿ ಇದ್ದನೆಂತಲ್ಲ. ಆದರೆ ಯಾವದೇ ಚರ್ಚೆಯ ಆರಂಭದಲ್ಲಿ ಅವನು ಆ ವಿಷಯದಲ್ಲಿ, ಅಲ್ಲಿ ಇದ್ದವರಲ್ಲಿ, ತಾನೇ ತೀರ ಅಜ್ಞಾನಿಯೆಂದು ಕಾಣಿಸಿಕೊಳ್ಳುತ್ತಿದ್ದನು. ಅವನ ಅಜ್ಞಾನದ ಬೇಟೆಯಾಡಲು ಮಿಕ್ಕ ಜಾಣರು ಹುರುಪಿನಿಂದ ಮುಂದರಿಯುತ್ತಿದ್ದರು. ವಿಷಯವನ್ನು ತಿಳಿಸಿ ಹೇಳಲು ಹೆಣಗುತ್ತಿದ್ದರು. ಆಗ ಅವನು ಪ್ರಶ್ನೆಗಳನ್ನು ಕೇಳುತ್ತಿದ್ದನು. ಸಾಧಕ ಬಾಧಕ ಉದಾಹರಣೆಗಳನ್ನು-ಅವೂ ಅಷ್ಟು ಸರಳವಾದ ದೃಷ್ಟಾಂತಗಳನ್ನು-ಕೊಡುತ್ತಿದ್ದನು, ಅವುಗಳಿಗೂ ಸರಳವಾದ ಸುಗಮವೆನಿಸುವ ಶಂಕೆಗಳನ್ನು ಎತ್ತಿ ಕೇಳುತ್ತಿದ್ದನು. ಇದೇ ಸೊಕ್ರೆಟಿಸ್ ವಾದಪದ್ಧತಿ-ಮುಂದೆ ಅತಿ ಪ್ರಸಿದ್ಧವಾದ ಸೊಕ್ರೆಟಿಸನ 'ಉಪರೋಧ ತರ್ಕ'ದ ರೀತಿ. ಇದರ ಉದ್ದೇಶ ಅವನ ಸಂಕಲ್ಪ-ಬರೇ ಕೇಳುವ ಜನರನ್ನು

ಪೆಚ್ಚುಗೊಳಿಸುವದಾಗಲೀ, ಮಾತಿನಲ್ಲಿ ಸೋಲಿಸಿ ಸಭೆಯಲ್ಲಿ 'ದಿಗ್ವಿಜಯ' ಮೆರೆಯಿಸುವದಾಗಲೀ ಅಲ್ಲ. ಅವನ ಉದ್ದೇಶ ಒಂದೇ,–ಕೇಳುವವರನ್ನು ಕೇಳಿ ತಿಳಿಯುವವರನ್ನು ಒಳಿತಿನ ವಿಮರ್ಶೆಯ ಕುರಿತು ಸೆಳೆಯುವದು. ಒಳಿತೇ ಪುಣ್ಯ–ಸದ್ಗುಣ. ಒಳಿತು ಅವನ ಮಂತವ್ಯ,–ಗಂತವ್ಯ ಸ್ಥಾನ, ಅವನ ಎಲ್ಲ ತಾತ್ವಿಕ ಚರ್ಚೆಯ ಗುರಿ. ಜನರೆಲ್ಲ ತಿದ್ದಿಕೊಳ್ಳಬೇಕೆಂದು ಅವನು ಬಯಸುವ ಮಾದರಿ. ಒಳಿತಿಗೆ ಹೊರತಾದವನು ಮಾನವನೇ ಅಲ್ಲ. ಒಳಿತಿಲ್ಲದ ಬಾಳು ಬಾಳಲ್ಲ. ಜನ ಕೆಡುವದೇಕೆ ? ಕೇಡು ಅಷ್ಟು ಮೋಹಕವೇ ? ಕೇಡಿನ ಕಡೆಗೇ ಮಾನವನ ಸಾಮಾನ್ಯ ಒಲವೇ ? ಛೇ. ಅಲ್ಲ ಸೊಕ್ರೆಟಿಸನ ನಂಬಿಗೆಯಂತೆ ಒಳಿತಿನ ಜ್ಞಾನ ವಾದರೆ ಒಳಿತು ಏನೆಂತ ತಿಳಿದುಬಂದರೆ ಸಾಕು, ಮಾನವರೆಲ್ಲ ತನ್ನಾರೆ ಒಳಿತನ್ನು ಅರಸುವರು. ಒಳಿತಿನ ತಿಳುವಳಿಕೆಯೇ ಎಲ್ಲ ಪುಣ್ಯದ ತವರು. ಒಳಿತಿನ ಅಜ್ಞಾನವೇ ಪಾಪ.

ಇತರ ಅಥೇನಿಯನ್ನರಂತೆ ಸೊಕ್ರೆಟಿಸನು ರಾಜಕೀಯ ಪ್ರಾಣಿಯಾಗಿದ್ದಿಲ್ಲ. ಸಾರ್ವಜನಿಕ ಜೀವನದಲ್ಲಿ ಅವನು ಭಾಗವನ್ನು ವಹಿಸುತ್ತಲೇ ಇದ್ದಿಲ್ಲ, ಭಾಗವಹಿಸುವ ವೇಳೆ ಬಂದಾಗ ಕಟ್ಟುನಿಟ್ಟಾದ ಪ್ರಾಮಾಣಿಕತೆಯ ನಿಲುವನ್ನೇ ಸ್ವೀಕರಿಸುತಿದ್ದನು. ಅವನು ಸ್ವಭಾವದಿಂದಲೂ ಧೀರನಿದ್ದನು; ಜಾತ್ರೆ–ಮರುಳಿನ ಜನಮತಕ್ಕೂ ಅಷ್ಟೇ ಉದಾಸೀನನಿದ್ದನು. ಆದ್ದರಿಂದ ನಿರ್ಭಯವಾಗಿ ನಿರ್ಧಾರದಿಂದ ಸಾರ್ವಜನಿಕರ ಅಭಿಪ್ರಾಯದ ಪರಿವೆಯಿಲ್ಲದೇ ತನ್ನ ಧೋರಣೆಯನ್ನು ಪ್ರತಿಪಾದಿಸುತಿದ್ದನು.

ಅವನ ಈ ಸ್ವತಂತ್ರವೃತ್ತಿಯ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಒಮ್ಮೆ ಅವನು ಅಥೆನ್ಸದ ನ್ಯಾಯವಿಚಾರಣಾಮಂಡಳದ ಸದಸ್ಯನಾಗಿದ್ದನು. ಕೆಲವು ದಳಪತಿಗಳ ವಿಚಾರಣೆ ನಡೆಯುತಿತ್ತು; ಅವರನ್ನು ಮರಣದಂಡನೆಗೆ ಗುರಿ ಮಾಡುವಂಥ ಘೋರ ಆರೋಪಗಳನ್ನು ಹೇರಲಾಗಿತ್ತು. ಆದರೆ ದಂಡನೆಗೆ ಸರಿಯಾದ ಕಾಯಿದೆಯ ಆಧಾರವಿದ್ದಿಲ್ಲ. ಬರೇ ಸಾರ್ವಜನಿಕರ ಬಹುಮತದ ಒತ್ತಾಯದಿಂದ ಆ ದಳಪತಿಗಳನ್ನು ನಿಯಮಬಾಹ್ಯವಾಗಿ ಗಲ್ಲಿಗೇರಿಸುವ ತೀರ್ಪು ಆಯಿತು. ಮಂಡಳದ ಇತರ ಎಲ್ಲ ಸದಸ್ಯರೂ ಆ ತೀರ್ಪನ್ನು ಎತ್ತಿ ಹಿಡಿದರು. ಆದರೆ ಸೊಕ್ರೆಟಿಸನೊಬ್ಬನೇ ವಿರುದ್ಧ ಮತವೀಯುವ ಸಾಹಸ ಮಾಡಿದನು. ಜನಜಂಗುಳಿ ಕೆರಳಿತು. ದಳಪತಿಗಳನ್ನು ತಲೆಹೊಡೆಯಬೇಕೆಂಬ ಕೂಗು ಎಲ್ಲೆಡೆಗೂ ಎದ್ದಿತು. ಆದರೆ ಆ ಕುರಿತು ಒಮ್ಮತವಾಗಲು ಸೊಕ್ರೆಟಿಸನ ಒಂದು ಮತ ಅನುಕೂಲವಾಗಲಿಲ್ಲ. ಪ್ರತಿಷ್ಠಿತ ಕಾಯಿದೆ ಮತ್ತು ನ್ಯಾಯಗಳ ಭದ್ರತೆಗಾಗಿ ಅವನು ನಿಶ್ಚಲನಾಗಿ ನಿಶ್ಚಯವಾಗಿ ಆ ಮರಣದಂಡನೆಯ ವಿರುದ ನಿಂತನು !

ಹಾಗೆಯೇ ಇನ್ನೊಂದು ಉದಾಹರಣೆ ಕ್ರಿ. ಪೂ. ೪೦೪ರಲ್ಲಿ ಅಥೆನ್ಸದ ಸಾಮ್ರಾಜ್ಯವು ಕೊನೆಗೊಂಡಿತು. ಆ ಕೋಲಾಹಲದ ದುರ್ಧರ ಸಮಯದಲ್ಲಿ ಮೂವತ್ತು ಮುಖಂಡರ ದಬ್ಬಾಳಿಕೆ ಅಥೆನ್ಸದ ಮೇಲೆ ನಡೆಯುತಿತ್ತು. ಆ 'ಮೂವತ್ತು ಸಮಸ್ತರು' ಕೆಲವು ಕಾಯಿದೆಗೆಟ್ಟ ಪ್ರತಿಬಂಧಗಳ ಕಟ್ಟಪ್ಪಣೆ ಹೊರಡಿಸಿ, ಸಾಕ್ರೆಟಿಸನಿಗೆ ಆ ಕೆಲವು 'ಅಪರಾಧಿ'ಗಳನ್ನು ಸೆರೆಹಿಡಿಯಲು ಬಲವಂತ ಮಾಡಿದರು. ಹೀಗೆ ಸೆರೆಹಿಡಿಯುವದು ಕಾಯಿದೆಗೆ ವಿರುದ್ಧವೆಂದು ಸೊಕ್ರೆಟಿಸನು ಮನಗಂಡಿದ್ದನು. ದಬ್ಬಾಳಿಕೆಗಾರರ ಕಟ್ಟಪ್ಪಣೆಯನ್ನು ಆ ಧೀರನು ನಿರಾಕರಿಸಿದನು. ಅಪ್ಪಣೆಯ ನಿರಾಕರಣೆಯು ಅವನನ್ನು ದಂಡನೆಗೆ,-ಅದು ಮರಣದಂಡನೆಗೆ,-ಗುರಿ ಮಾಡುವಂತೆ ಇತ್ತು. ಆದರೂ ಆ ಬಿಕ್ಕಟ್ಟಿನಲ್ಲಿ ಸೊಕ್ರೆಟಿಸನು ತಾನು ನಂಬಿದ ನ್ಯಾಯವನ್ನೇ ನೆಲೆಗೊಂಡು ನಿಂತನು; ಅನ್ಯಾಯದ ಸಾವಿನಿಂದ ಉಳಿದವರನ್ನು ಉಳಿಸಲು ತಾನು ಅನ್ಯಾಯವಾಗಿ ಸಾಯುವದೇ ನ್ಯಾಯವೆಂದು ತಿಳಿದನು. ಅದೇ ಸಮಯ ಪ್ರಜೆಗಳೂ ಆ ಕುರುಡು ದಬ್ಬಾಳಿಕೆಯ ವಿರುದ್ಧ ರೊಚ್ಚಿಗೆದ್ದು ಬಂಡು ಹೂಡಿದ್ದರಿಂದ 'ಮೂವತ್ತು' ಕಿತ್ತು ಬಿತ್ತು. ಹೀಗಾಗಿ ಸೊಕ್ರೆಟಿಸನ ಪ್ರಾಣಕ್ಕೆ ಬಂದ ಕುತ್ತು ತಪ್ಪಿತು. ಸೊಕ್ರೆಟಿಸನ ಧೈರ್ಯ ಇಂತಹದಿತ್ತು. ಅವನು ಇತಿಹಾಸದಲ್ಲಿ ಮೊತ್ತಮೊದಲಿನ ಸತ್ಯಾಗ್ರಹಿ. ಅವನ ಧೈರ್ಯ ನಿಜವಾಗಿಯೂ ಧೀರ,-ಧೀಮಂತ; ಅದರಲ್ಲಿ ಹುಚ್ಚು ಭಾವಾವೇಶ, ಕುರುಡು ಕೋಪೋನ್ಮಾದವಿಲ್ಲ. ತಾನು ನಂಬಿದ ನ್ಯಾಯಕ್ಕಾಗಿ ತಾನು ಕಂಡ ಸತ್ಯಕ್ಕಾಗಿ ಬುದ್ಧಿಪೂರ್ವಕವಾಗಿ, ವಿನಯಪೂರ್ವಕವಾಗಿ, ಪ್ರಾಣವನ್ನೂ ಪಣಕ್ಕೆ ಹಚ್ಚಲು ಅವನು ಸಿದ್ಧನಾಗುತಿದ್ದನು. ಅಂಥ ಸಿದ್ಧಿಯ ಸತ್ವ ಪರೀಕ್ಷೆಯನ್ನು ಅವನು ಶೀಘ್ರದಲ್ಲಿಯೇ ಇದಿರಾಗಬೇಕಾಯಿತು.

ಸೊಕ್ರೆಟಿಸನಿಗೆ ಮರಣದ ಭಯವು ಏನೂ ಇದ್ದಿಲ್ಲ. ಆತ್ಮವು ಅಮರವೆಂಬುದೇ ಅವನ ದೃಢವಾದ ಶ್ರದ್ಧೆಯಿದ್ದದರಿಂದ ಅವನು ಸಾವನ್ನು ಲೆಕ್ಕಿಸುತ್ತಲೇ ಇದ್ದಿಲ್ಲ. ಅವನ ಧರ್ಮವು ಅಂದಿನ ಸನಾತನಸಾಂಪ್ರದಾಯದ್ದಾಗಿದ್ದಿಲ್ಲ. ಅಂದಿನ ಅನೇಕ ಪೌರಾಣಿಕ ದೇವ ದೇವತೆಗಳನ್ನು ಅವನು ಒಪ್ಪುತ್ತಿದ್ದಿಲ್ಲ. ಅಥೆನ್ಸದ ಸಾರ್ವಜನಿಕ ಶ್ರದ್ಧಾ-ಭಕ್ತಿಗಳ ಸ್ಥಾನವನ್ನು ಅವನು ಹೀಗೆ ಅಲ್ಲಗಳೆಯುವಂತಾಯಿತು. ಅವನ ನೀತಿ ಮತ್ತು ಆಚಾರ ಧರ್ಮದ ಸ್ವರೂಪವು ಕ್ರೈಸ್ತ ಧರ್ಮವನ್ನು ಹೋಲುವಂತಿತ್ತು.

ಸೊಕ್ರೆಟಿಸನು ಕೆಲಮಟ್ಟಿಗೆ ಅನುಭಾವಿಯಂತಿದ್ದನು. ಆದರೂ ಮೂಲತಃ ವ್ಯಾವಹಾರಿಕವೃತ್ತಿಯವನಾಗಿದ್ದನು. ಒಮ್ಮೆ ಅವನು ೨೪ ತಾಸು ಧ್ಯಾನಮಗ್ನನಾಗಿ ನಿಂತಿದ್ದನೆಂಬ ಉಲ್ಲೇಖವಿದೆ. ! ಅವನು ಮನೋದೇವತೆಯನ್ನು ನಂಬಿದ್ದನು. 'ಸಣ್ಣ ಒಳದನಿ'ಯೊಂದು ತನ್ನನ್ನು ಕೆಲವು ಕೃತ್ಯಗಳಿಂದ ತಡೆ ಹಿಡಿಯುತ್ತದೆಂದು

ಅವನು ಅನ್ನುತ್ತಿದ್ದನು. ಈ 'ಅಂತಃಕರಣ ಪ್ರವೃತ್ತಿ'ಯೇ ಅವನನ್ನು ಸಂದೇಹ ಸಮಯಗಳಲ್ಲಿ ಸಂರಕ್ಷಿಸುವ ದೇವತೆಯಾಗಿತ್ತು. ಅವನ ಪ್ರಾಮಾಣಿಕತೆಯು ಅವನ ಲೋಕಪ್ರಿಯತೆಗೆ ಇನ್ನೂ ಅಡ್ಡ ಬರುತ್ತಿತ್ತು. ಸತ್ಯವನ್ನು ಆಡುವದು, ಆದಷ್ಟು ಅವನ್ನು ಪ್ರಿಯವಾಗಿ ಆಡುವದು, ಆದರೆ ಅಪ್ರಿಯವೆಂದು ಆಡದೇ ಬಿಡುವದಲ್ಲ– ಇದು ಅವನ ಮನೋಧರ್ಮವಾಗಿತ್ತು. ಸದಾಕಾಲವೂ ಸಾರ್ವಜನಿಕರೆದುರು ಮಾತನಾಡುವದು, ಜತೆಗೆ ಪ್ರತಿಯೊಬ್ಬರನ್ನು ತೃಪ್ತಿಪಡಿಸುವದು.–ಇವೆರಡೂ ಸೊಕ್ರೆಟಿಸನಿಗೆ ಸಾಧ್ಯವಿದ್ದಿಲ್ಲ. ನಿಜವಾಗಿಯೂ ಅವನ ಬಿಚ್ಚು ಮನಸ್ಸಿನ ಮಾತುಗಳೂ ಮತಗಳೂ ಅನೇಕರ ಮನಸ್ಸನ್ನು ಚುಚ್ಚುವಂಥವಾಗುತಿದ್ದವು.

ಹೀಗೆ ಅವನ ಮಾತಿನಿಂದ ನೊಂದು ರೊಚ್ಚಿಗೆದ್ದವರಲ್ಲಿ ಏರಿಸ್ಟೊ ಫೆನಿಜನು ಒಬ್ಬನು. ಆತನು ಅಂದಿನ ಪ್ರಹಸನ ಪಿತಾಮಹನು; ಸುಖಾಂತ ನಾಟಕಗಳನ್ನು ಬರೆದು ಹೆಸರಾದ ಹಿರಿಯ ಸಾಹಿತಿಯು; 'ಮುಗಿಲುಗಳು' ಎಂಬ ತನ್ನ ನಾಟಕದಲ್ಲಿ ಆತನು ಸೊಕ್ರೆಟಿಸನನ್ನು ನಗೆಗೀಡುಮಾಡಿದ್ದಾನೆ. ಈ ನಾಟಕವನ್ನು ಕ್ರಿ. ಪೂ. ೪೨೩ ರ ಸುಮಾರಿಗೆ ಆಡಿತೋರಿಸಲಾಯಿತು. ಅದರಲ್ಲಿ ಒಬ್ಬ ಅರೆಹುಚ್ಚ ಮುದುಕ ಬರುತ್ತಾನೆ. ಅವನು 'ವಿಚಾರದಂಗಡಿ' ಯನ್ನೊಂದು ಇಟ್ಟಿರುತ್ತಾನೆ. ತರುಣರನ್ನು ಕಲೆಹಾಕಿ ಅವರಿಗೆ ಕೆಲಸಕ್ಕೆಬಾರದ ಗಾಂಭೀರ್ಯದ ಹಾಗೂ ಉದ್ಧಟತನದ ವಿಚಾರಗಳನ್ನು ಕಲಿಸುತ್ತಿರುತ್ತಾನೆ. ಆ ಮುದುಕನು ಸೊಕ್ರೆಟಿಸನ ಪ್ರತಿಬಿಂಬ. ಒಬ್ಬ ಹೆಸರಾದ ನಾಟಕಕಾರನ ನಾಟಕರಂಗದಲ್ಲಿ ಪ್ರಕಟವಾಗಿ ಹೀಗೆ ವಿಡಂಬನೆಗೆ ವಿಷಯವಾಗುತ್ತಿದ್ದನೆಂದಮೇಲೆ ಸೊಕ್ರೆಟಿಸನ ವಿಚಾರ–ಪ್ರಚಾರಗಳ ಕುರಿತು, ಚರ್ಚೆ–ಚರ್ಯೆಗಳ ಕುರಿತು ಅಥೆನ್ಸದ ನಾಗರಿಕರಲ್ಲಿ ಎಷ್ಟು ಜನ ಅವನಿಗೆ ಪ್ರತಿಕೂಲರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಅಥೆನ್ಸದ ಲೋಕಮತದ ಒಂದು ದೊಡ್ಡ ಭಾಗವು ಸೊಕ್ರೆಟಿಸನನ್ನು ತಿಳಿಗೇಡಿಯೆಂದು ಹಳಿಯುತ್ತಿದ್ದರು, ಕಿಡಿಗೇಡಿಯೆಂದು ತಿಳಿಯುತ್ತಿದ್ದರು. ಅವನನ್ನು ಕುರಿತು ಉಪೇಕ್ಷೆಯಿಂದ ಆರಂಭವಾಗಿ ತೀವ್ರ ತಿರಸ್ಕಾರದವರೆಗೂ ಪ್ರತಿಕೂಲಮತದ ಛಾಯೆಗಳು ಕಂಡು ಬರುತ್ತಿದ್ದವು.

ಹೀಗಿದ್ದರೂ, ಕೆಲವು ಶಿಷ್ಯರ ಗುಂಪು ಸೊಕ್ರೆಟಿಸನ ಸುತ್ತಲೂ ಕೂಡಿಯೇ ಇತ್ತು. ಈ ಗುಂಪಿನಲ್ಲಿ ಸಿರಿವಂತರೂ ಇದ್ದರು ಬಡವರೂ ಇದ್ದರು. ಅವರಲ್ಲಿ ಹಲವರು ಬರೇ ವಾದಕೌಶಲ್ಯವನ್ನು ಕಲಿತುಕೊಳ್ಳಲಿಕ್ಕೆ ಬರುತ್ತಿದ್ದರು. ಅವನ ತರ್ಕದ ಹಿಡಿತ, ಪ್ರತಿಪಾದನೆಯ ಪೇಚು ಮತ್ತು ಯುಕ್ತಿಯ ಪೆಟ್ಟುಗಳನ್ನು, ಅವನೊಡನೆ ವಾದಿಸಿ, ಅವನ ವಾದ ಪ್ರತಿವಾದವನ್ನು ಕಣ್ಮುಟ್ಟನೋಡಿ ಅರಿತುಕೊಳ್ಳಬೇಕು. ಈ ವಿಚಾರದ ಗರಡಿಯಲ್ಲಿ ನುರಿತ ಜಟ್ಟಿಗಳಾಗಬೇಕು ಎಂಬ ಹೇತುವಿನಿಂದ

ಇಂಥವರು ಬರುತ್ತಿದ್ದರು. ಆದರೆ ಇತರ ಅನೇಕರು ಕೇವಲ ಶ್ರದ್ಧೆಯಿಂದ ಆ ಗುರುವಿನ ಆಶ್ರಯವನ್ನು ಸೇರುತ್ತಿದ್ದರು; ಅವನ ಮಾತು-ಮಾತುಗಳು ಮಥಿಸಿ ತೆಗೆದ ನೀತಿಯ ನವನೀತವನ್ನು ಉಂಡು ತಮ್ಮ ಬಾಳನ್ನು ಒಳಿತುಮಾಡಿಕೊಳ್ಳಲು ಬರುತ್ತಿದ್ದರು. ಆ ಗುಂಪಿನಲ್ಲಿ ವಿಭಿನ್ನ ವ್ಯಕ್ತಿಗಳ ವಿಚಿತ್ರ ಕಲಬೆರಕೆ ಆಗಿತ್ತು. ಮೇಲೆ ಉಲ್ಲೇಖಿಸಿದ ಮೂವತ್ತು ದಬ್ಬಾಳಿಕೆಗಾರರಲ್ಲಿಯ ಒಬ್ಬನಾದ ಕ್ರಿಟಿಯಾಸನು, ಹಿಂದೆ ಒಂದು ಕಾಳಗದಲ್ಲಿ ಸೊಕ್ರೆಟಿಸನು ಜೀವ ಉಳಿಸಿದ ಪ್ರತಿಭಾಶಾಲಿಯೂ, ವ್ಯಸನಾಧೀನನೂ ಆದ ಅಲ್ಕಿಬಿಯಾಡಿಸ್‌ನು, ಜಗತ್ಪ್ರಸಿದ್ಧ ದಾರ್ಶನಿಕನಾದ ಪ್ಲೇಟೋ, ಇತಿಹಾಸಕಾರ ರೆವಿನೋಫೋನನು, ಕ್ರಿಟೊ, ತರುಣ ಮೇಧಾವಿ ಪೆರಿಕ್ಲಿಸ್, ಥೀಬಾದ ತತ್ವವೆತ್ತನೆನಿಸಿಕೊಂಡ ಸಿಬಿನಸು, ವಿಖ್ಯಾತ ರುದ್ರ ನಾಟಕಕಾರನಾದ ಯುರಿಪಿಡಿಟಿಸ್‌ನು, ಇವರೇ ಮುಂತಾದವರು ಅವನ ಕಾಲಬಳಿಗೆ ಕೂತು ಭಕ್ತಿಯಿಂದ ಬುದ್ಧಿ ಕಲಿತ ಮಹನೀಯರಲ್ಲಿ ಕೆಲವರು. ಹೀಗೆ ಶಿಷ್ಯ ಪರಿವಾರವು ಕೂಡುತ್ತಿದ್ದರೂ, ಆ ಕೂಟದಲ್ಲಿ ಕಡ್ಡಾಯವಿದ್ದಿಲ್ಲ ಮಠ-ಪಾಠಗಳ ಕಟ್ಟು ಇದ್ದಿಲ್ಲ. ಆ ಶಿಷ್ಯರಿಗೆ ಯಾವ ಶಾಸನವೂ ಶಿಸ್ತೂ ಇದ್ದಿಲ್ಲ. ಸೊಕ್ರೆಟಿಸನ ಸಹವಾಸ ಜ್ಞಾನದ ಆಡುಂಬೊಲವಾಗಿತ್ತು. 'ಶಿಷ್ಯರು' ಬಂದಾಗ, ಮನಸ್ಸಿಗೆ ಬಂದಾಗ ಜ್ಞಾನ ಚರ್ಚೆ ಆಗುತ್ತಿತ್ತು; ತಾತ್ವಿಕವೂ ಸಾತ್ವಿಕವೂ ಆದ ವಿವಾದ ಸಾಗುತ್ತಿತ್ತು. ಸೊಕ್ರೆಟಿಸನು ಒಂದು ವಿಶಿಷ್ಟವಾದ ನಿಯಮಿತವಾದ ತತ್ವ ಸಾಂಪ್ರದಾಯವನ್ನು ಸ್ಥಾಪಿಸಲಿಲ್ಲ. ಅವನು ಪ್ರಶ್ನೆಕೇಳಿ ಚರ್ಚೆ ಮಾಡಿ ಮಂದಿಯ ಮನಸ್ಸನ್ನು ಬೆಳಕಿನ ಕಡೆಗೆ ಹೊರಳಿಸುತ್ತಿದ್ದನು. ರೆಕ್ಕೆ ಬಲಿಯುತ್ತಿರುವ ಮರಿಗಳಿಗೆ ಮೆಲ್ಲಮೆಲ್ಲನೆ ಗರಿಗೆದರಿ ತನ್ನೊಡನೆ ಹಾರಾಡಲು ಕಲಿಸುತ್ತ ಕ್ರಮೇಣ ನೆಲದಿಂದ ನೆಗೆದು ಮುಗಿಲಿಗೆ ಮಹೋಡ್ಡಾಣ ಮಾಡಲು ತಾಯಿ ಹಕ್ಕಿ ಚಿಕ್ಕಂದಿನಿಂದ ಕಲಿಸುವದಿಲ್ಲವೇ ಹಾಗೆ !

ಇಂಥ ಈ ವಿರಕ್ತ, ನಿರುದ್ಯೋಗಿ, ನಿವೃತ್ತಿಪರ, ವಾಚಾಳಿಯಾದ ಸಾಧುವು ಸಂಸಾರಿಗನಾಗಿದ್ದನು. ಸೊಕ್ರೆಟಿಸನಿಗೂ ಒಬ್ಬ ಹೆಂಡತಿ ಇದ್ದಳು. ಇದನ್ನು ಕೇಳಿ ಸೋಜಿಗವೆನಿಸುವದು. ಅಲ್ಲವೆ ? ಹಾಗಿದ್ದರೆ ಇನ್ನೂ ಕೇಳಿ ಒಮ್ಮೆಯಲ್ಲ, ಎರಡು ಸಲ ಮದುವೆಯಾಗಿದ್ದನು. ಮೊದಲ ಹೆಂಡತಿಯ ಹೆಸರು ಮರಡೋನೆ. ಆಕೆಯಿಂದ ಅವನಿಗೆ ಇಬ್ಬರು ಹುಡುಗರು. ಎರಡನೆಯ ಹೆಂಡತಿ-ಅಲ್ಲ ಮಡದಿಯೇ, ಏಕೆಂದರೆ ಆಕೆಯ ಕರ್ಕಶ ಸಹವಾಸದಲ್ಲಿ ಅವನಿಗೆ ಮಡಿದಂತೆಯೇ ಅನಿಸುತ್ತಿತ್ತು !- ಝಾಂತೀಪಿ. ಆಕೆಯಿಂದಲೂ ಅವನಿಗೆ ಒಬ್ಬ ಹುಡುಗನಿದ್ದನು. ಇತಿಹಾಸದಲ್ಲಿ ಈಕೆ ತಾಟಿಕೆಯೆಂದು ಪ್ರಸಿದ್ಧಳು. ಆದರೆ ಇದೊಂದು ಅನ್ಯಾಯವೆಂದೇ ತಿಳಿಯಬೇಕು. ಆಕೆ ಆಗಾಗ್ಗೆ ಸಿಡುಕಿನಿಂದ ಕರ್ಕಶಳಾಗುತ್ತಿರಬಹುದು. ಗಳಿಕೆಗೇಡಿಯಾದ

ಗಂಡನನ್ನು ಹಳಿದು ಹೊಯ್ಮಾಲಿಯೆನಿಸಿಕೊಂಡಿರಬಹುದು. ಆದರೆ ಆಕೆಯ ವ್ಯಥೆ ಆಕೆಯೇ ಬಲ್ಲಳು. ಗಂಡನಿಗೆ ಜಗತ್ತೇ ಮನೆ. ಆಕೆಗೆ ಮನೆಯೇ ಜಗತ್ತು. ಗಂಡ ಕಡು ಬಡವ; ಕೆಲಸಕ್ಕೆ ಬಾರದ ಜಾಣ; ದಿನವೆಲ್ಲ ಜೀವಮಾನವೆಲ್ಲ ಮಾತಾಡಿ ವಾದ ಹೂಡಿ ಹೊತ್ತು ಕಳೆಯುವ ಹರಟೆಯ ಹುದ್ದರಿ. ದುಡಿಮೆಗೆ ಕೈಕಡಿಮೆ; ಉಣ್ಣಲು ಬಾಯಿ ಸಾಕಷ್ಟು. ಅಂಥಲ್ಲಿ ಮಕ್ಕಳನ್ನು ನೋಡಿಕೊಂಡು ಮನೆವಾರ್ತೆ ಸಾಗಿಸಿಕೊಂಡು ಬದುಕು ಮಾಡುವದು ಹೇಗೆಂಬ ಕಷ್ಟದಲ್ಲಿಯೇ ತಲೆಕೆಡುತ್ತಿರುವಾಗ ಮನೆಯಾಕೆಯು ಮಾತಿನಲ್ಲಿ ನಯ–ನಾಜೂಕು ಬರುವದಾದರೂ ಹೇಗೆ ? ಆಕೆ ಕೆರಳಿ ಗಂಡನನ್ನು ಬಿರುನುಡಿಗಳಿಂದ ಕಾಡುವದು ಸೋಜಿಗವೇನು ? ಗಂಡ ಹೆಂಡಿರಲ್ಲಿ ಒಬ್ಬರಾದರೂ ಬದುಕಿನ ಹಿಡಿತ ಬಿಗಿಯಾಗಿಡದಿದ್ದರೆ ಬಾಳು ಹಾದಿಗೆಟ್ಟು ಹದಗೆಟ್ಟು ಹೋಗುವದು ಖಂಡಿತ. ಝಾಂತೀಪಿ ಸಿಡುಕಿನವಳೂ ಹೊಗೆಯಾಡುವ ಹೊಯ್ಮಾಲಿಯೂ ಎಂದು ಸೊಕ್ರೆಟಿಸನ ಒಡನಾಡಿಗಳಿಗೆ ಕಂಡಿದ್ದರೆ ಅದು ಸಹಜವೇ. ಅವಳು ಮೂರ್ಖಳು ಇದ್ದಿರಬಹುದು. ಆದರೆ ಸೊಕ್ರೆಟಿಸನು ಅವಳೊಡನೆ ಬಾಳುವೆ ನಡೆಯಿಸಿದನು. ಅವಳ ಕಾಟಕ್ಕಾಗಿ ವಿಷ ಕುಡಿಯಲಿಲ್ಲ. ಸೊಕ್ರೆಟಿಸನೊಡನೆ ಸಂಸಾರ ಆಕೆಗೆ ಒಂದು ಅತಿದಿವ್ಯವೆನಿಸಿರಬೇಕು; ಆದರೆ ಆಕೆಯೊಡನೆ ಸಹವಾಸ ಸೊಕ್ರೆಟಿಸನಂಥ ಜ್ಞಾನಿಗೂ ಅಸಹ್ಯವೆನಿಸಲಿಲ್ಲ–ಪ್ರಸಂಗದಲ್ಲಿ ರಮ್ಯವೇ ಅನಿಸಿತು. ಇದಕ್ಕೆ ಕಾರಣ ಅವನ ವಿನೋದ ಬುದ್ಧಿಯ ತಾಳ್ಮೆ ಮತ್ತು ಆಕೆಯ ವ್ಯಾವಹಾರಿಕ ಬುದ್ಧಿಯ ಜಾಣ್ಮೆ ! ಇರಲಿ.

ಕ್ರಿ. ಪೂ. ೪೯೯ನೇ ವರ್ಷ. ಆಗ ಸೊಕ್ರೆಟಿಸನಿಗೆ ೭೦ ವರ್ಷ. ನಿಜವಾಗಿಯೂ ಯಾವ ಹಗೆಯೂ ಆ ಸರೆತ ಮುದುಕನ ಬಗ್ಗೆ ಕನಿಕರ ಪಡಬೇಕಾದ ಕಾಲವದು. ಕನಿಕರವಲ್ಲದಿದ್ದರೂ, ಸ್ಥಿರಬದ್ಧ ಮತ್ಸರದಿಂದ ಅವನನ್ನು ಕಾಡಿ ಜೀವ ಹಿಂಡಬೇಕೆಂಬ ಹುಮ್ಮಸ ಪಡುವದು ಅವನ ಆ ವಯಸ್ಸಿನಲ್ಲಿ ಆಗದವರಿಗೂ ಬೇಡವೆನಿಸಬೇಕು. ಆದರೆ ಸೊಕ್ರೆಟಿಸನ ವೈರಿಗಳ ಹೊಂಚು ಎಷ್ಟು ಉಗ್ರವೋ ಅಷ್ಟೇ ಜಾಗ್ರತ. ೭೦ ವರ್ಷ ಪ್ರಾಯದ–ಅಲ್ಲ, ಮುಪ್ಪಿನ ಮುದುಕ ನ್ಯಾಯ ವಿಚಾರಣೆಗೆ ಗುರಿ ಮಾಡಲ್ಪಟ್ಟನು. ಅವನ ಮೇಲೆ ಎರಡು ಘೋರ ಆರೋಪಗಳನ್ನು ಹೇರಲಾಯಿತು. (೧) ಪ್ರಜೆಗಳೂ ರಾಜ್ಯವೂ ನಂಬುವ ದೇವ–ದೇವತೆಗಳಲ್ಲಿ ಅವನು ಅಶ್ರದ್ಧೆಯನ್ನೂ ಉಪೇಕ್ಷೆಯನ್ನೂ ಹುಟ್ಟಿಸುತ್ತಾನೆ. (೨) ನಗರದ ನವ ಯುವಕರನ್ನೆಲ್ಲ ಅವನು ಕೆಡಿಸುತ್ತಾನೆ.

ಸೊಕ್ರೆಟಿಸನಿಗೆ ಸಂಕಟ ಸಮಯಕ್ಕೆ ನೆರವಾಗಲು ಗೆಳೆಯರೇನು ಕಡಿಮೆ ಇದ್ದಿಲ್ಲ. ಆದರೆ ಅವನು ಆತ್ಮಜ್ಞಾನಿ. ಸತ್ಯಕ್ಕೆ ಆತ್ಮಸಮರ್ಪಣೆ ಮಾಡಿ ಸತ್ವಯುತವಾದ ಆತ್ಮಾವಲಂಬನೆಯನ್ನು ಪಡೆದ ವೀರ ವಿರಾಗಿ. ಅಂದಿನ ಅಥೆನ್ಸದಲ್ಲಿಯ ಹಿರಿಯ

ವಾಗ್ಮಿಯಾದ ಲಿಸಿಯಾಸ ಎಂಬುವನು ಸೊಕ್ರೆಟಿಸನ ಪತಿಯಿಂದ ನ್ಯಾಯಾಲಯದಲ್ಲಿ ವಾದಿಸಲು ಒಂದು ಅಪೋಘ ಭಾಷಣವನ್ನು ಬರೆದು ಅವನಿಗೆ ಓದಿ ತೋರಿಸಿದನು. ಅವನು ಒಪ್ಪಿದರೆ ಆತನು ಆ ಭಾಷಣದಿಂದ ಸೊಕ್ರೆಟಿಸನ ಸಮರ್ಥನೆ ಮಾಡುವವ ನಿದ್ದನು. ಆದರೆ ಆ ಮಹಾಜ್ಞಾನಿಯು ಅದನ್ನು ಸಾದ್ಯಂತ ಓದಿ ಮೆಚ್ಚಿ ಲಿಸಿಯಾಸನ ಆಭಾರ ಮನ್ನಿಸಿ ಅದನ್ನು ತಿರುಗಿ ಕೊಟ್ಟನು. ತನ್ನ ಬಗ್ಗೆ ವಾದಿಸುವದು ಬೇಡ ವೆಂದನು, ಏಕೆ ? ಈ ಬಗೆಯ ವ್ಯಾವಸಾಯಿಕವಾದ ಸಮರ್ಥನೆಗಳಲ್ಲಿ ಯಾವ ಪೌರುಷವು ಇಲ್ಲವೆಂದು ಅವನು ಹೇಳಿದನು; ಸತ್ಯದ ಸಮರ್ಥನೆಗೆ ವಾದವನ್ನೇ ವೃತ್ತಿಯಾಗಿಟ್ಟುಕೊಂಡ ವಕೀಲನ ವಾಕ್ಸಾಮರ್ಥ್ಯವು ತಕ್ಕದ್ದಲ್ಲವೆಂದು ಅವನು ವಿವರಿಸಿದನು; ಇಂಥ ವಾದ–ಸಮರ್ಥನೆ ಸಿಕ್ಯೊನಿಯಾದ ಚಪ್ಪಲಿ ಜೋಡಿನಂತೆ; ಎಷ್ಟೇ ಅಂದಚಂದವಿದ್ದರೂ, ಪಾದಗಳಿಗೆ ಸರಿ ಹೊಂದಿಕೆಯಾಗಿದ್ದರೂ, ಅದು ಹೆಣ್ಣ ತೊಡಿಗೆ–ಎಂದನು ! ತತ್ವಜ್ಞಾನಿಯ ಲಕ್ಷಣವೇನು ? ಆತನು ಉದಾರಧೀ– ಮಹಾತ್ಮನು ಆತ್ಮಶಕ್ತಿಯನ್ನೇ ನೆಲೆಗೊಂಡವನು.

ನ್ಯಾಯ ವಿಚಾರಣೆಗೆ ಆರಂಭವಾಯಿತು. ಸೊಕ್ರೆಟಿಸನು ತನ್ನ ಸಮರ್ಥನೆಯನ್ನು ತಾನೇ ಆರಂಭಿಸಿದನು. 'ಅಥೆನ್ಸದ ನಾಗರಿಕರೆ, ನನ್ನ ಆಪಾದನೆಗಾರರ ಮಾತಿನಿಂದ ನೀವು ಎಷ್ಟರಮಟ್ಟಿಗೆ ಪ್ರಭಾವಿತರಾಗಿದ್ದೀರಿ ಎಂಬುದನ್ನು ನಾನು ಅರಿಯೆ. ನನ್ನ ಮಟ್ಟಿಗೆ ಹೇಳುವದಾದರೆ, ಅವರ ಆಪಾದನೆಯ ಮಾತನ್ನು ಕೇಳುತ್ತಿರುವಾಗ ನನ್ನನ್ನೇ ನಾನು ಮರೆತೆನು. ಅವರ ವಾದವೈಖರಿಯು ಅಷ್ಟು ಸಮರ್ಪಕ ವೆನಿಸುವಂತೆ ಇತ್ತು. ಆದಾಗ್ಯೂ ಅವರು–ಹೇಗೇ ನುಡಿದರೂ–ಸತ್ಯವನ್ನು ನುಡಿದಿಲ್ಲ.'– ಇಂಥ ಧೀರ ಗಂಭೀರ ಶಬ್ದಗಳಿಂದ ಮೊದಲು ಮಾಡಿ ಸೊಕ್ರೆಟಿಸನು ಕೇವಲ ತನ್ನ ಉದ್ದೇಶಗಳನ್ನಷ್ಟೇ, ತನ್ನ ತತ್ವವಿಧಾನಗಳನ್ನಷ್ಟೇ ಸರಳ ರೀತಿಯಲ್ಲಿ ಪ್ರತಿಪಾದಿಸಿದನು. ತನ್ನದಾದ ಸರ್ವಸ್ವವನ್ನೂ ಅಥೆನ್ಸದ ಸೇವೆಗೆ ಸಮರ್ಪಿಸಿದನು. ಅವನದು ಒಂದೇ ಒಂದು ಬಯಕೆ–ತನ್ನ ನಾಗರಿಕ ಬಾಂಧವರನ್ನು ಸುಖಿಯಾಗಿ ಮಾಡುವದು. ಅದು ಅವನಿಗೆ ದೇವತೆಗಳೇ ಆಜ್ಞಾಪಿಸಿದ 'ಆ ದೇವತೆಗಳ ಅಧಿಕಾರವು ನಿಮಗಿಂತಲೂ ನನಗೆ ಹೆಚ್ಚು ಪ್ರಮಾಣ ಭೂತವು !' ಎಂದು ಸೊಕ್ರೆಟಿಸನು ನ್ಯಾಯಾಧೀಶರಿಗೆ ಸಂಬೋಧಿಸಿ ನುಡಿದನು.

ಅವನ ಈ ಭಾಷಣದಿಂದ ನ್ಯಾಯಾಧೀಶರು ನೊಂದುಕೊಂಡರೆಂಬುವದು ಸಹಜ. ಆದರೆ ಇಷ್ಟಕ್ಕೆ ಮುಗಿಯಲಿಲ್ಲ. ಬರಲಿರುವ ಕೇಡು ಮುಂದೆಯೇ ಇತ್ತು. 'ಇನ್ನು ಮುಂದೆ ಸತ್ಯದ ಶೋಧವನ್ನೇ ಬಿಟ್ಟುಕೊಡಬೇಕೆಂಬ ಶರ್ತಿನಿಂದ, ನೀವು

ನನ್ನನ್ನು ನಿರಪರಾಧಿಯೆಂದು ಬಿಟ್ಟುಕೊಟ್ಟರೆ, ನನ್ನ ಉತ್ತರವಿಷ್ಟೇ,' ಅವನು ಮುಂದುವರಿದನು. 'ಅಥೆನ್ಸದ ನಾಗರಿಕರೇ, ನಾನು ದೇವರ ಆಜ್ಞೆಯನ್ನೇ ಪಾಲಿಸುವೆನು. ದೇವರೇ ನನಗೆ ಈ ಕಾರ್ಯವನ್ನು ವಹಿಸಿಕೊಟ್ಟದ್ದಾಗಿದೆ. ನಿಮಗಿಂತಲೂ ದೇವರಿಗೇ ನಾನು ವಿಧೇಯನು. ನನ್ನಲ್ಲಿ ಕಸುವು ಇರುವನಕ, ಉಸಿರು ಆಡುವನಕ, ನನ್ನ ಈ ತತ್ವವ್ಯಾಸಂಗದಿಂದ ನಾನು ಹಿಂಜರಿಯಲಾರೆನು. ನನಗೆ ಇದಿರಾಗುವ ಪ್ರತಿಯೊಬ್ಬನನ್ನೂ ತಡೆದು ನಾನು ಹೀಗೆ ಕೇಳುವವನೇ, 'ಜ್ಞಾನದ ಕುರಿತು, ಸತ್ಯದ ಕುರಿತು, ಆತ್ಮವನ್ನು ಉತ್ತಮವನ್ನಾಗಿ ಮಾಡುವ ಕುರಿತು ಯಾವ ಗಮನವೂ ಇಲ್ಲದೆ, ಹಣ ಮತ್ತು ಹೆಗ್ಗಳಿಕೆಯ ಮೇಲೆಯೇ ನಿನ್ನ ಜೀವವನ್ನು ತೊಡಗಿಸಿ ಇಡುವದಕ್ಕೆ ನಿನಗೆ ನಾಚಿಕೆ ಅನಿಸುವದಿಲ್ಲವೇ ?' ಸಾವು ಏನೆಂಬುದು ನನಗೆ ಗೊತ್ತಿಲ್ಲ. ಸಾವು ಒಳಿತಾದ ಸಂಗತಿಯೇ ಇರಬಹುದು. ನನಗೆ ಸಾವಿನ ಭಯವಿಲ್ಲ. ಆದರೆ ಒಂದು ಸಂಗತಿ ನನಗೆ ಗೊತ್ತಿದೆ. ಹಿಡಿದ ನಿಲುಮೆಯನ್ನು ಬಿಟ್ಟುಕೊಡುವದು ಕೆಡುಕು. ಆದ್ದರಿಂದ ಕೆಡುಕೆಂದೇ ಗೊತ್ತಾಗಿದ್ದ ಸಂಗತಿಗಿಂತ ಒಳಿತಿರಬಹುದಾದ ಸಂಗತಿಯನ್ನು ನಾನು ಯಾವಾಗಲೂ ಸ್ವಾಗತಿಸುತ್ತೇನೆ.' ಎಂಥ ಮಾತಿದು ! ಈ ಮಾತಿನಲ್ಲಿ ನಿಶ್ಚಯವಾದ ಅಕ್ಷಯವಾದ ಆತ್ಮವಿಶ್ವಾಸ ತುಂಬಿಸೂಸುತ್ತದೆ.

ನ್ಯಾಯಾಧೀಶರಲ್ಲಿ ಕೆಲವರೇ ಒಂದು ಅಲ್ಪ ಸಂಖ್ಯೆಯ ಜನ.-ಅವನು ಅಪರಾಧಿಯೆಂದು ತೀರ್ಪು ಕೊಟ್ಟರು. ತೀರ್ಪಿನಂತೆ ಅವನಿಗೆ ವಿಧಿಸಿದ ದಂಡನೆ ಮರಣವಾಗಿತ್ತು. ಅಥೆನ್ಸದ ಕಾಯಿದೆಯಂತೆ ಮರಣದಂಡನೆಗೆ ಬದಲಾಗಿ ಇನ್ನೊಂದು ಶಿಕ್ಷೆಯನ್ನು-ಉದಾಹರಣೆಗಾಗಿ, ದೇಶದಿಂದ ಬಹಿಷ್ಕಾರವನ್ನು-ಅಪರಾಧಿಯೇ ಸೂಚಿಸುವದು ಸಾಧ್ಯವಿತ್ತು. ಆ ಮೇರೆಗೆ ಸೊಕ್ರೆಟಿಸನು ಬದಲನ್ನು ಸೂಚಿಸಿದನು. ಅದೆಂಥ ಬದಲು ? ತಾನು ಏನು ಇದ್ದೇನೋ ಅದಕ್ಕೆ ತಕ್ಕ ಸತ್ಕಾರದಿಂದ ತನ್ನನ್ನು ಕಾಣಬೇಕು. ಅಂದರೆ ತಾನು ಸಾರ್ವಜನಿಕ ಹಿತಕರ್ತನಿದ್ದೇನೆ; ಆದ್ದರಿಂದ ಗ್ರೀಕರಲ್ಲಿ ಒಲಿಂಪಿಕ್ ಪಂದ್ಯಾಟಗಳನ್ನು ಗೆದ್ದ ಹಿರಿಯ ಹುದ್ದರಿಗೆ ಯಾವ ಸನ್ಮಾನ ಸಡಗರದಿಂದ ಜನ ಕಾಣುವದೋ, ಸಾರ್ವಜನಿಕ ವೆಚ್ಚದಿಂದ ಉತ್ತಮ ಮೇಜವಾನಿ ಮಾಡಿಸಿ ಆಮರಣ ವರ್ಷಾಶನವಿತ್ತು ಸಲಹುವದೋ ಅದೇ ಬಗೆಯಿಂದ ತನ್ನನ್ನು ಸತ್ಕರಿಸುವದೇ ತನಗೆ ಉಚಿತ ವಿಧಿಯೆಂದು ಸೊಕ್ರೆಟಿಸನು ಶಾಂತಚಿತ್ತನಾಗಿ ಸೂಚಿಸಿದನು ! ಕೊನೆಗೂ ಮರಣದಂಡನೆಯೇ ಸಿಗುವದಾದರೆ 'ಅನಾಯಾಸೇನ ಮರಣ'ವು ಬರಲೆಂದು ಅವನು ಒಂದು 'ಮಿನಾ' ಅಂದರೆ ಸುಮಾರು ಎರಡು ಪೌಂಡಿನಷ್ಟು ದಂಡವನ್ನು ತೆರಲೂ ಸಿದ್ಧನಾದನು. ಅವನ ಗೆಳೆಯರು ದಂಡದ ಹಣವನ್ನು ಮೂವತ್ತು ಮಿನಾಗಳಷ್ಟು ಏರಿಸಲು ಅವನಿಗೆ ಒತ್ತಾಯಪಡಿಸಿದರು-

ಮುದುಕ ಅನ್ಯಾಯವಾಗಿ ಸಾಯುವ ಜೊತೆಗೆ ಅಸಹ್ಯ ನೋವಿನಿಂದ ನರಳಿ ಸಾಯುವವನಲ್ಲ! ಎಂಬ ಕಳವಳದಿಂದ. ಆದರೆ ಸೊಕ್ರೆಟಿಸ್ ಸುತರಾಂ ಒಪ್ಪಲಿಲ್ಲ.

ಎಂಥ ಸಾವು ಬೇಕೆಂಬುದರ ಬೆಲೆ ಕಟ್ಟುವದರಲ್ಲಿಯೂ ಮುದುಕನ ಈ ಹಟವನ್ನು ನೋಡಿ ನ್ಯಾಯ ಸಭೆಯು ಸಂತಾಪಗೊಂಡಿತು. ಸಂತಾಪಗೊಳ್ಳದೇ ಮತ್ತೇನು ಮಾಡೀತು ? ಅವರ ನ್ಯಾಯ ವಿಚಾರದ ಮಹಾ ಆಡಂಬರದ ಶುದ್ಧ ವಿಡಂಬನೆ ಯನ್ನೇ ಮುದುಕನು ಮಾಡುವಂತೆ ಕಂಡಿತು ! ಅವರ ನ್ಯಾಯ, ಅವರ ನಿರ್ಣಯ, ಅದಕ್ಕೆ ತಕ್ಕವಾಗಿ ಬರಬೇಕಾದ ಕ್ಷಮಾಯಾಚನೆ ಅಥವಾ ಪರ್ಯಾಯ ಸೂಚನೆ– ಅದೇನೂ ಗಣನೆಗೇ ಇಲ್ಲದಂತೆ ಸೊಕ್ರೆಟಿಸನು ವರ್ತಿಸಿದನು. ಎಷ್ಟೇ ಸೌಮ್ಯವಾಗಿ ಆದರೂ, ಅವನು ನ್ಯಾಯ ಸಭೆಯ ಬುದ್ಧಿಯ ಕುರಿತು ತೀರ ತಿರಸ್ಕಾರವನ್ನೇ ತೋರಿಸಿದ್ದನು ! ಇನ್ನು ಹೆಚ್ಚಿನ ಸಂಭ್ರಮಕ್ಕೆ ಇಂಬುಗೊಡದೆ, ಅವನಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಲಾಯಿತು. 'ಹೆಮ್ಲೊರ್ ವಿಷ' ವನ್ನು ಕೊಟ್ಟು ಅವನನ್ನು ಸಾಯಿಸಬೇಕೆಂದು ತೀರ್ಪಾಯಿತು. ಹೆಮ್ಲೊರ್ ಒಂದು ವಿಷಾರಿ ವನಸ್ಪತಿ. ಅದರ ರಸವನ್ನು ಕುಡಿಯಿಸಿ ಕೊಲ್ಲುವದು ಅಥೆನ್ಸದ ದೇಹಾಂತ ಶಿಕ್ಷೆಯ ಕ್ರಮ ವಾಗಿತ್ತು.

ತೀರ್ಪನ್ನು ಕೇಳಿ ಸೊಕ್ರೆಟಿಸನಿಗೆ ಏನೂ ಅನಿಸಲಿಲ್ಲ. ಶಾಂತಚಿತ್ತನಾಗಿಯೇ ಆ ಜ್ಞಾನಿಯು ಅದನ್ನು ಸ್ವಾಗತಿಸಿದನು. ಮೊದಲಿನಂತೆಯೇ ಧೀರ ಗಂಭೀರವಾಗಿ ಅವನು ತನ್ನ ಭಾಷಣವನ್ನು ನ್ಯಾಯ ಸಭೆಯನ್ನು ಉದ್ದೇಶಿಸಿ ಮುಂದುವರಿಸಿದನು. 'ಇನ್ನು ಈಗ ಇಲ್ಲಿಂದ ಹೊರಡುವ ವೇಳೆ ಬಂದಿದೆ–ನಾನು ಸಾಯಲಿಕ್ಕೆ, ನೀವು ಬಾಳಲಿಕ್ಕೆ ! ' ಹೀಗೆಂದು ಆತನು ತನ್ನ ಮಾತನ್ನು ಮುಗಿಸುತ್ತ ನುಡಿದನು. 'ಆದರೆ ನಮ್ಮಿರ್ವರಲ್ಲಿ ಯಾರು ಹೆಚ್ಚು ಒಳಿತಿನ ದಶೆಗಾಗಿ ಪಯಣ ಬೆಳೆಸುವ ರೆಂಬುದನ್ನು ಯಾರೂ ಅರಿಯರು. ಅದನ್ನು ದೇವನೊಬ್ಬನೇ ಬಲ್ಲನು !'

ದೇಹಾಂತ ಶಿಕ್ಷೆಯನ್ನು ಅಪರಾಧಿಗೆ ಕೂಡಲೇ ಕೊಡಲು ಅನುಕೂಲವಾಗಲಿಲ್ಲ. ನಗರದಲ್ಲಿ ಕೆಲವು ಧಾರ್ಮಿಕ ಉತ್ಸವ ಪರ್ವಗಳು ನಡೆಯಲಿದ್ದವು. ಆದ್ದರಿಂದ ಸೊಕ್ರೆಟಿಸನ ದೇಹಾಂತವನ್ನು ಮೂರು ವಾರ ಮುಂದೆ ಹಾಕಲಾಯಿತು. ಆ ತನಕ ಅವನನ್ನು ಸೆರೆಯಲ್ಲಿ ಇಟ್ಟರು. ಅದೂ ಹೇಗೆ ? ಅವನ ಮುದಿ ಕೈ ಕಾಲು ಗಳಿಗೆ ಭಾರವಾದ ಸಂಕೋಲೆಗಳನ್ನು ತೊಡಿಸಿ ಇಡಲಾಯಿತು. ಸಾರ್ವಜನಿಕ ಕ್ಷೇಮದ ದೃಷ್ಟಿಯಿಂದ ಇಷ್ಟು ಮುಂಜಾಗ್ರತೆ ವಹಿಸುವದು ಸರಕಾರಕ್ಕೆ ಯೋಗ್ಯ ವೆನಿಸಿರಬೇಕು. ಆ ದುಃಖದಲ್ಲಿಯೂ ಒಂದು ಸುಖ (!) ಇತ್ತು. ಅವನು ಏಕಾಕಿ

ಯವಾಗಿ ಬಿದ್ದಿರಬೇಕಾಗಿಲ್ಲ. ಗೆಳೆಯರು ಅವನನ್ನು ಕಾಣಲು ಬರುತ್ತಿದ್ದರು; ಅವರೊಡನೆ ಅವನು ಒಳ್ಳೇ ಉಲ್ಲಾಸದಿಂದ ಮಾತುಕತೆ ನಡೆಸಬಹುದಿತ್ತು. ಈ ಸಮಯದಲ್ಲಿ ಅವನ ಏಕನಿಷ್ಠ ಶಿಷ್ಯರಲ್ಲಿ ಒಬ್ಬನಾದ ಕ್ರಿಟೋ ಅವನ ಬಳಿಗೆ ಬಂದನು. ನ್ಯಾಯವಿಚಾರಣೆಯು ನಡೆದಾಗಲೆಲ್ಲ ಆತನು ಗುರುವಿನ ಹತ್ತಿರವೇ ಇದ್ದನು; ಗುರುವಿನ ನೆರವಿಗಾಗಿ ೩೦ ಮಿನಾ ನಾಣ್ಯಗಳನ್ನು ತೆರಲೂ ಸಿದ್ಧನಾಗಿದ್ದನು. ಆತನು ಈಗ ಸೊಕ್ರೆಟಿಸನನ್ನು ಸೆರೆಯಿಂದ ಪಾರುಮಾಡಿಸುವ ಯೋಜನೆಯೊಂದಿಗೆ ಬಂದನು. ಪಲಾಯನದ ಸಂಚನ್ನೆಲ್ಲ ಹಂಚಿಕೆಯಿಂದ ಹೂಡಿಟ್ಟು ಗುರುವನ್ನು ಒಲಿಸಿ ಒಯ್ಯಲು ಬಂದನು. ಆದರೆ ಸೊಕ್ರೆಟಿಸನು ಒಪ್ಪಲಿಲ್ಲ. ಒಪ್ಪುವದಾದರೂ ಹೇಗೆ? ದೇಶದ ನಿಯಮ ಸಮ್ಮತವಾದ ನ್ಯಾಯಾಲಯವು ಅವನನ್ನು ದೋಷಿಯಾಗಿ ತೀರ್ಮಾನಿಸಿತ್ತು. ಸೊಕ್ರೆಟಿಸನು ಆ ನಿಯಮಕ್ಕೆ ವಿಧೇಯನಾಗಿ ವರ್ತಿಸಲು ಬದ್ಧನು. ದೇಶದ ಕಟ್ಟಳೆಯನ್ನು ಮುರಿದು ಬಂದು ಗಾರನೆನಿಸಿಕೊಂಡು ಪುಂಡರ ಗುರುವಾಗಲು ಅವನು ಒಪ್ಪಲಿಲ್ಲ.

ಮೂರು ವಾರಗಳು—೨೧ ದಿನಗಳು ಮುಗಿಯಲು-ಬಂದವು. ಪ್ಲೇಟೊ—ಸೊಕ್ರೆಟಿಸನ ವಿಶ್ವವಿಖ್ಯಾತ ದಾರ್ಶನಿಕ ಶಿಷ್ಯನು—ಆ ಅಂತಿಮ ದಿನದ,—ಅಂತ್ಯಕಾಲದ—ವರ್ಣನೆಯನ್ನು 'ಕರುಳಿನ ವಚನ'ಗಳಲ್ಲಿ ಬರೆದಿಟ್ಟಿದ್ದಾನೆ. ಗೆಳೆಯರದೊಂದು ಗುಂಪು ಕೊನೆಯ ದಿನ ಅವನನ್ನು ಕಾಣಲು ಬಂದಿತು. ಅವನು ಸೆರೆಮನೆಯ ಕೋಣೆಯಲ್ಲಿ ಇದ್ದನು. ಆದರೆ ಇಂದು ಕೈಕಾಲಿನ ಸಂಕೋಲೆಗಳನ್ನು ಕಳಚಿಹಾಕಿದ್ದರು. ವೃದ್ಧ ಗುರುವು ಸ್ವತಂತ್ರವಾಗಿ (ಬಂಧನದಲ್ಲಿ) ಇದ್ದನು. ಅವನ ಹತ್ತಿರ ಕರ್ಕಶೆ ತಾಟಿಕೆ ಇತ್ಯಾದಿ ಬಿರುದಾಂಕಿತಳಾದ ಅವನ ಪ್ರೀತಿಯ ಝಾಂತಿಪಿ ಇದ್ದಳು. ಅವನ ಕಿರಿಯ ಮಗನೂ ಇದ್ದನು. ಝಾಂತಿಪಿಯು ಬಿಕ್ಕಿಬಿಕ್ಕಿ ಅಳುತಿದ್ದಳು. 'ಸೊಕ್ರೆಟಿಸ್, ನಿನ್ನ ಗೆಳೆಯರು ಬಂದಿದ್ದಾರೆ. ಅವರು ನಿನ್ನೊಡನೆ, ನೀನು ಅವರೊಡನೆ ಈಗ ಕೊನೆಯದಾಗಿ ಮಾತನಾಡುವಿ!' ಎಂದು ಆಕೆ ಅತ್ತಳು. ಆಗ ಸೊಕ್ರೆಟಿಸನು ಕ್ರಿಟೋನ ಕಡೆಗೆ ಹೊರಳಿ ಅಂದನು. 'ಕ್ರಿಟೋ, ಯಾರಾದರೂ ಇವಳನ್ನು ಮನೆಗೆ ಮುಟ್ಟಿಸಿಬನ್ನಿ!'. ಅವಳನ್ನು ಮೆಲ್ಲಗೆ ಸಂತೈಸಿ ಅಲ್ಲಿಂದ ಕರೆದೊಯ್ದರು. ಆಗ ಸೊಕ್ರೆಟಿಸನು—ಸಾವಿನ ನೆಳಲಲ್ಲಿ ನಿಂತಿದ್ದ. ಆ ಇಚ್ಛಾಮರಣಿಯಾದ ಯುವನ ಭೀಷ್ಮನು—ಹಸೆಯಿಂದ ಎದ್ದು ಕುಳಿತನು. ಸಂಕೋಲೆಗಳು ಬಿಗಿದು ತಿಕ್ಕಿದ್ದಲ್ಲಿ ಕಾಲಿಗೆ ಬರೆಗಳು ಬಿದ್ದಿದ್ದವು. ಅವುಗಳ ಮೇಲೆ ಹಾಯಾಗಿ ಕೈಯಾಡಿಸುತ್ತ ಅವನು ಸ್ವಸ್ಥಚಿತ್ತನಾಗಿ ಮಾತನಾಡತೊಡಗಿದನು. ಯಾತರ ಕುರಿತು? ಮಕ್ಕಳ ಪರಿವೆಯೇ? ಮೃತ್ಯುಪತ್ರವೇ? ಬೀಳ್ಕೊಡುವ ಕ್ಷಮಾಪಣೆಯೇ? 'ಅಂತಿಮ ಸಂದೇಶ'ವೇ? ಏನೂ ಅಲ್ಲ. ಎಂದಿನಂತೆ ನಿದಾನವಾದ ತತ್ತ್ವಚರ್ಚೆ. ಸುಖ ಮತ್ತು ದುಃಖ,

ನಲುವು ಮತ್ತು ನೋವು ಇವುಗಳ ಅನ್ಯೋನ್ಯ ಸಂಬಂಧದ ಕುರಿತು ಸೊಕ್ರೆಟಿಸನು ವ್ಯಾಖ್ಯಾನ ಮಾಡಿದನು. ಹಾಗೆಯೇ ಅವರೆಲ್ಲ ಮೆಚ್ಚಿನ ಮಿತ್ರರೂ ನಚ್ಚಿನ ಶಿಷ್ಯರೂ ಅವನ ಸುತ್ತಲೂ ಕುಳಿತು ಜೀವದ ಕುರಿತು ಸಾವಿನ ಕುರಿತು, ಅಜರಾಮರವಾದ ಆತ್ಮತತ್ವದ ಕುರಿತು ಮಾತನಾಡಿದರು. ನೆಳಲುಗಳೆಲ್ಲ ನಿಡಿದಾದವು, ಮೂಡಣಕ್ಕೆ ಅಂಗಲಾಚಿ ಚಾಚಿದವು. ಆಗ ಸೊಕ್ರೆಟಿಸನು ಅವರನ್ನು ಬಿಟ್ಟು ಎದ್ದನು. ಸ್ನಾನವನ್ನು ತೀರಿಸಲು ಹೊರಟುಹೋದನು. ಅವನು ಜಳಕ ಮುಗಿಸಿ ಕೊಂಡು ಮರಳಿದಾಗ ಮುಚ್ಚಂಜೆಯಾಗಲಿತ್ತು. ದಿನದ ಅಂತ್ಯವು ಆದಂತೆಯೇ ಇತ್ತು; ಸೊಕ್ರೆಟಿಸನ ದೇಹಾಂತದ ಕ್ಷಣವೂ ಬಂದಿತು.

ಒಬ್ಬ ಸರಕಾರಿ ಅಧಿಕಾರಿಯು ಒಳಗೆ ಬಂದನು. ತಾನು ಏಕೆ ಬಂದಿರುವನೆಂಬುದನ್ನು ವಿನಯದಿಂದ ಅರುಹಿದನು. ತಾನು ನೆರವೇರಿಸಲಿರುವ ಕರ್ತವ್ಯವನ್ನು ಕ್ಷಮಿಸಬೇಕೆಂತಲೂ ಬೇಡಿಕೊಂಡನು. ತನ್ನ ಮೇಲೆ ಕೋಪಿಸಬೇಡವೆಂದು ಸೊಕ್ರೆಟಿಸನಿಗೆ ಅಂದನು ಮತ್ತು ಮೋರೆ ತಿರುವಿ ದೂರಸರಿದು ಬಿಕ್ಕಿ ಬಿಕ್ಕಿ ಅಳತೊಡಗಿದನು. ಇತ್ತ ಕ್ರಿಟೋ ಸೊಕ್ರೆಟಿಸನಿಗೆ ಸಾಯುವ ತ್ವರೆ ಅವಶ್ಯವಿಲ್ಲವೆಂದು ತಿಳಿಸಿ ಹೇಳಹತ್ತಿದನು. ಸೂರ್ಯಾಸ್ತವು ಇನ್ನೂ ಪೂರ್ತಿ ಆಗಿದ್ದಿಲ್ಲ. ಬದುಕಿಗೆ ಇನ್ನೂ ಅವಕಾಶವಿತ್ತು. ಆದರೂ ಸೊಕ್ರೆಟಿಸನು ಆತನನ್ನು ನೋಡಿ ನಕ್ಕನು. ಆ ಅಳುತ್ತಿರುವ ಅಧಿಕಾರಿಯಿಂದ ವಿಷವನ್ನು ತರಿಸಲು ಕ್ರಿಟೋನಿಗೆ ಆಜ್ಞಾಪಿಸಿದನು. ಸೊಕ್ರೆಟಿಸನು ವಿಷದ ಬಟ್ಟಲವನ್ನು ಎತ್ತಿಕೊಂಡನು. ದೇವತೆಗಳಿಗೆ ಅದರ ಕೆಲವು ಅಂಶ ಬಲಿಯಾಗಿ ಕೊಟ್ಟನು. ಉಳಿದ ವಿಷವನ್ನೆಲ್ಲ ಒಮ್ಮೆಲೇ ಕುಡಿದು ಬಿಟ್ಟನು. ಸುತ್ತಲೂ ನಿಂತ ಅವನ ಗೆಳೆಯರಿಗೆ ಈ ಕೃತ್ಯ ನೋಡಲಾಗಲಿಲ್ಲ. ಅವರಿಗೆ ವ್ಯಥೆಯ ಮರ್ಮವೇದನೆ ತಡೆಯಲಾಗಲಿಲ್ಲ. ಆದರೆ ಸೊಕ್ರೆಟಿಸನು ಅವರನ್ನು ಛೀ ಹಾಕಿದನು.

'ಇದೇನು ಆರಂಭಿಸಿದಿರಿ ?' ಅವನು ಕೇಳಿದನು, 'ಇಂಥ ಅಸಹ್ಯವೇನಾದರೂ ಮಾಡಬಹುದೆಂತಲೇ ಹೆಣ್ಣು ಮಕ್ಕಳನ್ನು ಇಲ್ಲಿಂದ ನಾನು ಕಳುಹಿಕೊಟ್ಟೆನು. ಇಂಥ ತಿಳಿಗೇಡಿತನ ಬೇಡ. ಶುಭ-ಶಕುನಗಳೊಡನೆ ಸಾವು ಬರುವದು ವಿಹಿತವೆಂದು ನಾನು ಕೇಳಿದ್ದೇನೆ. ಸುಮ್ಮನಿರಿ, ತಾಳ್ಮೆಯಿಂದ ಇರಿ.'

ಕುಡಿದ ವಿಷದ ವ್ಯಾಪಾರ ಈವಾಗ ಮುದುಕನ ದೇಹದಲ್ಲಿ ಕಂಡು ಬರತೊಡಗಿತು. ವಿಷದ ವಿಕಾರವು ಕ್ರಮೇಣ ಅವನ ಅಂಗಾಂಗಗಳಲ್ಲಿ ವ್ಯಾಪಿಸಲು ತೊಡಗಿತು. ಅವಯವಗಳು ಒಂದೊಂದಾಗಿ ಶಿಥಿಲವಾಗಹತ್ತಿದ್ದವು. ಸೆಟೆದು ತಣ್ಣಗಾಗಿ ಸಡಿಲು ಬೀಳಹತ್ತಿದವು. ಆಮೇಲೆ ಸೊಕ್ರೆಟಿಸನು ಮೂರ್ಛಿತನಾದನು. ಮೂರ್ಛೆಯು

ಆಕ್ರಮಿಸುತ್ತಿರುವಾಗಲೇ ಅವನು ತಾನು ಕೊಡಲು ಮರೆತುಹೋದ ಒಂದು ಚಿಕ್ಕ ಹರಕೆಯನ್ನು ಸಲ್ಲಿಸಲು ಸೂಚನೆ ಕೊಟ್ಟನು.

ಹೀಗೆ ಆ ಮಹಾತ್ಮನ ಮಹಾ ನಿರ್ಯಾಣವಾಯಿತು. ಅದರ ವರ್ಣನೆಯ ಸಮಾರೋಪವನ್ನು ಪ್ಲೇಟೋ ಹೀಗೆ ಮಾಡಿದ್ದಾನೆ; 'ಇದು ನಮ್ಮ ಮಿತ್ರನ ಕೊನೆಯು. ನಾವು ಅನ್ನಬಹುದಾದರೆ, ಅವನು ನಮ್ಮ ತಿಳುವಳಿಕೆಯ ಮಟ್ಟಿಗೆ, ತನ್ನ ಯುಗದ ಅತ್ಯುತ್ತಮ ಮನುಷ್ಯನಾಗಿದ್ದನು. ಇದಕ್ಕೂ ಮಿಗಿಲಾಗಿ ಆವನು ಅತ್ಯಂತ ಜ್ಞಾನಿಯೂ ನ್ಯಾಯಿಯೂ ಆಗಿದ್ದನು.' ಈ ಮಾತುಗಳು ಮುತ್ತಿನಂಥವು. ಅಷ್ಟೇ ಸರಳ, ಅಷ್ಟೇ ನಿರ್ಮಲ, ಅಷ್ಟೇ ಅಮೂಲ್ಯ. ಸೊಕ್ರೆಟಿಸನ ಸಮಾಧಿಯ ಮೇಲೆ ಕೊರೆಯುವದಾದರೆ ಪ್ಲೇಟೋನ ಈ ವಾಕ್ಯಗಳಿಗೂ ಮೀರಿದ ಮೃತ್ಯುಲೇಖ ಮತ್ತೊಂದಿಲ್ಲ. ಇವು ಎಷ್ಟು ಸಮರ್ಪಕವೋ ಅಷ್ಟೇ ಸಮುನ್ನತವಾಗಿವೆ.

ಸೊಕ್ರೆಟಿಸನ ದೇಹಾಂತವಾಯಿತು, ಮಾತ್ರ ಆದರೆ ಅವನ ಹಗೆಗಳು ಅವನನ್ನು ಶಾಸನಕ್ಕೆ ಗುರಿಮಾಡಿದ ಪಿಶುನರು ಜೀವಂತವಾಗಿ ಸತ್ತರು. ಅವನ ಸಮಾಧಿಯ ಸುತ್ತಲೂ ಅಥೆನ್ಸ ನಗರವೇ ಮರುಗಿತು. ಅವನನ್ನು ನ್ಯಾಯಸಭೆಗೆ ಒಡ್ಡಿ ವ್ಯಾಜ್ಯ ಹೂಡಿ ಕಾಯಿದೆಯಿಂದ ಕೊಲ್ಲಿಸಿದ ಅವನ ಪ್ರತಿವಾದಿಗಳನ್ನೆಲ್ಲ ಸಾರ್ವಜನಿಕರು ಸಾರ್ವತ್ರಿಕವಾಗಿ ಬಹಿಷ್ಕರಿಸಿದರು. ಆ ಬಹಿಷ್ಕಾರದ ಉಗ್ರತೆಯನ್ನು ತಾಳಲಾರದೆ ಅವರಲ್ಲಿ ಅನೇಕರು ಉರಲು ಹಾಕಿಕೊಂಡು ಸತ್ತರು. ತಪ್ಪಿ ತಿದ್ದಿಕೊಳ್ಳುವ ಕೆಟ್ಟು ಬುದ್ಧಿ ಕಲಿಯುವ ಜನತೆ ಜ್ಞಾನಿಯನ್ನು ಕೊಂದು ಹೂಳಿ ಅವನ ಮೂರ್ತಿಯನ್ನು ಕೆತ್ತಿಸಿ ಪವಾಡವನ್ನು ಕಟ್ಟಿ ಕೊಂಡಾಡಿದರು. ಸೊಕ್ರೆಟಿಸನ ಕುರೂಪವಾದರೂ ಪ್ರಿಯವಾದ ಮುಖ ಕಾಣದಾದಮೇಲೆ, ಅಥೆನ್ಸದ ಜನ ಲಿಸಿಪಸ್ ಎಂಬ ಶಿಲ್ಪಿಗೆ ಅಪ್ಪಣೆಕೊಟ್ಟು ಆ ಗುರುವಿನ ಮುಖಾಕೃತಿಯ ಪ್ರತಿಕೃತಿಯನ್ನು ಕಂಚಿನಲ್ಲಿ ಮೂಡಿಸಿದರು.

ಸೊಕ್ರೆಟಿಸನ ಜೀವನ, ಅವನ ಆದರ್ಶಗಳ ಜೀವಂತ-ದೃಷ್ಟಾಂತವಾಗಿತ್ತು. ಪ್ಲೇಟೊ ಬರೆದಿಟ್ಟ ಅವನ ತತ್ವ ದರ್ಶನವು ಮಾನವನ ಬೌದ್ಧಿಕ ಇತಿಹಾಸದಲ್ಲಿ ಒಂದು ಹೊಸ ಶಕವನ್ನೇ ಆರಂಭಿಸಿತು. ರೋಮನ್ ಮಹಾಪಂಡಿತ ಸಿಕರೊ ಅಂದಂತೆ ಸೊಕ್ರೆಟಿಸನು 'ತತ್ವ ಜ್ಞಾನವನ್ನು ಸ್ವರ್ಗದಿಂದ ಭೂಮಿಗೆ ತಂದಿರಿಸಿದನು.' ಜೀವ-ಜಡ, ಆತ್ಮ-ಪರಮಾತ್ಮಗಳ ಘಟಪಟಾದಿ ಬ್ರಹ್ಮಜ್ಞಾನವನ್ನು ಬಿಟ್ಟು ಸೊಕ್ರೆಟಿಸನು ಪಾಶ್ಚಾತ್ಯ ಇತಿಹಾಸದಲ್ಲಿ ನೀತಿ ದರ್ಶನದ ಆದ್ಯ ಆಚಾರ್ಯನಾದನು. ಅವನಿಗೆ ಶುಷ್ಕ ಮತ್ತು ಶೂನ್ಯ ಬ್ರಹ್ಮಜ್ಞಾನದೊಂದಿಗೆ ಕರ್ತವ್ಯವಿದ್ದಿಲ್ಲ.

ಅವನ ಜಿಜ್ಞಾಸೆಯ ಕ್ಷೇತ್ರ, ಅವನ ವಿಚಾರ ವ್ಯಾಪಾರದ ವಿಷಯ-ಮಾನವ, ಮಾನವತೆ ಮತ್ತು ಮಾನವವರ್ತನೆ. ಅವನು ಎತ್ತಿ ಬಳಸುವ ಉದಾಹರಣೆಗಳೂ ದೃಷ್ಟಾಂತಗಳೂ ಜನಸಾಮಾನ್ಯರ ಜೀವನದವಿದ್ದವು. ಇದಕ್ಕಾಗಿ ಅವನನ್ನು ಟೀಕಿಸುವವರು ಕಡಿಮೆ ಇದ್ದಿಲ್ಲ. ವಿಷಕಂಠನಾಗಿ ಸಾವನ್ನು ಗೆಲ್ಲಲು ದುಡುಕುವ ಬುದ್ಧಿಯ ಬಂಟ, ಕುರುಡು ಟೀಕೆಯ ದಶಕಂಠನಿಗೆ ಹೆದರುವನೇ ? ಹತ್ತು ಜನ ಹತ್ತು ವಿಧವಾಗಿ ತೆಗಳಿದರೂ ಅವನು ಸಾಮಾನ್ಯ ಜನವನ್ನು ಒಳಿತಿನ ಮತ್ತು ಸತ್ಯದ ಗುರಿಯತ್ತ-ಒಳಿತು ಸತ್ಯಗಳಲ್ಲಿ ಒಡಮೂಡುವ ಚೆಲುವಿನ ಬಿಂಬದತ್ತ-ಒಯ್ಯಲು ತನ್ನ ಬದುಕಿನಿಂದ ದಾರಿತೋರಿಸಿದನು. ಕೇವಲ ಬುದ್ಧಿಯ ಪ್ರಾಮಾಣ್ಯವನ್ನು ಮನ್ನಿಸಿ ತನ್ನ ಜೀವನವನ್ನು ವಿವೇಕದ ಮತ್ತು ವಿಚಾರದ ಪ್ರಭುತ್ವಕ್ಕೆ ಒಳಪಡಿಸಿ ನಡೆದನು-ಆ ನಿಜದ ನಡೆಯನ್ನು ಸಾವುಕೂಡ ತಡೆಯಲಿಲ್ಲ.

ಅವನ ತಿಳುವಿನ ತಿದ್ದಿದ ಬಾಳಿಗೆ ಸಾಕ್ಷಿಯಾಗಿ ಒಂದೊಂದು ಕತೆಯನ್ನು ಕೊನೆಗೆ ಕೇಳಿರಿ. ಒಮ್ಮೆ ಒಬ್ಬ ಅತಿ ಜಾಣನು ಸೊಕ್ರೆಟಿಸನ ಹೊರಳುವ ಗುಂಡಿನಂಥ ಕಣ್ಣು, ದಪ್ಪ ದಪ್ಪವಾದ ತುಟಿ, ಮೊಂಡವಾದ ಮೂಗು, ದೊಡ್ಡ ತಲೆಯ ಗಿಡ್ಡ ಹಂಡೆಯಂಥ ದೇಹ ಇವನೆಲ್ಲ ನೋಡಿ ತನ್ನ ಮಟ್ಟಿಗೆ ಮಾರ್ಮಿಕವೆಂದು ತರ್ಕ ಮಾಡಿ ಅವನನ್ನು ಲಂಪಟವೃತ್ತಿಯವನೂ ಕಾಮುಕನೂ, ಅತ್ಯಂತ ನಿರ್ಲಜ್ಜ ವಿಕೃತ ಹಾಗೂ ಭ್ರಷ್ಟವರ್ತನೆಯ ವಿಟಪುರುಷನೆಂದೂ ನಿರ್ಣಯಿಸಿ ಪ್ರಕಟವಾಗಿ ಧಿಃಕರಿಸಿದನು. ಆಗ ಸೊಕ್ರೆಟಿಸನ ಪ್ರಶಂಸಕರೆಲ್ಲ ರೊಚ್ಚಿಗೆದ್ದು ಆ ವಿಪರೀತ ಚತುರನನ್ನು ಹಿಡಿದು ಸಾಯ ಹೊಡೆದರು-ಅಲ್ಲ ಹೊಡೆಯತೊಡಗಿದರು. ಆದರೆ ಸೊಕ್ರೆಟಿಸನು ನಡುವೆನುಗ್ಗಿ ಅವರನ್ನು ತಡೆದು ಅಂದನು 'ಆ ಮನುಷ್ಯ ಹೇಳಿದ್ದೆಲ್ಲ ನಿಜವು. ಅವನು ಊಹಿಸಿದಂತೆಯೇ ನಾನು ಆಗುತ್ತಿದ್ದೆನು. ಆದರೆ ನಾನು ವಿವೇಕದ ಫಲದಿಂದ ವಿಚಾರದ ಬಲದಿಂದ ನನ್ನ ಪಶುವೃತ್ತಿಗಳನ್ನೆಲ್ಲ ತಿದ್ದಿ ತಗ್ಗಿಸಿ ವಿಕಾರಗೇಡಿನ ವಿಧಿಯನ್ನು ತಪ್ಪಿಸಿಕೊಂಡಿರುವೆನು !'

ಆದರೆ ಈ ಮಾತಿನಲ್ಲಿ ಸೊಕ್ರೆಟಿಸನು ತಪ್ಪಿದಾನೆ. ಸೊಕ್ರೆಟಿಸ್‌ನ ಬದುಕಿನ ಪಾಪದ ಪ್ರವೃತ್ತಿಗಳನ್ನು ತೊಡೆದುಹಾಕಿ ಅವನ ಹೃದಯವನ್ನು ತೊಳೆದು ತಿದ್ದಿ ಅವನನ್ನು ತೊಳಗುವ ರತ್ನವಾಗಿ ಮಾಡಿದ್ದು ಬರೇ ಬರಟಾದ ತಿಳುವಳಿಕೆಯಲ್ಲ, ತರ್ಕ ವಿಚಾರದ ತಾಲೀಮು ಮಾತ್ರವಲ್ಲ; ಅವನ ಬಾಳಿನ ಖನಿಜವನ್ನು ಅಪರಂಜಿಯಾಗಿ ಮಾರ್ಪಡಿಸಿದ ದಿವ್ಯಪ್ರಭಾವವು-ಅವನು ಜೀವಮಾನವೆಲ್ಲ ಶೋಧ-ಸಾಧನೆಯಿಂದ ಅಳವಡಿಸಿಕೊಂಡ ಭವ್ಯಶಕ್ತಿಯು-ಆತ್ಮದ ಮಹೋನ್ನತಿ, ತಪಸ್ಸಿನಿಂದ ಮೈಗೊಂಡು ಬರುವ ಶೀಲದ ತೇಜಸ್ಸು !

ಗೌರೀಶ ಕಾಯ್ಕಿಣಿ

# ಅರಿಸ್ಟೊಟಲ್

'ಫಿಲಿಪ್‌ನಿಂದ ಅರಿಸ್ಟೊಟಲ್‌ರಿಗೆ ವಂದನೆಗಳು.

ನನಗೊಬ್ಬ ಮಗನು ಹುಟ್ಟಿದಾನೆ. ಇದನ್ನು ನಿಮಗೆ ತಿಳಿಸುತಿದ್ದೇನೆ. ಮಗ ಹುಟ್ಟಿದಕ್ಕಾಗಿ ನಾನು ದೇವತೆಗಳಿಗೆ ಕೃತಜ್ಞನಾಗಿದ್ದೇನೆ; ಆದರೆ ಅದು ಮಗನೊಬ್ಬ ಹುಟ್ಟಿದನೆಂಬ ಮಾತ್ರಕ್ಕೆ ಅಲ್ಲ. ಅವನು ನಿಮ್ಮ ಸಮಯದಲ್ಲಿ ಹುಟ್ಟಿದನೆಂಬುದಕ್ಕೆ. ಏಕೆಂದರೆ, ನನಗೆ ತುಂಬ ಆಶೆಯಿದೆ, ನಿಮ್ಮಿಂದ ಶಿಕ್ಷಣಸಂಸ್ಕಾರ ಪಡೆದು ಆತನು ನಮ್ಮ ಕುಲಶೀಲಕ್ಕೆ ಉಚಿತನಾಗಿ ಬೆಳೆದು ಪಟ್ಟಕ್ಕೆ ಸುಯೋಗ್ಯ ಬಾಧ್ಯಸ್ಥ ನಾಗುವನು.'

–ಹೀಗೆ ಬರೆದಿತ್ತು ಮೆಸಿಡೋನ್‌ದ ಅರಸು ಫಿಲಿಪ್‌ನು ಅರಿಸ್ಟೊಟಲ್‌ನಿಗೆ ಕಳುಹಿಸಿದ ಸಂದೇಶವು. ಸಂದೇಶದಲ್ಲಿ ಅರುಹಿದ ಹುಟ್ಟು ಯಾವ ಶಿಶುವಿನದು ಬಲ್ಲಿರಾ? ಮಹಾಮಹಿಮ ಜಗಜ್ಜೇತ ಸಿಕಂದರ (ಅಲೆಕ್ಝಾಂಡರ)ನೆಂದು ಹೆಸರಾಗಿ "ಜಯಿಸಲಿಕ್ಕೆ ಇನ್ನೂ ಜಗತ್ತುಗಳು ಉಳಿದಿಲ್ಲ" ಎಂದು ಗೋಳಾಡಿ ಅತ್ತ ಯುನಾನದ ಯುದ್ಧದೇವ! ಇಂಥ ವಿಶ್ವವಿಜಯಿ ವೀರನ ತಂದೆಯು ಮಗನ ವಿದ್ಯಾವಿನಯಗಳ ವಿಚಾರವಾಗಿ ತತ್ವವೇತ್ತ ಅರಿಸ್ಟೊಟಲ್‌ನಿಗೆ ಅರಿಕೆ ಮಾಡಿಕೊಂಡದು ಆ ಮಹಾಮೇಧಾವಿಗೆ ಸಮರ್ಪಕ ಮನ್ನಣೆಯೇ ಸರಿ. ಅಂಥ ಶಿಷ್ಯನಿಗೆ ಅಂಥ ಗುರುವೇ ದೊರೆತರೆ ಉಭಯರೂ ಧನ್ಯರು. ಗುರುವಿನ ಭಾಗ್ಯವೇ ಉತ್ತಮ ಶಿಷ್ಯನ ರೂಪದಲ್ಲಿ ಬರುತ್ತದೆ. ಅಲ್ಲಿ ಶಿಷ್ಯನ ಭಾಗ್ಯವೂ ಉತ್ತಮ ಗುರುವಿನ ರೂಪದಲ್ಲಿ ಬಂದು ಕೂಡಿತು.

ಅರಿಸ್ಟೊಟಲ್ ಕುರೂಪಿ. ಆದರೆ ಅವನ ರೂಪದ ಕುಂದುಗಳನ್ನೆಲ್ಲ ಮುಚ್ಚಿ ಮರೆಯಿಸಿ ಮಿರುಗನ್ನೇ ಮೆರೆಯಿಸುವಷ್ಟು ಉಜ್ಜ್ವಲವಾದ ಪ್ರತಿಭೆಯು ಸೌಂದರ್ಯ ಅವನದು. ಪ್ಲೇಟೊ ಅವನನ್ನು ಸತ್ಯದ ತತ್ವವೇತ್ತನೆಂದು ಕರೆದನು. ರೋಮನ್ ಪಂಡಿತ ಸಿಕೆರೋನು ಅವನನ್ನು ವಾಗ್ಪಟರಲ್ಲಿ ಪಟು, ಸರ್ವಜ್ಞ, ಪ್ರತ್ಯುತ್ಪನ್ನಮತಿ, ತೀಕ್ಷ್ಣ ಮತ್ತು ಸೂಕ್ಷ್ಮ ಶೋಧಕ ಹಾಗೂ ಸಹಸ್ರಬುದ್ಧಿಯ ಮೇಧಾವಿ ಎಂದು ಬಿರುದುಗಳನ್ನು ಕೊಟ್ಟು ಕೊಂಡಾಡಿದನು. ಆದರೆ ಇವೆಲ್ಲ ಬಿರುದುಗಳು ಅವನ ವ್ಯಕ್ತಿತ್ವವೆಂಬ ಸತ್ಯದ ಮೈಮುಗ್ಗಲುಗಳು; ಆದರೆ ಒಂದು ಮಾತ್ರ ಆತನ ಪ್ರತಿಭೆಯನ್ನು ಆಳದಲ್ಲಿ ಹೊಕ್ಕು ಬಣ್ಣಿಸುತ್ತದೆ. ಆ ಬಿರುದು

ಅವನು ಸರ್ವಜ್ಞನೆಂಬುವದು. ಅಂದಿನ ಪ್ರಪಂಚಕ್ಕೆ ಅರಿಸ್ಟೊಟಲ್‌ನು ಜ್ಞಾನದ ವಿಶ್ವಕೋಶವೇ ಆಗಿದ್ದನು. ಮುಂದೆ ಅನೇಕ ಶತಮಾನಗಳ ತನಕವೂ ಯುರೋಪವು ಆತನನ್ನೇ ಮಹದ್ಗುರುವೆಂದೂ ಆಧುನಿಕ ಜ್ಞಾನದ ಪ್ರಪಿತಾಮಹನೆಂದೂ ಮರು ಮಾತಿಲ್ಲದೆ ಸ್ವೀಕರಿಸಿತು, ಶಿರಸಾವಹಿಸಿತು. ಪಾಶ್ಚಾತ್ಯ ಪ್ರಪಂಚದ ವಿಚಾರ ಮತ್ತು ಜೀವನಗಳ ಮೇಲೆ ಬೇರೆ ಯಾವ ತತ್ವವೇತ್ತನ ಪ್ರಭಾವವೂ ಇವನಷ್ಟು ವ್ಯಾಪಕವೂ ಶಾಶ್ವತವೂ ಆಗಿ ಮೂಡಿ ಉಳಿದಿಲ್ಲ. ಇಂದಿನ ಪಾಶ್ಚಾತ್ಯ ಪ್ರತಿಭೆಯು ಬೆಳಸಿ ಕೊಂಡ ಜ್ಞಾನ ವಿಜ್ಞಾನಗಳ ವಿಶಾಲವೃಕ್ಷದ ಉನ್ನತ ಮತ್ತು ಸಂಪನ್ನವಾದ ವಿಕಾಸಕ್ಕೆ ಅರಿಸ್ಟೊಟಲ್‌ನ ಮೇಧಾಶಕ್ತಿಯೇ ಆದಿಮೂಲವೆಂದರೆ ಅತಿಶಯೋಕ್ತಿ ಆಗಲಾರದು. ಪಾಶ್ಚಾತ್ಯ ಪ್ರಪಂಚದ ಮೇಲೆಯೇ ತನ್ನ ಮುದ್ರೆಯೊತ್ತಿದ ಜ್ಞಾನಿಗಳ ರಾಜರ್ಷಿಯು ಇವನು !

ಅದು ಹೇಗೆ ? 'ಧೀಮಂತರಿಗೆ ಒಗ್ಗದ ವಿಷಯುವೆಂಬುವದೇ ಇಲ್ಲ !' ಎಂದು ಕಣ್ವ ಋಷಿಯು ಕುರಿತು ಆತನ ಶಿಷ್ಯನ ಬಾಯಿಯಲ್ಲಿ ಕಾಲಿದಾಸನು ಒಂದು ತುಂಬ ಹುರುಳಿನ ಮಾತನ್ನುಹಾಕಿದ್ದಾನೆ.ಕಣ್ವನು ನಿಜವಾಗಿ ಹೇಗಿದ್ದನೋ ! ವನವಾಸಿಯಾಗಿಯೂ ತಾನು ಲೋಕವ್ಯವಹಾರವನ್ನು ಉಪದೇಶಿಸಬಲ್ಲೆನೆಂದು ಹೇಳಿಕೊಂಡುದಕ್ಕೆ ಶಿಷ್ಯನು ಕೊಟ್ಟ ಪ್ರಶಸ್ತಿ ಅದು ! ಆದರೆ ಸರ್ವತೋಮುಖವಾದ ಸರ್ವಗಾಮಿಯಾದ ಗತಿಯೇ ಬುದ್ಧಿಯ ಪ್ರತಿಭೆಯ ಮುಖ್ಯ ಲಕ್ಷಣವಾದರೆ,ಅಂತಹ ಪ್ರತಿಭೆಯ ಮುಖ್ಯ ನಿದರ್ಶನವೆಂದು ಅರಿಸ್ಟೊಟಲ್‌ನನ್ನು ತೋರಿಸಬಹುದು. ಬುದ್ಧಿಯ ಚಟುವಟಿಕೆಯ ಪ್ರತಿಯೊಂದು ಮಹತ್ವದ ಕ್ಷೇತ್ರವನ್ನೂ ಈ ಮಹಾಮೇಧಾವಿಯು ತನ್ನ ಪ್ರಜ್ಞೆಯ ಪ್ರಾಂತವಾಗಿ ಸ್ವೀಕರಿಸಿದನು. ಅವನ 'ಪೊಲಿಟಿಕ್ಸ್' (ಪೌರನೀತಿ) ಗ್ರಂಥವು ಆಧುನಿಕ ರಾಜಕೀಯ ತತ್ವವಿಚಾರಕ್ಕೆಲ್ಲ ತಳಹದಿಯನ್ನೇ ಹಾಕಿತು; ಅವನ 'ಪೋಯಿಟಿಕ್ಸ್' (ಕಾವ್ಯಶಾಸ್ತ್ರ) ಗ್ರಂಥವು ದುರಂತ (ಅವಿದ್ಧ) ನಾಟಕಗಳ ನಾಟ್ಯಮಯ 'ಐಕ್ಯತ್ರಯ'ಗಳ ಮೂಲ ಕಲ್ಪನೆಯನ್ನೇ ಪ್ರತಿಪಾದಿಸಿತು. (ಐಕ್ಯತ್ರಯವೆಂದರೆ, ನಾಟಕದ ಸ್ಥಲ, ಕಾಲ ಮತ್ತು ಕೃತ್ಯ. ಈ ಮೂರು ಅಂಗಗಳಲ್ಲಿ ಪ್ರತ್ಯೇಕವಾಗಿ ಸಾಧಿಸಿರಬೇಕಾದ ಐಕ್ಯ ಅಥವಾ ಏಕರೂಪತೆ. ಇದರ ಹೆಚ್ಚಿನ ವಿವರಣೆ ಇಲ್ಲಿ ಅಪ್ರಸ್ತುತ); ಅವನ 'ಆತ್ಮವನ್ನು ಕುರಿತು' ಎಂಬ ಪ್ರಬಂಧವು ಇಂದು ನಾವು ತಿಳಿದ ಮನೋವಿಜ್ಞಾನವೆಂಬ ಶಾಸ್ತ್ರದ ನೆಲಗಟ್ಟು. ಪ್ರಾಣಿಶಾಸ್ತ್ರಕ್ಕೆ ಅವನೇ ಮೊದಲಿಗನು. ಇಂದಿಗೆ ಯಾವ ಸಂದೇಹವಿಲ್ಲದೇ ಸಿರ್ಧಾರವಾಗಿ ಒಪ್ಪಿಕೊಳ್ಳುವ ಅನೇಕ ಸಿದ್ಧಾಂತಗಳಿಗೆ ಅವನೇ ಜನಕನು. ಇನ್ನು ಇಷ್ಟೆಲ್ಲ ಅನೇಕ ಮುಖವಾದ ಅಧಿಕಾರವನ್ನು ಜ್ಞಾನಪ್ರಪಂಚದಲ್ಲಿ ಆತನು ಪಡೆದದ್ದು ಯಾವಾಗ ? ಇಳಿವಯಸ್ಸಿಗೆ ಬರುವಾಗಲೇ ? ಛೇ. ಫಿಲಿಪ್ ಅರಸನು ತನ್ನ ಮಗನ ಭಾಗ್ಯವನ್ನು

ಕೊಂಡಾಡಿ ಪತ್ರವನ್ನು ಬರೆದಾಗ ಅರಿಸ್ಟೊಟಲ್‌ನು ೩೦ ವರ್ಷದ ಎಲ್ಲೆಯನ್ನು ದಾಟಿದ್ದಿಲ್ಲ.

ಕ್ರಿ. ಪೂ. ೩೮೪ರಲ್ಲಿ ಎಗಿಯನ್ ಸಮುದ್ರದ ದಂಡೆಗೆ ಸ್ಟಾಗಿರಾ ಎಂಬಲ್ಲಿ ಅರಿಸ್ಟೊಟಲ್‌ನು ಹುಟ್ಟಿದನು. ಇದರಿಂದ ಅವನಿಗೆ 'ಸ್ಟಾಗಿರೈಟ್' ಎಂಬ ಅಡ್ಡ ಹೆಸರೂ ವಾಡಿಕೆಯಲ್ಲಿ ಬಂದಿದೆ. ನಿಕೊಮ್ಯಾಕಸ್ ಎಂಬ ಒಬ್ಬ ವಿದ್ವಾನ್ ವೈದ್ಯನು ಇವನ ತಂದೆಯು. ಈ ವೈದ್ಯನು ಕೆಲಕಾಲ ಮೆಸಿಡೊನ್‌ದ ಅರಸು ಫಿಲಿಪ್‌ನ ತಂದೆಗೆ ರಾಜವೈದ್ಯನಾಗಿ ನೇಮಿಸಲ್ಪಟ್ಟಿದ್ದನು. ಮೆಸಿಡೊನ್‌ದ ಆಸ್ಥಾನದೊಡನೆ ತಂದೆಗೆ ಇರುವ ಸಂಪರ್ಕವು ಮುಂದೆ ಅರಿಸ್ಟೊಟಲ್‌ನ ಜೀವನ ಮತ್ತು ಚರಿತ್ರಗಳ ಮೇಲೆ ಮಿಗಿಲಾದ ಪ್ರಭಾವವನ್ನು ಬೀರಿತು. ಆಗ ಪ್ಲೇಟೊ ಒಂದು ವಿದ್ಯಾ ಸಂಸ್ಥೆಯನ್ನು ನಡೆಯಿಸುತ್ತಿದ್ದನು. ಅವನಲ್ಲಿ ಅರಿಸ್ಟೊಟಲ್‌ನು ಅಭ್ಯಾಸವನ್ನು ಆರಂಭಿಸಿದನು. ಅರಿಸ್ಟೊಟಲ್‌ನು ತನ್ನ ಸಂಸ್ಥೆಯ ಮಸ್ತಕವೆಂದು ಪ್ಲೇಟೋ ಅನ್ನುತ್ತಿದ್ದನು. ಪ್ಲೇಟೋನ ಮರಣದ ನಂತರ ಅವನ ಸೋದರಳಿಯನು ಆ ಸಂಸ್ಥೆಗೆ ಗುರುವಾದನು. ಆಗ ಅರಿಸ್ಟೊಟಲ್‌ನು ಅಲ್ಲಿಂದ ಹೊರಬಿದ್ದು ಅಟಾರ್ನಿಯಸ್ ಎಂಬಲ್ಲಿ ಹೋಗಿ ತನ್ನ ಗುರುಬಂಧು (ಪ್ಲೇಟೊನ ಇನ್ನೊಬ್ಬ ಹಳೆಯ ಶಿಷ್ಯನಾದ) ಹರ್ಮಿಯಾಸ್ ಎಂಬುವನ ಆಶ್ರಯವನ್ನು ಸೇರಿದನು. ಸಂಸ್ಥೆಯನ್ನು ಬಿಟ್ಟುಹೋಗುವ ಮುನ್ನ ಗತಿಸಿಹೋದ ತನ್ನ ಗುರುದೇವನನ್ನು ಗೌರವಿಸಿ ಅವನು ಒಂದು ಉದಾತ್ತವಾದ 'ವಿಲಾಪಿಕೆ' ಯನ್ನು ರಚಿಸಿದನು. ಮುಂದೆ ಹರ್ಮಿಯಾಸ್‌ನ ಆಶ್ರಯದಲ್ಲಿ ವಾಸಿಸುವಾಗ ಅವನ ಸೋದರಸೊಸೆ ಯನ್ನು–ಕೆಲವು ಉಲ್ಲೇಖಗಳಲ್ಲಿ ಸಹೋದರಿಯೆಂದೇ ಬಂದಿದೆ–ಅರಿಸ್ಟೊಟಲ್‌ನು ಮದುವೆಯಾದನು. ಅವನಿಗೆ ಆಕೆಯಿಂದ ಒಬ್ಬ ಮಗನು ಹುಟ್ಟಿದನು. ಮಗನಿಗೆ ಅಜ್ಜನ ಹೆಸರು ಇಡಲಾಯಿತು. ಹರ್ಮಿಯಾಸ್‌ನಿಗೂ ಅರಿಸ್ಟೊಟಲ್‌ನಿಗೂ ಒಳ್ಳೇ ಅನ್ಯೋನ್ಯವಿತ್ತು. ಹರ್ಮಿಯಾಸ್‌ನಿಗೆ ದುರ್ಮರಣವು ಒದಗಿತು. ಪರ್ಶಿಯನ್ ಅಧಿಕಾರಿಗಳು ಅವನನ್ನು ಸೆರೆಹಿಡಿದು ಸಿಲುಬೆಗೇರಿಸಿ ಕೊಂದರು. ತನ್ನ ಸನ್ಮಿತ್ರನ ಸ್ನೇಹದ ಸವಿನೆನಪಿಗಾಗಿ ಅರಿಸ್ಟೊಟಲ್‌ನು ಒಂದು ಸುಂದರ ಸ್ತುತಿಗೀತವನ್ನು ರಚಿಸಿದನು.

ಮಿಟಲೀನ್ ಎಂಬಲ್ಲಿ ಅವನು ಜಲಚರ ಜೀವಶಾಸ್ತ್ರವನ್ನು ಅಭ್ಯಾಸಿಸುತ್ತಿದ್ದನು. ಆಗ ಫಿಲಿಪ್ ಅರಸನಿಂದ ಕರೆಬಂದಿತು. ರಾಜಪುತ್ರ ಸಿಕಂದರನು ಕಲಿಯುವ ವಯಸ್ಸಿಗೆ ಬೆಳೆದಿದ್ದನು. ಅವನ ಜನ್ಮದಿನಕ್ಕೇ ಗೊತ್ತುಪಡಿಸಿದ ಶಿಕ್ಷಣದ ಹೊಣೆ ಯನ್ನು ಹೊರಲು ಅರಸನು ಕರೆದಿದ್ದನು. ವಿಶ್ವವಿಜ್ಞಾನಿ ಮತ್ತು ವಿಶ್ವವಿಜಯೀಯ

ಈ ಗುರು–ಶಿಷ್ಯ ಭಾವದ ಸಂಯೋಗವನ್ನು ಒಬ್ಬ ಲೇಖಕನು ಹೀಗೆ ಬಣ್ಣಿಸಿದ್ದಾನೆ. 'ಒಬ್ಬನಿಗೆ ಪ್ರಪಂಚವನ್ನು ಗೆದ್ದು ಒಡೆಯನಾಗಿ ಆಳುವ ಸಂಕಲ್ಪ ಮತ್ತು ಸಾಮರ್ಥ್ಯವಿತ್ತು; ಇನ್ನೊಬ್ಬನು ಮಾನವೀ ಮನಸ್ಸಿಗಾಗಿ ಹೊಸದೊಂದು ಪ್ರಪಂಚವನ್ನೇ ಹುಡುಕಿ ಗೆದ್ದು ಸೂರೆಗೆಯ್ದನು!' ಯೋಗೀಶ್ವರನನ್ನು ಧನುರ್ಧರನು ಕೂಡಿದಂತೆ ಈ ಅರಿಸ್ಟೋಟಲ್–ಅಲೆಕ್ಝಾಂಡರ ಕೃಷ್ಣಾರ್ಜುನ ಯೋಗ ಕೂಡಿಬಂದಿತು. !

ಈ ಗುರುಭಾವವಾದರೂ ಎಂತಹದು? ಮೆಸಿಡೋನಿಯಾದ ಸಾಮ್ರಾಜ್ಯದ ಉತ್ತರಾಧಿಕಾರಿಗೆ ಕೇವಲ 'ಖಾಸಗಿ' ಶಿಕ್ಷಕನಾಗಿ ಅರಿಸ್ಟೋಟಲ್ ನೇಮಿಸಲ್ಪಟ್ಟವನಲ್ಲ. ಗ್ರೀಕರ ರಾಜಗುರುತ್ವದ ಕಲ್ಪನೆ ಬೇರೆ ಬಗೆಯಾಗಿತ್ತು. ಅಷ್ಟೊಂದು ಬೇರೆ ಬಗೆಯೂ ಅಲ್ಲ ಮತ್ತೆ! ಭಾರತದಲ್ಲಿ ದ್ರೋಣಾಚಾರ್ಯನು ಅರಸುಮಕ್ಕಳಿಗೆ ಕಲಿಸಿದ ರೀತಿಯನ್ನೇ ಈ ಬಗೆಯು ಬಹುಮಟ್ಟಿಗೆ ಹೋಲುತಿತ್ತು. ಮೀರಭಾ ಎಂಬಲ್ಲಿ ಅರಿಸ್ಟೋಟಲ್‌ನು ಒಂದು ಸ್ವಂತ ವಿದ್ಯಾಪೀಠವನ್ನು ಸ್ಥಾಪಿಸುವಂತೆ ಏರ್ಪಾಟಾಯಿತು. ಅಲ್ಲಿ 'ಅಪ್ಸರಾ ಉಪವನ' ವೆಂಬ ಹೆಸರಿನ ಆಶ್ರಮದಲ್ಲಿ ಅಲೆಕ್ಝಾಂಡರನೂ ಇತರ ಸರದಾರರ ಮಕ್ಕಳೂ ಅರಿಸ್ಟೋಟಲ್‌ನ ಆದೇಶ–ಉಪದೇಶಗಳ ಶ್ರವಣ–ಮನನವನ್ನು ಆರಂಭಿಸಿದರು. ಆ ಶಿಷ್ಯಸಮೂಹವು ಗುರುವಿನ ದೊಡ್ಡ ಕಲ್ಲಿನ ಗದ್ದುಗೆಯ ಸುತ್ತಲೂ ಕುಳಿತು ಕೇಳುತ್ತಿದ್ದರು; ಇಲ್ಲವೇ ಆ ವಿದ್ಯೆಯ ದೇಗುಲದ ಸುತ್ತಲಿನ ಮರಗಳ ನೆಳಲಿನಲ್ಲಿ ಗುರುವಿನ ಸಂಗಡ ತಿರುಗಾಡುತ್ತಿದ್ದರು.

ಎಲ್ಲ ಶಿಷ್ಯರಿಗೂ ಗುರುವಿನ ಕುರಿತು ಪರಮಾದರವಿತ್ತು; ಆದರವು ಆರಾಧನೆಯ ತೂಕಕ್ಕೆ ನಿಲ್ಲುವಂತಿತ್ತು. ಆದರೆ ಅಲೆಕ್ಝಾಂಡರನು ಅರಿಸ್ಟೋಟಲ್‌ನ ವಿದ್ಯೆಬುದ್ಧಿಗಳ ವಿಷಯದ ತನ್ನ ಪೂಜ್ಯಭಾವವನ್ನು ಕೇವಲ ಅಂಧಭಕ್ತಿಯ ದಾಸವೃತ್ತಿಗೆ ಇಳಿಯಗೊಡಲಿಲ್ಲ. ಒಂದು ದಿನ, ಅರಿಸ್ಟೋಟಲ್‌ನು ಒಬ್ಬ ಸರದಾರ ವರ್ಗದಲ್ಲಿಯೂ ಒಳ್ಳೆ ಕುಲದ ಒಬ್ಬ ಹುಡುಗನಿಗೆ ಪ್ರಶ್ನೆ ಹಾಕಿದನು: 'ಮುಂದೆ ಯಥಾಕ್ರಮವಾಗಿ ತಂದೆಯ ಪಟ್ಟಕ್ಕೆ ಬರುವಿ. ಆಗ ನೀನು ಏನು ಮಾಡುವಿ?' ಎಂದ. ಆಗಲೂ ಈ ಗುರುವಿನ ಉಪದೇಶವನ್ನೇ ಪಡೆದು ನಡೆಯುವೆನೆಂದು ಆ ಹುಡುಗನು ಒಳ್ಳೇ ವಿನಯಸಂಪನ್ನನಾಗಿ ಉತ್ತರವಿತ್ತನು. ಇನ್ನೊಬ್ಬ ರಾಜಪುತ್ರನಿಗೂ ಇದೇ ಪ್ರಶ್ನೆ ಹಾಕಲಾಗಿ ಅವನೂ ಹಾಗೆಯೇ, ಎಂಥ ಬಿಕ್ಕಟ್ಟಿನಲ್ಲಿಯೂ ಗುರುವಿಗೇ ಶರಣು ಬರುವೆನೆಂದು ಉತ್ತರವಿತ್ತನು. ಕೊನೆಗೆ ಅದೇ ಪ್ರಶ್ನೆಯನ್ನು ಅಲೆಕ್ಝಾಂಡರನಿಗೂ ಗುರುವು ಕೇಳಿದನು. ಆ ಧೀರ ಯುವಕನು ತಡವಿಲ್ಲದೇ ತಡವರಿಸದೇ ಉತ್ತರವಿತ್ತನು. 'ನಾನು ಹೇಳಲಾರೆ; ನಾಳಿನ ದಿನ ಏನನ್ನು ತರುವದೆಂಬುದನ್ನು

ಯಾವನೂ ಹೇಳಲಾರನು. ಆ ಸಮಯ ಬಂದಾಗ ಇದೇ ಪ್ರಶ್ನೆಯನ್ನು ಕೇಳಿರಿ. ಆಗ ತಮಗೆ ಆಗಿನ ಪರಿಸ್ಥಿತಿಗೆ ಅನುಗುಣವಾಗಿ ಉತ್ತರವೀಯುವೆನು.' ಹೇಗಿದೆ ಈ ಉತ್ತರದೊಳಗಿನ ದರ್ಪ ಮತ್ತು ಔದ್ಧತ್ಯ ?

ತನ್ನ ಮಗನ ಗುರುವಿಗೆ ಫಿಲಿಫ್ ಅರಸನು ಎಲ್ಲ ಗೌರವವನ್ನೂ ಸಲ್ಲಿಸುತ್ತಿದ್ದನು. ಹಿಂದೊಮ್ಮೆ ತನ್ನ ದಂಡಯಾತ್ರೆಗಳಲ್ಲಿ ಆ ದಬ್ಬಾಳಿಕೆಯ ಭೂಪನು ಅರಿಸ್ಟೊಟಲ್‌ನ ಊರಾದ ಸ್ಟಾಗಿರಾವನ್ನು ಉಧ್ವಸ್ತಮಾಡಿದ್ದನು. ಆದರೆ ಈಗ ಅರಿಸ್ಟೊಟಲ್‌ನ ಕುರಿತು ತನ್ನ ಮೆಚ್ಚಿಗೆ-ಮನ್ನಣೆಯನ್ನು ತೋರಿಸಲು ಅವನು ಆ ಪಟ್ಟಣವನ್ನು ಮತ್ತೆ ಕಟ್ಟಿಸಿದನು, ಅಲ್ಲಿಂದ ಕಂಬಿ ಕಿತ್ತು ಕಂಗೆಟ್ಟು ಓಡಿ ಹೋದ ಪಟ್ಟಣಿಗರನ್ನೆಲ್ಲ ಮತ್ತೆ ಕರೆಯಿಸಿ ನಿಲ್ಲಿಸಿದನು. ಅವರಲ್ಲಿ ಕೆಲವರು ಬೇರೆ ಊರುಗಳಲ್ಲಿ ಗುಲಾಮರಾಗಿ ದುಡಿಯುತ್ತಿದ್ದರು; ಎಲ್ಲರೂ ದುರ್ದೆಶೆಯಲ್ಲಿ ಕೊಳೆಯುತ್ತಿದ್ದರು. ಅಂದಿನ ಕಾಲದ ಗ್ರೀಸ ದೇಶದಲ್ಲಿ ಒಂದು ಪಟ್ಟಣವೆಂದರೆ ಇಂದಿನ ಒಂದು ಪುಟ್ಟ ಊರಿನಷ್ಟೇ ದೊಡ್ಡದಿತ್ತು. ಆದಾಗ್ಯೂ ಫಿಲಿಪ್‌ನ ಈ ಪುನರ್ನಗರ ನಿರ್ಮಾಣದ ಮತ್ತು ನಾಗರಿಕ ಪುನರ್ನಿವೇಶನದ ಈ ಕಾರ್ಯವು ಅರಸುತನದ ಔದಾರ್ಯ ಐಶ್ವರ್ಯಗಳಿಗೆ ಒಳ್ಳೇ ಒಪ್ಪುವ ಕೃತ್ಯವಾಗಿದೆ.

ಅರಿಸ್ಟೊಟಲ್‌ನು ಮಾಡಿದ ಒಂದು ಮಹಾತ್ಕಾರ್ಯವೆಂದರೆ ತರುಣ ಅಲೆಕ್ಝಾಂಡರನ ಎದೆಯಲ್ಲಿ ಮಹಾಕವಿ ಹೋಮರನ ಕುರಿತು ಪ್ರೀತಿಯನ್ನು ಪ್ರೇರಿಸಿದುದು. ಈ ಪ್ರೀತಿಯು ಆ ಮಹಾ ವೀರನ ಬಾಳಿನ ಹಿಗ್ಗಿನ ಬುಗ್ಗೆಯಾಗಿ ಜೀವಮಾನವೆಲ್ಲ ತಾಳಿತು. ಇತರ ರೀತಿಯಲ್ಲಿಯೂ ಈ ಗುರುವಿನ ಜ್ಞಾನೋಪದೇಶವು ಆ ಶಿಷ್ಯನ ಮಹಾಚರಿತ್ರದಲ್ಲಿ ಶಾಶ್ವತ ಸಂಸ್ಕಾರವಾಗಿ ಸತ್ವದ ಸಂಪತ್ತಾಗಿ ನಿಂತಿತು. ಅಲೆಕ್ಝಾಂಡರನ ಈ ವ್ಯಕ್ತಿವಿಕಾಸದ ಭರವನ್ನು ಕಂಡು ತಂದೆ ಫಿಲಿಪ್‌ನು ಹರ್ಷ ನಿರ್ಭರನಾಗಿ ಅಂದನು. 'ನಿಜವಾಗಿಯೂ, ಅರಿಸ್ಟೊಟಲ್‌ನ ಮೇಲೆ ನಾವು ಮಳೆಗರೆದ ಮನ್ನಣೆಯು ವ್ಯರ್ಥವಾಗಲಿಲ್ಲ. ನಿನಗೆ ಇಂಥ ಕರ್ತವ್ಯಜ್ಞಾನವನ್ನೂ ರಾಜಧರ್ಮದ ಶಿಕ್ಷಣವನ್ನೂ ಕೊಟ್ಟ ವ್ಯಕ್ತಿಯು ಶ್ರೇಷ್ಠತಮ ಪುರಸ್ಕಾರಕ್ಕೆ ಯಾವಾಗಲೂ ಯೋಗ್ಯನೇ ಸರಿ.'

ವಿದ್ಯಾರ್ಥಿದಶೆಯನ್ನು ಕಳೆದ ಮೇಲೂ ಅಲೆಕ್ಝಾಂಡರನಿಗೆ ತನ್ನ ಗುರುವಿನಲ್ಲಿ ಭಕ್ತಿಯೂ ಪ್ರಶಂಸಾಬುದ್ಧಿಯೂ ಬಹುಕಾಲ ಉಳಿಯಿತು. 'ನನ್ನ ಬದುಕಿಗಾಗಿ ನಾನು ತಂದೆಗೆ ಋಣಿಯಾಗಿದ್ದೇನೆ. ಸುಯೋಗ್ಯವಾಗಿ ಬದುಕುವದು ಹೇಗೆಂಬ ಪರಿಜ್ಞಾನಕ್ಕಾಗಿ ನಾನು ಅರಿಸ್ಟೊಟಲ್‌ನಿಗೆ ಋಣಿಯಾಗಿದ್ದೇನೆ !'–ಎಂದು ಆ

ಮಹಾಪುರುಷನು ಧನ್ಯೋದ್ಗಾರವನ್ನು ತೆಗೆದಿದ್ದಾನೆ! ಗುರುಸೇವೆಯಲ್ಲಿ ತನ್ನ ಶಿಷ್ಯತ್ವವು ಮುಗಿದ ಮೇಲೂ—ಅವನು ತೋರಿಸಿದ ತತ್ಪರತೆಯ ಉದಾಹರಣೆಗಳು ಅನೇಕವಿವೆ. ಅರಿಸ್ಟೊಟಲ್‌ನು ಜೀವಶಾಸ್ತ್ರದ ಸಂಶೋಧನಗಳಲ್ಲಿ ತೊಡಗಿದ್ದಾಗ ಈ ಶಿಷ್ಯರಾಜನು ಅವನ ಊಳಿಗಕ್ಕೆ ಒಂದು ಸಾವಿರ ಆಳುಗಳನ್ನು ನೇಮಿಸಿದನು. ಪಶು—ಪಕ್ಷಿ—ಮೀನ—ಮಕ್ಷಿಕೆಗಳ ವರ್ತನೆ—ವಿಶೇಷಗಳನ್ನು ನಿರೀಕ್ಷಿಸಿ ನಿವೇದಿಸುವದು ಅವರ ಕೆಲಸವಾಗಿತ್ತು. ತನ್ನ ಗುರುವಿಗೆ ದ್ರವ್ಯದಾನದಲ್ಲಿಯೂ ಅವನು ಅಪಾರ ಔದಾರ್ಯವನ್ನು ತೋರಿಸಿದನು. ಅನೇಕ ಅಮೂಲ್ಯ ಪುಸ್ತಕಗಳನ್ನು—ಕೈಬರಹದ ಪೊತ್ತಿಗೆಗಳನ್ನು ಅಲೆಕ್ಝಾಂಡರನು ಅರಿಸ್ಟೊಟಲ್‌ನಿಗೆ ಒದಗಿಸಿಕೊಟ್ಟನು. ಅವನ ಅಂಥ ನೆರವಿಲ್ಲದೆ ಅವೆಲ್ಲ ಸಾಹಿತ್ಯ—ಸಲಕರಣೆಗಳನ್ನು ತಾನೇ ಕಲೆಹಾಕುವ ಬಲ ಗುರುವಿನಲ್ಲಿ ಇದ್ದಿಲ್ಲ.

ಅಲೆಕ್ಝಾಂಡರನು ಏಶಿಯಾದ ವಿಜಯಯಾತ್ರೆಗೆ ಹೊರಟನು. ಆಗ ಅರಿಸ್ಟೊಟಲ್‌ನು ಅಥೇನ್ಸ್ ನಗರಕ್ಕೆ ಮರಳಿದನು. ಅಥೆನ್ಸು ಆಗ ಗ್ರೀಸದ ಮಾತ್ರವಲ್ಲ, ಅಖಿಲ ಪ್ರಪಂಚದ ಸಾಂಸ್ಕೃತಿಕ ಕೇಂದ್ರವಾಗಿತ್ತು. ಅಲ್ಲಿ ೫೦ ವರ್ಷ ವಯಸ್ಸಿನ ಆ ಜ್ಞಾನಿಯು ವಿದ್ಯಾಸಂಸ್ಥೆಯನ್ನು ತೆರೆದನು. ಅಪೊಲೊ ಲಿಕ್ಯೂಸ್ ಎಂಬ ದೇವತೆಯ ಗುಡಿಯ ಹತ್ತಿರವೇ ಇದ್ದುದರಿಂದ ಈ ಸಂಸ್ಥೆಗೆ ಲಿಕ್ಯೂಮ್ ಎಂಬ ಹೆಸರು ಬಂತು. ಅಸಂಖ್ಯ ವಿದ್ಯಾರ್ಥಿಗಳು ಲಿಕ್ಯೂಮಕ್ಕೆ ನುಗ್ಗಿದರು. ಇದಾಗಲೇ ಅಂದಿನ ಯುಗಕ್ಕೆ ಅರಿಸ್ಟೊಟಲ್‌ನೇ ತತ್ವವೇತ್ತರ ಅಗ್ರೇಸರನೆಂದು ಸರ್ವಸಮ್ಮತವಾಗಿತ್ತು. 'ಲಿಕ್ಯೂಮ್' ಶಬ್ದ ನಮ್ಮಲ್ಲಿ 'ಆಶ್ರಮ' ಇಲ್ಲವೇ 'ಗುರುಕುಲ' ಶಬ್ದದಂತೆ ಜ್ಞಾನದಾನದ ಪವಿತ್ರ ಕೇಂದ್ರವೆಂಬ ಅರ್ಥದಲ್ಲಿ ಪ್ರಯೋಗದಲ್ಲಿ ಇದೆ. ಆದರೆ ಅದರ ಮೂಲದಲ್ಲಿಯ ಲಿಕ್ಯೂಸ್ ಅಪೊಲೊವೆಂಬ ದೇವತಾಮೂರ್ತಿಯ ಸಂಪರ್ಕವನ್ನು ಮೂರ್ತಿಪೂಜಕರಲ್ಲದ ಪಾಶ್ಚಾತ್ಯರಿಗೆ ಗೊತ್ತಿರುವದು ಕಡಿಮೆ. ಈ 'ಲಿಕ್ಯೂಮ್' ದಲ್ಲಿಯ ಜ್ಞಾನೋಪದೇಶದ ಒಂದು ಪದ್ಧತಿ ಹೀಗಿತ್ತು. ಅರಿಸ್ಟೊಟಲ್‌ನು ಅಲ್ಲಿ ತೋಪಿನಲ್ಲಿ ಸಾಲುಮರಗಳ ನೆರಳಿನಲ್ಲಿ ಶಥಪಥ ಹಾಕುತ್ತಿದ್ದಾಗ ಶಿಷ್ಯರು ಅವನೊಡನೆ ಅತ್ತಿತ್ತ ನಡೆಯುತ್ತ ಕಾವ್ಯಶಾಸ್ತ್ರಗಳ ಚರ್ಚೆ ನಡೆಸುತ್ತಿದ್ದರು. ಇದರಿಂದ ಮುಂದೆ ಅರಿಸ್ಟೊಟಲ್‌ನ ಅನುಯಾಯಿಗಳಿಗೆಲ್ಲ 'ಲಿಕ್ಯೂಮು' ದಲ್ಲಿ ಕಲಿತು ಬರುವವರಿಗೆಲ್ಲ 'ಪೆರಿಪೆಟೆಟಿಕ್' ಅಂದರೆ 'ಪರಿಕ್ರಮಿಕ' ತಾತ್ವಿಕರೆಂದು ಹೆಸರು ಬಂದಿತು. (ನಮ್ಮ ಸಂಸ್ಕೃತಜ್ಞರಿಗೆ ಪರಿಚಿತವಾದ ಒಂದು ಪ್ರಾಚೀನ ಪದವನ್ನು ಇನ್ನೊಂದು ಅರ್ಥದಲ್ಲಿ ಪ್ರಯೋಗಿಸಿ 'ಶತಪಥ ಬ್ರಾಹ್ಮಣ' ರೆಂದು ಇವರನ್ನು ಕರೆಯೋಣವೇ ?

ಅರಿಸ್ಟೊಟಲ್‌ನು ಉಪದೇಶಿಸಿದ ಜ್ಞಾನವು ಯಾವದು ? ಅವನ ತತ್ವಜ್ಞಾನವು

ಬರೇ ಆದರ್ಶದರ್ಶನವಲ್ಲ. ವಾಸ್ತವನಿರೀಕ್ಷಣೆ ಮತ್ತು ಘಟನೆಗಳ ಪರೀಕ್ಷಣದ ಮೇಲೆ ಅವನ ತತ್ವವಿಚಾರ ನೆಲೆಯೂರಿತ್ತು. ಅವನದು ಪ್ರಯೋಗನಿಷ್ಠ, ವಿಮರ್ಶಾತ್ಮಕ, ನಿಶ್ಚಿತ ಮತ್ತು ಶಾಸ್ತ್ರೀಯ ಪದ್ಧತಿಯ ಮನಸ್ಸು. ಪರಿಸ್ಥಿತಿಯನ್ನು ಪರಿಶೀಲಿಸಿ ಪ್ರಕೃತಿಯನ್ನು ಪರೀಕ್ಷಿಸಿ ಸಮಗ್ರ ಲಕ್ಷಣಗಳನ್ನು ಸಂಗ್ರಹಿಸಿ ತಿಳಿದು ತೂಗಿ ತೀರ್ಮಾನಕ್ಕೆ ಬರುವ ವೈದ್ಯಕೀಯ ಪದ್ಧತಿಯು ಅವನದು. ಅವನು ಆರಂಭದಲ್ಲಿ ವೈದ್ಯನೇ ಆಗಲು ಹೊರಟಿದ್ದನು. ತಂದೆಯ ವ್ಯವಸಾಯವನ್ನು ಮುಂದುವರಿಸಬೇಕೆಂದೂ ಮಾಡಿದ್ದನು. ಶವಭೇದ, ಅವಯವಾಭ್ಯಾಸ ಮತ್ತು ಇತರ ವೈದ್ಯಕ ವ್ಯಾಸಂಗಗಳಲ್ಲಿ ಅವನು ಕೆಲವು ಅನುಭವವನ್ನು ಪಡೆದಿದ್ದನು. ಆಮೇಲೆ ಆ ದಾರಿಯನ್ನೇ ಬಿಟ್ಟು ತತ್ವವಿಚಾರಿಯಾದನು. ಆದರೆ ದಾರಿ ಬಿಟ್ಟರೂ ಅಲ್ಲಿಯ ನಡಿಗೆ ಬಿಡಲಿಲ್ಲ. ಪ್ರಾಣ ಉಳಿಸುವ ವಿದ್ಯೆಯನ್ನು ಬಿಟ್ಟುಕೊಟ್ಟರೂ, ಮುಂದೆ ಜೀವಮಾನವೆಲ್ಲ ಅವನಿಗೆ ಪ್ರಾಣಿಶಾಸ್ತ್ರವು–ಜೀವಿಯ ಉತ್ಪತ್ತಿ–ವಿಕಾಸಗಳ ವಿಜ್ಞಾನವು–ಒಂದು ಅಚ್ಚುಮೆಚ್ಚಿನ ಅಭ್ಯಾಸವಾಗಿ ಉಳಿಯಿತು.

ಅಲೆಕ್ಸಾಂಡರನು ಬಾಬಿಲೋನ್ ರಾಜ್ಯದಲ್ಲಿ ಮಡಿದನು. ತನ್ನ ಆಶ್ರಯದಾತನ ಮರಣದಿಂದ ಅರಿಸ್ಟೊಟಲ್‌ನು ನಿರಾಧಾರನಾದನಲ್ಲದೆ, ಅಲ್ಲದ ಸಂಶಯಕ್ಕೆ ಆಧಾರನಾದನು. ಅಲೆಕ್ಸಾಂಡರನ ಪಕ್ಷದ–ಮೆಸಿಡೋನಿಯನ್ ಪಕ್ಷದ ಮೆಚ್ಚಿಗೆಯವನೆಂಬ 'ಆರೋಪ' ಅವನಿಗೆ ಅಂಟಿಕೊಂಡಿತು. ಅವನನ್ನು ಸೆರೆಹಿಡಿದು ಧರ್ಮಲಂಡತನದ ಅಪರಾಧಕ್ಕಾಗಿ ಶಿಕ್ಷೆಗೆ ಗುರಿಪಡಿಸಬೇಕೆಂಬ ಸಂಚು ಕೂಡ ನಡೆಯಿತು. ಗ್ರೀಕ ಜನತೆಯ ಚಿತ್ತಚಾಂಚಲ್ಯವನ್ನು ಅರಿಸ್ಟೊಟಲ್‌ನು ಚೆನ್ನಾಗಿ ಬಲ್ಲವನೇ ಇದ್ದನು. ಸೊಕ್ರೆಟಿಸ್‌ನ ದುರಂತ ಭವಿತವ್ಯ ಅವನಿಗೆ ಗೊತ್ತಿತ್ತು. 'ಹೆಮ್ಲೊಕ್' (ಸೊಕ್ರೆಟಿಸ್‌ನಿಗೆ ಕುಡಿಸಿದ ವಿಷ) ಗುಟುಕಿನ ರುಚಿಯ ಬಗ್ಗೆ ಅವನಿಗೆ ಅಷ್ಟೊಂದು ಕುತೂಹಲವಿದ್ದಿಲ್ಲ! ಆದ್ದರಿಂದ ತನ್ನ ಕಾಲದ ಪ್ರಪಂಚಕ್ಕೇ ಬುದ್ಧಿ ಕಲಿಸಿದ ಈ ಗುರುವು ತನ್ನ ಕಾಲಿಗೂ ಬುದ್ಧಿ ಹೇಳಿದನು! ಅಥೇನ್ಸ್‌ದಿಂದ ಪಲಾಯನ ಮಾಡಿ ಯುಬಿಯಾ ಎಂಬ ದ್ವೀಪದಲ್ಲಿ ಚಾಲ್‌ಕಿಸ್ ಎಂಬಲ್ಲಿ ಹೋಗಿ ಅಂದಿನ ಜ್ಞಾನ ಪ್ರಪಂಚವನ್ನೇ ಕ್ರೋಡೀಕರಿಸಿದ ಈ ಆಧುನಿಕ ವ್ಯಾಸನು 'ದ್ವೈಪಾಯನ'ನಾದನು. ತಾನಾಗಿ ಸ್ವೀಕರಿಸಿದ, ಈ ನಿರ್ವಾಸಿತ ಅವಸ್ಥೆಯಲ್ಲಿ ಅರಿಸ್ಟೊಟಲ್‌ನು ಕ್ರಿ. ಪೂ. ೩೨೨ರಲ್ಲಿ ಮೃತನಾದನು.

ಅರಿಸ್ಟೊಟಲ್‌ನ ಕುರಿತು ಅವನ ಸಮಕಾಲೀನರು ಬರೆದಿಟ್ಟ ಕೆಲವು ವಿವರಗಳು ದೊರೆಯುತ್ತವೆ. ಅವು ಅವನ ವ್ಯಕ್ತಿತ್ವವನ್ನು ಒಡೆದು ಕಾಣಿಸಲು ಕೆಲಮಟ್ಟಿಗೆ ನೆರವಾಗುತ್ತವೆ. ಅವನ ತುಟಿಗಳು ದೃಢವಾಗಿದ್ದವಂತೆ. ಅವನ ಕಣ್ಣುಗಳಲ್ಲಿ ಕುಕ್ಕಿ

ನೋಡುವ ದೃಷ್ಟಿ ಇತ್ತಂತೆ. ಆದರೆ ಅವನು ಮಾತಿನಲ್ಲಿ ತುಸು ತೊದಲಿ ಸುತ್ತಿದ್ದನಂತೆ. ತನ್ನ ಉಡಿಗೆ-ತೊಡಿಗೆಗಳಲ್ಲಿ ಅಚ್ಚುಕಟ್ಟು ಓರಣಗಳಿಗಾಗಿ ವಿಪರೀತ ಲಕ್ಷಗೊಡುತಿದ್ದನಂತೆ.-ಈ ಕೊನೆಯ ಲಕ್ಷಣವು ತತ್ವಜ್ಞಾನಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವದು ಕಡಿಮೆ; ದೇಹದ ಪರಿವೆ ಇಹದ ಅರಿವು ಇರುವದೇ ಅವರಿಗೆ ಅಪರೂಪ. ಅಥವಾ ಮುಖದ ಕುರೂಪವನ್ನು ಮರೆಯಿಸಲಿಕ್ಕೆ ಅವನು ಹೀಗೆ ವೇಷ-ವಸ್ತ್ರಗಳ ಬಗೆಗೆ ವಿಶೇಷ ಗಮನವಿಡುತಿದ್ದನೋ ಏನೋ !

ಶತಮಾನಗಳು ಕಳೆದ ಮೇಲೆ ಇಂಗ್ಲಂಡದ ಒಬ್ಬ ಕವಿ ಜೋನ್‌ಡ್ರಾಯ್‌ಡನ್‌ನು ಪ್ರಶಂಸೆಯ ಪರವಶತೆಯಲ್ಲಿ ಅವನನ್ನು ಕುರಿತು ಉದ್ಗರಿಸಿದನು : 'ಅವನು ತನ್ನ ದೀವಟಿಗೆಯನ್ನು ವಿಶ್ವದ ಪ್ರ ಕಾ ಶ ವ ನ್ನಾ ಗಿ ಮಾಡಿದನು !' ಅಹುದು. ಅರಿಸ್ಟೊಟಲ್‌ನು ಯಥಾರ್ಥವಾಗಿಯೂ ಪ್ರಕಾಶದ ವಾಹಕನು. ಮುಂದಿನ ಪ್ರತಿಯೊಂದು ಯುಗದ ಉತ್ತಮ ಮೇಧಾವಿಗಳೆಲ್ಲ ಅವನ ಗುಣವನ್ನು ಮನ್ನಿಸಿ ಋಣವನ್ನು ಒಪ್ಪಿಕೊಂಡಿದ್ದಾರೆ. ನೀತಿ, ತತ್ವ, ಕಾವ್ಯ, ರಾಜಕಾರಣ, ಅಲಂಕಾರ, ಇವೆಲ್ಲ ಗಹನ ವಿಷಯಗಳನ್ನು ಅವನು ಕಲಿಸಿದನು;-ಅಷ್ಟೇ ಅಲ್ಲ, ಕಳೆಗೊಂಡು ಬೆಳಗುವಂತೆ ಮಾಡಿದನು. ಅವನ ಪ್ರತಿಭೆಯ ಕಿರಣಗಳಿಂದ ಇವೆಲ್ಲವೂ ರತ್ನಗಳಂತೆ ಹೊಸ ಬಣ್ಣ-ಬೆಡಗುಗಳಿಂದ ಬೆಳಗಿದವು. ಮುಂದಿನ ಯುಗಮಾನಗಳಲ್ಲಿ ತೀರ ಭಿನ್ನ ಭಿನ್ನ ಪ್ರವೃತ್ತಿಯ ಪ್ರತಿಭೆಗಳು ಅವನ ತತ್ವವಿಚಾರದ ಸಿದ್ಧಾಂತ ದರ್ಶನದ ಪ್ರಭಾವಕ್ಕೆ ಆಳವಾಗಿ ಒಳಪಟ್ಟವು. ಥೊಮಸ್ ಅಕ್ವಿನಾಸ್, ದಾಂತೆ, ಸ್ಪೆನ್ಸರ್, ಗಟೆ ಮುಂತಾದ ಮಹಾಮೇಧಾವಿಗಳೆಲ್ಲ ಅವನ ಮಂತ್ರಕ್ಕೆ ಮುಗ್ಧರಾದವರೇ. ಅಂದಮೇಲೆ ಮಿಕ್ಕವರ ಪಾಡೇನು ?

ಪಾಶ್ಚಾತ್ಯ ಸಂಸ್ಕೃತಿಯ ಜ್ಞಾನ-ವಿಜ್ಞಾನದ ಅಂಗದ ವಿಕಾಸದ ಮೇಲೆ ಅರಿಸ್ಟಾಟಲ್‌ನ ಪರಿಣಾಮವು ಪ್ರಚಂಡವಾಗಿದೆ.-ಎಂಬುದನ್ನು ಸಾಕಷ್ಟು ಮನದಟ್ಟು ಮಾಡಿಕೊಳ್ಳಲು, ಮೊದಲು ಅವನನ್ನು ಅಮರನನ್ನಾಗಿ ಮಾಡಿದ ಅವನ ಅಕ್ಷರ ಸಾಹಿತ್ಯ ಕೃತಿಗಳ ಸ್ವಲ್ಪ ಪರಿಚಯವನ್ನು ಮಾಡಿಕೊಳ್ಳಬೇಕು. ಅವನ ತತ್ವ-ವಿಚಾರಪದ್ಧತಿಯು, ಮುಂದೆ ಮಧ್ಯಯುಗದಲ್ಲಿ ಘನವಾಗಿ ಬೆಳೆದು ಅಂದಿನ ಪಾಂಡಿತ್ಯದ ಮಂಡನವೆನಿಸಿದ ತಾರ್ಕಿಕ ಪದ್ಧತಿಯ ತಳಹದಿಯಾಗಿ ನಿಂತಿತು. ಈ ಅರಿಸ್ಟೊಟಲ್-ಪ್ರಣೀತ ತರ್ಕಪದ್ಧತಿಯು ಇಂದಿಗೂ ಸಾವಿರಾರು ತತ್ವ ಸಂಪ್ರದಾಯಗಳ ತಿಕ್ಕಾಟದ ನಡುವೆಯೂ ತನ್ನ ಸ್ಥಾನವನ್ನು ಭದ್ರವಾಗಿ ಹಿಡಿದು ಕೊಂಡಿದೆ. ವಿಚಾರದ ನಿಯಮಗಳು, ಅನುಮಾನದ ತಂತ್ರ, ದುಷ್ಟ ತರ್ಕದ ಲಕ್ಷಣಗಳು, ಇವೆಲ್ಲ ಅಂಗಗಳಿಂದ ಪರಿಪುಷ್ಟವಾದ ವಿವೇಕದ ವ್ಯಾಕರಣವನ್ನೇ

ಅರಿಸ್ಟೊಟಲ್‌ನು ತನ್ನ ತರ್ಕಶಾಸ್ತ್ರವಾಗಿ ನಿರೂಪಿಸಿದನು. ಕ್ರಿಸ್ತಿಧರ್ಮಕ್ಕೆ ಬಾಹಿರನಾದ ಈ 'ಪಾಖಂಡ' ಪದ್ಧತಿಯನ್ನು ಮುಂದೆ ಕ್ರಿಸ್ತಿಧರ್ಮದ ಆಚಾರ್ಯ ರೆನಿಸಿಕೊಂಡ ಮಹಾಮೇಧಾವಿಗಳೆಲ್ಲ ಅಖಂಡವಾಗಿ ತಮ್ಮ ಧರ್ಮಮೀಮಾಂಸೆ ಯಲ್ಲಿ ಅರಗಿಸಿಕೊಳ್ಳಲು ಹೇಸಲಿಲ್ಲ, ನಾಚಲಿಲ್ಲ.

ಅರಿಸ್ಟೊಟಲ್‌ನು ಇಷ್ಟೊಂದು ಅಚ್ಚಳಿಯದ ಪ್ರಭಾವವನ್ನು ಬೀರಿದನಷ್ಟೇ! ಆದರೆ ಅವನ ಇಂಥ ಪ್ರಭಾವಿಯಾದ ಲೇಖನದ ಗ್ರಂಥಗಳೆಷ್ಟು? ಅವುಗಳ ಗಾತ್ರವೆಷ್ಟು? ಅವನ ಗ್ರಂಥಗಳೆನಿಸಿಕೊಂಡ ಬರಹಗಳೆಲ್ಲ ಬರೇ ಟಿಪ್ಪಣಿಗಳ ಪಟ್ಟಿಗಳಂತಿವೆ. ಆದರೆ ಆ ಟಿಪ್ಪಣಿಗಳಲ್ಲಿ ಎಂಥ ಸಂಗ್ರಹ! ಎಂಥ ಸಮಗ್ರತೆ! ತತ್ವಜ್ಞಾನದ ವಿಶ್ವಕೋಶವೇ ಅಲ್ಲಿ ಅರ್ಕ ತೆಗೆದು ಇಟ್ಟಂತಿದೆ. ಅವುಗಳ ಕುಶಾಗ್ರ ಪರಿಚಯವು ಮಾತ್ರ ಇಲ್ಲಿ ಶಕ್ಯ.

'ಒರ್ಗೆನೊನ್' ಇದು ಅವನ ತರ್ಕಶಾಸ್ತ್ರದ ಗ್ರಂಥ. ಇಲ್ಲಿ ಅವನು ಕಟ್ಟುನಿಟ್ಟಾಗಿ ಸಾರಿದ್ದಾನೆ; ಅನುಮಾನ ಪದ್ಧತಿ ಅಥವಾ 'ವಿಚಾರ ಮಾಡುವ'ದೆಂಬ ಮನೋ ವ್ಯಾಪಕದ ಪರಿಶೀಲನೆ ಪರ್ಯಾಲೋಚನೆ ಇಲ್ಲಿ ಸ್ಫುಟವಾಗಿ ಮಾಡಿದ್ದಾನೆ; ವಿಚಾರದ ನಿಯಮಗಳನ್ನು ಅಧಿಕಾರವಾಣಿಯಿಂದ ಇಲ್ಲಿ ಮಂಡಿಸಿದ್ದಾನೆ. ಈ ವಾಣಿಯ ಅಧಿಕಾರ ವನ್ನು ಹಲಕೆಲವು ಮಾರ್ಪಾಟುಗಳೊಂದಿಗೆ ಪ್ರಪಂಚವು ಅಂದಿನಿಂದ ಮನ್ನಿಸುತ್ತ ಆ ನಿಯಮಗಳನ್ನು ಅನುಸರಿಸಿಯೇ ವಿಚಾರ ಮಾಡುತ್ತ ಬುದ್ಧಿ ಬಲಿದು ಬೆಳೆದು ಬಂದಿದೆ. 'ರ್‍ಹಿಟೊರಿಕ್ಸ್' ಅಥವಾ ಅಲಂಕಾರ ಶಾಸ್ತ್ರದ ಅವನ ಗ್ರಂಥವು ಪರಮತ ಪರಿವರ್ತನೆಯ ಕಲೆಯನ್ನು ವಿವೇಚಿಸುವ ಒಂದು ಪ್ರಮಾಣಗ್ರಂಥವಾಗಿದೆ. ಅವನ ಪ್ರತಿಭೆಯು ಸರ್ವಂಕಶ ಸವ್ಯಾಸಾಚಿತ್ವವೂ ಜ್ಞಾನಸಂಪತ್ತಿನ ಬಹುವಿಧವಾದ ವಿಪುಲತೆಯೂ ವಿಚಾರಶಕ್ತಿಯ ದಕ್ಷವೂ ತೀಕ್ಷ್ಣವೂ ಆದ ಗತಿಯೂ ಅವನ ಪದಾರ್ಥಶಾಸ್ತ್ರದ 'ಫಿಜಿಕ್ಸ್' ಎಂಬ ಪುಸ್ತಕವಲ್ಲಿಯೂ, ತತ್ವಶಾಸ್ತ್ರದ 'ಮೆಟಾ ಫಿಜಿಕ್ಸ್' ಎಂಬ ಗ್ರಂಥವಲ್ಲಿಯೂ, 'ಟೊಪಿಕ್ಸ್' ಎಂಬ ಸಂಕೀರ್ಣ ವಿಷಯ ವಿವೇಚನೆಯ ಹೊತ್ತಿಗೆಯಲ್ಲಿಯೂ ನಿದರ್ಶನಕ್ಕೆ ಬಂದಿವೆ. 'ಆತ್ಮವನ್ನು ಕುರಿತು' ಎಂಬ ಪ್ರಬಂಧದಲ್ಲಿ ಅವನು ಪ್ರಾಣಿಶಾಸ್ತ್ರ ಮನಃಶಾಸ್ತ್ರಗಳ ಕ್ಷೇತ್ರವನ್ನು ಪ್ರವೇಶಿಸುತ್ತಾನೆ. ಅಲ್ಲಿಯೂ ಅವನ ಗತಿ ನಿರಾತಂಕ. ನಿಶ್ಚಯಾತ್ಮಕ. ಇದಾಯಿತು, ಬೌದ್ಧಿಕ ಕ್ಷೇತ್ರದ ದಿಗ್ವಿಜಯ. ರಸವಿಮರ್ಶೆಯಲ್ಲಿಯೂ ಇದೇ ನಿಶಿತವೂ ನಿಶ್ಚಿತವೂ ಆದ ಪ್ರತಿಭೆಯ ಗತಿಯು ಗೋಚರವಾಗುತ್ತದೆ. ಸಾಹಿತ್ಯವಿಮರ್ಶೆಯ ಮೇಲೆ–ವಿಶೇಷತಃ ನಾಟಕ ವಿಮರ್ಶೆಯ ಮೇಲೆ–ಅರಿಸ್ಟೊಟಲ್‌ನ 'ಪೊಯೆಟಿಕ್ಸ್' ಎಂಬ ಕಾವ್ಯಶಾಸ್ತ್ರದ ಚಿಕ್ಕ ಪುಸ್ತಕದ ಪ್ರಭಾವವು ಅವನ ಮಿಕ್ಕ ಕೃತಿಗಳು ಇತರ ವಿಷಯಗಳ ಮೇಲೆ ಬೀರಿದುದಕ್ಕಿಂತ ಮಿಗಿಲಾಗಿ ಬಿದ್ದಿದೆ.

ಆದರೆ ಇವೆಲ್ಲವುಗಳಿಗಿಂತ ಅತ್ಯಂತ ಘನವಾಗಿಯೂ ದೂರಗಾಮಿಯಾಗಿಯೂ ಪಾಶ್ಚಾತ್ಯ ವಿಚಾರಕ್ಷೇತ್ರದಲ್ಲಿ ಪ್ರಭಾವವನ್ನು ಬೀರಿದ ಮತ್ತೂ ಈಗಲೂ ಬೀರುವ ಅವನ ಗ್ರಂಥಗಳೆಂದರೆ 'ಎಥಿಕ್ಸ್' ಹಾಗು 'ಪೊಲಿಟಿಕ್ಸ್' ಎಂಬ ನೀತಿ ಮತ್ತು ಪೌರನೀತಿಶಾಸ್ತ್ರದ ಪ್ರಬಂಧಗಳು. ಪ್ರಾಚೀನವಿರಲಿ ಅರ್ವಾಚೀನವಿರಲಿ ಯಾವ ಕಾಲಮಾನದಲ್ಲಿಯೂ ಅವನು ಪ್ರತಿಪಾದಿಸಿದ ಪ್ರಮೇಯಗಳೂ, ಸಿದ್ಧಾಂತ ಪದ್ಧತಿಗಳೂ ಮೇಧಾವಿಗಳನ್ನೂ, ಮುತ್ಸದ್ದಿಗಳನ್ನೂ, ತತ್ವವೇತ್ತರನ್ನೂ, ನೀತಿ ನಿಪುಣರನ್ನೂ, ಕೂಡಿಯೇ ಆಕರ್ಷಿಸಿವೆ. ಅರಿಸ್ಟೊಟಲ್‌ನ ಅಧಿಕಾರದ ವಾಣಿಗೆ ಎಲ್ಲ ವಿಚಾರವಂತರೂ ಅಭ್ಯಾಸದ ಕಪ್ಪಗಾಣಿಕೆಯನ್ನು ಆದರದಿಂದಲೂ ಆನಂದ ದಿಂದಲೂ ಸಲ್ಲಿಸುತ್ತ ಬಂದಿದ್ದಾರೆ. ಅವನ ಪ್ರತಿಭೆಯ ಪ್ರವೇಶದಿಂದ ಪ್ರಕಾಶ ಮಯವಾಗದ ಯಾವ ಮಹತ್ವದ ವಿಚಾರಕ್ಷೇತ್ರವೂ ಜ್ಞಾನದ ಇತಿಹಾಸದಲ್ಲಿ ಉಳಿದಿಲ್ಲ ! ●

# ನಿಕೊಲೊ ಮ್ಯಾಕಿಯಾವೆಲ್ಲಿ

ಮುಖ್ಯ ಮಂತ್ರಿಗಳು ತೋರಿಕೆಗೆ ಸರಳವಾದರೂ ತಳದಲ್ಲಿ ಸೂಕ್ಷ್ಮ ಕುಟಿಲತೆಯ ಸುಳಿವನ್ನು ತೋರಿಸುವ ಭಾಷಣವನ್ನು ಶಾಸನಸಭೆಯಲ್ಲಿ ಮಾಡುತ್ತಾರೆ. ಅಥವಾ ಪ್ರತಿಪಕ್ಷದ ಮುಂದಾಳುವು ಸೌಮ್ಯವಾಗಿ ಕಂಡರೂ ಮುತ್ಸದ್ದಿತನದ ಕಿರಿವಿಕಾರದಿಂದ ಕೂಡಿದ ಸಂಧಿಗೊಂದು ಸಂದಿಗ್ಧತೆಯನ್ನು ಉಂಟುಮಾಡುವ ಪ್ರಸ್ತಾಪವನ್ನು ಮಂಡಿಸುತ್ತಾನೆ. ಅಂತರ್-ರಾಷ್ಟ್ರೀಯ ಒಳತಂತ್ರದ ಒಂದು ಹೊಸ ಹೊಂಚಿನ ಜಟಿಲ ವಿವರಗಳೆಲ್ಲ ಅರೆಮಾತುಗಳಲ್ಲಿ ಮರೆಮುಚ್ಚಿ ಪತ್ರಿಕೆಗಳ ತಲೆಬರಹಗಳಲ್ಲಿ ಕಣ್ಣು ಕುಕ್ಕುವಂತೆ ಅಚ್ಚಾಗಿ ಬರುತ್ತವೆ. ಅಥವಾ ನಿರುಪದ್ರವಿಯಾದ ರೀತಿಯಲ್ಲಿ ಸರಕಾರಗಳ ಪ್ರತಿನಿಧಿಗಳು ಕೂಟನೀತಿಯ ಪೇಚು ಪೆಟ್ಟುಗಳನ್ನು ತಪ್ಪಿಸುತ್ತ (ಸಾಧಿಸುತ್ತ ?) ಒಡಂಬಡಿಕೆಯ ಪುಟ್ಟದೊಂದು ಕರಡನ್ನು ಪ್ರಕಟಿಸುತ್ತಾರೆ. ಆಗ ನಮಗೆ (ಅಂದರೆ ಗೊತ್ತಿದ್ದವರಿಗೆ) ನೆನಪಿಗೆ ಬರುವ ಹೆಸರು ಯಾವದು ? ಮ್ಯಾಕಿಯಾವೆಲ್ಲಿ. ಬಡಕ ಮೈಕಟ್ಟಿನ ಗೋದಿಬಿಳುಪಿನ, ಚಿಕ್ಕತಲೆಯಲ್ಲಿ ವಜ್ರವಂತೆ ಮಿನುಗುವ ಕಣ್ಣುಗಳುಳ್ಳ ಉಪರೋಧದ ತುಂಟನಗೆಯಿಂದ ಒಪ್ಪುವ ತೆಳ್ಳಗಿನ ತುಟಿಗಳನ್ನು ಬಿಗಿದಿಟ್ಟು, ಇಟಲಿಯಲ್ಲಿಯ ತನ್ನ ಹಳ್ಳಿಯ ಮನೆಯೊಂದರಲ್ಲಿ ಕುಳಿತು ಏಕಾಂತದಲ್ಲಿ ಏನೇನೋ ಭರದಿಂದ ಬರೆಯುತ್ತಿರುವ ಆ ವ್ಯಕ್ತಿಯನ್ನು ನೋಡಿದಿರಾ ? ಅವನೇ ನಿಕೊಲೊ ಮ್ಯಾಕಿಯಾವೆಲ್ಲಿ, ಪಾಶ್ಚಿಮಾತ್ಯ ರಾಜನೀತಿಯ ಜನಕ. ಪಶ್ಚಿಮದ ಚಾಣಕ್ಯ.-ಕುಟಿಲ ಕಾರಸ್ಥಾನದ ಕೃಷ್ಣ.

ಮ್ಯಾಕಿಯಾವೆಲ್ಲಿಯ ಪ್ರಭಾವ ಪಶ್ಚಿಮದ ರಾಜಕೀಯ ಪ್ರತಿಭೆಯ ಮೇಲೆ ಎಷ್ಟು ಬಿದ್ದಿದೆಯೆಂಬುವನ್ನು ತಿಳಿಯಲು ದೂರ ನಡೆಯಬೇಕಿಲ್ಲ. ಅವನ ಹೆಸರು ಇಂಗ್ಲಿಷ ಭಾಷೆಗೆ ಎರಡು ನಾ ಮ ಪ ದ ಗ ಳ ನ್ನು ಒಂದು ವಿಶೇಷಣವನ್ನು ಪೂರೈಸಿದೆ. 'ಮ್ಯಾಕಿಯಾವೆಲ್ಲಿ' ಎಂದೊಡನೆ ಒಬ್ಬ ಪರಮ ಧೂರ್ತ ತಂತ್ರಗಾರನೆಂದು ಅರ್ಥವಾಗುತ್ತದೆ. ಆಕ್ಸಫೊರ್ಡ್‌ನ ಇಂಗ್ಲಿಷ ನಿಘಂಟುವು 'ಮ್ಯಾಕಿಯಾವೆಲ್ಲಿಯನ್' ಎಂಬ ವಿಶೇಷಣಕ್ಕೆ- 'ತತ್ವಭ್ರಷ್ಟ ತಂತ್ರಗಾರ, ಧೂರ್ತ, ಉಪಾಯಚತುರ, ನ್ಯಾಯದ ಹಂಗಿಲ್ಲದ ಹೊಂಚಿನ ಠಕ್ಕ, ಒಳಿತನ್ನು ನಂಬದ, ಮಂದಿಯ ದೋಷಗಳ ಲಾಭವನ್ನು ಪಡೆಯಲು ಜೋಕೆಯಿಂದ ಆಳವಾಗಿ ಯೋಜನೆ ಹೂಡುವ ಪಟುವಾದ ಕುಟಿಲ ಎಂದೆಲ್ಲ ವ್ಯಾಖ್ಯಾನವನ್ನು ಮಾಡಿದೆ. ಅವನ ನಿಕೊಲೊ ಎಂಬ ಅಂಕಿತ ನಾಮದಿಂದ ಸೈತಾನರ-ಜಗತ್ತಿನ ಕೆಡುಕಿನ ದೈವದ-ಹೆಸರಿಗೆ 'ನಿಕ್' ಎಂಬ ಪರ್ಯಾಯ ನಾಮವನ್ನು ಉಂಟು ಮಾಡಲಾಗಿದೆ ! ಪ್ರತಿಯೊಂದು ನಾಗರಿಕ

ದೇಶದಲ್ಲಿ 'ಮ್ಯಾಕಿಯಾವೆಲ್' ಎಂಬುವದು ಮನೆಮಾತಾಗಿದೆ. ಅವನ ಗ್ರಂಥಗಳ ಅಭ್ಯಾಸವು ಅಖಂಡವಾಗಿ ಎಲ್ಲೆಡೆಗೂ ನಡೆಯುತ್ತದೆ. ಅಷ್ಟೇ ಪ್ರಮಾಣದಲ್ಲಿ ಅವನ ದೂಷಣೆಯೂ ನಡೆಯುತ್ತಿದೆ. ರಾಜಕೀಯ ಉಪಾಯ ತಂತ್ರಗಳ ಪ್ರಪಂಚದಲ್ಲಿ ಅವನ ಪ್ರಭಾವವು ಅದ್ವಿತೀಯವಾಗಿದೆ. ಯಾವ ತತ್ವದ ಸರಕಾರವೇ ಇರಲಿ, ರಾಜನಿರಲಿ, ಸರ್ವಾಧಿಕಾರಿ ಇರಲಿ, ಅಂತರ್ ರಾಷ್ಟ್ರೀಯ ಸಂಸ್ಥೆಯಲ್ಲಿಯ ರಾಯಭಾರಿಯೇ ಇರಲಿ, ಕೂಟ ನೀತಿಯ ಕೌಟಿಲ್ಯ ಕೌಶಲ್ಯಗಳಿಗೆ ಅವನೇ ಗುರು. ಇತಿಹಾಸದಲ್ಲಿ ಮತ್ಯಾರ ಹೆಸರೂ ಇವನದಷ್ಟು ನಿರಂತರವಾಗಿ ನಿಂದೆಗೆ ಆಸ್ಪದ ವಾಗಿಲ್ಲ. ರಾಜಕೀಯ ಮಹತ್ವಾಕಾಂಕ್ಷೆ ಮತ್ತೂ ಪ್ರತಿಶೋಧಗಳಿಗೆ ಅವನೇ ಮೂಲ ಶೋಧಕನು; ಸುಳ್ಳುಸಾಕ್ಷಿಗೆ ಅವನೇ ಅದ್ಯ ಕಲ್ಪಕನು; ಅವನ ಮಹಾ ಕುಪ್ರಸಿದ್ಧ ಗ್ರಂಥವಾದ 'ನರೇಂದ್ರ'ವು ಪ್ರಕಟವಾಗುವ ಮೊದಲು ಡಾಂಭಿಕರಾಗಲಿ, ದಬ್ಬಾಳಿಕೆಗಾರರಾಗಲಿ, ದ್ರೋಹಿಗಳಾಗಲಿ, ಉಂಟಾಗಿಯೇ ಇದ್ದಿಲ್ಲ; ಶೀಲದ ಅನುಕರಣವಾಗಲಿ, ಪಾಪದ ಅನುಕೂಲವಾಗಲಿ ಒದಗಿ ಬಂದಿಯೇ ಇದ್ದಿಲ್ಲ–ಎಂಬಂತೆ ಮ್ಯಾಕಿಯಾವೆಲ್ಲಿಯ ಕುರಿತು ಪ್ರಚಾರ ನಡೆಯುತ್ತಿದೆ.

ಇದೆಲ್ಲ ಅಪಪ್ರಚಾರಗಳ ಸಂಮಿಶ್ರ ಸ್ಫೋಟಕ್ಕೆ ಕಾರಣನಾದ ಆ ವ್ಯಕ್ತಿ–ನಿಕೊಲೊ ಮ್ಯಾಕಿಯಾವೆಲ್ಲಿ–ಫ್ಲೋರಾನ್ಸದಲ್ಲಿ ೧೪೬೯ ನೇ ವರ್ಷ ಮೇ ತಿಂಗಳ ೩ ನೇ ದಿನಾಂಕಕ್ಕೆ ಹುಟ್ಟಿದನು. ಅವನ ತಂದೆ ಬರ್ನಾಡೊರ್, ಒಬ್ಬ ಕಾಯಿದೆಯ ತಜ್ಞ ನಾಗಿದ್ದನು. ಅಷ್ಟೇನು ಹಣವಂತನಲ್ಲದಿದ್ದರೂ ಕೆಲವು ಹೊಲಗಳಿಗೆ ಒಡೆಯ ನಾಗಿದ್ದರಿಂದ ಕಾಯಿದೆಯ ಸಲಹೆಗಾರಿಕೆಯ ವ್ಯವಸಾಯದಲ್ಲಿಯೂ ಅವನು ಸುಖವಾಗಿ ಬಾಳುವಂತಿತ್ತು. ಅವನು ಸುಸಂಸ್ಕೃತನೂ ಇದ್ದನು. ಮಗನು ತಂದೆಯ ಹೋಲಿಕೆಯಲ್ಲಿಯೇ ಬೆಳೆದನು. ಚಿಕ್ಕಂದಿನಿಂದಲೇ ಮ್ಯಾಕಿಯಾವೆಲ್ಲಿಗೆ ಸಾಹಿತ್ಯದ ಅಭಿರುಚಿಯು ಅಂಟಿತು. ಅವನು ಲ್ಯಾಟಿನ್ ಮತ್ತು ಇಟ್ಯಾಲಿಯನ್ ಭಾಷೆಗಳಲ್ಲಿ ಮಾರ್ಗೀಯ ಸಾಹಿತ್ಯವನ್ನು ಆಳವಾಗಿ ಓದಿದನು. ವಿಶೇಷವಾಗಿ ರೋಮದ ಇತಿಹಾಸವನ್ನು ಅಭ್ಯಾಸಿಸಿದನು. ಅವನ ಈ ಆರಂಭದ ವಾಙ್ಮಯ ವ್ಯಾಸಂಗದಿಂದ, ಅವನಲ್ಲಿ ಸಮಾರ್ಥವೂ ಸಮರ್ಪಕವೂ ಆದ ಹುರುಳು–ಹುರಿಕಟ್ಟುಗಳುಳ್ಳ ಬರಹ ಗಾರಿಕೆಯು ಬಂದಿತು. ತಾನು ಹೇಳತಕ್ಕದ್ದನ್ನು ಆಡಂಬರದ ಕಸರಿಲ್ಲದೇ ಅಲಂಕಾರಗಳ ಕುಸುರಿಲ್ಲದೇ ನೇರವಾಗಿ ನಿಚ್ಚಳವಾದ ಮಾತಿನಲ್ಲಿ ಮೂಡಿಸುವ ಕಲೆಯು ಅವನಿಗೆ ಸಾಧಿಸಿತು. ಶೈಲಿಯ ಸಂಭ್ರಮದಲ್ಲಿ ತಲೆಕೆಡಿಸಿಕೊಳ್ಳದೇ ಮ್ಯಾಕಿಯಾವೆಲ್ಲಿಯು ಇಟಾಲಿಯನ್ ಗದ್ಯದ ಹೊಸ ಹುಟ್ಟಿಗೆ ತಂದೆ ಆದನು. ಆ ಗದ್ಯದ ಗಂಭೀರವಾದ ಆಧುನಿಕ ವಾಗ್ಧೋರಣೆಯೇ ಅವನ ಸ್ಮಾರಕವು.

ಆ ಕಾಲದಲ್ಲಿ ಇಟಲಿಯು ಯುರೋಪಿನ ಕೋಳಿಯಂಕದ ನಿತ್ಯದ ಕದನಕ್ಕೆ ಕಣ

ವಾಗಿತ್ತು. ಆ ದ್ವೀಪಕಲ್ಪದ ಚಿಕ್ಕ ರಾಜ್ಯಗಳೆಲ್ಲ ಸದಾಕಾಲವೂ ಸಂಘರ್ಷದಲ್ಲಿಯೇ ತೊಡಗಿರುತ್ತಿದ್ದವು. ಪಟ್ಟಣ ಪಟ್ಟಣಗಳಲ್ಲಿ ಕದನ; ಕೆಲವೊಮ್ಮೆ ಪಟ್ಟಣದೊಳಗಿನ ಬೇರೆ ಬೇರೆ ಬಣಗಳಲ್ಲಿ ಕಾಳಗ, ಹೆದ್ದಾರಿಯ ಹುದ್ದರಿಗಳು ದಬ್ಬಾಳಿಕೆಗಳನ್ನು ಸ್ಥಾಪಿಸುತ್ತಿದ್ದರು. ತಪ್ಪದೇ ಒದಗುವ ಇದರ ಫಲಗಳೆಂದರೆ ಒಳಸಂಚುಗಳು, ಕೊಲೆಘಾತಗಳು, ಸೆರೆ ಇಲ್ಲವೇ ಹದ್ದುಪಾರುಗಳು. ಫ್ಲೋರಾನ್ಸ ತನ್ನ ಪ್ರಜಾರಾಜ್ಯದ ಸಂಘಟನೆಗಳನ್ನು ಕಾದುಕೊಂಡಿತ್ತು. ಆದರೆ ಆ ರಾಜ್ಯದಲ್ಲಿಯೂ ಒಂದೇ ಒಂದು ಮನೆತನ ಮೆಡಿಸಿಯ ಕುಲದ ಆಡಳಿತದಲ್ಲಿತ್ತು.

೧೪೯೪ ರಲ್ಲಿ ಮ್ಯಾಕಿಯಾವೆಲ್ಲಿಯು ಸಾರ್ವಜನಿಕ ಜೀವನದಲ್ಲಿ ಕಾಲಿಟ್ಟನು. ಆ ವರ್ಷ ಫ್ಲೋರಾನ್ಸಿನ ರಾಜ್ಯವಿಪ್ಲವದ ಪರ್ವಕಾಲ. ಫ್ರಾನ್ಸದ ಚಾರ್ಲಸನು ಆಲ್ಪ್ಸ ಪರ್ವತಗಳನ್ನು ದಾಟಿ ಬಂದು ನೇಪಲ್ಸದ ಮೇಲೆ ದಾಳಿ ಇಟ್ಟನು. ಅವನ ಆಕ್ರಮಣಕ್ಕೆ ಅಂಜಿ ಅಂದಿನ ಫ್ಲೋರಾನ್ಸದ ಆಡಳಿತಗಾರನಾದ ಮೆಡಿಸಿ ಮನೆತನದ ಮುಖ್ಯನು ರಾಜ್ಯ ವಿಪ್ಲವಕ್ಕೆ ಕಾರಣನಾದನು. ಅವನ ಮನೆತನವು ರಾಜ್ಯ-ಬಹಿಷ್ಕೃತವಾಯಿತು. ಅಧಿಕಾರದಿಂದ ಪದಚ್ಯುತವಾಯಿತು. ಅದೇ ಕಾಲದಲ್ಲಿ ಆ ಪ್ರಜಾರಾಜ್ಯದ ಮಂತ್ರಿವಾಡದ ಕಚೇರಿಯಲ್ಲಿ ಒಬ್ಬ ಕರಣಿಕನಾಗಿ ಮ್ಯಾಕಿಯಾವೆಲ್ಲಿ ಸಾರ್ವಜನಿಕ ಕಾರ್ಯವನ್ನು ಪ್ರಾರಂಭಿಸಿದನು. ಮಾರ್ಕೆಲೊ ವ್ಹರ್ಜಿಲಿಯೊ ಆಡ್ರಿಯಾನಿಯೆಂಬ ಬಹುಶ್ರುತ ಹಿರಿಯರ ಕೈಕೆಳಗೆ ಕೆಲಸವನ್ನು ಆರಂಭಿಸಿದನು. ೧೪೯೮ ರಲ್ಲಿ ಆಡ್ರಿಯಾನಿಯೇ ಮುಖ್ಯ ಮಂತ್ರಿಯಾದನು. ಮ್ಯಾಕಿಯಾವೆಲ್ಲಿಗೆ ಉಪಮಂತ್ರಿಯ ಅಧಿಕಾರ ದೊರೆಯಿತು. ಜತೆಗೆ ಆಡ್ರಿಯಾನಿಯ ಪದವೂ ಅವನಿಗೆ ಬಂದಿತು, ಈ ಪದವಿಯಲ್ಲಿ ಅವನು ೧೪ ವರ್ಷ ಕೆಲಸಮಾಡಿದನು. ಮಂತ್ರಿವಾಡದ ಅವನು ಸಂಬಂಧಪಟ್ಟ ವಿಭಾಗವು ಸಂಧಿವಿಗ್ರಹಗಳಿಗೂ, ಕೆಲಮಟ್ಟಿಗೆ ಅಂತರ್ದೇಶೀಯ ಆಡಳಿತಕ್ಕೂ ಹೊಣೆಗಾರವಾಗಿತ್ತು. ಫ್ಲೋರಾನ್ಸ ರಾಜ್ಯಕ್ಕೆ ಒಳಪಟ್ಟ ನಗರಗಳ ವ್ಯವಹಾರವನ್ನು, ಬೇರೆ ಬೇರೆ ರಾಯಭಾರಿ ಕಚೇರಿಗಳ ವ್ಯವಸ್ಥೆಯನ್ನೂ ನೋಡಿಕೊಳ್ಳುವದು ಮ್ಯಾಕಿಯಾವೆಲ್ಲಿಯ ಕರ್ತವ್ಯಕ್ಕೆ ಒಳಪಟ್ಟಿತ್ತು.

ತನ್ನ ರಾಜ್ಯದ ಕೂಟನೀತಿಯ ರಾಯಭಾರಗಳಿಗಾಗಿ ಸ್ವತಃ ಮ್ಯಾಕಿಯಾವೆಲ್ಲಿಯೇ ಅನೇಕ ಪ್ರವಾಸಗಳನ್ನು ಕೈಕೊಂಡನು. ಅವನ ಅಧಿಕಾರಾವಧಿಯಲ್ಲಿ ಸಂಗ್ರಹವಾದ ವಿವಿಧ ವ್ಯಕ್ತಿ ಮತ್ತು ವಿಷಯಗಳ ಹಾಗೂ ಶಾಂತಿ ವಿಗ್ರಹಗಳ ವ್ಯವಹಾರಗಳ ವಿಶಾಲ ಅನುಭವವೇ ಅವನ ರಾಜಕೀಯ ತತ್ವ ವಿಚಾರಕ್ಕೆ ರೂಪಕೊಡಲು ನೆರವಾಯಿತು. ಅವನ ಮೊದಲಿನ ರಾಯಭಾರ ಇಟಲಿಯೊಳಗಿನ ಇತರ ಪುಟ್ಟ ರಾಜ್ಯಗಳ ಆಸ್ಥಾನಗಳಿಗೆ ಆಗಿತ್ತು. ಅವನ ಮೊತ್ತಮೊದಲಿನ ಪ್ರವಾಸ ಒಬ್ಬ ರಾಜಕುಮಾರಿಗಾಗಿ ಸಾಲವನ್ನು ಒದಗಿಸುವ ಸಲುವಾಗಿ ಅಲ್ಲದೇ ಮದ್ದುಗುಂಡುಗಳ

ಸಂಗ್ರಹವನ್ನು ದೊರಕಿಸಲೂ ಆಯಿತು. ಅನಂತರದ ಅವನ ದೀರ್ಘ ಪ್ರವಾಸ ಫ್ರಾನ್ಸಿಗೆ ೧೨ ನೇ ಲುಯಿಯ ಆಸ್ಥಾನಕ್ಕೆ. ಆಗ ೧೨ ನೇ ಲುಯಿಯು ೮ ನೇ ಚಾರ್ಲಸನ ನಂತರ ಪಟ್ಟಕ್ಕೆ ಬಂದಿದ್ದನು.

೧೫೦೨ ರಲ್ಲಿ ಮ್ಯಾಕಿಯಾವೆಲ್ಲಿಯ ಮದುವೆಯಾಯಿತು. ಅವನ ಮಡದಿಯ ಹೆಸರು ಮ್ಯಾರಿಟಾ ಕೋರ್ಸಿನಿ. ಆಕೆಯೊಡನೆ ಆಗೊಮ್ಮೆ ಈಗೊಮ್ಮೆ ದ್ರೋಹ ಬಗೆದರೂ, (ಪ್ರಾಸಂಗಿಕ ವ್ಯಾಮೋಹಗಳಿಗೆ ವಶನಾಗಿದ್ದರೂ) ಒಟ್ಟಾರೆ ಮ್ಯಾಕಿಯಾವೆಲ್ಲಿಯು ಮ್ಯಾರಿಟಾಳನ್ನು ಪ್ರಾಮಾಣಿಕವಾಗಿಯೇ ಪ್ರೀತಿಸುತ್ತಿದ್ದ ನೆನ್ನಬಹುದು. ಅದೇವರ್ಷ ಅಕ್ಟೋಬರ ತಿಂಗಳಲ್ಲಿ ಅವನಬಾಳಿನ ಇನ್ನೊಂದು ಅತಿ ಮಹತ್ವದ ಪರ್ವಣಿ ಕೂಡಿಬಂತು. ವೇಲೆಂಟಿನೋಯಿಸದ ಡ್ಯೂಕನಾದ ಸೀಝರ ಬೋರ್ಗಿಯಾನನ ಆಸ್ಥಾನಕ್ಕೆ ಅವನು ರಾಯಭಾರಿಯಾಗಿ ಹೋದನು. ಸೀಝರನು ಆಗ ರೋಮಾಗ್ನ ಎಂಬಲ್ಲಿ ಬೀಡು ಬಿಟ್ಟಿದ್ದನು. ಸೀಝರನು ಆ ಸುಮಾರಿಗೆ ಫ್ಲೋರಾನ್ಸದ ಮೇಲೆ ದಾಳಿ ಹೂಡುವವನಿದ್ದನೆಂಬ ಭಯದ ವಾರ್ತೆ ದಟ್ಟವಾಗಿ ಹಬ್ಬಿತ್ತು. ಅದಕ್ಕಾಗಿ ಸೀಝರ ಬೋರ್ಗಿಯಾನನ ಹತ್ತಿರವೇ ಇದ್ದು ಅವನ ಪ್ರತಿಯೊಂದು ಚಲನವಲನವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ತನ್ನ ಮಂತ್ರಿವಾಡಕ್ಕೆ ತಿಳಿಸುವದೇ ಮ್ಯಾಕಿಯಾವೆಲ್ಲಿಯ ರಾಯಭಾರವಾಗಿತ್ತು.

ಸೀಝರ ಬೋರ್ಗಿಯಾನನ ಸಹವಾಸದಲ್ಲಿ ದಿನಕಳೆದಂತೆಲ್ಲ ಮ್ಯಾಕಿಯಾವೆಲ್ಲಿಗೆ ಆತನ ವ್ಯಕ್ತಿತ್ವದ ಪ್ರಭಾವ ಹೆಚ್ಚು ಹೆಚ್ಚು ಅನಿಸತೊಡಗಿತು. ಸೀಝರನಲ್ಲಿ ದುಡುಕಿನ ಧೈರ್ಯ, ಕೂಟನೀತಿಯ ಮುಂಜಾಗ್ರತೆ ಇವುಗಳ ಒಂದು ವಿಚಿತ್ರ ವಿಶ್ರಣವು ಕಾರ್ಯ ಮಾಡುತ್ತಿತ್ತು. ಅವನ ಕಾರ್ಯದಲ್ಲಿ ವಂಚನೆ, ನಿಷ್ಠುರತೆ ಮತ್ತು ಕ್ರೂರತೆಗಳ ಉಪಯೋಗವನ್ನು ಉಪಾಯಾಂತರವಾಗಿ ಮಾಡಿಕೊಳ್ಳುವ ತೀವ್ರ ಚಾತುರ್ಯವಿತ್ತು. ಈ ಚಾತುರ್ಯದ ತೀವ್ರತೆಯ ಲಕ್ಷಣವೆಂದರೆ ಯಾವದೇ ಕೆಲಸ ಅರೆಪಾಲು ಕೊರೆಪಾಲಾಗಿ ಆಗುತ್ತಿರಲಿಲ್ಲ; ಹಿಡಿದ ಕಾರ್ಯದ ಸಾಧನೆಯಲ್ಲಿ ಪೂರ್ತಿ ಪೃತ್ಪೂರ್ವಕತೆ, ದೀರ್ಘ ಸೂತ್ರತೆಯ ಬಗ್ಗೆ ಪೂರ್ತಿ ತಿರಸ್ಕಾರ ಕಂಡು ಬರುತಿತ್ತು; ಕೊನೆಯದಾಗಿ ಅವನಲ್ಲಿ ಹಿರಿಮೆಯ ಗುಣವೆಂದರೆ, ದೃಢನಿರ್ಧಾರ ಮತ್ತು ಆತ್ಮಾವಲಂಬನ, ಇವೆಲ್ಲ ಚರಿತ್ರೆ ಚಿನ್ಹಗಳನ್ನು ಮ್ಯಾಕಿಯಾವೆಲ್ಲಿಯು ಲಕ್ಷಗೊಟ್ಟು ಕಂಡುಕೊಂಡನು. ಈ ನಿರೀಕ್ಷಣವು ಮುಂದೆ ಅವನಿಗೆ ತನ್ನ ರಾಜನೀತಿಯ ತತ್ವ ವಿನ್ಯಾಸಕ್ಕೆ ಸಹಾಯಕವಾಯಿತು.

ರೋಮಾಗ್ನದ ಬೀಡಿನಿಂದ ಸೀಝರನ ಬಳಿಯಿಂದ ಮ್ಯಾಕಿಯಾವೆಲ್ಲಿಯು

ಫ್ಲೋರಾನ್ಸಿಗೆ ಪತ್ರಗಳನ್ನು ಬರೆಯುತ್ತಿದ್ದನು. ಆ ಪತ್ರಗಳಲ್ಲಿ ಅವನ–ಮ್ಯಾಕಿಯಾವೆಲ್ಲಿಯು–ವ್ಯಕ್ತಿತ್ವವೂ ಆ ಸೂಕ್ಷ್ಮ ರಾಯಭಾರದಲ್ಲಿಯ ಕಾರ್ಯಕೌಶಲ್ಯವೂ ತುಂಬ ವ್ಯಕ್ತವಾಗಿದೆ. ಮ್ಯಾಕಿಯಾವೆಲ್ಲಿಯು ಎಂಥ ಮನುಷ್ಯನಿದ್ದನೆಂಬುದರ ಹತ್ತಿರದ ಸಲಿಗೆಯ ನೋಟ ಆ ಪತ್ರಗಳಿಂದ ನಮಗೆ ದೊರೆಯುತ್ತದೆ. ಸೀಝರ ಬೋರ್ಗಿಯಾ ಕರ್ಮವೀರನಾಗಿದ್ದನು.–ಆಡಿ ಕೆಡಿಸುವ ಬದಲು ತನ್ನ ಸಂಕಲ್ಪವನ್ನು, ಮಾಡಿಕಾಣಿಸುವ ಬಂಟನಾಗಿದ್ದನು. ತನ್ನ ಈ ವ್ಯವಹಾರ ಕೌಶಲ್ಯದ ಪ್ರಭುತ್ವದ ಅರಿವು ಅವನಿಗೆ ಚೆನ್ನಾಗಿತ್ತು. ಆ ಪ್ರಭುತ್ವದ ಉರುಬಿನಲ್ಲಿ ಅವನು ಸಂಭಾಷಣಗಳಲ್ಲಿ ಮ್ಯಾಕಿಯಾವೆಲ್ಲಿಯನ್ನು ಅಡ್ಡ ಹಾಯ್ದು ಮೀರಿ ಮನ ಬಂದಂತೆಯೇ ವರ್ತಿಸುತ್ತಿದ್ದನು. ಅವನು ಸಲಹೆ ಕೇಳಿದಾಗ ಮ್ಯಾಕಿಯಾವೆಲ್ಲಿಯು ಕೂಡಲೇ ಕಾರ್ಯರಂಗಕ್ಕೆ ಇಳಿಸಲು ತಕ್ಕವಾದ ಯೋಗ್ಯವಾದ ಸೂಚನೆಗಳನ್ನು ಕೊಡಲು ಒಪ್ಪುತ್ತಲೂ ಇರಲಿಲ್ಲ, ಬಲ್ಲವನೂ ಇದ್ದಿಲ್ಲ. ಆದರೆ ಸುತ್ತಲಿನ ವ್ಯಕ್ತಿ ವ್ಯವಹಾರಗಳ ಪ್ರಪಂಚವನ್ನು ಒಳಹೊಕ್ಕು ನೋಡಿ ತಳದ ತಥ್ಯಗಳನ್ನು ಒರೆಗೆ ಹಚ್ಚಿ, ತೂಗಿ, ತನ್ನ ಅನುಭವವನ್ನು ವಿವರವಾಗಿ ವಿಕಲನಮಾಡಿ ಈ ಧೂರ್ತ ಧೋರಣೆಯ ತರುಣ ರಾಯಭಾರಿಯು ರಾಜನೀತಿಯ ಮರ್ಮಗಳನ್ನು ಅರಿತು ಕೊಳ್ಳುತ್ತಲಿದ್ದನು.

ಹೀಗೆ ಫ್ಲೋರಾನ್ಸಿನ ಪ್ರಜಾರಾಜ್ಯದ ವತಿಯಿಂದ ಮ್ಯಾಕಿಯಾವೆಲ್ಲಿಯು ಬೋರ್ಗಿಯಾನ ರಾಜಕೀಯ ಚಟುವಟಿಕೆಗಳನ್ನು ನಿರೀಕ್ಷಿಸುವ ಕೆಲಸ ನಡೆಯಿಸಿದ್ದಾಗ, ಬೋರ್ಗಿಯಾನೂ ಸುಮ್ಮನಿರಲಿಲ್ಲ; ಮ್ಯಾಕಿಯಾವೆಲ್ಲಿಯಿಂದ ಏನಾದರೂ ಇಂಗಿತ ಹೊರಗೆಡಹಬೇಕೆಂಬ ಹಂಚಿಕೆಗಳನ್ನೇ ಮಾಡುತ್ತಿದ್ದನು. ಮಾತುಕತೆಗಳಲ್ಲಿ, ಸಲಹೆ–ಸೂಚನೆ ಕೇಳುವವರಲ್ಲಿ, ಇತರ ಚರ್ಚೆಗಳಲ್ಲಿ, ಆ ರಾಯಭಾರಿಯ ಬಾಯಿಂದ ಫ್ಲೋರಾನ್ಸದ ಒಪ್ಪಂದದ ಪ್ರಸ್ತಾಪ ಪ್ರಕಾರಗಳ ವಿಷಯ, ಒಂದು ನಿಶ್ಚಿತವಾದ ಹೇಳಿಕೆ ಹೇಗೆ ಹೊರಡಿಸಬೇಕೆಂಬುದರ ಹವಣಿಕೆಯಲ್ಲಿಯೇ, ಅದರ ಹವಣು ಅರಿತುಕೊಳ್ಳುವದರಲ್ಲಿಯೇ ತೊಡಗಿದ್ದನು. ಶಠನಿಗೆ ಸರಿಸಾಟಿಯಾದ ಪ್ರತಿಶಠನು ಸಿಕ್ಕಿದ್ದನು. ಈ 'ಫ್ಲೋರಾನ್ಸಿನ ರಾಜಕಾರಣಗಳೊಂದಿಗೆ ಯಾವ ಒಡಂಬಡಿಕೆಯ ತೀರ್ಮಾನವೂ ಆಗುವಂತಿಲ್ಲ' ಎಂದು ಸೀಝರ ಬೋರ್ಗಿಯಾನು ಉದ್ಗರಿಸುತಿದ್ದನೆಂದು ಮ್ಯಾಕಿಯಾವೆಲ್ಲಿಯು ಪತ್ರಗಳಲ್ಲಿ ಬರೆಯುತ್ತಿದ್ದನು. ಆದರೂ ಇದು ಜಲ್ಲುಹಾಕಿ ಆಳನೋಡುವ ಜೋಕೆಯಾಗಿತ್ತು. ಸೀಝರ–ಮ್ಯಾಕಿಯಾವೆಲ್ಲಿಯರ ಈ 'ದೃಷ್ಟಿಯುದ್ಧ' ಬೆಕ್ಕು ಇಲಿಗಳ ಚಿನ್ನಾಟವಂತಿತ್ತು. (ಯಾರು ಬೆಕ್ಕು ಯಾರು ಇಲಿ ಎಂಬುದಕ್ಕೆ ಮಾತ್ರ ಅವರೀರ್ವರಲ್ಲಿ ತೀವ್ರ ಮತಭೇದವಿತ್ತು !)

ಕೊನೆಗೂ ಮ್ಯಾಕಿಯಾವೆಲ್ಲಿಯದೇ ಮೇಲುಗೈಯಾಯಿತು. ವ್ಯವಹಾರಕೌಶಲ್ಯದಕ್ಕಿಂತ ರಾಜಕೀಯ ಕೌಟಿಲ್ಯವೇ ಮಿಗಿಲಾಯಿತು. ಅವನು ತನ್ನ ಸರಕಾರಕ್ಕೆ ಒಪ್ಪಿಸುವ ವರದಿಗಳ ಧ್ವನಿ ಗೆಲುವಿನದಾಯಿತು. ಫ್ಲೋರಾನ್ಸಿನ ಶಾಸನಮಂಡಳದ ಆ ಪ್ರಮುಖ ಪೀರೊಸೊಡೆರಿನಿಯೂ ಅವನ 'ಹತ್ತು ಸಮಸ್ತರೂ' ಮ್ಯಾಕಿಯಾವೆಲ್ಲಿಯ ಕರ್ತೃತ್ವಕ್ಕೆ ಮೆಚ್ಚಿ ಅವನನ್ನು ಅಲ್ಲಿಯೇ ಇರಲು ತಿಳಿಸಿದರು. ಅವನನ್ನು ಹಿಂದಕ್ಕೆ ಕರೆಯಿಸಿಕೊಳ್ಳಬೇಕೆಂಬ ಮತವು ಮಂಡಳದ ಸಲಹೆಗಾರರಲ್ಲಿ ಬಲವಾಗಿತ್ತು. ಆದಾಗ್ಯೂ ಅವನಿಗೆ ಪ್ರಶಂಸೆಯ ಪತ್ರವೂ ವೆಚ್ಚಕ್ಕಾಗಿ ೨೫ ಸುವರ್ಣ ಮುದ್ರೆಗಳೂ ಕಳಿಸಲಾದವು. ಸೀಝರ ಬೋರ್ಗಿಯಾ ಇಟಲಿಯ ಇತರ ಡ್ಯೂಕರಂತೆ, ಸಂಸ್ಥಾನಿಕರಂತೆ ಅಲ್ಲ. ಅವನೊಂದು ಹೊಸ ಶಕ್ತಿ. ಅವನೊಂದಿಗೆ ತಾತ್ಕಾಲಿಕವಾಗಿ ಒಪ್ಪಂದ–ಒಡಂಬಡಿಕೆಗಳನ್ನು ಮಾಡಿಕೊಳ್ಳುವದೇ ಉಚಿತ–ಎಂದು ಮುಂತಾಗಿ ಸೂಕ್ತಸೂಚನೆಗಳನ್ನು ಅವನು ತನ್ನ ರಾಜ್ಯದ ಪ್ರಮುಖರಿಗೆ ಕೊಡಲು ತಪ್ಪಲಿಲ್ಲ.

ಶತ್ರುವಿನ ಗುಣವನ್ನು ಲೆಕ್ಕಿಸದೇ ಇರುವದು ಅಜ್ಞಾನ; ಅವನ ಗುಣವನ್ನೆಲ್ಲ ಅಲ್ಲಗಳೆಯುವದು ಅಸೂಯೆ; ಅವನಲ್ಲಿ ಅಲ್ಲದ ಗುಣವನ್ನು ಆರೋಪಿಸಿ ಹೇಳುವದು ಬರೇ ಹೇಡಿತನ; ಅವನ ಗುಣವನ್ನು ಇದ್ದುದಕ್ಕಿಂತ ಮಿಗಿಲಾಗಿ ಬಣ್ಣಿಸಿ ಕಾಣಿಸುವದು ತನ್ನದೇ ಅಹಂಕಾರ. ಏಕೆಂದರೆ ಅಂಥ ಹಿರಿಮೆಯ ಹಗೆಯನ್ನು ತಾನು ಸೋಲಿಸುವೆನೆಂಬ ಹೆಮ್ಮೆಯನ್ನು ಆ ರೀತಿಯಾಗಿ ಕಾಣಿಸುವಂತಾಗುವದು. ಆದರೆ ಶತ್ರುವಿನ ಗುಣಗಳನ್ನು ಇದ್ದಂತೆ ಅರಿತುಕೊಂಡು ಅವನ ಯೋಗ್ಯ ಬೆಲೆಕಟ್ಟುವದು ನೀತಿನಿಪುಣನ ಲಕ್ಷಣ. ಅಂಥ ನೈಪುಣ್ಯ ಮ್ಯಾಕಿಯಾವೆಲ್ಲಿಯದಾಗಿತ್ತು.

ಈ ನೀತಿ ನೈಪುಣ್ಯದೊಡನೆ ಮ್ಯಾಕಿಯಾವೆಲ್ಲಿಯಲ್ಲಿ ಇನ್ನೊಂದು ಶಕ್ತಿಯೂ ಇತ್ತು. ಅದು ಮಾತಿನ ಜಾಣ್ಮೆ. ಮೊನೆ ಮಿರುಗಿನ ನಗೆಚಾಟಕೆಯ ಬರಹಗಾರಿಕೆ. ತನ್ನ ಅಧಿಕಾರಕ್ಕೆ ಸಂಬಂಧಿಸಿದ ಪತ್ರವ್ಯವಹಾರದ ನೀರಸತೆಯ ನಡುವೆ ಬೇಸರ ಕಳೆಯಲು ಅವನು ವಿಟಪುರುಷರಿಗೇ ಉಚಿತವೆನಿಸಬಹುದಾದ ವಿನೋದವುಳ್ಳ ಪತ್ರಗಳನ್ನು ಬರೆಯುತ್ತಿದ್ದನು. ಅವನ ಈ ವಿನೋದವೂ ಮಂತ್ರಿವಾದದ ಮಿತ್ರಮಂಡಳಿಯಲ್ಲಿ ಒಳ್ಳೇ ಸ್ವಾರಸ್ಯವಾಗಿ ತೋರುತ್ತಿರಬೇಕು. ಅವನ ಮಿತ್ರನೊಬ್ಬನು ಹೀಗೆ ಅವನಿಗೆ ಉತ್ತರವನ್ನು ಬರೆಯುತ್ತಾನೆ. 'ಬಿಯಾಗಿಯೇ ಮತ್ತು ಇತರ ಮಿತ್ರರಿಗೆ ನೀನು ಬರೆದ ಪತ್ರಗಳಿಗಾಗಿ ನಾವೆಲ್ಲ ಕೃತಜ್ಞರಿದ್ದೇವೆ. ಅವು ಎಲ್ಲರಿಗೂ ಅತಿ ಆಮೋದವನ್ನು ಕೊಟ್ಟವು. ಅವುಗಳಲ್ಲಿಯ ನಗೆಚಾಟಿಕೆಯ ಮಾತುಗಳೂ ಜಾಣ್ನುಡಿಗಳೂ ನಮ್ಮನ್ನು ದವಡೆಕಳಚುವವರೆಗೂ ನಗುವಂತೆ ಮಾಡಿದವು.'

ಕೆಲವೊಂದುಸಲ ಮ್ಯಾಕಿಯಾವೆಲ್ಲಿಯು ಏಕಾಂತವಾಸಿಯಾಗಿಬಿಡುತ್ತಿದ್ದನು. ವಾಚನ–

ವ್ಯಾಸಂಗ ಮತ್ತು ವಿಚಾರ-ಚಿಂತನೆಯಲ್ಲಿ ಮಗ್ನನಾಗಿ ಕೂಡ್ರುತಿದ್ದನು. ಬುವೊನ-ಕೊರ್ಸಿ ಎಂಬ ಮಿತ್ರನಿಗೆ ಅವನು ಆಗಾಗ್ಗೆ ಪುಸ್ತಕಗಳಿಗಾಗಿಯೂ ಹಣಕ್ಕಾಗಿಯೂ ಇತರ ಸಹಾಯಕ್ಕಾಗಿಯೂ ಬರೆಯುತಿದ್ದನು. ಅವನ ಈ ಸರ್ವಭಕ್ಷಕ ವಾಚನದ ಆತುರಕ್ಕೆ ಈ ಗೆಳೆಯನ ಉದ್ಗಾರಗಳೇ ಸಾಕ್ಷಿ. 'ಪ್ಲುಡಾರ್ಕನ ಜೀವನ ಚರಿತ್ರೆಗಳು ಎಂಬ ಗ್ರಂಥಕ್ಕಾಗಿ ನಾವು ಹುಡುಕಾಡುತಿದ್ದೇವೆ. ಆ ಗ್ರಂಥವು ಫ್ಲೋರಾನ್ಸದಲ್ಲಿ ಎಲ್ಲಿಯೂ ಸಿಗುವಂತಿಲ್ಲ. ಅವಕ್ಕಾಗಿ ವ್ಹೇನಿಸಿಗೆ ಬರೆಯಬೇಕಾಗಿದೆ. ಆತನಕ ತಾಳ್ಮೆಯಿಂದ ಇರಬಾರದೇ ? ನಿಜವನ್ನು ಹೇಳುವದಾದರೆ, ಇಷ್ಟೆಲ್ಲ ವಸ್ತುಗಳನ್ನು ಬೇಡುವ ನೀನು ನಮಗೊಂದು ಚಿಂತೆಯೇ ಸರಿ !'

ಒಂದೆಡೆಗೆ ಪ್ರಾಚೀನ ಗ್ರಂಥಗಳ ಪರಿಶೀಲನೆಯು ನಡೆಯುತ್ತಿರುವಾಗಲೇ, ಮ್ಯಾಕಿಯಾವೆಲ್ಲಿಯು ಅರ್ವಾಚೀನ ಅನುಭವವನ್ನೂ ಆಯ್ದು ಪಡಕೊಳ್ಳುತ್ತಿದ್ದನು. ಸೀಝರ ಬೋರ್ಗಿಯಾನಲ್ಲಿ ಅವನಿಗೆ ರಾಜತ್ವದ ಒಂದು ಮಾದರಿ ಕಂಡಿತು. ಅದರದೇ ಆದರ್ಶೀಕರಣವನ್ನು ತನ್ನ 'ನರೇಂದ್ರ' ಎಂಬ ಗ್ರಂಥದಲ್ಲಿ ಅವನು ಮಾಡಿದನು. ಸೀಝರನ ಸಹವಾಸದಲ್ಲಿಯೇ ಅವನಿಗೆ ರಾಜ್ಯತಂತ್ರದ ಮತ್ತು ಆಡಳಿತದ ಕಲೆಯ ಪ್ರಥಮ ಪಾಠಗಳು ದೊರೆತವು. ರಾಜನೀತಿಯನ್ನು ಶುದ್ಧ ನೀತಿಯಿಂದ ಬೇರ್ಪಡಿಸಿ ವ್ಯವಹರಿಸುವದು ಹೇಗೆಂಬುದರ ಕಲ್ಪನೆಯು ಅವನಿಗೆ ಅಲ್ಲಿಯೇ ಆಯಿತು.

ಬೋರ್ಗಿಯಾನಲ್ಲಿ ಇನ್ನೂ ಎರಡು ಲಕ್ಷಣಗಳನ್ನು ಅವನು ಮಹತ್ವದವಾಗಿ ಕಂಡನು. ಅವು, ಆತನು ಗೆದ್ದ ಪ್ರಾಂತಗಳ ಆಡಳಿತದ ಕ್ರಮ ಮತ್ತು ಸಂಬಳಕ್ಕೆ ಕೊಂಡು ತಂದ ದಂಡುಗಳ ಬದಲು ತನ್ನದೇ ಸಂಸ್ಥಾನದ ಪ್ರಜೆಗಳೊಳಗಿಂದ ಜನರನ್ನು ಆಯ್ದು ಕೂಡಿಸಿ ಪಡೆಗಳನ್ನು ಕಟ್ಟುವದು. ಆಗಿನ ಇಟಾಲಿಯನ್ ನಗರ ರಾಜ್ಯಗಳು ಯಾರೊಡನೆಯೂ ಯಾರ ಸಲುವಾಗಿಯೂ ಹೋರಾಡಲು ಸಿದ್ಧರಿದ್ದ ತೋಳು ತಿಂಡಿಯ ಪುಂಡರನ್ನು ಸಾಕಷ್ಟು ಸಂಬಳಕ್ಕೆ ಬಾಡಿಗೆಗೆ ತಂದು, ತಮ್ಮ ರಕ್ಷಣೆಯ ಯೋಜನೆಯನ್ನು ಮಾಡುತ್ತಿದ್ದರು. ಇಂಥ ಬಾಡಿಗೆಯ ಬಂಟರು, ತೀರ ನಂಬಿಗೆಗೇಡಿಯಾಗಿರುತಿದ್ದರು. ಅವರಿಗೆ ತಮ್ಮ ದೊರೆ ತಮ್ಮ ದೇಶವೆಂಬ ಅಭಿಮಾನವಿರುತಿದ್ದಿಲ್ಲ. ಹೆಚ್ಚು ಹಣ ಕೊಟ್ಟವರ ಪಕ್ಷವನ್ನು ಅವರು ಕಟ್ಟುತ್ತಿದ್ದರು. ಈ ಪದ್ಧತಿಯ ಅಯೋಗ್ಯತೆಯನ್ನು ಮ್ಯಾಕಿಯಾವೆಲ್ಲಿಯು ಮೊದಲು ಕಂಡುಕೊಂಡನು. ೧೫೦೭ ರಲ್ಲಿ ತನ್ನ ಫ್ಲೋರಾನ್ಸ ರಾಜ್ಯದ ಸಂರಕ್ಷಣೆಗಾಗಿ ಒಂದು ರಾಷ್ಟ್ರೀಯ ಸೇನೆಯನ್ನು ಕಟ್ಟುವ ಯೋಜನೆಯನ್ನು ಅವನು ಸೋಡೆರಿನಿಗೆ ಸೂಚಿಸಿದನು. ಸೂಚನೆಯು ಮಾನ್ಯವಾಯಿತು, ಮ್ಯಾಕಿಯಾವೆಲ್ಲಿಯನ್ನು ಕಾರ್ಯದರ್ಶಿಯಾಗಿ ನೇಮಿಸಲಾಯಿತು. ಅವನ ವಶಕ್ಕೆ ಒಂದು ಮಂತ್ರಿ ವಿಭಾಗ ಒಪ್ಪಿಸಲಾಯಿತು.

ಸೇನೆಯ ಆಯ್ಕೆಗಾಗಿ ಪ್ರಾಂತದ ವಿಭಾಗಗಳನ್ನು ಕಲ್ಪಿಸಲಾಯಿತು. ಪ್ರತಿ ವಿಭಾಗದಿಂದ, ಇಂತಿಷ್ಟು ದಂಡು ಸರಕಾರಕ್ಕೆ ಬಂದು ಸಲ್ಲಬೇಕೆಂಬ ಕಡ್ಡಾಯ ಮಾಡಲಾಯಿತು. ದೈತ್ಯಾವೇಶದಿಂದ ಈ ಹೊಸ ಯೋಜನೆಯ ಯಶಕ್ಕಾಗಿ ಮ್ಯಾಕಿಯಾವೆಲ್ಲಿಯು ದುಡಿದನು. ಪ್ರತಿಯೊಂದು ಚಿಕ್ಕ ಪುಟ್ಟ ಕೆಲಸಕ್ಕೆ ಕೂಡ, ತಾನೇ ಲಕ್ಷ್ಯ ಪೂರೈಸತೊಡಗಿದನು. ದಂಡು ಕೂಡಿಸುವ ಯೋಜನೆಯೇನೋ ಯಶಸ್ವಿಯಾಯಿತು. ಆದರೆ ದುರ್ದೈವದಿಂದ ಒಂದು ಪ್ರಮಾದವಾಯಿತು. ಮ್ಯಾಕಿಯಾವೆಲ್ಲಿಯೂ ಆತನ ಸಹಕಾರಿಯಾದ ಸೊಡೆರಿನಿಯೂ ಅಯೋಗ್ಯನೊಬ್ಬನನ್ನು ದಂಡನಾಯಕನನ್ನಾಗಿ ಮಾಡಿದರು. ಆ ಅಯೋಗ್ಯನು ಒಬ್ಬ ಸ್ಪೇನದ ನಾಗರಿಕ. ಮೊದಲು ಸೀಝರ ಬೋರ್ಗಿಯಾನ ಕೆಳಗೆ ಕೆಲಸಮಾಡಿ ಸುಪ್ರಸಿದ್ಧನಾದವನು.

ಆ ಸಮಯದ ಕೆಲವು ವರ್ಷಗಳು ಮ್ಯಾಕಿಯಾವೆಲ್ಲಿಯ ಜೀವನದಲ್ಲಿ ಅತಿ ಚಟುವಟಿಕೆಯವು. ಪೀಸಾದ ಗೆಲುವಿಗಾಗಿ ಯುದ್ಧ ನಡೆದಿತ್ತು. ಆ ಗೆಲುವು ಫ್ಲೋರಾನ್ಸಿನ ಪ್ರಜಾರಾಜ್ಯದ ಎಲ್ಲ ಗೆಲವುಗಳಲ್ಲಿ ಹಿರಿಯದು. ಆ ಯುದ್ಧಕ್ಕಾಗಿ ಮ್ಯಾಕಿಯಾವೆಲ್ಲಿಯು ಹಗಲಿರುಳು ದುಡಿದನು. ದಂಡಿನ ಪಾಳ್ಯದಿಂದ, ಪಡೆಗಳ ಸಲುವಳಿಯನ್ನು ಎತ್ತಲು ಪರಗಣೆಗಳ ತನಕ ಓಡಾಡಿದನು. ಆದರೆ ಈ ಎಡಬಿಡದ ದುಡಿತದ ನಡುವೆಯು ಅವನಿಗೆ ಬರವಣಿಗೆ ಮೋಹವನ್ನು ತಡೆಯುವದಾಗಲಿಲ್ಲ. ೧೫೦೪ ರಲ್ಲಿ 'ಇಟಲಿಯ ಐತಿಹ್ಯಗಳು' ಎಂಬ ಕವನವನ್ನು ಅವನು ರಚಿಸಲು ಆರಂಭಿಸಿದನು. ಆ ಐತಿಹ್ಯಗಳೆಂದರೆ ಅದುವರೆಗಿನ ೧೦ ವರ್ಷಗಳಲ್ಲಿ ಘಟಿಸಿದ ಸಂಗತಿಗಳು. ಇದಲ್ಲದೇ ಒಂದು ಸುಖಾಂತ ನಾಟಕವನ್ನು ಬರೆದನು. ಅದರ ಹೆಸರು 'ಮುಖವಾಡಗಳು'.

ಆನಂತರ ಅವನು ಮತ್ತೆ ರಾಯಭಾರಗಳಿಗಾಗಿ ಪ್ರವಾಸ ಮಾಡಿದನು. ಪೆರುಗಿಯಾ ಮತ್ತು ಸೀನ್ನಾ ಎಂಬಲ್ಲಿ. ಅಲ್ಲದೆ ಅಂದಿನ ಕ್ಯಾಥೊಲಿಕ ಜಗದ್ಗುರು ೨ನೇ ಜ್ಯೂಲಿಯಸ್‌ನ ಜತೆಗೆ ಎಮಿಲಿಯಾ ಪ್ರಾಂತಕ್ಕೆ ಹೋದನು. ಅಲ್ಲಿ ಧರ್ಮಸಂಸ್ಥೆಯ ವಿರುದ್ಧ ಎದ್ದ ಬಂಡಾಯವನ್ನು ತಗ್ಗಿಸಲು ಜಗದ್ಗುರು ಪೋಪನು ಹೋಗಿದ್ದನು. ಆ ಸಮಯಕ್ಕೆ ನಮ್ಮ ಇನ್ನೊಬ್ಬ ಚರಿತ್ರನಾಯಕ ಮೈಕೆಲೇಂಜೆಲೋ ಮತ್ತು ಇವನ ಭೆಟ್ಟಿ ಕೂಡಿಬಂದಿತು. ಎಂಜೆಲೊ ಕೇಳಿದನು, 'ನಮ್ಮ ಪ್ರತಿಮೆಯ ಕೈಯಲ್ಲಿ ಪುಸ್ತಕವನ್ನು ಕೆತ್ತಲೇ ?.' ದಂಡಿನ ಪಡೆಗಳನ್ನು ಕಟ್ಟಬಲ್ಲ ಆ ರಾಜನೀತಿಯ ಮಲ್ಲನು 'ಆಗದು, ಕೈಯಲ್ಲಿ ಕತ್ತಿಯನ್ನಿಡಬೇಕು !' ಎಂದು ಉತ್ತರವಿತ್ತನು. ಪುಸ್ತಕ-ಲೆಕ್ಕಣಿ-ಮಿದುಳು-ಇವೆಲ್ಲವೂ ಅವನಿಗೆ ಬಗೆಬಗೆಯ ಕತ್ತಿಗಳೇ. ರಾಜ

ನೀತಿಯೂ ಒಂದು ಯುದ್ಧತಂತ್ರ. ಅಂದಮೇಲೆ ಮ್ಯಾಕಿಯಾವೆಲ್ಲಿ ಒಬ್ಬ ಯೋಧನೇ ಸರಿ.

೧೫೦೭ ರಲ್ಲಿ ಚಕ್ರವರ್ತಿ ಮ್ಯಾಕ್ಸಮಿಲಿಯನ್‌ನು ರೋಮದಲ್ಲಿ ತನ್ನ ಪಟ್ಟಾಭಿಷೇಕದ ಸಿದ್ಧತೆಯನ್ನು ಮಾಡಿದನು. ಅಭಿಷೇಕವನ್ನು ಅಭೂತ ಪೂರ್ವ ವೈಭವ ವಿಜೃಂಭಣೆಯಿಂದ ಜರುಗಿಸಬೇಕೆಂದು ಚಕ್ರವರ್ತಿಯ ಅಭಿಲಾಷೆ ಇತ್ತು. ಅದಕ್ಕಾಗಿ ನಗರರಾಜ್ಯಗಳಿಂದ ವರ್ಗಣಿಯನ್ನು ಎತ್ತುವ ಪದ್ಧತಿಯನ್ನು ಆರಂಭಿಸಲಾಯಿತು. ಫ್ಲೋರಾನ್ಸದ ಪ್ರಜಾರಾಜ್ಯವು ವರ್ಗಣಿಯನ್ನು ತೆರಲು ಸಿದ್ಧವಿತ್ತು; ಆದರೆ ವರ್ಗಣಿಯ ಆಕಾರ ವಿಪರೀಪ ದೊಡ್ಡದಾಯಿತೆಂದು ಭಾವಿಸಿತು. ಆ ಕುರಿತು ಮಾತುಕತೆ ನಡೆಸಿ ತೆರದ ಹೊರೆ ಕಡಿಮೆ ಮಾಡಿಸಲಿಕ್ಕೆ ಮ್ಯಾಕಿಯಾವೆಲ್ಲಿಯು ಮ್ಯಾಕ್ಸಮಿಲಿಯನ್‌ನ ಆ ಸ್ಥಾನಕ್ಕೆ ಕಳುಹಿಸಲ್ಪಟ್ಟನು. ಆಗ ಮ್ಯಾಕ್ಸಮಿಲಿಯನ್‌ನ ರಾಜಧಾನಿಯು ಬೊರ್ಝಾನ್ ಎಂಬಲ್ಲಿ ಇತ್ತು. ಮ್ಯಾಕಿಯಾವೆಲ್ಲಿಯು ಸ್ವಿಟ್ಝರ್ಲಂಡವನ್ನು ಸೇರಿ ಜಿನೇವಾದ ಮಾರ್ಗವಾಗಿ ಅಲ್ಲಿಗೆ ಹೋದನು. ಬರೇ ಹೋಗಿ ತಲ್ಪುವದಕ್ಕೆ ಪ್ರವಾಸಕ್ಕೆ ಹೊರಡುವವನು ಮ್ಯಾಕಿಯಾವೆಲ್ಲಿಯಲ್ಲ. ಮಾರ್ಗದಲ್ಲಿ ಅವನು ಸ್ವಿಸ್ ಮತ್ತು ಜರ್ಮನ ಜನಜೀವನವನ್ನು ಅವಲೋಕಿಸಿ ಅಭ್ಯಾಸಿಸಿದನು. ಜರ್ಮನ ಜನಾಂಗದ ರಾಜಕೀಯ ಯೋಗ್ಯತೆ ಏನೆಂಬುದನ್ನು ತೀರ್ಮಾನಿಸಿದನು. ಆ ಜನಾಂಗದ ಸಾಮರ್ಥ್ಯ ಮತ್ತು ದೌರ್ಬಲ್ಯಗಳೆರಡೂ ಯಾವದರಲ್ಲಿವೆಯೆಂಬುದನ್ನು ತಿಳಿದುಕೊಂಡನು. ಇದೆಲ್ಲ ಅವನು ಬರೆದಿಟ್ಟ ಟಿಪ್ಪಣೆಗಳಿಂದ ಗೊತ್ತಾಗುತ್ತದೆ. ಈ ಲೋಕಾವಲೋಕನೆಯ ಯತ್ನದಲ್ಲಿ ಅವನ ರಾಜಕೀಯ ಮತ್ತು ಐತಿಹಾಸಿಕ ದೃಷ್ಟಿಯ ನಿರೀಕ್ಷಣ ಹಾಗೂ ನಿರ್ಣಯದ ಶಕ್ತಿಯು ವ್ಯಕ್ತವಾಗುತ್ತದೆ. ಮುಂದೆ ೧೫೧೦ ರಲ್ಲಿ, ೧೨ ನೆ ಲುಯಿಯ ಬಳಿಗೆ ಫ್ರಾನ್ಸಕ್ಕೆ ಹೋದಾಗಲೂ ಇದೇ ವಿಮರ್ಶಾ ವಿಚಕ್ಷಣತೆಯನ್ನು ಅವನು ತನ್ನ ಪರ್ಯಟನಗಳಲ್ಲಿ ಪ್ರಕಟಿಸಿದನು.

ಮ್ಯಾಕಿಯಾವೆಲ್ಲಿಯು ೧೫೦೮ ರಲ್ಲಿ ಜೂನ ತಿಂಗಳ ಸುಮಾರಿಗೆ ಜರ್ಮನಿಯಿಂದ ಮರಳಿದನು. ಅವನ ಚಟುವಟಿಕೆಗಳ ಫಲವಾಗಿಯೇ ಪೀಸಾಯುದ್ಧವು ಯಶಸ್ವಿಯಾಗಿ ಮುಕ್ತಾಯ ಹೊಂದಿತು. ೧೨ ವರ್ಷಗಳ ಮುತ್ತಿಗೆಯ ನಂತರ ಪೀಸಾ ಕೈವಶವಾಯಿತು. ಆದರೆ ಮೂರು ವರ್ಷಗಳ ನಂತರ, ಸ್ಪೇನದ ಮತ್ತು ಪೋಪನ ದಂಡುಗಳು ಫ್ಲೋರಾನ್ಸವನ್ನು ಆಕ್ರಮಿಸಿ ಅಲ್ಲಿ ತಳವೂರಿದವು. ಸೊಡೆರಿನಿಯು ಪದಚ್ಯುತನಾದನು. ಮೆಡಿಸಿ ಕುಲದ ಪ್ರಮುಖನು ವಿಜಯ ದರ್ಪದಿಂದ ಅಧಿಕಾರ ಪಟ್ಟಕ್ಕೆ ಮರಳಿದನು-ಮತ್ತು ಮ್ಯಾಕಿಯಾವೆಲ್ಲಿಯು ದೇಶಭ್ರಷ್ಟನಾದನು. ಕಷ್ಟಕಾಲ ಇಷ್ಟಕ್ಕೇ ಮುಗಿಯಲಿಲ್ಲ. ೧೫೧೩ ರಲ್ಲಿ ಪೀತ್ರೋ, ಪೆಗ್ಗೊಲೊ ಬೊಸ್ಕೋಲಿ

ಯೆಂಬುವನು ಒಗೆದ ಒಂದು ಕಾಗದದಲ್ಲಿ ಮ್ಯಾಕಿಯಾವೆಲ್ಲಿಯ ಹೆಸರು ಬರೆದದ್ದು ಸಿಕ್ಕಿತು. ಈ ಬೊಸ್ಕೊಲಿಯು ಸರಕಾರದ ವಿರುದ್ಧ ಒಂದು ಒಳಸಂಚನ್ನು ಆರಂಭಿಸಿದ್ದನು.

ಒಳಸಂಚಿನಲ್ಲಿ ಮ್ಯಾಕಿಯಾವೆಲ್ಲಿಯ ಅಂಗವೇನೂ ಇದ್ದಿಲ್ಲ. ಆದಾಗ್ಯೂ ಸಂಚುಗಾರನ ಸಂಪರ್ಕ ಅವನ ಹೆಸರಿಗೆ ಬಂದಿತ್ತಲ್ಲವೆ? ಅದರ ಫಲವನ್ನು ಅವನು ಸವಿಯಲೇ ಬೇಕಾಯಿತು. ಅವನನ್ನೂ ಹಿಡಿದು ಸೆರೆಯಲ್ಲಿಟ್ಟರು; ಚಿತ್ರಹಿಂಸೆಗೆ ಗುರಿ ಮಾಡಿದರು. ಅವನನ್ನು ಶೂಲಮಣೆಯ ಮೇಲೆ ಬಿಗಿದು ಆರು ಸುತ್ತು ತಿರುಗಿಸಿದರು. ಅಂಥ ಅಸಾಧ್ಯ ನರಕ ಯಾತನೆಯ ನಡುವೆಯೂ ಅವನು ಫ್ಲೋರಾನ್ಸದ ಹೊಸ ಅಧಿಪತಿ ಮೆಡಿಸಿಯ ಕುರಿತು ಅಣಕದ ಪದ್ಯಗಳನ್ನು ರಚಿಸಿದನು. ಅವನ ಅಪ್ರತಿಮ ಧೀರ ವೃತ್ತಿಯ ದ್ಯೋತಕವಿದು! ಅವನನ್ನು ಸೆರೆಯಿಟ್ಟ ಕೋಣೆಯು ಹೊಲಸು ನಾರುತ್ತಿತ್ತು. ಗೋಡೆಗಳೆಲ್ಲ ಬುರುಸುಗಟ್ಟಿ ಕ್ರಿಮಿಕೀಟಗಳಿಂದ ತುಂಬಿದ್ದವು. ದೊಡ್ಡದೊಡ್ಡ ಸೊಳ್ಳೆಗಳಂಥ ಕ್ರಿಮಿಗಳು ಸುತ್ತಲೂ ಹರಿದಾಡುತ್ತಿದ್ದವು. ಕೋಣೆಯ ಹೊರಗೆಲ್ಲ ನರಕದ ಕೋಲಾಹಲ–ಕಿವುಡುಗಟ್ಟುವಂಥ ಗಲಭೆ; ಒಬ್ಬ ಸೆರೆಯಾಳಿಗೆ ಸಂಕೋಲೆ ಬಿಗಿಯು ತ್ತಿದ್ದಾರೆ; ಇನ್ನೊಬ್ಬನ ಸರಪಳಿಗಳನ್ನು ಸಡಲಿಸುತ್ತಿದ್ದಾರೆ, ಮೂರನೆಯುವನನ್ನು ನೆಲಬಿಟ್ಟು ಎತ್ತರಕ್ಕೆ ನೇತುಹಾಕುತ್ತಿದ್ದಾರೆ–ಅವನು ಅಸಾಧ್ಯ ಒದರಿಕೊಳ್ಳುತ್ತಿದ್ದಾನೆ. ಮೆಡಿಸಿಗೆ ಮುಡಿಪಾದ ಒಂದು ಪದ್ಯದಲ್ಲಿ, ಕೆಲವು ಥ್ರಶ್ ಹಕ್ಕಿಗಳನ್ನು ಸರ್ವಾಧಿಕಾರಿಗೆ ಕಾಣಿಕೆಯಾಗಿ ಕಳಿಸಿ, ತನ್ನನ್ನು ಹೀಗೆ ಹರಿದುತಿನ್ನುವ ಹಗೆಗಳಿಗೆ ಆ ಹಕ್ಕಿಗಳನ್ನು ಬಲಿಯಾಗಿ ಕೊಡಬೇಕೆಂದು ಬರೆದುಕೊಂಡನು. ಆ ಹಕ್ಕಿಗಳನ್ನು ಮುರಿದು ತಿಂದಾದರೂ ಹಗೆಗಳು ತನ್ನನ್ನು ಈ ರೀತಿ ಅಮಾನುಷವಾಗಿ ಯಾತನೆ ಗೊಳಿಸುವದನ್ನು ಬಿಟ್ಟಾರೆಂದು ಅವನ ಆಸೆ. 'ಇನ್ನು ಥ್ರಶ್ ಹಕ್ಕಿಯ ಮೈಯಲ್ಲಿ ಮಾಂಸವೇ ಕಡಿಮೆ. ಅವು ತೀರ ಬಡಕಲು ಎಂದರೆ ನಾನೂ ಅಷ್ಟೇ ಬಡಮೈಯ ಪ್ರಾಣಿ, ಆದಾಗ್ಯೂ ಅವರು ನನ್ನನ್ನು ಹರಿದು ಬಾಯ್ತುಂಬ ತುತ್ತುಗಳಾಗಿ ತಿನ್ನುತ್ತಿದ್ದಾರೆ!'–ಎಂದು ವ್ಯಂಗ್ಯಮಾಡಿದನು.

ಅವನನ್ನೂ ಹಿಂಸೆಗೆ ಗುರಿಮಾಡಿದ ಅಧಿಪತಿ ಗ್ಯೂಲಿಯಾನ್ನೊಡ ಮೆಡಿಸಿ. ಅನಂತರ ಬಂದವನು ಗಿಯೊವಾನ್ನಿಡ ಮೆಡಿಸಿ. ಗಿಯೊವಾನ್ನಿಯು ಪೋಪ ಪದಕ್ಕೆ ಆಯ್ದು ಬಂದಾಗ ಮ್ಯಾಕಿಯಾವೆಲ್ಲಿಯನ್ನು ಬಿಡುಗಡೆ ಮಾಡಿದನು. ತನ್ನ ಕಾರಾ ವಾಸಾವಧಿ ಕರಾಳ ದಿವ್ಯದ ಕುರಿತು ಮ್ಯಾಕಿಯಾವೆಲ್ಲಿಗೆ ಅಭಿಮಾನವೇ ಅನಿಸಿತು. ಆ ವಿಪತ್ತು ಅವನ ಸತ್ವವನ್ನು ಪರೀಕ್ಷಿಸಿತು. ತನ್ನಲ್ಲಿ ಇಷ್ಟು ಧೈರ್ಯ ಇಷ್ಟು

ಧೃತಿ ಇದೆಯೆಂಬುದನ್ನು ಅವನು ಆಗಲೇ ಮನಗಂಡನು. ಆ ಬಗ್ಗೆ ಅವನಿಗೆ ತುಂಬ ಹಿಗ್ಗೆನಿಸಿತು. ತಾನು ಆತನಕ ತಿಳಿದುದಕ್ಕೂ ಮಿಕ್ಕಿ ತನ್ನಲ್ಲಿ ಸತ್ವವಿದೆ-ಮಹತ್ವವಿದೆ-ಎಂಬುವನ್ನು ಕಂಡುಕೊಂಡ ಮೇಲೆ ಯಾರಿಗೆ ಅಭಿಮಾನ ವೆನಿಸಲಿಕ್ಕಿಲ್ಲ ?

ಸೆರೆಯಿಂದ ಹೊರಬಿದ್ದ ಮೇಲೆ ಮ್ಯಾಕಿಯಾವೆಲ್ಲಿಯೂ ಫ್ಲೋರಾನ್ಸದಿಂದ ಹತ್ತಿರವೇ ಸ್ಯಾನ್ ಕ್ಯಾಸ್ಕಿಯಾನೋ ಎಂಬಲ್ಲಿ ಒಂದು ಹೊಲದಲ್ಲಿ ಹೋಗಿ ವಾಸಿಸಿದನು. ಆ ವನವಾಸದಲ್ಲಿ ಬೇರೆ ಯಾವದೇ ಉದ್ಯೋಗವಿಲ್ಲದೇ, ಅವನ ಉಗ್ರ ಕ್ರಿಯಾ ತತ್ಪರತೆಯ ಮನಸ್ಸು ಬರಹಗಾರಿಕೆಯಲ್ಲಿ ಮೊಗವನ್ನು ಪಡೆಯಿತು. ಈ ಅವಧಿ ಯಲ್ಲಿಯೇ ಮ್ಯಾಕಿಯಾವೆಲ್ಲಿಯ ಇತಿಹಾಸಪ್ರಸಿದ್ಧ ಕಾರ್ಯವು ಜರುಗಿತು. ತನ್ನ ವಿಶ್ವವಿಖ್ಯಾತವಾದ ರಾಜಕೀಯ ಪ್ರಬಂಧಗಳನ್ನು, ಉಜ್ಜ್ವಲ ಸುಖಾಂತ ನಾಟಕ ಗಳನ್ನು ಅವನು ಅಲ್ಲಿಯೇ ಬರೆದನು. ಆ ಉತ್ಕೃಷ್ಟ ವಾಙ್ಮಯವೆಲ್ಲ ಅವನ ಆ ಹೊಲದಲ್ಲಿಯ ಲೇಖನ ಕೃಷಿಯ ಫಲವು. ಈ ಕೃಷಿಯ ನಡುವೆ ಅವನು ತೀರ ಗ್ರಾಮ್ಯ ಮತ್ತು ಅಶ್ಲೀಲ ಪತ್ರವ್ಯವಹಾರವನ್ನೂ ನಡೆಯಿಸುತ್ತಿದ್ದನು. ಅವನ ವ್ಯಕ್ತಿತ್ವದಲ್ಲಿ ಒಂದು ಆಳವಾದ ಬಿರುಕು ಇತ್ತೇನೊ. ಒಂದೆಡೆಗೆ ಅವನಿಗೆ ಮೇಧಾವಿಗಳ ಮುತ್ಸದ್ದಿಗಳ ಸಹವಾಸವೂ, ರಾಜ್ಯವ್ಯವಹಾರದ ತತ್ವಚರ್ಚೆಯೂ, ಕಾವ್ಯಶಾಸ್ತ್ರವಿನೋದವೂ, ಎಷ್ಟು ಮೆಚ್ಚಿಗೆಯೋ, ಅಷ್ಟೇ ತೀರ ಕೀಳುತರಗತಿಯ ವ್ಯಸನಿಗಳ ಹಾಗೂ ವಿಟಪುರುಷರ ವಿಕಟ ಮತ್ತು ಲಂಪಟ ಸಮಾಗಮವು ಅವನಿಗೆ ಸೇರುತ್ತಿತ್ತು. ಫ್ಲೋರಾನ್ಸದ ಸುಸಂಸ್ಕೃತರ ಸಂಪರ್ಕ ತಪ್ಪಿದ ಮೇಲೆ ಅವನು ಜ್ಞಾನಿಗಳ ಗೆಳೆತನದ ಕೊರತೆಯನ್ನೂ ಸೆರೆಗುಡುಕರ ಸಹವಾಸದಿಂದಲೂ ಆಗಂತುಕ ಕಾಮವ್ಯವಹಾರದ 'ಪ್ರಕರಣ'ಗಳಿಂದಲೂ ತುಂಬಿಕೊಂಡನು. ಒಮ್ಮೆ ಅವನು ದೂರದರ್ಶಿ ಮರ್ಮಸ್ಪರ್ಶಿ ರಾಜಕೀಯ ತತ್ವವೇತ್ತನಾದರೆ, ಇನ್ನೊಮ್ಮೆ ವ್ಯಸನಲೋಲುಪ ಸ್ವೈರಾಚಾರಿಯಾಗುತ್ತಿದ್ದನು: 'ವಿದ್ವತ್‌ಗೋಷ್ಟಿ'ಯಲ್ಲಿ ಒಂದು ಕ್ಷಣ, 'ಸುರಮತ್ತ ಕಲಹ'ದಲ್ಲಿ ಇನ್ನೊಂದು ಕ್ಷಣ-ಹೀಗೆ ಅವನ ಸಂಸಾರವು ಅಮೃತಮಯವೂ ಇತ್ತು. ವಿಷಮಯವೂ ಆಗಿತ್ತು.

ಅವನ ದಿನಚರ್ಯೆ ಹೇಗಿತ್ತು ? 'ನಾನು ನಸುಕಿಗೆ ಸೂರ್ಯನ ಸಂಗಡವೇ ಏಳುತೇನೆ. ಕೂಡಲೇ, ಹೊಲಕ್ಕೂ ಅಡವಿಗೂ ಹೋಗಿ ಕೆಲವು ತಾಸು ಅಲ್ಲಿಯ ನಿನ್ನೆ ನಡೆದ ಕೃಷಿ-ಕೆಲಸಗಳ ನಿರೀಕ್ಷಣೆಯಲ್ಲಿ, ಕಳೆಯುತ್ತೇನೆ. ಕೆಲವು ಸಮಯ ಅಲ್ಲಿ ಮರಕಡಿಯುವವರೊಡನೆ ಸುಖ ದುಃಖದ ಸಮಾಚಾರದಲ್ಲಿ ಸಾಗುತ್ತದೆ. ತಮ್ಮ ತಮ್ಮ ನೆರೆಹೊರೆಯವರ ಕಷ್ಟಗಳನ್ನು ಅವರು ನನಗೆ ನಿವೇದಿಸುತ್ತಾರೆ. ಅಡವಿಯಿಂದ ಬಂದೊಡನೆ ಒಂದು ಝರಿಗೆ ಹೋಗುತ್ತೇನೆ. ಅಲ್ಲಿಂದ ನನ್ನ

ಪ್ರೀತಿಯ ಏಕಾಂತದ ಸ್ಥಳಕ್ಕೆ (ಹಾದಿ ತಪ್ಪಿದ ಹಕ್ಕಿಗಳಿಗೆ ಅದೊಂದು ಆಶ್ರಯ ಸ್ಥಳ) ಏರಿ ಕೂಡ್ರುತ್ತೇನೆ. ಕಂಕುಳಲ್ಲಿ ಡಾಂತೆ, ಪೆಟ್ರಾರ್ಷ ಯಾವನೊಬ್ಬನ ಕಾವ್ಯ ಒಯ್ಯುತ್ತೇನೆ. ಅವರ ಶೃಂಗಾರಚರಿತ್ರೆಗಳನ್ನು ಓದುವಾಗ ನನ್ನವೂ ಅಂಥ ಕಾಮೋನ್ಮಾದದ ಪ್ರಸಂಗಗಳೂ ನೆನಪಾಗುತ್ತವೆ. ಈ ರಸಸ್ಮರಣೆಯಲ್ಲಿ ಕಾಲವು ತ್ವರೆಯಿಂದ ಕಳೆಯುತ್ತದೆ. ಆಮೇಲೆ ನಾನು ಹಾದಿಯ ಪಕ್ಕದಲ್ಲಿಯ ಒಂದು ಉಪಹಾರ ಗೃಹವನ್ನು ಸೇರುವೆನು. ಅಲ್ಲಿ ಬರಹೋಗುವ ಹಾದಿ ಹೋಕರೊಡನೆ ಹರಟೆ ಹೊಡೆಯುತ್ತ, ಅವರು ಬಂದ ಹಾದಿಯ, ಹೊರಟ ಊರಿನ ಸಾದ್ಯಂತ ಸಮಾಚಾರವನ್ನು ಕೇಳಿ ತಿಳಿದುಕೊಳ್ಳುವೆನು. ವಿವಿಧ ವಿಷಯಗಳನ್ನು, ವಿಭಿನ್ನ ರುಚಿಗಳನ್ನು ಮಾನವತೆಯ ವಿಧವಿಧದ ವೃತ್ತಿ–ವಿಲಾಸ ಗಳನ್ನು ಕೇಳುವೆನು. ಈ ಹರಟೆಯು ಊಟದ ವೇಳೆಯುನಕವೂ ಹೊತ್ತನ್ನು ಸಾಗಿಸುತ್ತದೆ. ಅನಂತರ ಆ ಪುಟ್ಟ ಸ್ಥಳವೂ ನನ್ನ ಅಲ್ಪ ಸಂಪತ್ತಿಯೂ ಒದಗಿಸುವ ವಸ್ತುಗಳಿಂದ ನನ್ನ ಹೊಟ್ಟೆಯ ಚಿಂತೆಯನ್ನು ನೀಗಿಸಿಕೊಳ್ಳುತ್ತೇನೆ'.

'ಊಟ ಮುಗಿದೊಡನೆ ಮತ್ತೆ ಉಪಹಾರಗೃಹದ ಕಟ್ಟೆಯನ್ನು ಹತ್ತುತ್ತೇನೆ. ಆಗ ಅಲ್ಲಿಯ ಯಜಮಾನನೂ, ಊರ ಕಟಕರವನೂ, ಹಿಟ್ಟಿನ ಗಿರಣಿಯ ಒಡೆಯನೂ, ಒಬ್ಬಿಬ್ಬರು ಉಪ್ಪಾರರೂ, ಅಲ್ಲಿ ಸಾಮಾನ್ಯವಾಗಿ ಭೆಟ್ಟಿಯಾಗುತ್ತಾರೆ. ಈ ಹಳ್ಳಿಯ ಕಗ್ಗರೊಂದಿಗೆ ನಾನೂ ಮನವಾರೆ ಕಲೆತು ಕೂಡಿ ನಡೆಯುತ್ತೇನೆ. ದಿನವೆಲ್ಲ ಹಣ ಹಚ್ಚಿ ಆಡುತ್ತೇವೆ. ಪ್ರತಿ ಆಟಕ್ಕೂ ಸಾವಿರ ಸಾವಿರ ಜಗಳಗಳು ನಡೆಯುತ್ತವೆ. ನಮ್ಮ ಪ್ರತಿ ಜಗಳವಲ್ಲಿಯೂ ಅಪಶಬ್ದಗಳನ್ನು ಬಾಯ್ತುಂಬ ಚೀರಾಡುತ್ತೇವೆ. ಒದರಾಟ ಬೇಕಷ್ಟು ದೂರ, ಸ್ಯಾನ್ ಕ್ಯಾಸ್ಕಿಯಾನೋದ ತನಕ ಕೇಳ ಬರುತ್ತದೆ. ಸಾಮಾನ್ಯವಾಗಿ ಪ್ರತಿ ಬಿಡಿಕಾಸಿಗಾಗಿಯೂ ಅಷ್ಟೇ ಘೋರವಾಗಿ ಜಗಳಾಡುತ್ತೇವೆ ಈ ಅಧಃಪತನದ ಕೊಂಡದಲ್ಲಿ ಮುಳುಗಿದ ನನ್ನ ಬುದ್ಧಿ ಬುರುಸುಗಟ್ಟುತ್ತದೆ. ಆಗ, ನನ್ನನ್ನು ಈ ರೀತಿ ಹಿಚುಕಿ ಹತ್ತಿಕ್ಕುವದರಲ್ಲಿಯೂ ಸುಖ ಪಡೆಯುವ ದೈವದ ದುಷ್ಟತನಕ್ಕಾಗಿ ನನ್ನ ಕ್ರೋಧಾವೇಶವು ಸ್ಫೋಟವಾಗುತ್ತದೆ. ನನ್ನ ಮನಃ ಕ್ಷೋಭದಿಂದಾದರೂ ದೈವವು ನಾಚುವದೋ ಎಂದು ನೋಡಬೇಕೆನಿಸುತ್ತದೆ.'

'ಇರುಳು ಕವಿಯುತ್ತದೆ. ನಾನು ಮನೆಯನ್ನು ಸೇರುತ್ತೇನೆ. ನನ್ನ ಬರೆಯುವ ಕೋಣೆ ನುಗ್ಗುತ್ತೇನೆ. ಅದಕ್ಕೂ ಮುಂಚೆ ಹೊಸ್ತಿಲಲ್ಲಿಯೇ ಹಗಲೆಲ್ಲ ತೊಟ್ಟ ಹಳ್ಳಿಯ ಕಗ್ಗನ ಮಣ್ಣು ಕಸಗಳಿಂದ ಮಾಸಿದ ಬಟ್ಟೆಗಳನ್ನು ಕಳಚಿ ಒಗೆಯುತ್ತೇನೆ. ಸಭ್ಯ ವೇಷವನ್ನು ಧರಿಸಿ ತಕ್ಕ ಓರಣವಲ್ಲಿ ತಿದ್ದಿದವನಾಗಿ ಲೇಖನಕಕ್ಷೆಯನ್ನು ಪ್ರವೇಶಿಸುತ್ತೇನೆ.–ಬರೇ ಕಕ್ಷೆಯನ್ನಲ್ಲ, ಪ್ರಾಚೀನ ಮಹಾಪುರುಷರ ಪ್ರಾಚೀನ

ಆಸ್ಥಾನಗಳನ್ನು ಪ್ರವೇಶಿಸಿ ಅವರಿಂದ ಸಪ್ರೇಮ ಸ್ವಾಗತವನ್ನು ಹೊಂದಿ ನನ್ನದೇ ಆದ ನನಗಾಗಿಯೇ ಆದ ಆಹಾರವನ್ನು ಅಲ್ಲಿ ಉಣ್ಣುತ್ತೇವೆ. ಅದಕ್ಕಾಗಿಯೇ ನಾನು ಹುಟ್ಟಿದ್ದು. ಅವರೊಡನೆ ಚರ್ಚೆ ನಡೆಯಿಸಿ ಅವರ ಕಾರ್ಯಗಳ ಹೇತುಗಳನ್ನು ವಿಚಾರಿಸುವದರಲ್ಲಿ ನನಗೆ ಯಾವ ಸಂಕೋಚವೂ ಅನಿಸುವದಿಲ್ಲ. ಆ ಮಹಾ ಪುರುಷರೂ ತಮ್ಮ ಮಾನವತೆಯ ದಯೆಯಿಂದ ನನಗೆ ಉತ್ತರಗಳನ್ನು ಈಯುತ್ತಾರೆ; ಮತ್ತು ನಾಲ್ಕು ತಾಸುಗಳಷ್ಟು ಅವಕಾಶವಲ್ಲಿ ನನಗೆ ಯಾವ ದಣಿವೂ ಅನಿಸುವದಿಲ್ಲ. ಯಾವ ಕಷ್ಟದ ನೆನಪೂ ಆಗುವದಿಲ್ಲ. ಬಡತನದ ಬೆದರಿಕೆಯೂ ಉಳಿಯುವದಿಲ್ಲ, ಸಾವಿನ ಭಯವು ಬಾಧಿಸುವದಿಲ್ಲ. ನನ್ನ ಸಂಪೂರ್ಣ ವ್ಯಕ್ತಿತ್ವವು ಅವರಲ್ಲಿ ಲೀನವಾಗಿ ಬಿಡುತ್ತದೆ.''

ಮ್ಯಾಕಿಯಾವೆಲ್ಲಿಯು ಇಷ್ಟು ಅಲ್ಪಕ್ಕಾಗಿ ಇಷ್ಟು ದೊಡ್ಡ ತ್ಯಾಗವನ್ನು ಮಾಡಿದ್ದನು, ೧೫೧೩ರಲ್ಲಿ ಅವನು ರಾಜಸ್ಥಾನ, ಮಂತ್ರಿವಾಡ, ರಾಯಭಾರದ ಕೇಂದ್ರ ಇವೆಲ್ಲವನ್ನು ಬಿಟ್ಟು ಈ 'ಕ್ಷೇತ್ರವಾಸ'ವನ್ನು ಕೈಗೊಂಡಿದ್ದನು. ಅವನ ದೃಷ್ಟಿಯಿಂದ ಇಟಲಿಯು ಆ ಕಾಲದಲ್ಲಿ 'ಯಹೂದಿಗಳಿಗಿಂತಲೂ ಗುಲಾಮ ವಾಗಿತ್ತು, ಪ್ಯಾರೀಸದ ಜನಕ್ಕಿಂತಲೂ ಬಾಲಬಡಕವಾಗಿತ್ತು. ಅಥೇನಿಯನ್ನರಿ ಗಿಂತಲೂ ಚೆಲ್ಲಾಪಿಲ್ಲಿಯಾಗಿತ್ತು. ತಲೆಯಿಲ್ಲದ, ಕ್ರಮವಿಲ್ಲದ, ಸೋತುಹೋದ, ಸುಲಿಯಲ್ಪಟ್ಟ, ಕೊಳ್ಳೆಹೊಡೆದ, ಆಕ್ರಮಿತ ಮತ್ತು ಎಲ್ಲ ಬಗೆಯ ನಾಶವನ್ನು ತಾಳಿಹಾಳಾದ ದೇಶವಾಗಿತ್ತು.' ಅದಕ್ಕಾಗಿ–ತನ್ನ ದೇಶದ ಈ ದುರವಸ್ಥೆಗಾಗಿ–ಅವನು ಉದ್ವೇಗಗೊಂಡಿದ್ದನು, ಉದಾಸೀನನಾಗಿದ್ದನು. ಆದರೆ ಉದಾಸೀನ–ಉದ್ವೇಗ ದೀರ್ಘಕಾಲ ತಡೆಯಲಿಲ್ಲ. ಆ ವರ್ಷದ ಕೊನೆಯೊಳಗೇ ಅವನ ಅತಿ ಪ್ರಸಿದ್ಧವಾದ ಗ್ರಂಥವು ಬರೆದು ಮುಗಿಯಿತು. ಆ ಗ್ರಂಥವೇ 'ನರೇಂದ್ರ.' ಆದರೆ ಬರೆದಾಗ ಅದನ್ನು ಪ್ರಸಿದ್ಧಿಗಾಗಿ ಬರೆದದ್ದೇ ಇದ್ದಿಲ್ಲ. ಪ್ರಕಟಮಾಡಲೂ ಅದನ್ನು ಬರೆದಿದ್ದಿಲ್ಲ. ಆ ಗ್ರಂಥವನ್ನು ಲೊರೆಂರ್ಝೋಡ ಮೆಡಿಸಿ ಇವನಿಗೆ ಸಮರ್ಪಿಸಲಾಗಿತ್ತು. ಗ್ರಂಥಕರ್ತನ ಮರಣದ ನಂತರವೂ ಕೆಲಕಾಲ ಆ ಗ್ರಂಥವು ಪ್ರಕಟವಾಗಲಿಲ್ಲ.

ಇದೇ ಸಮಯ ಅವನು ಇನ್ನೊಂದು ಗ್ರಂಥವನ್ನು ಬರೆಯಲು ಕೈಗೊಂಡನು. ಅದರ ಹೆಸರು 'ಡಿಸ್ಕೋರ್ಸ್' ಅಂದರೆ ಕೆಲವು ಪ್ರಬಂಧಗಳೂ ಲಿವ್ಹೀ ಎಂಬಾತನ 'ರೋಮದ ಇತಿಹಾಸ'ವೆಂಬ ಗ್ರಂಥ ಓದಿ ಅವನಿಗೆ ಬಂದ ಅನುಭವದ ಬೆಳಕಿನಲ್ಲಿ ಬರೆದ ಟಿಪ್ಪಣೆಗಳ ಮಾಲಿಕೆಯೇ ಈ ಗ್ರಂಥವು. ಇದರಲ್ಲಿ ರಾಜ್ಯಗಳ ಉತ್ಪತ್ತಿ, ಸ್ಥಿತಿ ಮತ್ತು ರಕ್ಷಣೆಗಳ ಕುರಿತು ಪರಿಶೀಲನೆ ಇದೆ. 'ನರೇಂದ್ರ'ದಲ್ಲಿ ಇದೇ

ವಿಶಾಲವಾದ ವಿಷಯದ ಒಂದೇ ಅಂಗದ ಕುರಿತು ವಿವೇಚನೆ ಬಂದಿದೆ. ಒಬ್ಬ ವ್ಯಕ್ತಿಯು ಸರ್ವಭೌಮಸತ್ತೆಯನ್ನು ಗಳಿಸುವ ಮತ್ತು ಉಳಿಸಿಕೊಳ್ಳುವ ಉಪಾಯಗಳ ವಿವರವಾದ ವಿಮರ್ಶೆ ಅಲ್ಲಿ ಬರುತ್ತದೆ. ಈ ವಿವೇಚನೆ–ವಿಮರ್ಶೆಗಳ ಮಹಾಗ್ರಂಥವು ಪೂರ್ತಿ ತತ್ವ ವಿಚಾರಮಯವೂ ಅಲ್ಲ. ಪೂರ್ತಿ ರಾಜಕೀಯ ವಿಧಾನಗಳ ವಿಶ್ಲೇಷಣೆಯೂ ಅಲ್ಲ. ಈ ಗ್ರಂಥವನ್ನು ಬರೆಯಲು ಮ್ಯಾಕಿಯಾವೆಲ್ಲಿಯನ್ನು ಪ್ರೇರಿಸಿದ್ದು ಒಂದು ಮಹಾಸ್ಫುರಣವು. ಆ ಸ್ಫುರಣವು, ರಾಷ್ಟ್ರೀಯ ಸೇನೆಯಿಂದ ಪರಿರಕ್ಷಿತವಾದ ಅಖಂಡ ಏಕೀಕೃತ ಇಟಲಿಯ ಭವ್ಯಧ್ಯೇಯವು. ಮುಂದೆ ೧೯ ನೆಯ ಶತಮಾನದಲ್ಲಿ ಇಟಲಿಯು ಸಾಧಿಸಿದ ರಾಷ್ಟ್ರೀಯ ಸ್ವಾತಂತ್ರ್ಯ ಮತ್ತು ಐಕ್ಯದ ಕುರಿತು ತರ್ಕಶುದ್ಧವಾದ ಯುಕ್ತಿಯುಕ್ತ ಮಹದಾಕಾಂಕ್ಷೆಯನ್ನು ಮೊದಲಿಗೆ ಮುಂದಿಟ್ಟವನು ಮ್ಯಾಕಿಯಾವೆಲ್ಲಿಯೇ.

ಇಷ್ಟು ದೊಡ್ಡ ಧ್ಯೇಯವನ್ನು ಪ್ರತಿಪಾದಿಸಿದ ಈ ನೀತಿನಿಪುಣನನ್ನು ಕುರಿತು ಸಾರ್ವತ್ರಿಕವಾದ ತಿರಸ್ಕಾರವು ಏತಕ್ಕೆ ? ಅದಕ್ಕೆ ಕಾರಣ, ಅವನ ಕೇವಲ ಸಂಧಿಸಾಧನಾಪರವಾದ ಅನುಕೂಲವಾದದ ದೃಷ್ಟಿ. ಶುದ್ಧ ನೀತಿಯನ್ನು–ಒಳಿತು ಕೆಡುಕುಗಳ ವಿಚಾರವನ್ನು–ರಾಜನೀತಿಯ ಅನುಕೂಲಕ್ಕೆ ಅನುವರ್ತಿಯಾಗಿಯೇ ಇಟ್ಟು ನಡೆಯುವ ದೃಷ್ಟಿ ಅವನದು. ಈ ದೃಷ್ಟಿಯ ಕುರಿತು ತೀವ್ರಮತಭೇದವಿರಬಹುದು. 'ಧರ್ಮಾತ್, ಅರ್ಥಶ್ಚ, ಕಾಮಶ್ಚ.' ಎಂದು ಊರ್ಧ್ವಬಾಹುವಾಗಿ ಕೂಗಿದ ವ್ಯಾಸರಿಂದ ಸೊಕ್ರೆಟಿಸ್‌ನ ತನಕ ರಾಜಕಾರಣದ ಅಧಿಷ್ಠಾನವು, ಕಲ್ಯಾಣ–ಪುಣ್ಯವಾಗಿರಬೇಕೆಂದು ಸಾರುತ್ತ ಬಂದ ತತ್ವ ವಿಚಾರಿಗಳು ಅನೇಕರಿರಬಹುದು. ಆದರೆ ಅವಕ್ಕೆ ಸಮಾಂತರವಾಗಿ ರಾಜನೀತಿಯು ರಾಜ್ಯವ್ಯವಹಾರವನ್ನು ತಿದ್ದುವ ತಿಳಿಸುವ ತಂತ್ರವು ಒಂದು ಸಾಪೇಕ್ಷ ಶಾಸ್ತ್ರವಾಗಿ ಬೆಳೆಯಿಸಿ ತಂದ ಬಲ್ಲವರ ಪರಂಪರೆಯೂ ಇದೆ. ಈ ಪರಂಪರೆಯ ನೆಲೆಯಲ್ಲಿ ಧರ್ಮಕ್ಕೆ ಮೂಲವು ಅರ್ಥ, ಅರ್ಥಕ್ಕೆ ಅಡಿಗಲ್ಲು ಅಧಿಕಾರ, ಅಧಿಕಾರದ ಆಧಾರ ರಾಜಕೀಯ–ಎಂಬ ವಿಚಾರ ಸರಣಿಯು ನಿಂತಿದೆ. ಇದರ ಪಾಶ್ಚಾತ್ಯ ಶಾಖೆಯು ಕವಲು ಒಡೆದದ್ದು ಮ್ಯಾಕಿಯಾವೆಲ್ಲಿಯ 'ನರೇಂದ್ರ' ಗ್ರಂಥದಲ್ಲಿ.

ಇದಲ್ಲದೇ ಮ್ಯಾಕಿಯಾವೆಲ್ಲಿಯು ರಾಜ್ಯವ್ಯವಹಾರವನ್ನು ಉಪದೇಶಿಸಲು ಹೊರಟಿದ್ದು ಯಾರ ಕುರಿತು ? ಜನಸಾಮಾನ್ಯರನ್ನು ಅಲ್ಲ; ಜಗತ್ತಿನ ಎಲ್ಲ ಆಳರಸರನ್ನೂ ಅಲ್ಲ. ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಆಡಳಿತ ನಡೆಯಿಸುವ ಒಬ್ಬ ವಿವಕ್ಷಿತ ವ್ಯಕ್ತಿಯನ್ನು. ಪ್ರತಿಯೊರ್ವ ಆಡಳಿತಗಾರನಿಗಾಗಲಿ ಆಳರಸನಿಗಾಗಲಿ ಅವನು ಈ ನೀತಿಪಾಠವನ್ನು ಹಾಕಿಕೊಟ್ಟಿಲ್ಲ. ಅಲ್ಲದೇ ಅವನ ಅನುಕೂಲವಾದದ ಈ ನೀತಿ

ಬಾಹಿರ ವೃತ್ತಿಯು ಕೇವಲ ಅವನದೇ ಒಂದು ವಿಕಾರವಲ್ಲ–ಆಗಿನ ಒಟ್ಟು ಆವರಣದ ವಿಪಾಕವದು. ಅಂದು ೧೬ ನೆಯ ಶತಕದಲ್ಲಿ ವಿಚಾರದ ಪ್ರಗತಿಯು ಅಷ್ಟೊಂದು ಶುದ್ಧವಾಗಿದ್ದಿಲ್ಲ. ಪುರೋಗಾಮಿ ಇದ್ದಿಲ್ಲ. ಈಗಲೂ ಜಗತ್ತಿನ ಹಲವು ದೇಶಗಳಲ್ಲಿಯ ರಾಜಕೀಯವ್ಯವಹಾರದ ಬೌದ್ಧಿಕ ಹಿನ್ನೆಲೆಯೂ, ಸಾಂಸ್ಕೃತಿಕ ಆವರಣವೂ ಮ್ಯಾಕಿಯಾವೆಲ್ಲಿಯ ಉಪದೇಶವು ಅನ್ವಯಿಸಲಾರದಷ್ಟು ಮುಂದು ವರಿದಿಲ್ಲ. ಆದರೆ ಹೀಗೆಂದಮಾತ್ರಕ್ಕೆ ಮ್ಯಾಕಿಯಾವೆಲ್ಲಿಯು ಸಾರಿದ ರಾಜನೀತಿಯ ಮಂತ್ರ ತಂತ್ರಗಳು ಸಾರ್ವಕಾಲಿಕ ಸಾರ್ವದೇಶಕವಾಗಿ ನಿಂತ ತತ್ವಗಳೆಂದೂ ಹೇಳಲಾಗದು. ಮುಖ್ಯ ಮಾತೆಂದರೆ ಅವನು ನೀತಿಶಾಸ್ತ್ರದ ವಿರುದ್ಧ ಒಂದು ಪದ್ಧತಿಯನ್ನು ರಚಿಸಲು ಹೊರಟೇ ಇದ್ದಿಲ್ಲ.

ಉದ್ದೇಶವನ್ನು ಗಮನಿಸುವವರು ಉಪಾಯಗಳನ್ನೂ ಲೆಕ್ಕಿಸಬೇಕಿಲ್ಲ. ಸಾಧ್ಯವೇ ಪ್ರಧಾನ, ಸಾಧನಗುಣ, ಸಾಧನೆಯ ಯಶಸ್ಸೇ ಸಾಧನಗಳ ಶ್ರೇಯಸ್ಸು ಈ ಸೂತ್ರದಲ್ಲಿ ಅವನ ಕೂಟನೀತಿಯು ಪೋಣಿಸಿದಂತಿದೆ. ಉದಾಹರಣೆ ಅವಶ್ಯವೇ ? ಸೀಝರ ಬೋರ್ಗಿಯಾ ಅನೇಕ ಕ್ರೂರ ಮತ್ತು ವಿಶ್ವಾಸಘಾತದ ಕೊಲೆಗಳನ್ನು ಮಾಡಿಸಿದನು. ಆದರೆ ಅವೆಲ್ಲ ಕೊಲೆ ಪಾತಕಗಳು ಯೋಗ್ಯವೇ, ಶ್ಲಾಘನೀಯವೇ ಎಂದು ಮ್ಯಾಕಿಯಾವೆಲ್ಲಿಯು ತೀರ್ಮಾನಿಸುತ್ತಾನೆ. ಏಕೆಂದರೆ, ಆ ಹತ್ಯಾಚಾರ ಗಳಿಂದ ಬೋರ್ಗಿಯಾನು ಆಳುವ ರಾಜ್ಯಕ್ಕೆ ಒಳಿತೇ ಆಯಿತೆಂದು ಅವನ ಸಮರ್ಥನೆ. ಆ ಮುಂದೆ ಅವನು ಹೀಗೆ ವ್ಯಾಖ್ಯಾನ ಮಾಡುತ್ತಾನೆ :– ಕ್ರೂರ ಕೃತ್ಯಗಳನ್ನು ಸರಿಯಾಗಿ ಯೋಗ್ಯವಾಗಿ ಮಾಡಲಾಗಿದೆಯೋ ಇಲ್ಲವೋ ಎಂಬುದರ ಮೇಲೆ ಎಲ್ಲವೂ ಅವಲಂಬಿಸಿ ಇರುತ್ತದೆ. ಇನ್ನು ಸರಿಯಾಗಿ ಯೋಗ್ಯವಾಗಿ ಮಾಡಿದವೆಂದು ಹೇಳುವದು ಎಂಥ ಕೃತ್ಯಗಳನ್ನು ? ಕೆಟ್ಟ ಕೃತ್ಯಗಳನ್ನು, ಯೋಗ್ಯ ವಾಗಿ ಮಾಡಿದವೆಂದು ಹೇಳುವದು ಯೋಗ್ಯವೆಂದು ಒಪ್ಪುವದಾದರೆ, ಯಾವ ದುಷ್ಕೃತ್ಯಗಳನ್ನು ಒಂದು ಭದ್ರವಾದ ಸ್ಥಾನವನ್ನು ಸ್ಥಾಪಿಸಿಕೊಳ್ಳಲಿಕ್ಕೆ ಒಮ್ಮೆಲೇ ಮಾಡಲಾಗುವದೋ ಮತ್ತು ಒಮ್ಮೆ ಮಾಡಿ ಮುಂದೆ ಅವುಗಳನ್ನು ಮತ್ತೆ ಮಾಡದೆ ಬಿಡುವದಾಗುವದೋ ಅವು ಯೋಗ್ಯ ಕೃತ್ಯಗಳು. ಅಯೋಗ್ಯವೆಂಬವು ಒಮ್ಮೆ ಯೋಗ್ಯ ಹೇತುವಿಗಾಗಿ ಮಾಡಿ ಮುಂದೆ ಆ ಕಾರಣವು ಉಳಿಯ ದಿರುವಾಗಲೂ ಕೂಡ ನಡೆಯಿಸಲ್ಪಟ್ಟವುಗಳು. ಮೊತ್ತದಲ್ಲಿಯೇ, ಯಾವ ಕ್ರೂರಕೃತ್ಯಗಳು ಅಗತ್ಯವೆಂಬುದನ್ನು ಎಣಿಕೆ ಹಾಕಬೇಕು. ಅವುಗಳನ್ನು ಒಂದೇ ಪೆಟ್ಟಿಗೆ ನೆರವೇರಿಸಬೇಕು. ಅನಂತರ ಅವುಗಳ ಕುರಿತು ಭಯ–ಸಂಶಯ ಮಂದಿಯ ಮನಸ್ಸಿನಲ್ಲಿ ಉಳಿದು ಅಳುಕಿಸದಂತೆ ನೋಡಿಕೊಳ್ಳಬೇಕು; ಇಲ್ಲವಾದರೆ ನೀವು ಸದಾಕಾಲವೂ ಕೈಯಲ್ಲಿ ಕತ್ತಿಯನ್ನೆತ್ತಿಕೊಂಡು ಇರಬೇಕಾದಿತು ! ಆಕಸ್ಮಿಕವಾಗಿ

ಮಾಡಿದ ಅಪಾಯಗಳು ವೇದನೆಗೆ ಕಾರಣವಾಗುವದು ಕಡಿಮೆ, ಆದ್ದರಿಂದ ಮನೋವ್ಯಥೆಗೆ ಮುಳುವಾಗುವದೂ ಕಡಿಮೆ. ಆದರೂ ಎಲ್ಲ ಬಯಸಿದ ಫಲಗಳನ್ನು ಅಂಥ ಹಿಂಸೆಯು ನೀಡುವದು. ಆದ್ದರಿಂದ ದಂಡ–ಹಿಂಸೆಗಳನ್ನು ಶೀಘ್ರವಾಗಿ ತೀವ್ರವಾಗಿ ಜರುಗಿಸಬೇಕು. ಆದರೆ ಅನುಗ್ರಹ–ಪ್ರಸಾದಗಳನ್ನು ದೀರ್ಘಾವಧಿಯಲ್ಲಿ ಕ್ರಮವಾಗಿ ದಯಪಾಲಿಸಬೇಕು. ಇದರಿಂದ ಅವುಗಳ ಸವಿ ಮತ್ತು ನೆನಪು ಇದ್ದುದಕಿಂತ ಹೆಚ್ಚು ಸೊಗಸಾಗಿ ಅನಿಸುವದು'

ಹೇಗಿದೆ ಈ ಮಾರ್ಮಿಕವಾದ ಉಪದೇಶ ? ಅನುಗ್ರಹದ ವಿಚಾರವೇನೇ ಇರಲಿ. ದಂಡ–ಹಿಂಸೆ ಅಪಾಯಗಳ ಯೋಜನೆಯಲ್ಲಿ ಚಾಣಕ್ಯನಿಂದ ಸ್ಟಾಲಿನ್‌ನ ತನಕವೂ ಇದೇ ದುಷ್ಕರ್ಮಯೋಗವನ್ನು ಸಾಧಿಸುತ್ತ ಬಂದದ್ದು ತೋರುವದಿಲ್ಲವೇ ? ಮುತ್ಸದ್ದಿಯಾದ ದುಷ್ಟರು, ರಕ್ತಪಿಪಾಸುಗಳಾದ ಧೂರ್ತರು, ದೂರದೃಷ್ಟಿಯ ಮಹದಾಕಾಂಕ್ಷಿಗಳು, ಎಲ್ಲ ಸರ್ವಾಧಿಕಾರಿಗಳು, ಪಟ್ಟಕ್ಕೆ ಅಡ್ಡದಾರಿಯನ್ನು ಹುಡುಕಿ ದುಡುಕುವ ಪಾತಾಳ ಯಂತ್ರಿಗಳು, ರಾಜನನ್ನೇ ನುಂಗುವ ರಾಜರಕ್ಷಕರು, ಪದಾಧಿಕಾರ ಪ್ರಿಯರಾದ ಸತ್ತಾವಾದಿಗಳು ಇದೇ ಮ್ಯಾಕಿಯಾವೆಲ್ಲಿ ಪ್ರಣೀತ ಮಹಾಮಂತ್ರದ ಅನುಷ್ಠಾನದಿಂದಲೇ ಕೃತಕೃತ್ಯರಾಗಿಲ್ಲವೇ ?

ಆದರ್ಶ ಆಳರಸನನ್ನು ಆರಿಸುವ ವಿಚಾರವನ್ನು ಮ್ಯಾಕಿಯಾವೆಲ್ಲಿಯು ತ್ಯಾಜ್ಯವೆಂದು ತಿರಸ್ಕರಿಸಿದ್ದಾನೆ. 'ಏಕಂದರೆ, ನಾವು ಹೇಗೆ ಬಾಳುವೆವು ಮತ್ತು ಹೇಗೆ ಬಾಳಬೇಕು–ಇವೆರಡರ ನಡುವೆ ಇರುವ ಮಹದಂತರವನ್ನು ಎಣಿಸಿದರೆ, ತಾನು ಮಾಡಬೇಕಾದುದಕ್ಕಾಗಿ ಮಾಡಿದ್ದನ್ನು ಒಬ್ಬನು ಬಿಡುವಡಾದರೆ, ಅವನು ತನ್ನ ಕ್ಷೇಮಕ್ಕಿಂತಲೂ ಕ್ಷಯವನ್ನೆ ಸಾಧಿಸುತ್ತಾನೆಂದು ತಿಳಿಯಬೇಕು. ಕಾರಣವೇನಂದರೆ, ತನ್ನ ಎಲ್ಲ ವ್ಯವಹಾರಗಳಲ್ಲಿ ಕೇವಲ ಪ್ರಾಮಾಣಿಕನಾಗಿ ಇರಬೇಕೆಂಬ ಹಟವನ್ನು ಹಿಡಿಯುವ ಮನುಷ್ಯನು, ಅನೇಕಾನೇಕ ಅಪ್ರಾಮಾಣಿಕರ ನಡುವೆ ಬದುಕುವದರಿಂದ ಅವಶ್ಯವಾಗಿ ಕ್ಷಯವನ್ನು ಹೊಂದುವನು. ಆದ್ದರಿಂದ ತನ್ನ ಸತ್ತೆಯನ್ನು ಸುರಕ್ಷಿತವಾಗಿ ಇಟ್ಟುಕೊಳ್ಳಲು ಅಪೇಕ್ಷಿಸುವ ಪ್ರತಿಯೋರ್ವ ನರೇಂದ್ರನು ತಾನು ಯಾವ ರೀತಿಯಲ್ಲಿ ಅಪ್ರಾಮಾಣಿಕನಾಗಿರಬೇಕೆಂಬುದನ್ನು ಕಲಿಯತಕ್ಕದ್ದು; ಮತ್ತು ಪ್ರಾಪ್ತಪರಿಸ್ಥಿತಿಗೆ ತಕ್ಕಂತೆ ಈ ಜ್ಞಾನವನ್ನು ಬಳಸತಕ್ಕದ್ದು ಇಲ್ಲವೇ ಬಿಡತಕ್ಕದ್ದು.' ಅಭಿಷೇಕ ಅಥವಾ ಸಂಸ್ಕಾರಗಳೇನೂ ಸಿಂಹವನ್ನು ಅಡವಿಯ ಅರಸನಾಗಿ ಮಾಡುವದಿಲ್ಲ; ವಿಕ್ರಮಾರ್ಜಿತಸತ್ವನಾದ ಪ್ರಾಣಿಗೆ ಮೃಗೇಂದ್ರತೆಯು ತಾನಾಗಿಯೇ ಸಲ್ಲುತ್ತದೆ. ಸುಭಾಷಿತವನ್ನೇ ತುಸುಪಲ್ಲಟಿಸಿ ನರೇಂದ್ರರ ಕುರಿತೂ ಹೀಗೆನ್ನಬಹುದು.

ನ ಅಭಿಷೇಕಃ ನ ಸಂಸ್ಕಾರಃ ನೃಪತ್ವಂ ಕುರುತೇ ಜನೇ ।
ಯುಕ್ತಿ ವರ್ಜಿತ ಸತ್ವಸ್ಯ ಸ್ವಯ ಮೇವ ನರೇಂದ್ರತಾ ॥

ಅಂದರೆ ಕೇವಲ ಪಟ್ಟಾಭಿಷೇಕ ಮುಂತಾದ ಸಂಸ್ಕಾರಗಳೊಂದೇ ಅರಸುತನವನ್ನುಂಟು ಮಾಡುವದಿಲ್ಲ; ಯುಕ್ತಿಯಿಂದ ಸತ್ಯವನ್ನು ವರ್ಜಿಸುವ ಹದಗಾರಿಕೆಯಿಂದಲೇ ನರನು ನರೇಂದ್ರನಾಗಬಲ್ಲನು. ಇದು ಮ್ಯಾಕಿಯಾವೆಲ್ಲಿಯ ಧೂರ್ತ ಭಾಷಿತ !

ಇನ್ನೂ ಮುಂದೆ ಅವನೆನ್ನುತ್ತಾನೆ. 'ಏಕಕಾಲಕ್ಕೆ ಜನರಿಂದ ಪ್ರೀತಿಸಲ್ಪಡುವದೂ ಭೀತಿಸಲ್ಪಡುವದೂ ಶಕ್ಯವಿದ್ದರೆ ಯಾವಾಗಲೂ ಉತ್ತಮವೇ ಸರಿ. ಆದರೆ ಇವೆರಡೂ ಮನ್ನಣೆಗಳನ್ನು ಒಮ್ಮೆಲೇ ಪಡೆಯುವದು ಶಕ್ಯವಿಲ್ಲ. ಆಗ ಪ್ರೀತಿ ಭೀತಿಗಳ ಪರ್ಯಾಯಃಗಳಲ್ಲಿ ಭೀತಿಯನ್ನೇ ಆಯ್ದುಕೊಳ್ಳುವದೇ ಲೇಸು. ಅಂದರೆ ಮಂದಿಯಿಂದ ಭೀತಿಸಲ್ಪಡುವದು. ಪ್ರಜೆ ತನಗೆ ಭಯಪಡುವಂತೆ ನೋಡಿಕೊಳ್ಳುವ ಪಕ್ಷವು ಶ್ರೇಯಸ್ಕರವು. ಏಕೆಂದರೆ ಪ್ರೀತಿಯನ್ನು ಕಾಯ್ದುಕೊಳ್ಳುವ ಕಟ್ಟು ಋಣಾನುಬಂಧ. ಆದರೆ ಮಾನವ ಸ್ವಭಾವದಲ್ಲಿಯ ಮೂಲದ ದೋಷದಿಂದ ದುಷ್ಟತೆಯಿಂದಲೇ ಅನ್ನಬೇಕಾದರೆ–ಈ ಬಂಧದ ಕಟ್ಟು ಸ್ವಾರ್ಥದೊಡನೆ ತಿಕ್ಕಾಡುವಾಗೆಲ್ಲ ಕೊಯ್ದು ಹೋಗುವದು. ಆದರೆ ಭೀತಿಯು ಹಾಗಿಲ್ಲ. ಅದಕ್ಕೆ ಹಾಗೆ ಅತಃಪ್ರೇರಣೆಯ 'ಒಳಗಿರ್ಪ ಒಂದು ನೆವಂ' ಬೇಕಿಲ್ಲ. ದಂಡದ ಕಲ್ಪನೆ, ಶಿಕ್ಷೆಯ ದಿಗಿಲೊಂದೇ ಭೀತಿಯನ್ನು ಭದ್ರಪಡಿಸುವದು. ಈ ದಿಗಿಲು ಎಂದೂ ಬಿಟ್ಟು ಹೋಗಲಾರದು. ಮಾನವ ಸ್ವಭಾವದ ಮೂಲ ದುರ್ಬಲತೆಯ ದೋಷವೇ ಈ ಭೀತಿಗೆ ಬಲದ ಸೆಲೆಯಾಗುತ್ತದೆ. ಪ್ರೀತಿ ಬಲದ ಇಲ್ಲವೇ ಛಲದ ಪಾಲು ಅಲ್ಲ. ಮಂದಿ ತಮ್ಮದೇ ಸಂಪ್ರೀತಿ–ಸಂತೋಷಕ್ಕಾಗಿ ಪ್ರೀತಿಸುತ್ತಾರೆ. ಆದರೆ ನರೇಂದ್ರನ-ತಮ್ಮ ಆಳರಸನ–ಪ್ರೀತ್ಯರ್ಥ ಭೀತಿಯನ್ನು ಪಡುತ್ತಾರೆ. ಹೀಗೆ ಭೀತಿಯು ನರೇಂದ್ರನ ಅಧಿಕಾರಕ್ಕೆ ವಶವರ್ತಿ. ಆದ್ದರಿಂದ ನರೇಂದ್ರನು ತನ್ನ ವಶವರ್ತಿಯಾದ ಶಕ್ತಿಯನ್ನೇ ಅವಲಂಬಿಸಬೇಕಲ್ಲದೆ, ಪರವಶವಾದ ವಸ್ತುವನ್ನಲ್ಲ.'

'ಇನ್ನು ಈ ಭೀತಿಯ ಉತ್ಪಾದನೆಯಲ್ಲಿಯೂ ಕೌಶಲ್ಯ ಬೇಕು. ಭೀತಿಯಲ್ಲಿ ದ್ವೇಷದ ದೋಷ ಸೇರದಂತೆ ನೋಡಬೇಕು. ಪ್ರಜೆಗಳ ಹೊನ್ನು, ಹೆಣ್ಣು, ಮಣ್ಣುಗಳನ್ನು ಮುಟ್ಟಲು ದುಡುಕದಿದ್ದರೆ, ಯೋಗ್ಯ ಕಾರಣ ಮತ್ತು ಯಾರೂ ಒಪ್ಪಬಹುದಾದ ನ್ಯಾಯದ ಸಮರ್ಥನೆ ಇಲ್ಲದ ಹಿಂಸೆ–ರಕ್ತಪಾತಗಳನ್ನು ತಪ್ಪಿಸಿದರೆ, ನರೇಂದ್ರನು ದ್ವೇಷದಿಂದ ವಿಕಾರಗೆಡದಂಥ ಶುದ್ಧ ಭೀತಿಯನ್ನು ಪ್ರಜೆಗಳಲ್ಲಿ ಹುಟ್ಟಿಸಬಹುದು. ಏಕೆಂದರೆ ಮಂದಿ ತಂದೆಯನ್ನು ಕಳಕೊಂಡದ್ದಕ್ಕಿಂತ ತಂದೆ ಮಾಡಿಟ್ಟ, ತಾನು ಗಳಿಸಿದ, ಆಸ್ತಿಯನ್ನು ಕಳಕೊಂಡದ್ದನ್ನು ಸುಲಭದಲ್ಲಿ ಮರೆಯುವದಿಲ್ಲ.–ಅದನ್ನೇ ಹಂಬಲಿಸಿ ಉರಿಯುತ್ತಿರುತ್ತಾರೆ. ಇದಲ್ಲದೆ ಪರ [illegible]–ಹೆರವರ ಆಸ್ತಿಯನ್ನು ಸುಲಿದು–ಜೀವಿಸಲು ಒಮ್ಮೆ ತೊಡಗಿದರೆ

ಅದಕ್ಕೆ ಕೊನೆಯೇ ಉಳಿಯುವದಿಲ್ಲ. ಅದರ ಬೆನ್ನಿಗೆ ಹಿಂಸೆ-ರಕ್ತಪಾತ ಬಂದೇ ಬರುತ್ತದೆ. ಅನ್ಯರ ಸೊತ್ತಿಗೆ ಕೈಚಾಚದ ಅರಸನಿಗೆ ಅನ್ಯಾಯದ ಕತ್ತಿಯನ್ನು ಒರೆಯಿಂದ ಹೊರದೆಗೆಯಬೇಕಾಗುವದಿಲ್ಲ.'

ಮೇಲೆ ಉದಾಹರಿಸಿದ ಹಲವು ವಾಕ್ಯಗಳಿಂದ 'ನರೇಂದ್ರ' ಗ್ರಂಥದ ಧ್ವನಿ ಮತ್ತು ಸ್ವರೂಪ ಸಾಕಷ್ಟು ವ್ಯಕ್ತವಾಗಬಹುದು. ಇಂಥ ವಿಚಾರ ಪ್ರಚೋದಕ ಗ್ರಂಥವನ್ನು ಮತ್ತೆ ಮತ್ತೆ ಓದಿ, ಮತ್ತೆ ಮತ್ತೆ ಟೀಕಿಸುವ ಮೋಹವು ಆಗದಿರುವದೇ ಆಶ್ಚರ್ಯ ! ಮ್ಯಾಕಿಯಾವೆಲ್ಲಿಯು ಶುದ್ಧ ನೀತಿಯ ಬೆಲೆಯನ್ನೇ ಅರಿತಿದ್ದಿಲ್ಲವೆ ? ಸದ್ಗುಣ ಮತ್ತು ಆತ್ಮಗೌರವಗಳು, ಶೀಲ ಮತ್ತು ಮಾನಗಳು ವ್ಯಕ್ತಿಗತ ವ್ಯವಹಾರದಲ್ಲಿ ಪ್ರಭಾವಿಯಾಗುತ್ತವೆಂದು ಅವನು ಒಪ್ಪಿದನು. ಆದರೆ ರಾಜ್ಯ ಕಾರಭಾರದಲ್ಲಿ ರಾಜ್ಯವ್ಯವಹಾರದ ನೀತಿಯಲ್ಲಿ ಅವುಗಳಿಗೆ ಪ್ರಧಾನಸ್ಥಾನವನ್ನು ಕೊಡಲು ಅವನು ಎಂದೂ ಒಪ್ಪಲಿಲ್ಲ. ಸದ್ಗುಣಿಯಾಗಿರಬೇಕು. ಶೀಲ ಸಂಪನ್ನನಾಗಿರಬೇಕು. ಆದರೆ ಯಾರು ? ಪ್ರಜೆಯು. ಪಾಪಭೀರುವಾದ ಗುಣಶೀಲಸಂಪನ್ನ ಪ್ರಜೆ ರಾಜ್ಯದ ಬೆನ್ನೆಲುಬು. ಆದರೆ ಇಂಥ ಪ್ರಜೆ ರಾಜ್ಯಶಾಸನಕರ್ತನ-ನೀತಿ ನಿಪುಣ ಸರ್ವಾಧಿಕಾರಿಯ-ಕೈಯಲ್ಲಿ ಪಗಡೆಯಂತೆ ಇರಬೇಕು. ಧರ್ಮವು ಬೇಕು. ಆದರೆ ಏತಕ್ಕೆ ? ಜಾಣನಾದ ಆಳರಸನ ಕೈಯಲ್ಲಿ, ರಾಷ್ಟ್ರದ ನೈತಿಕ ಬಲವನ್ನು ಕಾಯ್ದುಕೊಳ್ಳಲು ಒಂದು ಸಮರ್ಥ ಶಸ್ತ್ರವಾಗಲಿಕ್ಕೆ. ಇಂಥ ಧರ್ಮವೂ ಕೂಡ ಪುರುಷಾರ್ಥಕ್ಕೆ ನಿರ್ಭರಕಾರ್ಯಶಕ್ತಿಗೆ ಪೋಷಕವಾಗಿ ಇರಬೇಕು. ಈ ದೃಷ್ಟಿಯಿಂದ ಕ್ರಿಸ್ತಿಧರ್ಮವನ್ನು ಅವನು ಟೀಕಿಸಿದ್ದಾನೆ. ಕ್ರೈಸ್ತಧರ್ಮವು ಬರೇ ನಿವೃತ್ತಿಪರ ಸದ್ಗುಣಗಳನ್ನು ಪ್ರಶಂಸಿಸುವದೇ ಹೊರತು ಪ್ರವೃತ್ತಿಗೆ ಪ್ರೇರಕವಲ್ಲ. ಮೇಲಾಗಿ ಧರ್ಮ ಸಂಸ್ಥೆಯೂ ಆ ಕಾಲದಲ್ಲಿ ಅನೇಕ ಅನಾಚಾರ ಭ್ರಷ್ಟಾಚಾರಗಳಿಗೆ ನೆಲೆಯಾಗಿತ್ತು ಎಂದು ಮುಂತಾಗಿ ಮ್ಯಾಕಿಯಾವೆಲ್ಲಿಯು ಟೀಕಿಸಿದ್ದಾನೆ. ಒಟ್ಟಾರೆ ಮ್ಯಾಕಿಯಾವೆಲ್ಲಿಯು ಮಾನವನನ್ನು ಕೇವಲ ರಾಜಕೀಯ ಪಶುವೆಂದು ತಿಳಿಯುತ್ತಿದ್ದನು. ರಾಜನೀತಿ ಮತ್ತು ಶುದ್ಧನೀತಿ, ರಾಜಕಾರಣ ಮತ್ತು ಸದಾಚರಣ ಇವುಗಳಲ್ಲಿ ಜೀವಾಳದ ಒಳಹೊಂದಿಕೆ ಇದೆಯೆಂಬುದನ್ನು ಅವನು ಒಪ್ಪಲೇ ಇಲ್ಲ. ಇದು ಅವನ ದೋಷ. ಇದಕ್ಕಾಗಿಯೇ ಅವನು ದುಷ್ಟನೆನಿಸಿಕೊಂಡನು. ಇತಿಹಾಸದ ನಾಟಕದಲ್ಲಿ ಮ್ಯಾಕಿಯಾವೆಲ್ಲಿಯದು ಖಲಪಾತ್ರವೆಂದು ಹೆಸರಾಯಿತು.

ಆದರೂ ಅವನ ಕಾರ್ಯವು ಅಲೌಕಿಕವು. ರಾಜನೀತಿಯು ಅರ್ಥವನ್ನೇ ಆಯ್ದು ಒಂದು ಶುದ್ಧಶಾಸ್ತ್ರವಾಗಿ ಅವನು ಎರಕಹೊಯ್ದನು. ಮೇಧಾವಿಗಳ ವಿಚಾರಗಳನ್ನು ಅವನು ರಾಜಕೀಯ ವ್ಯವಹಾರದ ತತ್ವಗಳ ಕಡೆಗೆ ಅಭ್ಯಾಸದೃಷ್ಟಿಯಿಂದ

ಹೊರಳಿಸಿದನು. ಅದಕ್ಕಾಗಿ ತನ್ನದೇ ಆದ ವಿಚಾರ ಪದ್ಧತಿಯನ್ನು ಹೊರ ಪಡಿಸಿದನು. ಇದರಿಂದ ಮ್ಯಾಕಿಯಾವೆಲ್ಲಿಯು ಆಧುನಿಕ ರಾಜಕೀಯ ತತ್ವಶಾಸ್ತ್ರದ ಆದ್ಯಆಚಾರ್ಯನೆನಿಸಿಕೊಂಡನು. ಅವನ ಮಹಿಮೆಯ ಮರ್ಮವೆಂದರೆ, ಮಿಕ್ಕಮೇಧಾವಿಗಳಿಗೂ ಮೊದಲು, ಅವನು ಮಾನವನನ್ನು ಅವನ ಐತಿಹಾಸಿಕ ಹಿನ್ನೆಲೆಯಲ್ಲಿ, ಇತಿಹಾಸಕ್ರಮದ ಘಟಕನೂ ಫಲಿತನೂ ಎಂಬ ಸಮಗ್ರಸ್ವರೂಪದಲ್ಲಿ ಅಭ್ಯಸಿಸಿದನು; ಮಾನವ ಸ್ವಭಾವದ ಪರಿಜ್ಞಾನದಿಂದ ತನ್ನ ತಾತ್ವಿಕತೀರ್ಮಾನ ಗಳಿಗೆ ತಪ್ಪದೇ ತಲ್ಪಿದನು.

ಈ ಐತಿಹಾಸಿಕ ದೃಷ್ಟಿಯು ಅವನ ಇನ್ನೊಂದು ಕೃತಿಯಾದ 'ಫ್ಲೋರಾನ್ಸದ ಇತಿಹಾಸ'ದಲ್ಲಿ ಒಡಮೂಡಿದೆ. ಇದರ ಒಂದು ಭಾಗವನ್ನು ಅವನು ಪೂರ್ಣ ಮಾಡಿದನು. ಈ ಗ್ರಂಥವನ್ನು ಬರೆಯುವ ಕೆಲಸ ಅವನಿಗೆ ೧೫೨೦ ರಲ್ಲಿ ಒಪ್ಪಿಸ ಲಾಯಿತು. ಲೊರೆಂಝೋಡ ಮೆಡಿಸಿಯ ಮಗ ೧೦ ನೇ ಲಿಯೋ ಎಂಬ ಹೆಸರಿನಿಂದ ಪೋಪನಾಗಿದ್ದನು. ಅವನು ಫ್ಲೋರಾನ್ಸದ ರಾಜ್ಯವ್ಯವಸ್ಥೆಯ ಸ್ವರೂಪ ಏನಿರ ಬೇಕೆಂದು ಮ್ಯಾಕಿಯಾವೆಲ್ಲಿಗೆ ಸಲಹೆಯನ್ನು ಕೇಳಿದನು. ತನ್ನ ಅನುಭವ, ವ್ಯಾವಹಾರಿಕ ಜ್ಞಾನ ಮತ್ತು ರಾಜಕೀಯ ಮತಗಳನ್ನು ಅಳವಡಿಸಿಕೊಂಡು ಅವನು ಈ ಗ್ರಂಥವನ್ನು ಬರೆದನು. ಒಂದು ವರ್ಷನಂತರ ಅವನು 'ಯುದ್ಧದ ಕಲೆ' ಎಂಬ ಪುಸ್ತಕವನ್ನು ಬರೆದನು. ಇದರ ಉದ್ದೇಶವೂ ಏಕೀಕೃತ ಶಕ್ತಿಸಂಪನ್ನ ಇಟಲಿಯ ನಿರ್ಮಾಣವೇ ಆಗಿತ್ತು. ಆ ಪುಸ್ತಕದಲ್ಲಿ ಪ್ರಾಮುಖ್ಯವಾಗಿ, ರಾಷ್ಟ್ರೀಯ ಸೇನೆಗಳ ರಚನೆಯಿಂದಾಗುವ ಲಾಭ ಕೋಟೆಕೊತ್ತಳಗಳ ನಿರುಪಯೋಗಿತೆ, ಕೇವಲ ತೋಫುಗಳ ವೈಫಲ್ಯ, ಕಾಲಾಳುಗಳ ಪಡೆಗಳನ್ನೇ ಅವಲಂಬಿಸಬೇಕಾದ ಅತ್ಯಂತ ಅವಶ್ಯಕತೆ ಇವೇ ಅಂಶಗಳನ್ನು ಎತ್ತಿ ಒತ್ತಿ ಪ್ರತಿಪಾದಿಸಲಾಗಿದೆ. ಇದೇ ಸಮಯ ಅವನು ಕ್ಯಾಸ್ಟ್ರುಕಿಯೋ ಎಂಬ ಕಲಿಯ ಚರಿತ್ರವನ್ನು ಬರೆದನು. ಈ ಚರಿತ್ರ ದಲ್ಲಿಯೂ ಒಬ್ಬ ಆದರ್ಶ ನರೇಂದ್ರನನ್ನು ಅವನು ಚಿತ್ರಿಸಿದ್ದಾನೆ.

ನಾಲ್ಕು ವರ್ಷಗಳ ನಂತರ ಅವನ 'ಮ್ಯಾಂಡ, ಗೊಲಾ' ಎಂಬ ಸುಖಾಂತ ನಾಟಕವನ್ನು ರೋಮದಲ್ಲಿ ಪ್ರಕಟಿಸಲಾಯಿತು. ಇಟಾಲಿಯನ್ ಲಲಿತಸಾಹಿತ್ಯದಲ್ಲಿ ಇದೊಂದು ಅತ್ಯುತ್ತಮ ಕೃತಿ. ಚಾಟೂಕ್ತಿ, ಉಪಹಾಸ, ವಿನೋದ, ತತ್ಕಾಲೀನ ಸಮಾಜದ ಭ್ರಷ್ಟವರ್ತನೆಯ ವಿದಾರಕ ವಿಡಂಬಕ ಟೀಕೆ ಇವೆಲ್ಲ ಗುಣಗಳಲ್ಲಿ ಅದು ಒಂದು ಅತ್ಯುತ್ಕೃಷ್ಟರೂಪಕವೆನಿಸಿದೆ. ಇದಲ್ಲದೆ, 'ಕ್ಲಿಝಿಯಾ' ಎಂಬ ಇನ್ನೊಂದು ಸುಖಾಂತ ನಾಟಕವನ್ನೂ, ಒಂದು ಕಾದಂಬರಿಯನ್ನು ಹಲಕೆಲವು ಪುಟ್ಟ ಕೃತಿಗಳನ್ನು ಅವನು ರಚಿಸಿದನು. ಇದೆಲ್ಲ ಲೇಖನ ಕಾರ್ಯವು ಸಾಗಿದ್ದು ಅವನ ಸೇವಾನಿವೃತ್ತ 'ಕ್ಷೇತ್ರವಾಸ'ದಲ್ಲಿಯೇ.

೧೫೨೬ ರಲ್ಲಿ ಮ್ಯಾಕಿಯಾವೆಲ್ಲಿಯು ಮತ್ತೆ ಕಾರ್ಯತತ್ಪರನಾದನು. ತನ್ನನ್ನು ಮತ್ತೆ ರಾಜಕೀಯ ಕಾರ್ಯರಂಗಕ್ಕೆ ಕರೆಯಿಸಬೇಕೆಂತಲೇ ಅವನು 'ನರೇಂದ್ರ' ಗ್ರಂಥ ವನ್ನು ಬರೆದಿರಬಹುದು. ಸೀಝರ ಬೋರ್ಗಿಯಾನ ಕುರಿತು ವರ್ಣನೆಯು ಬಂದ ಪ್ರಕರಣವನ್ನು ಅವನು ಬರೆದದ್ದು, ಅದಾಗಲೇ ಫ್ಲೋರಾನ್ಸದ ಪಟ್ಟಕ್ಕೆ ಮತ್ತೆ ಬಂದು ನೆಲಸಿದ ಮೆಡಿಸಿಯ ಸಂಧಿ–ಸನ್ನಿವೇಶಗಳು ಬೋರ್ಗಿಯಾನ ಪರಿಸ್ಥಿತಿಗೆ ತದ್ರೂಪವಾಗಿ ಕಂಡಮೂಲಕವೇ ಸರಿ.

ಅಂದಿನ ಪೋಪನು ಮ್ಯಾಕಿಯಾವೆಲ್ಲಿಯನ್ನು ಫ್ಲೋರಾನ್ಸದ ದುರ್ಗ ವ್ಯವಸ್ಥೆಯನ್ನು ನೋಡಿ ಸಲಹೆಕೊಡಲು ನೇಮಿಸಿದನು. ಅಲ್ಲದೆ ಕೆಲವು ಕೂಟನೀತಿಯ ಸಂಧಾನ ಕಾರ್ಯಗಳೂ ಅವನಿಂದ ಜರುಗಿದವು. ಆ ಪೋಪನ ಪ್ರತಿನಿಧಿಯಾಗಿ ಲೊಂಬಾರ್ಡಿ ಯಲ್ಲಿ ಯುದ್ಧ ಸಚಿವನಾಗಿ ಕಾರ್ಯಮಾಡುತ್ತಿದ್ದ ಗ್ಯುಕಿಯಾರ್ಡಿನಿಯ ಕೈಕೆಳಗೆ ಅವನು ಈ ಕೆಲಸಗಳನ್ನು ಕೈಗೊಂಡನು. ಈ ಸಚಿವನು ಮ್ಯಾಕಿಯಾವೆಲ್ಲಿಯಷ್ಟೇ ತಜ್ಞನಾದ ಇತಿಹಾಸಕಾರನಾಗಿದ್ದನು.

ಆದರೆ ಇವೆಲ್ಲ ಕಾರ್ಯಭಾಗಗಳು ಬೇಗ ಮುಗಿದವು. ಬಹಳ ಕಾರ್ಯವನ್ನು ಸಾಗಿಸಬೇಕೆಂಬ ಹಂಬಲವಿದ್ದರೂ ಅವುಗಳಿಗಾಗಿ ಆಯುರ್ಭಾಗ ಅವನಿಗೆ ಹೊಂದಿಬರಲಿಲ್ಲ. ಮರುವರ್ಷವೇ ೧೫೨೭ ರಲ್ಲಿ ಮ್ಯಾಕಿಯಾವೆಲ್ಲಿಯ ದೇಹಾವಸಾನವು ಒದಗಿಬಂದಿತು.

ಲೋರ್ಡ ಮೊರ್ಲೇನರು ಅಧಿಕಾರವಾಣಿಯಿಂದ ಮ್ಯಾಕಿಯಾವೆಲ್ಲಿಯ ಮಹತ್ವದ ಕುರಿತು ಈ ಉದ್ಗಾರಗಳನ್ನು ತೆಗೆಯುತ್ತಾರೆ. 'ಧರ್ಮ ಸಂಸ್ಥೆಯಿಂದ ರಾಜಕೀಯವು ಹಿಂದೆಯೇ ಪ್ರತ್ಯೇಕವಾಗಿತ್ತು. ಅದೇ ನಿಟ್ಟಿನಲ್ಲಿ ಮುಂದುವರಿದು ರಾಜನೀತಿಯನ್ನು ಶುದ್ಧನೀತಿಯಿಂದಲೂ ಅವನು ವಿಂಗಡಿಸಿ ಸ್ವತಂತ್ರವಾಗಿ ವಿಕಾಸ ಗೊಳಿಸಿದನು. ಆಳರಸನ ಆಡಳಿತವನ್ನು ಒಂದು ಕಲೆಯಾಗಿ ಮಾರ್ಪಡಿಸುವ ಕೆಲವು ನಿಶ್ಚಿತ ತತ್ವಗಳನ್ನು ಅವನು ಮಂಡಿಸಿದನು. ಈ ಕಲೆಯ ಗುರಿಯು ಆಳುವ ಪ್ರಭುತ್ವ ಶಕ್ತಿಯ ಭದ್ರತೆ ಮತ್ತು ಶಾಶ್ವತ ಸಂರಕ್ಷಣೆ. ಅವನು ಯಾವ ಸಂದೇಹದ ಭಯವಿಲ್ಲದೇ ಸುಮ್ಮನೆ ಒಪ್ಪಿಕೊಂಡು ಹೊರಟ ಮೂಲಭೂತ ಸಿದ್ಧಾಂತವೆಂದರೆ, ನೌಕಾಯಾನ ಕಲೆಯಲ್ಲಿ ಹೇಗೋ, ಹಾಗೆಯೇ ರಾಜ್ಯ ವ್ಯವಹಾರ ಕೌಶಲ್ಯದಲ್ಲಿ ಪಾಪ–ಪುಣ್ಯ ಶುಭಾಶುಭ ವಿಚಾರದ ನೈತಿಕ ಮೂಲ್ಯ ಗಳನ್ನು ಅನ್ವಯಿಸುವ ಅವಶ್ಯಕತೆ ಇಲ್ಲ. (ಯಾವ ಶೀಲದವನೇ ಇರಲಿ ನಾವಿಕನು ಚತುರನಿದ್ದರೆ ನೌಕೆಯನ್ನು ನಡಿಸಬಲ್ಲನಷ್ಟೆ ? ಹಾಗೆಯೇ ಆಳರಸರು ಆಡಳಿತ ಗಾರರು ವೈಯುಕ್ತಿಕವಾಗಿ ಏನೇ ಇರಲಿ, ಹೇಗೆ ಆಗಲಿ, ರಾಜ್ಯನೌಕೆಯನ್ನು

ಸರಿಯಾಗಿ ನಡೆಯಿಸಲು ಕಲಿತರೆ ಸಾಕು. ಆ ವಿದ್ಯೆಯೇ ರಾಜನೀತಿ ಎಂದು ಅವನ ಧೋರಣೆ.) ಈ ಮೂಲ ಧೋರಣೆಯು ಸರಿಯೋ ಸುಳ್ಳೋ ಎಂಬ ಕುರಿತು ಅವನು ಶಂಕಿಸಲೇ ಇಲ್ಲ. ಆದರೆ ಅವನ ಈ ಮೂಲಭೂತ ಸಿದ್ಧಾಂತವೇ ಅವನ ವಾದದ ಸಿದ್ಧಿಗೆ ಅಂತರಪ್ರಾಯವಾಯಿತು. ಅಪ್ರಸ್ತುತವೆಂದಿರಲಿ, ಅವಾಸ್ತವವೆಂದಿರಲಿ, ಅವನು ಬದಿಗೊತ್ತಿದ ನೈತಿಕ ಮೂಲ್ಯಗಳು ಬರೇ ಆಗಂತುಕ ಸಂಗತಿಗಳಾಗಿಲ್ಲ. ನೈತಿಕ ಮೂಲ್ಯಗಳೇ ಜೀವನದ ಮೂಲಗಳು. ಅವುಗಳ ಜೀವಾಳದ ಶಕ್ತಿಯಿಂದಲೇ ಸಮಾಜಗಳು ಬಾಳುತ್ತವೆ. ಶಾಸನಗಳು ಬಲಗೊಳ್ಳುತ್ತವೆ.' ಈ ಬಾಳಿನ ಬಲವಿಲ್ಲದ ಯಾವ ನೀತಿಯೂ, ನೆಲೆಯಿಲ್ಲದ ನಿಲುವು, ಮಳಲಲ್ಲಿ ನಿಲ್ಲಿಸಿದ ಮನೆ.

## ಕಲಾ - ಪ್ರತಿಭೆ

ಕಲೆಯು ಜೀವನದ ಶೃಂಗಾರ. ಒಂದು ಸಂಸ್ಕೃತಿಯು ಖನಿಯ ಬಂಗಾರ. ಪಾಶ್ಚಾತ್ಯ ನಾಗರಿಕತೆಯ ಬಳ್ಳಿಯೂ ಕಲಾಸಂಪತ್ತನ್ನು ತುಂಬ ಕೊನರಿಸಿದೆ. ಡೆಮೊಸ್ತೆನೀಜ ಪಶ್ಚಿಮದ ವಾಗ್ವೈಖರಿಯ ಗಂಗೋತ್ರಿ. ಲಿಯೊನಾರ್ಡೋ ಡಾವಿನ್ಸಿ ಸಕಲ ಕಲಾಪ್ರಪೂರ್ಣ ಚಂದ್ರ. ಮೈಕೆಲ್ ಪಾಶ್ಚಾತ್ಯ ಶಿಲ್ಪದ ದಿವ್ಯಶಕ್ತಿ.

* ಡೆಮೊಸ್ಥನೀಜ
* ಲಿಯೊನಾರ್ಡೋ ಡಾವಿನ್ಸಿ
* ಮೈಕೆಲ್

# ಡೆಮೊಸ್ಥೆನೀಜ

ಮಾತುಗಾರಿಕೆ ಮಹಾತ್ಮರ ಒಂದು ಲಕ್ಷಣವೆಂದು ನಮ್ಮ ಪೂರ್ವಿಕರು ಒಪ್ಪಿಕೊಂಡಿದ್ದರು. 'ಸದಸಿ ವಾಕ್ಪಟುತಾ' ಇದೊಂದು ಮಹಾತ್ಮರಿಗೆ,–ಹಿರಿಯ ಸತ್ವದ ಜನಕ್ಕೆ–'ಪ್ರಕೃತಿಸಿದ್ಧ'ವೆಂದು ಸಂಸ್ಕೃತ ಸುಭಾಷಿತವು ಸಾರಿದೆ. ಮಾಹಾತ್ಮ್ಯಕ್ಕೆ ಮಾತುಗಾರಿಕೆ ಅವಶ್ಯವೋ ಸಹಜವೋ ಎಂಬುದಕ್ಕೆ ಮತಭೇದವಿರಬಹುದು. ಆದರೆ 'ಸದಸಿ'–ಸಭೆಯಲ್ಲಿ–ಮಂದಿಯ ಮನಸ್ಸನ್ನು ಸೆಳೆದು ಮತವನ್ನು ಒಲಿಸಿಕೊಳ್ಳುವಲ್ಲಿ, ವಾಕ್ಪಟುತ್ವ ಒಂದು ಅತ್ಯವಶ್ಯವಾದ ವಸ್ತುವು, ಆಯುಧವು. ಪಾಶ್ಚಾತ್ಯ ಪ್ರಪಂಚದಲ್ಲಿ ವಕ್ತೃತ್ವವು ಹೀಗೆ ಒಂದು ಶಸ್ತ್ರದಂತೆ ಬಳಸಲ್ಪಟ್ಟು, ಒಂದು ಶಾಸ್ತ್ರವಾಗಿ ಬೆಳೆದು, ಒಂದು ಸಾವಿರವರ್ಷ ಮೇಲಾಯಿತು. ಈ ಸಾರ್ವಜನಿಕ ವಕ್ತೃತ್ವಕಲೆಯ ಆಭಿಜಾತ ಸಂಪ್ರದಾಯವು ಉಗಮ ಹೊಂದಿದ್ದು ಡೆಮೊಸ್ಥೆನೀಜನ ಚರಿತ್ರ–ಕೃತಿಗಳಲ್ಲಿ. ಪ್ರಾಚೀನ ಗ್ರೀಕರಲ್ಲಿಯ ಅತಿ ಉದಾತ್ತ ಮತ್ತು ಉತ್ತಮ ಪುರುಷರಲ್ಲಿ ಡೆಮೊಸ್ಥೆನೀಜನು ಒಬ್ಬನು. ಅವನ ಭಾಷಣಗಳ ಶೈಲಿಯು ಕಲೆಯೂ ಪಾಶ್ಚಾತ್ಯ ರಾಷ್ಟ್ರಗಳ ವಕ್ತೃತ್ವದ ವೈಖರಿಯನ್ನು ರೂಪಿಸಿದೆ–ಇಂದಿನ ಮತ್ತು ಹಿಂದಿನ ಯುಗದ ಹಿರಿಯಲಾದ ಮಾತುಗಾರರಲ್ಲಿ ಅನೇಕರಿಗೆ ಅವನೇ ಮಾದರಿ. ಅವನ ಮಾತುಗಾರಿಕೆಯು ಕೂಡ ಒಂದು ಮನೋರಂಜನೆಯ ಕಾಯಕವಿದ್ದಿಲ್ಲ. ದೇಶದ ಯುದ್ಧ ಸನ್ನಾಹದಲ್ಲಿ ಅದೊಂದು ಉಜ್ಜ್ವಲವಾದ ಶಸ್ತ್ರಸಾಮಗ್ರಿಯಾಗಿತ್ತು. ಅವನ ಜೀವನದ ಕಾರ್ಯವೇ ಕದನ–ತನ್ನ ದೇಶವಾದ ಅಥೇನ್ಸ ಮತ್ತು ಗ್ರೀಸದ, ಸ್ವಾತಂತ್ರ್ಯದ ಸಂರಕ್ಷಣೆ ನಿಮಿತ್ತ ಸಾಗಿದ ಕದನ–ಅದೂ ಯಾರ ವಿರುದ್ಧ ? ಮೆಸಿಡೊನ್‌ದ ಫಿಲಿಪ್ ಮತ್ತು ಅವನ ಮಗ ಜಗಜ್ಜೇತ ಅಲೆಕ್ಝಾಂಡರನ ಆಕ್ರಮಣದ ವಿರುದ್ಧ. ಈ ಕದನದಲ್ಲಿ ಡೆಮೊಸ್ಥೆನೀಜನು ಸೋತನು. ಅಲೆಕ್ಝಾಂಡರನ ವಿರುದ್ಧ ಗೆದ್ದವರು ಯಾರು ? ಆದರೂ ಸೋಲು ಕಲಿತನಕ್ಕೆ ಕಲಂಕವಲ್ಲ. ಅವನು ಪಟ್ಟ ನೋವು, ಅವನ ಎದೆಯ ಕಾವು, ಅವನಿಗೆ ಬಂದ ಸಾವು ಇವುಗಳ ಬಗೆಯು ಕಲಿಯ ಮೇಲು-ಕೀಳುಗಳನ್ನು ಅಳೆಯುತ್ತವೆ. ಡೆಮೊಸ್ಥೆನೀಜನು ಸೋತರೂ ಅವನ ದೇಶಭಕ್ತಿಯ ಪ್ರಖರ ವೈಭವವನ್ನು ಆ ಸೋಲು ಕೊಲ್ಲಲಾರದು; ಕಳೆಗುಂದಿಸಲಾರದು.

ಈಗ ೨೦೦೦ ವರ್ಷಗಳ ಹಿಂದೆ. ಸಂಜೆಯ ಜಾವಿಗೆ ಅಥೇನ್ಸದ ಪಟ್ಟಣಿಗರು ಕಡಲತೀರಕ್ಕೆ ತಿರುಗಾಟಕ್ಕೆ ಬಂದಾಗ ಒಂದೊಂದು ಸಲ ಒಂದು ದೃಶ್ಯವನ್ನು ಕಂಡು ಬೆರಗಾಗುತ್ತಿದ್ದರು. ಒಬ್ಬ ತರುಣನು ಕಡಲಕಡೆಗೆ ಮೋರೆ ಮಾಡಿ,

ಬಂಡೆಗಳಮೇಲೆ ಮುಗಿಬಿದ್ದು ಒಡೆದು ಉರುಳಿ ಮೊರೆದು ಹೊರಳುವ ತೆರೆಗಳ ಏರಾಟವನ್ನು ಧಿಃಕರಿಸುವನೋ ಎಂಬಂತೆ ಒಳ್ಳೇ ಆವೇಶದಿಂದ ಒದರಿ, ಏನೇನೋ ಮಾತನಾಡುತ್ತ ಅಲೆಯುತ್ತಿದ್ದುದನ್ನು ಕಂಡು ಅವನು ಹುಚ್ಚನೆಂದೇ ಅವರೆಲ್ಲ ಭಾವಿಸಿರಬೇಕು. ಜಗತ್ತಿನ ಸರ್ವಶ್ರೇಷ್ಠ ವಾಗ್ಮಿಗಳಲ್ಲಿ ಒಬ್ಬನು ತನ್ನ ನಾಲಿಗೆಯನ್ನು ತಿದ್ದಿಕೊಳ್ಳಲು ಅಲ್ಲಿ ನಿಷ್ಠುರವಾಗಿ ಹೆಣಗುತ್ತಿದ್ದಾನೆಂದು ಮಾತ್ರ ಯಾರೂ ಊಹಿಸಲಿಲ್ಲ–ಹಾಗೆ ಅಂದರೂ ಅದನ್ನು ಯಾರೂ ನಂಬುತ್ತಿದ್ದಿಲ್ಲ.

ಡೆಮೊಸ್ಥಿನೀಜನಿಗೆ ಹುಟ್ಟಿನಿಂದಲೂ ಮಾತಿನದೋಷ ಒಂದು ಅಂಟಿ ಬಂದಿತ್ತು. ನಾಲಿಗೆಯು ವಿಪರೀತ ತತ್ತರಿಸುತಿತ್ತು; ಉಚ್ಚಾರಗಳು ತೊದಲಿ ತಡವರಿಸುತಿದ್ದವು. ಈ ಕುಂದನ್ನು ಸರಿಪಡಿಸಿಕೊಳ್ಳಲಿಕ್ಕೆ ತರುಣ ಡೆಮೊಸ್ಥಿನೀಜನು ಹೊರಟನು. ಮಾತಿನ ತೊದಲನ್ನು ತೊಲಗಿಸಲಿಕ್ಕೆ ಬಾಯಿಯಲ್ಲಿ ಹರಳುಗಳನ್ನು ಹಾಕಿಕೊಂಡು ಮಾತನಾಡಹತ್ತಿದನು; ತನ್ನ ಮುಖಮುದ್ರೆಯನ್ನು ಕನ್ನಡಿಯಲ್ಲಿ ನೋಡಿ ನೋಡಿ, ಮಾತಿನ ಮೂಲಕ ಮೋರೆಯಲ್ಲಿ ಮೂಡುವ ವಿಕಟ ವಿಕಾರಗಳನ್ನು ತಿದ್ದಿಕೊಳ್ಳ ಹತ್ತಿದನು; ತನ್ನ ಶಬ್ದೋಚ್ಚಾರದ ಧ್ವನಿಯು ಶುದ್ಧವೂ ದೊಡ್ಡದೂ ಆಗಬೇಕೆಂದು ತಗ್ಗುದಿನ್ನೆಗಳಿಂದ ತುಂಬಿದ ಕಡಿದಾದ ದಾರಿಗಳನ್ನು ಆಗಾಗ್ಗೆ ತುಳಿದು ಎತ್ತರಕ್ಕೆ ಓಡಿ ಏರಿ ಒದರಾಡಹತ್ತಿದನು; ಕಡಲತೀರದಲ್ಲಿ ನಿಂತು ಅಲೆಗಳ ಅಲೆದಾಟ ಏರಾಟಗಳ ಗಲಭೆಯನ್ನು ಇದುರಿಸಿ ಮುಕ್ತಕಂಠದಿಂದ ಆವೇಶದ ಭಾಷಣ ಮಾಡಿ, ಸಾರ್ವಜನಿಕ ಸಭಾಗೃಹದ ಸದ್ದು ಗದ್ದಲಗಳಿಗೆ ಹೊಂದಿಕೆ ಆಗುವಂತೆ ತನ್ನ ಧ್ವನಿಯನ್ನು ಹದಗೊಳಿಸಹತ್ತಿದನು. ಇದಾಯಿತು ವ್ಯಾಖ್ಯಾನ ತಂತ್ರದ ಸಾಧನೆ. ಇದಕ್ಕೆ ತಕ್ಕಂತೆಯೇ ವಿಷಯ ವ್ಯಾಸಂಗವೂ ಸಾಗುತಿತ್ತು. ನೆಲದೊಳಗಿನ ಒಂದು ಗವಿಯನ್ನು ಹುಡುಕಿಕೊಂಡು ಅಲ್ಲಿ ಕುಳಿತು ಗ್ರಂಥಗಳ ಪಠಣವನ್ನೂ ಮನನ ವನ್ನೂ ನಡೆಯಿಸಿದನು. ಜ್ಞಾನಾರ್ಜನೆಯ ಏಕಾಗ್ರತೆಗೆ ಅವಶ್ಯವಾದ ಏಕಾಂತವು ಹೀಗೆ ದೊರೆತರೂ, ಅಲ್ಲಿಂದ ಹೊರಗೆ ಬಂದು ಲೋಕ ಸಂಪರ್ಕ ಪಡೆಯಬೇಕೆಂಬ ಮೋಹವು ಬಾಧಿಸದೇ ಇದ್ದೀತೇ ? ಇಂಥ ಮೋಹದಿಂದ ಏಕಾಂತ ಸಾಧನೆಗೆ ಭಂಗ ಬರಬಾರದೆಂದು ಡೆಮೊಸ್ಥಿನೀಜನು ತನಗೆ ಸಾರ್ವಜನಿಕರಲ್ಲಿ ಕಾಣಿಸಿಕೊಳ್ಳ ಬೇಕೆಂಬ ಬಯಕೆಯೇ ಆಗದಂತೆ ಉಪಾಯ ಹೂಡಿದನು. ಏನು ಉಪಾಯ ಗೊತ್ತೇ ? ಅರೆತಲೆಯನ್ನು ಬೋಳಿಸಿಕೊಂಡನು. ತರುಣ ಕರ್ಮಯೋಗಿಯ ಪಟವಾದಿತನವನ್ನು ನೋಡಿ ! ಅರ್ಧ ಬೋಳಿಸಿದ ವಿದ್ರೂಪ ತಲೆಯನ್ನೆತ್ತಿಕೊಂಡು ಸಮಾಜದಲ್ಲಿ ಬರುವದಾದರೂ ಹೇಗೆ ? ಅಂದಮೇಲೆ ಏಕಾಂತದಲ್ಲಿ ಕೂಡ್ರಲೇ ಬೇಕು. ವಾಚನ ವ್ಯಾಸಂಗ ಅವ್ಯಾಹತವಾಗಿ ಸಾಗಲೇ ಬೇಕು. ಇಂಥ ಅಖಂಡ ಏಕಾಂತದಲ್ಲಿ ಏಕಾಂತಿಕ ತನ್ಮಯತೆಯಿಂದ; ಮಿಣುಕುದೀಪದ ಬೆಳಕಿಗೆ ಎವೆ ಇಕ್ಕದ

ಕಣ್ಣುಗಳಿಂದ ಬರೆದು, ಓದಿ, ತಿದ್ದಿ ಡೆಮೊಸ್ಥೆನೀಜನು ತನ್ನ ಅನೇಕ ವ್ಯಾಖ್ಯಾನಗಳ ಕರಡುಗಳನ್ನು ಸಿದ್ಧಪಡಿಸುತ್ತಿದ್ದನು. ಈ ವ್ಯಾಖ್ಯಾನಗಳು ಪ್ರತಿಯುಗಕ್ಕೂ ಪ್ರಶಂಸೆಗೆ ಪಾತ್ರವಾಗಿವೆ!

ಇಂಥ ವ್ಯಾಖ್ಯಾನದ ಶಕ್ತಿಯು ಕಷ್ಟಸಾಧ್ಯವಾದ ವಕ್ತೃತ್ವದ ಪ್ರೌಢಿಮೆಯು ಡೆಮೊಸ್ಥೆನೀಜನಿಗೆ ಜೀವನದ ಆರಂಭದಿಂದಲೂ ಅವಶ್ಯವಾಯಿತು. ಅವನು ಕ್ರಿ. ಪೂ. ೩೮೩ ರಲ್ಲಿ ಅಥೇನ್ಸದ ಪರಿಸರದ ಪೇನಿಯಾ ಎಂಬಲ್ಲಿ ಜನಿಸಿದನು. ಅವನ ತಂದೆಯು ಕತ್ತಿಯ ಅಲಗುಗಳನ್ನು ಮಾಡಿ ಮಾರಿ ಸಿರಿವಂತನಾಗಿದ್ದನು. ಮಗನು ಏಳು ವರ್ಷದವನಿರುವಾಗಲೇ ತಂದೆ ತೀರಿದನು. ತಾನು ಮಾಡಿದ ಕತ್ತಿಗಳಿಗಿಂತಲೂ ಹರಿತವೂ ಚಪಲವೂ ಆದ ನಾಲಿಗೆ ತನ್ನ ಮಗನದೆಂದು ಅವನಿಗೇನು ಗೊತ್ತು? ಸಾವಿರ ಕತ್ತಿಗಳನ್ನು ಒರೆಗಳಿಯುವಂತೆ ಮಾಡುವ ಮಂತ್ರ ಶಕ್ತಿ ತನ್ನ ಮಗನ ನಾಲಿಗೆಗೆ ಮುಂದೆ ಬರಲಿದೆಯೆಂದು ಅವನೇನು ಬಲ್ಲನು? ಅವನು ಮಡದಿ ಮಕ್ಕಳ ಪಾಲನೆ ಪೋಷಣೆಗಾಗಿ ತನ್ನ ಸಂಪತ್ತನ್ನೆಲ್ಲ ಒಂದು ವಿಶ್ವಸ್ತ ಮಂಡಳದ ಕೈಗೆ ಒಪ್ಪಿಸಿ ಸತ್ತನು. ಆದರೆ ಮೂವರು ವಿಶ್ವಸ್ತರು ಈ ಅನಾಥರ ರಕ್ಷಕರಾಗುವ ಬದಲು, ತಮಗೆ ಒಪ್ಪಿಸಿದ ಸಂಪತ್ತಿನ ಸರ್ವ ಭಕ್ಷಕರಾದರು. ತಾಯಿ–ಮಕ್ಕಳ ಸಲುವಾಗಿ ಯಾವ ವ್ಯವಸ್ಥೆಯನ್ನೂ ಅವರು ಮಾಡಲಿಲ್ಲ.

ಬಾಲಕ ಡೆಮೊಸ್ಥೆನೀಜನು ಪ್ರಾಯಕ್ಕೆ ಬಂದೊಡನೆ ಈ 'ಪಾಲಕ'ತ್ರಯರ ವಿರುದ್ಧ ವ್ಯಾಜ್ಯ ಹೂಡಿದನು. ಆದರೆ ಅವನು ಅಸಹಾಯ, ಅನಾಥ. ಆ ಪಾಲಕರು ಸ್ಥಿತಿವಂತರು, ಸಮಾಜದಲ್ಲಿ ಪ್ರತಿಷ್ಠಿತರು. ಅವನನ್ನು ವಂಚಿಸಿ ವ್ಯಾಜ್ಯದಲ್ಲಿ ಸೋಲಿಸಲು ಅವರು ಮಾಡದ ತಂತ್ರವಿಲ್ಲ, ಹೂಡದ ಹಂಚಿಕೆ ಇಲ್ಲ, ಆದರೆ ಕೊನೆಗೆ ಡೆಮೊಸ್ಥೆನೀಜನೇ ಗೆದ್ದನು. ಆದರೇನು? ಈ ವ್ಯಾಜ್ಯದಲ್ಲಿಯೂ ಆ ಮೊದಲು ಅವರ ಆಡಳಿತದಲ್ಲಿಯೂ ಅವನ ಸರ್ವಸ್ವವೂ ಸೂರೆಯಾಗಿತ್ತು. ತಂದೆಯ ಆಸ್ತಿ ಎಲ್ಲ ಕರಗಿ ಹೋಗಿತ್ತು. ವ್ಯಾಜ್ಯ ಗೆದ್ದರೂ ರಾಜ್ಯ ಕಳಕೊಂಡಂತಾಯಿತು!

ಆಸ್ತಿಯು ಸುಲಿದು ಹೋಗಿ ಉಳಿದಷ್ಟು ಪಾಲನ್ನು ಡೆಮೊಸ್ಥೆನೀಜನು ಪಡಕೊಂಡ ಮೇಲೆ ಆತನಿಗೊಂದು ಸರಕಾರದ ಕೆಲಸ ದೊರೆಯಿತು. ಕೆಲಸ ದೊರೆಯಿತೆನ್ನುವದು ತಪ್ಪಾದೀತು. ಸರಕಾರದ ಕೆಲಸವಾದ್ದರಿಂದ ಅವನು ಅದನ್ನು ಮಾಡಲೇ ಬೇಕಾಯಿತು. ಅಥೇನ್ಸದ ಅಂದಿನ ಗಣರಾಜ್ಯದಲ್ಲಿ ನಾಗರಿಕರ ಪಾಲಿಗೆ ಪ್ರತ್ಯೇಕ

ಕರ್ತವ್ಯಗಳೊಂದಿಗೆ ವಿಶೇಷ ಕಾರ್ಯಭಾರವೂ ಬರುತ್ತಿತ್ತು. ನಾಗರಿಕನು ತನ್ನ ವೆಚ್ಚದಿಂದ ಸಾರ್ವಜನಿಕ ಕರ್ತವ್ಯವನ್ನೊಂದು ನಿರ್ವಹಿಸಬೇಕಾಗುತಿತ್ತು. ಇವನು ವಹಿಸಿದ ಕರ್ತವ್ಯವು ತುಂಬ ಉಪಯೋಗದ್ದಾಗಿತ್ತು. ರಾಜ್ಯಕ್ಕೆ ಅಗತ್ಯದ್ದಾಗಿತ್ತು. ಅಥೇನ್ಸದ ಸೇವೆಗಾಗಿ ಒಂದು ಯುದ್ಧ ನೌಕೆಯನ್ನು ಸಜ್ಜುಗೊಳಿಸುವ ಕಾರ್ಯಕ್ಕಾಗಿ ಡೆಮೊಸ್ಥೆನೀಜನು ತನ್ನ ಅಲ್ಪ ಧನವನ್ನು ವ್ಯಯಮಾಡಿದನು. ಅನಂತರ ಆತನು ವಕೀಲಿ ವೃತ್ತಿಯಿಂದ ಜೀವನ ನಡಿಸಲು ಆರಂಭಿಸಿದನು; ಜತೆಗೆ ಸಾರ್ವಜನಿಕ ಮಹತ್ವದ ಸಭೆಗಳಿಗಾಗಿ ಬೇಕಾಗುವ ವ್ಯಾಖ್ಯಾನಗಳನ್ನು ಬರೆಯುವ ಕಸಬನ್ನೂ ಕೈಕೊಂಡನು.

ವಕೀಲಿಯ ವ್ಯವಸಾಯದಲ್ಲಿ ಅವನು ಕೇವಲ ಮೇಲ್ತರಗತಿಯ ವ್ಯಾಜ್ಯಗಳನ್ನು ಮಾತ್ರ ಸ್ವೀಕರಿಸುತ್ತಿದ್ದನು. ಅಥೇನ್ಸದ ಲೋಕ ಸಭೆಯಲ್ಲಿ ಸರಕಾರದ 'ವಿರುದ್ಧ ಪಕ್ಷ'ದ (ಯುದ್ಧವಾದಿ ಪಕ್ಷದ) ಸಲುವಾಗಿ ಮಾತ್ರ ವ್ಯಾಖ್ಯಾನಗಳನ್ನು ಬರೆಯುತಿದ್ದನು. ಅಂದು ಮೆಸಿಡೋನ್‌ದ ಫಿಲಿಪ್ ಅರಸನೊಡನೆ ದೀರ್ಘವೂ ಅವ್ಯವಸ್ಥಿತವೂ ಆದ ಹೋರಾಟವು ನಡೆದಿತ್ತು. ಈ ಹೋರಾಟವನ್ನು ಬಿರುಸಿನಿಂದ ಮುಂದರಿಸಬೇಕೆಂದು ಡೆಮೊಸ್ಥೆನೀಜನ ಧೋರಣೆ ಇತ್ತು. ಇದರಲ್ಲಿ ಫಿಲಿಪ್ ಅರಸನ ಅಥವಾ ಮೆಸಿಡೋನಿಯಾ ದೇಶದ ವಿರುದ್ಧ ಅವನಿಗೆ ವಿಶೇಷ ದ್ವೇಷ ವಿತ್ತೆಂದಲ್ಲ. ಅವನಿಗೆ ತನ್ನ ಪುಟ್ಟ ನಗರರಾಜ್ಯದ ವಿಷಯಕ್ಕೆ ಅಪರಿಮಿತ ಅಭಿಮಾನವಿತ್ತು. ಅವನ ಅಂಥ ಉಜ್ವಲ ದೇಶ ಪ್ರೇಮವು ತನ್ನ ಅಥೇನಿಯನ್ ರಾಜ್ಯವೇ ಅಖಿಲ ಗ್ರೀಸದೇಶದ ನಾಯಕಸತ್ತೆ ಆಗಬೇಕೆಂಬ ಮಹತ್ವಾಕಾಂಕ್ಷೆಯನ್ನು ಪ್ರೇರಿಸಿತು; ಅಥೇನ್ಸದ ಅಧಿಕಾರವಿಲ್ಲದ ಗ್ರೀಸವು ಒಂದು ನತದೃಷ್ಟ ನಷ್ಟ ದೇಶವೆಂದೇ ಅವನಿಗೆ ಅನಿಸಿತು. ಆದ್ದರಿಂದ ಮೆಸಿಡೋನ್ ರಾಜ್ಯದ ಫಿಲಿಪ್ ರಾಜನ ವರ್ಚಸ್ಸಿನ ವಿರುದ್ಧ ಆಕ್ರಮಣವನ್ನು ಪ್ರತಿಭಟಿಸಿ ಡೆಮೊಸ್ಥೆನೀಜನು ತನ್ನ ಶಕ್ತಿಯ ಕೊನೆಯ ಅಂಶವಿರುವನಕವೂ ಹೋರಾಡಿದನು.

ಕ್ರಿ. ಪೂ. ೩೫೨ ರಲ್ಲಿ ಫಿಲಿಪ್‌ನು ದಕ್ಷಿಣಗ್ರೀಸದ ಮೇಲೆ ದಾಳಿ ಇಕ್ಕಿದನು. ಈ ದಾಳಿಯ ಯತ್ನ ಹುಸಿ ಆಯಿತು. 'ಮಾತಿನ ಮಲ್ಲ' ಡೆಮೊಸ್ಥೆನೀಜನು ಯುದ್ಧಾವೇಶದಿಂದ ಉರಿಯುವ ಒಂದು ಭಾಷಣಮಾಡಿ ಅಥೇನಿಯನ್ ಜನರನ್ನು ಹುರಿದುಂಬಿಸಿ ಎಬ್ಬಿಸಿದನು. ಈ ಭಾಷಣಕ್ಕೆ 'ಪ್ರಥಮ ಫಿಲಿಪಿಕ್' ಎಂಬ ಹೆಸರಿದೆ. ಸಾವಿನ ಸಿಡುಗಿನಂತೆ ಹಾವಳಿಯಾಗಿ ಬಂದ ಮೆಸಿಡೋನಿಯನ್ ದಂಡಿನ ವಿರುದ್ಧ ಆ ಕಾಲದಲ್ಲಿ ಹಾಲಾಹಲವನ್ನೇ ಕಾರುವಂಥ ಉತ್ತೇಜಕ ಭಾಷಣಗಳನ್ನು ಮಾಡಿ ಡೆಮೊಸ್ಥೆನೀಜನು ತನ್ನ ಬಿರಿದಾದ ಮಾತುಗಾರಿಕೆಯಿಂದ ಭವಿಷ್ಯದ ಶಬ್ದಕೋಶಕ್ಕೆ

ಹೊಸದೊಂದು ಶಬ್ದವನ್ನೇ ಪೂರೈಸಿದನು. ಅವನ ಈ ಉದ್ದಂಡ ಭಾಷಣಗಳಿಗೆ 'ಫಿಲಿಪಿಕ್' ಎಂಬ ಹೆಸರು ಬಂದಿತು. ಮುಂದೆ ಆವೇಶಭರಿತವಾದ ಬಿರುನುಡಿಗಳ ಭಾಷಣಕ್ಕೆ 'ಫಿಲಿಪಿಕ್' ಎಂಬ ಹೆಸರು ರೂಢವಾಯಿತು. 'ಫಿಲಿಪಿಕ್' ಶಬ್ದದ ಅರ್ಥ, ಉಗ್ರ ಅಪಶಬ್ದಗಳ ಮಾತು ಎಂದಾಯಿತು.

ರ್‍ಹೋಡ್ಸ ಎಂಬಲ್ಲಿ ಪ್ರಜಾಪಕ್ಷವು ಬಂಡಾಯವೆಬ್ಬಿಸಿತ್ತು. ಆ ಬಂಡುಗಾರರಿಗೆ ಬೆಂಬಲಕೊಡಲು ಅಥೇನಿಯನ್ ಜನರ ಮನವೊಲಿಸಲು ಅವನು ವಿಖ್ಯಾತವಾದ ಭಾಷಣವನ್ನು ಮಾಡಿದನು. ಅಥೇನ್ಸು ರ್‍ಹೋಡ್ಸದಲ್ಲಿ ಪ್ರಜಾಸತ್ತೆ ಸ್ಥಾಪಿಸಲು ನೆರವಾದರೆ ಅದರಿಂದ ಎಜಿಯನ್ ಕರಾವಳಿಯ ನಾಡುಗಳಲ್ಲಿ ಅಥೇನ್ಸಿನ ರಾಜಕೀಯ ಪ್ರಭಾವ ಬೀಳಬಹುದಿತ್ತು. ಖಾಲ್ಡಿಯನ್ ದ್ವೀಪಕಲ್ಪದಲ್ಲಿದ್ದ-ಒಲಿಂಥಸ್ ಎಂಬ ರಾಜ್ಯಕ್ಕೆ ಫಿಲಿಪನು ಮುತ್ತಿಗೆ ಹಾಕಿದನು. ಆ ಪಟ್ಟಣದ ಆಯುಕಟ್ಟಿನ ಮಹತ್ವ ಅಥೇನಿಯನ್ನರಿಗೆ ಗೊತ್ತಿತ್ತು. ಅವರು ಆ ಮುತ್ತಿಗೆಯನ್ನು ಕೀಳಿಸಲು ಶಕ್ತಿ ಮೀರಿ ಹೆಣಗಿದರು. ಈ ಹೆಣಗಾಟದಿಂದ ಅವರನ್ನು ಅಡ್ಡ ಹೊರಳಿಸಲು ಫಿಲಿಪ್‌ನು ಒಳ್ಳೇ ಧೂರ್ತತೆಯಿಂದ ಯೂಬಿಯಾ ಎಂಬಲ್ಲಿ ಬಂಡಾಯವನ್ನು ಹೊತ್ತಿಸಿದನು. ಯೂಬಿಯಾ ಅಥೇನ್ಸಿನ ಹೆಬ್ಬಾಗಿಲಿನಲ್ಲಿಯೇ-ಬರೇ ೪೦ ಮೈಲಿಗೆ ಇದ್ದ ಪಟ್ಟಣ. ಫಿಲಿಪ್‌ನ ಹೊಂಚು ಸಾಧಿಸಿತು. ಅಥೇನ್ಸ-ಸರಕಾರವು ದೂರದ ಒಲಿಂಥಸ್‌ದ ರಕ್ಷಣೆಯ ರಣರಂಗವನ್ನು ಬಿಟ್ಟು, ಹತ್ತಿರದ ಯೂಬಿಯಾದ ನೆರವಿಗಾಗಿ ಗಮನವಿತ್ತಿತು. ಇದರಿಂದ ಒಲಿಂಥಸ್‌ದ ಗಂಡಾಂತರ ಗಡುಸಾಯಿತು.

ಡೆಮೊಸ್ಥೆನೀಜನಿಗೆ ಫಿಲಿಪ್‌ನ ಕುಯುಕ್ತಿಯು ತಿಳಿಯಿತು. ಅವನು ತಡಮಾಡಲಿಲ್ಲ. ಪ್ರತೀಕಾರದ ಪಂಥತೊಟ್ಟನು. ಹೇಗೆ ? ಅವನು ಮೂರು ಹಿರಿದಾದ ಭಾಷಣ ಗಳಲ್ಲಿ ಒಲಿಂಥಸ್‌ಗೆ, ಸಹಾಯ ಸಲ್ಲಿಸುವಂತೆ ಅಥೇನಿಯನ್ ಲೋಕ ಸಭೆಗೆ ಒತ್ತಾಯ ಪಡಿಸಿದನು. ಆದರೆ ಅವನ ಮತವನ್ನು ಆಡಳಿತಗಾರರು ಬದಿ ಗೊತ್ತಿದರು. ಯೂಬಿಯಾದ ರಕ್ಷಣೆ ಆಯಿತು. ಆದರೆ ಫಿಲಿಪ್‌ನು ತನ್ನ ಪೂರ್ವ ಯೋಜನೆಯಂತೆ ಒಲಿಂಥಸ್ ವಶಪಡಿಸಿಕೊಂಡನು. ಇತ್ತ ಯೂಬಿಯಾದ ಯಶವೂ ಅಥೇನ್ಸಿಗೆ ತಲೆಭಾರದ್ದೇ ಆಯಿತು. ಆ ವಿಜಯಕ್ಕೆ ತೆತ್ತ ಜನ-ಧನಗಳ ಬೆಲೆಯಿಂದ ರಾಜ್ಯಕ್ಕೆ ಹಾನಿಯೇ ಹೆಚ್ಚಾಯಿತು. ಅಥೇನ್ಸಿನ ಪ್ರತಿಷ್ಠೆಗೆ ಅದೇನು ಕಳೆ ಏರಿಸಲಿಲ್ಲ. ಅತ್ತ ಒಲಿಂಥಸ್ ಕೈಬಿಟ್ಟಮೇಲೆ ಯುದ್ಧ ಮುಂದುವರಿಸಲೂ ತಾಳ್ಮೆ ಉಳಿಯಲಿಲ್ಲ. ಅಥೇನಿಯನ್ ದಂಡು ನುಗ್ಗಾಗಿ ಹೋಯಿತು. ಡೆಮೊಸ್ಥೆನೀಜನ ಮಾತಿಗೆ ಕಿವಿಗೊಡದಿದ್ದುದರ ಫಲವಿದು. ಆ ಪರಿಸ್ಥಿತಿಯಲ್ಲಿ ಹೇಗೊ ಯುದ್ಧ ಮುಂದುವರಿಸಿರೆಂದು ಹೇಳುವಷ್ಟು ಡೆಮೋಸ್ತೆನೀಜನ ದೃಷ್ಟಿ ಕುರುಡಿದ್ದಿಲ್ಲ.

ತನ್ನ ಮಾತು ಕೇಳದೇ ಕೆಟ್ಟಿರೆಂದು ಹೀಯಾಳಿಸುವ ಹೀನತನವೂ ಅವನದಲ್ಲ. ಫಿಲಿಪ್‌ನೊಡನೆ ಒಪ್ಪಂದ ಮಾಡಿಕೊಳ್ಳುವದರ ಬಗ್ಗೆ ಡೆಮೊಸ್ಥೆನೀಜನು ಲೋಕ ಸಭೆಯ ಮನ ಒಲಿಸಿದನು.

ಒಪ್ಪಂದದ ಮಾತುಕತೆಗಾಗಿ ಒಂದು 'ಹತ್ತು ಸಮಸ್ತರ' ಮಂಡಳಿಯನ್ನು ಫಿಲಿಪ್ ನಿದ್ದೆಡೆಗೆ ಕಳುಹಿಸಲಾಯಿತು. ಆ ಮಂಡಳಿಯಲ್ಲಿ ಡೆಮೊಸ್ಥೆನೀಜನೂ ಇದ್ದನು. ಅವ ರೆಲ್ಲರಲ್ಲಿ ಫಿಲಿಪ್‌ನ ಕುಟಿಲ ನೀತಿಯನ್ನು ಅರಿಯಬಲ್ಲ, ಅವನಿಗೆ ಬುದ್ಧಿ ಗುಣದಲ್ಲಿ ಸರಿಸಾಟಿಯಾಗಬಲ್ಲ ಮುತ್ಸದ್ದಿಯೆಂದರೆ ಡೆಮೊಸ್ಥೆನೀಜನೇ ಒಬ್ಬನು. ಆದರೆ ಅವನು ಒಬ್ಬನೇ ಒಬ್ಬನು. ಬಹುಮತ ಅವನದಲ್ಲ. ಮಾತುಕತೆಯಲ್ಲಿ ಫಿಲಿಪ್‌ನು ತನ್ನದೇ ಹಟ ನಡೆಯಿಸಿ ಅಥೇನಿಯನ್‌ರನ್ನುಚಾತುರ್ಯದಿಂದ ಸೋಲಿಸುತ್ತಿದ್ದಾನೆಂದು ಅವನು ಕೂಡಲೇ ಮನಗಂಡನು. ಮಾತುಕತೆ ಮುಗಿದು ಒಪ್ಪಂದವಾಯಿತು. ಅದರಲ್ಲಿ ಒಂದು ಕಲಮು–ಒಪ್ಪಂದದ ಸಮಯಕ್ಕೆ ತಮ್ಮ ತಮ್ಮ ವಶಕ್ಕೆ ಇದ್ದ ಪ್ರದೇಶಗಳನ್ನು ಉಭಯ ರಾಜ್ಯಗಳೂ ತಮ್ಮದಾಗಿಯೇ ಇಟ್ಟುಕೊಳ್ಳಬೇಕು ಎಂದಿತ್ತು. ಉಭಯ ರಾಜ್ಯಗಳೆಂದರೆ ಇತ್ತ ಫಿಲಿಪ್ ಅತ್ತ ಅಥೇನ್ಸ ಹುತ್ತು ಅದರ ಮಿತ್ರ ರಾಜ್ಯಗಳು. ಆದರೆ ಇದೇ ಮಾತಿನಲ್ಲಿ ಫಿಲಿಪ್‌ನ ಚಾತುರ್ಯ ಈ ಸಂಧಾನದ ಮಂಡಳಿಯನ್ನು ಮಂಕುಮಾಡಿತು; ಅಥೇನ್ಸದ ಮಿತ್ರ ರಾಜ್ಯಗಳು ಯಾವವೆಂದು ಹೆಸರೆತ್ತಿ ಹೇಳಲಿಲ್ಲ. ಅಥೇನ್ಸದ ಮಿತ್ರರು ಅಂದು ಹಾಲಸ್ ಮತ್ತು ಫ್ಲೋರೆನ್ ಎಂಬೆರಡು ರಾಜ್ಯಗಳು. ಆದರೆ ಫಿಲಿಪ್‌ನು ಹಾಲಿಯನ್‌ರೊಡನೆ ಯುದ್ಧದಲ್ಲಿ ತೊಡಗಿಯೇ ಇದ್ದನು. ಅಲ್ಲಿಂದ ಅವನಿಗೆ ಫ್ಲೋರಿಯನ್ನರೊಂದಿಗೂ ಯುದ್ಧಕ್ಕೆ ಹೋಗುವದು ಶಕ್ಯವಿತ್ತು. ಅಥೇನ್ಸದ ಮಿತ್ರರೆಂದು ಹಾಲಿಯನ್, ಫ್ಲೋರಿಯನ್ ಸರಕಾರಗಳ ನಾಮನಿರ್ದೇಶವೂ ಆಗಿದ್ದರೆ ಈ ಒಪ್ಪಂದಕ್ಕೆ ಕಟ್ಟುಬಿದ್ದು ಫಿಲಿಪ್‌ನು ಅವರೊಡನೆ ನಡೆಸುತ್ತಿರುವ ಹೋರಾಟ ನಿಲ್ಲಿಸಬೇಕಾಗುತಿತ್ತು.–ಆದರೆ ಒಪ್ಪಂದವು ಹಾಗೆ ಅವನ ಕೈಕಟ್ಟಲಿಲ್ಲ. ಅವನ ಆ ಯುದ್ಧಗಳು ಮುಂದರಿದವು. ಈ ಯುಕ್ತಿ, ಸಂಧಾನಕ್ಕೆ ಬಂದ ಜಾಣರಿಗೆ–ಡೆಮೊಸ್ಥೆನೀಜನನ್ನು ಬಿಟ್ಟು–ತೋಚಲೇ ಇಲ್ಲ.

ಆದ್ದರಿಂದ ಅಥೇನ್ಸದ ಘನತೆಯ ಭಕ್ತನಾದ ಡೆಮೊಸ್ಥೆನೀಜನು ತನ್ನ ಇತರ ಪ್ರತಿಕೂಲ ಸಹಕಾರಿಗಳೊಡನೆ ಮತ್ತೆ ಫಿಲಿಪ್‌ನನ್ನು ಕಂಡು ಒಡಂಬಡಿಕೆಯ ಪುನರ್ವಿಮರ್ಶೆಮಾಡಲು ಹೋದನು. ಆದರೆ ಫಿಲಿಪ್ ಅರಸು–ಠಕ್ಕನು. ಉಳಿದ ಹೋರಾಟಗಳು ಒಂದೊಂದಾಗಿ ಮುಗಿಯು ತನ್ನ ಉದ್ದೇಶವೆಲ್ಲ ಸಾಧಿಸುವತನಕವೂ ಫಿಲಿಪ್‌ನು ಇವರ ಭೆಟ್ಟಿಯನ್ನು ತಪ್ಪಿಸಿಕೊಳ್ಳುತ್ತಲೇ ಉಳಿದನು. ನಡುವೆ ಡೆಮೊಸ್ಥೆನೀಜನನ್ನು ಭೇದೋಪಾಯದಿಂದ ತನ್ನ ಮತಕ್ಕೆ ಬರುವಂತೆ ಅಥವಾ

ಸುಮ್ಮನಾದರೂ ಇರುವಂತೆ ಮಾಡಲು ಆ ಠಕ್ಕ ಅರಸನು ಹವಣಿಸಿದನು. ರಾಯಭಾರಿಯೆಂಬ ಮನ್ನಣೆಯಿಂದ ಕಾಣಿಕೆಗಳನ್ನು ಕಳುಹಿಸುವದು, ರಾಜ ಭೋಜನದ ಆಮಂತ್ರಣವೀಯುವದು: ಇತರ ಅನುನಯ ವಿನಯಗಳನ್ನು ಕಾಣಿಸುವದು ಇವೆಲ್ಲ ಸಂಮೋಹನಾಸ್ತ್ರಗಳನ್ನು ಅವನು ಆ ಉನ್ನತ ಸತ್ವದ 'ವಾಗ್ಭಟ'ನ ಮೇಲೆ ಪ್ರಯೋಗಿಸಿದನು. ಆದರೆ ಡೆಮೊಸ್ಥನೀಜನು ಅವುಗಳಿಗೆ ಮೋಸಹೋಗಲಿಲ್ಲ. ಅವನ ಸಿಟ್ಟಿಗೆ ಮಿತಿಯೇ ಉಳಿಯಲಿಲ್ಲ. ಒಡಂಬಡಿಕೆಗಾಗಿ ಅವನೊಡನೆ ಹೋದ ತಿಳಿಗೇಡಿ ಪ್ರತಿನಿಧಿಗಳೊಂದಿಗೆ ಅವನು ಜಗಳಾಡಿ ಮನೆಗೆ ಮರಳಿ ಬಂದನು. ಅಥೇನ್ಸಕ್ಕೆ ತಲ್ಪಿದೊಡನೆ ಅವನು ರಾಯಭಾರಿಗಳಿಗೆ ಅಂದು ವಾಡಿಕೆಯಾಗಿ ಕೊಡಲಾಗುತ್ತಿದ್ದ ಮುಕುಟಗಳನ್ನು ಈ ಒಪ್ಪಂದಕ್ಕೆ ಹೋಗಿ ಕೊಟ್ಟ ಕೆಲಸ ಕೆಡಿಸಿ ಬಂದ ಮಂಡಳಿಗೆ ಕೊಡಲೇಕೂಡದೆಂದು ಸಭೆಯಲ್ಲಿ ಪ್ರತಿಪಾದಿಸಿದನು.

ಫಿಲಿಪ್‌ನು ಒಪ್ಪಂದದ ಲಾಭವನ್ನು ಪೂರ್ತಿ ಪಡೆದನು. ಫ್ಲೋರಿಯನ್ನರನ್ನು ಸೋಲಿಸಿ ಅಥೇನ್ಸೋ ಮೊದಲಾದ ಹಲವು ಚಿಕ್ಕ ರಾಜ್ಯಗಳೆಲ್ಲ ಕೂಡಿ ಮಾಡಿ ಕೊಂಡ ಗಣರಾಜ್ಯ ಮಂಡಳದಲ್ಲಿ ಒಂದು ಆಸನವನ್ನು ಆಕ್ರಮಿಸಿದನು. ಆ ಮಂಡಳಕ್ಕೆ ಅವೆಲ್ಲ ರಾಜ್ಯಗಳ ಆಗುಹೋಗುಗಳ ಮೇಲೆ ಹಿಡಿತವಿತ್ತು. ಈ ಹಿಡಿತ ದಲ್ಲಿ ಅದುವರೆಗೆ ಅಥೇನ್ಸಕ್ಕಿದ್ದ ಬಿಗುವೇ ಮಿಗಿಲಾಗಿತ್ತು, ಆದರೆ ಅಗ್ರೇಸರತ್ವವು ಇನ್ನು ಆ ರಾಜ್ಯಕ್ಕೆ ಉಳಿಯಲಿಲ್ಲ. ಇಷ್ಟೆಲ್ಲ ಮುಖಭಂಗಪಟ್ಟ ಮೇಲೆ ಅಥೇನ್ಸದ ಮುಂದಾಳುಗಳಿಗೆ ಬುದ್ಧಿ ಬಂದಿತು. ಒಪ್ಪಂದದ ಪುನರ್ವಿಮರ್ಶೆಯಾಗಿ ಹೊಸ ಕರಾರುಗಳನ್ನು ಮಾಡಿಕೊಳ್ಳಬೇಕೆಂದು ಅವರು ಹೇಳಹತ್ತಿದ್ದರು. ಆದರೆ ಡೆಮೊಸ್ಥನೀಜನ ಉದಾತ್ತ ಹೃದಯ ಅದಕ್ಕೆ ಒಪ್ಪಲಿಲ್ಲ. ಒಮ್ಮೆ ಒಪ್ಪಂದವಾದ ಮೇಲೆ ಅದಕ್ಕೆ ಬದ್ಧವಾಗಿ ನಡೆಯಲೇಬೇಕು. ಒಪ್ಪಿಗೆ ಕೊಡುವ ಮೊದಲೇ ಎಲ್ಲ ಕರಾರುಗಳ ತಕ್ಕ ವಿಮರ್ಶೆ ಆಗಿರಬೇಕು. ಇನ್ನು ಕಾಲ್ಕೆದರಿ ಜಗಳ ತೆಗೆಯುವದು ಸಾಧುವಲ್ಲ. ಒಪ್ಪಂದದಂತೆ ನಡೆಯಲೇಬೇಕು-ಎಂದು ಅವನು ಆಗ್ರಹದಿಂದ ಪ್ರತಿಪಾದಿಸಿದನು.

ಕ್ರಿ. ಪೂ. ೩೪೪ ರಲ್ಲಿ ಡೆಮೊಸ್ಥನೀಜನು ಫಿಲಿಪ್‌ನ ವಿರುದ್ಧ ಇನ್ನೊಂದು ಪ್ರಚಂಡ ವಾಗ್ಬಾಣವನ್ನು ಬಿಟ್ಟನು. ಇದಕ್ಕೆ 'ದ್ವಿತೀಯ ಫಿಲಿಪಿಕ್' ಎಂದು ಹೆಸರು. ಉತ್ತೇಜಕ ಮಾತುಗಾರಿಕೆಯ ಒಂದು ಉಗ್ರ ಉದಾಹರಣೆಯಿದು. ಅನಂತರ ಮೂರು ವರ್ಷಗಳಲ್ಲಿ ಯುದ್ಧದ ಆರಂಭವಲ್ಲಿ ಅಥೇನ್ಸದ ಜನಕ್ಕೆ ರಾಜ್ಯದ ರಕ್ಷಣೆಯ ಆಹ್ವಾನವನ್ನು ಕೊಡುತ್ತ ಅವನು 'ತೃತೀಯ ಫಿಲಿಪಿಕ್' ಎಂದು

ಹೆಸರಾದ ಭಾಷಣವನ್ನು ಮಾಡಿದನು. ದೇಶಭಕ್ತಿಯ ನಿರ್ಭರತೆ, ವಾಗ್ವೈಖರಿಯ ವೈಭವಗಳಲ್ಲಿ ಆ ಭಾಷಣ ಅದ್ವಿತೀಯವಿತ್ತು. ಹಿಂದಿನ ಎರಡು ಉಜ್ವಲ ಭಾಷಣಗಳನ್ನು ಅದು ಹಿಂದೆಹಾಕಿತು.

ಫಿಲಿಪ್‌ನ ವಿರುದ್ಧ ಮಾತ್ರವೇ ಅವನ ಪ್ರಚೋದನೆ ಸಾಗಿದ್ದಿಲ್ಲ. ಇತ್ತ ಒಪ್ಪಂದ ಕೆಡಿಸಿಬಂದ ಮನೆಮುರುಕ ಮುಂದಾಳುಗಳನ್ನು ಅವನು ಕಾಡಿದನು. ಅವನೂ ಅವನ ಪಕ್ಷದವರೂ ಒಪ್ಪಂದಕ್ಕೆ ಹೋದ ಮಂಡಳಿಯ ಮಾನಮುಂಡನವನ್ನು ಆರಂಭಿಸಿದರು. ಈ ಮಂಡಳಿಯಲ್ಲಿ ಒಬ್ಬನು ಪಲಾಯನ ಮಾಡಿದನು, ಆದರೆ ಬಹಿಷ್ಕೃತನಾದನು. ಮಿಕ್ಕವರಿಗೆ ದಂಡವಾಯಿತು. ಒಬ್ಬನು ಮಾತ್ರ ಶಿಕ್ಷೆ ತಪ್ಪಿಸಿಕೊಳ್ಳಲು ಸಮರ್ಥನಾದನು.

ಕ್ರಿ. ಪೂ. ೩೪೦ರಲ್ಲಿ ಫಿಲಿಪ್‌ನೊಡನೆ ಯುದ್ಧ ಸಾರಲಾಯಿತು. ಆರಂಭದಲ್ಲಿ ಅಥೇನ್ಸಕ್ಕೆ ಗೆಲುವಾಯಿತು. ಆದರೆ ಅಥೇನ್ಸಿಗೂ ಗಣರಾಜ್ಯ ಮಂಡಳಕ್ಕೂ ಒಂದು ಧಾರ್ಮಿಕ ವ್ಯಾಜ್ಯ ಉಂಟಾಯಿತು. ಆಗ ಮಂಡಳವು ತಮ್ಮ ಮಹಾ ಸದಸ್ಯನಾದ ಫಿಲಿಪ್‌ನನ್ನು ದಕ್ಷಿಣ ಗ್ರೀಸದ ಮೇಲೆ ದಾಳಿಮಾಡಲು ಕೇಳಿಕೊಂಡಿತು. ರೋನಿಯಾ ಎಂಬಲ್ಲಿ ಗ್ರೀಕರಿಗೆ ಪ್ರಚಂಡ ಪರಾಭವವಾಯಿತು. ಆಗ ಅಥೇನ್ಸದ ಜನ ಮರಣಾಂತಿಕ ಯುದ್ಧ ಹೂಡಿದರು. ಆದರೆ ಫಿಲಿಪ್‌ನು ಪರ್ಶಿಯಾದೇಶದ ಮೇಲೆ ದಂಡಯಾತ್ರೆ ಹೊರಡುವವನಿದ್ದನು. ಅವನಿಗೆ ಈ ಯುದ್ಧ ಬೇಕಿದ್ದಿಲ್ಲ. ಆದ್ದರಿಂದ ಅಥೇನ್ಸದಲ್ಲಿಯ ಮೆಸಿಡೋನಿಯನ್ ಪಕ್ಷದವರು ಫಿಲಿಪ್‌ನೊಂದಿಗೆ ಸುಲಭ ಒಡಂಬಡಿಕೆಯನ್ನು ಮಾಡಿ ಮಿತ್ರತ್ವವನ್ನು ಸಾಧಿಸಿದರು. ಈ ಮಿತ್ರತ್ವದಲ್ಲಿ ಒಂದು ಶತ್ರುತ್ವದ ಹೊಂಚು ಹುದುಗಿತ್ತು. ಡೆಮೊಸ್ಥೆನೀಜ ಮತ್ತು ಅವನ ಮತದ ಯುದ್ಧವಾದಿಗಳ ವಿರುದ್ಧ ಉಗ್ರಕ್ರಮ ತೆಗೆದು ಕೊಳ್ಳುವದು ಆರಂಭ ವಾಯಿತು. ಅಥೇನ್ಸವನ್ನು ಈ ಯುದ್ಧವಾದಿಗಳಿಂದ ಮುಕ್ತಗೊಳಿಸುವ ಚಟುವಟಿಕೆ ಕೈಗೊಳ್ಳಲಾಯಿತು. ಡೆಮೊಸ್ಥೆನೀಜನ ಮೇಲೆ ನ್ಯಾಯಾಲಯದಲ್ಲಿ ವ್ಯಾಜ್ಯದ ಮೇಲೆ ವ್ಯಾಜ್ಯಗಳನ್ನು ಹೂಡಲಾಯಿತು. ಆದರೆ ಅಪ್ರತಿಮ ನ್ಯಾಯತಜ್ಞ ವಾಗೀಶನು ಅವನ್ನೆಲ್ಲ ಗೆದ್ದನು. ಆಗ ಅಥೇನ್ಸದ ಜನತೆ ಅವನ ಕರ್ತೃತ್ವಕ್ಕೆ ಮೆಚ್ಚಿತು. ಚೀರೋನಿಯಾದಲ್ಲಿ ರಾಜ್ಯಕ್ಕಾಗಿ 'ಮಾಡಿ ಮಡಿದ' ವೀರ ಹುತಾತ್ಮರ ಪ್ರೀತ್ಯರ್ಥ ಘನವಾದ ಅಭಿಭಾಷಣವನ್ನು ಮಾಡುವ ಶ್ರೇಷ್ಠ ಮನ್ನಣೆಯನ್ನು ಅಥೇನ್ಸವು ಡೆಮೊಸ್ಥೆನೀಜನಿಗೇ ಕೊಟ್ಟಿತು. ಅವನು ಅಂದು ಮಾಡಿದ ಅಭಿ ಭಾಷಣ ಪ್ರಪಂಚದ ಶ್ರೇಷ್ಠ ಭಾಷಣಗಳಲ್ಲಿ ಒಂದು; ಅಂಥ ಅಂತ್ಯವಿಧಿಯ ಭಾಷಣಗಳಲ್ಲಿ ಒಂದನೆಯದು. ಅದರ ಭಾಷೆಯ ಓಘ, ಭಾವದ ಓಜ, ಶೈಲಿಯ

ಓರಣ, ಇವೆಲ್ಲ ಆದರ್ಶಪ್ರಾಯವಾದವು. ಸಾವಿರ ವರ್ಷಗಳ ಹಿಂದಿನ ಆ ಭಾಷಣ ಇನ್ನೂ ಜೀವಂತವಾಗಿದೆ, ಜ್ವಾಜಲ್ಯವಾಗಿದೆ. ರಾಷ್ಟ್ರದ ಹುತಾತ್ಮರಿಗಾಗಿ ರಾಷ್ಟ್ರೀಯ ಗೌರವವನ್ನು ಅಧಿಕಾರವಾಣಿಯಿಂದ ಅರ್ಪಿಸುವಾಗ ಅಂದಿನ ಡೆಮೊಸ್ಥೆನೀಜನ ಭಾಷಣವೇ ನೆನಪಾಗುತ್ತದೆ. ಅವರ ಮಾದರಿ ಮೀರಿಸಲು ಆಗುವದಿಲ್ಲ. ೧ನೆಯ ಮಹಾಯುದ್ಧ ಮುಗಿದ ದಿನದ ಸ್ಮಾರಕವಾಗಿ ಸಮರ ಸಮಾಪ್ತಿಯ ಜಾಗತಿಕ ದಿನಾಚರಣೆ ಪ್ರತಿವರ್ಷ ನಡೆಯುತ್ತಿದ್ದು, ಬ್ರಿಟಿಶ ಬಾನುಲಿ ಯಿಂದ ಡೆಮೊಸ್ಥೆನೀಜನ ಆ ಹುತಾತ್ಮಪ್ರಶಸ್ತಿಯ ಭಾಷಣವು ಆಗಾಗ್ಗೆ ಬಿತ್ತರಿಸ ಲಾಗುತ್ತಿತ್ತು. ದೇಶ, ಕಾಲಗಳ ಮೇರೆಯನ್ನು ಮೀರಿ ಆ ಮಹಾಧ್ವನಿಯು ಮೊಳಗುತ್ತಿದೆ, ಎಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕೆ ?

ಈವರೆಗೆ ಫಿಲಿಪ್‌ನ ವಜ್ರಮುಷ್ಟಿಯಲ್ಲಿ ಅಥೇನ್ಸ ಸಿಲುಕಿದಂತಿತ್ತು. ಪ್ರತೀಕಾರ ಶಕ್ಯವಿದ್ದಿಲ್ಲ. ಕ್ರಿ. ಪೂ. ೩೩೬ ರಲ್ಲಿ ತನ್ನ ಮುಖ್ಯ ಯುನಾನಿ ದಂಡನ್ನು ಪರ್ಶಿಯಾ ದೇಶಕ್ಕೆ ದಾಳಿಯಿಡಲು ಒಯ್ಯುವ ಸಮಯಕ್ಕೇ ಫಿಲಿಪ್‌ನನ್ನು ಯಾರೋ ಕೊಲೆ ಮಾಡಿದರು. ಅದೇ ಸಂದುಗಟ್ಟು ಸಾಧಿಸಿ ಮೆಸಿಡೋನಿಯನ್ ಒಡೆತನದ ವಿರುದ್ಧ ಬಂಡು ಹೂಡುವ ಒಳಸಂಚುಗಳು ನಡೆದವು. ಆದರೆ ಅವುಗಳ ನಡೆ ತೀರ ಮಂದ ವಾಯಿತು. ಫಿಲಿಪ್‌ನ ಮಗ ಅಲೆಕ್ಝಾಂಡರನು ೨೦ ವರ್ಷದವನಿದ್ದರೂ ಶೀಘ್ರವಾಗಿ ಕ್ರಮತೆಗೆದುಕೊಂಡನು; ಅಥೇನ್ಸು ಕೈಸುಟ್ಟುಕೊಂಡು ಹಳಹಳಿಸಬೇಕಾಯಿತು. ಆದರೆ ಸತ್ವಧೀರ ಡೆಮೊಸ್ಥೆನೀಜನು ನಿರ್ಭಯನಾಗಿಯೇ ನಡೆದನು. ಫಿಲಿಪ್‌ನು ತನ್ನ ರಾಜನೇ ಅಲ್ಲವೆಂದು ತಿಳಿದು, ಆತನು ಫಿಲಿಪ್‌ನ ಮರಣ ದಿನವು ಅಥೇನ್ಸಿಗೆ ಒಂದು ಸಾರ್ವಜನಿಕ ಹಬ್ಬವಾಗಬೇಕೆಂದು ಸಾರಿದನು. ಫಿಲಿಪ್‌ನ ಸಾವಿಗಾಗಿ ಸಾರ್ವಜನಿಕವಾಗಿ ದೇವರಿಗೆ ಆಭಾರ ಸಲ್ಲಿಸುವದು ಯೋಗ್ಯವೆಂದು ಅವನು ಸೂಚಿಸಿದನು !

ಒಂದು ವರ್ಷನಂತರ ಅಲೆಕ್ಝಾಂಡರನೇ ಸತ್ತನೆಂದು, ಥ್ರೇಸದಲ್ಲಿ ಅವನ ಕೊಲೆ ಯಾಯಿತೆಂದು,–ಸುಳ್ಳು ಸುದ್ದಿ ಹಬ್ಬಿತು. ಆಗ ಮೆಸಿಡೋನಿಯಾದ ಅಂಕೆಯಲ್ಲಿ ಸಿಲುಕಿದ ಥೀಬ್ಸ ಜನಾಂಗವು ಬಿಡುಗಡೆಗಾಗಿ ಬಂಡು ಹೂಡಿತು. ಡೆಮೊಸ್ಥೆನೀಜನಿಗೆ ಹಗೆಯ ಹಗೆಗಳೆಲ್ಲರೂ ಗೆಳೆಯರೇ. ಸ್ವಾತಂತ್ರ್ಯದ ಹೋರಾಟ ಎಲ್ಲಿ ನಡೆದರೂ ಅವನು ಅವರ ಪಕ್ಷಪಾತಿ. ಇಲ್ಲಿ ಅವನ ದೇಶದ ವೈರಿಯೊಡನೆಯೇ ಹೋರಾಟ ಸಾಗಿದೆ; ಅಂದಮೇಲೆ ಸುಮ್ಮನಿರುವನೇ ? ಅವನ ವಾಗ್ಮಿತೆಗೆ ವಶವಾಗಿ ಅಥೇನ್ಸ ಲೋಕಸಭೆಯು ಥೀಬ್ಸ ಬಂಡುಗಾರರಿಗೆ ಸಹಾಯ ಕಳಿಸಲು ಒಪ್ಪಿತು. ಹಣವನ್ನು ಕಳಿಸಲಾಯಿತು. ದಂಡು ಮತ್ತು ಹಡಗುಪಡೆ ಹೋಗಲು ಸಜ್ಜಾದವು. ಆವರೆ

ಅಲೆಕ್ಝಾಂಡರನು ಸತ್ತಿದ್ದಿಲ್ಲ. ತುಂಬ ಜೀವಂತನಿದ್ದನು ! ಅವನು ಸಾಗಿ ಬಂದನು. ಥೀಬ್ಸನಗರವು ಸೂರೆಯಾಗಿ ಉರಿಯಹತ್ತಿತು. ಬಂಡುಗಾರರಿಗೆ ಬೆಂಬಲಿಗರಾಗಿ ಬಂದ ಅಥೇನ್ಸದವರಿಗೂ ತಕ್ಕ ಪ್ರಾಯಶ್ಚಿತ್ತವಾಗಬೇಕಾಯಿತು. ಅಥೇನ್ಸದ ಹತ್ತು ಮುಂದಾಳುಗಳನ್ನು ತನ್ನ ವಶಕ್ಕೆ ಒಪ್ಪಿಸಬೇಕೆಂದು ಅಲೆಕ್ಝಾಂಡರನ ಕಟ್ಟಪ್ಪಣೆ ಹೊರಟಿತು. ಈ ಹತ್ತು ಮುಂದಾಳುಗಳಲ್ಲಿ ಡೆಮೊಸ್ಥೆನೀಜನು ಒಬ್ಬನು. ಆದರೆ ಕೊನೆಗೆ ಹೇಗೊ ಒಡಂಬಡಿಕೆಯಾಗಿ ಈ ಹತ್ತು ಜನರಲ್ಲಿ ಬಂಡುಗಾರರಿಗೆ ಪ್ರತ್ಯಕ್ಷ ಸಹಾಯ ಸಲ್ಲಿಸಿದ ಸೇನಾಪತಿಯೊಬ್ಬನೇ ಅಲೆಕ್ಝಾಂಡರನ ಕೋಪಕ್ಕೆ ಆಹುತಿಯಾದನು.

ಅಲೆಕ್ಝಾಂಡರನು ಫಿಲಿಪ್‌ನಂತಲ್ಲವೆಂದು ಡೆಮೊಸ್ಥೆನೀಜನು ಮನಗಂಡನು. ಇವನೆದುರು ದುಡುಕಿ ಉಪಯೋಗವಿಲ್ಲವೆಂದು ನಿರ್ಧರಿಸಿದನು; ಮುಂಜಾಗ್ರತೆಯನ್ನು ತಾಳಿದನು. ಅವನ ನಡೆ-ನುಡಿಯ ರಭಸ ತುಸು ಮಂದವಾಯಿತು. ಅವನ ಯುದ್ಧವಾದಿ ಪಕ್ಷದ ಉಗ್ರಗಾಮಿಗಳು ಅವನನ್ನು ತಿರಸ್ಕರಿಸತೊಡಗಿದರು. ಅವನ ವಿರೋಧಿಗಳಾದ ಮೆಸಿಡೋನಿಯನ್ ಪಕ್ಷದವರಿಗೆ ಇದೇ ಇಂಬು ಚೆನ್ನಾಗಿ ಸಿಕ್ಕಿತು. ಅವರು ಅವನ ಮೇಲೆ ಹೊಸ ಆಘಾತ ಮಾಡಿದರು.

ರಾಜ್ಯದ ಸೇವೆಯಲ್ಲಿ ಮಿಗಿಲಾಗಿ ದುಡಿದ ವ್ಯಕ್ತಿಗೆ ಅಥೇನ್ಸಿನಲ್ಲಿ ಸಲ್ಲಿಸುತ್ತಿದ್ದ ಹಿರಿದಾದ ಮನ್ನಣೆಯೆಂದರೆ ಒಂದು ಸ್ವರ್ಣ ಮುಕುಟವನ್ನರ್ಪಿಸುವದು. ಡೆಮೊಸ್ಥೆನೀಜನಿಗೆ ಅಂಥ ಒಂದು ಚಿನ್ನದ ಮುಕುಟ ಅರ್ಪಿಸಬೇಕೆಂದು ಒಬ್ಬ ಪ್ರಮುಖ ನಾಗರಿಕನು ಲೋಕಸಭೆಗೆ ಹಿಂದೆಯೇ ಸೂಚಿಸಿದ್ದನು. ಮುಕುಟ ಸಮರ್ಪಣೆ ನಡೆಯಲಿಲ್ಲ. ಆದರೆ ಕ್ರಿ. ಪೂ. ೩೩೦ ರಲ್ಲಿ ಮೆಸಿಡೋನಿಯನ್ ಪಕ್ಷದ ಮುಂದಾಳು ಒಬ್ಬನು ಆ ಮುಕುಟ ಸಮರ್ಪಣೆಯ ಸೂಚನೆ ತಂದವನಮೇಲೆ ಮೂರು ಆರೋಪಗಳನ್ನು ಹೊರಿಸಿದನು. (೧) ಡೆಮೊಸ್ಥೆನೀಜನು ಆಗ ರಾಜ್ಯದ ಒಂದು ಅಧಿಕಾರವನ್ನು ವಹಿಸಿದ್ದ ಮೂಲಕ, ಸರಕಾರದ ಅಧಿಕಾರಿಗಳಿಗೆ ಹೀಗೆ ಮುಕುಟ ಮುಂತಾದ ಪ್ರತ್ಯೇಕ ಮನ್ನಣೆಯನ್ನು ಸಲ್ಲಿಸುವದು ಕಾಯಿದೆಗೆ ವಿರುದ್ಧವು. (೨) ಮುಕುಟ ಸಮರ್ಪಣೆಯ ರೀತಿಯೂ ಅಷ್ಟೇ ರೂಢಿವಿರುದ್ಧವು. ಹಿಂದೆ ಯಾರಿಗೂ ಹೀಗೆ ಮುಕುಟವನ್ನು ಸಾರ್ವನಿಕಜವಾಗಿ ನಾಟ್ಯಮಂದಿರದಲ್ಲಿ ಸಮರ್ಪಿಸುವ ಸಮಾರಂಭವಾಗಿದ್ದಿಲ್ಲ. (೩) ಕೊನೆಯದಾಗಿ ಡೆಮೊಸ್ಥೆನೀಜನು ಕೆಟ್ಟ ಮನುಷ್ಯನು. 'ಮುಕುಟಾಭಿಷೇಕ'ಕ್ಕೆ ಅಯೋಗ್ಯನು. ಕೊನೆಗೆ ಬಂದರೂ ಇದೇ ಮೊದಲನೆಯದು ಮತ್ತು ನಿಜವಾದುದು.

ಈ ವಿರೋಧದ ವ್ಯಾಜ್ಯ ಎತ್ತಿದ ಮುಂದಾಳು ಎಸ್ಕಿನೆಸ್ ಎಂಬವನು ಹಿಂದೆ

ಫಿಲಿಪ್‌ನೊಡನೆ ಒಪ್ಪಂದಕ್ಕೆ ಹೋಗಿ ಕೆಲಸ ಕೆಡಿಸಿಬಂದ ಮಂಡಳದಲ್ಲಿ ಇವನೂ ಇದ್ದನು. ಇವನೂ ಕಡಿಮೆಯ ಮಾತುಗಾರನಿದ್ದಿಲ್ಲ; ಡೆಮೊಸ್ಥನೀಜನ ನಂತರದ ಸ್ಥಾನ ಇವನದೇ. ಇಂಥವನು ಈಗ ಶಿಶುಪಾಲನಂತೆ ಡೆಮೊಸ್ಥನೀಜನ 'ಅಗ್ರಪೂಜೆ'ಗೆ ವಿರೋಧಿಯಾಗಿ ನಾಲಿಗೆ ಎತ್ತಿದನು. ಡೆಮೊಸ್ಥನೀಜನು ಯುದ್ಧವಾದಿಗಳಿಗೂ ದ್ರೋಹಬಗೆದಿದ್ದಾನೆ; ಅಲೆಕ್ಝಾಂಡರನ ವಿರುದ್ಧ ಬಂಡುಹೂಡುವ ಅವಕಾಶ ಬಂದಿದ್ದರೂ ಅದನ್ನು ಉಪೇಕ್ಷಿಸಿದ್ದಾನೆ;–ಎಂದು ಎಸ್ಕಿನೆಸ್‌ನು ಒಳ್ಳೇ ಚಾತುರ್ಯದಿಂದ ವಾದಿಸಿದನು. ಈ ವಾದವು ಎರಡು ಧಾರೆಯ ಖಡ್ಗದಂತಿತ್ತು. ವಾದವನ್ನು ಒಪ್ಪಿಕೊಂಡರೆ ಯುದ್ಧವಾದಿ ಪಕ್ಷದ ದ್ರೋಹ ಕಟ್ಟಿಕೊಂಡ ಆರೋಪ ಸಿದ್ಧವಾಗಿ ಮುಂದೆ ಡೆಮೊಸ್ಥನೀಜನಿಗೆ ಅವನ ಪಕ್ಷವೇ ಬಹಿಷ್ಕಾರ ಹಾಕುತ್ತಿತ್ತು. ಇನ್ನು ವಾದವನ್ನು ಪ್ರತಿಭಟಿಸಿ ತಾನು ಅಲೆಕ್ಝಾಂಡರನ ವಿರುದ್ಧ ಬಂಡು ಹೂಡಲು ಹೆಣಗಿದ್ದೇನೆಂದು ಸಾಧಿಸಿದರೆ ರಾಜದ್ರೋಹದ ಮಹಾ ಪಾತಕದ ಉರುಲು ಕೊರಳಿಗೆ ಬೀಳುತಿತ್ತು. ಲೋಕಸಭೆಯಲ್ಲಿ ತನ್ನ ಬಾಯಿಯಿಂದಲೇ ತಾನು ಅಪರಾಧಿಯೆಂದು ಸಾಧಿಸಿ ಸರಕಾರೀ (ಮೆಸಿಡೋನಿಯನ್) ಪಕ್ಷದ ಕತ್ತಿಗೆ ತನ್ನ ಕತ್ತನ್ನು ಒಡ್ಡುವಂತೆ ಆಗುತ್ತಿತ್ತು ! ಈ ಉಭಯ ಸಂಕಟದ ಪೇಚೇ ಎಸ್ಕಿನೆಸ್‌ನ ವಾದ ಚಾತುರ್ಯ.

ಆದರೆ ಏನೆಂದರೂ ಈ ವಾದ ಚಾತುರ್ಯ ಎರಡನೇ ತರಗತಿಯದು. ಡೆಮೊಸ್ಥನೀಜನು ಅತ್ಯುತ್ತಮ ಭಾಷಣವನ್ನೊಂದು ಮಾಡಿ ತನ್ನ ಭೂಮಿಕೆಯನ್ನು ಅತಿ ಪ್ರಭಾವಿಯಾಗಿ ಮಂಡಿಸಿದನು. ತನ್ನಮೇಲೆ ಹೊರಿಸಿದ ಆರೋಪಗಳಿಗೆ ಅವನು ಉತ್ತರವನ್ನೇ ಕೊಡಲಿಲ್ಲ. ಎಸ್ಕಿನೆಸ್ ತಂದೊಡ್ಡಿದ ಸಂಕಟವನ್ನು ತನ್ನ ವಾಗ್ಮಿತೆಯ ಸಂಕಕಟ್ಟಿ ದಾಟಿಹೋದನು ! ತಾನು ಲೋಕಪಕ್ಷದವನಾಗಿ ನಿಜವಾದ ದೇಶಭಕ್ತನಂತೆ ಅಥೇನ್ಸದ ಹಿತಕ್ಕಾಗಿ ವ್ಯವಹರಿಸಿದೆನೋ, ರಾಜದ್ರೋಹಿಯಾಗಿ ಭಂಗಪಟ್ಟು ದಂಡಕ್ಕೆ ಪಾತ್ರನಾದೆನೋ ಎಂಬುದನ್ನು ನಿರ್ಣಯಿಸಲು ಸಭೆಗೇ ಬಿಟ್ಟನು. 'ನರಪತಿ ಹಿತಕರ್ತನೋ ಜನಪದ ಹಿತಕರ್ತನೋ' ಎಂಬ ಪ್ರಶ್ನೆಯ ತೀರ್ಮಾನ ಅವನ ಮಿಂಚಿನ ಮಾತಿಗೆ ಮಂತ್ರಮುಗ್ಧರಾಗಿ ಮಾರಿಹೋದ ಸಭಾಸದರಿಗೆ ತೀರ ತೊಡಕಿನದಾಯಿತು. ತಾನು ವ್ಯವಹರಿಸಿದ್ದೆಲ್ಲ ಜನಪದದ ಕಲ್ಯಾಣಕ್ಕಾಗಿ ಎಂಬುದನ್ನು ಅವನು ಸರ್ವಸಮ್ಮತವಾಗುವಂತೆ ಸಿದ್ಧಮಾಡಿದ್ದನು. ಆಗ ಅವನು ರಾಜದ್ರೋಹಿಯೆಂದರೆ ಲೋಕದ್ರೋಹಿಯೂ ಆಹುದೆಂದು ಆ ಲೋಕಸಭೆ ಒಪ್ಪಿಕೊಂಡಂತೆ. ಲೋಕ ಕಲ್ಯಾಣಕ್ಕಾಗಿ ಜೀವಮಾನವೆಲ್ಲ ಹೆಣಗಿದ ಲೋಕಮಾನ್ಯ ಲೋಕನಾಯಕನನ್ನು ಈಗ ಲೋಕಮತವೇ ದಂಡನೆಗೆ ಗುರಿ ಮಾಡಿದರೆ ಲೋಕವು ಮೆಚ್ಚೀತೆ ? ಸಭೆಯ ನಿಯಮದಂತೆ ಸೂಚನೆ ತಂದವನಿಗೆ

ಕನಿಷ್ಠ ಒಂದೈದರಷ್ಟು ಮತಗಳಾದರೂ ದೊರೆಯಬೇಕು. ಆ ಎಸ್ಕಿನೆಸ್‌ನಿಗೆ ಇಷ್ಟು ಮತಗಳೂ ಸಿಗುವದು ಅಶಕ್ಯವಾಯಿತು ! ಡೆವೊಸ್ಥೆನೀಜನ ಮುಕುಟಭಂಗಕ್ಕೆ ದುಡುಕಿದ ಅವನಿಗೆ ಪೂರ್ತಿ ಮುಖಭಂಗವಾಯಿತು ! ಅವನ ಮುಖ ಮುಂದೆ ಎಂದೂ ಅಥೇನ್ಸಿನಲ್ಲಿ ಕಾಣಲಿಲ್ಲ.

ಆದರೆ ಡೆವೊಸ್ಥೆನೀಜ ಎಂಥ ಉದಾರಶೀಲ ! ಅಥೇನ್ಸ ಬಿಟ್ಟು ಓಡಿ ಹೋದ ಎಸ್ಕಿನೆಸ್‌ನು ಮುಂದೆ ರ್‍ಹೋಡ್ಸ ಎಂಬಲ್ಲಿ ಶಿಕ್ಷಕನಾಗಿ ಶಾಲೆ ನಡೆಯಿಸುತ್ತಿರುವಾಗ ಆರ್ಥಿಕ ಬಿಕ್ಕಟ್ಟಿನಲ್ಲಿ ತೊಳಲುತ್ತಿರುವದನ್ನು ಕೇಳಿ ಕ್ಷಮಾವೀರನಾದ ಡೆವೊಸ್ಥೆನೀಜನು ಅವನಿಗೆ ಕೊಡುಗೈಯಿಂದ ಧನಸಹಾಯ ಮಾಡಿದನಂತೆ !

ಡೆವೊಸ್ಥೆನೀಜನು ಉದಾರಿ ಇದ್ದಂತೆ ವಿಚಾರಿಯೂ ಇದ್ದನು. ನೀತಿಗೆ ತಪ್ಪಿ ನಡೆಯುವ ಸಂಧಿಸಾಧಕ ರಾಜಕಾರಣಿಯು ಅವನಲ್ಲ. ಇದರ ಉದಾಹರಣೆ ಮುಂದೆ ಒದಗಿತು. ಕ್ರಿ. ಪೂ. ೩೨೪ ರಲ್ಲಿ ಅಲೆಕ್ಝಾಂಡರನ ಆಡಳಿತಗಾರನಾಗಿ ಬಾಬಿಲೋನ್ ರಾಜ್ಯವನ್ನು ಆಳುತ್ತಿದ್ದ ಹಾರ್ಪಲಸ್ ಎಂಬವನು ರಾಜನಿಗೆ ದ್ರೋಹಬಗೆದು ಒಂದು ಹಡಗುಪಡೆ ಮತ್ತು ೭೫೦ ಟೆಲೆಂಟ (ಸುಮಾರು ೧೪೦,೦೦೦ ಪೌಂಡು) ದ್ರವ್ಯದೊಡನೆ ಪಲಾಯನ ಮಾಡಿದನು. ಅವನು ಅಲ್ಲಿಂದ ಅಥೇನ್ಸಕ್ಕೆ ಆಶ್ರಯ ವನ್ನು ಕೋರಿ ಬಂದನು. ಅಥೇನ್ಸದ ಯುದ್ಧವಾದಿ ಲೋಕಪಕ್ಷದ ಆನಂದಕ್ಕೆ ಮಿತಿಯೇ ಉಳಿಯಲಿಲ್ಲ. ಆ ರಾಜದ್ರೋಹಿಯನ್ನು ಸ್ವಾಗತಿಸಿ ಅವನು ತಂದ ಯುದ್ಧ ಸಾಮುಗ್ರಿಯನ್ನು ಅಲೆಕ್ಝಾಂಡರನ ವಿರುದ್ಧ ಉಪಯೋಗಿಸಬಹುದೆಂದು ಅವರು ಒಳ್ಳೇ ಉತ್ಸಾಹತಾಳಿದರು. ಆದರೆ ಡೆವೊಸ್ಥೆನೀಜನು ದೂರಾಲೋಚನೆ ಯಿಂದ ಈ ದುರಾಲೋಚನೆಗೆ ತಡೆಹಾಕಿದನು. ಹಾರ್ಪಲಸ್‌ನಿಗೆ ವೈಯಕ್ತಿಕವಾಗಿ ಶರಣಾರ್ಥಿಯೆಂದು ಆಶ್ರಯಕೊಡಲು ಅವನು ಒಪ್ಪಿದನು. ಆದರೆ ಮೊದಲು ಆತನು ಅಪಹರಿಸಿ ತಂದ ಪಡೆಯನ್ನೂ ಧನವನ್ನೂ ಮರಳಿ ಒಪ್ಪಿಸಬೇಕೆಂದು ಒತ್ತಾಯ ಪಡಿಸಿದನು. ಮೆಸಿಡೋನ್ ಸರಕಾರವೂ ಹಾರ್ಪಲಸ್‌ನನ್ನು ತಡೆದಿರಿಸಿ ಅವನ ಬಳಿಯಲ್ಲಿದ್ದ ಹಣವನ್ನೆಲ್ಲ ಸರಕಾರದ ಹೆಸರಿನಿಂದ ಪಾರ್ಥೆನೊನ್ (ದೇವಾಲಯ)ದಲ್ಲಿ ಇಡುಗಂಟಾಗಿ ಇಡಬೇಕೆಂದು ರಾಯಸ ಹೊರಡಿಸಿತು. ಡೆವೊಸ್ಥೆನೀಜನು ಇದಕ್ಕೆ ಸಮ್ಮತಿಸಿದನು.

ಆದರೆ ಅರಿಷ್ಟ ಇಲ್ಲಿಗೇ ಮುಗಿಯಲಿಲ್ಲ. ತಡೆದಿಟ್ಟಲ್ಲಿಂದ ಹಾರ್ಪಲಸ್ ಪಲಾಯನ ಮಾಡಿದನು. ಅವನಿಂದ ಸೆಳಕೊಂಡ ಹಣವನ್ನು ಸರಕಾರವು ಲೆಕ್ಕಮಾಡಿಸಿತು. ಅರ್ಧಕ್ಕೂ ಹೆಚ್ಚು ಮಾಯವಾಗಿತ್ತು. ಇಡುಗಂಟಾಗಿ ಗುಡಿಯಲ್ಲಿಟ್ಟ ಉಳಿದ

ಹಣ ಏನಾಯಿತೆಂದು ಕಂಡು ಹಿಡಿಯಲು ಸರಿಯಾಗಿ ಶೋಧ ನಡೆಯಿಸಬೇಕೆಂದು ಡೆಮೊಸ್ಥೆನೀಜನೇ ಸೂಚನೆತಂದನು. ಸೂಚನೆ ಮಾನ್ಯವಾಯಿತು. ಶೋಧ ನಡೆಯಿತು. ಆ ಹಣದ ಅಕ್ರಮ ವಿನಿಯೋಗ ಮಾಡಿದ ಅಪರಾಧಿಗಳ ಹೆಸರಿನ ಉದ್ದಪರಿವಿಡಿಯೊಂದು ಪ್ರಕಟವಾಯಿತು. ಆ ಪರಿವಿಡಿಯಲ್ಲಿ ಅಗ್ರಸ್ಥಾನದಲ್ಲಿ ಡೆಮೊಸ್ಥೆನೀಜನ ಹೆಸರೇ ನಿಂತಿತ್ತು! ಮೆಸಿಡೋನಿಯನ್ ಪಕ್ಷದ ಹೊಂಚು ಕೊನೆಗೂ ಸಾಧಿಸಿತು. ಡೆಮೊಸ್ಥೆನೀಜನು ವಿಚಾರಣೆಗೆ ಗುರಿಯಾದನು; ಶಿಕ್ಷೆಯೂ ಆಯಿತು. ಅವನಿಗೆ ಭಾರವಾದ ದಂಡ ವಿಧಿಸಲ್ಪಟ್ಟಿತು. ಅವನು ಅದನ್ನು ತೆರಲಾರದೇ ಹೋದನು. ಆಗ ಶಿಕ್ಷೆಯೆಂದು ಅಥೇನ್ಸಿನಿಂದ ಹೊರಗೆ ತಳ್ಳಲ್ಪಟ್ಟನು.

ಒಂದು ವರ್ಷದ ನಂತರ ಕ್ರಿ. ಪೂ. ೩೨೩ ರಲ್ಲಿ ಅಲೆಕ್ಝಾಂಡರನ ಮರಣದ ವಾರ್ತೆ ಬಂದಿತು. ಆಗ ಅಥೇನ್ಸದ ಜನ ತಮ್ಮ ನಿರ್ವಾಸಿತ ನಾಯಕನನ್ನು ತಿರುಗಿ ಕರೆಸಿ ಕೊಂಡಿತು. ಜನ ಡೆಮೊಸ್ಥೆನೀಜನನ್ನು ಒಳ್ಳೆ ಉಲ್ಹಾಸ ಉತ್ಸಾಹದಿಂದ ಸ್ವಾಗತಿಸಿತು; ನಾಯಕನು ಮತ್ತೆ ಆ ನಗರರಾಜ್ಯದ ನಾಯಕತ್ವವನ್ನು ವಹಿಸಿದನು. ಸ್ವತಂತ್ರ ಗ್ರೀಸಕ್ಕಾಗಿ ಮತ್ತೆ ಹೋರಾಟ ಆರಂಭಿಸಿತು; ಮೆಸಿಡೋನಿಯಾದ ಒರಟು ಒಡೆಯರ ಸಂಸ್ಕೃತಿ ಶೂನ್ಯವಾದ ಕರ್ಕಶ ಆಧಿಪತ್ಯದ ವಿರುದ್ಧ ಡೆಮೊಸ್ಥೆನೀಜನ ವೀರವಾಣಿಯು ಮತ್ತೆ ಆರ್ಭಟಿಸಿತು. ತನ್ನ ಗುರಿಯ ದಾರಿಯಲ್ಲಿ ನಡೆಯುವವರು ಯಾರೇ ಇರಲಿ ಅವರ ಭುಜಕ್ಕೆ ಭುಜ ಆನಿಸಿ ಹೆಜ್ಜೆ ಇಡಲು ಅವನು ಸದಾಸಿದ್ಧ. ದೇಶಪ್ರೇಮ, ದಾಸ್ಯದ ದ್ವೇಷಗಳ ಮುಂದೆ ವೈಯಕ್ತಿಕ ದ್ವೇಷ ಪ್ರೇಮಗಳು ಅವನಿಗೆ ತುಚ್ಛವೆನಿಸುತಿದ್ದವು. ಹೈಪರ್ಡಾಯಿಸ್ ಎಂಬವನು ಅವನ ನ್ಯಾಯ ವಿಚಾರಣೆಯಲ್ಲಿ ಪ್ರತಿಪಕ್ಷಿಯಾಗಿನಿಂತು ವಾದಿಸಿ ಗೆದ್ದ ವಕೀಲನು. ಆದರೆ ಈಗ ಹೈಪರ್ಡಾಯಿಸ್‌ನು ಅವನ ಗೆಳೆಯ, ದೇಶಕಾರ್ಯದಲ್ಲಿ ಜತೆಗಾರ. ಅವರಿಬ್ಬರೂ ಕೂಡಿ ಇಡಿ ಫಿಲೋಪೊನೀಜ ಪ್ರಾಂತವನ್ನು ಸುತ್ತಾಡಿ ಸ್ವಾತಂತ್ರ್ಯಯುದ್ಧಕ್ಕಾಗಿ ಜನ ಜಾಗ್ರತಿಯನ್ನುಂಟುಮಾಡಿದರು!

ಅಥೇನ್ಸದ ಯುದ್ಧಾರಂಭ ಸಡಗರದಿಂದಾಯಿತು. ಅಲೆಕ್ಝಾಂಡರನ ಉತ್ತರಾಧಿಕಾರಿ ಎಂಟಿಪೇಟರ ಎಂಬ ಖ್ಯಾತಿವಂತ ಸೇನಾಪತಿ: ಈಗ ಮೆಸಿಡೋನಿಯಾದ ಆಳರಸು. ಅವನನ್ನು ಅಥೇನಿಯನ್ನ ರಾಷ್ಟ್ರೀಯ ಪಡೆಗಳು ಥೆಸ್ಸಾಲಿ ಎಂಬಲ್ಲಿ ಸೋಲಿಸಿ ಓಡಿಸಿದರು. ಎಂಟಿಪೇಟರನು ಲಾಮಿಯಾ ಎಂಬಲ್ಲಿಗೆ ಹಿಂದೆ ಸರಿದು ನಿಂತನು. ಇವರು ಲಾಮಿಯಾವನ್ನು ಮುತ್ತಿದರು. ಆದರೆ ಅಲ್ಲಿ ಆಯಕಟ್ಟಿನ ವೇಳೆಗೆ ಅಥೇನಿಯನ್ ಸೇನಾಪತಿ ಕಾಳಗದಲ್ಲಿ ಹತನಾದನು. ಯುದ್ಧದ ಭಾಗ್ಯಚಕ್ರ ಮತ್ತೆ ಬುಡಮೇಲಾಯಿತು. ಮುತ್ತಿಗೆ ಕಿತ್ತಿತು. ಎಂಟಿಪೇಟರನಿಗೆ ಏಸಿಯಾದಿಂದ ಸೇನಾ

ಸಹಾಯ ಬಂದು ತಲ್ಪಿತು. (ಅಲೆಕ್ಝಾಂಡರನ ಸೇನೆಯು ಅಲ್ಲಲ್ಲಿ ಏಸಿಯಾದ ಸಾಮ್ರಾಜ್ಯದ ರಕ್ಷಣೆಗಾಗಿ ನಿಂತಿತ್ತು.) ಅಥೇನಿಯನ್ನ ಸೈನ್ಯವನ್ನು ಎಂಟಿಪೇಟರನು ಪೂರ್ತಿ ಪರಾಭವಗೊಳಿಸಿದನು.

ಈ ಸಲ ಮೆಸಿಡೋನಿಯನ್ನರು ತಮ್ಮ ಪರಮಶತ್ರುವಿನ ಕುರಿತು ಮತ್ತೆ ತಪ್ಪುವಂತಿದ್ದಿಲ್ಲ. ಅಥೇನ್ಸನ್ನು ಸ್ವಾತಂತ್ರ್ಯ ಯುದ್ಧದ ಅಂತಿಮ ಸಾಹಸಕ್ಕಾಗಿ ಹುರಿದುಂಬಿಸಿ ಉರಿದೆಬ್ಬಿಸಿದ ಹಿರಿಯ ವಾಗ್ಮಿಗಳಾದ ಡೆಮೊಸ್ಥೆನೀಜ ಮತ್ತು ಹೈಪರ್ಡಾಯಿಸ್ ಇಬ್ಬರನ್ನೂ ಸೆರೆಯಾಳಾಗಿ ಒಪ್ಪಿಸಬೇಕೆಂದು ಎಂಟಿಪೇಟರನು ಆಜ್ಞೆ ಹೊರಡಿಸಿದನು.

ಡೆಮೋಸ್ಥೆನೀಜನು ಕೆಲೌರಿಯಾ ದ್ವೀಪಕ್ಕೆ ಓಡಿವನು–ಅರಿಸ್ಟೊಟಲ್‌ನಂತೆ. ಇದು ನಡೆದದ್ದು ಕ್ರಿ. ಪೂ. ೩೨೨ ರ ಅಕ್ಟೋಬರ ತಿಂಗಳಲ್ಲಿ. ಅಲ್ಲಿ ಅವನು ಪೊಸಿಡೋನ್ ಎಂಬ ದೇಗುಲದಲ್ಲಿ ಅಡಗಿನಿಂತನು. ಆದರೆ ಹಗೆಯು ಅವನನ್ನು ಹಿಂಬಾಲಿಸಿ ಬಂದಿತು. ಆರ್ಕಿಯಾಸ್ ಎಂಬ ಒಬ್ಬ ನಟನು ಖಲಪಾತ್ರದ ಅಭಿನಯಕ್ಕೆ ರಣ ಭೂಮಿಯನ್ನೇ ರಂಗಭೂಮಿಯಾಗಿ ಮಾಡಿಕೊಂಡು, ದೇಶಕ್ಕೆ ದ್ರೋಹ ಬಗೆದು ಡೆಮೊಸ್ಥೆನೀಜನಿದ್ದಲ್ಲಿ ಕೆಲವು ಭಲ್ಲೆಗಾರರ ಪಡೆಯೊಡನೆ ಬೆನ್ನಟ್ಟಿ ಬಂದನು. ಅವನು ಹೇಳಿಕೇಳಿ ದ್ರೋಹಿ, ದೇಗುಲದ ಪಾವಿತ್ರ್ಯವನ್ನು ಅವನು ಲೆಕ್ಕಿಸುವವನಲ್ಲ. ದೇಶಕ್ಕೆ ದ್ರೋಹ ಬಗೆವವನಿಗೆ ಧರ್ಮದ ಮೋಹವೆಲ್ಲಿಂದ ಬರಬೇಕು ? ಆದರೂ ಆ ದೇವತೆಯ ಗರ್ಭಗುಡಿಯಲ್ಲಿ ನುಗ್ಗಲು ಅವನು ಹೆದರಿದನು. ಅದು ಉಗ್ರವಾದ ವರುಣದೇವತೆಯಾಗಿತ್ತು. ಆದ್ದರಿಂದ ಅವನು ಬಾಗಿಲಲ್ಲಿಯೇ ತಡೆದನು. (ಸಾಮಾನ್ಯವಾಗಿ ಅಂದಿನ ನಂಬಿಕೆಯ ಯುಗದಲ್ಲಿ ದೇಗುಲಗಳನ್ನು ಆಶ್ರಯಿಸಿದ ಅಪರಾಧಿಗಳನ್ನು ದೇವರೇ ರಕ್ಷಿಸುತ್ತಿರುವನೆಂಬ ಭಾವನೆಯಿಂದ ರಾಜಭಟರು ಒಳನುಗ್ಗಿ ಸೆರೆಹಿಡಿಯುತ್ತಿದ್ದಿಲ್ಲ. ದೇವರ ಪರಿಸರದಲ್ಲಿ ರಾಜನ ಅಪ್ಪಣೆ, ಕಟ್ಟಳೆಗಳು ನಡೆಯಲಾರವೆಂದು ಆಗಿನ ರಾಜರೂ–ಪ್ರಜೆಗಳೂ ನಂಬುತ್ತಿದ್ದರು ! ಆ ನೀಚ ನಟನು ಹೊಸ್ತಿಲಿನ ಹೊರಗೆಯೇ ಹೆದರಿನಿಂತುದಕ್ಕೆ ಇದೂ ಒಂದು ಕಾರಣ.)

ಆದ್ದರಿಂದ ಹೊರಗಿನಿಂದಲೇ ಅವನು ಡೆಮೊಸ್ಥೆನೀಜನಿಗೆ ಬಿನ್ನವಿಸಿಕೊಂಡನು. ದೇಗುಲದಿಂದ ಹೊರಗೆ ಬಂದರೆ, ಎಂಟಿಪೇಟರನಿಗೆ ಶರಣು ಬಂದರೆ ಅವನಿಗೆ ಕ್ಷಮೆ ಆಗುವದು.

'ಆರ್ಕಿಯಾಸ್' ಒಳಗಿನಿಂದ ಆ ಶ್ರೇಷ್ಠ ವಾಗ್ಮಿಯು ಶಾಂತವಾದ ಕಟುವಾದ ದನಿಯಲ್ಲಿ ಅಂದನು. 'ನಿನ್ನ ನಟನೆಯಿಂದ ನಾನು ಮೋಹಿತನಾಗಿಲ್ಲ; ಈಗ ನಿನ್ನ

ವಚನದಿಂದಲೂ ನಾನೂ ಮೋಹಿತನಾಗಲಾರೆ.' ಮಿಕ್ಕ ನರರಿಗಿಂತಲೂ ನಟರಿಗೆ ಅಹಂಕಾರ ವಿಪರೀತ. ಈ ಮಾತಿನ ಪೆಟ್ಟಿಗೆ ಆತನು ಸಿಡಿಮಿಡಿಯಾದನು. ಬಾಯ್ಬಡಿಕೆಯಿಂದ ಗದ್ದರಿಸಹತ್ತಿದನು. ಆಗ ಡೆಮೊಸ್ಥೆನೀಜನು ತಿರಸ್ಕಾರದಿಂದ ನಕ್ಕು ಅಂದನು; 'ಸರಿ ಇದೀಗ ನಿನ್ನ ನಿಜರೂಪ. ಆಗಿನ ನಯದ ನಡತೆ ಬರೇ ನಟನೆಯಾಗಿತ್ತು. ಈಗ ನೀನು ಮೆಸಿಡೋನಿಯನ್ ದೆವ್ವ ಏರಿದವನಂತೆ ನಿಜವಾದ ನೀಚತನದಲ್ಲಿಯೇ ನುಡಿದಿ. ಒಂದು ಕ್ಷಣ ತಡೆ. ನನ್ನ ಗೆಳೆಯರಿಗೆ ಕೆಲವು ಪತ್ರಗಳನ್ನು ಬರೆದಿಟ್ಟು ಬರುವೆನು.'

ಹೀಗೆಂದು ಡೆಮೊಸ್ಥೆನೀಜನು ಗುಡಿಯ ಒಳಭಾಗದಲ್ಲಿ ಹೋದನು. ಅವನು ಅಲ್ಲಿಂದಲೂ ಅರ್ಕಿಯಾಸನಿಗೂ ರಾಜಭಟರಿಗೂ ಚೆನ್ನಾಗಿ ಕಾಣುತ್ತಿದ್ದನು. ಅಲ್ಲಿ ಕೂತು ಅವನು ಲೆಕ್ಕಣಿಕೆಯನ್ನು ಎತ್ತಿ ವಿಚಾರವ್ಯಗ್ರನಾಗಿದ್ದಂತೆ ಹಲ್ಲಿನಿಂದ ಕಚ್ಚತೊಡಗಿದನು. ಕೂಡಲೇ ತನ್ನ ನಿಲುವಂಗಿಯ ಸೆಲ್ಲೆಯಿಂದ ತಲೆಯನ್ನು ಮುಚ್ಚಿಕೊಂಡನು. ಹೊರಗಿನಿಂದ ನಿಂತು ನೋಡುವ ಭಲ್ಲೆಗಾರರು ಅವನ್ನು ಕಂಡು ಹೀಯಾಳಿಸಿ ಹಾಸ್ಯಮಾಡಿದರು. ಡೆಮೊಸ್ಥಿನೀಜನು ಮೋರೆ ಮುಚ್ಚಿಕೊಂಡು ಮುಸುಕಿನಲ್ಲಿ ಮುಸು ಮುಸು ಅಳುತ್ತಾನೆಂದು ಅವರು ತಿಳಿದರು! ಅರ್ಕಿಯಾಸನು ಧೈರ್ಯ ಕಟ್ಟಿಕೊಂಡು ದೇಗುಲವನ್ನು ಪ್ರವೇಶಿಸಿದನು–ಆ ವಾಗ್ಮಿಯನ್ನು ಹೊರಗೆ ತರಲಿಕ್ಕೆ. ಒಳಗೆ ಕಾಲಿಟ್ಟು ಅವನನ್ನು ಕರೆದನು. ಕೂಗಿದನು. ಆದರೆ ಉತ್ತರ ಬರಲಿಲ್ಲ.

ಜಗದಾಚೆಗೆ ದಾಟಲಿದ್ದ ಜೀವ ಉತ್ತರ ಕೊಡುವದೆಂತು? ಲೆಕ್ಕಣಿಕೆ ಕಚ್ಚಿದಾಗಲೇ ಡೆಮೊಸ್ಥೆನೀಜನು ಮಹಾವಿಷವನ್ನು ತೆಗೆದುಕೊಂಡಿದ್ದನು. ಲೆಕ್ಕಣಿಕೆಯಲ್ಲಿ ಅಡಗಿಸಿಟ್ಟ ವಿಷವನ್ನೇ ಅವನು ಆಗ ಹೀರಿದ್ದು. ವಿಷದ ವಿಕಾರ ಛಾಯೆ ಆ ಮಹಾಪುರುಷನ ಮೈಯನ್ನೆಲ್ಲ ಮೆಲ್ಲಗೆ ಆವರಿಸುತಿತ್ತು. ಆದರೂ ಅರ್ಕಿಯಾಸ್‌ನು ಬರುವದನ್ನು ಕಂಡು ಡೆಮೊಸ್ಥೆನೀಜನು ತತ್ತರಿಸುತ್ತ ಎದ್ದುನಿಂತು ನಿರ್ವಿಕಾರ ಚಿತ್ತದಿಂದ ನುಡಿದನು; 'ಇನ್ನು ಈ ರುದ್ರ ನಾಟಕದಲ್ಲಿ ನಿನ್ನ ಖಲಪುರುಷನ ಭೂಮಿಕೆಯನ್ನು ಮನಸೋಕ್ತ ನಿರ್ವಹಿಸು. ನನ್ನ ದೇಹವನ್ನು ಹುಗಿಯದೇ ಹಾಗೆಯೇ ಒಗೆದು ಬಿಡು ಬೇಕಾದರೆ. ಆದರೆ ಕರುಣಾಳು, ಪೊಸಿಡೋನ್ ದೈವತವೇ, ಉಸಿರಿರುವಾಗಲೇ ನಾನು ನಿನ್ನ ಪವಿತ್ರ ಸನ್ನಿಧಿಯಿಂದ ದೂರ ಸರಿಯುವೆನು. ಈಗಾಗಲೇ ಎಂಟಿಪೇಟರ ಮತ್ತು ಅವನ ಮೆಸಿಡೋನಿಯನ್ ಮರುಳುಗಳು ಈ ನಿನ್ನ ಸ್ಥಾನವನ್ನು ಸಾಕಷ್ಟು ಭ್ರಷ್ಟಮಾಡಿರುವರು!' ಇಷ್ಟು ಮಾತನಾಡುತ್ತ ಅವನು ಜೋಲಿಹೊಡೆಯುತ್ತ ಹೇಗೋ ದೇವತೆಯ ವೇದಿಕೆಯಿಂದ ದೂರ ಹಾಯ್ದು

ಬಂದು ಬಿದ್ದು ಸತ್ತನು.

ಹೀಗೆ ಡೆಮೊಸ್ಥೆನೀಜನ ದುರಂತವಾಯಿತು. ನ್ಯಾಯ ಮತ್ತು ದೇಶದ ಸ್ವಾತಂತ್ರ್ಯ ಇವೆರಡಕ್ಕಾಗಿ ದೀರ್ಘವಾಗಿ, ದುರ್ಧರ್ಷವಾಗಿ ಕದನವೆಸಗಿದ, ಆ ಧೀರ ಧುರಂಧರನು ಸೋಲಿನ ಕಹಿಸೋವಿನಲ್ಲಿ ಆತ್ಮಹತ್ಯೆಯ ಸಾವಿನಲ್ಲಿ ತನ್ನ ಕೊನೆಯನ್ನು ಕಂಡನು. ಸ್ವದೇಶದಲ್ಲಿಯ ಹಿತಶತ್ರುಗಳೊಡನೆಯೂ ವಿದೇಶದ ಒಬ್ಬ ಮಹಾಶತ್ರುವಿನೊಡನೆಯೂ ಅವನು ಧೈರ್ಯದಿಂದ ದೃಢನಿರ್ಧಾರದಿಂದ ಹೋರಾಡಿದನು. ಇದು ಮಹತ್ವದ್ದು. ಕೊನೆಗೂ ಅವನು ಸೋತನು. ಇದು ಮುಖ್ಯವಲ್ಲ. ಅವನ ಸೋಲು ಎಷ್ಟು ಅನಿವಾರ್ಯವೋ ಅಷ್ಟೇ ಸಡಗರದ್ದಾಯಿತು. ಏಕೆಂದರೆ ಸೋಲು ಅಲ್ಲ, ಸಾಧ್ಯ ಸಣ್ಣದಾಗಿರುವದೇ ದೊಡ್ಡ ಅಪರಾಧವು. ಆ ಮಟ್ಟಿಗೆ ಈ ವಾಗ್ಮಿಗಳ ಚಕ್ರವರ್ತಿಯು ನಿರಪರಾಧಿಯು.

ಪುರಾತನಕಾಲದಂತೆ ಅಥೇನ್ಸ್ ಸ್ವತಂತ್ರ ನಗರವಾಗಿ ಸಾಮ್ರಾಜ್ಯದ ರಾಣಿಯಾಗಿ ನ್ಯಾಯದ ಮಹದ್ಧಾತ್ರಿಯಾಗಿ, ಗ್ರೀಸದ ಸರ್ವಸ್ವಾತಂತ್ರ್ಯಗಳ ರಕ್ಷಕ ದೈವವಾಗಿ, ಹಿರಿದಾಗಿ ನಿಲ್ಲಬೇಕೆಂಬುದೇ ಡೆಮೊಸ್ಥೆನೀಜನ ಆದರ್ಶವಿತ್ತು. ಹೆಲೆನಿಕ್ ಸಂಸ್ಕೃತಿಯ ಸುಂದರ ಪುಷ್ಪವಾಗಿ ಅರಳಿದ ಆ ನಗರದ ಸ್ವಾತಂತ್ರ್ಯವನ್ನೇ ತುಳಿಯಲು ಬಂದ ಫಿಲಿಪ್‌ನಲ್ಲಿಯೂ ಅವನ ಮೆಸಿಡೋನಿಯನ್ ಸತ್ತೆಯಲ್ಲಿಯೂ ಅವನು ಕರ್ಕಶ ಬರ್ಬರತೆಯನ್ನೇ ಕಂಡನು. ಕಂಡು, ಕೆಂಡ ಉಗುಳಿದನು; ಬರೆಹಗಾರ ಮಾತುಗಾರನೆಂಬ ತನ್ನ ಎಲ್ಲ ಮಹಾಶಕ್ತಿಯನ್ನು ಆ ಆದರ್ಶದ ಸಾಧನೆಯಲ್ಲಿ ಸವೆಯಿಸಿದನು.

ಮುಂದಿನ ಯುಗಗಳಿಗೆಲ್ಲ ಜಾಣ್ಮೆಯ ಮಾತಿಗೂ ಮಾತಿನ ಜಾಣ್ಮೆಗೂ ಅವನೇ ಮುಖ್ಯ ಮಾದರಿಯಾದನು. ರೋಮನ್ ವಾಗ್ಮಿ ಸಿಕೆರೋನಿಂದ, ಬ್ರಿಟಿಶ್ ವಾಕ್ಪಟು ಬರ್ಕನಿಗೂ ಮುಂದೆ ನಮ್ಮ ಕಾಲದ ಚರ್ಚಿಲ್ಲನ ತನಕವೂ, ತಮ್ಮ ಭಾಷಣದ ಭವ್ಯತೆಯಿಂದಲೂ ಆವೇಶಯುಕ್ತ ವಾಗ್ಧೋರಣೆಯ ಅಲಂಕಾರಿಕತೆಯಿಂದಲೂ ಪ್ರಪಂಚವನ್ನು ತಲ್ಲೀನವಾಗಿ ತಲೆದೂಗುವಂತೆ ಮಾಡಿ ನಾಲಿಗೆಯ ತುದಿಯ ಮೇಲೆ ಜನಾಂಗದ ಹೃದಯಗಳನ್ನೇ ಕುಣಿಸುವ ಮಾತುಗಾರರಿಗೆಲ್ಲ ಅವನೇ ಆದಿಗುರು.

ಅವನ ಜೀವನದ ಮರ್ಮವನ್ನು ಅವನ ಕಾರ್ಯದ ಸಾಫಲ್ಯವನ್ನು ಅರಿತ ಅಥೇನೀಯನ್ ಜನವು ಅವನ ಸ್ಮಾರಕದ ಮೇಲೆ ಈ ಮುಂದಿನ ಪಂಕ್ತಿಗಳನ್ನು ಕೊರೆಯಿಸಿ ಸತ್ಯವನ್ನೇ ಸಾರಿತು.

'ನಿನ್ನಲ್ಲಿ ಜಾಣ್ಮೆಯೊಂದಿಗೆ ಬಲವೂ
ಸರಿಯಾಗಿ ಕೂಡಿಕೊಂಡಿದ್ದರೆ ಗ್ರೀಸವು
ಗೆಲುವುಗಾರನ ಆಕ್ರಮಣಕ್ಕೆ ಎಂದಿಗೂ
ಬಗ್ಗುತ್ತಿರಲಿಲ್ಲ !'

# ಲಿಯೊನಾರ್ಡೋ ಡಾವಿನ್ಸಿ

ಫ್ಲೋರಾನ್ಸ ನಗರದಲ್ಲಿ ಒಂದು ಸಂಜೆ ಆ ಗಣರಾಜ್ಯದ ನಾಗರಿಕರೆಲ್ಲ ವಿಶ್ರಾಮ ಪಡೆಯುತ್ತಿದ್ದಾರೆ. ನಗರದ ಹಿರಿಯ ಚಿತ್ರಕಾರರು, ಶಿಲ್ಪಿಗಳು ಶಾಸ್ತ್ರಜ್ಞರು, ತತ್ವವೇತ್ತರು, ಎಲ್ಲರೂ ಹರಟೆ ಕೊಚ್ಚಲು ಒಂದೆಡೆಗೆ ಕೂಡುತ್ತಿದ್ದಾರೆ. ಆದರೆ ಇಂದು ಅವರು ಕೂಡಿದಲ್ಲಿ ಹರಟೆ ಕೇಳಬರುವದಿಲ್ಲ. ಅವರು ಮಾತನಾಡುತ್ತಲೇ ಇಲ್ಲ. ಎಲ್ಲರೂ ಕಿವಿಗೊಟ್ಟು ಕೇಳುತಿದ್ದಾರೆ. ಏನನ್ನು ?

ಅಕೊ, ಅಲ್ಲಿ ಒಬ್ಬ ನವಯುವಕನು ನಿಂತು ಮಾತನಾಡುತ್ತಿದ್ದಾನೆ. ವಿಷಯ ದೊಂದಿಗೆ ಒಂದಾದಂತೆ ಅವನ ಮಾತಿನಲ್ಲಿ ಆವೇಶವು, ಮುಖದಲ್ಲಿ ಕಾಂತಿಯು ಹೆಚ್ಚುತ್ತದೆ. ಅವನ ಮುಖವೆಷ್ಟು ಸುಂದರ ! ಹೊಂಬಣ್ಣದ ಕುರುಳುಗಳು ಅವನ ಮನೋಹರ ಮುಖಮಂಡಲದ ಸುತ್ತಲು ಪ್ರಭಾವಳಿಯಂತೆ ನಿಬಿಡವಾಗಿ ಹಾರಾಡುತ್ತವೆ. ಅವುಗಳ ವಿಪುಲ ಭಾರವು ಅವನ ಎತ್ತರವಾದ ಹೆಗಲುಗಳ ಮೇಲೂ, ತಿಳಿಗೆಂಪು ನಿಲುವಂಗಿಯ ಮೇಲೂ ಬಿದ್ದು ಮುದ್ದಾಗಿ ತೊನೆದಾಡುತ್ತಿವೆ. ಆ ನಿಲುವಂಗಿಯ ಒಳಗೆ ಅವನ ಹುರಿಗೊಂಡ ಮೈಕಟ್ಟಿನ ಪರಿಪುಷ್ಟ ಸ್ನಾಯುಗಳು ಮಾಟವಾಗಿ ಅಲೆಅಲೆಯಾಗಿ ಚಲಿಸುತ್ತಿವೆ. ಒಂದು ಆಕರ್ಷಕ ಆವಿರ್ಭಾವದಲ್ಲಿ ಅವನು ನಿಂತಿದ್ದಾನೆ. ದೇಹದ ಚೆಲುವಿಗೆ ತಕ್ಕ ಕಂಠದ ಸೊಗಸು; ಕಂಠದ ಸೊಗಸು–ಮಾತಿನ ಜ್ಞಾನ ಮತ್ತು ಶಕ್ತಿಗೆ ಯೋಗ್ಯವಾಗಿದೆ. ಮೈ, ಮಾತು, ಮನಸ್ಸು ಹೀಗೆ ಮೂರು ಮೊಗವಾಗಿ ಅವನ ಸೌಂದರ್ಯದ ಬೆಡಗು ಬೀರುತ್ತಿದೆ. ಆಗ ಫ್ಲೋರಾನ್ಸದ ಜ್ಞಾನಿಗಳೆಲ್ಲ ಅವನ ಮಾತಿಗೆ ಸೆರೆಯಾದರೆ ಸೋಜಿಗವೇನು ? ದಾರ್ಶನಿಕತೆ ಮತ್ತು ದರ್ಶನೀಯತೆ ಇವುಗಳ ಸ್ವರ್ಣಸಂಗಮಕ್ಕೆ ಯಾರು ಮುಗ್ಧರಾಗಲಿಕ್ಕಿಲ್ಲ ?

ಈ ನವಯುವಕನು ಲಿಯೊನಾರ್ಡೋ ಡಾವಿನ್ಸಿ. ಫ್ಲೋರಾನ್ಸದಲ್ಲಿ ಅವನು ನಡತೆಯ ಮಾಧುರ್ಯಕ್ಕಾಗಿ, ನುಡಿಯ ಚಾತುರ್ಯಕ್ಕಾಗಿ, ಬುದ್ಧಿಯ ಚಾಟು–ಚಪಲತೆ ಗಾಗಿ, ಕವನದ ಶಕ್ತಿಗಾಗಿ, ಗಾಯನದ ನೈಪುಣ್ಯಕ್ಕಾಗಿ ಚಿತ್ರ, ಶಿಲ್ಪ, ಸ್ಥಾಪತ್ಯ ಕಲೆಗಳಲ್ಲಿ ಉದಯೋನ್ಮುಖ ಯಶಸ್ಸಿಗಾಗಿ ಈಗಾಗಲೇ ಪ್ರಸಿದ್ಧಿ ಪಡೆದಿದ್ದಾನೆ. ಆದರೆ ಅಂದಿನವರಿಗೆ, ಇಂದು ನಾವು ಬಲ್ಲ ಅವನ ಮಹಿಮೆಯ ಮಾಸ ಗೊತ್ತಿರಲಿಲ್ಲ. ಪ್ರಂಪಚವು ಪ್ರದರ್ಶಿಸಬಲ್ಲ ಉತ್ಕೃಷ್ಟ ಚಿತ್ರಕಾರರಲ್ಲಿ ಅವನು ಒಬ್ಬನೆಂದು ನಾವು ಬಲ್ಲೆವು. ಅಲ್ಲದೆ ಮೂರ್ತಿಶಿಲ್ಪಿ, ವಾಸ್ತುಶಿಲ್ಪಿ, (ಸ್ಥಪತಿ)

ಯಂತ್ರಕಲ್ಪಕ, ಸೈನಿಕ–ನಾಗರಿಕ ಇಂಜಿನಿಯರ, ನಿಸರ್ಗದ ತತ್ವವೇತ್ತ ಮತ್ತು ಇತರ ವಿಜ್ಞಾನ ಕ್ಷೇತ್ರಗಳಲ್ಲಿ ಆರಂಭಗಾರ, ಗ್ಯಾಲಿಲಿಯೊ, ನ್ಯೂಟನ್, ಬೇಕನ್, ಹಾರ್ವೇ, ವಾಟ್ ಮುಂತಾದವರ ಅಗ್ರದೂತ ಎಂಬುವದನ್ನೂ ಪ್ರಪಂಚವು ಒಪ್ಪಿಕೊಂಡಿದೆ. ಅವನ ಪ್ರತಿಭೆಯ ಸರ್ವಗಮ್ಯ ಸವ್ಯಸಾಚಿತ್ವಕ್ಕೆ ಇತಿಹಾಸದಲ್ಲಿ ಇನ್ನೊಂದು ಎಣೆ ಇರುವದಿಲ್ಲ.

ಮಾನವನು ಪೂರ್ಣತ್ವದ ಆರಾಧಕನು, ಸಾಧಕನು. ಪೂರ್ಣತ್ವದ ಒಂದು ಆದರ್ಶ. ಜೀವನ ಬುದ್ಧಿ ಮತ್ತು ಭಾವನೆಗಳ ಸಂತುಲನ–ಸಮತೂಕ. ಕೆಲವರ ಪ್ರಜ್ಞೆ ಬಿಡಿಯಾಗಿ ವಿಗಂಡವಾಗಿ ವಿವರಗಳನ್ನು ನೋಡಬಲ್ಲದು; ಕೆಲವರದು ಸಂಕಲನ ಸಮನ್ವಯ ಮಾಡಿ ಇಡಿಯದನ್ನು ರೂಪಿಸಬಹುದು; ಹೊಸ ಕೃತಿಯನ್ನು ರಚಿಸಬಹುದು. ಒಂದು ವಿಶ್ಲೇಷಣಾತ್ಮಕ ಪ್ರತಿಭೆ. ಇನ್ನೊಂದು ವಿಧಾಯಕ ರಚನಾತ್ಮಕ ಪ್ರತಿಭೆ. ಇಲ್ಲಿಯೂ ಮತ್ತೆ ಕೆಲವರ ಬುದ್ಧಿ ಏಕದೇಶೀಯವಾಗಿ, ಏಕಾಂತಿಕವಾಗಿ ಕಾರ್ಯಮಾಡಬಹುದು. ತನ್ನ ವಿಶ್ಲೇಷಣಕ್ಕೋ ವಿಧಾಯಕ ರಚನೆಗೋ ಒಂದೇ ಕ್ಷೇತ್ರ, ಒಂದೇ ಪ್ರಸ್ಥಾನವನ್ನು ಆಯ್ದು ನಡೆಯಬಹುದು. ಆದರೆ ವಿಶ್ಲೇಷಣೆಯನ್ನು ಮಾಡಬಲ್ಲ, ವಿಧಾಯಕ ಪ್ರಜ್ಞೆಯನ್ನು ಪ್ರಕಟಿಸಬಲ್ಲ, ಒಮ್ಮೆಲೇ ಅನೇಕ ಮತ್ತು ವಿಭಿನ್ನಕ್ಷೇತ್ರಗಳಲ್ಲಿ ಅಷ್ಟೇ ಸ್ವಚ್ಛಂದ ಸಂಚಾರವನ್ನು ತೋರಬಲ್ಲ. ರೀತಿಯ ಲಕ್ಷಣಗಳೊಡನೆ ಕೃತಿಯ ಕೌಶಲ್ಯವನ್ನೂ ಉದಾಹರಿಸಬಲ್ಲ, ಜ್ಞಾನದ ವ್ಯಾಪ್ತಿಯೊಡನೆ ರಸದ ದೀಪ್ತಿಯನ್ನೂ ಮುಟ್ಟಬಲ್ಲ, ಕವಿ, ಕಲಾವಿದ, ಕಲ್ಪಕ ಮತ್ತು ಕುಶಲಕಾರ್ಮಿಕನಾಗಿ ಪರಿಣಿತ ಪ್ರತಿಭೆಯ ಚತುರ್ಮುಖ ಸೌಂದರ್ಯವನ್ನು ಪ್ರಕಟಿಸಬಲ್ಲ, ವ್ಯಕ್ತಿಯೆಂದರೆ ಮಾನವತೆಯ ಪೂರ್ಣಾವತಾರವೇ ಸರಿ. ವ್ಯಕ್ತಿತ್ವದ ಇಂಥ ಸರ್ವಾಂಗಸುಂದರವೂ ಪರಿಪೂರ್ಣವೂ ಆದ ವಿಕಾಸವು ಕಲ್ಪದಲ್ಲಿ ಒಮ್ಮೆ ಹುಟ್ಟಿಬರುವದೆಂದರೆ ಬರೇ ಜಲ್ಪನೆ ಆಗಲಿಕ್ಕಿಲ್ಲ.

ಅಂಥ ಪರಿಪೂರ್ಣ ವ್ಯಕ್ತಿತ್ವದ ಯಥಾರ್ಥ 'ಪುರುಷ'ನು ಲಿಯೊನಾರ್ಡೋ ಡಾವಿನ್ಸಿ. ಅವನ ಬುದ್ಧಿ ಬಹುಮುಖ–ಎಷ್ಟು ಕುಶಾಗ್ರವೋ ಅಷ್ಟೇ ಸಮಗ್ರ. ವಿಜ್ಞಾನ ಮತ್ತೂ ಕಲೆ ಇವೆರಡರ ವಿವರಗಳನ್ನೂ ವಿವೇಚಿಸಿ ಸಂಗ್ರಹಿಸಿ ಅವುಗಳ ವ್ಯಾಪಾರವನ್ನು ಆಳುವ ಒಳಗಿನ ನಿಯಮಗಳನ್ನು ಸರಿಯಾಗಿ ಗ್ರಹಿಸುವ ಶಕ್ತಿಯೊಡನೆ ನಿಪುಣವಾದ ನಿರ್ಮಾಣ ಶಕ್ತಿಯನ್ನೂ ಪಡೆದುನಿಂತ ಪ್ರತಿಭಾಸಾಮರ್ಥ್ಯ ಅವನದು. ಇಂತಹ ಸಾಮರ್ಥ್ಯಕ್ಕೆ ತಕ್ಕ ಕುಂದಣವಾಗಿ ಅವನು ಅಸಾಮಾನ್ಯ ಸೌಂದರ್ಯ ಪಡೆದಿದ್ದನು. ಭವ್ಯವೂ ಬಲಿಷ್ಠವೂ ನಿರಾಮಯವೂ ಸುಂದರವೂ ಆದ ಅವನ ದೇಹವು ಅಂಥ ಪ್ರತಿಭೆಯ ದೇವರಿಗೆ ಯೋಗ್ಯವಾದ ಗುಡಿಯಾಗಿತ್ತು.

ಅವನ ವ್ಯಕ್ತಿತ್ವವು ಪ್ರಸನ್ನವೂ ದಯಾಮಯವೂ ಇತ್ತು. ಅವನ ಜೀವನವೆಲ್ಲ ಉನ್ನತಸಾಧನೆ ಮತ್ತು ಭವ್ಯಸಾಹಸದಿಂದ ತುಂಬಿ ತುಳುಕುತಿತ್ತು. ಇಂಥ ಚರಿತ್ರ ದಲ್ಲಿ ಮನುಷ್ಯತ್ವದ ಎಲ್ಲ ಗುಣಗಳ ಸಂತುಲನ ಅಥವಾ ಸಮತೂಕವು ಸತ್ವದ ಸಿದ್ಧಿಯನ್ನು ಸಾಧಿಸುತ್ತದೆ. 'ಪೂರ್ಣತಾ ಗೌರವಾಯ' ಎಂದು ಕಾಲಿದಾಸನು ಸೂಚಿಸಿದಂತೆ ಇಂಥ ಚರಿತ್ರ, ಪ್ರಪಂಚದ ಗೌರವಕ್ಕೆ ಪಾತ್ರವಾಗುತ್ತದೆ. ಇತಿ ಹಾಸವು ಇಂಥವನನ್ನು ಪಡೆದು ಧನ್ಯವಾಗುತ್ತದೆ. ಪೂರ್ಣತ್ವವೇ ದೇವತ್ವವಿದ್ದರೆ ಇಂಥವನು ದೇವಕಲ್ಪನು.

ಲಿಯೊನಾರ್ಡೋ ಡಾವಿನ್ಸಿ ಈ ಮಾದರಿಯ ದೇವತಾ ಮನುಷ್ಯನಿದ್ದನು. ಇಟಲಿಯ ಪುನರುಜ್ಜೀವನದ ಹಿರಿಯ ಬೆಳಕು ಅವನೇ. ಮಾನವೇತಿಹಾಸದಲ್ಲಿಯೇ ಇಂಥ ವ್ಯಕ್ತಿ ಬೇರೊಂದಿಲ್ಲ. ಇವನು ಹುಟ್ಟಿದ್ದು ೧೪೫೨ ರಲ್ಲಿ. ಇವನ ಜನ್ಮವನ್ನು ನೀತಿ ಹರಸಲಿಲ್ಲ. ಒಬ್ಬ ವಕೀಲನ ಅನೈತಿಕ-ಮದುವೆಯಿಲ್ಲದ-ಸ್ತ್ರೀ ಸಂಬಂಧದಿಂದ ಇವನು ಜನಿಸಿದನು. ತಂದೆಯ ಹೆಸರು ಹೇಳಬೇಕೇ ? ಸೇರ್ ಪೀರೋ ಅಂಟೋನಿಯೋ ಡಾವಿನ್ಸಿ. ವಿನ್ಸಿ ಎಂಬ ಅಡ್ಡಹೆಸರು ಬಂದದ್ದು ಅವನ ಹುಟ್ಟಿದ ಹಳ್ಳಿಯಿಂದ. ಆ ಹಳ್ಳಿ ಒಂದು ಗಿರಿದುರ್ಗ. ಈ ಹುಡುಗ ಹುಟ್ಟಿದ ಮೇಲೆ ಅವನ ತಾಯಿ ಕತಾರಿನಾ ಇನ್ನೊಬ್ಬನನ್ನು ಮದುವೆಯಾದಳು. ಆದರೆ ಹುಡುಗನು ತಂದೆಯ ಮನೆಯಲ್ಲಿಯೇ ಬೆಳೆದನು.

ಅವನ ಶಿಕ್ಷಣಕ್ಕೆ ಮೊದಲಾಯಿತು. ಗಣಿತದಲ್ಲಿ ಅವನ ಗತಿ ಅದ್ಭುತ. ಶಿಕ್ಷಕನನ್ನೇ ದಿಗ್ಭ್ರಮೆಗೊಳಿಸಹತ್ತಿದ್ದನು ಪಾಠಹೇಳುವ ವೇಗಕ್ಕಿಂತ ಪಾಠ ಒಪ್ಪಿಸುವ ವೇಗ ಹೆಚ್ಚಾಗಿ ಬಿಟ್ಟರೆ ಬಡ 'ಮೇಷ್ಟ್ರು' ಮಾಡುವದೇನು ? ಎಡಬಿಡದೆ ಪ್ರಶ್ನೆಗಳನ್ನು ಕೇಳಿ ಸಂಶಯಗಳ ಸುರಿಮಳೆಯನ್ನೇ ಸತತವಾಗಿ ಕರೆದು, ತನ್ನ ವಯಸ್ಸಿಗೂ ಶಿಕ್ಷಕನ ವಿದ್ವತ್ತಿಗೂ ಕೂಡಿಯೇ ಮೀರುವ ಗಡಚಾದ ತೊಡಕುಗಳನ್ನು ತಂದೊಡ್ಡಿ, ಈ ಶಿಷ್ಯನು 'ಗುರುವಿನ ಗುಲಾಮ' ನಾಗುವವರ ಬದಲು ಗತಿಯನ್ನೇ ಕುಂಠಿಸುವ 'ಲಗಾಮು' ಆದನು. ಈ ನಡುವೆ ಅವನು ಸಂಗೀತ ಕಲಿಯಹತ್ತಿದನು. ಅಲ್ಲಿಯೂ ಇಷ್ಟೇ ನಿರಂಕುಶ ನಿರಾತಂಕ ಗತಿ. ವೀಣೆಯನ್ನು ನುಡಿಸಲು ಕಲಿತನು. ಅದರ ಜತೆಗೆ ದನಿಗೂಡಿಸಿ ಹೊಚ್ಚ ಹೊಸ ಕೃತಿಗಳನ್ನು ಕಲ್ಪಿಸಿ ಹಾಡಲು ಆರಂಭಿಸಿದನು. ಕೃತಿಗಳ ಸ್ವರರಚನೆ ಶಬ್ದರಚನೆ ಎಲ್ಲ ಇವನದೇ. ಉನ್ನತವಾದ ಊಹೆಯ ಚಾತುರ್ಯ, ಉತ್ಕಟವಾದ ಕಂಠದ ಮಾಧುರ್ಯ, ಇವೆರಡರ ಎರಕವಾಗಿ ಅವನ ಸಂಗೀತವು ಒಂದು ಅಪೂರ್ವ ವಿಲಾಸವನ್ನು ತೋರಿತು.

ಆದರೆ ಸಂಗೀತ ಅವನ ಕುತೂಹಲದ ವಿಷಯವಾಗಿತ್ತು. ಚಿತ್ರ ಮತ್ತು ಶಿಲ್ಪ ಬಾಲ್ಯದಿಂದಲೂ ಅವನ ಅಚ್ಚುಮೆಚ್ಚುಗೆಯ ಕಲೆಗಳು ಅವುಗಳಲ್ಲಿಯ ಅವನ ಶೀಘ್ರ ಗತಿಯನ್ನು ಗಮನಿಸಿ ತಂದೆಯು ಅವನನ್ನು ವ್ಹೆರೋಕಿಯೋ ಎಂಬ ಒಬ್ಬ ಫ್ಲೋರಾನ್ಸದ ಕಲಾವಿದನಲ್ಲಿ ಕಲಿಯಲು ಇಟ್ಟನು. ಈ ಕಲಾಶಿಕ್ಷಣ ಮೊದಲಾದದ್ದು ೧೪೭೦ ರಲ್ಲಿ. ಅಲ್ಲಿ ಅವನು ತಜ್ಞನೂ ಮರ್ಮಜ್ಞನೂ ಆದ ಚಿತ್ರಕಾರನಾದನು. ತನ್ನ ಗುರುವು ಕೈಗೊಂಡ ಚಿತ್ರಗಳ ಕೆಲಸವನ್ನು ಕೂಡ ಮಾಡಿ ಮುಗಿಸಲು ಅವನು ಆಗಾಗ್ಗೆ ನೆರವಾಗುತ್ತಿದ್ದನು. ಎರಡೇ ವರ್ಷಗಳಲ್ಲಿ ಅವನ ಹೆಸರು ಫ್ಲೋರಾನ್ಸದ ಸ್ವತಂತ್ರ ಕಲಾವ್ಯವಸಾಯಗಳ ಸಂಘದ ಸದಸ್ಯರಲ್ಲಿ ಸೇರ್ಪಡೆ ಆಯಿತು. ಎರಡು ವರ್ಷಗಳ ಪ್ರಗತಿ ಇಷ್ಟು ಗರುಡಗತಿಯಿಂದ ಗಾರುಡಿಗನ ಕೃತಿಯಂತೆ ಆಯಿತು !

ಲಿಯೊನಾರ್ಡೋನ ಅಂದಿನ ಆರಂಭದ ಚಿತ್ರ ಕೃತಿಗಳಲ್ಲಿ ಒಂದು ಮಾತ್ರ–'ರಾಜರ ಆರಾಧನೆ' ಎಂಬುದು–ದೊರೆತಿದೆ. ಮಿಕ್ಕವೆಲ್ಲ ನಷ್ಟವಾಗಿವೆ. ಅವನ ಗುರು ವ್ಹೆರೋಕಿಯೋ ಬರೆದ ಒಂದು ಚಿತ್ರದಲ್ಲಿ–ಅದರ ಹೆಸರು 'ಪ್ರಭುದೇವನ ದೀಕ್ಷಾ ವಿಧಿ'–ಬರುವ ಒಬ್ಬ ದೇವದೂತನನ್ನು ಚಿತ್ರಿಸಿದ್ದು ಲಿಯೊನಾರ್ಡೋನೇ ಎಂದು ತಿಳಿದಿದೆ. ಹಾಗೆಯೇ ಮೆಡೂಸಾದೈತ್ಯನ ಚಿತ್ರವನ್ನು 'ಅಧಃಪಾತ'ವೆಂಬ ಒಂದು ಜಲ–ವರ್ಣಗಳ ವ್ಯಂಗ್ಯ ಚಿತ್ರವನ್ನು ಆ ಕಲಾಭ್ಯಾಸದ ಕಾಲಾವಧಿಯಲ್ಲಿ ಅವನು ಬರೆದನು ಎಂಬುದು ತಿಳಿದುಬಂದಿದೆ. ಚಿತ್ರಕಾರನೆಂದು ಹೆಸರಾಗುತ್ತಿರುವಾಗಲೇ ಅವನು ಮೂರ್ತಿಶಿಲ್ಪಿಯೆಂದೂ ವಾಸ್ತುಶಿಲ್ಪಿಯೆಂದೂ ಮುಂದೆ ಬಂದಿದ್ದನು. ಒಟ್ಟಿಗೆ ಮಣ್ಣಿನಲ್ಲಿ ಅವನು ಕೆಲವು ಉತ್ತಮ ಶಿಲ್ಪಕೃತಿಗಳನ್ನೂ ರೂಪಿಸಿದ್ದನು.

೧೪೭೭ ರಿಂದ ೧೪೮೩ ರ ತನಕ ಅವನು ಲೊರೆನ್ಝೋ ಎಂಬ ವೈಭವ ಶಾಲಿಯಾದ ಸಿರಿವಂತನ ಆಶ್ರಯದಲ್ಲಿ ಸ್ವತಂತ್ರ ಕಲಾಕಾರನಾಗಿ ಕೆಲಸ ಮಾಡಿದನು. ಅವನ ಚಿತ್ರಕಲೆಯಲ್ಲಿ ಹೊಸದೊಂದು ವೈಶಿಷ್ಟ್ಯವು ಅಂದಿನಿಂದಲೂ ವ್ಯಕ್ತವಾಯಿತು. ಅದು ಅವನ ಪ್ರತಿಭೆಯ ದ್ಯೋತಕವಿದ್ದಂತೆ ಮುಂದಿನ ಚಿತ್ರಕಲಾ ಪ್ರಪಂಚಕ್ಕೂ ಯುಗಪ್ರವರ್ತಕವಾಯಿತು. ಅವನ ಪೂರ್ವಿಕರು ಸಾಂಪ್ರದಾಯಿಕ 'ಮಾರ್ಗಿಕರು' ಚಿತ್ರಕಲೆಯ ಎರಡೇ ಅಂಗಗಳನ್ನು ಅಳವಡಿಸಿ ಬೆಳಸಿಕೊಂಡಿದ್ದರು. ಆ ಅಂಗ ಗಳೆಂದರೆ ವರ್ಣ ಮತ್ತು ಆಕೃತಿ. ಆಕೃತಿಗಳನ್ನು ರೇಖೆಯಿಂದಲೂ ರೇಖೆಗಳನ್ನು ವರ್ಣದಿಂದಲೂ ತುಂಬಿ ಚಿತ್ರಕ್ಕೆ ಕಳೆಯನ್ನೂ ರೂಪಕ್ಕೆ ಚೆಲುವನ್ನೂ ಹೇಗೆ ತರಬಹುದೆಂಬುದನ್ನು ಮಾತ್ರ ಶೋಧಿಸಿದ್ದರು, ಸಾಧಿಸಿದ್ದರು. ಆದರೆ ಲಿಯೊನಾರ್ಡೋ ಚಿತ್ರಕಲೆಯ ಇನ್ನೊಂದು ಪ್ರಭಾವಿಯಾದ ಅಂಗವನ್ನು

ಪೂರೈಸಿದನು. ಆ ಅಂಗವು ಛಾಯೆ, ನೆಳಲು. ಬೆಳಕಿನ ಚೆಲ್ಲಾಟ. ಇದರಿಂದ ಚಿತ್ರಿತರೂಪಕ್ಕೂ ದೃಶ್ಯಕ್ಕೂ ಸಜೀವತೆ, ಸೌಷ್ಠವ ವ್ಯಾಪ್ತಿಯ ಆಭಾಸ, ಗಾತ್ರದ ಗುಣ, ಗತಿಮಯತೆಯ ಆವಿರ್ಭಾವ ಇವೆಲ್ಲ ತುಂಬಿ ಬರುತ್ತವೆ. ವಸ್ತುಗಳ ಮೇಲೆ ಪ್ರಕಾಶವು ಆಡುವಾಗ ಉಂಟಾಗುವ ಛಾಯೆಯ ತಾರತಮ್ಯದ ಸುಳುವು ಹೊಳವುಗಳನ್ನು ಅರಿತುಕೊಂಡು ತನ್ನ ಚಿತ್ರದಲ್ಲಿ ಮೂಡಿಸಲು ಮೊದಲು ಯತ್ನಿಸಿದ ಚಿತ್ರಕಾರನು ಇವನೇ. ಚಿತ್ರಕಲೆಯಲ್ಲಿಯೇ ಇದೊಂದು ಕ್ರಾಂತಿ. ಹಾಗೆಯೇ ಕೇವಲ ಮನುಷ್ಯಾಕೃತಿಗಳನ್ನು ಬಿಟ್ಟು ನಿಸರ್ಗಕ್ಕೆ ಶರಣುಹೋದ ಕಲಾವಿದರಲ್ಲಿಯೂ ಇವನೇ ಮೊದಲಿಗನು. ಪೌರಾಣಿಕ ಪಾತ್ರಗಳನ್ನೂ ಯಕ್ಷ-ರಾಕ್ಷಸರನ್ನೂ ಹೆಚ್ಚೆಂದರೆ ತನ್ನ ಆ ಶ್ರ ಯ ದಾ ತ ರ ನ್ನೂ ಬಣ್ಣದಲ್ಲಿ ಬರೆದು ಚಿತ್ರಗಳನ್ನು ರಚಿಸುವದು ಅಂದಿನ ಪರಿಪಾಠ. ಅಂಥಲ್ಲಿ ಲಿಯೊನಾರ್ಡೋ ತನ್ನ ಕಲಾಸ್ಫೂರ್ತಿಗಾಗಿ ಚಿತ್ರವಸ್ತುವಿಗಾಗಿ, ನೇರವಾಗಿ ನಿಸರ್ಗವನ್ನೆ ಪ್ರಕೃತಿಸೌಂದರ್ಯ ವನ್ನೇ ನಿರೀಕ್ಷಿಸಲೂ ನಿರೂಪಿಸಲೂ ಆರಂಭಿಸಿದನು. ಕೇವಲ ಸಂಪ್ರದಾಯ ಶರಣನಾಗಿ ಉಳಿಯಲಿಲ್ಲ. ಇದು ಇನ್ನೊಂದು ಕ್ರಾಂತಿ. ಕಾಲಿಟ್ಟ ಕಲಾಕ್ಷೇತ್ರದ ರಾಜ್ಯವನ್ನೇ ಗೆದ್ದುದಲ್ಲದೆ ಅಲ್ಲಿ ಹೊಸ ಕಾಲಕ್ಕೇ ಕಾರಣನಾದ ರಾಜನೆನಿಸಿಕೊಂಡನು.

ಅವನು ಇಷ್ಟೇ ಮಾಡಿ ಮಡಿದರೂ ಪ್ರಪಂಚವು ಅವನನ್ನು ಮರೆಯುತ್ತಿದ್ದಿಲ್ಲ. ಇತಿಹಾಸದಲ್ಲಿ ಅವನು ಮರೆಯದೇ ಇರುತ್ತಿದ್ದಿಲ್ಲ. ಆದರೆ ಅವನ ಪ್ರತಿಭೆ ಒಂದು ರತ್ನ. ಒಂದೇ ಪರಜು ಇದ್ದರೆ ಅದು ರತ್ನವು ಹೇಗೆ ? ಅವನ ಪ್ರತಿಭೆಗೆ ಇನ್ನೂ ಅನೇಕ ಪರಜು-ಪಾಂಗುಗಳಿದ್ದವು. ಅವನ ಜಿಜ್ಞಾಸೆ ಒಂದು ಹೆದ್ದಾಸೆ ಆಗಿತ್ತು. ಆದು ಎಂದೂ ತಣಿಯದ ಜ್ಞಾನದ ಪಿಪಾಸೆ. ಛಾಯಾಪ್ರಕಾಶದ ಚೆಲುವನ್ನು ನೋಡಿ ಒಡಮೂಡಿಸುವದರಿಂದ ಮಾತ್ರ ಅವನಿಗೆ ತೃಪ್ತಿ ಇದ್ದಿಲ್ಲ. ಛಾಯಾ ಪ್ರಕಾಶಗಳಿಗೆ ಕಾರಣವಾಗುವ ನಿಸರ್ಗ ನಿಯಮಗಳನ್ನು ಅರಿತುಕೊಂಡ ಹೊರತು ಅವನ ತಿಳಿವು ತಣಿಯುವಂತಿದ್ದಿಲ್ಲ. ಅದಕ್ಕಾಗಿ ಅವನು ಕಿರಣಗಳ ಅಭ್ಯಾಸವನ್ನು ಮಾಡಿದನು. ಬಿಂಬ-ಪ್ರತಿಬಿಂಬಗಳ ರೀತಿಯನ್ನು ಪರಿಶೀಲಿಸತೊಡಗಿದನು. ಕಣ್ಣಿನ ರಚನೆ ಮತ್ತು ಇಂದ್ರಿಯ ಧರ್ಮವನ್ನು ತಿಳಿದುಕೊಂಡನು. ಅಲೆಗಳ ಚಲನ ವಲನವನ್ನು ಆಳುವ ನಿಯಮಗಳನ್ನು ಅರಿತುಕೊಂಡು ಅವುಗಳನ್ನು ಅವನು ಧ್ವನಿ ಮತ್ತು ಪ್ರಕಾಶಗಳಿಗೆ ಅನ್ವಯಿಸಿ ನೋಡಹತ್ತಿದನು. ಅವನ ಪ್ರತಿಭೆ ಎಷ್ಟು ಪಾರದರ್ಶಿ, ಎಷ್ಟು ದೂರದರ್ಶಿ ನೋಡಿರಿ. ಅಂದು ೧೫ ನೆಯ ಶತಮಾನ ದಲ್ಲಿಯೇ-ಇಂದು ಕಷ್ಟದಿಂದ ಕಲಿಯಬೇಕಾದ ಅನೇಕ ವಿಜ್ಞಾನಿಗಳು ಕ್ರಮವಾಗಿ ಯತ್ನಿಸಿ ಕಂಡುಹಿಡಿದ ತರಂಗಗತಿಯ ಇಲ್ಲವೇ ಸ್ಪಂದನ-ಪ್ರಸರಣದ ತತ್ವವನ್ನು ಅವನು ಕೇವಲ ನಿರೀಕ್ಷಣದ ಬಲದಿಂದ ಊಹೆಯ ಉಪಾಯದಿಂದ ಯಾವ

ಯಂತ್ರ-ತಂತ್ರಗಳೂ ಇಲ್ಲದೇ ಸಾಕಷ್ಟು ಸರಿಯಾಗಿ ಅರಿತುಕೊಂಡನು.

ಅವನ ಚಿತ್ರ ಮತ್ತು ಶಿಲ್ಪಕಲೆಯ ವ್ಯಾಸಂಗವು ಅವನನ್ನು ಇತರ ವಿಷಯಗಳಲ್ಲಿಯೂ ಒಯ್ಯಿತು. ಅವನ ಅಭ್ಯಾಸದ ಕ್ಷೇತ್ರ ಅನಿವಾರ್ಯವಾಗಿ ವಿಸ್ತಾರಗೊಂಡಿತು. ವಿಶ್ವವೆಲ್ಲ ಅಖಂಡ ಸತ್ಯ; ಅದನ್ನು ತಿಳಿಯುವ ವ್ಯಕ್ತಿಯ ಚಿತ್ರಗಳೆಲ್ಲ ಒಂದು ಅಖಂಡ ಸತ್ವ; ಅಂದಮೇಲೆ ಜ್ಞಾನದ ಎಲ್ಲ ವಿಷಯುಗಳು ವ್ಯಾಸಂಗದ ವಿವಿಧ ಕ್ಷೇತ್ರಗಳು ಒಂದನ್ನೊಂದು ವ್ಯಾಪಿಸುವದು ತಪ್ಪಿದ್ದಲ್ಲ. ತನ್ನ ಶಿಲ್ಪ ಮತ್ತು ಚಿತ್ರ ಕೌಶಲ್ಯಕ್ಕಾಗಿ ಅವನು ಮನುಷ್ಯ ಶ ರೀ ರ ದ ರೀತಿ ರಚನೆಗಳನ್ನು ಅಭ್ಯಸಿಸಿದನು. ಸ್ನಾಯುಗಳ ಚಲನವಲನದ ಕ್ರಮವನ್ನು ಪರಿಶೀಲಿಸಿದನು. ಇದರಿಂದ ಅವನು ಶರೀರಶಾಸ್ತ್ರ-ಮತ್ತು ಸಸ್ಯಶಾಸ್ತ್ರಗಳಲ್ಲಿಯೇ ಆರಂಭಕನಾದನು. ೪೦ ವರ್ಷಗಳ ಜೀವನದಲ್ಲಿ ತನ್ನ ನಿರೀಕ್ಷಣದ ಫಲವನ್ನೆಲ್ಲ ಅವನು ಟಿಪ್ಪಣಿ ಪುಸ್ತಕಗಳಲ್ಲಿ ಬರೆದು ಇಟ್ಟಿದ್ದಾನೆ. ಆ ಟಿಪ್ಪಣಿಗಳಿಂದ ಅವನ ಹಿರಿದಾದ ವಿಮರ್ಶಾ ವಿಚಕ್ಷಣ ಪ್ರತಿಭೆ ಮತ್ತು ವಿಚಿಕಿತ್ಸಕ ಮನೋವೃತ್ತಿ ಸ್ಪಷ್ಟವಾಗಿ ಸಿದ್ಧವಾಗುತ್ತವೆ.

೧೪೮೨ ರಲ್ಲಿ ಲಿಯೊನಾರ್ಡೋ ಮಿಲಾನಪಟ್ಟಣಕ್ಕೆ ಹೋದನು. ಹೋಗುವಾಗ ತನ್ನದೇ ಕಲ್ಪನೆಯಿಂದ ಹೊಸದಾಗಿ ರಚಿಸಿದ ಒಂದು ವೀಣೆಯನ್ನು ಅವನು ಒಯ್ದನು. ಅದೂ ಪೂರ್ತಿ ಬೆಳ್ಳಿಯಿಂದ ರಚಿಸಲ್ಪಟ್ಟುದು; ಕುದುರೆಯ ತಲೆಯ ಆಕಾರದಲ್ಲಿತ್ತು. ಅದರ ಸ್ವರಗಳಿಗೆ ಹೊಸದೊಂದು ಸಾಮರ್ಥ್ಯವೂ ಮಾಧುರ್ಯವೂ ಬಂದಿತ್ತು. ಈ ತಂತುವಾದ್ಯವನ್ನು ನುಡಿಸಿ ತೋರಿಸಿ ಮಿಲಾನದ ಡ್ಯೂಕನ ಆಸ್ಥಾನದಲ್ಲಿ ನೆರೆದ ಎಲ್ಲ ಸಂಗೀತಗಾರರಲ್ಲಿ ಅವನು ಶ್ರೇಷ್ಠನೆನಿಸಿಕೊಂಡನು. ಈ ಅಪ್ರತಿಮ ವಾದನ ಕೌಶಲ್ಯಕ್ಕೆ ಮರುಳಾದ ಡ್ಯೂಕನನ್ನು ಲಿಯೊನಾರ್ಡೋ ತನ್ನ ಅದ್ಭುತ ಕಾವ್ಯ ಶಕ್ತಿಯಿಂದ ಇನ್ನೂ ಬೆರಗುಮಾಡಿದನು, ಆ ಶಕ್ತಿಯು ಅದ್ಭುತವೆಂದರೆ, ಅವನು ಅಸಾಮಾನ್ಯ ಆಶು ಕವಿಯಾಗಿದ್ದನು. ನಿಂತಮೆಟ್ಟಿಗೆ ಸರಸ ಕವಿತಾರಚನೆಯನ್ನು ಮಾಡಿತೋರಿಸುತ್ತಿದ್ದನು. ತನ್ನ ಕಾವ್ಯದ ಸೊಬಗಿನಿಂದ ಹೀಗೆ ಡ್ಯೂಕನನ್ನು ಬೆರಗುಗೊಳಿಸಿ ಶೀಘ್ರದಲ್ಲಿಯೇ ತನ್ನ ಮೋಹಕ ಮಾತುಕತೆಯ ಮಾಟದಿಂದ ಸಂಭಾಷಣದ ಚಾತುರ್ಯದ ಸೊಗಸಿನಿಂದ ಆತನನ್ನು ಮುಗ್ಧನನ್ನಾಗಿ ಮಾಡಿದನು !

ಆಗ ಮಿಲಾನದ ಅಧಿಪತಿಗೆ ಲಿಯೊನಾರ್ಡೋ ಒಂದು ಪತ್ರ ಬರೆದು ತನ್ನ ಉಪಯೋಗವನ್ನು ಪಡೆದುಕೊಳ್ಳಬೇಕೆಂದು ಅರಿಕೆ ಮಾಡಿಕೊಂಡನು. ಆ ಪತ್ರದಲ್ಲಿ ಅವನು ಕೊಡಲು ಮಾಡಿದ ಉಪಯೋಗ ಯಾವದು ? ಕಲೆ ಕಾವ್ಯ ಶಿಲ್ಪಗಳ

ಕುರಿತೆ ? ಛೇ. ಯುದ್ಧಶಾಸ್ತ್ರದ ಸೈನ್ಯ ಸಂಘಟನಾತಂತ್ರದ ೯ ಹೊಸ ಮತ್ತು ಮೌಲಿಕ ಕಲ್ಪನೆಗಳನ್ನು ಮಂಡಿಸಿ ಅವನು ಪತ್ರವನ್ನು ಹೀಗೆ ಮುಗಿಸಿದ್ದನು.

'(೧೦) ಶಾಂತತೆಯ ಕಾಲದಲ್ಲಿ ನಾನು, ವಾಸ್ತುಶಿಲ್ಪದಲ್ಲಿ, ಸಾರ್ವಜನಿಕ ಇಲ್ಲವೇ ಖಾಸಗಿ ಇಮಾರತುಗಳನ್ನು ಕಟ್ಟುವದರಲ್ಲಿ, ನೀರಾವರಿಯ ಯೋಜನೆ ಮಾಡುವದರಲ್ಲಿ ಯಾವದೇ ತಜ್ಞನನ್ನು ಸರಿಗಟ್ಟುವೆನು.

ಹಾಗೆಯೇ ಮೂರ್ತಿ ಶಿಲ್ಪದಲ್ಲಿ ಅದು ಕಲ್ಲಿನಲ್ಲಿರಲಿ, ಕಂಚಿನಲ್ಲಿರಲಿ, ಇಟ್ಟಿಗೆ ಮಣ್ಣಿನಲ್ಲಿರಲಿ ನಾನು ಪ್ರವೀಣನಿರುವೆನು. ಅದೇಮೇರೆಗೆ ಚಿತ್ರಕಲೆಯಲ್ಲಿಯೂ ನಾನು ಬೇರೆ ಯಾರನ್ನೂ–ಅವರು ಎಂಥವರೇ ಇರಲಿ–ಸರಿಗಟ್ಟಬಲ್ಲೆನು.

ನಿಮ್ಮ ತಂದೆಯ ಶಾಶ್ವತ ಸ್ಮಾರಕವಾಗಿ ಎರಕ ಹೊಯ್ಯಬೇಕಾದ ಕಂಚಿನ ಕುದುರೆಯ ಕೆಲಸವನ್ನು ನಾನು ಕೈಕೊಳ್ಳಬಲ್ಲೆನು.'

ಇದೆಲ್ಲ ಬರೆಯುವಾಗ ಲಿಯೊನಾರ್ಡೋ ಜಂಭ ಕೊಚ್ಚಿಕೊಳ್ಳುತಿದ್ದಿಲ್ಲ. ಮಿಲಾನದ ಅಧಿಪತಿಗೆ ಅವನ ಈ ಕೊಡುಗೆಯನ್ನು ಕೂಡಲೆ ಸ್ವೀಕರಿಸುವಷ್ಟು ಮರ್ಮಜ್ಞತೆ ಇತ್ತು. ಆದ್ದರಿಂದ ಲಿಯೊನಾರ್ಡೋನಿಗೆ ರಾಜಾಶ್ರಯ ಲಭಿಸಿತು. ಮುಂದೆ ೧೭ ವರ್ಷ ಅವನು ಮಿಲಾನದಲ್ಲಿ ನೆಲಸಿ ಕೆಲಸಮಾಡಿದನು. ಅಲ್ಲಿ ಅವನ ಬಹುದಾಯಕ ಪ್ರತಿಭೆಗೆ ಅನೇಕ ಮುಖವಾದ ವಿನಿಯೋಗ ದೊರೆಯುವಂತಾಯಿತು. ಅವನ ಕಲೆ ಕೌಶಲ್ಯಗಳಷ್ಟೇ ಅವನ ವ್ಯಕ್ತಿತ್ವವು ರಮಣೀಯವಿತ್ತು. ಅಧಿಪತಿಯು ಅವನನ್ನು ಉತ್ಸವ ಸಮಾರಂಭಗಳ ಮುಖ್ಯಾಧಿಕಾರಿಯನ್ನಾಗಿ ನೇಮಿಸಿದನು. ಉತ್ಸವ ಸಮಾರಂಭಗಳ ಸಡಗರ, ಅಚ್ಚುಕಟ್ಟು, ಬೆಡಗು–ಬೆರಗುಗಳನ್ನು ನೋಡಿಕೊಳ್ಳುವದು ಅವನ ಕೆಲಸವಾಗಿತ್ತು. ಅದಕ್ಕಾಗಿ ಅವನು ಕಥೆರೂಪಕ, ಗೀತ, ಪ್ರಹಸನ ಮುಂತಾದ ವಾಙ್ಮಯವನ್ನು ನಿರ್ಮಿಸಬೇಕಾಯಿತು,–ಬೇಕಷ್ಟು ನಿರ್ಮಿಸಿಯೂ ಆಯಿತು. ಇದೆಲ್ಲ ನಡೆಯುತ್ತಿರುವಾಗ ಅವನ ಮುಖ್ಯ ಕರ್ತವ್ಯ–ನೇಮದ ದುಡಿಮೆ–ಸಾಗಿಯೇ ಇತ್ತು !

ಅವನ ಪ್ರತಿಮೆಯ ಪ್ರಚಂಡ ವಿನ್ಯಾಸಕ್ಕೆ ಇನ್ನೊಂದು ಅನುವು ಒದಗಿಬಂದಿತು. ೧೪೮೫ರಲ್ಲಿ ಮಿಲಾನ ಪಟ್ಟಣಕ್ಕೆ ಮೃತ್ಯುವಿನ ದಾಳಿ ಪ್ಲೇಗಿನ ಹಾವಳಿ ಬಂದಿತು. ಈ ಅನಾಹುತದಿಂದ ನಾಗರಿಕರನ್ನು ರಕ್ಷಿಸುವದಕ್ಕಾಗಿ ಹೊಸ ನಗರವನ್ನೇ ನಿರ್ಮಿಸಬೇಕೆಂಬ ಕಲ್ಪನೆ ಲಿಯೊನಾರ್ಡೋನಿಗೆ ಹೊಳೆಯಿತು. ಸ್ವಾಸ್ಥ್ಯ ಮತ್ತು ಸ್ವಚ್ಛತೆಗಳ ಮಾದರಿಯಾಗಿ ಹೊಸ ರಚನೆಯಿಂದ ಮಿಲಾನ ಪಟ್ಟಣವನ್ನು

ಕಟ್ಟಲಿಕ್ಕೆ ಅವನು ಕೂಡಲೇ ಯೋಜನೆಗಳನ್ನು ಸಿದ್ಧಮಾಡಿದನು. ಅದೇಸಮಯ, ಅಧಿಪತಿಯ ಮೂಲ ದುರ್ಗವಾದ ಕ್ಯಾಸ್ಟಿಲ್ಲೊ ಕೋಟೆಯನ್ನು ಭದ್ರಗೊಳಿಸಲೂ ಸುಂದರಗೊಳಿಸಲೂ ಅವನು ಹೊಸ ಯೋಜನೆಗಳನ್ನು ಹಾಕಿಕೊಟ್ಟನು. ಮರುವರ್ಷವೇ ಮಿಲಾನದ ಮುಖ್ಯ ಪ್ರಾರ್ಥನಾಮಂದಿರದ ಕಟ್ಟಡಕ್ಕಾಗಿ ರಚನೆಯ ರೇಖಾ ಚಿತ್ರವನ್ನು ಮಾಡಿಕೊಟ್ಟನು. ಈ ನಡುವೆ ಆವನು ಭೂಮಿತಿ, ಜ್ಯೋತಿಷ್ಯ, ಯಾಂತ್ರಿಕ ಸ್ಥಿತಿಗತಿಯ ಶಾಸ್ತ್ರ, ತಂತುವಾದ್ಯಗಳ ರಚನೆ, ಮತ್ತು ಗಣಿತಶಾಸ್ತ್ರ–ಇವೆಲ್ಲವನ್ನು ಕಲಿಯುತ್ತಲೇ ಇದ್ದನು. ಇದಲ್ಲದೆ ಅಧಿಪತಿಯ ತಂದೆಯ ಸ್ಮಾರಕವಾದ ದೈತ್ಯಾಕಾರದ ಅಶ್ವಾರೋಹಿಯ ಮೂರ್ತಿಯ ಕೆಲಸದಲ್ಲಿ ತೊಡಗಿಯೇ ಇದ್ದನು. ಆ ಕೆಲಸಕ್ಕಾಗಿ ಮೊದಲು, ಮೂರ್ತಿಯ ಮಾದರಿಯನ್ನು ತಯಾರಿಸುವದಕ್ಕಾಗಿ. ಅವನು ಬರೆದ ಅನೇಕ ರೇಖಾ ಚಿತ್ರಗಳೂ ಅಭ್ಯಾಸಕೃತಿಗಳೂ–ಇನ್ನೂ ಕಾದಿಟ್ಟವು–ದೊರೆಯುತ್ತಿವೆ. ವರ್ಷಗಟ್ಲೆ ಶ್ರಮಪಟ್ಟು ೧೪೯೩ರಲ್ಲಿ ೨೬ ಅಡಿ ಎತ್ತರದ ಆ ಮೂರ್ತಿಯ ಮಾದರಿಯನ್ನು ಮಾಡಿ ಮುಗಿಸಿ ಮಿಲಾನದಲ್ಲಿ ಪ್ರದರ್ಶಿಸಿದನು. ಆದರೆ ಈ ಮಾದರಿಯಿಂದ ಮುಂದೆ ಎರಕಹೊಯ್ದು ಕೆತ್ತಬೇಕಾದ ಕಂಚಿನ ಮೂರ್ತಿಯಕೆಲಸ ಆಗದೇ ಉಳಿಯಿತು. ೬ ವರ್ಷಗಳ ನಂತರ ಫ್ರೆಂಚರು ಮಿಲಾನಕ್ಕೆ ದಾಳಿ ಇಟ್ಟರು. ಅವರ ಕಿಡಿಗೇಡಿ ಕೈಗಳಿಂದ ಆ ಮಾದರಿಯ ಮೂರ್ತಿ ಮುರಿದು ಮಣ್ಣು ಪಾಲಾಯಿತು.

೧೪೯೫ ನೇ ವರ್ಷ ಬಂದಿತು. ಆಗ ಲಿಯೊನಾರ್ಡೋ ನೀರಾವರಿಯ ಯೋಜನೆಯಲ್ಲಿ ತೊಡಗಿದ್ದಾನೆ. ಇಡಿಯ ಲೊಂಬಾರ್ಡಿ ಬಯಲಿಗಾಗಿ ಜಲಮಾರ್ಗ–ಹರಿನೀರಿನ ಕಾಲುವೆಗಳ ಪೂರ್ತಿ ಜಾಳಿಗೆಯನ್ನೇ ಹೆಣೆಯಲು ಹೆಣಗುತಿದ್ದಾನೆ. ಬಿಡುವಿನ ವೇಳೆಯಲ್ಲಿ ಸಿಡಿಲು–ಬಿರುಗಾಳಿಗಳ ಬಗೆಯನ್ನು ಕುರಿತು ನಿರೀಕ್ಷಣೆ ನಡೆಸಿದ್ದಾನೆ. ನಡುವೆ ಮನೋವಿನೋದಕ್ಕಾಗಿ 'ಮೆಡೋನಾ'–ಮೇರಿಮಾತೆಯ–ಚಿತ್ರವನ್ನು ಬರೆಯುತ್ತಿದ್ದಾನೆ ! ಅತ್ತ ಕ್ಯಾಸ್ಟಿಲ್ಲೊ ದುರ್ಗದ ಕೆಲಸ ನಡೆದೇ ಇದೆ. ಇದೇ ವರ್ಷ ಅವನ ಕಲಾಕೃತಿಗಳಲ್ಲಿ ಶ್ರೇಷ್ಠವೂ ವಿಶ್ವದ ಮಹಾ ಚಿತ್ರಕೃತಿಗಳಲ್ಲಿ ಒಂದೂ ಆದ 'ಅಂತಿಮ ಭೋಜನ'ವೆಂಬ ಚಿತ್ರವನ್ನು ಬರೆಯಲು ಅವನು ಆರಂಭಿಸಿದ್ದಾನೆ !

ಅವನ ಈ ಸರ್ವಶ್ರೇಷ್ಠ ಕೃತಿಯೂ ಕೂಡ ಎಷ್ಟು ನಿರಭಿಮಾನ ರೀತಿಯಲ್ಲಿ ಆರಂಭ ಹೊಂದಿತು ! ಗಾರ್ಥಿ ಎಂಬಲ್ಲಿ ಮೇರೀ ಮಾತೆಯ ಒಂದು ಮಠದ ಮಂದಿರದಲ್ಲಿ ಒಂದು ಗೋಡೆಯ ಮೇಲೆ ಈ ಕೃತಿಯನ್ನು ಬಣ್ಣಗಳಿಂದ

ಬರೆಯಲಾಯಿತು. ಅದು ತೈಲವರ್ಣಗಳ ಚಿತ್ರವಿದ್ದಿಲ್ಲ. ಎಣ್ಣೆಯನ್ನು ಬೆರೆಸದೇ ನೀರ ಬಣ್ಣಗಳಿಂದ ಬರೆದ ಚಿತ್ರವದು. ಆ ನೀರ ಬಣ್ಣಗಳು ಗಚ್ಚಿನೊಡನೆ ಸರಿ ಕೂಡಲಿಲ್ಲ. ಗಚ್ಚು ಗೋಡೆಗೆ ಸರಿ ಅಂಟಿ ಕೂಡ್ರಲಿಲ್ಲ. ಸ್ವಲ್ಪಕಾಲದಲ್ಲಿಯೇ ಆ ಚಿತ್ರ ತಣುತುಣುಕಾಗಿ ಉದುರಿ ಬೀಳತೊಡಗಿತು. ಅದನ್ನು ಸರಿಯಾಗಿ ಕಾದಿಡಲಿಕ್ಕೆ ಅನೇಕ ಯತ್ನಗಳು ಆದವು. ಆದರೆ ಈ ಯತ್ನಗಳಿಂದ ಚಿತ್ರದ ಸ್ಥಿತಿ ಮತ್ತಿಷ್ಟು ಕೆಡುವಂತೆಯೇ ಆಯಿತು.

ಕೊನೆಗೆ ಕೂವ್ಹೆಲೀರ್ ಕೆವ್ಹೆನ್ಹಾಯ್ ಎಂಬ ಕಲಾವಿದನು ಮೂಲ ಚಿತ್ರದ ಉಳಿದಷ್ಟು ಅಂಶವನ್ನು ಕಾಪಾಡಿ ಇಡುವದರಲ್ಲಿ ಸಫಲನಾದನು; ಹಾಳಾಗಿ ಹೋದ ಅಂಶಗಳನ್ನು ಮತ್ತೆ ಬರೆದು ತುಂಬಿದನು.

ಇಷ್ಟೆಲ್ಲ ಸ್ಥಿತಿಗೆಟ್ಟರೂ 'ಅಂತಿಮ ಭೋಜನ' ಪ್ರಪಂಚದ ಅತಿ ಶ್ರೇಷ್ಠ ಚಿತ್ರಗಳಲ್ಲಿ ಒಂದಾಗಿದೆ. ಯುರೋಪದ ಪುನರುಜ್ಜೀವನಯುಗದ ಕಲಾಪೂರ್ಣತೆಯ ಪ್ರಥಮ ಮಹಾಕೃತಿಯೆಂದು ಅದು ಖ್ಯಾತಿಗೊಂಡಿದೆ. ಚಿತ್ರಕಲೆಯ ಎಲ್ಲ ಯುಗಗಳ ಇತಿಹಾಸದಲ್ಲಿ ಇದೊಂದು ಪರಿಪೂರ್ಣ ಕೃತಿಯೆಂದು ಮಹತಿಗೊಂಡಿದೆ. ಈ ಕೃತಿಯ ಪರಿಪೂರ್ಣ ತಂತ್ರಕೌಶಲ್ಯವನ್ನು ಅದರಲ್ಲಿ ಮೂಡಿದ ಆ ಕಲಾವಿದನ ಅಧ್ಯಾತ್ಮಿಕ ದೃಷ್ಟಿಯೇ ತೋರಿಸುವಂತಿದೆ. ಫ್ರೆಂಚರ ೧೨ ನೇ ಲುಯಿಯ ದಾಳಿ ಆದಾಗ ಈ ಭಿತ್ತಿಚಿತ್ರವು ಮುಗಿದು ೨ ವರ್ಷಗಳಾಗಿದ್ದವು. ಲುಯಿಯು ಮಿಲಾನದ ಅಧಿಪತಿಯನ್ನು ಸೋಲಿಸಿದರೂ, ಲಿಯೊನಾರ್ಡೋನ ಕಲೆಯು ಆ ರಸಿಕ ರಾಜನನ್ನು ಪೂರ್ತಿ ಪರಾಭವಗೊಳಿಸಿತು. ಆ ಗೋಡೆಯ ಇದುರುನಿಂತು 'ಅಂತಿಮ ಭೋಜನ'ವನ್ನು ಲುಯಿಯು ಬೆರಗಣ್ಣಿನಿಂದ ನೋಡಿಯೇ ನೋಡಿದನು. ನೋಡಿದಷ್ಟೂ ಹೆಚ್ಚು ಚಕಿತನೂ ಚಿಂತಾತುರನೂ ಆದನು. ಚಿಂತೆಯ ಆತುರ ಏತಕ್ಕಾಗಿ ? ಆ ಚಿತ್ರವನ್ನು ಇದ್ದಕ್ಕೆ ಇದ್ದಂತೆ ಫ್ರಾನ್ಸಿಗೆ ಒಯ್ಯುವದು ಹೇಗೆ ? ಎಂಬುದಕ್ಕಾಗಿ ! ಅದೊಂದು ಪಟವಲ್ಲ, ಹಾಳೆಯಲ್ಲ. ಗೋಡೆಯ ಗಚ್ಚಿನಲ್ಲಿ ನೀರ-ಬಣ್ಣಗಳಿಂದ ಬರೆದ ಸುಕುಮಾರಚಿತ್ರ-ಕಲಾಪೂರ್ಣ ದಿವ್ಯ ಪ್ರತಿಭಾಸುಂದರ ವಿಚಿತ್ರ. ಆ ಗೋಡೆಯನ್ನೇ ಕಡಿದು ಕಿತ್ತು ಹಾಗೆಯೇ ಹೊತ್ತು ಫ್ರಾನ್ಸಿಗೆ ಹೊರಿಸಲು ಬಂದೀತೇ ? ಎಂಬ ಕುರಿತು ಅವನು ಸುತ್ತಲು ಜಂತವರೊಡನೆ ಸಲಹೆ ಕೇಳತೊಡಗಿದನು ! ಈ 'ಅಂತಿಮ ಭೋಜನ' ಎಂಬುವದು ಯೇಸೂವಿನ ಚರಿತ್ರದಲ್ಲಿಯ ಕೊನೆಯ ಒಂದು ಸಂದರ್ಭ. ಇದಲ್ಲದೆ ಅವನು 'ಶಿಲೆಗಳಲ್ಲಿಯ ಕುಮಾರಿ' ಎಂಬ ಚಿತ್ರವನ್ನು ಬರೆದನು

೧೪೯೯ ರಲ್ಲಿ ಮಿಲಾನದ ಅಧಿಪತಿಯು ಪದಚ್ಯುತನಾದನು. ಆ ವರ್ಷದ ಕೊನೆಗೆ

ಲಿಯೊನಾರ್ಡೋ ಮಿಲಾನವನ್ನು ಬಿಟ್ಟು ವ್ಹೇನೀಸಕ್ಕೆ ಹೋಗಬೇಕಾಯಿತು. ಅಲ್ಲಿಯ ಒಡತಿ ಡಚೆಸ್ ಇರಭಾಬೆಲಾ ಅವನನ್ನು ಅನುಗ್ರಹದಿಂದ ಬರ ಮಾಡಿಕೊಂಡಳು. ಅವಳ ರೇಖಾ ಚಿತ್ರವನ್ನೂ ಅವನು ಬಳಗಲ್ಲಿನಿಂದ ಬರೆದನು. ವ್ಹೇನೀಸದಲ್ಲಿ ಅವನ ಹೊಸ ಅವತಾರ ಆರಂಭವಾಯಿತು. ಕಲಾ ಜೀವನವು ಮರೆಯಾಗಿ ಶಾಸ್ತ್ರಾಭ್ಯಾಸವು ಮುಂದೆ ಬಂತು. ವ್ಹೇನೀಸದಲ್ಲಿ ಇದ್ದಷ್ಟು ಕಾಲ ಅವನು ಗಣಿತ ಮತ್ತೂ ಖಗೋಲ ಶಾಸ್ತ್ರದ ವ್ಯಾಸಂಗದಲ್ಲಿ ಕಳೆದನು. ೧೫೦೦ರಲ್ಲಿ ಅವನ ಹಿಂದಿನ ಯಜಮಾನ ಮಿಲಾನದ ಅಧಿಪತಿಯು ಪೂರ್ತಿ ಪರಾಭವ ಹೊಂದಿದ ವಾರ್ತೆ ಬಂದಿತು. ಆಗ ಲಿಯೊನಾರ್ಡೋ ತನ್ನ ಮೂಲ ಊರಾದ ಫ್ಲೋರಾನ್ಸ ಪಟ್ಟಣಕ್ಕೆ ಹೊರಟನು. ಈಗ ಅವನಿಗೆ ಜ್ಞಾನದ ಹೊಸತೊಂದು ಪೇಯಕ್ಕಾಗಿ ಪಿಪಾಸೆ ಅನಿಸಿತು. ಅವನು ಭೂಚರಿತ್ರೆಯನ್ನು ಅಭ್ಯಸಿಸಲು ತೊಡಗಿದನು. ಕಪ್ಪು ಮತ್ತು ಕ್ಯಾಸ್ಪಿಯನ್ ಸಮುದ್ರಗಳ ಏರಿಳಿತಗಳ ವಿಷಯ ವಾಗಿ ನಿರೀಕ್ಷಣೆ ನಿರೂಪಣೆಯಲ್ಲಿ ತೊಡಗಿದ್ದನ್ನು ಕಾಣುತ್ತೇವೆ. ಅದೇ ಸಮಯ ಅವನು ಅರ್ನೋ ನದಿಯ ಕಾಲುವೆಗಳ ಯೋಜನೆಯೊಂದನ್ನು ಸಿದ್ಧಪಡಿ ಸುತ್ತಿರುವದನ್ನು ನೋಡುತ್ತೇವೆ. ಹಾಗೆಯೇ ನಗರ ರಚನೆಯ ಸ್ಥಾಪತ್ಯ ಕಾರ್ಯದ ರೂಪರೇಷೆಯಲ್ಲಿಯೂ ಅವನ ಕೈವಾಡವನ್ನು ಕುರಿತು ಕೇಳುತ್ತೇವೆ. ಅವನ ಒಡತಿ ಇರಭಾಬೆಲಾ ತನ್ನದೊಂದು ತೈಲ ಚಿತ್ರವನ್ನು ಬರೆಯಿಸುವ ವಿಚಾರದಿಂದ ಅವನಿಗೆ ಹಾಕಿದ ಪತ್ರಕ್ಕೆ ಬಂದ ಪ್ರತ್ಯುತ್ತರದಲ್ಲಿ ಲಿಯೊನಾರ್ಡೋ ಕೇವಲ ಭೂಮಿತಿಯ ಅಭ್ಯಾಸದಲ್ಲಿ ಭರದಿಂದ ತೊಡಗಿದ್ದಾನೆ. ಬಣ್ಣಕ್ಕೆ ಕುಂಚ ಹಚ್ಚಲು ಅವನಿಗೆ ತಾಳ್ಮೆ ಇಲ್ಲವೆಂದು ನಾವು ಓದುತ್ತೇವೆ. ಅವನ ಈ ಶಾಸ್ತ್ರ ಜಿಜ್ಞಾಸೆಯ ತೀವ್ರತೆಯ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಅವನಿಗೆ ಶಿಲ್ಪಕೃತಿಗಾಗಿ ಒಂದು ಸಂಗಮವರಿ ಶಿಲಾಖಂಡವು ಒಬ್ಬ ಗೆಳೆಯನಿಂದ ಕೊಡಲ್ಪಟ್ಟಿತು. ಆದರೆ ಅದು ಹಾಗೆಯೇ ಬಿದ್ದುಳಿಯಿತು ಮುಂದೆ ಮೈಕೆಲೇಂಜಲೊ ಅದರಲ್ಲಿ ತನ್ನ ಪ್ರಚಂಡ ಕೃತಿಯೊಂದನ್ನು ಕೊರೆದು ತೆಗೆದನು.

ಮೈಕೆಲೇಂಜಲೊ ಲಿಯೊನಾರ್ಡೋನನ್ನು ಮೆಚ್ಚುತಿದ್ದಿಲ್ಲ. ಒಮ್ಮೆ ಅವರೀರ್ವರೂ ನಡುಬೀದಿಯಲ್ಲಿ ಭೆಟ್ಟಿಯಾದರು. ಆಗ ಮೈಕೆಲ್‌ನು ಲಿಯೊನಾರ್ಡೋನನ್ನು ಮೂದಲಿಸಿ ಕೂಗಿದನು. 'ಕುದುರೆ ಕೆತ್ತುವ ಕಸುಬುಗಾರ. ಕಂಚಿನಲ್ಲಿ ಪ್ರತಿಮೆ ಕೊರೆಯಲು ಬಾರದೇ ಕೆಲಸ ಅರ್ಧಕ್ಕೇ ಬಿಟ್ಟ ಹೇಡಿ ನಾಚಿಕೆಗೇಡಿ !'

೧೫೦೨ ರಲ್ಲಿ ಲಿಯೊನಾರ್ಡೋ, ಸೀಝರಬೊರ್ಗಿಯಾ ಎಂಬ ಅರಸನ ಸೇವೆಗೆ ನಿಂತನು. ಅವನ ಮಹಾ ಸ್ಥಪತಿಯಾಗಿ (ಇಂಜಿನಿಯರನಾಗಿ) ಇಟಲಿಯ ಮಧ್ಯ

ಪ್ರದೇಶವಲ್ಲೆಲ್ಲ ಸಂಚರಿಸಿದನು. ಆಗ ಅವನು ಆ ಪ್ರದೇಶದ ಆರು ಭೂಪಟ (ನಕಾಶೆ)ಗಳನ್ನು ರಚಿಸಿದನು. ಅವು ಉತ್ತಮ ಪ್ರಮಾಣಬದ್ಧವಾಗಿವೆ. ಅಂದಿನ ಕಾಲಕ್ಕೆ ಅಂಥ ಉತ್ಕೃಷ್ಟ ಶಾಸ್ತ್ರೀಯ ಪದ್ಧತಿಯ ರೇಖಾ–ಕೃತಿಯು ಉಂಟಾದದ್ದು ಒಂದು ಆಶ್ಚರ್ಯವೇ ಸರಿ. ಅವು ಈಗಲೂ ವಿಂಡಸರ್ ಅರಮನೆಯ ಗ್ರಂಥ ಸಂಗ್ರಹಾಲಯದಲ್ಲಿ ಇಟ್ಟದ್ದು ಕಂಡುಬರುತ್ತವೆ.

ಆ ನಂತರ ಲಿಯೊನಾರ್ಡೋ ಫ್ಲೋರಾನ್ಸಿಗೆ ಮರಳಿದನು. ಅವನಿಗೆ ಕೂಡಲೆ ಹೊಸ ಕೆಲಸ ದೊರೆಯಿತು. ಸರ್ವೈಟ ಕ್ರೈಸ್ತ ಮಠದಲ್ಲಿ ಗರ್ಭಗುಡಿಯ ವೇದಿಕೆಯ ಭಾಗದ ಮೇಲೆ ಚಿತ್ರ ಬರೆಯಲು ಅವರು ಲಿಪ್ಪಿ ಎಂಬ ಚಿತ್ರಕಾರನನ್ನು ಕೇಳಿದ್ದರು. ಆದರೆ ಆ ಕೆಲಸವನ್ನು ತಾನು ಸಂತೋಷದಿಂದ ಮಾಡಿಕೊಡುವೆನಾಗಿ ಲಿಯೊನಾರ್ಡೋ ಒಪ್ಪಿಕೊಂಡನು. ಲಿಪ್ಪಿಯೂ ಸೌಜನ್ಯಮೂರ್ತಿ. ಆದ್ದರಿಂದ ಇದಕ್ಕೆ ಒಪ್ಪಿದನು. ವೇದಿಕಾ ಚಿತ್ರಣದ ಕೆಲಸ ಲಿಯೊನಾರ್ಡೋಗೆ ದೊರೆಯಿತು. ಲಿಪ್ಪಿ ಈ ಮೊದಲೇ 'ಸಿಲುಬಿನಿಂದ ಪ್ರಭುದೇವನ ಅವತರಣ' ಎಂಬ ವಸ್ತುವನ್ನು ಬರೆಯಲು ಆರಂಭಿಸಿದ್ದನು. ಲಿಯೊನಾರ್ಡೋ 'ಮಾತಾ ಮೇರಿ ಮತ್ತು ಬಾಲ ಕ್ರೈಸ್ತ' ಎಂಬ ಚಿತ್ರವನ್ನೂ ಬರೆದನು. ಅವನ ಚಿತ್ರ ಮುಗಿದಾಗ ಕಲಾವಿದರಷ್ಟೇ ಅಲ್ಲ, ನೋಡಲುಬಂದ ಜನಸಾಮಾನ್ಯರು ಕೂಡ ಮತ್ತೆಮತ್ತೆ ಗುಡಿಗೆ ಕಿಕ್ಕಿರಿದು ಬಂದು ಕೊಂಡಾಡಹತ್ತಿದರು. ಪಟ್ಟಣಿಗರಿಗೆಲ್ಲ ಅದೊಂದು ಪವಾಡದಂತೆ ಬೆರಗು ಮಾಡಿತು. ಆದರೆ ಅದೇಕೋ ಮಠದ ಸನ್ಯಾಸಿಗಳಿಗೆ ಚಿತ್ರದ ಕೆಲಸ ಮೆಚ್ಚಿಗೆ ಆಗಲಿಲ್ಲ. ಅವರು ಅದನ್ನು ಲಿಯೊನಾರ್ಡೋನ ಕಡೆಯಿಂದ ತಪ್ಪಿಸಿ ಮತ್ತೆ ಲಿಪ್ಪಿಗೇ ಒಪ್ಪಿಸಿದರು. ಫ್ಲೋರಾನ್ಸದ ಅರಮನೆಯ ಸಭಾಗೃಹದಲ್ಲಿ ತೂಗುಹಾಕಲು ಅವನು ೧೫೦೪–೧೫೦೫ ರಲ್ಲಿ ಒಂದು ಯುದ್ಧಪ್ರಸಂಗದ ಭವ್ಯ ರೇಖಾಚಿತ್ರವನ್ನು ರಚಿಸುವವರಲ್ಲಿ ತೊಡಗಿದನು. ಅದೇ ಗೃಹಕ್ಕಾಗಿ ಮೈಕೆಲೆಂಜೆಲೋನೂ ಒಂದು ಚಿತ್ರ ಬರೆಯುವವನಿದ್ದನು. ಮುಂದೆ ಲಿಯೊನಾರ್ಡೋನ ಚಿತ್ರವನ್ನು ಮೈಕೆಲ್‌ನ ಚಿತ್ರದ ಪಕ್ಕದಲ್ಲಿಯೇ ಪ್ರದರ್ಶಿಸಲಾಯಿತು. ಲಿಯೋನಾರ್ಡೋನ ಚಿತ್ರದಲ್ಲಿ ಯುದ್ಧ ಪ್ರಸಂಗದ ಪಾಶವೀ ರೌದ್ರಾವೇಶವು ಒಡಮೂಡಿತ್ತು. ನೋಡಲು ಬಂದ ಕಲಾವಿದರಿಗೆಲ್ಲ ಅದು ಒಂದು ಆಶ್ಚರ್ಯ ಮತ್ತು ಪ್ರಶಂಸೆಯ ವಿಷಯವಾಯಿತು. ತರುಣ ಕಲಾವಿದರ ಮೇಲೆ ಅದರ ಪ್ರಭಾವ ಪ್ರಬಲವಾಗಿ ಬಿತ್ತು.

ಇದೇ ಸಮಯ ಅವನು ಇನ್ನೊಂದು ಚಿತ್ರ ಬರೆಯುವವರಲ್ಲಿ ತೊಡಗಿದ್ದನು. ಅದು 'ಮೊನಾಲಿಸಾ' ಎಂಬ ಹೆಸರಿನಿಂದ ವಿಶ್ವವಿಖ್ಯಾತವಾಗಿದೆ. ಅವನ ಅತಿ ಪ್ರಸಿದ್ಧ ಅತಿ ಪ್ರಶಂಸಿತ ಚಿತ್ರವೆಂದರೆ ಇದೇ. ಇದನ್ನು ಅವನು ೧೫೦೬ ರಲ್ಲಿ

ಪೂರ್ತಿ ಮಾಡಿದನು. ಈ ಚಿತ್ರದಲ್ಲಿಯ ಸ್ತ್ರೀಯ ಮುಖದ ಮಂದಸ್ಮಿತವು ಒಂದು ದಿವ್ಯ ಸೂಕ್ಷ್ಮತೆಯನ್ನೂ ಅಲೌಕಿಕ ರಮ್ಯತೆಯನ್ನೂ ವ್ಯಕ್ತಪಡಿಸುತ್ತದೆ. ಬುದ್ಧ ಮೂರ್ತಿಯ ಅಮೃತ ಸ್ಮಿತದಂತೆಯೇ 'ಮೊನಾಲಿಸಾ'ಳ ವಿಸ್ಮಯ-ಸ್ಮಿತ ಮುದ್ರೆಯೂ ಕಲಾಪ್ರಪಂಚವಲ್ಲಿ ಅಜರಾಮರವಾಗಿದೆ.

ಅದೇ ವರ್ಷ ಅವನು ಮಿಲಾನಕ್ಕೆ ಮರಳಿದನು; ಮುಂದೆ ೧೨ನೆಯ ಲುಯಿಯ ಸೇವೆಯಲ್ಲಿ ನೇಮಕನಾಗಿ ಫ್ರಾನ್ಸಕ್ಕೆ ಹೋಗುವ ತನಕ ಅಲ್ಲಿಯೇ ಉಳಿದನು. ೧೫೧೨ ರಲ್ಲಿ ಅವನು ರೋಮನಗರಕ್ಕೆ ಹೋದನು. ಆದರೆ ಅಲ್ಲಿಯ ವಾತಾವರಣ ಇವನಿಗೆ ಒಗ್ಗಲಿಲ್ಲ; ಆದ್ದರಿಂದ ಅವನು ಫ್ರಾನ್ಸಕ್ಕೆ ಹೋಗಿ ನೆಲೆಸಿದನು. ೧೫೧೯ ರ ಮೇ ತಿಂಗಳಲ್ಲಿ ಅವನು ಮಡಿದನು.

ಲಿಯೊನಾರ್ಡೋನ ಜೀವನದ ಇತಿವೃತ್ತ ಸಂಕ್ಷೇಪದಲ್ಲಿ ಇಷ್ಟು, ಆದರೆ ಅವನ ಚಾರಿತ್ರಕ ಕೃತಿಗಳ ಇತಿವೃತ್ತಕ್ಕೆ ಒಂದು ಗ್ರಂಥವೇ ಬೇಕು. ಯಾವ ಸಂಕ್ಷೇಪವೂ ಸಾಲದು.

ಅವನ ಮರಣ ಸಮಯಕ್ಕೆ ಅವನು ಬರೆದಿಟ್ಟ ಟಿಪ್ಪಣಿ ಪುಸ್ತಕಗಳನ್ನು ಪ್ರಕಟಿಸಿದ್ದರೆ ಮುಂದಿನ ವಿಜ್ಞಾನಿಗಳಿಗೂ ವಿಜ್ಞಾನಸಂಶೋಧನಕ್ಕೂ ಶತಮಾನಗಳ ಶ್ರಮ ತಪ್ಪುತ್ತಿತ್ತು, ಅವರು ಮೊತ್ತದಿಂದ ಹೊಸತಾಗಿ ಹುಡುಕಾಡುವದು ತಪ್ಪುತ್ತಿತ್ತು. ಆದರೆ ೧೯ನೆಯ ಶತಮಾನದ ತನಕವೂ ಅವು ಯಾರ ಗಮನಕ್ಕೂ ಬಾರದೇ ಬಿದ್ದಿದ್ದವು. ಅವು ಗೊತ್ತಾದಾಗ ಆಧುನಿಕ ವಿಜ್ಞಾನವು ಪ್ರತಿಯೊಂದು ಕ್ಷೇತ್ರದಲ್ಲಿ ಮಾಡಿದ ಮಹತ್ವದ ಶೋಧಗಳ ಮುಂಗುರುಹುಗಳೆಲ್ಲ-ಮೂಲದ ಊಹೆಗಳೆಲ್ಲ ಲಿಯೊನಾರ್ಡೋನ ಪುಸ್ತಕದಲ್ಲಿ ಮೊದಲೇ ಅಂಕುರಿಸಿದ್ದವು.

ಕಲೆಯ ಕ್ಷೇತ್ರದಲ್ಲಿಯ ಅವನ ಜಾಗತಿಕ ಮಹತ್ವವನ್ನು ಮೇಲೆ ಬಣ್ಣಿಸಲಾಗಿದೆ. ಸಾಹಿತ್ಯದಲ್ಲಿಯೂ ಅವನು ಕಡಿಮೆ ಇದ್ದಿಲ್ಲ. ಇಟಾಲಿಯನ್ ಗದ್ಯಶೈಲಿಯನ್ನು ರೂಪಗೊಳಿಸುವದರಲ್ಲಿ ಅವನು ತಂಬ ನೆರವಾದನು. ಅಂದರೆ ಅವನ ವಿಶಿಷ್ಟ ಬರೆಹಗಾರಿಕೆಯಿಂದ ಅಂದಿನ ಇಟಾಲಿಯನ್ ಭಾಷಾಶೈಲಿಯು ಒಂದು ಆಕಾರಕ್ಕೆ ಬರುವಂತೆ ಆಯಿತು. ಕಲೆಯ ತತ್ವಪ್ರತಿಪಾದನೆಯಲ್ಲಿಯೂ ಅವನು ಅವಿನಾಶಿಯಾದ ಸಿದ್ಧಾಂತಗಳನ್ನು ಮಂಡಿಸಿದನು. ಕಲಾವಿಮರ್ಶೆಯ ತ್ರಿಕಾಲಾಬಾಧಿತ ತತ್ವಗಳನ್ನು ಕಂಡು ಪ್ರತಿಪಾದಿಸಿದನು. ಬ್ರಿಟಿಶ್ ವಿಜ್ಞಾನಿಗಳ ಪಿತಾಮಹ ನೆಂದು ಸರ್ ಫ್ರಾನ್ಸಿಸ್ ಬೇಕನ್ ಎಂಬ ವಿದ್ವಾನನ ಹೆಸರೆತ್ತಲಾಗುತ್ತಿದೆ. ಆದರೆ ಬೇಕನ್‌ನಿಗೂ ಒಂದು ನೂರು ವರ್ಷ ಮೊದಲು ಮೂರ್ತಿ ಕೆತ್ತಿ, ಚಿತ್ರ

ಬರೆಯುವ ಈ ಚತುರ ಮೇಧಾವಿಯು ಬೇಕನ್‌ನಿಗೂ ಹೆಚ್ಚು ಚೆನ್ನಾಗಿ ಪ್ರಾಯೋಗಿಕ ವಿಜ್ಞಾನದ ತತ್ವಗಳನ್ನು ತಿಳಿದು ಅಳವಡಿಸಿಕೊಂಡಿದ್ದನು.

ಅವನ ಅಸಾಮಾನ್ಯ ಪ್ರಾಯೋಗಿಕ ಬುದ್ಧಿಯ ಚಮತ್ಕಾರವೆಂದರೆ ತೀರ ಆಧುನಿಕ ಶೋಧ-ಕಲ್ಪನೆಯನ್ನು ಅವನು ಆ ಪ್ರಾಚೀನ ಕಾಲದಲ್ಲಿಯೇ ಊಹಿಸಿ ಅಚ್ಚುಕಟ್ಟಾಗಿ ರೂಪಿಸಿಯೂ ಇದ್ದನು. ವಿಮಾನದ ರಚನೆಯನ್ನು ಅವನು ಕಲ್ಪಿಸಿದ್ದನು. ಅಂದು ಪೆಟ್ರೋಲಿನಂಥ ಒಂದು ಕಾರ್ಯಶಕ್ತಿ ಸಿಕ್ಕಿದಿಲ್ಲ. ಇಲ್ಲವಾದರೆ, ಅವನ ಕಲ್ಪನೆ ವಾಸ್ತವರಚನೆ ಆಗಿ ವಿಮಾನದ ಹಾರಾಟವು ಎಂದೋ ಹಳೆಯ ಕತೆಯಾಗುತಿತ್ತು.

ಉಗಿಯ ಶಕ್ತಿಯನ್ನು ಅವನು ಊಹಿಸಿದ್ದನು. ಅದರ ಉಪಯೋಗವನ್ನೂ ಅವನು ಕಲ್ಪಿಸಿದ್ದನು. ಉಗಿಯ ಶಕ್ತಿಯಿಂದ ಹಾರಿಸಬಹುದಾದ ತೋಫನ್ನು ಕೂಡ ಹಡಗ ಗಳಿಗೆ ಹುಟ್ಟು-ಹರಿಗೋಲುಗಳನ್ನು ಬಳಸುವ ಬದಲು, ನೀರಲ್ಲಿ ತಿರುಗುವ-ತಿರುಗಿ ನೀರನ್ನು ಒತ್ತಿ ನೂಕಿ ಹಡಗವನ್ನು ಮುಂದೆ ನುಗ್ಗಿಸುವ 'ಪ್ಯಾಡಲ್' (ಚಕ್ರಪಾದ)ಗಳ ವ್ಯವಸ್ಥೆಯನ್ನು ಹುಡುಕಿ ತೆಗೆದಿದ್ದನು. ತೋಫು ತುಬಾಕಿಗಳಿಗೆ ಕೊಳವೆಯೊಳಗಿಂದ ಮದ್ದು ಗುಂಡುಗಳನ್ನು ಜಡಿದು ತುಂಬುವ ಬದಲು ಕೊಳವೆಯನ್ನು ಬುಡದಲ್ಲಿಯೇ ಮುರಿದು ತೆರೆದು ಆ ಸಂದಿನಲ್ಲಿ ಮದ್ದು ಗುಂಡು ಹಾಕಿ ಹಾರಿಸುವ ರೇಖಾಕೃತಿಗಳನ್ನು ಅವನು ಬರೆದಿದ್ದನು. ಅವನು ಅಂದು ಕಲ್ಪಿಸಿ ರಚಿಸಿದ ಕೆಲವು ಯಂತ್ರೋಪಕರಣಗಳು ಇಂದಿಗೂ ಇಟಲಿಯಲ್ಲಿ ಬಳಕೆಯಲ್ಲಿ ಇರುತ್ತವೆ ! ಉದಾಹರಣೆಯೇ ಬೇಕಿದ್ದರೆ, ಕ್ಯಾರ್‍ರಾ ಎಂಬಲ್ಲಿಯ ಸಂಗಮುರವರಿಯ ಖಣಿಗಳಲ್ಲಿ ಶಿಲೆಯನ್ನು ಭೇದಿಸಲು ಬಳಿಸಲಾಗುವ ಕರಗಸವು ಲಿಯೊನಾರ್ಡೋನ ಕಲ್ಪನೆಯ ಕೃತಿಯು. ಅದು ಇನ್ನೂ ಅಂದಿನಂತೆಯೇ ಉಪಯೋಗದಲ್ಲಿದೆ ! ಚಿತ್ರಕಾರನ ಮಹಿಮೆ ಪಡೆದು, ಶಿಲ್ಪಿ ಯೆಂದು ಖ್ಯಾತಿಪೊಂದಿ, 'ಅರಸುಗಳಿಗೆ ನೀರಾವರಿಯ ಸಲಹೆಗಾರನೆಂದು ಹೆಸರಾಗಿ ಆ ಅದ್ವಿತೀಯ ವ್ಯಕ್ತಿಯು ಇಂದಿಗೂ ಕೆಲಸಗಾರರ ದಿನನಿತ್ಯದ ದುಡಿಮೆಗೆ ಅವಶ್ಯವೆನಿಸುವ ಅನೇಕ ಉಪಕರಣಗಳನ್ನೂ ಮಾಡಿಟ್ಟು ಹೋದ ನೆಂಬುದು ಒಂದು ಪವಾಡವೆಂದರೆ ಏನೂ ಅಂದಂತೆ ಅಲ್ಲ !

ಏಕೆಂದರೆ ಅವನ ಪ್ರತಿಭೆಯ ಕಿರಣಗಳು ಮುಗಿಯಲಿಲ್ಲ. ಜಲ ಶಕ್ತಿಯ ಸ್ಥಿತಿ-ಗತಿಯನ್ನು ತಿಳಿದು ಅದನ್ನು ಯಂತ್ರಕ್ಕೆ ಹೂಡಬಹುದೆಂಬ ಕನಸನ್ನು ಮೊದಲು ಕಂಡವನು, ಕಂಡುದನ್ನು ಮೊದಲು ಕೃತಿಗೆ ಇಳಿಸಿದವನು, ಛಾಯಾ ಚಿತ್ರ ಗ್ರಹಣವು ಶಕ್ಯವೆಂದು ಕಂಡು ಹಿಡಿದವನು, ನವೀನ ಅಣು-ರಚನೆಯನ್ನು

ಮೊದಲು ಮನಗಂಡವನು, ಧ್ವನಿ-ಮತ್ತು ಪ್ರಕಾಶದ ತರಂಗ ಪ್ರಸರಣವನ್ನು ಅರಿತುಕೊಂಡವನು, ಹೂವುಗಳ ಮತ್ತು ಎಲೆಗಳ ಆಕೃತಿ ಭೇದರಚನೆ ಮತ್ತು ವ್ಯವಸ್ಥೆಯನ್ನು ಅಭ್ಯಾಸಿಸಿದವನು-ಲಿಯೊನಾರ್ಡೋ !

ಅವನ ಗುಣಗಳ ಇಯತ್ತೆ ಮೇಲೆ ಮುಗಿಯಲಿಲ್ಲ, ಅವನ ಶರೀರದ ಸೌಂದರ್ಯ ಅಪ್ರತಿಮವಿತ್ತು; ಆದರ ಸಾಮರ್ಥ್ಯ ಅಷ್ಟೇ ಅಸಾಮಾನ್ಯವಿತ್ತು; ಕುದುರೆಯ ಕಾಲ ನಾಲುಗಳನ್ನು ಅವನು ಬರೆಗೈಯಿಂದಲೇ ಮಣಿಸಬಲ್ಲವನಿದ್ದನು; ಅವನಲ್ಲಿ ಅಂಗಸಾಧನೆಯ ಮತ್ತು ಜಲಕ್ರೀಡೆಯ ಪಟುತ್ವವಿತ್ತು; ಅವನು ಚಪಲ, ಚತುರ, ಮೋಹಕ ಮತ್ತು ಉಪಾಯಜ್ಞನಾಗಿದ್ದನು; ಅವನು ಬಹಳ ಜನಪ್ರಿಯನಿದ್ದನು; ಅಂಥ ಜನಪ್ರೇಮಕ್ಕೆ ಪಾತ್ರವಾಗುವ ಕೃತಿ ಮತ್ತು ಆಕೃತಿ ಉಳ್ಳವನಿದ್ದನು; ಎಲ್ಲಕ್ಕೂ ಮಿಗಿಲಾಗಿ ಅವನು ಉದಾರಿಯೂ ನಿಷ್ಠಾವಂತನೂ ಆದ ಮಿತ್ರ ನಿದ್ದನಲ್ಲದೆ, ತನ್ನ ಶಿಷ್ಯರನ್ನೂ ಅನುಯಾಯಿಗಳನ್ನೂ ನಿಕಟವಾಗಿ ಪ್ರೀತಿಸುತ್ತಿದ್ದನು.

ಅವನ ಇವೆಲ್ಲ ಗುಣಸಮುಚ್ಚಯವುಳ್ಳ ಚರಿತ್ರದ ಸಾರವನ್ನು ಒಂದು ಮಾತಿನಲ್ಲಿ ಹೇಳುವದಾದರೆ, ಲಿಯೊನಾರ್ಡೋಡಾವಿನ್ಸಿಯು ಸುಸಂಸ್ಕೃತ ಮನಸ್ಸು ಮತ್ತು ಸುಸ್ವಸ್ಥ ಶರೀರ ಇವೆರಡರ ಉತ್ತಮ ಸಂಯೋಗದ ನಿದರ್ಶನವೆನ್ನಬಹುದು. ಅವನು ಪೂರ್ಣ ಮಾನವನಾಗಿದ್ದನು. ●

# ಮೈಕೆಲೆಂಜೆಲೋ ಬುವೊನಾರೊತಿ

ಹರಮುರುಕು ಬುರುಸುಗಟ್ಟಿದ ಗೋಡೆಗಳ ಒಂದು ಕತ್ತಲೆ ಕೋಣೆ. ಆ ಕೋಣೆಯಲ್ಲಿ ಒಬ್ಬ ಮುದುಕ ನಿಂತಿದ್ದಾನೆ. ಮುದುಕನು ಕಿವಿಗೊಟ್ಟು ಕೇಳುತ್ತಿದ್ದಾನೆ. ಮುದುಕನ ಬಟ್ಟೆಬರೆಗಳೆಲ್ಲ ಹಳೆಯುವು, ಕೋಣೆಯಷ್ಟೇ ಹರಕು ಮುರುಕು ಬುರುಸುಗಟ್ಟಿದವು! ಮುಪ್ಪಿನಲ್ಲಿಯೂ ಅವನ ನಿಲುವಿಕೆ ಎತ್ತರ, ನಿಡಿದಾಗಿದೆ. ಅವನ ಹೆಗಲುಗಳು ಹರವಾಗಿವೆ. ಸೆಟೆದುನಿಂತಿವೆ. ಅವನ ಕಣ್ಣುಗಳು ಚಿಕ್ಕವು. ಮತ್ತೆ ಮತ್ತೆ ಬಾಗಿಲಕಡೆಗೆ ದಿಟ್ಟಿಸಿ ಆಯಾಸಪಟ್ಟು ನೋಡುತ್ತಿದ್ದಾನೆ. ಅವನ ಮೈಯಲ್ಲಿ ಮುಪ್ಪಿನ ಮುದುಡು, ದಣಿವು ಕಾಣುತಿದ್ದರೂ, ಕಣ್ಣುಗಳಲ್ಲಿ ಕಳೆಯಿದೆ. ತೀಕ್ಷ್ಣತೆ ಇದೆ. ಅವನ ಗಡ್ಡವು ಎರಡು ಕೋಡುಗಳು ಜೋಡಿಸಿ ತೂಗಿಬಿಟ್ಟಂತೆ ನಿಂತಿದೆ. ಅವನ ಮುಖದ ಮೈದೊಗಲು ಇನ್ನೂ ತಿಳಿಯಾದ ಕಾಂತಿಯನ್ನು ಕಳೆದುಕೊಂಡಿಲ್ಲ. ಅವನ ತಲೆ ಚೌಕಾಗಿ ಕಾಣುತ್ತದೆ. ಅದನ್ನು ಒಂದು ರಟ್ಟಿನ ಅಗಲವಾದ ಟೊಪ್ಪಿಗೆಯು ಮುಚ್ಚಿದೆ. ಆ ಟೊಪ್ಪಿಗೆಯಲ್ಲಿ ಒಂದು ಉರಿಯುವ ಮೇಣಬತ್ತಿಯನ್ನು ಜೋಡಿಸಿ ನಿಲ್ಲಿಸಲಾಗಿದೆ. ಹಾಂ! ನಗಬೇಡಿರಿ. ಅವನು ಹುಚ್ಚನಲ್ಲ. ಆ ದೀಪವನ್ನೇ ತುರಾಯಿಯೆಂದು ತಲೆಗೆ ಇಟ್ಟುಕೊಂಡಿಲ್ಲ. ಅವನ ಕೈಯಲ್ಲಿ ಉಳಿ–ಚಾಣಗಳಿವೆ. (ಆ ತಲೆದೀಪದ ಬೆಳಕಿನಲ್ಲಿ ಅವನು ಕಲ್ಲು ಕಟೆಯುವ ಕೆಲಸವನ್ನೇನೋ ಸಾಗಿಸುತ್ತಿರುವನೆಂದು ಬೇರೆ ಹೇಳಬೇಕೇ?) ಬಾಗಿಲಿನ ಕದವನ್ನು ಯಾರೋ ತಟ್ಟುತ್ತಾರೆ. ಇನ್ನೊಮ್ಮೆ ತಟ್ಟುತ್ತಾರೆ. ಮುದುಕನು ಸರಿಯುವ ಹೆಜ್ಜೆಗಳನ್ನು ಇಡುತ್ತ ಬಾಗಿಲನ್ನು ತೆರೆಯಲು ಹೋಗುತ್ತಾನೆ. ಹೊರಗೆ ಒಬ್ಬ ಆಳು ನಿಂತಿದ್ದಾನೆ; ಕಂಕುಳಲ್ಲಿ ದೊಡ್ಡ ಮೇಣಬತ್ತಿಗಳ ಕಟ್ಟನ್ನೊಂದು ಹಿಡಿದಿದ್ದಾನೆ. ಆ ಬತ್ತಿ ಯಾರದೋ ಕಾಣಿಕೆ. ಅವು ಮುದುಕನಿಗಾಗಿಯೇ ಮಾಡಿಸಿದ ವಿಶೇಷ ಬಗೆಯ ಬತ್ತಿಗಳು. ದಟ್ಟ ನೆಣದ ಬದಲು ತಿಳಿಯಾದ ಆಡಿನ ನೆಣದಿಂದ ತಯಾರಿಸಿದ ಮೇಣಬತ್ತಿಗಳು ಅವು. (ಮೇಣಬತ್ತಿಗಳು ನಿಜವಾಗಿಯೂ ನೆಣದ ಬತ್ತಿಗಳಿರುತ್ತವೆಂಬುದನ್ನೂ ಮತ್ತೆ ಹೇಳಬೇಕೆ?) ಈ ನೆಣಬತ್ತಿ ಉರಿಯುವಾಗ ಕರಗಿ ದಪ್ಪ ಧಾರೆಧಾರೆಯಾಗಿ ಬಿದ್ದು ರಟ್ಟಿನ ಟೊಪ್ಪಿಗೆಯನ್ನು ಕೆಡಿಸುವದಿಲ್ಲ.

ಮುದುಕನಿಗೆ ಮನಸ್ತಾಪವಾಗುತ್ತದೆ. ಸಿಡುಕಿನ ಹಾವಭಾವಗಳಿಂದ ಆಳು ತಂದ ಕಾಣಿಕೆಯ ಕಟ್ಟನ್ನು 'ಒಲ್ಲೆ'ನೆಂದು ಸೂಚಿಸುತ್ತಾನೆ. ಆಳು ಕೂಡ ಹಟಮಾರಿಯೇ. 'ಸ್ವಾಮಿ, ಇಷ್ಟು ದೂರ ಹೊತ್ತು ತಂದು ರಟ್ಟೆಯೆಲ್ಲ ಮುರಿದು ಹೋದವು. ಮತ್ತೆ ಹೊತ್ತುಕೊಂಡು ಮನೆಗೆ ಒಯ್ಯಲಾರೆ. ತಮಗೆ ಬೇಡವಾದರೆ ಬಿಡಿ. ನಾನು

ಇಲ್ಲಿಯೇ ತಮ್ಮ ಬಾಗಿಲಿನ ಮುಂದೆ ಬೀದಿಯ ಕೆಸರಲ್ಲಿ ಈ ಬತ್ತಿಗಳನ್ನು ನಿಲ್ಲಿಸಿ ಉರಿಸಿ ಬಿಡುತ್ತೇನೆ. ಬರ ಹೋಗುವವರೆಲ್ಲ ನೋಡಲಿ.' ಮುದುಕ ಗಾಬರಿಯಾದನು. ಅವನ ಕಾರ್ಯಮಗ್ನತೆಯನ್ನು ಕೆಡಿಸಲು ಈಗಾದ ತೊಂದರೆಯೇ ಸಾಕು; ಹಾದಿ ಹೋಕರ ಗೊಂದಲ ಮತ್ತೆ ಬೇಡ. 'ಹಾಗಾದರೆ ಅವುಗಳನ್ನು ಒಳಗಿಟ್ಟು ಹೋಗು. ನನ್ನ ಬಾಗಿಲಲ್ಲಿ ಮಂಗಾಟವಾಡಲು ನಿನಗೆ ಬಿಡುವದಿಲ್ಲ!' ಎಂದು ಮುದುಕ ಮತ್ತೆ ಕೋಣೆಯ ಕತ್ತಲೆಯ ಹುತ್ತವನ್ನು ಹೊಕ್ಕು ಕೆಲಸದಲ್ಲಿ ಮಗ್ನನಾಗುತ್ತಾನೆ.

ಈ ವಿಕ್ಷಿಪ್ತ ಮುದುಕನು ಯಾರು ? ಗೆಳೆಯನು ಕಳುಹಿಸಿದ ಮೇಣಬತ್ತಿಗಳಿಗಾಗಿ ಕೆರಳಿ ಸಿಡುಕ ಈ ಮುದಿವ್ಯಕ್ತಿ ಯಾರು ? ಕೆಲಸಗೇಡಿ ಕಸಬುಗಾರನೇ ? ಸೇವಾ ನಿವೃತ್ತ ಕೆಲಸಗಾರನೇ ? ನೆಂಟರ ಬಾಗಿಲ ಬಳಿಗೆ ಸೇರಿದ ಬಡತನಬಂದ ಸಂಬಂಧಿಯೇ ? ಅಲ್ಲ. ಈತನು ವೃದ್ಧ ಮೈಕೆಲೆಂಜೆಲೋ, ಒಂದು ಪ್ರತಿಮೆಯ ಶಿಲ್ಪಕಾರ್ಯದಲ್ಲಿ ತೊಡಗಿದ ವಿಶ್ವವಂದ್ಯ ಕಲಾವಿಭೂತಿ. ಪ್ರಾಯದಿಂದ ವೃದ್ಧನಾದರೂ ಪ್ರತಿಭೆಯಿಂದ ಸಮೃದ್ಧನಾಗಿಯೇ ನಿಂತ ಅಮರಕಲಾವಿದ, ಪಾಶ್ಚಾತ್ಯ ಸಂಸ್ಕೃತಿಯ ಇತಿಹಾಸದಲ್ಲಿ ಮೈಕೆಲೆಂಜೆಲೋನಿಗೆ 'ನಾಲ್ಕು ಆತ್ಮಗಳುಳ್ಳ ನರ'ನೆಂದು ಅಭಿಧಾನ. ಅವನ ಬಾಳಿನ ತಾಜಮಹಲಿಗೆ ನಾಲ್ಕು 'ಮಿನಾರ'ಗಳು,–ವಾಸ್ತುಶಿಲ್ಪ, ಮೂರ್ತಿಶಿಲ್ಪ, ಚಿತ್ರಕಲೆ ಮತ್ತು ಕಾವ್ಯಕೃತಿ ಈ ನಾಲ್ಕು ಪ್ರಕಾರಗಳ ಯಶಸ್ಸಿನ ಮಹತಿಯ ಮುಕುಟದಿಂದ ಮೂರ್ಧಾಭಿಷಿಕ್ತನಾದ ಮಹಾಪುರುಷ.

ಅವನ ಪೂರ್ಣ ಹೆಸರು ಮೈಕೆಲೇಂಜೆಲೋ ('ಜ' ಕಾರಕ್ಕೆ 'ಗ' ಕಾರಾದೇಶವೂ ಆಗುವದುಂಟು ಉಚ್ಚಾರದಲ್ಲಿ) ಬುವೊನಾರ್ರೊತಿ ಎಂದು. ಆದರೆ ಮೈಕೆಲೆಂಜೆಲೋ ಎಂಬ ಪ್ರಥಮ ನಾಮದಿಂದಲೇ ಅವನ ಪ್ರಖ್ಯಾತಿ. ತನ್ನ ಪ್ರತಿಭೆಯ ಉನ್ನತಿಗೆ ಅವನು ತನ್ನ ಕೃತಿಯ ಮಹತಿಯಿಂದಲೇ ಸ್ಮಾರಕಗಳನ್ನು ಕಟ್ಟಿದನು. ಈ ಸ್ಮಾರಕಗಳನ್ನು ಅವನು ಸಂಗಮರವರಿಯಲ್ಲಿ ಕೊರೆದನು, ಬಣ್ಣದಲ್ಲಿ ಬರೆದನು, ಕಲ್ಲಿನಲ್ಲಿ ಕಟೆದನು, ಮಸಿಯಲ್ಲಿ ಚಿತ್ರಿಸಿದನು. ಕಾವ್ಯದಲ್ಲಿ ರಚಿಸಿದನು. ಅವನದು ಭೀಮಸತ್ವ–ಅಂದಿನ ಯುಗವೇ ಭೀಮಸತ್ವದ ಯುಗ. ಇಟಲಿಯ ಸಾಂಸ್ಕೃತಿಕ ಪುನರುಜ್ಜೀವನದ ಫಲವಾಗಿ ಅಂದಿನ ಶ್ರೀಮದೂರ್ಜಿತ ವಿಭೂತಿಗಳು ಉದಯವಾಗಿದ್ದರು. ಅವನು ಒಂದು ಕಲೆಯನ್ನು ಪೂರ್ತಿ ತನ್ನ ಪ್ರಭುತ್ವದಲ್ಲಿ ತಂದನಲ್ಲದೆ, ಹಲವು ಇತರ ಕಲೆಗಳನ್ನು ತನ್ನ ದಾಸ್ಯತ್ವದಲ್ಲಿ ದುಡಿಸಿದನು ! ಆದರೆ ಅವನ ಜೀವನವು ದೀರ್ಘ ವಿಧ್ವಪ್ಟೇ ದುಃಖಮಯವೂ ಆಗಿತ್ತು. ಆ ದುಃಖದ ದೀರ್ಘಾಯುಷ್ಯದಲ್ಲಿಯೂ ಅವನು ವಿಶ್ವಕ್ಕೆ ಹೊಸ ಸೌಂದರ್ಯವನ್ನು ದಯಪಾಲಿಸಲಿಕ್ಕೆ

ದುಡಿದು ಹಣ್ಣಾದನು. ಅವನು ನಿರ್ಮಿಸಿದ ಆ ಸೌಂದರ್ಯವು ನಾಗರಿಕತೆಯು ನಿಂತಿರುವತನಕವೂ ಮಾನವನನ್ನು ಒಲಿಸದೇ ಬಿಡದು; ಆ ಒಲವಿನೊಂದಿಗೆ 'ಚತುರಾತ್ಮಸಂಪನ್ನ'ನಾದ ಮೈಕೆಲೆಂಜೆಲೋನ ಹೆಸರು ಗೆಲುವುಗೊಂಡು ಬಾಳದೇ ಬಿಡದು. ಇಂಥ ಈ ಮಹಾಪುರುಷನ ಜನ್ಮ ಕರ್ಮಗಳ ದಿವ್ಯವನ್ನು ಅರಿಯೋಣವೇ ?

ಮೈಕೆಲೆಂಜೆಲೋ ಬುವೊನಾರೊತ್ತಿ ಇವನು ಕಾಪ್ರಿಸಿ ಎಂಬಲ್ಲಿ ೧೪೭೫ ರ ಮಾರ್ಚ ೬ ನೇ ದಿನ ಹುಟ್ಟಿದನು. ಅವನ ತಂದೆಯು ಅಲ್ಲಿಯ ಪೂದೆಸ್ತಾ (ಪದಸ್ಥ ?) ಅಂದರೆ ನಗರಸಭೆಯ ಅಧ್ಯಕ್ಷನಾಗಿದ್ದನು. ಹಿಂದೊಮ್ಮೆ ಅವರ ಮನೆತನ ಒಳ್ಳೇ ಸಿರಿವಂತಿಕೆಯ ಹಿರಿತನದ್ದಾಗಿತ್ತು. ಮೂಲದಲ್ಲಿ ಫ್ಲೋರಾನ್ಸದಿಂದ ಬಂದವರು ಅವರು. ಆದರೆ ಮೈಕೆಲೆಂಜೆಲೋ ಹುಟ್ಟುವ ಸಮಯಕ್ಕೆ ಆ ಮನೆತನದ ಸಿರಿವಂತಿಕೆಯೆಲ್ಲ ಕರಗಿ ಹೋಗಿತ್ತು. ಬಡತನವು ಅವರು ಒಮ್ಮೆ ಸಿರಿವಂತರಿದ್ದರೆಂಬ ಹೆಮ್ಮೆಯನ್ನಷ್ಟೇ ಉಳಿಸಿ ಮಿಕ್ಕಿದ್ದನ್ನೆಲ್ಲ ನುಂಗಿಬಿಟ್ಟಿತ್ತು. ಅಧ್ಯಕ್ಷಪದದ ಆರು ತಿಂಗಳ ಅವಧಿಯು ತೀರಿದ ಮೇಲೆ ಲುಡೋವಿಕೊ ಬುವೊನಾರೊತ್ತಿಯು (ಮೈಕೆಲೆಂಜೆಲೋನ ತಂದೆಯು) ಫ್ಲೋರಾನ್ಸಿಗೆ ಮರಳಿದನು. ಅಲ್ಲಿ ಮಗು ಮೈಕೆಲ್‌ನ ಆರೈಕೆಯನ್ನು ಒಬ್ಬ ಕಲ್ಲುಕಟೆಯುವವನ ಹೆಂಡತಿಯ ಕೈಗೆ ಒಪ್ಪಿಸಲಾಯಿತು. 'ನಾನು ಪ್ರತಿಮೆಗಳನ್ನು ಕೆತ್ತುವದಕ್ಕೆ ಬಳಸುವ ಉಳಿ-ಚಾಣಗಳ ಕೈಚಳಕವನ್ನು ನನ್ನ ಸಾಕುತಾಯಿಯ ಮೊಲೆ-ಹಾಲಿನೊಂದಿಗೇ ಹೀರಿಕೊಂಡಿದ್ದೆನು !' ಎಂದು ಮೈಕೆಲೆಂಜೆಲೋ ಅಭಿಮಾನದಿಂದ ಅನ್ನುತಿದ್ದನು !

ಚಿಕ್ಕಂದಿನಲ್ಲಿ ಮೈಕೆಲ್‌ನಿಗೆ ಇತರ ಮಕ್ಕಳಂತೆಯೇ ಅಕ್ಷರಾಭ್ಯಾಸವಾಯಿತು. ಇಟಾಲಿಯನ್ ಭಾಷೆಯಲ್ಲಿ ಓದು-ಬರೆಹ ಕಲಿತನು. ಆದರೆ ಕಲೆಯು ಶೀಘ್ರವಲ್ಲಿಯೇ ಅವನ ಕಣ್ಮನಗಳನ್ನು ಸೆಳೆದುಕೊಂಡಿತು. ಅವನ ತಂದೆಯೂ ತಂದೆಯ ಸೋದರರೂ ಅವನಲ್ಲಿ ಸಂಚರಿಸಿದ ಈ ಕಲಾಶಕ್ತಿಯದೆವ್ವವನ್ನು ಹೊಡೆದು ಬಡಿದು ಓಡಿಸಲು ಯತ್ನಿಸಿದರು. ಆದರೆ ಅವರಿಗೂ ಮೀರಿ ನಿಂತಿತು. ಆ ಹುಡುಗನ ಹಟ ಮತ್ತು ಕಲಾಶಕ್ತಿಯ ಚಟ ! ಆದ್ದರಿಂದ ಕಲೆ ಅಂದರೆ ಕಲೆಯೇ. ಏನಾದರೂ ಕಲಿತು ಒಂದು ಆಕಾರಕ್ಕೆ ಹುಡುಗ ಬರಲಿ-ಎಂಬ ದೀರ್ಘ ವಿಚಾರದಿಂದ ಮನೆಯವರು ಅವನನ್ನು ಒಬ್ಬ ಉತ್ಕೃಷ್ಟ ಕಲಾಕಾರನ ವಶಕ್ಕೆ ಒಪ್ಪಿಸಿದರು. ಅವನ ಹೆಸರು ಡೊಮೆನಿಕೊ ಘಿರ್ಲಂಡಿಯೊ. ಅವನ ಕೈಕೆಳಗೆ ಅಲ್ಲ ಬರೇ ಕಣ್ಣಕೆಳಗೆ-ಮೈಕೆಲ್‌ನ ಕಲಾಭ್ಯಾಸಂಗ ವೇಗದಿಂದ ನಡೆಯಿತು. ಅವನ ತೀವ್ರ ಪ್ರಗತಿಯ ಒಂದು ಸೋಜಿಗದ ಪ್ರಮಾಣವೆಂದರೆ ಗುರುವು ಶಿಷ್ಯನ

ಕುರಿತು ವಾತ್ಸಲ್ಯದ ಬದಲು ಅಸೂಯೆಯನ್ನೇ ವ್ಯಕ್ತವಪಡಹತ್ತಿದನು. 'ಶಿಷ್ಯಾತ್ ಇಚ್ಛೇತ್ ಪರಾಜಯಂ' ಎಂಬ ಆರ್ಯಸೂಕ್ತಿಯಲ್ಲಿ ಈ ಇಟಾಲಿಯನ್ ಕಲಾಗುರುವಿಗೆ ಏನೂ ನಂಬಿಕೆ ಇದ್ದಿಲ್ಲ.

ಆರಂಭದಿಂದಲೂ ಮೈಕೆಲ್‌ನು ವಾಸ್ತವತೆಯನ್ನೇ ಅಭ್ಯಾಸಿಸಿದನು. ಕಲೆಯಲ್ಲಿ ಯಥಾರ್ಥತೆ ಮೂಡಿಸಲು ವಾಸ್ತವ ಪ್ರಪಂಚದ ವಿಷಯಗಳನ್ನೇ ಆಯ್ದುಕೊಂಡು ಅವುಗಳ ತದ್ರೂಪವನ್ನು ಸಾಧಿಸುತ್ತ ತನ್ನ ಕೃತಿಯನ್ನು ಪ್ರಕೃತಿಯ ತಳಹದಿಯ ಮೇಲೆ ನಿಲ್ಲಿಸಿದನು. ೧೩ ವರ್ಷದ ವಯಸ್ಸಿಗೇ ಈ ಕಲಾಭ್ಯಾಸಿಯು ಪ್ರತ್ಯಕ್ಷ ನಿಸರ್ಗದ ದೃಶ್ಯವನ್ನು ಹತ್ತಿರದಿಂದ ನೋಡಿದ ಹೊರತು ಪ್ರಕೃತಿಯನ್ನು ಯಾವ ವಿವರವನ್ನೂ ಬಣ್ಣದಲ್ಲಿ ಬರೆಯುತ್ತಿದ್ದಿಲ್ಲ. ವಾಸ್ತವ ಸತ್ಯದೊಡನೆ ತನ್ನ ಕಲ್ಪನೆಗಳ ಹೋಲಿಕೆ ಹೊಂದಿಕೆಯಾದ ಹೊರತು ಅವುಗಳನ್ನು ಕೃತಿಯಲ್ಲಿ ಅರಳಿಸುತ್ತಿದ್ದಿಲ್ಲ. ಘಂಟೆಗಟ್ಲೆ ಮೀನು ಮಾರುವಲ್ಲಿ ಹೋಗಿ ಅವನು ನಿಲ್ಲುತ್ತಿದ್ದನು– ಮೀನುಗಳ ಪಕ್ಕ ಪುಚ್ಛಗಳ ಗರೆ ಬಣ್ಣಗಳನ್ನೂ ನಿರೀಕ್ಷಿಸಲಿಕ್ಕೆ, ಅವುಗಳ ಕಣ್ಣುಗಳ ಹೊಳಪನ್ನು ನೋಡಿ ತಿಳಿಯಲಿಕ್ಕೆ ! ಮತ್ತು ಹೀಗೆ ಮತ್ತೆ ಮತ್ತೆ ನೋಡಿದ್ದನ್ನೆಲ್ಲ ತಿಳಿದದ್ದನ್ನೆಲ್ಲ ವಿವರವಾಗಿ ಯಥಾರ್ಥವಾಗಿ ತನ್ನ ವರ್ಣಚಿತ್ರದಲ್ಲಿ ಮೂಡಿಸುತ್ತಿದ್ದನು.

ಸ್ವಲ್ಪವೇ ಸಮಯದ ನಂತರ ಮೈಕೆಲೆಂಜೆಲೋ ಘಿರ್ಲಾಂಡಿಯೋನನ ಸೆರೆಯನ್ನು ಬಿಟ್ಟು ಲೊರೆಂಝೋಡಾ ಮಿಡೆಸಿ ಎಂಬ ಅಂದಿನ ಘನವಂತಿಕೆಯ ಪಟ್ಟವನ್ನೇರಿದ ಒಬ್ಬ ಶಿಲ್ಪಿಯ ಶಾಲೆಯ ಶಿಕ್ಷಣ ಪಡೆದನು. ಏಕೆಂದರೆ ಆತನಕ ಮೈಕೆಲ್‌ನಲ್ಲಿ ಶಿಲ್ಪದ–ಅದೂ ಮೂರ್ತಿ ಶಿಲ್ಪದ ಅಭಿರುಚಿ ಭರದಿಂದ ಅಂಕುರಿಸಿ ಬೆಳೆದಿತ್ತು. ಅಲ್ಲಿಯೂ ಅವನು ಶೀಘ್ರದಲ್ಲಿ ಗು ರು ವಿ ನ ಲಕ್ಷ್ಯವನ್ನು ಸೆಳೆದುಕೊಂಡನು. ಅಲ್ಲೊಂದು ಚಿಕ್ಕ ಪ್ರಸಂಗವೇ ನಡೆಯಿತು. ಶಾಲೆಯಲ್ಲಿ ಬಿದ್ದಿದ್ದ ಒಂದು ಕೆಲಸಕ್ಕೆ ಬಾರದ ಸಂಗಮರವರಿಯ ತುಂಡನ್ನು ಮೈಕೆಲ್‌ನು ಎತ್ತಿಕೊಂಡು ಅದರಲ್ಲಿ ಒಂದು ಹಲ್ಲು ಕಿರಿದು ನಗುವ ಮುಖವಾಡವನ್ನು ಲೀಲೆಯಿಂದ ಕೊರೆದನು. ಅದನ್ನು ಉಜ್ಜಿ ನುಣುಪು ಮಾಡುತ್ತಿದ್ದಾಗ ಅವನ ಗುರು ಲೊರೆಂಝೋ ಅಲ್ಲಿಂದ ಅವನ ಬದಿಯಿಂದ ಹಾಯ್ದನು. ಆ ಮಹಾಗುರುವು ಈ ಹೊಸ ಶಿಷ್ಯನ ಚತುರ ಶಿಲ್ಪವನ್ನು ನೋಡಿ ನಿಂತನು. ನಿಂತು ತಲೆದೂಗಿದನು. 'ಮಗೂ, ಈ ಮುಖವನ್ನು ನೀನು ಬಹಳೆ ಮುದಿಯಾಗಿ ಕಾಣುವಂತೆ ಕೊರೆದಿರುವಿ. ಆದಾಗ್ಯೂ ಹಲ್ಲು ಕಿರಿಯುವ ಅನುಕೂಲಕ್ಕೆ ಎಲ್ಲ ಹಲ್ಲುಗಳನ್ನು ಭದ್ರವಾಗಿ ಇಟ್ಟಿರುವಿ. ! ಇಷ್ಟು ಮುದಿಮನುಷ್ಯನ ಮುಖದಲ್ಲಿ ಒಂದೆರಡು ಹಲ್ಲುಗಳಾದರೂ ಬಿದ್ದು

ಹೋಗಿರುವದುಂಟು. ಇದು ನಿನಗೆ ಗೊತ್ತಿಲ್ಲವೆ ?' ಎಂದು ವಿನೋದದಿಂದ ಅವನು ಮೈಕೆಲ್‌ನನ್ನು ಪ್ರಶ್ನಿಸಿದನು. ಮೈಕೆಲ್‌ನು ಮರ್ಮಜ್ಞನು. ಗುರುವಿನ ಮಾತಿನ ತಥ್ಯ ತಟ್ಟನೆ ಅವನಿಗೆ ಹೊಳೆಯಿತು. ಚಾಣ-ಸುತ್ತಿಗೆಗಳನ್ನು ಎತ್ತಿಕೊಂಡು ಆ ಮುಖವಾಡನ ಮೇಲ್ದವಡೆಯ ಒಂದು ಹಲ್ಲನ್ನು ಕಿತ್ತು ಒಗೆದೇ ಬಿಟ್ಟನು. ಅವನ ಈ ಕೀಳುವ, ಕೆತ್ತುವ ಕೆಲಸದ ಕೈಚಳಕವನ್ನು ಕಂಡು ಲೊರೆಂಝೋ ಮೆಚ್ಚಿದನು. ಹುಡುಗನ ತಂದೆಯನ್ನು ಕರೆಯಿಸಿ ಮಾತನಾಡಿಸಿ ಅಂದಿನಿಂದ ಮೈಕೆಲೆಂಜೆಲೋನನ್ನು ತನ್ನ ಮನೆಯಲ್ಲಿಯೇ ಉಳಿಸಿಕೊಂಡನು. ಅಲ್ಲಿಯೇ ಮುಂದೆ ಲೊರೆಂಝೋ ಸಾಯುವತನಕ ೧೪೯೨ ರ ತನಕ ಮೈಕೆಲ್‌ನು ಗುರುವಿನ ನಿಕಟವರ್ತಿಯಾಗಿ ಉಳಿದು ಶಿಲ್ಪಕಲೋಪಾಸನೆಯನ್ನು ತನ್ಮಯತೆಯಿಂದ ಮುಂದುವರಿಸಿದನು.

ಮೈಕೆಲ್‌ನ ಶೀಲವೂ ಶೈಲಿಯೂ ರೂಪಗೊಂಡ ವರ್ಷಗಳು ಇವು. ಇದೇ ಸಮಯಕ್ಕೆ ಅವನು ಪೊಲಿಶನ್‌ನನ್ನು ಭೆಟ್ಟಿಯಾದನು. ಅಂದಿನ ಇಟಲಿಗೆ ಪೊಲಿಶನ್‌ನು ಕವಿಯೂ ಸರ್ವಶ್ರೇಷ್ಠ ಪಂಡಿತನೂ ಆಗಿದ್ದನು. ಮೈಕೆಲ್‌ನ ಆ ಸಮಯದ ಕೃತಿಗಳಲ್ಲಿ ಲೊರೆಂಝೋನು ವಿಕಾಸಗೊಳಿಸಿದ ಗ್ರೀಕ ಕಲೆಯ ಲಕ್ಷಣಗಳ ಪ್ರಭಾವವು ತುಂಬ ತೋರಿಬರುತ್ತದೆ. ಲೊರೆಂಝೋನ ಮರಣದನಂತರ ಮೈಕೆಲ್‌ನು ಅಂದಿನ ಉಗ್ರವಾದಿಯಾದ ತತ್ವವೇತ್ತ ಸೆವೊನ-ರೋಲಾನ ಪ್ರಭಾವದ ಪ್ರಬಲ ಜಾಲದಲ್ಲಿ ಸಿಲುಕಿದನು. ಇದೇ ಸಮಯ ಅವನು ಬೈಬಲ್ ಮತ್ತು ಕ್ರೈಸ್ತಧರ್ಮ ಗ್ರಂಥಗಳ ಆಳವಾದ ಅಧ್ಯಯನವನ್ನು ಆರಂಭಿಸಿದನು. ಈ ಅಧ್ಯಯನವು ಅವನ ಮುಂದಿನ ಚರಿತ್ರ ಮತ್ತು ಕಾರ್ಯದಲ್ಲಿ ಘನವಾಗಿ ಪ್ರತಿಬಿಂಬಿಸಿತು. ಕಾವ್ಯ ಮತ್ತು ತತ್ವವಿಚಾರದಲ್ಲಿ ಅವನಿಗೆ ದಾಂತೆಯು ಸ್ಫೂರ್ತಿಯ ಗುರುವಾದನು. ತನ್ನ ಸ್ವಂತ ಕಲೆಯ ಕ್ಷೇತ್ರದಲ್ಲಿ ಅವನು ಘಿರ್ಲಾಂಡಿಯೋ, ಘಿಬರ್ಟ, ಗಿಯೊಟ್ಟೊ ಮುಂತಾದ ಶ್ರೇಷ್ಠ ಕಲಾವಿದರ ಸಂಪನ್ನ ಕೃತಿಗಳ ರಸಸ್ವಾದ ಸುಖದಿಂದ ತುಂಬಿ ತುಳುಕಿದನು. ಮೆಡಿಸಿಯ ವಿಹಾರ ವನಗಳಲ್ಲಿ ಮೈಕೆಲ್‌ನ ದಿನಗಳು ಸುಖವಾಗಿ ಕಳೆದವು. ಅವನ ಆರಂಭ ಜೀವನದಲ್ಲಿಯ ದುರ್ಘಟನೆಯೊಂದನ್ನು ಅವನ ಸಮಕಾಲೀನ ಕಲಾಕಾರನೊಬ್ಬನು-ತೊರಿಗಿಯಾನೋ ಎಂಬಾತನು-ಹೀಗೆ ಬಣ್ಣಿಸಿದ್ದಾನೆ.

'ಈ ಮೈಕೆಲ್‌ನೊಡನೆ ನಾನು ಕಾರಮೈನದ ಪ್ರಾರ್ಥನಾ ಮಂದಿರದಲ್ಲಿ ಹೋಗಿ ಅಲ್ಲಿಯ ಒಂದು ಗುಡಿಯಲ್ಲಿ ಮೊಸಾಕಿಯೋನು ಬರೆದ ಚಿತ್ರಗಳ ಅಭ್ಯಾಸವನ್ನು ಮಾಡುತ್ತ ಕೂಡ್ರುತ್ತಿದ್ದೆನು. ನಾವಿಬ್ಬರೇ ಅಲ್ಲ ! ಅನೇಕ ಕಲಾಭ್ಯಾಸಿಗಳು ಅಲ್ಲಿ ಹೋಗಿ ಕೂತು ಅಲ್ಲಿಯ ಮಾದರಿಗಳಿಂದ ರೇಖಾ-ಕೃತಿಗಳನ್ನು ಬರೆಯುತ್ತಿದ್ದರು.

ಮೈಕೆಲ್‌ನಿಗೆ ಒಂದು ಖೋಡಿ ಗುಣವಿತ್ತು. ಅಲ್ಲಿ ಕಲಿತ ಎಲ್ಲರನ್ನು ಅವನು ಗೇಲಿ ಮಾಡುತಿದ್ದನು. ಒಮ್ಮೆ ಅದು ನನಗೆ ಅಸಹ್ಯವಾಯಿತು. ನಾನು ನಿತ್ಯಕ್ಕಿಂತ ಹೆಚ್ಚು ಸಿಟ್ಟಿಗೆದ್ದೆನು. ಮುಷ್ಟಿಯನ್ನು ಬಿಗಿದು ಮೈಕೆಲ್‌ನ ಮೂಗಿನ ಮೇಲೆ ಚೆನ್ನಾಗಿ ಒಂದು ಗುದ್ದು ಕೊಟ್ಟುಬಿಟ್ಟೆನು. ನನ್ನ ಮುಷ್ಟಿಯೊಟಿಗೆ ಅವನ ಮೂಗಿನ ಎಲುಬು ಮುರಿದದ್ದು ನನಗೆ ಅನಿಸಿತು. ನನ್ನ ಗುದ್ದು ಅಷ್ಟು ಗಡುಸಾಗಿತ್ತು. ಬಿಸ್ಕಿಟು ಒಡೆವಂತೆ ಎಲುಬು ತುಂಡಾದಂತೆ ನನ್ನ ಮಡಚಿದ ಬೆರಳುಗಳಿಗೆ ಅನಿಸಿತು. ನನ್ನ ಗುದ್ದಿನಿಂದ ಆದ ಈ ಗುರುತನ್ನು ಸಾಯುವನಕವೂ ಅವನ ಮೋರೆಯ ಮೇಲೆ ನೀವು ಕಾಣಬಹುದು.'

ತೊರಿಗಿಯಾನೋನ ಈ ಭವಿಷ್ಯವಾಣಿ ನಿಜವಾಯಿತು. ಆ ಗುದ್ದಿನ ಗುರುತನ್ನು ಅವನು ಜೀವಮಾನವೆಲ್ಲ ಮೋರೆಯ ಮೇಲೆ ತಳೆದು ಬದುಕಿದನು. ಆದರೆ ಇಂಥ ದುರ್ಘಟನೆಗಳು ಅವನ ಜೀವನದಲ್ಲಿ ಆದದ್ದು ಕಡಿಮೆಯೇ. ಇರಲಿ.

ಲೊರೆಂಝೋ ಡಾ. ಮಿಡಿಸಿಯ ಆಶ್ರಯದಲ್ಲಿ ಇರುವಾಗಲೇ ಅವನ ಜೀವನದ ಒಂದು ಹಿರಿಯ ಭಾವೋನ್ಮಾದದ ನೆರೆಯು ಹಾವಳಿ ಇಕ್ಕಿತು. ಈ ಭಾವೋನ್ಮಾದವು ಅವನ ಕಲಾಮಯ ಹೃದಯದ ಜ್ವಾಲೆಗಳಿಗೆ ಉರುವಲವೇ ಆಯಿತು. ಲುಗಿಯಾ ಡಾ ಮಿಡಿಸಿ ಎಂಬ ಮೆಡಿಸಿಕುಟುಂಬದ ಒಬ್ಬ ಸುಂದರಿಯನ್ನು ಅವನು ಭೆಟ್ಟಿಯಾಗಿ ಪ್ರೇಮಪರವಶನಾದನು. ಆದರೆ ಇವನ ಪ್ರೇಮ ಆ ಪರಕೀಯಳ ವಶವಾದರೂ ಅವಳು ಇವನ ವಶವಾಗಲಿಲ್ಲ. ಅವಳಿಂದ ಯಾವ ಪ್ರತಿಕ್ರಿಯೆ ಪ್ರತ್ಯುತ್ತರವೂ ಸ್ವೀಕಾರದ ಸಂಚುಕಾರವೂ ಇವನಿಗೆ ದೊರೆಯಲಿಲ್ಲ. ಆದರೆ ಇವನ ಪ್ರೇಮದ ಸಂಚುಕಾರವು ಇಟಾಲಿಯನ್ ಭಾಷೆಗೂ ವಿಶ್ವದ ಸಾಹಿತ್ಯಕ್ಕೂ ವಿಪುಲವಾಗಿ ದೊರೆಯಿತು. ಉತ್ಕೃಷ್ಟ ಅಷ್ಟಪಟ್ಟದಿಗಳ ಮಾಲಿಕೆಯಾಗಿ ಅವನ ಪ್ರೇಮವು ಕಾವ್ಯಾಭಿವ್ಯಕ್ತಿಯನ್ನು ಪಡೆಯಿತು.

ಮುಂದೆ ೬೦ ನೇ ವರ್ಷ ವಯಸ್ಸಿನತನಕವೂ ಅವನ ಕಾವ್ಯದ ಸೆಲೆಯು ಚಿಮ್ಮಿ ಹರಿದದ್ದು ಕಾಣುವದಿಲ್ಲ. ಆ ಇಳಿವಯಸ್ಸಿನಲ್ಲಿ ಈ ಕಲಾವಿದನು ಇನ್ನೊಮ್ಮೆ ಪ್ರೇಮದ ಪುನಃಕ್ಷೋಭದಲ್ಲಿ ಸಿಲುಕಿದನು. ಮತ್ತೆ ಪ್ರೇಮದ ಕಾವಿಗೆ ಕರಗಿ ಅವನ ಹೃದಯವು ಕಾವ್ಯದ ಧಾರೆಯನ್ನು ಹರಿಯಿಸಿತು. ಆಗ ಅವನು ಇನ್ನೊಂದು ಹೊಸ ಅಷ್ಟಪಟ್ಟದಿಗಳ ಮಾಲಿಕೆಯನ್ನು ತೋಮಾಸೊ ಕೆವ್ಹಲೀರೀ ಎಂಬಾತನನ್ನು ಕುರಿತು ಪ್ರೇರಿಸಿ ಅರ್ಪಿಸಿದ್ದನ್ನು ನಾವು ನೋಡುತ್ತೇವೆ. ಈ 'ಸೊನೆಟ್' ಮಾಲಿಕೆಯನ್ನು ಓದಿದರೆ ನಮಗೆ ಶೆಕ್ಸಪಿಯರನೂ ಹೀಗೆ ಅಜ್ಞಾತ

'ಡಬ್ಲ್ಯು ಎಚ್' ಎಂಬ ವ್ಯಕ್ತಿಯನ್ನು ಕುರಿತು ಬರೆದ ಸ್ಫುಟಕವಿತೆಗಳ ಕುಸುಮಾಂಜಲಿಯು ನೆನಪು ಆಗುತ್ತದೆ. ಈ ಸೊನೆಟ್ (ಅಷ್ಟಪಟ್ಪದಿ)ಗಳ ಮಾಲಿಕೆಗೂ ಮಿಗಿಲಾದವೆಂದರೆ ವ್ಹಿಟೋರಿಯಾ ಕೊಲೊನ್ನಾ ಎಂಬಾಕೆಯ ಪ್ರೀತ್ಯರ್ಥ ಅವನು ಬರೆದ ಕವನಗಳು. ಈಕೆಯು ನಿಜವಾಗಿಯೂ ಮೈಕೆಲೆಂಜೆಲೋನ ಕಾವ್ಯಜೀವನದ ಅಧಿಷ್ಠಾತ್ರಿ ದೇವತೆ. ತನ್ನ ಅಂತರಾತ್ಮವನ್ನೇ ಮಹೋನ್ನತ ಶಬ್ದಪಂಕ್ತಿಗಳಲ್ಲಿ ಅವನು ಅವಳೆದುರಿಗೆ ತೋಡಿಕೊಂಡನು. ಅವಳ ಕುರಿತು ಬರೆದ ಈ ಕಾವ್ಯದಲ್ಲಿ ಜೀವಕಳೆ ಇದೆ. ಜೀವಂತ ಕಾವ್ಯದ ಹೊರತು ಅನುಭಾವ ಗೀತಗಳನ್ನೂ ಕ್ರೈಸ್ತಧರ್ಮದ ಪ್ರಮೇಯಗಳ ಮೇಲೆ ಅವನು ಬರೆದ ಗದ್ಯಗ್ರಂಥಗಳನ್ನೂ ಅಧ್ಯಾತ್ಮಿಕ ಪ್ರೇಮದ ಹರ್ಷವನ್ನೂ ಕಲೆಯ ರಹಸ್ಯಮಯ ರಮ್ಯತೆಯನ್ನೂ ಅವನು ಆಕೆಗೆ ಅರ್ಪಿಸಿದನು.

ವಾಲ್ಟರ್ ಪೇಟರ ಎಂಬ ವಿಖ್ಯಾತ ವಿಮರ್ಶಕನು ಅನ್ನುವಂತೆ ಮೈಕೆಲೆಂಜೆಲೋನ ಕವನಗಳಲ್ಲಿ ಮಂಜು ಮತ್ತು ಬೆಂಕಿ ಇವೆರಡೇ ವಸ್ತುಗಳು ಉಪಮೆ–ರೂಪಕ ಪ್ರತೀಕಗಳಾಗಿ, ಬೇರೆಬೇರೆ ರೀತಿಯಲ್ಲಿ ವ್ಯಕ್ತವಾಗುತ್ತವೆ. ಬೆಂಕಿಯ ರೂಪಕ ಸ್ವರ್ಣಕಾರನ ಕುಲಿಮೆ ಚಿನ್ನವನ್ನು ಶುದ್ಧಗೊಳಿಸುವ ಪಾವನ ಪಾವಕ ಅಥವಾ ಫೊನಿಕ್ಸ ಪಕ್ಷಿಯ ರೂಪಕ; (ತನ್ನನ್ನೇ ಸುಟ್ಟುಕೊಂಡು ಆ ಬೂದಿಯಿಂದಲೇ ಹೊಸ ಹುಟ್ಟುಪಡೆದು ಏಳುವ 'ಅಗ್ನಿಹಂಸ'ದ ರೂಪಕ) ಬೆಂಕಿಗೆ ಕರಗುವ ಮಂಜು; ಇಲ್ಲವೇ ಶಿಲೆಯಿಂದ ಹೊರಟು ಶಿಲೆಯನ್ನೆ ಸುಟ್ಟು ಕರಗಿಸುವ ಅಗ್ನಿ;– ಇಂಥವೇ ಪ್ರತೀಕಗಳು ಅವನ ಕಾವ್ಯದ ಅಲಂಕಾರಗಳು. ಅವನ ಕಾವ್ಯ ಶೈಲಿಯು ಕಷ್ಟ ಕ್ಲಿಷ್ಟವು, ಸೂತ್ರಮಯವು–ಅವನ ವ್ಯಕ್ತಿತ್ವದಂತೆಯೇ ಮಾರ್ಪಟ್ಟದ್ದು. ಅವನು ಬಹಳ ಶ್ರಮದಿಂದ ತನ್ನನ್ನೇ ತಾನು ತಿದ್ದಿಕೊಳ್ಳುತ್ತ ಬರೆಯುತ್ತಿದ್ದನು. ಮುಂದಿಟ್ಟ ಸಂಗಮರವರಿ ಶಿಲಾಖಂಡದ ಮೇಲೆ ಎಷ್ಟು ಆವೇಶ ಮತ್ತು ಶಕ್ತಿ ಸಂಭ್ರಮದಿಂದ ಶ್ರಮಿಸುತಿದ್ದನೋ ಅಷ್ಟೇ ರಭಸದಿಂದ ಅವನು ಭಾಷೆಯ ಮೇಲೆ ಶ್ರಮವನ್ನು ವ್ಯಯಿಸಿ ಪ್ರಯತ್ನದ ಪರಮಾವಧಿಯನ್ನು ಮುಟ್ಟಿ ಕಾವ್ಯವನ್ನು ಕಟ್ಟುತ್ತಿದ್ದನು. ಮನೋವೃತ್ತಿಯ ಅನಿರ್ಬಂಧ ಆವೇಶದೊಂದಿಗೆ, ಪೂರ್ಣತ್ವದ ಉಗ್ರವಾದ ಅಪೇಕ್ಷೆಯು ಕೂಡಿ ಅವನ ಕಾವ್ಯದ ಅಥವಾ ಕಲಾಕೃತಿಯ ಉತ್ಸಾಹ ಉಂಟಾಗಿತ್ತು. ಈ ಉತ್ಸಾಹದಲ್ಲಿ ಕವಿತಾಶಕ್ತಿಯ ಮೂಲ ಪ್ರವೃತ್ತಿಯಾಗಲಿ, ಮಾಧ್ಯಮವನ್ನು ಆಯ್ದುಕೊಳ್ಳುವ ಉಚಿತ ದೃಷ್ಟಿಯಾಗಲಿ, ಆಯ್ದ ಮಾಧ್ಯಮದಲ್ಲಿ ಅಡಕವಾದ ತೊಡಕುಗಳನ್ನು ಬಗೆಹರಿಸಿ ಅವನ್ನು ತನ್ನ ಸ್ಫೂರ್ತಿಗೆ ಬಗ್ಗಿಸುವ ಪ್ರಭುತ್ವವಾಗಲಿ ಅವನಲ್ಲಿ ಕಡಿಮೆಯೇ ಇತ್ತು.

ಆದರೆ ಈ ಅವಧಿಯು ಮುಗಿಯುವ ಸಮಯ ಬಂದಿತು. ಲೊರೆಂಜೋನ

ಆಶ್ರಯದಲ್ಲಿ ಸಾನ್‌ಮಾರ್ಕೋ ಎಂಬಲ್ಲಿಯ ಮೈಕೆಲ್‌ನ ವಸತಿಯು ಮುಂದರಿಯುವಂತೆ ಆಗಲಿಲ್ಲ. ಲೊರೆಂರ್ಝೋ ೧೪೯೨ ರಲ್ಲಿ ತೀರಿಕೊಂಡನು. ಆಗ ಮೈಕೆಲೆಂಜೆಲೋ ಸೆಟ್ರಿಗ್ನೆನೊ ಎಂಬಲ್ಲಿಗೆ ಹೋಗಿ ಉಳಿದನು. ಅಲ್ಲಿ ಅವನು ಶವಚ್ಛೇದ ಮತ್ತು ಶರೀರರಚನೆಯನ್ನು ಅಭ್ಯಾಸಿಸತೊಡಗಿದನು. ಅವನ ಅಭ್ಯಾಸದ ಫಲವು ಅವನ ಶಿಲ್ಪಕೃತಿಗಳಲ್ಲಿ ಕಂಡು ಬರುತ್ತದೆ. ಅವನ ಪ್ರತಿಮೆಗಳಲ್ಲಿ ತೋರುವ ಅವಯವಗಳ ಪ್ರಮಾಣ ಬದ್ಧತೆ ಹಾಗೂ ಅಂಗಾಂಗಗಳ ಸೌಷ್ಠವ ಈ ಶರೀರರಚನೆಯ ಪ್ರತ್ಯಕ್ಷ ಅಭ್ಯಾಸದಿಂದ ಒಡಮೂಡಿದ ಗುಣ.

ಮುಂದಿನ ಮೂರು ವರ್ಷ ಅವನು ಸಂಚಾರದಲ್ಲಿ ಕಳೆದನು. ವ್ಹೆನಿಸ್, ಬೊಲೊನಾಗಳಿಗೆ ಭೆಟ್ಟಿಕೊಟ್ಟು ಕೆಲಕಾಲ ಅಲ್ಲಲ್ಲಿ ವಾಸಿಸಿ ಫ್ಲೋರಾನ್ಸಿಗೆ ಮರಳಿದನು. ಈಗ ಅವನು ತಾರುಣ್ಯದ ಭರದಲ್ಲಿ ಕಾಲಿಟ್ಟಿದ್ದನು. ಅವನ ಪರಿಪಕ್ವತೆಯ–ಪ್ರತಿಭೆಯು ಪ್ರೌಢಿಮೆಯ–ಅವಸ್ಥೆ ಆರಂಭವಾಗುತ್ತಲಿತ್ತು. ಈ ಪ್ರೌಢಿಮೆಯ ಭರದಲ್ಲಿಯೇ ಅವನು ಹಲವು ಮಿಗಿಲಾದ ಹಿರಿಮೆಯ ಕೃತಿರತ್ನಗಳನ್ನು ಪ್ರಪಂಚಕ್ಕೆ ನೀಡಿದನು.

೧೪೯೫ ರಲ್ಲಿ ಅವನು ಸುಂದರವಾದ 'ಮಲಗಿದ ಮದನ'ನ ಮೂರ್ತಿಯನ್ನು ಕೊರೆದನು. ಮರುವರ್ಷ ರೋಮಕ್ಕೆ ಹೋಗಿ ಅಲ್ಲಿ ಈ ಕಲಾವಿದನು 'ಬಾಕ್ಕಸ್' ಎಂಬ ಅಶ್ವದೇಹಿ ಉತ್ಸವದೇವನ ಸಂಗಮರವರಿ ಪ್ರತಿಮೆಯನ್ನು ಕೆತ್ತಿದನು. ಅಂದಿನಿಂದ ಅವನ ಪ್ರತಿಭೆಯು ಶೀಘ್ರ ನಿರ್ಮಾಣ ಸಾಮರ್ಥ್ಯವನ್ನು ತೋರಹತ್ತಿತು. ೧೪೯೮ರಲ್ಲಿ ಅವನ ಕ್ರೈಸ್ತಧರ್ಮ ಪರಂಪರೆಯ ಪ್ರಥಮ ಕೃತಿಯು 'ಪೀತಾ' ಎಂಬುವದು ನಿರ್ಮಿತವಾಯಿತು. ಅದು ಇಂದಿಗೂ ಪೋಪನ ಸಂಸ್ಥಾನವಾದ ವ್ಹ್ಯಾಟಿಕನ್‌ದಲ್ಲಿ ಇದೆ. ೧೫೦೧ರಲ್ಲಿ ಫ್ಲೋರಾನ್ಸಿಗೆ ಬಂದಮೇಲೆ ಅವನು 'ಬ್ರುಗೆಸ್‌ಮೆಡೊನ್ನಾ' ಎಂಬ ಕೃತಿಯನ್ನು ರಚಿಸಿದನು. ಮೂರುವರ್ಷ ನಂತರ 'ಡೆವಿಡ್' ಎಂಬ ಪ್ರಚಂಡ ಪ್ರತಿಮೆಯನ್ನು ಶಿಲ್ಪಿಸಿದನು. ಕಾರಾರಾ ಖನಿಯಿಂದ ಕಟೆದು ತೆಗೆದ ಒಂದು ಸಂಗಮರವರಿಯ ತುಂಡನ್ನು ಹದಗೆಟ್ಟ ಕಲ್ಲೆಂದು ಬದಿಗೆ ಒಗೆಯಲಾಗಿತ್ತು. ಮೈಕೆಲೆಂಜೆಲೋನು ಅದನ್ನೇ ಆಯ್ದುಕೊಂಡು ೯ ಮೊಳ ಎತ್ತರದ ಈ ಭವ್ಯ ಮೂರ್ತಿಯನ್ನು ಕೊರೆದು ಮೂಡಿಸಿದನು. ಮೂಲದ ಶಿಲಾಖಂಡಕ್ಕೆ ಯೋಗ್ಯ ಆಕಾರ ಬರುವಂಥ ಗುಣವೇ ಇದ್ದಿಲ್ಲ.– ಸರಿಯಾದ ಸೆರೆ ಪದರುಗಳು ಇದ್ದಿಲ್ಲ. ಆದಾಗ್ಯೂ ಅಸಾಧ್ಯ ಸಾಧನೆಯ ಕಷ್ಟಕ್ಕೆ ಮೆಚ್ಚುವ ಮೈಕೆಲ್‌ನು ೧೮ ತಿಂಗಳು ಶ್ರಮಪಟ್ಟು ಆ ಅಡ್ಡ ತಿಡ್ಡ ಕಲ್ಲುಬಂಡೆಯೊಳಗಿಂದ ಆಶ್ಚರ್ಯಕರ ಸೌಂದರ್ಯದ ಪ್ರತಿಮೆಯನ್ನು ಕೊರೆದು ನಿಲ್ಲಿಸಿದನು.

ಇಂದಿನಂತೆ ಆಗಲೂ ನಿರುಪಯೋಗಿ ಪಾಂಡಿತ್ಯದ ನಿರುದ್ದೇಶ ಟೀಕಾಕಾರರು ಬಹಳ ಇದ್ದರು. ಅವರ ಕಾಟ ಮೈಕೆಲೆಂಜೆಲೋನಿಗೂ ತಪ್ಪಿದ್ದಿಲ್ಲ. ಕೃತಿಯನ್ನು ಕಂಡೊಡನೆ ಒಮ್ಮೆಲೇ ಕೊಂಡಾಡಕೂಡದು. ಏನಾದರೂ ಕುಂದುಕೊರತೆ ಉಂಟೆಂದು ಒಮ್ಮೆ ತೋರಿಸದೇ ಮೆಚ್ಚಿದರೆ ಅದೆಲ್ಲಿಯ ವಿಮರ್ಶೆ! ಅದೆಂಥ ಬುದ್ಧಿವಂತಿಕೆ? ಈ ತತ್ವವನ್ನೇ ಎದೆಗೆ ಅವಚಿಕೊಂಡು ತಮ್ಮ ಜ್ಞಾನದ ನ್ಯೂನತೆಯನ್ನು ಮೂಢ ಧೈರ್ಯದ ವಾಗ್ಮಿತೆಯಿಂದ ಮುಚ್ಚಬಹುದೆಂದು ಭಾವಿಸಿ ತಲೆಯ ಪೊಳ್ಳಿಗಿಂತಲೂ ಹೆಚ್ಚು ಶೂನ್ಯವಾದ ಕಲೆಯ ವಿಮರ್ಶೆಯನ್ನು ಮಾಡುತ್ತ, ಕರೆಯದೇಬಂದು, ಕೇಳದೇ ಅಭಿಪ್ರಾಯವನ್ನು ಕೊಡುವ ಉದಾರ ಬುದ್ಧಿಗಳು ಅಂದು ಕೂಡ ಅನೇಕರು ಇದ್ದರು. ಅಂಥವರು ಕೆಲವರು ಒಮ್ಮೆ ಮೈಕೆಲೆಂಜೆಲೋನಿಗೆ ಗಂಟು ಬಿದ್ದರು. ಅವರನ್ನು ಮೈಕೆಲ್‌ನು ಹೇಗೆ ಮಂಕು ಮಾಡಿದನೆಂಬ ಕತೆ ಸಾರಸ್ಯವಾಗಿದೆ.

ಮೈಕೆಲ್‌ನು ಆಗ 'ಡೇವಿಡ್' ಪ್ರತಿಮೆಯ ಕೆಲಸದಲ್ಲಿ ತೊಡಗಿದ್ದನು. ಅವನ ಪ್ರಶಸಂಕರೂ ವಿಮರ್ಶಕರೂ ಸುತ್ತಲು ಕಲೆತಿದ್ದರು. ಅವರಲ್ಲಿ ಒಬ್ಬನು 'ಅಲ್ಲ, ಸ್ವಾಮಿ! ಪ್ರತಿಮೆ ಅಪ್ರತಿಮ, ನೋಡಿ. ಆದರೆ ಆ ಮುಖಕ್ಕೆ ಆ ಮೂಗು ಕೊಂಚ ದಪ್ಪವಾಯಿತು, ಅಲ್ಲವೇ? ಅದನ್ನಷ್ಟು ತಿದ್ದಿದರೆ ಒಳ್ಳೇಯದಲ್ಲವೇ? ಎಂದು ಗಂಭೀರವಾಗಿ ನಕ್ಕು ನುಡಿದನು. ಮೈಕೆಲ್‌ನು, 'ಸರಿ. ನಿಮ್ಮ ಸಲಹೆಗೆ ಮೆಚ್ಚಿದೆ.' ಎಂದು ಪ್ರತಿಮೆಗೆ ಆನಿಸಿ ಇಟ್ಟ ನಿಚ್ಚಣಿಕೆಯನ್ನು ಕೂಡಲೇ ಹತ್ತಿ ಹೋದನು. ಹೋಗುವಾಗ ಸುತ್ತಿಗೆ, ಚಾಣ ಮತ್ತು ಯಾರಿಗೂ ಕಾಣದಂತೆ ಒಂದುಹಿಡಿ ಸಂಗಮರವರಿಯ ಹುಡಿಯನ್ನು ಹಿಡಿದುಕೊಂಡು ಹೋದನು. ಅಲ್ಲಿ ಎತ್ತರದಲ್ಲಿ ನಿಂತು ಆ ಆಕ್ಷೇಪಿತ ಮೂಗಿನ ಭಾಗವನ್ನು ಕೆತ್ತಿ ತಿದ್ದುವಂತೆ ತೋರಿಸುತ್ತ ಕೈಯೊಳಗಿನ ಹುಡಿಯನ್ನು ಆಗಾಗ್ಗೆ ಕೆಳಗೆ ಕೆಡುಹಿದನು. ಆ ನಂತರ ತಲೆಯೆತ್ತಿ ಪ್ರತಿಮೆಯ ಮುಖವನ್ನು ದಿಟ್ಟಿಸಿ 'ನೋಡಿ ಸ್ವಾಮಿ, ಈಗ ಹೇಗೆ ಕಾಣುತ್ತದೆ?' ಎಂದು ಕೆಳಗೆ ನಿಂತು ಹೆಮ್ಮೆಯಿಂದ ಅವನಕಡೆಗೆ ಮುಖವೆತ್ತಿ ನಿಂತ. ಆ ವಿಮರ್ಶಕಸ್ವಾಮಿಯು ಪರಮಸಂತೋಷದ ಉದ್ಗಾರವನ್ನು ತೆಗೆದನು,–'ಸೈ, ಸೈ. ಇದೀಗ ಸರಿಯಾಗಿ ಬಂತು. ಈ ತಿದ್ದಿದ ಮೂಗಿನಿಂದ ಪ್ರತಿಮೆಗೆ ಜೀವಕಳೆಯೇ ಬಂದಂತಾಯಿತು!' ಹೇಗಿದೆ ವಿಮರ್ಶೆ ಮತ್ತು ಅದಕ್ಕೆ ಮಾಡಿದ ಉಪಚಾರ?

ಇದೇ ಸಮಯದಲ್ಲಿ ಮೈಕೆಲೇಂಜೆಲೋ 'ಸಾಧು ಮ್ಯಾಥ್ಯೂ'ವಿನ ಮೂರ್ತಿಯನ್ನು ಕೊರೆದನು. ಹಾಗೆಯೇ ಪೀಸಾದ ಕಾಳಗದ ಒಂದು ಭವ್ಯ ಚಿತ್ರವನ್ನೂ ಬರೆದನು.

೧೫೦೫ ರಲ್ಲಿ ಅವನಿಗೆ ಒಂದು ಅಪೂರ್ವ ಮನ್ನಣೆ ದೊರೆಯಿತು. ಅಂದಿನ ಕ್ಯಾಥೊಲಿಕ ಜಗದ್ಗುರು ಪೋಪ ೨ ನೇ ಜ್ಯೂಲಿಯಸನು ಮೈಕೆಲೆಂಜೆಲೋನನ್ನು ರೋಮನಗರಕ್ಕೆ ಕರೆಯಿಸಿಕೊಂಡು ತನ್ನ ಸಮಾಧಿಯ ಸ್ತೂಪವನ್ನು ರಚಿಸಲು ಅವನಿಗೆ ನೇಮಿಸಿದನು. ಆದರೆ ಈ ಕೆಲಸ ಹಲವು ವರ್ಷಗಳವರೆಗೆ ಮುಂದು ವರೆಯಿತು. ಮೈಕೆಲ್ ಮತ್ತು ಪೋಪನು ಅವನ ನೆರವಿಗೆ ನೇಮಿಸಿದ ಕೆಲಸಗಾರರ ನಡುವೆ ವೈಷಮ್ಯವು ಕಟುವಾಗಿ ಬೆಳೆಯತೊಡಗಿತು. ಕೊನೆಗೂ ಸಮಾಧಿಯ ಕೆಲಸ ಪೂರ್ತಿಯಾಗಲೇ ಇಲ್ಲ (ಅಂದರೆ ಪೋಪನು ಸಾಯದೇ ಸಮಾಧಿಗಾಗಿ ತಡೆದೇ ಉಳಿದನೆಂದಲ್ಲ ! ಸತ್ತಮೇಲೆ ಮೈಕೆಲೆಂಜೆಲೋನ ಅಮರ ಶಿಲ್ಪದ ಸ್ತೂಪದಡಿಗೆ ಮಲಗಬೇಕೆಂಬ ಅವನ ಹೆಮ್ಮೆಯ ಹೆದ್ದಾಸೆಗೆ ಭಂಗ ಬಂದಿತು !) ಆ ಸ್ತೂಪದ ಯೋಜನೆಯಲ್ಲಿಯೇ ಒಂದು ಅಂಗವಾಗಿ ಅವನು ಕೊರೆದ 'ಮೋಝೆಸ್ ಮತ್ತು ಅವನ ಜೀತದಾಳುಗಳು' ಎಂಬ ಕೃತಿಯು ಮಾತ್ರ ಬಿಡಿಯಾಗಿ ಖ್ಯಾತಿಯನ್ನು ಪಡೆಯಿತು.

ಮೂರು ವರ್ಷ ನಂತರ ಮೈಕೆಲ್‌ಗೆ ಸಿಸ್ಟಲ್‌ವೈನ್ ಚಾಪೆಲ್ ಎಂಬ ಗುಡಿಯ ಗೋಪುರದ ಒಳಮುಗ್ಗಲನ್ನು-ಮೇಲ್ಗಟ್ಟನ್ನು-ಅಲಂಕಾರವಾಗಿ ಚಿತ್ರಿಸುವ ಕೆಲಸ ವನ್ನು ಕೊಡಮಾಡಿದರು. ಅದನ್ನು ಅವನು ಮನಸ್ಸಿಲ್ಲದೇ ಒಪ್ಪಿದನು. ಅಷ್ಟು ಎತ್ತರದಲ್ಲಿ ಮೂರು ವರ್ಷ ದಿನನಿತ್ಯ ತಾಸುಗಟ್ಟಲೆ ಅಂಗಾತಬಿದ್ದು, ಅಡ್ಡ ಬಗ್ಗಿ ಅಸಹ್ಯ ಯಾತನೆಯನ್ನು ಅನುಭವಿಸಿ, ಅಸಾಧ್ಯ ಶ್ರಮವನ್ನುಪಟ್ಟು ಆ ಕೆಲಸ ವನ್ನು ಅವನು ಪೂರ್ತಿಗೊಳಿಸಿದನು. ಆ ಮೇಲ್ಗಟ್ಟಿನ ಒಳ ಗೋಪುರದ ಚಿತ್ರಜಾಲದ ಸೌಂದರ್ಯವೂ ಕೀರ್ತಿಯೂ ಪ್ರಪಂಚಕ್ಕೇ ಗೊತ್ತಾಗಿದೆ. ಅಂದಿನ ತನ್ನ ಕಷ್ಟಯಾತನೆಗಳನ್ನು ಗಿಯೊವಾನ್ನಿ ಎಂಬ ಗೆಳೆಯನಿಗೆ ಅವನು ಕೆಲವು ವಿನೋದಪೂರ್ಣ ಪದ್ಯಗಳಲ್ಲಿ ಬಣ್ಣಿಸಿ ಬರೆದಿದ್ದಾನೆ.

ಲೊಂಬಾರ್ಡಿ-ಹೊಳೆಗಳಲಿ ಮಲಿತ ನೀರಿಗೆ ಸಿಲುಕಿ
ಇಲ್ಲದಿರೆ ಬೇರೆಡೆಗೆ ಬೇರಾವ ಬಾಧೆಗೋ
ಬಲಿಯಾಗಿ ಬಾತಿರುವ ಬೆಕ್ಕುಗಳ ತೆರದಲ್ಲಿ
ಉಳಿದು ಕಗ್ಗವಿಯಲ್ಲಿ ಬಾತಿದೆನ್ನಯ ಕೊರಳು
ಎಳೆದು ಗದ್ದಕೆ ಒಡಲ ಒತ್ತಿ ಮಡಚಿಡಲು !
ಗಡ್ಡವೆನ್ನದು ನೆಗೆದು ಸ್ವರ್ಗವನೆ ತೋರುತಿದೆ
ಅಡ್ಡಬಿದ್ದಲ್ಲಿ ಕುತ್ತಿಗೆ ಹಿಂದೆ ಮಣಿದು ಬಲು
ಗದುಸಾಗಿ ಬೆನ್ನು ಮೂಳೆಗೆ ನಟ್ಟು ಮುರಿಯುತಿದೆ

ಒಡ್ಡಿದೆದೆ 'ಹಾರ್ಪ' ವಾದ್ಯದ ತೆರದಿ ಡಬ್ಬಾಗಿ
ಎದ್ದುಕಾಣುವದುಮಮ !

ಬಣ್ಣ ಬಳೆಯುಲು ಕುಂಚ
ಪೆತ್ತೆತ್ತಿ ಬರೆಯುತಿದೆ ಮೆಲಗಟ್ಟಿನಿಂದ ತಿಳಿ-
ದಟ್ಟ ಬಿಳಿ ಕರಿ ಕೆಂಪು ಹನಿ ಬಣ್ಣ ಮಳೆಗರೆದು
ಸೊಟ್ಟ ಮೋರೆಗೆ ಸಪ್ತವರ್ಣದ ಕಲಾಕುಸುರು
ಕಟ್ಟಿಹುಪದೊಂದು ಕಳೆ !

ಕಾಲ್ಮಡಚಿ ಹಿಡಿದೆತ್ತಿ
ಡೊಂಕದೆಲುಬುಗಳೆಲ್ಲ ಡೊಳ್ಳಢೋಲನೆ ಶಿವಿದು
ಸಂಕಟವಪಡಿಸುತಿವೆ ದೇಹಭಾರವದೆಲ್ಲ
ಲಿಂಕೆತಪ್ಪದ ತೆರದಿ ತೊಡೆ-ಬುಡಗಳೇ ಹೊತ್ತು
ಕೈಂಕರ್ಯ ಮಾಡುತಿವೆ !

ಮುಂದೊಗಲು ಸಡಿಲಾಗಿ
ಮುದುಮುದುಡಿ ಜೋಲುತಿದೆ ಕಾಲುಗಳು ಗತಿಗೆಟ್ಟು
ಎಡಬಲಕೆ ತೂಗುತಿವೆ ಹಿಂದೊಗಲು ಬಾಗಿ ಬಿಗಿ-
ದುದರಿಂದೆಳೆದು ಚಾಚಿಕಟ್ಟಿದಂತಿದೆ ಜಗ್ಗಿ !

ಸೀರಿಯನ್ ಭಟನು ಬಗ್ಗಿಸುವ ಬಿಲ್ಲಿನಂತೆ ನಾ
ನೇರಗೆಟ್ಟಡ್ಡ ಬಾಗಿಹೆನು... ಈ ಕೆಳ ತಲೆಯ
ತಿರುಮುರುವು ನೋಟದಲಿ ಡೊಂಕಾಗಿ ಕೊಂಕಾಗಿ
ತೋರುವ ಪ್ರಪಂಚವೆಲ್ಲವು ಸೊಟ್ಟ ಸಟೆಯಾಗಿ !
ಅಡ್ಡ ಬಿದ್ದ ತುಬಾಕಿ ಗುರಿಗೆಟ್ಟು ಹಾರುವದು
ದೊಡ್ಡ ಮಾತೆ ? ಗೆಳೆಯ ಗಿಯೊವನ್ನಿ, ಬನ್ನಿ
ನನ್ನ ಹತಚಿತ್ರ-ಕೀರ್ತಿಗೆ ಬೆಂಬಲ ತನ್ನಿ
ಬನ್ನಬಡುತಿಹೆ ಎನ್ನ ಕಲೆ ಕಲಂಕವೆ ಅನ್ನಿ !

ಮುಂದೆ ಅಮರ ಕೀರ್ತಿಯ ಕಪ್ಪಗಾಣಿಕೆಯನ್ನು ಜಗತ್ತಿನ ಜಾಣರಿಂದ ಪಡೆದ ತನ್ನ ಆ ಕಲಾ ಪರಿಶ್ರಮದ ಕುರಿತು ಮೈಕೆಲೆಂಜೆಲೋ ಇಷ್ಟು ಹಗುರಾಗಿ ವಿಕಟವಾಗಿ ಗೆಳೆಯ ಗಿಯೊವನ್ನಿಗೆ ಬರೆಯುವನೆಂಬುದು ಅವನ ನಿರಭಿಮಾನ ವೃತ್ತಿಯ ನಿದರ್ಶನವಲ್ಲವೇ ?

ಇತ್ತ ಪೋಪನ ಸಮಾಧಿ ಸ್ತೂಪದ ಕೆಲಸ ನಡೆಯುವಾಗಲೇ ಅತ್ತ ಮಿಡಿಸಿಯ ಮಂದಿರದಲ್ಲಿಯ ಪ್ರಚಂಡ ಪ್ರತಿಮೆಗಳ ಶಿಲ್ಪನೆ ಸಾಗುತ್ತಲೇ ಇತ್ತು. ೧೫೨೭ ರಿಂದ ೩೪ ರ ವರೆಗೆ ಈ ಕಲಾವಿದನು ಅಕಲ್ಪಿತವಾಗಿ ಫ್ಲೋರಾನ್ಸದ ರಾಜಕಾರಣದ ಸುಳಿಯಲ್ಲಿ ಸಿಲುಕಿ ಹರಿದಾಡಿದನು. ಆ ನಡುವೆ ಅವನನ್ನು ದುರ್ಗರಚನೆಯ ಮುಖ್ಯ ಅಧಿಕಾರಿಯಾಗಿ ನೇಮಿಸಲಾಯಿತು. ಆಗ ಅವನು ಕಟ್ಟಿಸಿದ ದುರ್ಗ ರಚನೆಯ ಆಯಕಟ್ಟು ಅಚ್ಚುಕಟ್ಟುಗಳು ಮುಂದೆ ಹಿರಿಯ ತಜ್ಞರ ಮೆಚ್ಚಿಗೆಯನ್ನು ಪಡೆದಿವೆ. ೧೫೩೪ ರಲ್ಲಿ ಅವನು ಫ್ಲೋರಾನ್ಸ ಪಟ್ಟಣವನ್ನು ಕೊನೆಯದಾಗಿ ಬಿಟ್ಟು ರೋಮುಕ್ಕೆ ಹೋಗಿ ಉಳಿದು ಬಿಟ್ಟನು.

ಆಗ ಅವನಿಗೆ ೬೦ ನೆಯ ವರ್ಷ. ಆಗಿನ ಪೋಪ ೩ ನೆಯ ಪಾಲನು ಒಂದು ರಾಯಸ ಹೊರಡಿಸಿ ಮೈಕೆಲೆಂಜೆಲೋನನ್ನು ವ್ಯಾಟಿಕನ್ ಸಂಸ್ಥಾನದ ಮುಖ್ಯ ಶಿಲ್ಪಿಯೂ ಚಿತ್ರಕಾರನೂ ಸ್ಥಪತಿಯೂ ಎಂದು ನೇಮಕ ಮಾಡಿದನು. ಅದೇ ವರ್ಷ ಅವನು ಹಿಂದೆ ಹೇಳಿದ ಸೆಸ್ಟ್‌ವೈನ್ ಚಾಪೆಲ್ ಎಂಬ ಗುಡಿಯಲ್ಲಿ 'ಅಂತಿಮ ನ್ಯಾಯದಾನ' ವೆಂಬ ಭಿತ್ತಿ–ಚಿತ್ರವನ್ನು ಬರೆಯಲು ತೊಡಗಿದನು. ಆ ಮಹಾ ಕಲಾಕೃತಿಯು ಮುಗಿಯಲು ಏಳು ವರ್ಷಗಳು ಹಿಡಿದವು. ಆದರೆ ಅಷ್ಟಕ್ಕೇ ಮೈಕೆಲ್‌ನ ಅವತಾರ ಕಾರ್ಯ ಮುಗಿಯಲಿಲ್ಲ. ಪೌಲೈನ ಚಾಪೆಲ್ ಎಂಬ ಗುಡಿಯಲ್ಲಿಯ ಭಿತ್ತಿಚಿತ್ರ ಗಳನ್ನೂ ಇತರ ಚಿತ್ರರೇಖಾ ಮತ್ತು ಶಿಲ್ಪದ ಕೃತಿಗಳನ್ನೂ ಅವನು ನಿರ್ಮಿಸುತ್ತಲೇ ಉಳಿದನು. ೧೫೪೭ ರಲ್ಲಿ ಪೀಟರ ಸಾಧುವಿನ ಸ್ಮಾರಕ–ಪ್ರಾರ್ಥನಾಮಂದಿರದ ಕಾರ್ಯಕ್ಕೆ ಅವನು ಮುಖ್ಯ ಸ್ಥಪತಿಯೆಂದು ನೇಮಿಸಲ್ಪಟ್ಟನು. ಆ ಮಂದಿರದ ಶಿಖರದ ಗೋಪುರವು ಸ್ಥಾಪತ್ಯ ಕಲೆಗೇ ಕಳಸವಿಟ್ಟ ಅವನ ಪ್ರತಿಭೆಯ ಸ್ಮಾರಕವು.

ಈ ನಡುವೆ ೧೫೩೮ ರಲ್ಲಿ ಸುಮಾರು ೬೪ ವರ್ಷ ಪ್ರಾಯಕ್ಕೆ ಮೈಕೆಲ್‌ನು ಮದನ ಬಾಣಕ್ಕೆ ಮತ್ತೆ ಬಲಿಯಾದನು. ಹಿಂದೆ ಉಲ್ಲೇಖಿಸಿದ ವಿಟ್ಟೋರಿಯಾ ಕೊಲೊನ್ ಎಂಬಾಕೆಯನ್ನು ಅವನು ಭೆಟ್ಟಿಯಾದನು. ಆಕೆ ವಿಧವೆ; ಕವಯಿತ್ರಿಯೂ ಅಹುದು. ಮೈಕೆಲ್‌ನ ಜೀವನವೆಲ್ಲ ಏಕಾಕಿಯಾಗಿ ವಿರಕ್ತ ವೃತ್ತಿಯಲ್ಲಿಯೇ ಕಳೆಯಿತು. ಆದರೆ ಆ ವೈರಾಗ್ಯದ ಮರುಭೂಮಿಯಲ್ಲಿ ಅರಳಿದ ಹಸಿರು ಸ್ಥಳವೆಂದರೆ ವಿಟ್ಟೋರಿಯಾಳೊಡನೆ ಕೂಡಿ ಬಂದ ಆತನ ಸಂಬಂಧ. ಈ ಸಂಬಂಧವೂ ಕೇವಲ ಮಾನಸಿಕವಿತ್ತು, ಅಧ್ಯಾತ್ಮಿಕವಿತ್ತು. ಅವನ ಆತ್ಮದ ನಾಲ್ಕೂ ಕಣ್ಣುಗಳ ಆತುರ ಆವೇಶವನ್ನೆಲ್ಲ ಕಲಾದೇವಿಯು ಸೆಳೆದು ಸೂರೆಗೊಂಡಿದ್ದಳು. ಆಗ ಈ ಇಳಿ ವಯಸ್ಸಿನಲ್ಲಿ ಅವನಿಗೆ ಕಾಮಾಸಕ್ತಿಯ ಉನ್ಮಾದವೆಲ್ಲಿ ? ಅವಳಿಂದ ಅವನಲ್ಲಿ ಆದ ಕ್ರಾಂತಿಯೆಂದರೆ ಅವನ ಹಳೆಯ ಕಾವ್ಯಶಕ್ತಿಯು ಮತ್ತೆ ಪುಟಿದು ಬಂತು.

ಅವನ ಕಾವ್ಯನಿರ್ಮಿತಿಯ ಬಹುಭಾಗದ 'ಸೊನೆತ್ತು' (ಅಷ್ಟಷಟ್ಪದಿ) ಗಳೆಲ್ಲ ಇದೇ ಪ್ರೀತಿಯ ಪುನರುಜ್ಜೀವನ ಯುಗದ ಪರಿಪಾಕ. ಅವನ ಕವನಗಳೆಂದರೆ ಕಲ್ಪನೆಯ ಕಲ್ಮನೆಗಳೇ-ಶಬ್ದಗಳಲ್ಲಿ ಕೆತ್ತಿ ಕೊರೆದ ಪ್ರತಿಮೆಗಳು; ಅವನ ಶಿಲಾಶಿಲ್ಪದಷ್ಟೇ ದೊರಗು ಸಾಮರ್ಥ್ಯವುಳ್ಳವು, ಬೆರಗು ಸೌಂದರ್ಯವುಳ್ಳವು.

ವಿಟ್ಟೋರಿಯಾಳೊಡನೆ ಅವನ ಪ್ರೇಮಸಂಬಂಧವು ೧೫೪೭ ರ ತನಕವೇ ಉಳಿಯಿತು. ಏಕೆಂದರೆ ಆ ವರ್ಷ ಆಕೆಯ ಅಂತ್ಯವಾಯಿತು. ಆಕೆಯ ಪ್ರೇಮದಿಂದ ಆಕೆಯನ್ನು ಬರೇ ಪ್ರೀತಿಸುವದರಿಂದ ಅವನು ಸದಾ ತೃಪ್ತನಾಗಿದ್ದನು. ಆ ತೃಪ್ತಿಯಲ್ಲಿ ಒಂದೇ ಕುಂದು ಅವನಿಗೆ ಅನಿಸಿತು. ಅದೆಂದರೆ ಆಕೆಯ ಅಂತ್ಯಕಾಲಕ್ಕೆ ಅವನು ಭೆಟ್ಟಿ ಕೊಟ್ಟಾಗ ತಾನು ಆಕೆಯ ಕೈಯನ್ನಷ್ಟೇ ಮುದ್ದಿಟ್ಟನು, ಆಗಲಾದರೂ ಒಮ್ಮೆ ಆಕೆಯ ಹಣೆಯನ್ನಾಗಲಿ ಕೆನ್ನೆಯನ್ನಾಗಲಿ ಮುದ್ದಿಡಲಿಲ್ಲವೆಂಬುದನ್ನೇ ಅವನು ಆಗಾಗ್ಗೆ ಹಂಬಲಿಸಿ ಹಳಹಳಿಸುತ್ತಿದ್ದನು. ಈ ಹಂಬಲ ಬಂದಾಗೆಲ್ಲ ಅವನು ದಿಙ್ಮೂಢನಾಗಿ ನಿಲ್ಲುತ್ತಿದ್ದನು.

ವಿಟ್ಟೋರಿಯಾಳ ನೆನಹಿಗೆ ಅವನು ಎರಡು ಅಷ್ಟಷಟ್ಪದಿಗಳನ್ನು (ಸೊನೆತ್ತುಗಳನ್ನು) ರಚಿಸಿದನು. ಆದರೆ ಅವನ ಕಲಾಜೀವನ ಅಲ್ಲಿಗೇ ಇತಿಯಾಗಲಿಲ್ಲ. ಇನ್ನೂ ೧೦ ವರ್ಷ ಅವನು ಬದುಕಿದನು. ಬರೇ ಬದುಕಿ ಉಳಿಯದೇ ಕೊನೆಯ ತನಕವೂ ನವೋನವ ಕಲಾಕೃತಿಗಳನ್ನು ಅರಳಿಸುತ್ತಲೇ ಬಾಳಿದನು. ೧೫೫೪ ರಲ್ಲಿ ಅವನು ಸಮುನ್ನತ ಅರ್ಥಗೌರವದ ಈ ಅಷ್ಟಷಟ್ಪದಿಯನ್ನು ಬರೆದನು :-

ನನ್ನ ಜೀವನವಿಂದು ಪ್ರಕ್ಷುಬ್ಧ ಸಾಗರವ
ಜೀರ್ಣ ನೌಕೆಯು ತೆರದಿ ದಾಟಿ ತಲ್ಪಿತು ದಂಡೆ
ಆವ ವಿಸ್ಮೃತನೆಲೆಗೆ ಬರಲು ಬದ್ಧರು ಮಂದಿ
ಒಪ್ಪಿಸಲು ಲೆಕ್ಕವನು ಪಾಪ-ಪುಣ್ಯದ ಚಿರವು.
ಇಂದು ಅರಿತೆನು ಚೆನ್ನು ಎಂತು ಅಪ್ರಿಯ ಭ್ರಾಂತಿ
ಜಡದ ಮರ್ತ್ಯಕಲೆಗೆನ್ನ ಆತ್ಮವನು ಉನ್ಮತ್ತ
ಭಕ್ತ, ದಾಸನೆಯಾಗಿ ಮಾಡಿಸಿತು ಕಡುವ್ಯರ್ಥ
ಜನವೆಲ್ಲನಿಚ್ಛೆಯಿಂದರಸುವದು ಪಾಪವತಿ,
ಚಲುವೇಷದೊಳು ಸುಳಿವ ಕಾಮುಖ ವಿಚಾರಗಳು
ಏನಿಹವು, ಸನಿಯ ಬರೆ ಸಾವು ಇಮ್ಮಡಿಯಾಗಿ ?
ಒಂದು, ನಾ ಬಲ್ಲ ದಿಟ, ಇನ್ನೊಂದು ಅದರ ಭಯ.

ತಣಿಸಲಾರವು ಇನ್ನು ಚಿತ್ರಶಿಲ್ಪಗಳು ಬಲು
ಎನ್ನಾತ್ಮ–ಆ ಪ್ರಭುವ ಹಿರಿಯೊಲುಮೆಗಿದುರಾಗಿ
ನಮ್ಮನಪ್ಪಲು ಸಿಲುಬೆಗಿಹ ಚಾಚಿ ಬಾಹುದ್ವಯ ?

ಮೇಲಿನದು ಒಂದು ಅಲ್ಪ ಅನುವಾದ. ಮೂಲದ ಅರ್ಥವನ್ನಷ್ಟೇ ಇಲ್ಲಿ ಇಳಿಸಲಾಗಿದೆ ಹೊರತು, ಅದರ ಗೌರವಸಮುನ್ನತಿಯಲ್ಲ. ಆದರೂ ಅವನ ಕಾವ್ಯಶೈಲಿಯ ಛಾಯೆ ಇಲ್ಲಿ ಕಾಣಬಹುದು. ಇರಲಿ.

ಅನಂತರ ೧೦ ವರ್ಷಗಳ ತನಕವೂ ಅವನ ಬದುಕು ಕೆಲಸದಲ್ಲಿಯೂ, ನೋವಿನಲ್ಲಿಯೂ ಕಳೆಯಿತು. ೧೫೬೪ ನೇ ವರ್ಷ ಫೆಬ್ರುವರಿ ತಿಂಗಳಲ್ಲಿ ಅವನ ಬಾಳಿನ ಜೀರ್ಣನೌಕೆ ಪ್ರಕ್ಷುಬ್ಧ ಸಾಗರವನ್ನು ದಾಟಿ ವಿಸ್ತೃತ ನೆಲೆಯನ್ನು ತಲ್ಪಿತು. ಅವನ ಆತ್ಮ ಸಿಲುಬಿನಲ್ಲಿ ಚಾಚಿದ ಬಾಹುಗಳ ಆಲಿಂಗನಕ್ಕೆ ಹಾರಿತು. ಅವನ ಕೊನೆಯ ಗಳಿಗೆಯಲ್ಲಿ ಬರೇ ಮೂರು ವಾಕ್ಯಗಳಲ್ಲಿ ಅವನು ತನ್ನ ಮೃತ್ಯುಪತ್ರವನ್ನು ಮಾಡಿದನು. ಆ ವಾಕ್ಯಗಳು ಅವನ ಗಂಭೀರಧಾರ್ಮಿಕ ಶ್ರದ್ಧೆಯನ್ನೇ ಸಾರುತ್ತವೆ. 'ನನ್ನ ಆತ್ಮವನ್ನು ದೇವಳ, ನನ್ನ ದೇಹವನ್ನು ಭೂಮಿಯ ಮತ್ತು ನನ್ನ ಆಸ್ತಿಪಾಸ್ತಿಯನ್ನು ಹತ್ತರದ ಆಪ್ತರ ವಶಕ್ಕೆ ಒಪ್ಪಿಸಿದ್ದೇನೆ. ಆಪ್ತರು ಕೂಡ ಅವರ ಕಾಲವು ಬಂದಾಗ ಯೇಸೂಕ್ರಿಸ್ತನ ದುಃಖಯಾತನೆಗಳನ್ನು ಚಿಂತಿಸಬೇಕು.'

ಈ ರೀತಿಯಾಗಿ ಇಟಲಿಯ ಪುನರುಜ್ಜೀವನ ಯುಗದ ಕ್ರಾಂತಿದರ್ಶಿ ಋಷಿಯು ಮಡಿದನು. ಅವನ ಜೀವನ ಕಠೋರವ್ರತದಂತಾಯಿತು. ಅವನು ಆಯುಷ್ಯದ ದೀರ್ಘ ವರ್ಷಗಳನ್ನು ಏಕಾಕಿಯಾಗಿಯೇ ಕಳೆದನು. 'ನನ್ನ ಮದುವೆ ಕಲಾದೇವಿಯೊಡನೆ ಆಗಿದೆ. ಆಕೆಯೊಬ್ಬಳನ್ನು ನಡೆಯಿಸಿಕೊಂಡು ಹೋಗುವದೇ ಭಾರಿಯಾಗಿದೆ !'–ಎಂದು ಅವನು ಅನ್ನುತ್ತಿದ್ದನು. ನಿಜವಾಗಿಯೂ ಕಲೆಯು ಒಂದು ಉಗ್ರ ಅಸೂಯೆಯ ಒಡತಿ. ಅವನು ತನ್ನ ಹೃದಯದ ಪ್ರೇಮಭಾವನೆಯನ್ನು ಮಕ್ಕಳ ಮೇಲೆ ನಂಬಿಗೆಯ ಸೇವಕರ ಮೇಲೆ, ತನ್ನ ಬಳಗದವರ ಮೇಲೆ ಮುಕ್ತಹಸ್ತದಿಂದ ಚೆಲ್ಲಿದನು. ಅವರೆಲ್ಲರೂ ನಿರ್ದಯವಾಗಿ ಅವನ ಮೇಲೆಯೇ ಬದುಕಿದ್ದರು. ಅವನನ್ನು ಹೀರಿ ಹಿಂಡಿ ಬೆಂಡುಮಾಡಲು ಹಿಂಜರಿಯಲಿಲ್ಲ. ಮೈಕೆಲೆಂಜೆಲೋಗೆ ತನ್ನ ಕುರಿತು ಎಷ್ಟು ಕಾರ್ಪಣ್ಯವೋ ಅಷ್ಟೇ ಅವನನ್ನು ಅವಲಂಬಿಸಿದವರನ್ನು ಕುರಿತು ಕಾರುಣ್ಯ. ಅವನ ಸ್ವಂತ ಜೀವನ ಜಿಪುಣತನದ್ದು, ಅರೆಹೊಟ್ಟೆ ಅರೆಬಟ್ಟೆಯದು ಇತ್ತು. ಕಲೆಯ ಕೆಲಸ ಒಂದೇ ಅವನಿಗೆ ಪೋಷಕವೆನಿಸುತ್ತಿತ್ತು. ಅವನು ಉಣತಿನ್ನುವದು ಕಡಿಮೆ; ಕೂಡ್ರುವದು ಮಲಗುವದು ಕಡುಬರಿದ್ರ ಕೋಣೆಯಲ್ಲಿ !

ಅವನು ಒಳ್ಳೇ ಮಿತಾಹಾರಿಯಾಗಿದ್ದನು. ತಿನ್ನುವದಕ್ಕಾಗಿ ಬದುಕುವ ಕೂಳುಬಕ್ಕನು ಅವನಲ್ಲ; ಬದುಕುವದಕ್ಕಾಗಿ ತಿನ್ನಬೇಕೆಂದು ತಿಳಿದೂಬಲ್ಲವನು. ಮಹಾ ಕಲಾಕೃತಿಯನ್ನು ಕೈಗೊಂಡರಂತೂ ತೀರಿಯೇ ಹೋಯಿತು. ತಾಸುಗಟ್ಲೆ ಏನೂ ತಿನ್ನದೇ ಕೆಲಸ ಮಾಡುವನು. ತಿಂದರೆ ಬರೇ ಒಣ ಬ್ರೆಡ್ಡು. ಅದೂ ಕೆಲಸದ ನಡುವೆ ತುಸು ವಿರಾಮದಲ್ಲಿ 'ನಾನು ಸಿರಿವಂತನಾಗಿರುವೆನು. ಆದಾಗ್ಯೂ ಬಡವನಂತೆಯೇ ಯಾವಾಗಲೂ ಬದುಕಿ ಬಂದಿದ್ದೇನೆ' ಎಂದು ಅವನು ಅನ್ನುವದುಂಟು. ಆಹಾರದಲ್ಲಿ ಹೇಗೋ ನಿದ್ರೆಯಲ್ಲಿಯೂ ಇದೇ ನಿಷ್ಠುರ ಮಿತ. ತನ್ನ ಪ್ರಕೃತಿಗೆ ನಿದ್ದೆ ಒಗ್ಗುವದೇ ಇಲ್ಲವೆಂದು ಅವನು ಭಾವಿಸಿದ್ದನು. ನಿದ್ದೆಯಲ್ಲಿ ಇವನಿಗೆ ತಪ್ಪದೆ ತಲೆನೋವು ಬಳಲಿಸುತ್ತಿತ್ತು. ಬಹಳ ನಿದ್ದೆಯಿಂದ ಅವನ ಹೊಟ್ಟೆಯೇ ಹಾಳಾಗುತಿತ್ತು. ಅವನಲ್ಲಿ ಕಸುವಿನ ಭರವಿದ್ದಾಗ ಮೈಮೇಲಿನ ಬಟ್ಟೆಗಳನ್ನು ತೆಗೆದಿಡದೆ ಅವನು ಮಲಗುತಿದ್ದನು. ಎತ್ತರದ ಬೂಟುಗಳನ್ನು ಕಾಲಿಗಿಟ್ಟುಕೊಂಡೇ ನಿದ್ದೆಹೋಗುತ್ತಿದ್ದನು. ಕೆಲವು ಋತುಗಳಲ್ಲಿ ವಾರಗಟ್ಲೆ ಕಾಲಿನ ಬೂಟು ಕಳಚುತ್ತಲೇ ಇದ್ದಿಲ್ಲ. ಎಂದಾದರೊಮ್ಮೆ ಕಳಚಿದಾಗ ಪಾದದ ಚರ್ಮವು ಕೂಡ ಬಹುಕಾಲ ಬಿಗಿದಿಟ್ಟ ಬೂಟಿನ ಒಳಮೈಗೆ ಅಂಟಿಕೊಂಡು ಹಾವಿನ ಪರೆಯಂತೆ ಸುಲಿದು ಬರುತ್ತಿತ್ತು ! ಇಷ್ಟಾದರೂ ಅವನ ಕೈಯಲ್ಲಿ ಹಣ ಹೇರಳವಾಗಿ ಆಡುತಿತ್ತು. ಸಂಗ್ರಹ ಅವನಿಗೆ ಗೊತ್ತೇ ಇದ್ದಿಲ್ಲ.

ಅವನ ಸಮಕಾಲೀನರು ಅವನನ್ನು ಸಿಡುಕಿನವ, ಮುಂಗೋಪಿ, ದುರಹಂಕಾರಿ ಎಂದು ಕರೆದಿದ್ದಾರೆ. ನಿಜ, ಅವನಲ್ಲಿ ವಿರಕ್ತಜೀವಿಯ, ಹಟಯೋಗಿಯ ಉಗ್ರತೆಯು ಜ್ವಾಲೆಯಂತೆ ಉರಿಯುತ್ತಿತ್ತು. ಆದರೆ ಆ ಕೋಪ, ಆ ಸಿಡುಕು, ಸಿಡಿಲು– ಮಳೆಯಾಗುವಂತೆ ಕೂಡಲೇ ಕರಗಿ ಕರುಣೆ ಆಗುತ್ತಿತ್ತು. ಅವನು ಹಣದಲ್ಲಿ, ಕೃತಿಯಲ್ಲಿ, ಕಲ್ಪನೆಗಳಲ್ಲಿ, ವ್ಯವಸಾಯ ಬಂಧುಗಳಾದ ಕಲಾವಿದರ ಕೆಲಸದ ಸ್ವೀಕಾರದಲ್ಲಿ, ಸ್ತುತಿಯಲ್ಲಿ, ಜೀವನದ ಪ್ರತಿವರ್ತನದಲ್ಲಿ ಉದಾರಿಯಾಗಿದ್ದನು.

ಒಮ್ಮೆ ಒಬ್ಬ ಧರ್ಮಗುರುವು (ಪಾದ್ರಿಯು) ಅವನ ಏಕಾಕಿ ಜೀವನಕ್ಕಾಗಿ ಕನಿಕರಪಟ್ಟನು; ಮದುವೆಯಾಗದೇ, ಮಕ್ಕಳಿಲ್ಲದೇ, ತನ್ನ ಶ್ರಮದಶ್ರೇಯ ಮತ್ತು ಲಾಭಗಳನ್ನು ಮುಂದೆ ಭೋಗಿಸಲು ಯಾರನ್ನೂ ಹಿಂದೆ ಬಿಡದೆ ಸಾಯುವನಲ್ಲ ! ಎಂದು. ಮೈಕೆಲೆಂಜೆಲೋನ ವಿಷಯ ಈ ಧರ್ಮ ಗುರುವಿಗೆ ವ್ಯಥೆಯೆನಿಸಿತು. ಆ ವ್ಯಥೆಯನ್ನು ಅವನು ಮೈಕೆಲ್‌ನ ಬಳಿಗೆ ತೋಡಿಕೊಂಡೂ ಬಿಟ್ಟನು. ಅಯ್ಯೋಸ್ವಾಮಿ, ಅನ್ಯಾಯವಾಗಿ ನನಗಾಗಿ ವ್ಯಥೆಪಟ್ಟು ಕೊಳ್ಳುವಿರಿ, ನೋಡಿ,

ಈ ನನ್ನ ಕಲೆಯೆಂಬ ಹೆಂಡತಿಯನ್ನು ಹಿಡಿತದಲ್ಲಿ ಇಟ್ಟುಕೊಳ್ಳುವದಕ್ಕೇ ನಾನು ನುಗ್ಗುನುಗ್ಗಾಗಿ ಬಿಡುತ್ತೇನೆ. ಅವಳಿಂದಲೇ ನನ್ನ ಈ ಹೆಣಗಾಟಕ್ಕೆ ಕೊನೆ ಇಲ್ಲದಾಗಿದೆ. ನಾನು ಬಿಟ್ಟು ಹೋಗುವ ಕೃತಿಗಳೇ ನನ್ನ ಮಕ್ಕಳು. ಅವುಗಳ ಬೆಲೆ ಏನೂ ಇಲ್ಲದಿದ್ದರೂ ನಾನು ಅವುಗಳಿಂದಾಗಿ ಅವುಗಳಲ್ಲಿಯೇ ಬದುಕಿ ಉಳಿಯುವೆನು !'

ಅಹುದು. ಆ ಕಲಾವಿಭೂತಿಯು ತನ್ನ ಆ ಅಮರ ಕೃತಿಗಳಿಂದಾಗಿಯೇ ಕೃತಿಗಳಲ್ಲಿಯೇ ಇನ್ನೂ ಬದುಕಿ ಉಳಿದಿದ್ದಾನೆ – ನಾಗರಿಕತೆಯು ಸೂರ್ಯ ಸಂಸ್ಕೃತಿಯು ಚಂದ್ರ ಅಸ್ತವಾಗುವನಕವೂ ಹೀಗೆಯೇ ಬದುಕಿ ಉಳಿಯುವನು !

# ಗಾನ - ಪ್ರತಿಭೆ

ವಿಶ್ವಸಂಗೀತದಲ್ಲಿ ಪಾಶ್ಚಾತ್ಯ ಸಂಗೀತವು ತನ್ನದೇ ಶೈಲಿಯಿಂದ ಬೆಳೆದು ಬಂದಿದೆ. ಅದು ಸ್ವರಪ್ರಧಾನ. ಭಾರತೀಯ ಸಂಗೀತವು ರಾಗಪ್ರಧಾನ. ಪಾಶ್ಚಾತ್ಯ ಸಂಸ್ಕೃತಿಗೆ ಈ ಸಂಗೀತವು ಹೊಂಗಳಸ. ಈ ರಸಕಲಶಕ್ಕೆ ಮೊಝಾರ್ಟ, ಬಿದೋವಿನ್, ವಾಗ್ನರ್ ಈ ರತ್ನತ್ರಯರು ಮೂರು ಬುರುಜುಗಳಿದ್ದಂತೆ.

* ಲುಡ್ವಿಗ್ ವ್ಹಾನ್ ಬಿದೋವಿನ್
* ವೋಲ್‌ಗ್ಯಾಂಗ
  ಅಮೋಡಿಯಸ ಮೊಝಾರ್ಟ
* ವಿಲ್‌ಹೆಲ್ಮ್ ರಿಚರ್ಡ ವಾಗ್ನರ್

# ಲುಡ್ವಿಗ್ ವ್ಹ್ಯಾನ್ ಬಿದೋವಿನ್

ಸಭಾಮಂದಿರದ ಆ ತುದಿಗೆ ಎತ್ತರದ ಪೀಠದಲ್ಲಿ ಪಿಯಾನೋ ವಾದಕನು ಕುಳಿತಿದ್ದನು. ಅವನ ನಿಡಿದಾದ ಕೈಗಳು ಪಿಯಾನೋದ ಶ್ರುತಿಗಳ ಮೇಲೆ ಕೊನೆಯದಾಗಿ ಒಮ್ಮೆ ಆವೇಶದ ಆರೋಹವನ್ನು ನುಡಿಸಿ ಸ್ವರಜಾಲವನ್ನೇ ಎತ್ತಿ ಬೀಸಿದವು. ಒಡನೆಯೇ ಸಂಗಿತವು ಸಮಾಪ್ತವಾಯಿತು. ಸ್ವರಲಹರಿಗಳು ತೇಲಾಡಿ ತಣ್ಣಗಾಗುವ ಮೊದಲಿಗೇ ಸಂಗೀತವು ತಡೆಯಿತು, ಶಾಂತವಾಗಿ ಕ್ರಮೇಣ ಅದು ಮುಗಿದು ಮಾಯವಾಯಿತು.

ಒಂದು ಕ್ಷಣ ನಿಃಶಬ್ದ, ಸ್ತಬ್ಧತೆ–ಉತ್ಕಟವಾದ ಶಾಂತತೆ; ಅದರ ಬೆನ್ನಿಗೇ ನೆರೆ ಹಾವಳಿಯ ತೆರೆಗಳಂತೆ ಹರ್ಷೋದ್ಗಾರಗಳ ಅಬ್ಬರವು ದಾಳಿ ಇಟ್ಟಿತು. ಸಭ್ಯ ಸೋಮಾರಿ ಜನರು, ಸ್ಥೂಲದೇಹಿಗಳಾದ ಸದ್ಗೃಹಸ್ಥರು, ಸುಕುಮಾರ ದಾಕ್ಷಿಣ್ಯ ಮೂರ್ತಿಗಳಾದ ಮಿಂಚುವ ಮಹಿಳೆಯರು, ತಮ್ಮ ತಮ್ಮ ಸುಖಾಸನಗಳಿಂದ ಎದ್ದೆದ್ದು ಕೈತಟ್ಟಿ ನೆಲಮೆಟ್ಟಿ ಕೂಗಾಡಿ ಹಿಗ್ಗಿನ ಕೇಕೆಹಾಕಿದರು! ಹರ್ಷೋದ್ಗಾರಗಳ ಉದ್ರೇಕ–ಅತಿರೇಕಗಳಿಂದ ಪ್ರತಿಧ್ವನಿಗೊಂಡು ಆ ಮಂದಿರವು ಮತ್ತೆ ಮತ್ತೆ ಮೊಳಗಿತು.

ಪಿಯಾನೋದ ಬಳಿಗೆ ಕೂತ ವಾದಕನು ಅಲ್ಲಾಡಲಿಲ್ಲ; ಕೂತಲ್ಲಿಯೇ ಅಚಲವಾಗಿ ಜಡನಂತೆ ಕೂತಿದ್ದನು; ಸುತ್ತಲೂ ಮಸಗಿದ ಅಬ್ಬರ–ಉಬ್ಬರಗಳ ಹರ್ಷ ಕೋಲಾಹಲದ ಎಚ್ಚರವೇ ಇಲ್ಲದಂತೆ. ಸಭೆಯು ಹುಚ್ಚೆದ್ದು ಹುಯ್ಲು ಹಾಕಿ ದಂತಾಯಿತು. ಆದರೂ ವಾದಕನು ಬಂಡೆಯಂತೆ ಆ ಸದ್ದು ಸಂದಣಿಯ ಕಡೆಗೆ ಬೆನ್ನುಮಾಡಿ ಪಿಯಾನೋದ ಎದುರು ನಿಶ್ಚಲನಾಗಿ ಕೂತಿದ್ದನು. ಆಗ ಪಕ್ಕದ ತೆರೆಯಿಂದ ವೃದ್ಧನೊಬ್ಬನು ಮುಂದೆ ಬಂದು, ಅವನನ್ನು ತಿರುಗಿಸಿದನು. ತನ್ನನ್ನು ಮೆಚ್ಚಿ ಮರುಳಾದ ಸಭೆಯನ್ನು ನೋಡುವಂತೆ, ಅವನ ಮೋರೆಯನ್ನು ಹೊರಳಿಸಿದನು. ಏಕೆ, ಗೊತ್ತೇ? ಇದೀಗ ಸ್ವ ರ ಗ ಳ ಸ್ವರ್ಣಸಪ್ತಕಗಳಿಂದ ಸಂಗೀತದ ಸಪ್ತಸ್ವರ್ಗಗಳನ್ನು ಕಟ್ಟಿ ತನ್ನ ಅಂತರಂಗದ ಭಾವ ತರಂಗಗಳ ಉನ್ನತ ಕಾವ್ಯ–ಧ್ವನಿಯನ್ನು ದಿವ್ಯ ಸಂಗೀತ ಗಂಧರ್ವನಗರಿಯಾಗಿ ಮಾರ್ಪಡಿಸಿದ ಆ ಅಲೌಕಿಕ ಕಲಾವಿದನು ಕಲ್ಲಿನಂತೆ ಕಿವುಡನಾಗಿದ್ದನು! ಅವನು ಕೂಗಾಡುವ ಆ ಜನ ಸಂದಣಿಯನ್ನು ಒಮ್ಮೆ ಕರುಣ ಗಂಭೀರವಾಗಿ ನೋಡಿದನು! ಅವನ ತುಟಿಗಳು ಮೂಕವಾಗಿಯೇ ಚಲಿಸಿದವು; ತಲೆಯು ತಾನಾಗಿ ತಗ್ಗಿತು.

ಈ ವಾದಕನೇ ಲುಡ್ವಿಗ್ ವ್ಹಾನ್ ಬಿದೋವಿನ್‌ನು. ಅವನ ಜೀವನದಷ್ಟು, ವಿಧಿಯ ದುರಂತ ವ್ಯಂಗ್ಯದಿಂದ ಕೂಡಿದ ಚರಿತ್ರಗಳು ಪ್ರಪಂಚದಲ್ಲಿ ಕಡಿಮೆಯೇ ಅನ್ನಬೇಕು. ಅವನ ಇಡಿಯ ವ್ಯಕ್ತಿತ್ವವೇ ನಾದದಲ್ಲಿ ಸೌಂದರ್ಯವನ್ನು ಉಸುರಿತು; ಅವನ ಅಂತರಾಳದ ವಿಚಾರ-ಕಲ್ಪನೆಗಳು ದಿವ್ಯೋದಾತ್ತವಾದ ಸ್ವರ-ಸಂವಾದದ ಶಿಲ್ಪನೆಯನ್ನು ಮಾಡಿದವು. ಆದರೆ ಅವನು ೩೦ ವರ್ಷ ಮುಗಿಸುವ ಮುನ್ನವೇ ಕಿವುಡನಾದನು. ಸಂಗೀತವೇ ಶ್ರುತಿಯ ಪ್ರಪಂಚ. ಅವನ ಸುಖಕ್ಕೆ ಅತ್ಯವಶ್ಯವಾದ ಒಂದೇ ಒಂದು ಇಂದ್ರಿಯವೇ ಅವನಲ್ಲಿ ಕ್ರಮೇಣ ನಷ್ಟವಾಗತೊಡಗಿತು. ಕೊನೆಗೆ ಅವನು ನಾದವಿಲ್ಲದ ನಿಬಿಡ ಮೌನದ ಪ್ರಂಪಚ ದಲ್ಲಿಯೇ ವಿಶ್ವವನ್ನೇ ಮೋಹಿಸಿದರೂ ತನ್ನ ಕಿವಿಗೇ ಕೇಳಿಸದ ಸಂಗೀತವನ್ನು ರಚಿಸುತ್ತ ಬದುಕಿದನು. ಚಿಕ್ಕದಾದ ಸೆರೆಮನೆಯ ಕೊಠಡಿಯಲ್ಲಿ ಭೀಕರ ಏಕಾಂತ ದಲ್ಲಿ ಕುಳಿತು, ಬಂಧುಜನಗಳೊಡನೆ ಸಂಪರ್ಕವನ್ನು ಕೆಲವೇ ಕಿಂಡಿಗಳೊಳಗಿಂದ ಇಟ್ಟುಕೊಂಡು ಮಹಾ ಪ್ರತಿಭಾಶಾಲಿಯಾದ ಈ ನಾದ ಕವಿಯು ಕಿವುಡನಾದ ಮೇಲೆಯೇ ತನ್ನ ಅತ್ಯುತ್ತಮ ಕೃತಿಗಳಲ್ಲಿ ಕೆಲವನ್ನು ಕಟ್ಟಿದನು. ತನ್ನ ಮಿದುಳಿ ನಲ್ಲಿ ಮಾತ್ರ ಅವುಗಳ 'ಸಂಚಾರ'ವನ್ನು 'ಕೇಳಿ'ದನು.

೧೭೭೦ರಲ್ಲಿ ಡಿಸೆಂಬರ ೧೬ನೇ ದಿನಾಂಕಕ್ಕೆ ಬಿದೋವಿನ್‌ನು ಜರ್ಮನಿಯ ಬೊನ್ ಪಟ್ಟಣದಲ್ಲಿ ಜನಿಸಿದನು. ಅವನ ತಂದೆಯು ಕೊಲೋನದ ಸಂಸ್ಥಾನಿಕನ 'ಆಸ್ಥಾನ ವಿದ್ವಾನ್'ನಾಗಿದ್ದನು; ತಕ್ಕಮಟ್ಟಿಗೆ ಸಂಗೀತಗಾರನೆನಿಸಿಕೊಂಡಿದ್ದನು. ಆದರೆ ಅವನು ತೀರ ಪೋಲಿಯೂ ಮನೆಯಲ್ಲಿ ಕರ್ಕಶ ಝೋಟಿಂಗಶಹನೂ ಆಗಿದ್ದನು. ಆದಾಗ್ಯೂ ಮಗನಿಗೆ ಅವನು ಉಪಕಾರಿಯೇ ಆದನು. ಪಿಟೀಲನ್ನೂ ಕ್ಲಾವಿಯರ್ ಎಂಬ ಸ್ವರಸಪ್ತಕದ ವಾದ್ಯವನ್ನೂ ನುಡಿಸಲು ಅವನು ಮಗನಿಗೆ ಕಲಿಸಿದನು. ಮಗನಲ್ಲಿ ವಯಸ್ಸಿಗೂ ಮೀರಿ ಪ್ರತಿಭೆಯು ತುಳುಕುತ್ತಿತ್ತು. (ಬಿದೋವಿನ್‌ನು ನಾಲ್ಕು ವರ್ಷದವನಿದ್ದಾಗಲೇ ಮೂರು ಕೃತಿಗಳನ್ನು ರಚಿಸಿ ಬಿಟ್ಟಿದ್ದನಂತೆ !) ಮಗನ ಈ ಅಸಾಧಾರಣ ಸಂಗೀತಶಕ್ತಿಯನ್ನು ಗುರುತಿಸಿ ತಂದೆಯು ಅವನಿಗೆ ಗುರುವಾದನು. ಸತತವಾಗಿ ಅವನನ್ನು ಸಂಗೀತದ ಪಾಠಗಳಲ್ಲಿಯೇ ತೊಡಗಿಸಿ ಇಟ್ಟನು. ತಂದೆಮಕ್ಕಳ ಈ ಸಂಗೀತಾಭ್ಯಾಸದ ದೃಶ್ಯವನ್ನು ಹೇಗೆ ಚಿತ್ರಿಸಬಹುದು ?

ಮನೆಯ ಅಟ್ಟದ ಮೇಲೆ ಪುಟ್ಟದೊಂದು ಕೋಣೆಯಲ್ಲಿ ಬಾಲಕ ಬಿದೋವಿನ್‌ನು ಸಂಗೀತದ ಪಾಠ 'ಉರು' ಹಾಕುತ್ತಾನೆ. ಹೇತುಪೂರ್ವಕವಾದ ಹಟದಿಂದ ಅವನು ತಂದೆ ಹಾಕಿಕೊಟ್ಟ ಒಂದು ಸ್ವರಮಾಲೆಯ ಸಂಚಾರವನ್ನು-ತೀರ ಬೇಸರದ

ಮಾದರಿಯನ್ನು–ನುಡಿಸುತ್ತ 'ತಿದ್ದುತ್ತ' ಕೂತಿದ್ದಾನೆ. ನಡುವೆಯೇ ಅವನ ಬೆರಳುಗಳು ಪಾಠದ ಸಂಚಾರದಿಂದ ಜಾರಿ ಚಿಕ್ಕದೊಂದು ಚೆಲುವಾದ ಸ್ವರ ರಚನೆಯ ಸ್ವತಂತ್ರ ಕೃತಿಯನ್ನು ಸ್ವೈರವಾಗಿ ಕಟ್ಟತೊಡಗುತ್ತವೆ; ರಮ್ಯವಾದ ಕಾಲ್ಪನಿಕವಾದ ಪಲ್ಲವಿಗಳು ಕನವರಿಕೆಯಲ್ಲಿಯೋ ಎಂಬುವಂತೆ ಆಡುತ್ತವೆ. ಅವನು ಮೆಲ್ಲಗೆ ಮೃದುವಾಗಿ ನುಡಿಸುತ್ತಾನೆ. ಸುತ್ತಲೂ ಕತ್ತಲೆಯು ಒತ್ತರದಿಂದ ಹಬ್ಬುತ್ತದೆ. ಅವನು ನಿದ್ದೆ ಹೋಗುವ ವೇಳೆಯೂ ಮೀರಿ ಹೋಗಿದೆ. ಕೂಡಲೇ ಕದ ತೆರೆಯುತ್ತದೆ. ತಂದೆಯ ಸಿಡುಕಿನ ಧ್ವನಿಯು–ಉಗ್ರವೂ ಗೊಗ್ಗರವೂ ಆದ ಮಾತು–ಕೇಳಿಸುತ್ತದೆ. 'ನಿನ್ನ ಪಾಠ ಮುಂದುವರಿಸು. ಮುನ್ನೋಡಿ ಮಾದರಿ ಯನ್ನು ತಿದ್ದು. ಬರಿದೆ ವೇಳೆ ಕಳೆಯಬೇಡ. ಚಂದ ಪಲ್ಲವಿಗಳನ್ನು ಮುಂದೆ ಕಟ್ಟೋಣವಂತೆ ! ಈಗ ಏನಾದರೂ ಕೆಲಸಕ್ಕೆ ಬರುವ ಅಭ್ಯಾಸ ಮಾಡು. ಹಾಕಿ ಕೊಟ್ಟ ಪಾಠ ಕಲಿ, ಮುಠ್ಠಾಳಾ !' ಮಾತು ತುಸು ತೊದಲಿಸುತ್ತದೆ. ಗೋಡೆಯ ಮೇಲೆ ಬಿದ್ದ ನೆರಳು ತತ್ತರಿಸುತ್ತ ತಡವರಿಸುತ್ತ ಸರಿದು ಹೋಗುತ್ತದೆ. ಕದ ಮುಚ್ಚುತ್ತದೆ. ಹುಡುಗನು ಮರುಮಾತಾಡದೇ ಮತ್ತೆ ಪಾಠ ತಿದ್ದಲು ತೊಡಗುತ್ತಾನೆ. ಕೊನೆ ಮುಗಿಲಿಲ್ಲದ, ತಿದ್ದಿದ್ದನ್ನೇ ತಿದ್ದುವ ಒಂದೇ ಮಾದರಿಯ ಏರಿಳಿತಗಳ ಬೇಸರದ ಯಾಂತ್ರಿಕ ಸ್ವರಸಪ್ತಕಗಳನ್ನೇ ಮತ್ತೆ ಬೆರಳುಗಳು ನುಡಿಸ ಹತ್ತುತ್ತವೆ. ಕೆಳಗೆ ಒಳಮನೆಯಲ್ಲಿ ಜೀವಾವಧಿ ಕಾಯಿಲೆಯವಳಾದ ತಾಯಿ, ಮಗನ ಅಭ್ಯಾಸ ಕೇಳಿ ಚಿಂತಿಸುತ್ತಾಳೆ.

ಕ್ರಮೇಣ ಹುಡುಗನ ಪ್ರತಿಭೆ ವಿಕಾಸಗೊಳ್ಳುತ್ತದೆ. ಅವನ ವಾದನ ಕೌಶಲ್ಯದ ಪ್ರಭಾವವನ್ನು ತಂದೆಯು ವಿಜಯದ ಗರ್ವದಿಂದ ಒಪ್ಪಿಕೊಳ್ಳುತ್ತಾನೆ. ಹುಡುಗನು ಆಗೊಮ್ಮೆ ಈಗೊಮ್ಮೆ ತನ್ನ ಕಣ್ಣುತಪ್ಪಿಸಿ ಕಟ್ಟುವ ರಾಗ–ಕೃತಿಗಳು ಅವನಿಗೆ ಗೊತ್ತು. ಆದರೂ ಅವುಗಳಿಗಾಗಿ ಮಗನನ್ನು ಅವನು ಗದ್ದರಿಸುವದಿಲ್ಲ. ಅವುಗಳ ನೆವದಿಂದಾದರೂ, ಹುಡುಗನು ವಾದ್ಯಕ್ಕೆ ಕಟ್ಟಿ ಬೀಳುತ್ತಾನಲ್ಲ,–ಅಷ್ಟೇ ಲಾಭ, ಎಂದೆಂದುಕೊಳ್ಳುವನು, ಕುಡುಕ ಸಿಡುಕ ತಂದೆ.

ಲುಡ್ವಿಗ್‌ನು ಒಂದು ಸಾಮಾನ್ಯ ಶಾಲೆಗೆ ಹೋಗಹತ್ತಿದನು. ೧೩ ವರ್ಷದವ ನಾಗುವತನಕ ಅಲ್ಲಿ ಓದಿದನು. ಶಾಲೆಗೆ ಸೇರಿದ್ದೇಕೆ ? ತಂದೆಯು ಸೇರಿಸಿದ್ದಕ್ಕೆ, ಅದೂ ಮಂದಿಯ ಮಕ್ಕಳಂತೆಯೇ ತನ್ನ ಮಗನೂ ಕಾಣಬೇಕೆಂಬ ಅಗತ್ಯಕ್ಕಾಗಿ. ಮಗ ಶಾಲೆಗೆ ಹೋಗುವದು ತಂದೆಗೆ ಮನವಾರೆ ಇಷ್ಟವಿಲ್ಲ. ಮಗನ ನಿಜವಾದ ಕಾರ್ಯ ಸಂಗೀತಸಾಧನೆ. ಅದಕ್ಕೆ ಈ ಶಾಲೆಯ ಓದು ಒಂದು ಅಡ್ಡ ಒಡ್ಡಿದ ವಿಘ್ನವೆಂದು ತಂದೆ ಸಿಟ್ಟಿನಿಂದ ಬುಸುಗುಡುವನು.

ಆದರೂ ಈ 'ಸಕ್ತಿಶಿಕ್ಷಣ'ವು ಹುಡುಗನ ಸಂಗೀತಜೀವನದಲ್ಲಿ ವಿಶೇಷ ವ್ಯತ್ಯಯ ತರಲಿಲ್ಲ. ಅವನ ೯ ವರ್ಷಕ್ಕೆ ತಂದೆಯು ಅವನನ್ನು ಒಂದು ದಿನ ಕರೆದು ಅಂದನು. 'ಮಗೂ ಲುಡ್ವಿಗ್, ನನಗೆ ತಿಳಿದದ್ದೆಲ್ಲ ನಿನಗೆ ಕಲಿಸಿದ್ದಾಯಿತು. ಇನ್ನು ನಿನಗಾಗಿ ಯೋಗ್ಯತೆಯು ಒಬ್ಬರನ್ನು ಗೊತ್ತುಮಾಡಿದ್ದೇನೆ. ಅವರಲ್ಲಿ ಕಲಿ, ಸಂಗೀತ ಪಾಠದಲ್ಲಿ ದಕ್ಷನಾಗಿ ಲಕ್ಷ್ಯವಿಡು. ಒಂದು ಮಾತು ಎಂದೂ ಮರೆಯಬೇಡ. ಸಂಗೀತವು ನಿನ್ನ ಜೀವನಕಾರ್ಯ!' ತಂದೆಯು ಎಂದಿಸಷ್ಟೇ ಒರಟು–ಗೊಗ್ಗರು ಉಗ್ರಮೂರ್ತಿ. ಆದರೇನು? ಮಗನ ಯೋಗ್ಯತೆಯನ್ನು ಪೂರ್ತಿ ಬಲ್ಲವನು. ಮುಂದೆ ಒಂದು ದಿನ ಮಗನು ಖ್ಯಾತಿವಂತನಾಗುವನೆಂಬ ನಂಬಿಕೆ ಅವನಲ್ಲಿ ದೃಢವಾಗಿದೆ. ಅಂತೆಯೇ ಹೀಗೆ ಮಗನನ್ನು ಕರೆದು–(ತು ಸು ಮೃ ದು ಧ್ವನಿಯಲ್ಲಿಯೇ) ಬುದ್ಧಿ ಹೇಳಿದನು.

ಹೀಗೆ ಲುಡ್ವಿಗ್‌ನು ಇನ್ನೊಬ್ಬ 'ಆಸ್ಥಾನ ವಿದ್ವಾನ' 'ವೈಣಿಕ ಶಿಖಾಮಣಿ'ಯಾದ ವ್ಹಾನ್‌ಡೆನ್ ಈಡೆನ್ ಎಂಬುವನಲ್ಲಿ ಹೋದನು. ಹೆಚ್ಚಿನ ವಾದನವ್ಯಾಸಂಗಕ್ಕಾಗಿ ವ್ಹಾನ್‌ಡೆನ್‌ನಿಂದ ಶಿಕ್ಷಣ ಪಡೆದಾದ ಮೇಲೆ, ಅವನ ನಂತರದ ಸಂಗೀತಾಧಿಕಾರಿಯಾದ ಕ್ರಿಶ್ಚನ್ ಗೊಡ್ಲೊಬ್ ನೀಫ ಎಂಬವನಲ್ಲಿ ಅಭ್ಯಾಸ ಮುಂದುವರಿಸಿದನು.

೧೭೮೨ ರಲ್ಲಿ ಲುಡ್ವಿಗ್ ಇನ್ನೂ ೧೨ ವರ್ಷ ಮುಗಿಸಿರಲಿಲ್ಲ. ಆದರೆ ಆಸ್ಥಾನದಲ್ಲಿ ಆಗಲೇ ಅವನು ವಾ ದ್ಯ ವಿ ಭಾ ಗ ಕ್ಕೆ ಡೆಪ್ಯುಟಿ (ಉಪ) ಅಧಿಕಾರಿಯಾಗಿ ನೇಮಿಸಲ್ಪಟ್ಟನು; ಕೆಲವೇ ತಿಂಗಳುಗಳಲ್ಲಿ ಸಂಸ್ಥಾನಿಕನ ನಾಟ್ಯಮಂದಿರದಲ್ಲಿ ಸಂಚಾಲನಾಗಿ ತಾನೇ ಗೀತ ನಾಟಕಗಳನ್ನು ನಡೆಯಿಸ ಹತ್ತಿದನು. ಜಗತ್ತಿನಲ್ಲಿ ಮಿಕ್ಕೆಲ್ಲ ಕಡೆಗೆ ಇದ್ದಂತೆ–ಅವೂ ಹೆಚ್ಚಾಗಿ ಕಲಾವಿದರ ಪ್ರಪಂಚವಲ್ಲಿಯೇ ಕಂಡು ಬರುವಂತೆ–ಇಲ್ಲಿಯೂ ಕುಮಾರ ಲುಡ್ವಿಗ್‌ನ ಕುರಿತು ಕಡುವಾದ ಉಗ್ರವಾದ ಅಸೂಯೆ ಅಸಹನೆಗಳು ಇತರರಲ್ಲಿ ಹೆಡೆಯೆತ್ತಿ ವಿಷಕಾರಹತ್ತಿದವು. ಆದರೆ ಲುಡ್ವಿಗ್‌ನಿಗೆ ಅದರ ಪರಿವೆಯೇ ಇದ್ದಿಲ್ಲ. ಅವನು ಮೂರ್ತಿಮಂತ ಸಂಗೀತ ಸಾಧನೆಯೇ ಆಗಿದ್ದನು. ಸ್ವರಸಮಾಧಿಯಲ್ಲಿ ಮಗ್ನನಾಗಿಯೇ ಇರುತಿದ್ದನು. ನನಸಿನಲ್ಲಿ, ಮನಸಿನಲ್ಲಿ ಎಂದೆಂದೂ ನಾದಲೋಲನಾಗಿಯೇ ನಡೆ–ನುಡಿಯುವ ಸಂಗೀತಗಾರನಾಗಿ ಬಿಟ್ಟಿದ್ದನು.

ಈ ಕಾಲದಲ್ಲಿ ಅವನು ನಿಧಾನವಾಗಿ ಸಂಗೀತ ಕೃತಿಗಳನ್ನು ರಚಿಸುತ್ತಿದ್ದನು. ಆದರೆ ಅವನ ಒಟ್ಟು ಕೃತಿಸಂಗ್ರಹವು ದೊಡ್ಡದಾಗಲಿಲ್ಲ. ಅವನಲ್ಲಿ ಈಗಾಗಲೇ ಅಂಥ ರಚನೆಯಲ್ಲಿ ಅವಶ್ಯವಾದ ಸಮರ್ಪಕ ಸ್ವರ ಪ್ರಯೋಗದ ಜಾಗರೂಕತೆಯು-

ಉಚಿತವೂ ಖಚಿತವೂ ಆದ ಸ್ವರಗಳನ್ನು ಆಯ್ದು ನೆಯ್ದು ಸಂಗೀತ ಕಟ್ಟುವ ಜೋಕೆ ತೂಕಗಳ ಹದವು–ಬೆಳೆಯುತ್ತಲಿತ್ತು. ಈ ಹದವು ಆ ಮುಂದೆ ಜೀವಮಾನವೆಲ್ಲ ಅವನ ಕೃತಿಗಳ ಲಕ್ಷಣವಾಗಿ ನಿಂತಿತು.

ಇಗೋ ನೋಡಿರಿ, ಲುಡ್ವಿಗ್‌ನು ಸಂಗೀತ ನಿರ್ಮಿತಿಯಲ್ಲಿ ತೊಡಗಿದ್ದಾನೆ. ಒಂದು ಕೃತಿಯನ್ನು ಕಟ್ಟುತ್ತಿದ್ದಾನೆ. ಹತ್ತಿರಹೋಗಿ ನೋಡೋಣ. ಒಂದು ಮೇಜಿನ ಬಳಿಗೆ ಅವನು ಕೂತಿದ್ದಾನೆ. ಕೈಯಲ್ಲಿ ಲೆಕ್ಕಣಿಕೆ ಇದೆ. ಕಣ್ಣೆದುರಿಗೆ ಉದ್ದ ಗೆರೆಗಳನ್ನು ಹಾಕಿದ ಸ್ವರ ಪ್ರಸ್ತಾರದ ಹಾಳಿ ಬಿದ್ದಿವೆ, ಮೇಜಿನಮೇಲೆ. ಅದನ್ನು ಎಳಕೊಂಡು ಒಂದು ಪಲ್ಲವಿಯನ್ನು–ತಾಲದ ಕಾಲಕ್ಕೆ ಕೂಡುವಂತೆ ಒಂದು ಸ್ವರ ರಚನೆಯ ಪಂಕ್ತಿಯನ್ನು–ಬರೆದು ಮುಗಿಸುತ್ತಾನೆ. ಹಾಗೆಯೇ ಪಕ್ಕದಲ್ಲಿಯ ಪಿಯಾನೋ ವಾದ್ಯದ ಕಡೆಗೆ ಹೋಗುತ್ತಾನೆ. ಅಲ್ಲಿ ಕೂತು, ಬರೆದು ತೆಗೆದ ಸ್ವರ ಪ್ರಸ್ತಾರವನ್ನು ನುಡಿಸಿ ನೋಡುತ್ತಾನೆ. ಅಂಜುತ್ತ ಅಂಜುತ್ತ ಶ್ರುತಿಗಳ ಮೇಲೆ ಬೆರಳಾಡಿಸುತ್ತಾನೆ. ಒಮ್ಮೆಲೇ ಅವನ ಮುಖದಲ್ಲಿ ದೀಪ್ತಿ ಮೂಡುತ್ತದೆ. ವೇಗದಿಂದ ಬಾರಿಸ ಹತ್ತುತ್ತಾನೆ. ಅವನು ರಚನೆಯಲ್ಲಿ ರೂಪಿಸಿದ ರಾಗಪಂಕ್ತಿಯು ಹದವಾಗಿ ಬಂದಿದೆ. ಅದನ್ನು ಸ್ವರಜಾಲದಲ್ಲಿ ಸೆರೆಹಿಡಿಯಲು ಬರುತ್ತದೆ ಎಂಬ ಹಿಗ್ಗು ಅವನಿಗೆ! ಒಂದು ತಾಸು ಹಾಗೆಯೇ ಪಿಯಾನೋ ನುಡಿಸುತ್ತ ಪ್ರಸ್ತಾರದ ಪಂಕ್ತಿಯನ್ನು ಮತ್ತೆ ಮತ್ತೆ ಮೂಡಿಸುತ್ತ ತಿದ್ದುವದರಲ್ಲಿ ತಲ್ಲೀನನಾಗುತ್ತಾನೆ. ಆ ನಂತರ ಅಲ್ಲಿಂದ ಎದ್ದು ಮತ್ತೆ ಮೇಜಿಗೆ ಮರಳಿ ಇನ್ನೊಂದು ಹೊಸ ಪಂಕ್ತಿಯ ಪ್ರಸಾರವನ್ನು ಹಾಕುತ್ತಾನೆ. ವಾರಗಟ್ಲೆ, ತಿಂಗಳುಗಟ್ಲೆ ಅದೇ ಸ್ವರಪ್ರಸ್ತಾರದ ಹಾಳೆಯ ಇದುರು ಕೂತು ತಿದ್ದಿ, ಕಾಟುಹೊಡೆದು ಮತ್ತೆ ಬರೆದು, ಹೊಸ ಸ್ವರಗಳನ್ನು ನಡುವೆ ಪೋಣಿಸಿ, ಬರೆದದ್ದು ಬಾರಿಸಿ ನೋಡುತ್ತ, ಒಂದೇ ಕೃತಿಯ ರಚನೆಯಲ್ಲಿ ಅಷ್ಟೊಂದು ಸಮಯ ಅಷ್ಟೊಂದು ಶ್ರಮ ಅಷ್ಟೊಂದು ಸತತಾನುಸಂಧಾನವನ್ನು ವ್ಯಯ ಮಾಡುತ್ತಾನೆ.

ಇದರ ಫಲವೇನು ? ಬಿದೋವಿನ್‌ನು ಕಟ್ಟಿದ ಕೃತಿ ಪ್ರತಿಯೊಂದು ಪೂರ್ಣವೇ. ರಚನೆಯಲ್ಲಿ ಎಷ್ಟೇ ಅವಧಿ ನಿರವಧಿಯಾಗಿ ಕಳೆದಿರಬಹುದು. ಆದರೆ ಕೊನೆಗೊಮ್ಮೆ ಅವನ ಲೆಕ್ಕಣಿಯಿಂದ ಕೃತಿಯು ರೂಪವೆತ್ತು ಹುಟ್ಟಿತೆಂದರೆ ಅದರ ಪ್ರಸ್ತಾರ, ಸ್ವರಸಂವಾದ, ಸಂಚಾರದ ಆಯ ಮತ್ತು ಕಟ್ಟು ಔಚಿತ್ಯ ಔನ್ನತ್ಯ ಇವೆಲ್ಲ ದೈವದ ಗೆರೆಯಂತೆ ಅಚಲ. ಏಕಂದರೆ ಅಂಥ ಪೂರ್ಣತೆಯ ಪಾಕವು ಬರುವನಕವೂ ಅವನ ಕೃತಿರಚನೆಯು ಸ್ವರಲೇಖವು ಪೂರ್ತಿ ಆಗುತ್ತಲೇ ಇದ್ದಿಲ್ಲ. ಬಿದೋವಿನ್ ಕೃತಿಗಳ ಸಂಖ್ಯೆ ಕಡಿಮೆ. ಇದರ ರಹಸ್ಯದ ಮೂಲವು ಇಲ್ಲಿಯೇ ಇದೆ. ಪೂರ್ಣತೆಯ ಪರಿಮಾಣ ಯಾವಾಗಲೂ ಅಲ್ಪವೇ.

ಪಿಯಾನೊ ವಾದನವಿಶಾರದನೆಂಬ ಖ್ಯಾತಿಯೇ ಅವನನ್ನು ಮೊದಲು ಮಂದಿಯ ಲಕ್ಷ್ಯಕ್ಕೆ ತಂದಿತು. ೧೭೮೪ರಲ್ಲಿ ಮ್ಯಾಕ್ಸ ಫ್ರಾಂರ್ಝ ಎಂಬವನು ಸಂಸ್ಥಾನಿಕನಾದನು. ತರುಣ ಲುಡ್ವಿಗ್‌ನಲ್ಲಿ ಹುದುಗಿದ ಪ್ರತಿಭೆಯ ಹೊಳಪನ್ನು ಅವನು ಕೆಲಮಟ್ಟಿಗೆ ಗುರುತಿಸಿದನು. ಅವನಿಂದಲೇ ಲುಡ್ವಿಗ್‌ನಿಗೆ ಮೊತ್ತಮೊದಲಿನ ಸಂಬಳದ ಕೆಲಸ ಸಿಕ್ಕಿತು. ೧೫೦ ಫ್ಲೊರಿನ್‌ಗಳ ವೇತನಕ್ಕೆ ಅವನು ಆಸ್ಥಾನದ ವಾದ್ಯ ಸಮ್ಮೇಳದಲ್ಲಿ ಎರಡನೇ ಪಿಯಾನೊ ವಾದಕನಾದನು. ೧೭೮೭ರಲ್ಲಿ ಲುಡ್ವಿಗ್‌ನ ಬಾಳಿನಲ್ಲಿಯ ತೀರ ಮಹತ್ವದ ಘಟನೆಯೊಂದು ಜರುಗಿತು. ಸಂಸ್ಥಾನಿಕನು ಅವನನ್ನು ವಿಯೆನ್ನಾ ನಗರಕ್ಕೆ ಕಳುಹಿಸಿದನು. ಅಲ್ಲಿ ಅಂದಿನ ಶ್ರೇಷ್ಠ ಸಂಗೀತಗಾರನೆಂದು ಗಣಿಸಲಾದ ಮೋಝಾರ್ಟನ ಬಳಿಯಲ್ಲಿ ಕೆಲವು ಸಂಗೀತ ಪಾಠಗಳನ್ನು ಅವನು ಕಲಿಯುವಂತಾಯಿತು. ಅವರಿಬ್ಬರ ಭೆಟ್ಟಿ ಒಂದು ಮಹಾ ಯೋಗವೇ ಅನಿಸಿತು. ಲುಡ್ವಿಗ್‌ನು ತನ್ನ ಒಂದೆರಡು ಕೃತಿಗಳನ್ನು ಪಿಯಾನೊದ ಮೇಲೆ ನುಡಿಸಿ ತೋರಿಸಿದನು. ಆಗ ಆ ಶ್ರೇಷ್ಠ ಸಂಗೀತಾಚಾರ್ಯನು ಒಳ್ಳೇ ಗಾಂಭೀರ್ಯದಿಂದ ತನ್ನ ಖುರ್ಚಿಯಲ್ಲಿಯೇ ಹಿಂದಕ್ಕೆ ಸರಿದು ತಲೆಯಾನಿಸಿ ಕೂತು ಹರ್ಷಪುಲಕಿತನಾಗಿ ಕೈಕುಣಿಸಿದನು; ಮತ್ತು ಹತ್ತಿರ ಕೂತ ರಸಿಕ ಮಿತ್ರರನ್ನು ನೋಡಿ ಹೀಗೆ ಉದ್ಗರಿಸಿದನು. 'ಈ ತರುಣನ ಕಡೆಗೆ ಲಕ್ಷ್ಯ ಕೊಡಿರಿ. ಒಂದಲ್ಲ ಒಂದು ದಿನ ಈತನು ಪ್ರಪಂಚದಲ್ಲಿ ದೊಡ್ಡ ಗದ್ದಲವೆಬ್ಬಿಸದೇ ಇರನು !'

ಆಗ ಲುಡ್ವಿಗ್‌ನ ಪ್ರಾಯ ೧೭ ವರ್ಷ. ಅವನ ಸಾತ್ವಿಕಳಾದ ತಾಯಿಯು ತೀರಿಕೊಂಡಳು; ತಂದೆಯು ಎಂದಿಗಿಂತಲೂ ಹೆಚ್ಚು ವ್ಯಸನಕ್ಕೆ ಇಳಿದಿದ್ದನು. ಈಗ ಅವನ ದಬ್ಬಾಳಿಕೆ ಉಳಿದಿದ್ದಿಲ್ಲ. ಆದರೆ ಮಗನ ಮಹತ್ವದ ಮಿಗಿಲಾದ ಶ್ರೇಯಸ್ಸು ತನಗೇ ಮೀಸಲೆಂದು ಅವನು ನಂಬಿದ್ದನು. ಕಸಿಕರವ ದನಿಯಲ್ಲಿ ಅವನು ಮಗನಿಗೆ ತನ್ನ ನಂಬಿಗೆಯನ್ನು ನೆನಪಿಸಿಕೊಡುತ್ತಿದ್ದನು. 'ನಿನ್ನ ಭವಿಷ್ಯ ನನಗೆ ಎಂದೋ ಗೊತ್ತಿತ್ತು. ನನ್ನಂಥ ತಂದೆ ಸಿಗದಿದ್ದರೆ ಲುಡ್ವಿಗ್‌ಗ್ಗಾ, ನಿನ್ನ ಬುದ್ಧಿಗೆ ಈ ಬೆಳಗು ಬರುತ್ತಿದ್ದಿಲ್ಲ.' ಎಂದು ಮುಂತಾಗಿ ಅಂದು ತನ್ನ ಬೆನ್ನನ್ನು ತಾನೇ ಚಪ್ಪರಿಸಿ ಕೊಂಡು ತನ್ನ ಹೊಟ್ಟೆಯ ಭಾರವನ್ನು ಮಗನ ಕೈಯಲ್ಲಿಟ್ಟನು. ಇದರಿಂದ ಲುಡ್ವಿಗ್‌ನ ಹೊಣೆಯು ಹೆಚ್ಚುತ್ತಹೋಯಿತು. ಅವನ ದುಡಿಮೆಯ ದುಡ್ಡಿನಲ್ಲಿ ಮನೆಯೂ ನಡೆಯಬೇಕು; ತಂದೆಯ ಕುಡುಕತನಕ್ಕೂ ಕಡಿಮೆ ಆಗಬಾರದು. ಆ ಮುದುಕನು ತನ್ನ ಪೂರ್ವಜರನ್ನು ಸೇರಿದಾಗ ಸಂಸ್ಥಾನಿಕನೇ ಅವನಕುರಿತು ಹೀಗೆ ಶ್ರದ್ಧಾಂಜಲಿಯನ್ನು ಅರ್ಪಿಸಿದನು. 'ಇದೀಗ ಜೊನ್ ಬಿದೋವಿನ್‌ನ ಮರಣದಿಂದ ಮದ್ಯದ ಮೇಲಿನ ಕರದ ಉತ್ಪನ್ನಕ್ಕೆ ಅಪಾರ ಹಾನಿಯು ಒದಗಿಬಂದಿದೆ !'

ಕುಡುಕ ತಂದೆಯ ಉಪಟಳವನ್ನು ಬಿಟ್ಟರೆ ತರುಣ ಬಿದೋವಿನ್‌ನ ಬಾಳು ಬೊನ್ನ ಪಟ್ಟಣದಲ್ಲಿ ಒಳ್ಳೇ ಸುಖವಾಗಿಯೇ ಸಾಗಿತೆನ್ನಬೇಕು. ಅವನಿಗೆ ಗೆಳೆಯರು ಬಹಳ. ಅವರು ಅವನನ್ನು ತಮ್ಮಲ್ಲಿಗೆ ಆಗಾಗ್ಗ ಕರೆದೊಯ್ಯುತ್ತಿದ್ದರು; ಮತ್ತು ಅವನು ಪಿಯಾನೊ ನುಡಿಸುವಾಗ ಹರ್ಷಪುಲಕಿತರಾಗಿ ಕೇಳುತ್ತ ಕೂಡ್ರುತ್ತಿದ್ದರು. ಇಂಥ ಗೆಳೆಯರಲ್ಲಿ ಹೋದಾಗಲೇ ಅವನಿಗೆ ಬ್ರೂನಿಂಗ ಕುಟುಂಬದ ಪರಿಚಯವಾಯಿತು. ಅವರಲ್ಲಿ ಅವನು ಪಿಯಾನೊ-ಪಾಠಗಳನ್ನು ಹೇಳಿಕೊಡಲು ಆರಂಭಿಸಿದನು. ಅವರಿಂದ ಪ್ರತಿಯಾಗಿ ಇಟಾಲಿಯನ್ ಮತ್ತು ಫ್ರೇಂಚ ಭಾಷೆಯನ್ನು ಕೆಲಮಟ್ಟಿಗೆ ಕಲಿಯ ತೊಡಗಿದನು. ಆಗಾಗ್ಗ ಮೇಜವಾನಿ-ಭೋಜನಸಮಾರಂಭಗಳು ಜರಗುತ್ತಿದ್ದವು. ಲುಡ್ವಿಗ್‌ನು ಅವುಗಳಲ್ಲಿ ಭಾಗವಹಿಸುತ್ತಿದ್ದನು. ಈ ರೀತಿ, ಆ ಸರಳತರಳನು ಸಭ್ಯತೆ-ಶಿಷ್ಟಾಚಾರಗಳ ಸೂಕ್ಷ್ಮಗಳನ್ನು ಅರಗಿಸಿಕೊಂಡನು. ಚಿಕ್ಕಂದಿನಿಂದಲೂ ಅವನು ಇಂಥ ವಿನಯ ಸಂಸ್ಕಾರಗಳಿಂದ ವಂಚಿತನಾಗಿಯೇ ಉಳಿದಿದ್ದನು. ಆ ಕೊರತೆ ಕೆಲಮಟ್ಟಿಗೆ ಈಗ ತುಂಬಿಬಂದಿತು. ಇಂತಹದೇ ಒಂದು ಸ್ನೇಹ ಸಮ್ಮೇಲನದ ಪ್ರಸಂಗದಲ್ಲಿ ಕೌಂಟ ವಾಲ್ಡಸ್ಟೀನ್ ಎಂಬ ಒಬ್ಬ ಸಿರಿವಂತ ಸಂಗೀತವಿಲಾಸಿ ತರುಣನೊಡನೆ ಲುಡ್ವಿಗ್‌ನ ಪರಿಚಯವಾಯಿತು. ವಾಲ್ಡಸ್ಟೀನನು ಇಲೆಕ್ಟರನ (ಸಂಸ್ಥಾನಿಕನ) ಸಲಿಗೆಯ ಸ್ನೇಹಿತನಿದ್ದನು. ಮುಂದೆ ೧೮೦೨ ರಲ್ಲಿ ಬಿದೋವಿನ್‌ನು ತನ್ನ ೫೩ ನೇ ಕೃತಿಯನ್ನು ಇವನಿಗೆ ಸಮರ್ಪಿಸಿ ವಾಲ್ಡಸ್ಟೀನ್ ಸೊನಾತಾ ಎಂಬ ಹೆಸರಿನಿಂದ ಆ ಕೃತಿಯೊಂದಿಗೆ ಈ ಮಿತ್ರನನ್ನು ಅಮರನನ್ನಾಗಿ ಮಾಡಿದನು.

ಬಿದೋವಿನ್‌ನ ಬಾಳಿನಲ್ಲಿಯ ಎರಡನೆ ಮಹಾಘಟನೆಯು ಅವನ ೨೨ ನೇ ವರ್ಷಕ್ಕೆ ಒದಗಿಬಂದಿತು. ಅಂದು ಕರುಣೆಗಾಗಿಯೂ ಕಲಾಮಹಿಮೆಗಾಗಿಯೂ ಹೆಸರುವಾಸಿಯಾದ ಹೈಡ್ನ ಎಂಬ ಹಿರಿಯ ಸಂಗೀತಗಾರನು ಬೊನ್ನ ಪಟ್ಟಣಕ್ಕೆ ಬಂದಾಗ, ಯುವಕ ಬಿದೋವಿನ್‌ನು ಕೆಲವು ಸ್ವಂತ ಕೃತಿಗಳನ್ನು ನುಡಿಸಿದ್ದನ್ನು ಕೇಳಿದನು. ಕೇಳುವದೆಂದರೆ ಮೆಚ್ಚಿ ಸೋಲುವದೇ ಇತ್ತು. 'ನಿಲ್ಲಿಸಬೇಡ, ಮುಂದೆ ನುಡಿಸು' ಎಂದು ಹೈಡ್ನನು ಎರಡು ತಾಸು ಕೇಳುತ್ತಲೇ ಕುಳಿತನು ಆನಂದಾಶ್ಚರ್ಯ ಪರವಶನಾಗಿ ! ಅನಂತರ ಸಂಸ್ಥಾನಿಕನಲ್ಲಿ ಹೋಗಿ ಈ ಉದ-ಯೋನ್ಮುಖ ಕಲಾವಿದನ ವಿಷಯವಾಗಿ ನಾಲ್ಕು ಒಳ್ಳೇ ಮಾತುಗಳನ್ನು ಗುಣ ಗ್ರಾಹಿಯಾದ ಹಿರಿಯ ಕಲಾವಿದನು ಆಡಿ ಪ್ರಶಂಸೆ ಪ್ರೋತ್ಸಾಹಗಳನ್ನು ಪ್ರಕಟಿಸಿದನು. ಇದರ ಫಲವಾಗಿ ಬಿದೋವಿನ್‌ನು ತನ್ನ ಸಂಗೀತ ವ್ಯಾಸಂಗವನ್ನು ವಿಯೆನ್ನಾದಲ್ಲಿಯೇ ಮಾಡಿ ಮುಗಿಸಬೇಕೆಂದು ನಿರ್ಣಯವಾಯಿತು.

ಹೀಗೆ ಬಿದೋವಿನ್‌ನು ಬೊನ್ನ ಪಟ್ಟಣವನ್ನು ಬಿಡುವಂತಾಯಿತು. ಅವನ ಸಂಗೀತ-

ಜೀವನಕ್ಕೆ ಹೊಸದೊಂದು ಗಾಂಭೀರ್ಯ ಬಂದಿತು. ಅದರೊಂದಿಗೆ ಎಲ್ಲ ಕೊರಗು, ಗೆಲುವು ನೃಶಂಸತೆ, ಪ್ರಶಂಸೆ, ಹತಾಶೆಯ ಕಹಿ, ಸಾಧನೆಯ ಸವಿ, ವಿಪತ್ತು, ವಿಶೇಷತೆ ವೈಷಮ್ಯ ಮತ್ತೂ ವಿಜಯ–ಎಲ್ಲವೂ ಕೂಡಿಬಂದು ಅವನ ಬದುಕನ್ನು ಕಂಗೆಡಿಸುವಂತೆಯೂ ಕಂಗೊಳಿಸುವಂತೆಯೂ ಮಾಡಿದವು. ಸುಮಾರು ಒಂದು ವರ್ಷ ಅವನು ಹೈಡ್ನನ ಹತ್ತಿರ ಪಾಠ ತಿದ್ದಿದನು. ಆದರೆ ಈ ನಡುವೆ ಅವನು ಮೊದಲಿನ ಲುಡ್ವಿಗ್‌ನಾಗಿ ಉಳಿಯಲಿಲ್ಲ. ಅವನಲ್ಲಿ ವಿಷಾದಕರ ವ್ಯತ್ಯಾಸವಾಗಿತ್ತು. ಮೊದಲಿನ ಸರಳತೆ ಸ್ಥಿರತೆ ಉಳಿದಿದ್ದಿಲ್ಲ; ವಿಕ್ಷಿಪ್ತನೂ ವಿಚಿತ್ರ ವೃತ್ತಿಯವನೂ ಸಲ್ಲದ ಚಟಗಳ ಹುಚ್ಚು ಹಟಮಾರಿಯೂ ಆಗಿಬಿಟ್ಟಿದ್ದನು. ಈ ಉದಾಹರಣೆಯನ್ನೇ ನೋಡಿ;–ಅವನು ವಾದ್ಯ ನುಡಿಸುವಾಗ ಕಿಡಕಿಗಳು ತೆರೆದಿದ್ದರೆ ಅವನ್ನು ಮುಚ್ಚಲು ಹೇಳುತ್ತಿದ್ದನು; ಅವುಗಳನ್ನು ಮುಚ್ಚಿದರೆ 'ಗಾಳಿಬರಲಿ ಉಸಿರು ಕಟ್ಟುತ್ತದೆ' ಎಂದು ಸಿಡಿಯಾಡುತ್ತಿದ್ದನು ! ಪಿಯಾನೊ ಪೀಠವೇ ಸರಿಇಲ್ಲವೆಂದು ದೂರುತ್ತಿದ್ದನು; ಹೆಚ್ಚು ಹೆಚ್ಚು ತಾಳ್ಮೆಗೆಡುತ್ತಿದ್ದನು. ಗುರುವಿನ ಕಕುಲಾತಿಯ ಮಾತಿಗೆ ಕಿವಿಗೊಡುತ್ತಿದ್ದಿಲ್ಲ. ಗುರು ಹೇಳುವ ವ್ಯಾಖ್ಯೆ–ವ್ಯಾಖ್ಯಾನಗಳ ಕುರಿತು ಉದಾಸೀನನಾಗಿ ಇರುತ್ತಿದ್ದನು. ಆದಷ್ಟು ಬೇಗ ಆದಷ್ಟು ವೇಗದಿಂದ ವ್ಯಾಸಂಗ ಮುಗಿಸಿ ಕಲಾಸಿದ್ಧಿಯನ್ನು ಕೈವಶಪಡಿಸಿಕೊಳ್ಳಬೇಕೆಂಬ ತ್ವರೆ ತವಕಗಳಿಂದ ಗುರುವನ್ನು ಕಾಡುತ್ತಿದ್ದನು. ಈ ತಾಳ್ಮೆಗೆಟ್ಟ ನಡತೆ ಹೈಡ್ನನ ಸಾಧುತನಕ್ಕೂ ಅಸಹ್ಯವಾಯಿತು. ಗುರು–ಶಿಷ್ಯರಲ್ಲಿ ಬಿರುಕುಬಿಟ್ಟಿತು, ಬಿರುಸುಕಟ್ಟಿತು. ಹೈಡ್ನ–ಬಿದೋವಿನ್‌ರ ಈ ಮನಸ್ತಾಪ ಕೊನೆಯವರೆಗೂ ಪೂರ್ತಿ ತಣಿಯಲಿಲ್ಲ. ಬಿದೋವಿನ್‌ನು ಹೈಡ್ನನಿಂದ ದೂರವಾದನು.

ಮುಂದೆ ಅಲ್ಬ್ರರ್ಟ ಬರ್ಗರ್ ಮತ್ತು ಸಾಲಿವ್ಹಿ ಎಂಬ ಇಬ್ಬರು ಗುರುಗಳಲ್ಲಿ ಅವನು ಅಭ್ಯಾಸ ಮುಂದುವರಿಸಿದನು, ಸಾಲಿವ್ಹಿಯು ಒಬ್ಬ ಇಟಾಲಿಯನ್ ಕೃತಿಕಾರನಾಗಿದ್ದನು. ೧೭೭೧ರಲ್ಲಿ 'ಅರ್ಮಿಡಾ' ಎಂಬ ಗೀತನಾಟಕವನ್ನು ರಚಿಸಿ ರಂಗದಲ್ಲಿ ಪ್ರಯೋಗಿಸಿ ಅವನು ಜನಪ್ರಿಯನಾಗಿದ್ದನು. ಅವನು ಮೊಝಾರ್ಟನ ಕಟುವಾದ ಪ್ರತಿಸ್ಪರ್ಧಿಯಾಗಿದ್ದನು. ಒಮ್ಮೆಯಂತೂ, ಮೊಝಾರ್ಟನಿಗೆ ಅವನು ವಿಷ ಹಾಕಿದನೆಂದು ಕೂಡ ಜನಜನಿತವೆದ್ದಿತ್ತು.

ಲುಡ್ವಿಗ್‌ನ ಬಾಳಿನಲ್ಲಿ ಈಗ ಎಲ್ಲವೂ ತಿರುವು–ಮುರುವಾಯಿತು. ಮೈಮಾಟವೆಲ್ಲ ಅಸಡ್ಡಾಳ ಹೊಲಸಾಯಿತು. ಗೆಳೆಯನ ಮನೆಗೆ ಹೋಗುವಾಗಲೂ ಜಳಕ ಮಾಡದೇ, ತುಂಬ ಬಟ್ಟೆ ಕೂಡ ತೊಡದೇ, ತೀರ ಮಲಿನ ಮುದ್ರೆಯಿಂದ ಹೋಗುತ್ತಿದ್ದನು. ಅಲ್ಲಿ ಅವನ ಅಸಭ್ಯತೆಯ ಕುರಿತು ಗೆಳೆಯನಾರಾದರೂ

ಮೃದುವಾಗಿ ಬುದ್ಧಿ ಹೇಳಿದರೂ ಅವನು ಅತ್ಯಂತ ದರ್ಪದಿಂದ ಅಸಹ್ಯ ಬಿರುನುಡಿಗಳಿಂದ ಉತ್ತರವೀಯುತ್ತಿದ್ದನು. ಅಹಂಕಾರವಿದ್ದರೆ ಸರಿ; ಬೇರೆ ಅಲಂಕಾರ ಬೇಕಿಲ್ಲ ಎಂಬುದೇ ಅವನ ತತ್ವವಿದ್ದಿರಬೇಕು.

ಒಂದು ಸಂಜೆಗೆ, ಬಿದೋವಿನ್‌ನು ವಿಯೆನ್ನಾದ ಸಿರಿವಂತ ಶ್ರೇಷ್ಠಿವರ್ಗದವರು ವಾಸಿಸುವ ವಿಭಾಗದಲ್ಲಿ ಒಂದು ವೈಭವಶಾಲಿಯಾದ ಮನೆಯಲ್ಲಿ ಕಾಣಿಸಿಕೊಂಡನು. (ಕಾಣಿಸಿಕೊಂಡನೆಂಬುವದೇಕೆಂದರೆ ಅವನು ಸ್ವತಂತ್ರ ವೃತ್ತಿಯವನಿದ್ದನು. ಆಮಂತ್ರಣವನ್ನೇ ಅವಲಂಬಿಸುತ್ತಿದ್ದಿಲ್ಲ !) ಔತಣ ನಡೆಯಿತು. ತನ್ನ ಗೆಳೆಯನೊಡನೆ ಅವನ ಅಭ್ಯಾಗತರ ನಮ್ಮ 'ಧೀರೋದ್ಧತ' ನಾಯಕನು ಕೂತನು. ಅಭ್ಯಾಗತರೆಲ್ಲ ಶ್ರೀಮಂತರೂ, ಅದರಲ್ಲಿಯೇ ತೀರ ಶಿಷ್ಟರೆನಿಸಿಕೊಂಡ ಸಭ್ಯರೂ ಆಗಿದ್ದರು. ಊಟದ ಉದ್ದಕ್ಕೂ ಬಿದೋವಿನ್‌ನ ಉದ್ಧಟ ನಡತೆಗೆ ಮಿತಿಯೇ ಇದ್ದಿಲ್ಲ. ಅವನ ನಡೆ-ನುಡಿ ಕುಳಿತವರನ್ನೆಲ್ಲ ಕೆರಳಿಸುವಂತಹದಿತ್ತು. ಆಗಾಗ ನೆಲದ ಮೇಲೆ ಉಗುಳುತ್ತಿದ್ದನು. ಕುಡಿಯುವಾಗ ಪೇಯಗಳನ್ನೆಲ್ಲ ಬಟ್ಟೆಗಳ ಮೇಲೆ ಚೆಲ್ಲಿ ಕೊಳ್ಳುತ್ತಿದ್ದನು. ಮುಸುರೆ ಅರಿವೆಯನ್ನೇ ಕರವಸ್ತ್ರವಾಗಿ ಬಳಿಸುತಿದ್ದನು. 'ಆದರೇನು ? ನಾನು-ನಾನು ಬಿದೋವಿನ್ !' 'ಬಿದೋವಿನ್‌ನಾದ ಮೂಲಕ ನನಗೆ ಎಲ್ಲವೂಕ್ಷಮ್ಯ. ಅಲ್ಲ ಭೂಷಣ'. ಈ ವೃತ್ತಿಯಲ್ಲಿಯೇ ಅಂದು ಅವನು ನಡೆದನು. ಇದೇ ಮಾತನ್ನು ಇನ್ನೊಂದು ಸಂದರ್ಭದಲ್ಲಿ ಆಡಿಯೂ ತೋರಿಸಿದನು. !

ಅವನು ಎಷ್ಟು ದುರಹಂಕಾರಿಯೋ ಅಷ್ಟೇ ಸಂಶಯಪಿಶಾಚಿ. ಅವನು ಹೋದಲ್ಲಿ ಇನ್ನೊಬ್ಬ ಸಂಗೀತಗಾರನ ಹೆಸರನ್ನು ಯಾರಾದರೂ ಎತ್ತಿದರೆ ಸಾಕು· ಅವನು ಮನೆ ಬಿಟ್ಟೇಹೊರಟನು ! ಅವನ ಪಿತ್ತಪ್ರಕೋಪವು ಭಯಂಕರವಿತ್ತು. ಅವನದು ವಿಕಾರಗೆಟ್ಟ ಸಿಟ್ಟು. ಕುರುಡುಸಿಟ್ಟಿನ ಹುಚ್ಚು ಆವೇಶದಲ್ಲಿ ನಡುಗುವ ಅವನನ್ನು ಕಂಡರೆ ಕನಿಕರವೆನಿಸುತ್ತಿತ್ತು. ಸಿಟ್ಟಿನ ಭರದಲ್ಲಿ ಮೋರೆ ಉರಿದು ಕಪ್ಪಿಟ್ಟು ಶಿರದ ನರಗಳೆಲ್ಲ ಪುರಿಗಳಂತೆ ಬಿರುಸಾಗಿ ಒಡೆಯುವವೋ ಎಂಬಂತೆ ಒಡೆದೆದ್ದು ನಿಲ್ಲುತ್ತಿದ್ದವು. ಒಂದು ಸ್ವರವು ಶ್ರುತಿ ತಪ್ಪಿದಂತೆ ಅನಿಸಿದರೆ ತೀರಿತು: ಪಿಯಾನೊದ ಪಟ್ಟಿಗಳನ್ನೆಲ್ಲ ಕೆರಳಿ ಗುದ್ದಿಬಿಡುತ್ತಿದ್ದನು. ಬಡಿಸಿದ ಪದಾರ್ಥ ಸರಿಯಾಗಿ ಬೇಯಲಿಲ್ಲವೆಂದೆನಿಸಿದರೆ ಸಾಕು; ಆ ಕುದಿಯುವ ಪಲ್ಲೆಯ ಬಟ್ಟಲನ್ನೇ ಪೇಟರ ('ಮಾಣಿ')ನ ತಲೆಗೆ ಎಸೆದುಬಿಡುತ್ತಿದ್ದನು.

ಆದರೂ ಅವನು ಲೋಕಪ್ರಿಯನಾದನು; ಮತ್ತೂ ಅವನ ಲೋಕಪ್ರಿಯತೆ

ದೃಢವಾಗಿ ಹೆಚ್ಚುತ್ತಲೇ ಹೋಯಿತು ! ಅವನು ಅನೇಕರೊಂದಿಗೆ ಗೆಳೆತನ ಕಟ್ಟಿಕೊಂಡನು; ಗೆಳೆತನವನ್ನು ಕಾದುಕೊಂಡನು. ಏಕೆಂದರೆ ಅವನ ವಿಕ್ಷಿಪ್ತ-ವೈಚಿತ್ರ್ಯಗಳ ಬಿರುಸು ಒರಟುಗಳಾಚೆಗೆ ಹೊಳೆಯುತ್ತಿರುವ ಅವನ ವ್ಯಕ್ತಿತ್ವವನ್ನು ಅವರು ಅರಿತುಕೊಂಡಿದ್ದರು. ಅವನು ತನಗೆ ತಾನೇ ತಿಳಿದುಕೊಳ್ಳುವವಕ್ಕಿಂತ ಮಿಗಿಲಾಗಿ ಅವನ ಸೋಜಿಗದ ಶೀಲವನ್ನು ಈ ಗೆಳೆಯರು ಮನವರಿಕೆಮಾಡಿ ಕೊಂಡಿದ್ದರು. ಇವೆಲ್ಲ ಪಿತ್ತಪ್ರಕೋಪದ ಉದ್ಧಟ ಉಪದ್ರವಿ ಉದ್ರೇಕದನಂತರ, ಕೆರಳಿಕೆ ಬಿರುನುಡಿಗಳ ಬಿರುಗಾಳಿ ಎದ್ದು ಬೀಸಿದಮೇಲೆ, ಬಿದೋವಿನ್‌ನು ಸುಮ್ಮನಾಗಿ ಶಾಂತಚಿತ್ತದಿಂದ ಕೂತುಕೊಂಡು ತಾನು ರಚಿಸಿದ ದಿವ್ಯ ಸ್ವರಾಕೃತಿ ಗಳಲ್ಲಿ ತನ್ನ ಆತ್ಮವನ್ನೇ ತೋಡಿಕೊಂಡು ಇಂಚರದ ಇಂದ್ರಧನುಷ್ಯಗಳಲ್ಲಿ ರಸದ ಜೇನುಮಳೆಯನ್ನು ಕರೆಯುತ್ತಿದ್ದನು. ಆಗ ಆ ಸೊಗಸಿಗೆ ಮೆಚ್ಚದವರು ಯಾರು ? ಬಿದೋವಿನ್‌ನಿಗೆ ನರಲೋಕದ ನಡಾವಳಿಯೇ ಗೊತ್ತಿದ್ದಿಲ್ಲ; ಅವನು ನರಕದಲ್ಲಿ ನರಳಿ ಕೆರಳುವನು ಇಲ್ಲವೇ ಸ್ವರ್ಗದಲ್ಲಿ ನಲಿದು ರಮಿಸುವನು.

ಅವನ ಬಹಳಷ್ಟು ಗೆಳೆಯರು ಉನ್ನತ ಕುಲದವರು: ಉಚ್ಚವರ್ಗದವರು. ಕ್ಷುಲ್ಲಕ ಪ್ರಣಯ ಪ್ರಕರಣಗಳ ಪರಂಪರೆಯೇ ಅವನ ಬಾಳಿನಲ್ಲಿ ಬಹಳಕಾಲ ನಡೆದುಹೋಯಿತು. ಅವನ ಪ್ರಣಯವ್ಯವಹಾರದ ನಾಯಿಕೆಯರೆಲ್ಲ ಮೂಢ ಹೆಂಗಸರು. ಮೂಢರಿದ್ದರೂ ಸಮಾಜದಲ್ಲಿ ಅವನಿಗೆ ನಿಲುಕಲಾರದಷ್ಟು ಮೇಲಿನ ವರ್ಗದವರು, ಆದರೆ ಅವನ ಪರಿಚಯ ಸಲಿಗೆಯಿಂದ ತಾವು ಧನ್ಯರಾದೆವೆಂದು ತಿಳಿದವರು, ತಾನು ನಿನ್ನ 'ಜೀವದ ಜತೆಗಾರ್ತಿ,' ತಾನು ನೀನು 'ಜವಳಿ ಜೀವಗಳು,' ತನಗೆ ನೀನು 'ಅಧ್ಯಾತ್ಮಿಕ ಪತಿ' ತಮ್ಮಿಬ್ಬರ ಗೆಳೆತನ 'ಸತಿ-ಪತಿ ಭಾವ' ಎಂದು ಮುಂತಾಗಿ ಈ ಮೋಹಪರವಶ ಮಹಿಳೆಯರು ಅವನಿಗೆ ಎದೆಬಿಚ್ಚಿ ಆಡಿ ತೋರಿಸುತ್ತಿದ್ದರು. ಅವನ ಉನ್ಮಾದಕ ಸಂಗೀತವನ್ನು ಕೇಳಿದಮೇಲೆ ಅವರ ಸೃಷ್ಟಿಕರ್ತನನ್ನು ಮೋಹಿಸುವದೂ ಕಾಮಿಸುವದೂ ಮುಗ್ಧ ರಮಣಿ ಯರಿಗೆ ಅನಿವಾರ್ಯವೆನಿಸುತ್ತಿತ್ತು. ಆದರೆ ಅವರ ಈ ಮೋಹದ ಮರುಳಾಟದ ಮಾತುಗಳನ್ನು ಕೇವಲ ಮನೋರಂಜನೆಯ ದೃಷ್ಟಿಯಿಂದಲೇ ಬಿದೋವಿನ್‌ನು ಕೇಳಿಕೊಳ್ಳುತ್ತಿರಬೇಕು. ಅವನಿಗೆ ಇದೆಲ್ಲ 'ಕಲಾತ್ಮಕ ಮನೋವೃತ್ತಿ'ಯ 'ತಾತ್ವಿಕ' ಮಾತುಗಳ ಬಗ್ಗೆ ಮನವಾರೆ ತಿರಸ್ಕಾರ. ಅಂಥ ಕೃತ್ರಿಮ ಭಾವ ಪ್ರದರ್ಶನದ ಬಗ್ಗೆ ಅಷ್ಟೇ ಬೇಸರ. ಆದರೂ ಈ ನಾದಲುಬ್ಧ ಹರಿಣಾಕ್ಷಿಯರ ಪ್ರಣಯದಲ್ಲಿ ಅವನಿಗೆ ಸೌಮ್ಯವಾದ ಒಂದು ಆಸಕ್ತಿ ! ಅವನ ಪ್ರಣಯ ವ್ಯವಹಾರಗಳೆಲ್ಲ ವ್ಯಾಮೋಹಗಳಾಗಿ ಬೆಳೆಯಲಿಲ್ಲ; ಆದ್ದರಿಂದ ಲೋಕ ನಿಂದೆಯ ನಂಜಿನ ಉಸಿರು ಅವನ ಹೆಸರಿನ ಹೂವನ್ನು ಬಾಡಿಸಲಿಲ್ಲ.

ಈ ಸುಮಾರಿಗೆ ಬಿದೋವಿನ್‌ನಿಗೆ ೩೦ರ ಪ್ರಾಯ. ಅವನ ನಡೆನುಡಿಯ ಚಟಗಳೆಲ್ಲ ಈಗಲೂ ಉದ್ಧಟ ಅಸಹ್ಯವಿದ್ದವು. ಅವನ ಸಿಟ್ಟು, ಸಂಶಯ, ಶಾಪ-ಸಂಭ್ರಮ ಗಳೆಲ್ಲ ಅವನ ಗೆಳೆಯರಿಗೆ ನಿರಂತರ ನೋವಿನ ನೆಲೆಯಾಗಿದ್ದವು. ಅವನ ಬಾಳಿನಲ್ಲಿ ನಿಷ್ಠುರವೂ ನಿರ್ದಯವೂ ಆದ ದುರಂತವು ಕವಿದು ಬರುತ್ತಲಿತ್ತು.

ತನ್ನ ಕಿವಿಯ ಕಸುವು ಕುಗ್ಗುತ್ತಿರುವದೆಂದು ಅವನಿಗೆ ಕ್ರಮೇಣ ಕಂಡು ಬಂದಿತು. ನುಡಿಸಿದ ಅಥವಾ ಕೇಳಿದ ಶ್ರುತಿಯ ಮಟ್ಟ ಮತ್ತು ಮಿಡಿತಗಳಲ್ಲಿಯ ಸೂಕ್ಷ್ಮ ಗುಣಭೇದಗಳನ್ನು ಅವನ ಕಿವಿಯು, ಗುರುತಿಸಲಾರದಾಯಿತು. ವೈದ್ಯರಿಂದ ವೈದ್ಯರಿಗೆ ಅವನು ಹೋದನು. ಅವರು ಅವನ ಕರುಣ ಕಥೆಗೆ ಕಿವಿಗೊಟ್ಟರೇ ಹೊರತು ಅವನಿಗೆ ಕಿವಿಯನ್ನು ಕೊಡುವದು ಅವರಿಂದ ಆಗದಾಯಿತು. ವೈದ್ಯರು ಅವನನ್ನು ಪರೀಕ್ಷಿಸಿ ಅಸಹಾಯತೆಯಿಂದ ತಲೆ ಕೊಡುಗಿದಾಗ, ಬಿದೋವಿನ್‌ನು ಹತಾಶೆಯಿಂದ ತಲೆಗೆಟ್ಟ ಹುಚ್ಚನಂತಾಗುವನು. ಅವನ ಕಿವಿಯ ಬೇನೆ ಹೆಚ್ಚುತ್ತ ಹೋಯಿತು. ಅವನು ಕೊನೆಯ ವೈದ್ಯಕೀಯ ನಿರ್ಣಯವನ್ನು ಪಡೆದನು; ಈ ವ್ಯಾಧಿಯು, ಹಿಂದೆ ಹೊಸ ಹರೆಯದರಲ್ಲಿಯೇ ಅಂಟಿಕೊಂಡ ಯಾವದೋ ರೋಗದ ಮೂಲಕವಿರಬೇಕು; ಅಥವಾ ಅನುವಂಶಿಕವಾಗಿ ಬಂದ ಕುಂದಿರಬೇಕು ಎಂಬ ನಿರ್ಣಯಕ್ಕೆ ತಜ್ಞರು ಬಂದರು. ಆದರೆ ಇದು ಬಡ ಬಿದೋವಿನ್‌ನಿಗೆ ತಂದ ಆಶೆಯೇನು ?

ಭಗ್ನ ಹೃದಯ ಬಿದೋವಿನ್‌ನು ಮನೆಗೆ ಮರಳಿದನು. ತನ್ನ ಕೋಣೆಯಲ್ಲಿ ಹೋಗಿ ಪ್ರೀತಿಯ ಪಿಯಾನೊದ ಇದುರಿಗೆ ಕೂತನು. ಅವನ ಎದೆಯು ಹ ತಾ ಶೆ ಯ ತುಳಿತಕ್ಕೆ ಒಡೆದು ಪುಡಿಯಾಗಿತ್ತು. ಇನ್ನು ಅವನೆದುರು ಕಾಣುವದೇನು ? ವರ್ಷದ ಮುಂದೆ ವರ್ಷ ಬರಿ ಶೂನ್ಯ ಸಂಗೀತದ ಬೆಳಕು ಬತ್ತಿಹೋದ ಅಂಧತಮಸ್ಸು. ಮಹಾಮೌನದ ಮರುಭೂಮಿ. ಪಿಯಾನೊದ ಮೇಲೆ ವಿಮನಸ್ಕತೆಯಿಂದ ಕೈಯಾಡಿಸಿದನು. ಕೆಲವು ಶ್ರುತಿಗಳನ್ನು ಒತ್ತಿದನು; ಮಂದ್ರ ಮತ್ತು ತಾರದ ಪಾದಗಳನ್ನೂ ಮೆಟ್ಟಿದನು. ತನ್ನನ್ನು ತಾನೇ ಚಿತ್ರಹಿಂಸೆಗೆ ಬಲಿಕೊಟ್ಟನು. ಅವನ ಜೀವ ಆಶೆನಿರಾಶೆಗಳ ತೂರಾಟದ ಚೆಂಡಾಯಿತು. ವೈದ್ಯರದೇ ತಪ್ಪಿರ ಬಹುದು; ಅವರು ಕೆಲವೊಮ್ಮೆ ತಪ್ಪು ಮಾಡುವದಿಲ್ಲವೇ ? ಛೇ, ಇದೂ ತಪ್ಪು. ಅವರ ರೋಗ ನಿದಾನ ಕೆಡುವದೇ ಕಡಿಮೆ. ಅವನ ವಿಚಾರದ ಲಂಬಕವು ಹೀಗೆ ಲೋಲುಪ್ತಿಗೆ ಇಳಿಯಿತು. ಈ ತಲೆ ತಿನ್ನುವ ತಾಕಲಾಟದಲ್ಲಿ ಅಲ್ಲಿ ಪಿಯಾನೊದಮುಂದೆ ಕೂಡ್ರುವದು ಅವನಿಗೆ ಯಮಯಾತನೆಯೆನಿಸಿತು. ಎದ್ದು ಒಂದು ಮೇಜಿನ ಮೇಲೆ ಮೊಳಕೈಗಳನ್ನು ಊರಿ ಅಂಗೈಗಳಲ್ಲಿ ಹಣೆಯನ್ನು ಹುಗಿದು ಕೋಡು ಕರುಣೆಯೇ ಕಲ್ಲಾದಂತೆ ಕುಳಿತುಬಿಟ್ಟನು !

ವಾರದ ಹಿಂದೆ ವಾರ ಕಳೆಯಿತು. ಬಿದೋವಿನ್‌ನು ಮನೆಯಿಂದ ಹೊರಬೀಳಲಿಲ್ಲ. ಗೆಳೆಯರು ಬಾಗಿಲಿಗೆ ಬಂದು ಮರಳಿ ಹೋಗುತ್ತಿದ್ದರು. ಆದಷ್ಟೂ ಅವರನ್ನು ಆತನು ಕಾಣಿಸಿಕೊಳ್ಳುತ್ತಿದ್ದಿಲ್ಲ. ಅವನ ಕಟ್ಟಳೆಯನ್ನೂ ಲೆಕ್ಕಿಸದೇ ಕೆಲವರು ಹೊಸ್ತಿಲುದಾಟಿ ಒಳನುಗ್ಗಿ ಬಂದರೆ ಅವರನ್ನು ಈಗ ಆತನು ದರ್ಪದಿಂದ ಧಿಃಕರಿಸುತ್ತಿದ್ದಿಲ್ಲ. ತೀರ ಕಕುಲಾತಿಯಿಂದ ದೀನನಂತೆ ಅವರನ್ನು ಕೂಗುತ್ತಿದ್ದನು. ಅಕಸ್ಮಿಕವಾಗಿ ಒದಗಿಬಂದ ಅವನ ದುರದೃಷ್ಟದ ಆಕ್ರಮಣದಡಿಗೆ ಅವನ ದರ್ಪ ಧಾರ್ಷ್ಟ್ಯಗಳು ಒಡೆದು ಚೂರಾಗಿ ಬಿದ್ದಿದ್ದವು. ಒದಗಿದ ಈ ದುರಂತದಿಂದ ಅವನ ಸ್ವಭಾವವು ಒಮ್ಮೆಲೇ ಬೇರ್ಪಟ್ಟಿತು; ಧೀರೋದಾತ್ತ ಶೀಲವಾಗಿ ಮಾರ್ಪಟ್ಟಿತು.

೧೮೦೨ ರಲ್ಲಿ ಅವನು ಒಂದು ಪತ್ರವನ್ನು ಬರೆದನು. ಅದು ಅವನ ಮೃತ್ಯುಪತ್ರ ವೆಂದು ಹೆಸರಾಗಿದೆ. ಆ ಪತ್ರದಲ್ಲಿ ತನ್ನ ಸಹೋದರರಿಗೆ ಎದೆ ಕರಗಿಸುವಂಥ ಕರುಣ ಗಂಭೀರ ಶಬ್ದಗಳಲ್ಲಿ ಯಾವ ವಿಕಾರ ವಿಕೋಪವೂ ಇಲ್ಲದೆ, ಆತನು ತನ್ನ ಕಿವುಡುತನವು ತನ್ನ ಬಾಳಿಗೆ ಎಂಥ ಭಯಂಕರ ವಿಪತ್ತಾಗಿ ಬಂದಿತೆಂಬುದನ್ನು ಅರುಹಿಸಿದ್ದಾನೆ.

ಹೀಗೆ ಲುಡ್ವಿಗ್ ಬಿದೋವಿನ್‌ನು ಅನೇಕ ಗೆಳೆಯರ ನಡುವೆ ಬದುಕಿದ್ದರೂ ಏಕಾಕಿಯಾದ ಬಾಳನ್ನು ಕಳೆಯಬೇಕಾಗಿ ಬಂದಿತು. ಅವನದು ಸಜೀವ ಸಮಾಧಿ ಯಾಯಿತು. ಮೌನದ ಗೋರಿಯಲ್ಲಿ ಅವನನ್ನು ಬಾಳಿನಲ್ಲಿಯೇ ಹುಗಿದಂತಾಯಿತು.

ಅವನ ಈ ದುಃಖದಲ್ಲಿ ಎದೆಯ ಗಾಯಕ್ಕೆ ಬರೆಕೊಡಲು ಬಂದಂತೆ ಇನ್ನೊಂದು ದುರ್ಘಟನೆ ಕೂಡಿ ಬಂದಿತು. ಅವನು ಮೂಕನಾಗಿ ಒಳ್ಳೇ ಭಕ್ತಿಯಿಂದ ಸಾಕಿದ ಅವನ ಸೋದರಳಿಯನು ಅವನ ಪಿತೃತುಲ್ಯ ಪ್ರೇಮಕ್ಕೆ ದ್ರೋಹಬಗೆದನು. ಅವನ ಅಕ್ಕರ-ಆಸ್ಥೆಕೆಗೆ ಎಲ್ಲಬಗೆಯಿಂದಲೂ ಅಯೋಗ್ಯನೆನಿಸಿಕೊಂಡನು. ಆದರೂ ಬಿದೋವಿನ್‌ನು ಅವನಲ್ಲಿ ನಂಬಿಗೆಗೆಡಲಿಲ್ಲ; ಅವನನ್ನು ನೋಡಿಕೊಳ್ಳುವದನ್ನು ಬಿಡಲಿಲ್ಲ. ಇದರಿಂದ ಕೊನೆಗೆ ಆ ಉಡಾಳ ತರುಣನು ಸರಿದಾರಿಗೆ ಬಂದು ಬಾಳನ್ನು ತಿದ್ದಿಕೊಂಡನು. ಇದರಿಂದ ಬಿದೋವಿನ್‌ನಿಗೆ ಶೂನ್ಯದಲ್ಲಿಯ ಕೊಂಚ ಸಮಾಧಾನ ಅನಿಸಿರಬೇಕು.

ಬಿದೋವಿನ್‌ನ ಜೀವನದ ದುರಂತ ದುಃಖವು ಅವನ ಕಿವುಡುತನದಲ್ಲಿ ಇತ್ತೆಂಬುವದು ಸರಿಯಾದ ಸತ್ಯವಲ್ಲ. ಅವನ ಬಾಳಿನ ದುಃಖ ಅವನ ಏಕಾಕಿತನದಲ್ಲಿತ್ತು. ಅವನ ಹೃದಯದ ಸ್ನೇಹ ಮೋಹಗಳನ್ನು ಧಾರೆಯೆರೆಯಲು ಅವನಿಗೆ ತನ್ನದೆಂಬ ತಾಣ ಎದ್ದಿಲ್ಲ; ಪ್ರಾಣಕ್ಕೆ ಪ್ರಿಯವಾದ ಜನವಿದ್ದಿಲ್ಲ. ಸೋದರಳಿಯನನ್ನು ಅದೆಷ್ಟೇ ವಾತ್ಸಲ್ಯ-ವ್ಯಾಮೋಹದಿಂದ ನೋಡಿಕೊಂಡರೂ ಜಡಭರತನ ಜಿಂಕೆಯ

ಮರಿಯಂತೆ ಆ ಪಾತ್ರವು ಅವನಿಗೆ ಯಾವದೊಡ್ಡ ಸಂತೃಪ್ತಿಯನ್ನು ಯಾವ ಪ್ರೇಮ ಪೂರ್ತಿಯನ್ನು ಕೊಟ್ಟೀತು ? ಕ್ರಮೇಣ ಆ ವ್ಯಾಮೋಹವನ್ನೂ ಅವನು ಬಿಟ್ಟನು. ಹುತಾತ್ಮತೆಯ ಹುಚ್ಚು ಆವೇಶವಿಲ್ಲದೆ, ಹತಯೋಗಿಯೆಂಬ ಹಿರಿತನದ ಹೆಮ್ಮೆಯ ಅಭಿನಿವೇಶವಿಲ್ಲದೆ, ಬಿದೋವಿನ್‌ನು ಒಂದು ಧೀರೋದಾತ್ತ ತೀರ್ಮಾನಕ್ಕೆ ತಲ್ಪಿದನು. ಆತ್ಮ ಸಮರ್ಪಣೆಯ ವಿರಕ್ತವೃತ್ತಿಯಿಂದ ಅವನು ತನ್ನ ಜೀವನದ ಏಕಮೇವ ಕಾರ್ಯವಾದ ಕೃತಿರಚನೆಯಲ್ಲಿ ತನ್ಮಯನಾದನು. ಬಂದದ್ದೆಲ್ಲ ಬರಲಿ, ಸಂಗೀತದ ಕೃತಿಯೊಂದಿರಲಿ.—ಎಂಬುದೇ ಅವನ ಶ್ರದ್ಧೆಯ ಸೊಲ್ಲಾಯಿತು. ಅವನ ದುಃಖದ ಸ್ಮರಣೆಯೇ ಅವನ ಸ್ಫೂರ್ತಿ ಆಯಿತು. ಕಿವುಡ ಕಲಾವಿದನು ದಿನನಿತ್ಯವೂ ಸುತ್ತಲಿನ ಮೌನದ ಗೋಡೆಗೆ ಹಣೆಜಪ್ಪಿ ಜರ್ಜರ ನಾಗುತ್ತಿರುವಾಗಲೇ, ಎಂದೂ ರಚಿಸಲ್ಪಡದಿದ್ದ ದಿವ್ಯತಮವಾದ ಸಂಗೀತವನ್ನು ರಚಿಸಿ ಭಗ್ನಹೃದಯದ ಅಂಧಕೂಪದಿಂದ ನಾದಾಮೃತವನ್ನು ಧಾರೆಧಾರೆಯಾಗಿ ಹರಿಯಬಿಟ್ಟನು ! ಮಹೋನ್ನತವಾದ ಕೃತಿರತ್ನಗಳನ್ನು ಅವನು ನಿರ್ಮಿಸಿದನು. ಇವುಗಳು ತೃತೀಯ, ಚತುರ್ಥ, ಪಂಚಮ, ಸಪ್ತಮ ಮತ್ತು ಅಷ್ಟಮ ಗೀತಿಕೆ ('ಸಂಫನಿ') ಗಳೆಂದು ಅಮರವಾಗಿವೆ. ಇವನ್ನೆಲ್ಲ ಅವನು ಕೇಳಿದ್ದು ಎಲ್ಲಿ ? ಮಿದುಳಿನಲ್ಲಿಯೇ ಮಿಡಿದು ಮೊಳಗಿದ ಸ್ವರಾಕೃತಿಗಳಿವು. ಈ ಬಧಿರಾವಸ್ಥೆಯಲ್ಲಿ ಅವನು ಇನ್ನೂ ಕೆಲವು ಉತ್ತಮೋತ್ತಮ ಕೃತಿಗಳನ್ನು ರೂಪಿಸಿದನು. ಅನೇಕ 'ಆ ಮುಖ'ಗಳು 'ಫಿಡೆಲಿಯೋ' ಎಂಬ ಗೀತನಾಟಕ, ಪಿಟೀಲಿಗಾಗಿ ಗತ್ತುಗಳು, ಪೂರ್ಣತೆಯ ಬಿಂಬವೆನಿಸಿದ 'ರಸೊಮೊ ಪ್ಲೆಸ್ಕಿ' ಸ್ವರಾಕೃತಿ ಮತ್ತು ಕೊನೆಯದಾಗಿ, ಈ ಭೂಮಿಯದೇ ಅಲ್ಲವೆಂದೆನಿಸುವಷ್ಟು ಕಾಂತಿಯುಕ್ತವಾದ 'ಮಿಸ್ಸಾ ಸೊಲೆಮ್ನಿಸ್' ಎಂಬ ರಾಗಕೃತಿ. ಇವೆಲ್ಲ ಅಂದು ಅವನ ಮಿದುಳಿನಲ್ಲಿ ಅಂಕುರಿಸಿ ಬೆರಳುಗಳಿಂದ ಅಲಂಕಾರಯುಕ್ತವಾಗಿ ವಿಕಾಸಗೊಂಡ ಸಂಗೀತವಿಲಾಸ. ಪುರಾತನ ಋಷಿಗಳು ತಮ್ಮ ತಪೋಮಯವಾದ ತೇಜಗಳನ್ನೇ ದಿವ್ಯಾಸ್ತ್ರರೂಪವಾಗಿ ನೋಡಿದರೆಂದು 'ಉತ್ತರ ರಾಮಚರಿತ'ದಲ್ಲಿ ರಾಮಚಂದ್ರನು ಉದ್ಗರಿಸುತ್ತಾನೆ. ಬಿದೋವಿನ್‌ನ ಆಯುರ್ಮಾನವೆಲ್ಲ ಆರಾಧನೆ, ಆಚರಣೆಗಳಿಂದ ಹಣ್ಣಿಗೆಬಂದ ಸ್ವರ ಸಾಧನೆಯ ಸಂಗೀತ ತಪಸ್ಸು, ಅವನ ಪ್ರತಿಭೆಯ ಕಿವಿಗೆ, ತೇಜಸ್ಸಿನ ಗೀತ ಮಾಲಿಕೆಯಾಗಿ ಮೂಡಿ ಮೊಳಗಿತು.

೧೮೨೬ನೆಯ ವರ್ಷದ ಅಂತ್ಯದಲ್ಲಿ ಬಿದೋವಿನ್‌ನು ತನ್ನ ಸಹೋದರನನ್ನು ಭೆಟ್ಟಿಯಾಗಲು ಹೋಗಿದ್ದನು. ಅಲ್ಲಿ ಉಳಿದಾಗ ಅವನಿಗೆ ಉಗ್ರವಾದ ಚಳಿ ನಡುಕಹಿಡಿಯಿತು. ಅಲ್ಲಿಂದ ವಿಯೆನ್ನಾಕ್ಕೆ ಹಿಂತಿರುಗಿದೊಡನೆ ಅವನಿಗೆ ಜಲೋದರದ ರೋಗ ಬೆಳೆಯಿತು. ವೈದ್ಯರೆಲ್ಲ ಬಂದರು. ಆದರೆ ಏನೂ

ಮಾಡಲಾಗಲಿಲ್ಲ. ಆ ರೋಗದೊಡನೆ ಅವನು ಹಲವು ತಿಂಗಳು ನಿಕರದ ಹೋರಾಟ ನಡೆಸಿದನು. ರೋಗದ ನೋವು ನರಳಿಕೆಯನ್ನು ನಾದಲೋಲನಾಗಿ ಹೊಸ ಕೃತಿಗಳ ರಚನಾಕಾರ್ಯದಲ್ಲಿ ಮರೆಯಲು ಹೆಣಗಿದನು. ಆದರೆ ಅವನ ಮುಖಮುದ್ರೆಯು ದಿನ ಕಳೆದಂತೆ ಕಳೆಗುಂದಿ ಬಿಳುಪಿಡ ತೊಡಗಿತು; ಸಾವಿನೊಡನೆ ಸಾಗಿಸಿದ ಹೋರಾಟದಲ್ಲಿ ಸೋಲಿನ ಪತಾಕೆಯನ್ನೇ ಹಾರಾಡಿಸುವಂತೆ ಕಂಡಿತು.

೧೮೨೭ ನೆಯ ಮಾರ್ಚ ೨೬ ನೆಯ ದಿನ ಅವನ ಜೀವನನೌಕೆ ಒಮ್ಮೆಲೇ ಮುಳುಗ ತೊಡಗಿತು. ಅಕಸ್ಮಾತ್ ದೂರ ದಿಗಂತದಲ್ಲಿ ಗುಡುಗಿನ ಅಬ್ಬರವು ಮೊಳಗಿತು. ಬಿರುಗಾಳಿ ಭೂತಾಕಾರವಾಗಿ ಬೊಬ್ಬಿರಿದು ಬೀಸಿ ಬಂತು. ಕೆಲವೇ ಕ್ಷಣಗಳಲ್ಲಿ ನಗರವನ್ನು ಮುತ್ತಿ ಕ್ಷೋಭವೆಬ್ಬಿಸಿತು. ಕಣ್ಣು ಕುಕ್ಕುವ ಮಿಂಚು ಮತ್ತೆ ಮತ್ತೆ ಹೊಳೆದು ಬಿದೋವಿನ್‌ನ ಕೋಣೆಯನ್ನು ಬೆಳಗಿತು. ಆದರೆ ಒಳಗೆ ಹಸೆಯಲ್ಲಿ ನರಳುತ್ತ ಬಿದ್ದ ಸಂಗೀತಗಾರನಿಗೆ ಇದಾವ ಕರ್ಣಕರ್ಕಶ ಕೋಲಾಹಲವೂ ಕೇಳಿಸಲಿಲ್ಲ. ಗುಡುಗು-ಮಿಂಚಿನ ಇನ್ನೊಂದು ಪ್ರಚಂಡ ಗರ್ಜನಾಘಾತವಾದಾಗ ಅವನು ಫಕ್ಕನೇ ಭುಜವನ್ನು ಚಾಚಿ ನೆಗೆದು ಉರುಳಿ ಸತ್ತು ಬಿದ್ದನು. ಅವನ ಶವವನ್ನು ಮನೆಯಿಂದ ಹೊರಗೆ ತೆಗೆಯುವಾಗ ಇಪ್ಪತ್ತುಸಾವಿರ ಜನ ತಲೆತಗ್ಗಿಸಿ ನಿಂತರು.

ಬಿದೋವಿನ್‌ನ ಎಲ್ಲ ಕೃತಿಗಳನ್ನು ಪರಿಶೀಲಿಸುವದಕ್ಕೆ ಇಲ್ಲಿ ಅವಕಾಶವೂ ಇಲ್ಲ; ಅದು ಅವಶ್ಯವೂ ಅಲ್ಲ. ಇಷ್ಟು ಮಾತು ಇಲ್ಲಿ ಸಾಕು. ಅವನ ಕೃತಿಗಳನ್ನೆಲ್ಲ ಮೂರು ಶೈಲಿಗಳಲ್ಲಿ ವಿಂಗಡಿಸಲಾಗುವದು.

ಮೊದಲನೆಯ ಶೈಲಿಯ ಕಾಲಖಂಡವು ಮೊಝಾರ್ಟನ ಪ್ರಭಾವದ್ದು. ಆಗಲೂ ಕೂಡ ಮೊಝಾರ್ಟನ ಸಂಗೀತದ ಪ್ರಭಾವ ಸ್ಪಷ್ಟವಿದ್ದರೂ, ಆ ಮೂಲದಿಂದ ವಿಕಾಸಗೊಳಿಸಿಕೊಂಡ ಬಿದೋವಿನ್‌ನ ಸ್ವರಸಂವಾದ ಮತ್ತು ರಾಗಸಂಚಾರದ ರೀತಿಯಲ್ಲಿ ಸಾಕಷ್ಟು ಸ್ವಂತಿಕೆಯ ಸತ್ವವು ವ್ಯಕ್ತವಾಗಿದೆ.

ಎರಡನೆಯ ಕಾಲಖಂಡದಲ್ಲಿ ಅವನ ಸಂಗೀತರಚನೆಯು ಶಕ್ತಿಯು ಹೆಚ್ಚು ಗಂಭೀರವೂ ವ್ಯಾಪಕವೂ ಆದದ್ದು ಕಂಡುಬರುತ್ತದೆ. ಮೊಝಾರ್ಟನ ಮಾದರಿಯ ಶುದ್ಧ ರಾಗಸಂಚಾರದ ರೀತಿಯಲ್ಲಿ ಸಾಹಸಪೂರ್ಣವಾದ ಸ್ವರ ಸಂವಾದದ ಆಘಾತಗಳು ಎದ್ದುಕಾಣುತ್ತವೆ; ಪರಂಪರೆಯಿಂದ ಸಿಡಿದು ನಿಂತು ಸ್ವತಂತ್ರವಾಗಿ ಹೊಸ ಹರಹನ್ನು ಚಿತ್ತರಿಸುವ ಯತ್ನವು ಅವನ ಕೃತಿಗಳಲ್ಲಿ ಸ್ಪಷ್ಟವಾಗುತ್ತದೆ.

ಮೂರನೆಯ ಖಂಡವು ಅವನ ಕಿವುಡುತನದ ಕಾಲಾವಧಿಯದು. ಆದರೆ

ನಿಜವಾಗಿಯೂ ಇದು ಎರಡನೆಯ ಶೈಲಿಯದೇ ಪರಿಪಾಕವು. ಕೆಲವು ವಿಮರ್ಶಕರು ಭಾವಿಸುವಂತೆ, ಅವನ ಈ ಕಾಲದ ಕೃತಿಗಳ ಮೇಲೆ ಕಿವುಡುತನದ ಪರಿಣಾಮ ವಾದದ್ದು ಸುಳ್ಳು. ಅವನ ಪ್ರತಿಭೆಯ ಸ್ವಚ್ಛಂದ ಸುಂದರವೂ ಬಹುರಾಗ ಬಂಧುರವೂ ಆದ 'ವಿಧವಿಧ ವಿಹಗಸ್ವನ'ದ ವಸಂತಾಗಮವು ಒದಗಿದ್ದು ಆಗಲೇ. ವಿವಿಧ ಶ್ರುತಿಯೋಜನೆಯ ಪರಿಪೂರ್ಣ ಪ್ರತಿಭಾವಿಲಾಸದ ಪ್ರಬುದ್ಧ ಅವಸ್ಥೆ ಯಿದು. ಅವನ ಮಹಾಕೃತಿಗಳಾದ ನವಮಗೀತಿಕೆ ಓಪಸ್ ೧೦೬ ನೆಯ ಕೃತಿ ಮುಂತಾದವು ಇದೇ ಕಾಲದ ಪರಿಪಕ್ವ ಫಲಗಳು.

ಸುಲ್ಲಿವನ್ ಎಂಬ ವಿಖ್ಯಾತ ಸಂಗೀತ ವಿಮರ್ಶಕನು ಹೀಗೆ ಅನ್ನುತ್ತಾನೆ. 'ಬಿದೋವಿನ್‌ನಲ್ಲಿ ನಾವು ಮಹತ್‌ಸಂಗೀತರಚನೆಗೆ ಅವಶ್ಯವಿರುವ ಎಲ್ಲ ಲಕ್ಷಣಗಳ ಸ್ವರಪ್ರತಿಭೆಯನ್ನು ಕಾಣುತ್ತೇವೆ. ಜೀವನದ ಅಂತಿಮ ಸ್ವರೂಪದ ಸಾಕ್ಷಾತ್ಕಾರವು ಅವನಿಗೆ ಆಗಿದೆ. ಎಂಥ ಪ್ರಯಾಸದ್ದೇ ಆಗಲಿ ಯಾವದೇ ಪರೀಕ್ಷೆಗೆ ಧೃತಿಯಿಂದ ಇದಿರಾಗದ ಸತ್ವ ಅವನದು. ಅವನ ವಿಕಾಸವು ಸಂಪ್ರದಾಯದ ಸಂಕೀರ್ಣ ಪ್ರಭಾವಗಳ ಸಂಕರದಿಂದ ಅಲಿಪ್ತವಾಗಿದೆ. ಅನುಭವದ ವಿಶಾಲ ವಿಸ್ತಾರಕ್ಕೆ ಉಚಿತವಾಗಿ, ಅವನ ಸ್ವರಾಕೃತಿಗಳ ರೂಪದ ಪ್ರತಿಕ್ರಿಯೆಯು ಶುದ್ಧವೂ ಪ್ರಾಮಾಣಿಕವೂ ಆಗಿದೆ.'

ಈ ಸ್ತುತಿಯ ಮುಕ್ತಾಯಕ್ಕೆ ಇನ್ನೊಬ್ಬ ಹಿರಿದಾದ ಸಂಗೀತ ವಿಮರ್ಶಕನಾದ ಅರ್ನೆಸ್ಟ್ ನ್ಯೂಮನ್ ಎಂಬವನ ಮತವನ್ನು ಪೋಣಿಸೋಣ.

'ಬಿದೋವಿನ್‌ನ ಕಲ್ಪಕ ಪ್ರತಿಭೆಯ ವಿಶೇಷ ಲಕ್ಷಣವೇನೆಂದರೆ, ಅವನು ಮತ್ತೆ ಮತ್ತೆ ನಮ್ಮನ್ನು ರಸೋನ್ನತಿಯ ಯಾವ ಎತ್ತರಕ್ಕೆ ಒಯ್ಯುವನೋ ಅಲ್ಲಿಂದ ಎಲ್ಲ ಸಂಗೀತ ಪ್ರಪಂಚವನ್ನಷ್ಟೇ ಅಲ್ಲ, ಎಲ್ಲ ಭಾವಗಳನ್ನೂ ಎಲ್ಲ ತತ್ವಗಳನ್ನೂ ಎಲ್ಲ ಜೀವನವನ್ನೂ ನಾವು ಪುನರ್ವಿಮರ್ಶಿಸಿ ಅಳೆದು ಬೆಲೆ ಕಟ್ಟಬಲ್ಲೆವು !'

ಇದಕ್ಕೂ ಹೆಚ್ಚಿನ ಪ್ರಶಸ್ತಿ ಎಲ್ಲಿದೆ ? ಇದನ್ನು ಪಡೆದ ಪ್ರತಿಭೆ ದೇವಕಲ್ಪವಲ್ಲದೇ ಇನ್ನೇನು ?

●

# ವೋಲ್ಫ್‌ಗ್ಯಾಂಗ ಅಮೇಡಿಯಸ್ ಮೊರ್ಝಾರ್ಟ

'ನಿಜವಾಗಿಯೂ ಕೊನೆಯ ಕಾರ್ಯಕ್ರಮ!... ಈ ಹುಡುಗನು-ಇನ್ನೂ ೭ ವರ್ಷ ಆಗಿಲ್ಲ!-ಹಾರ್ಪಿಸ್‌ಕಾರ್ಡ ವಾದ್ಯವನ್ನು ಬಾರಿಸುವನು: ಪಿಟೀಲನೊಡನೆ ಕೊನ್‌ಸರ್ಟೋ ನುಡಿಸುವನು; ಕ್ಲಾವ್ಹಿಯರ್ ವಾದ್ಯದ ಮೇಲೆ ಹಾಡುಗಳಿಗೆ ಜತೆಮಾಡುವನು;-ಅದೋ ನೋಡಿ ಅಲ್ಲಿ; ಸ್ವರದ ಪಟ್ಟಿಗಳನ್ನು ವಸ್ತ್ರದಿಂದ ಮುಚ್ಚಿಟ್ಟರೂ ಕಣ್ಮುಟ್ಟ ನೋಡಿದಂತೆ ಕ್ಲಾವ್ಹಿಯರ್ ಬಾರಿಸುವನು. ದೂರದ ಅಂತರದಿಂದ ನುಡಿಸಿದ ಯಾವದೇ ಸ್ವರವನ್ನು ಯಾವದೆಂದು ಹೆಸರಿಟ್ಟು ಗುರುತಿಸುವನು. ಬೇಕಷ್ಟು ಅವಧಿ ಹಾರ್ಪಿಸ್ ಕಾರ್ಡ ಅಥವಾ ಆರ್ಗನ ವಾದ್ಯದ ಮೇಲೆ ಸ್ವತಂತ್ರ ಕೃತಿಗಳನ್ನು ಕೂತಮೆಟ್ಟಿಗೇ ರಚಿಸಿ ನುಡಿಸುವನು. ತಿಕೀಟಿನ ದರ...'

—೧೭೬೩ ರಲ್ಲಿ ಒಂದು ಜರ್ಮನ್ ವೃತ್ತಪತ್ರಿಕೆಯಲ್ಲಿ ಬಂದ ಜಾಹಿರಾತು ಇದು. ಜಾತ್ರೆಯ ಮೋಜಿನಲ್ಲಿ ಮನೋರಂಜನೆಗಾಗಿ ಒಂದು ವಿಚಿತ್ರವೆಂದು ಅದ್ಭುತ ಶಕ್ತಿಯ ಬಾಲಕನ ಲೀಲಾ ಪ್ರದರ್ಶನವನ್ನು ಇಡುವದಿಲ್ಲವೇ ? ಹಾಗೆಯೇ ಮೇಲೆ ವಿವರಿಸಿದ ಕಾ ರ್ಯ ಕ್ರ ಮ ವ ನ್ನು ಇಡಲಾಗಿತ್ತು. ಆದರೆ ಈ ಬಾಲಕನು ವೊಲ್ಫ್‌ಗ್ಯಾಂಗ ಅಮೆಡಿಯಸ್ ಮೊರ್ಝಾರ್ಟನು ಮುಂದೆ ಪಾಶ್ಚಾತ್ಯ ಜಗತ್ತಿನಲ್ಲಿ ಅತ್ಯಂತ ಸರ್ವ ಸನ್ಮಾನ್ಯ ಸಂಗೀತ ಪ್ರತಿಭೆಯ ಸೀಮಾ ಪುರುಷನೆಂದು ಖ್ಯಾತಿ ಗೊಂಡ ವ್ಯಕ್ತಿಯು ಇವನೇ. ಅಂದಿನ ಕಾರ್ಯಕ್ರಮವನ್ನು ಕೇಳಲು ಕಿಕ್ಕಿರಿದು ಕಲೆತ ಸಭಿಕರಲ್ಲಿ ಇನ್ನೊಬ್ಬ ಬಾಲಕನು ನಾವಮುಗ್ಧನಾಗಿ ಕೂತಿದ್ದನು. ಆ ಬಾಲಕನು ೧೪ ವರ್ಷ ಪ್ರಾಯದ ಗಡೆಯು. ಅವನೂ ಮುಂದೆ ಪಾಶ್ಚಾತ್ಯ ಸಾಹಿತ್ಯ ಲೋಕವನ್ನು ಸೂರ್ಯನಂತೆ ಸರ್ವತೋಮುಖವಾಗಿ ಬೆಳಗಿ ಕವಿಗಳಲ್ಲಿ ಸೀಮಾ ಪುರುಷನಾಗಿ ಅಮರನಾದವನೇ. ಅನೇಕ ವರ್ಷಗಳು ಕಳೆದಮೇಲೆಯೂ ಆ ಕವಿಶ್ರೇಷ್ಠನು, ಅಂದು ೧೭೬೩ ರಲ್ಲಿ ಹರ್ಷದ ಮುಖ ಮುದ್ರೆಯಿಂದ ರಂಗ ವನ್ನು ಪ್ರವೇಶಿಸಿ ಓಡುತ್ತ ಹೋಗಿ ಪೀಠವನ್ನೇರಿ ಕೂತು, ಹಾರ್ಪಿಸ್‌ಕಾರ್ಡದ ಮೇಲೆ ಪುಟ್ಟ ಬೆರಳುಗಳನ್ನು ಆಡಿಸುತ್ತ ಉಜ್ಜ್ವಲ ಸ್ವರಗಳಲ್ಲಿ ತನ್ನ, ಹೃದಯ ವನ್ನೇ ತೋಡಿ ರಸದ ಓಕುಳಿ ಆಡಿದ, ಆ ೭ ವರ್ಷದ ಬಾಲಕನ ಉತ್ತಮ ರೇಶಿಮೆಯ ಉಡಿಗೆ ಅಂದಿನ ರೀತಿಯಂತೆ ತಲೆಗೆ ಕೃತ್ರಿಮ ಕೂದಲುಗಳ 'ಟೋಪು' ಟೊಂಕಕ್ಕೆ ರೀವಿಯ ಪುಟ್ಟದೊಂದು ಖಡ್ಗ ಇವುಗಳಿಂದ ಸಿಂಗಾರದ ಮೂರ್ತಿಯನ್ನೂ ಆ ಮೂರ್ತಿಯ ಸುತ್ತಲೂ ಅವನಿಂದಲೇ ನಿರ್ಮಿತವಾದ

ಪ್ರಭಾವಲಯದಂಥ ಮಧುರ ಸ್ವರಜಾಲವನ್ನೂ ಅಚ್ಚಳಿಯದ ಚಿತ್ರವಾಗಿ ನೆನಪಿಸಿ ಬಣ್ಣಿಸುತ್ತಿದ್ದನು !

ಕೇವಲ ಕಿನ್ನರಕಂಠ. ಅಸ್ಖಲಿತ ತಾಲಬದ್ಧತೆ, ಸ್ವರಸಂವಾದದ ಸಹಜವಾದ ಊಹಾಶಕ್ತಿ. ಈ ಗುಣತ್ರಯದೊಂದಿಗೆ ಕುಮಾರ ಮೊಝಾರ್ಟನು ಅನಿವಾರ್ಯ ವಾದ ಪೂರ್ಣ ಪ್ರಜ್ಞೆಯನ್ನು ಪಡದೇ ಹುಟ್ಟಿ ಬಂದಿದ್ದನು. ಇಲ್ಲವಾದರೆ ಈ ಹುಡುಗನು ೪ ವರ್ಷದ ವಯಸ್ಸಿಗೆ ಕ್ಲಾವ್ಹಿಯರ ವಾದ್ಯವನ್ನು (ಈ ವಾದ್ಯವು ಪಿಯಾನೋದ ಪೂರ್ವ ಸೂಚನೆ) ನುಡಿಸಲು ಕಲಿತನೆಂಬುವದು ಹೇಗೆ ? ೫ ವರ್ಷದವನಿದ್ದಾಗ ಒಂದು ಪಿಟೀಲನ್ನು ಎತ್ತಿಕೊಂಡು ಯಾವ ಶಿಕ್ಷಣಾಭ್ಯಾಸವಿಲ್ಲದೇ ತಂದೆ ಮತ್ತು ಒಬ್ಬ ಗೆಳೆಯನೊಂದಿಗೆ ನಿಂತು ಸ್ವರಪ್ರಸ್ತಾರದ ಹಾಳೆಯನ್ನು ಬರೇ ನೋಡುತ್ತ ಆರು ಕೃತಿಗಳನ್ನು ಬಾರಿಸಿ ತೋರಿಸಿದನೆಂಬುದರ ಅರ್ಥವೇನು ?

ಈ ಬಾಲಕನು ಸ್ವರಗಳ ಪ್ರಸ್ತಾರವನ್ನು ಬರೆಯಲೂ ಓದಲೂ ಕಲಿತದ್ದು ಸರಿಯಾಗಿ (ಅಕ್ಷರಗಳ) ಓದು-ಬರಹ ಬರುವ ಮೊದಲೇ ಸರಿ. ಅವನ ಪ್ರತಿಭೆಯ ಮೌಲಿಕತೆಯ ಮುದ್ರೆಯು ಅವನು ೬ ನೇ ವರ್ಷದಲ್ಲಿ ರಚಿಸಿದ ಕೃತಿಗಳಲ್ಲಿ ಕೂಡ ಕಳೆಗೊಂಡು ಎದ್ದು ಕಾಣುತ್ತದೆ. ಅಂದಿನ ಅವನ ಸ್ವರರಚನೆಗಳನ್ನು ಈಗ ನುಡಿಸಿದಾಗ ಆರಂಭದ ಚರಣಗಳ ಸಂಚಾರದಿಂದಲೇ ಇವು ಮೊಝಾರ್ಟನವೇ ಅಲ್ಲದೇ ಮತ್ತೊಬ್ಬನವು ಅಲ್ಲವೆಂದು ನಿಚ್ಚಳವಾಗಿ ಗುರುತಿಸುವಷ್ಟು ಗುಣರೂಪದ್ದಾಗಿವೆ ! ಲಲಿತ, ಖಚಿತ, ಉತ್ಸಾಹಪೂರ್ಣ, ಸಮರ್ಪಕ ಮತ್ತು ಹಿರಿದಾದ ರಸಿಕಸತ್ವದ ಕಾರ್ಯವೆಂದು ಸ್ಪಷ್ಟವಾಗುವಂತಿವೆ.

ಮೊಝಾರ್ಟನ ಮಿದುಳು ಬೆರಳು ಎರಡೂ ಕಲಾ ಪ್ರತಿಭೆಯಿಂದ ಸಮರ್ಥವಾಗಿದ್ದವು. ೧೦ ವರ್ಷದ ಮೊಝಾರ್ಟನು ಅಂದಿನ ಅತಿ ದೊಡ್ಡದಾದ ಅಷ್ಟೇ ಜಟಿಲ ಶ್ರುತಿ ತಂತ್ರದ ಜಗತ್ತಿನಲ್ಲಿಯೇ ಬಾರಿಸಲು ಕಠಿಣವೆನಿಸಿಕೊಂಡ ಅರ್ಗನ್ ವಾದ್ಯವನ್ನು ನುಡಿಸಿ ಹಾಲಂಡದ ಜನರಿಗೆಲ್ಲ ಅಚ್ಚರಿಗೊಳಿಸಿದನು. ೧೪ ನೇ ವರ್ಷ ಪ್ರಾಯದಲ್ಲಿ ಮೊಝಾರ್ಟನನ್ನು ಕ್ಯಾಥೊಲಿಕ ಜಗದ್ಗುರುಗಳ ವ್ಹ್ಯಾಟಿಕನ್ ಧರ್ಮಪೀಠದ ವೃಂದ ಗಾಯಕರು ಹಾಡುವ 'ಕರುಣಾಷ್ಟಕ'ವನ್ನು ಕೇಳಲು ಕರೆದೊಯ್ದರು. ಈ ಗೀತವು ಅತಿದೀರ್ಘವೂ ಕಠಿಣವೂ ಇತ್ತು. ಅದರ ಸ್ವರ ಪ್ರಸ್ತಾರವು ಕೂಡ ಅಷ್ಟೇ ಗೌಪ್ಯವಿಡಲಾಗುತ್ತಿತ್ತು. ವೃಂದದಲ್ಲಿಯ ಗಾಯಕರು ಕೂಡ ಅದನ್ನು ಬರೆದುಕೊಂಡರೆಂಬುದು ಕಂಡುಬಂದರೆ ಅವರಿಗೆ ಧರ್ಮದಿಂದಲೇ ಬಹಿಷ್ಕಾರವಾಗುತ್ತಿತ್ತು ! ಅಷ್ಟು ಭದ್ರವಾದ ದಕ್ಷತೆಯಿಂದ ಆ ಗೀತವನ್ನು

ಸಂರಕ್ಷಿಸಲಾಗಿತ್ತು. ಆದರೆ ಶತಾವಧಾನಿಯೂ ಶೀಘ್ರಪಾಠಿಯೂ ವಜ್ರಲೇಪಿಯಾದ ಸ್ಮರಣಶಕ್ತಿಯುಳ್ಳವನೂ ಆದ ಕುಮಾರ ಮೊಝಾರ್ಟನ ಕಿವಿಗಳಿಗೆ ಆ ರಕ್ಷಾಕವಚ ಏನು ಮಾಡೀತು ? ಕುಮಾರನು ಆ ಗೀತದ ಪ್ರತಿಯೊಂದು ಸ್ವರವನ್ನೂ ಕಿವಿಯಿಂದ ಕುಡಿದಂತೆ ಏಕಾಗ್ರವಾಗಿ ಕೇಳಿದನು. ಮನೆಗೆಬಂದು ಕೇವಲ ನೆನಪಿನಿಂದಲೇ ಅ ಗೀತದ ಸ್ವರ ಪ್ರಸ್ತಾರವನ್ನೆಲ್ಲ ಬರೆದು ತೆಗೆದನು. ಇನ್ನೊಮ್ಮೆ ಹೋಗಿ ಕೇಳಿ ಬರೆವ ಪ್ರಸ್ತಾರದೊಂದಿಗೆ ಹೊಂದಿಸಿ ನೋಡಿದಾಗ, ತಾನು ಮೂರು ತಪ್ಪುಗಳನ್ನು ಮಾಡಿರುವೆನೆಂದು ಅವನು ಮನಗಂಡು ಮನವಾರೆ ನೊಂದುಕೊಂಡನು ! ಅವನ ಈ ಸಾಹಸವನ್ನು ಕೇಳಿ ಪೋಪನು (ಕ್ಯಾಥೊಲಿಕ್ ಜಗದ್ಗುರುವು) ಅವನಿಗೆ ಧರ್ಮ ಬಹಿಷ್ಕಾರದ ಶಿಕ್ಷೆ ಕೊಡಲಿಲ್ಲ. ನೈಟ್ ಆಫ್‌ದ ಗೋಲ್ಡನ್ ಸ್ವರ್ ಎಂಬ ಉನ್ನತ ಪದವಿಯನ್ನು ಕೊಟ್ಟು ಗೌರವಿಸಿದನು !

ಮೊ ಝಾ ರ್ಟ ನೆಂ ಬ ಈ ಸೃಷ್ಟಿವೈಚಿತ್ರ್ಯವುಳ್ಳ ತಂದೆಯು ಲಿಯೊಪೋಲ್ಡ್ ಮೊಝಾರ್ಟ. ಆಸ್ಟ್ರಿಯಾದಲ್ಲಿ ಸಾಲ್‌ಝಬರ್ಗ ಎಂಬಲ್ಲಿ ಅವನು ಎರಡನೆ ತರಗತಿಯ ಪಿಟೀಲುವಾದಕನೂ ಒಂದನೆ ತರಗತಿಯ ಸಂಗೀತಶಿಕ್ಷಕನೂ ಆಗಿದ್ದನು. ಮಗನ ಪ್ರತಿಭೆಯು ಇದುರಿಗೆ ಅವನು ಯಾವಾಗಲೂ ತಗ್ಗುತಿದ್ದರೂ ಆ ಶಕ್ತಿಯನ್ನು ತನ್ನ ಲಾಭಕ್ಕೆ ದುಡಿಸಿಕೊಳ್ಳುವದಕ್ಕೆ ಆವನು ಎಂದೂ ತಪ್ಪುತ್ತಿದ್ದಿಲ್ಲ. ಕುಮಾರ ಮೊಝಾರ್ಟನನ್ನು ಅವನ ಎಳೆಯ ತಂಗಿಯೊಡನೆ–ಆಕೆ ಪಿಯಾನೊ ನುಡಿಸುತ್ತಿದ್ದಳು–ಈ ತಂದೆಯು ಯುರೋಪದಲ್ಲೆಲ್ಲ ಅಲೆದಾಡಿಸಿದನು. ಸಂಗೀತದಿಂದ ಹಣ ಸೂರೆಮಾಡಲಿಕ್ಕೆ ಈ ಮಕ್ಕಳು ಫ್ರಾನ್ಸ ಇಂಗ್ಲಂಡುಗಳ ಅರಸರೆದುರಿಗೆ ವಾದನ ವೈಖರಿಯನ್ನು ಪ್ರದರ್ಶಿಸಿದರು. ಆಸ್ಟ್ರಿಯಾದ ಚಕ್ರವರ್ತಿಯ ಕುಟುಂಬದೆದುರಿಗೂ ಅವರ ಕಾರ್ಯಕ್ರಮವೆಸಗಿತು. ಅಲ್ಲಿ ಹೋದಾಗ ಕುಮಾರ ಮೊಝಾರ್ಟನು ಅರಮನೆಯ ನಯವಾದ ನೆಲದಮೇಲೆ ಕಾಲುಜಾರಿ ಬೀಳುತ್ತಿದ್ದನು. ಆದರೆ ಅಲ್ಲಿಯ ಒಬ್ಬ ಹುಡುಗಿಯು ಅವನಿಗೆ ನೆರವು ಕೊಟ್ಟು ನಿಲ್ಲಿಸಿ ಸಂತೈಸಿದಳು. ಅವಳ ಸಹಾಯಕ್ಕೆ ಆಭಾರಿಯಾಗಿ ಪ್ರತ್ಯುಪಕಾರವೇನಾದರೂ ಮಾಡಬೇಕಲ್ಲ ! ಹುಡುಗನು ಕೂಡಲೇ ಆಕೆಗೆ ಅಶ್ವಾಸನವಿತ್ತನು– ದೊಡ್ಡವನಾದಮೇಲೆ ನಿನ್ನನ್ನೇ ಮದುವೆಯಾಗುವೆನೆಂದು ! ಆದರೆ ಆ ಹುಡುಗಿಗೆ–ಮೇರಿ ಎಂತೊನೀತ್‌ಳಿಗೆ–ದೈವವು ಬೇರೆಯೇ ಭವಿಷ್ಯವನ್ನು ತೆರೆಯಿತು !

ತೂಗಾಡಿ ಗಡಗಡಿಸುವ 'ಸಾರೋಟು' ಗಾಡಿ, ಕೆಸರು ಧೂಳಿಗಳ ದಾರಿ, ಹಾಳು ಸುರಿವ ಹೋಟ್ಲುಗಳು, ಮುಗಿಯದ ಕಷ್ಟದ ಕಠಿಣ ಶ್ರಮದ ದೀರ್ಘ ತಾಸುಗಳು–ಇವೆಲ್ಲ ಪ್ರತಿಕೂಲಗಳು ಕೂಡಿಯೇ ಕಾಡಿದರೂ ಕುಮಾರ ಮೊಝಾರ್ಟನ

ಸದಾ ಪ್ರಫುಲ್ಲವಾದ ಮುಖವು ಬಾಡುತ್ತಿದ್ದಿಲ್ಲ. ಅದರಲ್ಲಿಯ ಉಲ್ಹಾಸದ ಪ್ರಭೆಯು ಆರುತ್ತಿದ್ದಿಲ್ಲ. ಅವನು ರಂಗಭೂಮಿಗೆ ಬಂದನೆಂದರೆ ಹರ್ಷಗೊಂಡ ಪ್ರೇಕ್ಷಕ ಸಮುದಾಯವು ವಾದನ ಮುಗಿದರೂ ಕಾಲು ಕೀಳುತ್ತಲೇ ಇರಲಿಲ್ಲ. ಅವರ ಸಂಪ್ರೀತಿಗಾಗಿ ಆ ದಾಕ್ಷಿಣ್ಯಮಯ ಬಾಲಕನು ಮತ್ತೆ ಮತ್ತೆ ಸಂಗೀತ ನುಡಿಸುತ್ತ ಮಂತ್ರದ ಬೂದಿಯೂದಿ ಬೀಸಿದಂತೆ ತನ್ನ ಕಲಾವೈಖರಿಯ ಮಾಯಾ ಜಾಲದಲ್ಲಿ ಅವರೊಂದಿಗೆ ತನ್ನನ್ನು ಸೆರೆಹಿಡಿದು ರಾಗಾಲಾಪಗಳ ಮೇಲೆ ರಾಗಾಲಾಪಗಳನ್ನು ರಚಿಸಿ ಬಾರಿಸುತ್ತ ಹೂಗಳ ಮೇಲೆ ಕುಣಿಯುವ ತುಂತುರುಗಳಂತೆ ಸ್ವರಗಳ ಸುರಿಮಳೆಯನ್ನು ಕರೆಯುತ್ತ ಸ್ವರಾಕೃತಿಗಳಿಗೆ ಸ್ವರಾಕೃತಿಗಳನ್ನು ಪೋಣಿಸುತ್ತ ವಾದನವನ್ನು ಮುಂದುವರಿಸುತ್ತಲೇ ಕೂಡ್ರುವನು. ಆಗ ಗಾಬರಿಯಾಗಿ ತಂದೆಯು ರಂಗಕ್ಕೆ ನುಗ್ಗಿ ಕಾರ್ಯಕ್ರಮವನ್ನು ಕಡ್ಡಾಯದಿಂದ ಮುಕ್ತಾಯಗೊಳಿಸ ಬೇಕಾಗುತ್ತಿತ್ತು. ಆಗ ಸಭಿಕರ ಹರ್ಷದ ಕಡಲು ಮೇರೆವರಿದು ಮಾಡುವ ಕೋಲಾಹಲಕ್ಕೆ ಕೊನೆಯೇ ಇರುತ್ತಿದ್ದಿಲ್ಲ. ಬಾಲಕನನ್ನು ಆ ಸಭ್ಯ ಸ್ತ್ರೀ ಪುರುಷರು ಎತ್ತಿ ಮುದ್ದಾಡಿ ಉಲ್ಹಾಸದ ಉಬ್ಬರದಲ್ಲಿ ಉಸಿರು ಗಟ್ಟುವಂತೆ ಮಾಡುತ್ತಿದ್ದರು. ಆದರೆ ಇಷ್ಟೆಲ್ಲ ಮಿತಿಇಲ್ಲದ ಅತಿರೇಕದ ಪ್ರೀತಿ ಪ್ರಶಂಸೆಗಳ ಹುಚ್ಚು ಹಾವಳಿಯಲ್ಲಿ ಸಿಕ್ಕರೂ ಕುಮಾರ ಮೊಝಾರ್ಟನ ಸಹಜ ಸುಂದರವಾದ ವಿನಯ ಮಾಧುರ್ಯವು ಮುದ್ದುಗೆಟ್ಟು ಹೋಗಲಿಲ್ಲ.

ಇಂಥ ಸಂಗೀತದ ಜೈತ್ರ-ಯಾತ್ರೆಗಳಿಂದ ಬಂದ ಆದಾಯವು ಎಷ್ಟೇ ವಿಪುಲ ವಾದರೂ ಅವುಗಳ ವೆಚ್ಚದ ಮಾನದಿಂದ ಉಳಿತಾಯವೇನೂ ಆಗುತ್ತಿದ್ದಿಲ್ಲ. ಪ್ರತಿಷ್ಠಿತ ಶ್ರೋತೃವೃಂದವು ಹಣ ಕೊಡುತ್ತಲೇ ಇದ್ದಿಲ್ಲ. ಬೆಳ್ಳಿಯ ಕಟ್ಟಿನ ನಸ್ಯದ ಡಬ್ಬಿ (ತಂದೆಗೆ), ಬೂಟಿನ 'ಚಕ್ಕಲು' ಚಿಕ್ಕಪುಟ್ಟ ಆಭರಣಗಳು ಇಂಥ ಅಲ್ಪ ಉಪಚಾರಗಳಿಂದಲೇ ಅವರು ತಮ್ಮ ಪುರಸ್ಕಾರವನ್ನು ವ್ಯಕ್ತಮಾಡುತ್ತಿದ್ದರು. ತಂದೆ ಮೊಝಾರ್ಟನು ಒಳ್ಳೇ ವಿನಯದಿಂದ ತಲೆಬಾಗಿ ಅವನ್ನೆಲ್ಲ ಸ್ವೀಕರಿಸುತ್ತಿದ್ದನು; ಆದರೆ ಮಕ್ಕಳನ್ನು ಕಟ್ಟಿಕೊಂಡು ಲಗುಬಗೆಯಿಂದ ಬೇರೆಡೆಗೆ ಹೋಗಿ ಅಲ್ಲಿ ಅಷ್ಟು ಪ್ರತಿಷ್ಠಿತರಲ್ಲದ (ಆದರೂ ಊಟದಮಟ್ಟಿಗೆ ಹಣ ಹುಟ್ಟಿಸ ಬಹುದಾದ) ಜನರಮುಂದೆ ಹಸಿದ ಹೊಟ್ಟೆ, ದಣಿದ ಮೈಯಿಂದಾದರೂ ಮತ್ತೊಂದು ಕಾರ್ಯಕ್ರಮವನ್ನು ಆಡಿಸುತ್ತಿದ್ದನು !

ಕುಮಾರ ಮೊಝಾರ್ಟನಿಗೆ ತಂದೆಯೇ ಗುರುವಾದನು, ಶಿಕ್ಷಕನಾದನು. ವೊಲ್ಫ್ ಗ್ಯಾಂಗನು ಶಾಲೆಗೆ ಹೋಗಲೇ ಇಲ್ಲ. ಆದಾಗ್ಯೂ ಎಲ್ಲ ಬಗೆಯ ವಿದ್ಯೆಯಲ್ಲಿ ಅವನು ತನ್ಮಯನಾಗಿ ದುಡಿದನು. ವಿಶೇಷವಾಗಿ ಅಂಕಗಣಿತವು ಅವನನ್ನು

ಮೋಹಿಸಿತು. ಮೇಜು–ಗೋಡೆ–ನೆಲ ಸಿಕ್ಕ ಸಮಪಾತಳಿಗಳ ಮೇಲೆಲ್ಲ ಆತನು ಲೆಕ್ಕಗಳನ್ನು ಖಡುವಿನಿಂದ ಬಿಡಿಸಿಡಹತ್ತಿದನು. ಬದುಕಿನ ಪ್ರತಿ ಪ್ರಶ್ನೆಗೂ ಅನೇಕ ಉತ್ತರಗಳು ! ಅವೂ ಅನೇಕ ಸಲ ತಪ್ಪುವಂಥವು ! ಆದರೆ ಈ ಗಣಿತಶಾಸ್ತ್ರದ ಅದ್ಭುತವೆಂದರೆ ಒಂದೇ ಒಂದು ಸಮರ್ಪಕವೂ ಪರಿಪೂರ್ಣವೂ ಆದ ಉತ್ತರವನ್ನು ಇದರಿಂದ ಪಡೆಯಲು ಬರುತ್ತಿತ್ತು ! ಈ ಅದ್ಭುತ ಮೊಝಾರ್ಟನಿಗೆ ರಮ್ಯ ವೆನಿಸಿತು. ಅವನ ಸಂಗೀತ ಕೃತಿಗಳ ಸ್ವರವ್ಯವಸ್ಥೆಯು ಅಷ್ಟೊಂದು ಉಚಿತವೂ ಖಚಿತವೂ ಪೂರ್ಣವೂ ಪೂರ್ತಿ ತೃಪ್ತಿಕರವೂ ಆದುದರ ರಹಸ್ಯವು ಅವನು ಅರಳಿಸಿಕೊಂಡ ಗಣಿತ ಬುದ್ಧಿಯಲ್ಲಿ ಇದೆ. ಆದರೆ ಮೊಝಾರ್ಟನ ಸಂಗೀತವು ಬರೇ ಗಣಿತದ ಡೊಂಬರ ಮಣಿತವಲ್ಲ. ಸ್ವರ–ಮಾತ್ರೆಗಳ ಕಾಗುಣಿತವಲ್ಲ. ಅವನ ಸಂಗೀತದಲ್ಲಿ ಪ್ರಸಾದವಿದೆ. ಕೋಮಲ ಕಾಂತಿ ಇದೆ, ಸೊಗಸಿನ ಆಲ್ಹಾದವಿದೆ. ಅದನ್ನು ಕೇಳಿ ಸವಿಯುವದು ಎಷ್ಟು ಉತ್ತೇಜಕವೋ ಅಷ್ಟೇ ಸುಲಭವಾಗಿದೆ.

ಮೊಝಾರ್ಟನ ಸಂಗೀತದಲ್ಲಿ ಕೆಲವು ಕೃತಿಗಳು 'ವಿಪರೀತ ಆಧುನಿಕ, ವಿಪರೀತ ಪ್ರಾಗತಿಕ' 'ತೀರ ಹೊಸ ಪರಿಯ ರೂಪ'ವೆಂದು ಅವನ ಸಮಯದ ಜನವು ಅಂದಿತು. ಆದರೆ ಇಂದಿಗೆ ಒಂದು ಮೊಝಾರ್ಟ ಕೃತಿಯನ್ನು ಹೊಸತಾಗಿ ಕೇಳಿದವರಿಗೆ ಅದನ್ನು ಜೀವಮಾನವೆಲ್ಲ ಕೇಳಿದಂತೆ, ಕೇಳಿ ಮೆಚ್ಚಿದಂತೆ ಅನಿಸುತ್ತದೆ. ಇದರ ಇಂಗಿತವೇನೆಂದರೆ ಇಂದಿನ ಮತ್ತು ಇದಕ್ಕೆ ಹತ್ತಿರದ ಹಿಂದಿನ ಪಾಶ್ಚಾತ್ಯ ಸಂಗೀತ ಪರಂಪರೆಯು ಮೊಝಾರ್ಟನ ಪ್ರಭಾವಕ್ಕೆ ಆಳವಾಗಿ ಒಳಪಟ್ಟಿದೆ. ಅವನ ನಂತರದ ಅನೇಕ ಶ್ರೇಷ್ಠ ಸಂಗೀತಗಾರರ ಮೇಲೆ ಅವನ ವರ್ಚಸ್ಸವು ಅಳಿಸದಂತೆ ಬಿದ್ದಿದೆ. ಬಿದೋವಿನ್‌ನು ಅವನ ಸಂಗೀತವನ್ನು ಸತತವಾಗಿ ಅಭ್ಯಸಿಸಿದನು. ಹಾಯಿಡ್ನನು ಅವನ ಸಮಕಾಲಿ, ಒಡನಾಡಿ ಆಗಿದ್ದರೂ ಗೆಳೆಯನನ್ನು ಹೊಗಳಿ ಅನುಕರಣರೂಪದಿಂದ ಖ್ಯಾತಗೊಳಿಸಿದನು. ಶೊಪೆನ್ ಎಂಬ ಇನ್ನೊಬ್ಬ ಶ್ರೇಷ್ಠ ಸಂಗೀತಗಾರನು ಮೊಝಾರ್ಟನ ಸ್ಫೂರ್ತಿಯಿಂದಲೇ ಘನವಾಗಿ ಪ್ರೇರಿತ ನಾಗಿದ್ದನು. 'ನನ್ನ ಸ್ಮರಣಾರ್ಥವಾಗಿ ಮೊಝಾರ್ಟನ ಕೃತಿಗಳನ್ನು ನುಡಿಸಿರಿ' ಎಂದು ಅವನು ಸಾಯುವಾಗ ನುಡಿದನು ! ದುರಹಂಕಾರಿಯಾದ ವಾಗ್ನರನು ಕೂಡ ಮೊಝಾರ್ಟನಿಗೆ ತಲೆಬಾಗಿದನು. ಇನ್ನೊಬ್ಬ ಜರ್ಮನ್ ಕೃತಿಕಾರ ಸ್ಟ್ರಾಸ್‌ನ ಉಲ್ಹಾಸಗೀತಗಳ ಸ್ವರಾಕೃತಿಗಳಲ್ಲಿ ಶ್ಯೂಬರ್ಟನ ಹಲವು ಮಹಾಕೃತಿಗಳಲ್ಲಿ ವೋಲ್ಫಗ್ಯಾಂಗ ಮೊಝಾರ್ಟನ ಪ್ರತಿಭೆಯಿಂದ ಚಿಮ್ಮಿದ ಸ್ವರಗಂಗೆಯ ಶುದ್ಧ ಸೆಲೆಯೇ ಜುಳು ಜುಳು ಪುಟಿದು ಹರಿಯುತ್ತ ಸಾಗಿರುವದನ್ನು ಗುರುತಿಸ ಬಹುದು ಎಂದಿದ್ದಾನೆ.

ರಾಗಮಾಲಿಕೆಗಳು ಅವನ ಬೆರಳುತುದಿಗಳಿಂದ ಪುಟಿದು ಬರುತ್ತಿದ್ದವು. ತೂಗು

ಮಂಚದ ಮೇಲೆ ಕೂತುಕೊಂಡು ಮೊಣಕಾಲುಗಳ ಮೇಲೆ ಬೆರಳುಗಳನ್ನು ತಟ್ಟಿ, ತಾಲಹಾಕುತ್ತ; ಮೋದದಿಂದ ಮೋರೆ ಅರಳಿಸಿಕೊಂಡು ಅವನು ಧ್ಯಾಸಮಗ್ನನಾದಾಗ ಅವನ ತಲೆಯಲ್ಲಿ ರಾಗಾಕೃತಿಯು ರೂಪಗೊಳ್ಳುತ್ತಿತ್ತು ! ಆಗ ಜಗ್ಗನೆ ಎದ್ದು ಕೈಗೆ ಸಿಕ್ಕ ಕಾಗದದ ತುಂಡಿನ ಮೇಲೆ ಆ ಕೃತಿಯ ಪ್ರಸ್ತಾರವನ್ನು ಬರೆದಿಡುತ್ತಿದ್ದನು. ೧೪ ವರ್ಷದ ವಯಸ್ಸಿಗೆ ಅವನ ಹೊಚ್ಚ ಹೊಸ ಗೀತ ನಾಟಕವನ್ನು ಮಿಲಾನ ಪಟ್ಟಣದಲ್ಲಿ ಆಡಿ ತೋರಿಸಲಾಯಿತು. ಅದಕ್ಕಾಗಿ ಯುರೋಪದಲ್ಲಿ ದೊರೆತಷ್ಟು ದೊಡ್ಡ ವಾದ್ಯ ವೃಂದವನ್ನು ಮೇಳವಿಸಲಾಗಿತ್ತು. ಪ್ರಯೋಗವು ಅವನ ಸ್ವಂತ ಸಂಚಾಲನೆಯಲ್ಲಿ ನಡೆಯಿತು. ೧೫ ನೇ ವರ್ಷ ವಯಸ್ಸಿಗೆ ಅವನು ೧೪ ಕೃತಿಗಳ ಮತ್ತು ೬ ಗೀತ ನಾಟಕಗಳ ರಚನಾಕಾರನಾದನು.

೧೫ ರಿಂದ ೨೧ ವರ್ಷ ಪ್ರಾಯದಲ್ಲಿ ಅವನು ಸಂಗೀತರಚನೆಯ ಅತ್ಯಂತ ಕ್ಲಿಷ್ಟವೂ ಕಷ್ಟಕುಶಲವೂ ಆದ ಕ್ಷೇತ್ರದಲ್ಲಿ ನುಗ್ಗಿ ನಿಂತನು. ಆ ಕ್ಷೇತ್ರದಲ್ಲಿ ಹೆಜ್ಜೆ ಇಡುವದೆಂದರೇ ಅಲ್ಲಿಯ ಹಳೆಯ ಹಿರಿಯ ಕಲಾವಿದರೊಂದಿಗೆ ಹೋಲಿಸಿಕೊಂಡಂತೆ ಅನಿಸುತಿತ್ತು. ಆದರೆ ಅಂಥಲ್ಲಿ ಕೂಡ ಅವನ ಪ್ರತಿಭೆಯು ನಿರಾತಂಕವಾಗಿ ಸಂಚರಿಸಿ ಪ್ರಭುತ್ವವನ್ನು ಸ್ಥಾಪಿಸಿತು. ಭೂಮಿಯು ಕಡೆಗೆ ನುಗ್ಗಿ ಬರುತ್ತಿರುವ ಬಾನಿನ ಚಿಕ್ಕಿಯು ಹೆಚ್ಚು ಹೆಚ್ಚು ಪ್ರಕಾಶಮಯುವಾಗಿ ಕಾಣುವಂತೆ ಅವನ ಪ್ರತಿಭೆಯು ಗುಣಗಳು ಪ್ರತಿವರ್ಷವೂ ಮತ್ತಿಷ್ಟು ಉಜ್ವಲವಾಗಿಯೇ ಶೋಭಿಸಿದವು. ನಿಜವಾಗಿಯೂ ನ್ಯಾಯ ಬುದ್ಧಿಯಿಂದ, ಅಂದಿನ ಆಸ್ಟ್ರಿಯಾದ ಚಕ್ರವರ್ತಿ ೨ ನೇ ಜೊಸೆಫ್‌ನು ಮೊಝಾರ್ಟನಿಗೆ ಸರ್ವಶ್ರೇಷ್ಠವಾದ ಸಂಗೀತಾಧಿಕಾರಿಯ ಉನ್ನತತಮ ಪದವಿಯನ್ನು ತಾನಾಗಿ ಅರ್ಪಿಸಬೇಕಿತ್ತು.

ಆದರೆ ಹಾಗೆ ಆಗಲಿಲ್ಲ. ಅದಕ್ಕೆ ವಿಪರೀತವೇ ಆಯಿತು. ಆಸ್ಥಾನ ವಿದ್ವಾಸರಾದ ಕ್ಷುದ್ರಬುದ್ಧಿಯ ಕುಹಕರ ಭಯದ ಮತ್ತು ಅಸೂಯೆಯ ಪ್ರೇರಣೆಯಿಂದ ಮೊಝಾರ್ಟನ ಮಹಿಮಾಮಯ ಪ್ರತಿಭೆಯನ್ನು ಚಕ್ರವರ್ತಿಯು ಉಪೇಕ್ಷಿಸಿದನು, ತಿರಸ್ಕರಿಸಿದನು, ಹಳಿದು ಹೀಯಾಳಿಸಿದನು. ವಿರೋಧಿಗಳಾದ ಸಂಗೀತಗಾರರು ಚಕ್ರವರ್ತಿಯ ಇದುರಿಗೆ ಅವನ ಕೃತಿಗಳನ್ನು ಪ್ರದರ್ಶಿಸಲು ಬಿಡುತ್ತಿದ್ದಿಲ್ಲ. ಅಂಥ ಪ್ರದರ್ಶನದ ಪ್ರಯೋಗಗಳು ನಡೆದರೂ, ವಾದಕರಿಗೆ ಲಂಚ ತಿನ್ನಿಸಿ ಸಂಗೀತವನ್ನು ಕೆಡಿಸದೇ ಬಿಡುತ್ತಿದ್ದಿಲ್ಲ ! ಈಗಿನಂತೆ ಅಂದು 'ಕಾಪಿರೈಟ' ಕಾಯಿದೆ ಇದ್ದಿಲ್ಲ. ಕೃತಿಯ ಸರ್ವ ಹಕ್ಕುಗಳನ್ನು ಕರ್ತೃವಿಗಾಗಿ ಕಾದಿಡುವ ಕಟ್ಟಳೆಯಿದ್ದಿಲ್ಲ. ಒಬ್ಬ ಸಂಗೀತಗಾರನು ಒಂದು ಒಳ್ಳೇ ಕೃತಿಯನ್ನು ರಚಿಸಿ ನುಡಿಸಿದರೆ ತೀರಿತು. ಅದನ್ನು ಕೇಳಿದ ಕಿಡಿಗೇಡಿ ಕೆಳತರಗತಿಯ ವಾದಕರೆಲ್ಲ ಅವನ್ನು ಸ್ವಚ್ಛಂದವಾಗಿ

ಅನುಕರಿಸಿ ಬಾರಿಸಿ ತಮ್ಮದೇ ಎಂದು ಪ್ರಚಾರ ಮಾಡುತ್ತಿದ್ದರು. ಅಂದಿನ ಮಟ್ಟಿಗೆ ಸಂಗೀತಗಾರನಿಗೆ ಭದ್ರತೆಯ ಸಂರಕ್ಷಣೆ ಎಂದರೆ ಒಬ್ಬ ಶ್ರೀಮಂತನ ಇಲ್ಲವೇ ಸಂಸ್ಥಾನಿಕನ ಆಶ್ರಯದಲ್ಲಿ ಮನ್ನಣೆ ದೊರೆಯುವದು. ಮೊಝಾರ್ಟನಿಗೆ ಅಂತಹದೊಂದು 'ಮನ್ನಣೆ'ಯೂ ಲಭಿಸಿತ್ತು. ಅಲ್ಲಿ ವರ್ಷಕ್ಕೆ ೬೭ ಡಾಲರಿನಷ್ಟು ಬೆಲೆಯ ವೇತನ. ಅವನ ಆಶ್ರಯದಾತನು ಒಬ್ಬ ಹಿರಿಯ ಧರ್ಮಾಧಿಕಾರಿ, ಸಾಲ್‌ಝಬರ್ಗದ ಆರ್ಚ ಬಿಷಪ್‌ನು. ಅವನ ಪರಿವಾರವನ್ನು ಸೇರಿದಾಗ ಮೊಝಾರ್ಟನು ಅವನ ಆಳು ಮಕ್ಕಳೊಂದಿಗೆ ಕೂತು ಉಣ್ಣಬೇಕಿತ್ತು; ಹಾಗೆ ಹಂಗಿಸ ಮಾನಗೇಡಿ ಕೂಳು ಹಾಕಿ ನಡೆಯಿಸಿಕೊಂಡರೇ ಈ ಸಂಗೀತಗಾರನಿಂದ ತಕ್ಕ ಸೇವೆ ಪಡೆಯಬಹುದೆಂದು ಆ ಧರ್ಮಾಧಿಕಾರಿ ತಿಳಿದಿದ್ದನು. ಇಂಥ ಬಾಳಿಗೆ ಹೇಸಿ, ಮೊಝಾರ್ಟನು ಅಲ್ಲಿಂದ ಹೊರಬಿದ್ದು ಬಂದು, ವಿಯೆನ್ನಾದಲ್ಲಿ ಸ್ವತಂತ್ರ ಕಲಾವಿದನೆಂದು ದುಡಿಮೆಗೆ ತೊಡಗಿದನು.

ಈ ನಡುವೆ, ಕ್ರಿಸ್ತೊಫ್ಲೋರ್ ವ್ಹಾನ್‌ಗ್ಲಕ್ ಎಂಬ ವಿಖ್ಯಾತ ಆಸ್ಥಾನ ವಿದ್ವಾನನು ಸತ್ತನು. ಅವನ ಅಧಿಕಾರವು–'ಅಂತಃಪುರದ ಸಂಗೀತಗಾರ'ನೆಂಬ ಕೆಲಸವು–ಮೊಝಾರ್ಟನಿಗೆ ದೊರೆಯಿತು. ಆದರೆ ಸಂಬಳವು ಮಾತ್ರ ಗ್ಲಕ್‌ನ ವರ್ಷಾಸನದ ಅರ್ಧದಷ್ಟೇ ಸಿಕ್ಕಿತು. ಆದರೂ ಅವನು ಇಷ್ಟು ಸಂಬಳಕ್ಕಾಗಿ ಕೂಡ ಕೃತಜ್ಞನೂ ಕೃತಕೃತ್ಯನೂ ಆದನು. ಏಕಂದರೆ ಈ ಮೊದಲೇ ಆತನು ತೀರ ತಾರುಣ್ಯದಲ್ಲಿ, ತೀರ ತ್ವರೆಯಿಂವ ಮದುವೆ ಮಾಡಿಕೊಂಡಿದ್ದನು. ಅದೇ ತ್ವರೆಯಲ್ಲಿಯೇ ನಿಯಮಿತವಾಗಿ ಮಕ್ಕಳು ಮನೆತುಂಬ ತೊಡಗಿದ್ದವು.

ಅವನ ಮಡದಿಯು ಸಂಗೀತದಲ್ಲಿಯೇ ಹುಟ್ಟಿ ಬೆಳೆದು ಉಸುರಾಡಿಸಿದವಳು. ಆಕೆಯ ಹೆಸಗು ಕಾನ್‌ಸ್ಟನ್ಸ ವೆಬರ್. ಅವಳಿಗೆ ಇನ್ನೂ ಮೂವರು ಸೋದರಿಯರಿದ್ದರು. ಅವರೆಲ್ಲರೂ ಚಲುವೆಯರು, ಚಪಲೆಯರು; ಎಲ್ಲರೂ ಸಂಗೀತದಲ್ಲಿ ಚದುರೆಯರು. ಅವನ ಕಣ್ಣಿಗೆ ಬಿದ್ದಾಗ ಕಾನ್‌ಸ್ಟನ್ಸ ೧೨ ವರ್ಷದ ನೆವವಿಲ್ಲದೇ ನಗುವ ಕನ್ನಿಕೆ. ಕಣ್ಣಿಗೆ 'ಬಿದ್ದಳೆಂ'ದರೆ ನಿಜವಾಗಿಯೂ ಆಕೆ ಅವನ ದೃಷ್ಟಿಯ ದಾರಿಯಲ್ಲಿ ಅಡ್ಡ ಬಂದಿದ್ದಳು ! ಏಕಂದರೆ ಅವನ ಕಣ್ಣು ಆಕೆಯ ೧೫ ವರ್ಷ ಪ್ರಾಯದ ಅಕ್ಕನ ಕಡೆಗೇ ಹಾಯ್ದಿತ್ತು. ಅಕ್ಕನ ಹೆಸರು ಎಲೊಯ್‌ಸಿಯಾ; ಅವಳದು ಆಕರ್ಷಕ ಆಕೃತಿ, ಹಾಡುಗಾರಿಕೆಯ ಸೊಗಸಾದ ಕಂಠ. ಎಲೊಯ್‌ಸಿಯಾಳನ್ನೇ ಆತನು ಲಗ್ನವಾಗಲಿದ್ದನು. ಆದರೆ ಆಗ ಆತ ನಿರುದ್ಯೋಗಿ; ಗಂಡನಾಗಲು ನಿರುಪಯೋಗಿ. ಪ್ಯಾರೀಸಿಗೆ ತನ್ನ ಅದೃಷ್ಟವನ್ನು ಪರೀಕ್ಷಿಸಿ ಬರಲು ಹೊರಟನು. ಅವನು ಕೆಲಸಕ್ಕೆ ನಿಂತು ಗಳಿಸುವ ಗಂಡಸಾಗುವನಕವೂ ತಾನು

ತಡೆಯುವೆನೆಂದು ಎಲೊಯ್‌ಸಿಯಾ ವಚನವಿತ್ತಳು. ಭಾಗ್ಯ ತೆರೆಯದೇ ಪ್ಯಾರೀಸಿನಿಂದ ಮೊಝಾರ್ಟನು ಮರಳಿದನು. ಆದರೆ ಆ ನಡುವೆ ಆಕೆಯು ಗೀತನಾಟಕ ಸಂಸ್ಥೆಯಲ್ಲಿ ಯಾರೊಡನೆಯೋ ತನ್ನ ಭಾಗ್ಯವನ್ನು ಪರೀಕ್ಷಿಸಿ ಪಟವನ್ನು ಗೆದ್ದಿದ್ದಳು. 'ನೀನು ಮೊಝಾರ್ಟನನ್ನು ಏಕೆ ಬಿಟ್ಟುಕೊಟ್ಟೆ ?' ಎಂದು ಯಾರೋ ಆಕೆಯನ್ನು ಕಾಲಾಂತರದಮೇಲೆ ಕೇಳಿದರಂತೆ. ಆಗ 'ಅವನು ತೀರ ಚಿಕ್ಕ ಮನುಷ್ಯನೆಂದು ನನಗೆ ಅನಿಸಿತು' ಎಂದಳಂತೆ ಆ ಚಂಚಲೆ !

ಅಕ್ಕ ಒಗೆದು ಒಡೆದು ಚೂರುಮಾಡಿದ ಮೊಝಾರ್ಟನ ಹೃದಯದ ಹೋಳುಗಳನ್ನು ತಂಗಿ ಕಾನ್‌ಸ್ಟನ್ಸ ತನ್ನ ಅಕ್ಕರೆಯಿಂದ ಕೂಡಿಸಿ ಪ್ರೇಮದ ಪಾತ್ರೆಯಾಗಿ ಎರಕಹೊಯ್ದಳು. ಇದು ಮೊಝಾರ್ಟನ ಪಿತೃ ದೈವತಕ್ಕೆ ಸರ್ವಥಾ ಸೇರಲಿಲ್ಲ. ಆದರೆ ತಂದೆಯೆಂಬ ತೊಂದರೆಯನ್ನು ಲೆಕ್ಕಿಸದೆ ಮೊಝಾರ್ಟನು ಕಾನ್‌ಸ್ಟನ್ಸಳನ್ನು ಹಟದಿಂದ ಮದುವೆಯಾದನು. ಅವಳನ್ನು ಅವನು ಮುದ್ದಿನಿಂದ ಕರೆಯುವದು 'ಸ್ಟಾಂಝೀ' ಎಂದು. ವಿಯೆನ್ನಾದ ವನಗಳಲ್ಲಿ ವಿಹಾರಕ್ಕಾಗಿ ಹೋಗಿ ಹಾಡಿ ಕುಣಿದು ಕಾಲಕಳೆಯಲು 'ಸ್ಟಾಂಝೀ' ಆದರ್ಶ ಜತೆಗಾರ್ತಿ. ಆಕೆಯ ಕೆಂದ ಕುರುಳು, ಇಂಚರದ ಕೊರಳು, ಮಾಟದ ಮೈಕಟ್ಟು, ಮುದ್ದು ಮುದ್ದಾದ ಮಾತು, ಇವೆಲ್ಲವುಗಳಿಗೂ ಮೊಝಾರ್ಟನು ತನುಮನದಿಂದಲೂ ಮಾರಿಹೋದ ! ಆದರೆ ಮಡದಿಯೆಂಬ ರೀತಿಯಲ್ಲಿ ಆಕೆಯಲ್ಲಿ ಮನೆವಾರ್ತೆಯ ಹೊಣೆ ನಡೆಯಿಸುವ ಯಾವ ಗುಣವೂ ಇದ್ದಿಲ್ಲ. ಬಡತನ ಮತ್ತು ಮಕ್ಕಳ ಹೆರಿಗೆ ಇವೆರಡೂ ಗಾಲಿಗಳ ನಡುವೆ ಸಿಕ್ಕು ನುಗ್ಗು ನುಗ್ಗಾಗುತ್ತಿರುವ ನಗು ನಲುವಿನ ಜೀವಿಯಾದ ಆಕೆಯ ಕಸಿವಿಸಿಯನ್ನು ಕಂಡು ಮೊಝಾರ್ಟನ ಕರಳು ಕೊರೆಯುವದು. ಅವನು ಆಕೆಯ ಮುದ್ದು 'ವೊಲ್ಫಿ'ಯು. ತಾನು ಮದುವೆಯಾದ ಆ ಮೋಹದ ಮಗುವೊಲಿವಿನ ನಗೆಮುಗುಳನ್ನು ಮತ್ತೆ ಆಕೆಯ ಮೊಗದಲ್ಲಿ ಅರಳಿಸಲಿಕ್ಕೆ ದುಂದುಗಾರನಂತೆ ಇದ್ದ ಬಿದ್ದ ಹಣವನ್ನೂ ಚಿಕ್ಕ ಪುಟ್ಟ ಅನವಶ್ಯಕ ಸೌಕರ್ಯಗಳಿಗಾಗಿ ವೆಚ್ಚ ಮಾಡುವನು. ಬಡತನಕ್ಕೂ ಬಿಗಿಯಾದ ದುಃಖವೆಂದರೆ ಆಕೆಯ ಅಶಕ್ತತೆ, ಪ್ರಕೃತಿಯ ನಾಜೂಕು. ಪ್ರತಿಯೊಂದು ಪ್ರಸೂತಿಯೂ ಆಕೆಗೆ ಪ್ರಳಯ ಹಿಂಸೆಯೇ ಆಗುತ್ತಿತ್ತು. ಹುಟ್ಟಿದ ಶಿಶುಗಳೂ ಕಸುವಿಲ್ಲದ ಕಡ್ಡಿಗಳು. ಏಳರಲ್ಲಿ ಐದು ಮಕ್ಕಳು ಅಕಾಲದಲ್ಲಿಯೇ ಹುಟ್ಟಿದ ಕೆಲಕಾಲದಲ್ಲಿಯೇ ಕಾಲನ ಕೂಳಾದವು.

ಮೊಝಾರ್ಟನ ಪಾಲಿಗೆ ಬಂದ ದುಃಖಗಳ ದೈನಂದಿನ ದೈನ್ಯವನ್ನು ಬೇರೊಬ್ಬ ಸಂಗೀತಗಾರನು ಅನುಭವಿಸುವಂತಾಗಿದ್ದರೆ ಆತನು ಕೇವಲ ಶೋಕಗೀತಗಳನ್ನೇ

ಕರುಣೆಯ ವಿಲಾಸಿಕೆಗಳನ್ನೇ ರಚಿಸುತ್ತಿದ್ದನು. ಆದರೆ ಮೊಝಾರ್ಟನು ಮಾತ್ರ ಹಾಗೆ ಎಂದೂ ಮಾಡಲಿಲ್ಲ. ಅವನು ಕಟ್ಟಿದ ಸ್ವರ ಸೌಂದರ್ಯವು ಅವನ ದುಃಖದ ಮಂಜಿನಲ್ಲಿಯೂ ಮಿಂಚಿದ ದೀಪ್ತಿಯು : ಕಣ್ಣೀರಿನ ಸುರಿಮಳೆ ಯಲ್ಲಿಯೂ ಬೆಳಗಿದ ಇಂದ್ರಧನುವು. ತನ್ನ ಸಂಗೀತದಲ್ಲಿ ತಾನು ಅನುಭವಿಸಿದ ಕಷ್ಟನಷ್ಟಗಳ ಹತಾಶೆ ದುರ್ದೆಸೆಗಳ ದುಃಖದ ನೆಳಲು ಬೀಳಲು ಕೂಡ ಅನುವು ಕೊಡಲಿಲ್ಲ. ಬದುಕು ಹದಗೆಟ್ಟಷ್ಟು ಬಾಳು ಗತಿಗೆಟ್ಟಷ್ಟು ಮೊಝಾರ್ಟನು ತನ್ನ ಧೈರ್ಯ ಸಾಹಸವನ್ನೆಲ್ಲ ತನ್ನ ಕಲೆಯಲ್ಲಿ ಹೊಸ ಹೊಸ ಕೃತಿಗಳಲ್ಲಿ ತೋಡಿ ರಸದ ಕೋಡಿ ಹರಿಸಿದನು. ಈ ಸಾಹಸವು ಕೂಡ ಉಗ್ರ ಸಹನೆಯದಲ್ಲ. ಅದರ ವೃತ್ತಿ ಹಕ್ಕಿಯಂತೆ ಹಗುರ ಬುಗ್ಗೆಯಂತೆ ಹುರುಪಿನದು. ಅದು ಹಿಗ್ಗಿನ ಕಾರಂಜಿ; ಯಾವ ಕಷ್ಟದ ಕಿಚ್ಚಿಗೂ ಕುಂದದೆ ಹೆಚ್ಚು ಕಾಂತಿಮಯವಾಗಿಯೇ ಕಾಣುವ ಅಪರಂಜಿ !

ಕಟಕನ ಮಾಂಸದ (ಅಂದರೆ ಕಟಕನದೇ ಅಲ್ಲ ! ಅವನಿಂದ ಕೊಂಡದ್ದು.) ಲೆಕ್ಕ ತೀರಿಸಲೂ, ಸಾಲದ ಲೆಕ್ಕಕ್ಕೆ ಬೇಲಿಫನು ಶರೀಫನ ಅಪ್ಪಣೆಯಂತೆ ಮನೆಯ ಮಣೆ ಮೇಜುಗಳನ್ನು ಸೆಳೆದೊಯ್ಯಲು ಬಂದಾಗ ಅವನನ್ನು ಕಂತುತೆತ್ತು ತಿರುಗಿ ಕಳಿಸಲೂ ಹಣದ ಒತ್ತಾಯ ಬಂದಾಗ ಮೊಝಾರ್ಟನು ಸಂಗೀತ ಕಾರ್ಯಕ್ರಮ ಗಳನ್ನು ಒಂದರ ಹಿಂದೊಂದು ಏರ್ಪಡಿಸುತ್ತಿದ್ದನು. ಪ್ರತಿ ಕಾರ್ಯಕ್ರಮಕ್ಕೂ ಅವನು ಹೊಸ ಸ್ವರ ರಚನೆಗಳನ್ನು ಒದಗಿಸುತ್ತಿದ್ದನು. ಇಂಥ ರಚನೆಯು ತೀರ ಕೊನೆಯ ಗಳಿಗೆಗೆ ನಾಟಕದ ಆರಂಭದಲ್ಲಿಯೇ ಮೂಡಿ ಮುಗಿಯುತ್ತಿತ್ತು. ಅವನ ಶ್ರೇಷ್ಠವೆನಿಸಿದ ಕೃತಿಗಳು ಕೂಡ ಹೀಗೆ ಕೆಲವೇ ದಿನಗಳಲ್ಲಿ ತವಕದ ಅವಸರ ದಲ್ಲಿ ರಚಿತವಾದವುಗಳೇ ಸರಿ ! ಒಂದೆಡೆಗೆ ನಿಯತವಾಗಿ ಸತತವಾಗಿ ಜಾಗ್ರತೆ ಯಾಗಿ ಶ್ರಮಿಸುವ ಚಟ ಅವನಲ್ಲಿ ಇದ್ದಿಲ್ಲವೆಂದು ಇದು ತೋರಿಸುತ್ತದೆ. ಆದರೆ ಜತೆಗೆ ಆತನ ಪ್ರತಿಭೆ ಎಷ್ಟು ಶೀಘ್ರವಾಗಿ ಎಷ್ಟು ತೀವ್ರವಾಗಿ ಯಾವ ಇಕ್ಕಟ್ಟಿ ನಲ್ಲಿಯೂ ತಡೆ-ತೊಡಕಿಲ್ಲದೆ ಪುಟಿದು ಬರುವಂತೆ ಸಿದ್ಧಹಸ್ತದಿಂದ ಕೆಲಸವನ್ನು ಕೊಡುತ್ತಿತ್ತೆಂಬುದನ್ನೂ ಕಾಣಿಸುತ್ತದೆ !

ಹಲವು ಸಲ ವಿಯೆನ್ನಾದಲ್ಲಿ ಅಸಾಧ್ಯ ಚಳಿ ಇರುತ್ತಿತು. ತೇವಿನ ಕುಳಿರುಗಾಳಿ, ನಳಗಳಲ್ಲಿ ನೀರನ್ನೂ, ನಾಡಿಗಳಲ್ಲಿ ನೆತ್ತರವನ್ನೂ, ಕೂಡಿಯೇ ಹೆಪ್ಪುಗಟ್ಟಿ ಸುತ್ತಿತ್ತು. ಅಂಥ ಸಮಯ ಬಡ ಮೊಝಾರ್ಟನಿಗೆ ವಾದನದ ಅಭ್ಯಾಸ ನಡೆ ಯಿಸಲು ಕೂಡ ಬೆರಳುಗಳನ್ನು ಸಡಿಲಿಸಿ ಆಡಿಸುವಷ್ಟು ಕಾವು ಮೈಕೈಗಳಲ್ಲಿ ಉಳಿಯುತ್ತಿದ್ದಿಲ್ಲ. ಒಮ್ಮೆ ಇಂಥ ಒಂದು ದುರ್ದಿನದಲ್ಲಿ 'ಗೆಳೆಯ'ನೊಬ್ಬನು

ಮನೆಗೆ ಬಂದಾಗ ಮೊಝಾರ್ಟನೂ ಸ್ಟಾಂಝೆಯೂ ಜತೆಯಾಗಿ ಜೋರಿನಿಂದ ಕುಣಿಯುತ್ತಿದ್ದುದನ್ನು ನೋಡಿದನು. 'ಅಬ್ಬ ಈ ರಸಿಕ ದಂಪತಿಗಳು ಎಷ್ಟು ಆನಂದ ಜೀವಿಗಳು!' ಎಂದು ಆತನು ತಲೆದೂಗಿ ತನ್ನ ಗೆಳೆಯರಲ್ಲಿ ಮೊಝಾರ್ಟನ ಉಲ್ಲಾಸ-ವಿಲಾಸದ ಕುರಿತು ಹೊಗಳಿ ಹೇಳಿದನು. ಅದು ಮುಂದೆ ಒಂದು ಸವಿನೆನಪು ಆಗಿ ಪ್ರಚಾರಗೊಂಡಿತು. ಆದರೆ ಸತ್ಯವು ಬೇರೆಯೇ ಇತ್ತು: ಅಷ್ಟೇ ಕಟುವಾಗಿತ್ತು. ಗೆಳೆಯನು ಬಂದಾಗ ಅವರು ನಿಜವಾಗಿಯೂ ಚಳಿಯ ಪೆಟ್ಟಿಗೆ ಕೈಕಾಲು ಸೆಟೆದು ಕೊರಡಾಗಿ ಹೋಗಿದ್ದರು; ಅದರಿಂದ ಗಾಬರಿಗೊಂಡು ಮೈಯಲ್ಲಿ ಕಾವು ಬರಲಿಕ್ಕೆಂದು ಹಾಗೆ ಹುಚ್ಚೆದ್ದು ಕೈಕಾಲು ಬೀಸಿ ಚಲಿಸಿ ವಿಕಟವಾಗಿ ಕುಣಿದಾಡಿದರು. ಆ ಗೆಳೆಯನು ಹೋಗಿ ಹೊಗಳಿದನೆಂಬುದೂ ಸುಳ್ಳು. ಅವನು ಆ ಗಂಡಹೆಂಡಿರ ದುರವಸ್ಥೆಯನ್ನು ಕಂಡು ಅವರಷ್ಟೇ ಗಾಬರಿಯಾಗಿ ಹೊರಗೆ ಓಡಿಹೋಗಿ ಎಲ್ಲಿಂದಲೋ ಉರುವಲ ತಂದು (ಕಟ್ಟಿಗೆಗೂ ಮನೆಯಲ್ಲಿ ಬಿಡಿಕಾಸು ಇದ್ದಿಲ್ಲ!) ಬೆಂಕಿ ಹೊತ್ತಿಸಿಕೊಟ್ಟು ಪುಣ್ಯಕಟ್ಟಿಕೊಂಡಿದ್ದನು!

ಇಂಥ ದಾರಿದ್ರ್ಯ ದುಃಖದಲ್ಲಿಯೂ ಹೆಂಡತಿಯ ವ್ಯಾಧಿ ಗಂಡನ ವ್ಯಥೆಗಳಲ್ಲಿಯೂ, ಅವರನ್ನು ಬದುಕಿಸಿ ಪ್ರಪಂಚಕ್ಕೆ ಮೊಝಾರ್ಟ ಸಂಗೀತವನ್ನು ಒದಗಿಸಿ ಚಿರಋಣಿಯಾಗಿ ಮಾಡಿದವನು ಪುಟ್‌ಬರ್ಗ ಎಂಬ ಒಬ್ಬ ವ್ಯಾಪಾರಿಯು. ಇವನು ಮೊಝಾರ್ಟನ ಗೆಳೆಯನಾಗಿದ್ದನು. ಆ ಸಂಗೀತಗಾರನಿಗೆ ಗತಿಯಿಲ್ಲದಾದಾಗೆಲ್ಲ ಈ ಮಹಾಶಯನೇ ಮತ್ತೆ ಮತ್ತೆ ಚಿಕ್ಕ ದೊಡ್ಡ ರಕಮುಗಳನ್ನು ಕೊಟ್ಟು, ಧನದ ಸಹಾಯವನ್ನು ಒದಗಿಸುತ್ತಿದ್ದನು. ಈ ವ್ಯಾಪಾರಿಗೆ ಅಂಗಲಾಚಿ ಬರೆದ ಮೊಝಾರ್ಟನ ಪತ್ರಗಳನ್ನು ಓದಿದರೆ (ಎಷ್ಟೇ ಸಹಾಯವೆಂದರೂ ತರುವದು ಹಣ, ಗೆಳೆಯನು ವ್ಯಾಪಾರಿ ಎಂಬುದನ್ನು ಮರೆಯದೇ ಓದಿದರೆ) ನಮ್ಮ ಎದೆ ಸಂತಾಪದಿಂದ ಉರಿಯುತ್ತದೆ. ಇಂಥ ದಿವ್ಯ ಪ್ರತಿಭಾವಂತನು ಒಬ್ಬ ಹಣಕಾಸಿನ ಮನುಷ್ಯನ ಮುಂದೆ ಕೈಚಾಚುವ ಅವಸ್ಥೆಗೆ ಇಳಿಯುವಂತೆ ಆಯಿತೇ ?–ಎಂದು ದ್ವೇಷದ ತಳಮಳವೆನಿಸುತ್ತದೆ.

ಪ್ರಾಗ ಪಟ್ಟಣದಲ್ಲಿ ಮಾತ್ರ ಮೊಝಾರ್ಟನ ಘನತೆಯನ್ನು, ಜನತೆ ಮೊದಲಿನಿಂದಲೂ ಅರಿತು ಆದರವನ್ನು ತೋರಿತು. ಅಲ್ಲಿ ಅವನಿಗೆ ಅವನ ಜೀವಮಾನದಲ್ಲಿಯೇ ಗೌರವ ದೊರೆಯಿತು. 'ಫಿಗೆರೋ ಪರಿಣಯ' ಎಂಬ ಅವನ ಗೀತನಾಟಕದ ಪ್ರಯೋಗ ವಿಯೆನ್ನಾದಲ್ಲಿ ಒಮ್ಮೆ ಜರುಗಿ ಪ್ರೋತ್ಸಾಹವಿಲ್ಲದೆ ಕೆಟ್ಟಿತು. ಅದೇ ಉಲ್ಲಾಸ ರೂಪಕವನ್ನು ಆಡಿ ತೋರಿಸಲು ಅವನಿಗೆ ಪ್ರಾಗ ಪಟ್ಟಣಕ್ಕೆ ಆಮಂತ್ರಣ ಬಂದಿತು. ಅಲ್ಲಿ ಹೋಗಿ ಅದನ್ನು ಆಡಿಸಿ ತೋರಿಸಲಾಯಿತು.

ಅದಕ್ಕೆ ಜನರು ಮೆಚ್ಚಿದ್ದು ಅಷ್ಟಿಷ್ಟಲ್ಲ. ಕೇರಿಕೇರಿಯಲ್ಲಿ ಕಸ ಉಡುಗುವವರೂ ಕೂಡ, ಆ ನಾಟಕದ ಗೀತಗಳನ್ನು ಸಿಳ್ಳು ಹಾಕತೊಡಗಿದರು. ಮುಂದೆ ಪ್ರಾಗ್ ಗೀತಿಕೆ ಎಂದು ಹೆಸರಾದ ಒಂದು ಕೃತಿಯನ್ನು ಅವನು ಅಲ್ಲಿಯೇ ರಚಿಸಿದನು. ಆ ಪಟ್ಟಣಿಗರ ಮೆಚ್ಚಿಗೆಗಾಗಿಯೇ ಒಂದು ಹೊಸ ಗೀತ ನಾಟಕವನ್ನು ಕಟ್ಟಲು ಆತನು ಮತ್ತೆ ವಿಯೆನ್ನಾದಿಂದ ಪ್ರಾಗಕ್ಕೆ ಹೋದನು.

ಈ ನಾಟಕದ ಹೆಸರು 'ಡಾನ್‌ಗಿಯೊವನ್ನಿ' ಇದರ ರಚನೆ ರಂಗ ಪ್ರಯೋಗ ಗಳಿಗಾಗಿ ವೊಲ್ಫಗ್ಯಾಂಗ್ ಮತ್ತು ಕಾನಸ್ಟನ್ಸರು ಮಾಡಿದ ಪ್ರಯಾಣವು ಅಪರ ಬಾಳಿನಲ್ಲಿಯ ಸುಖ-ಪ್ರಸಂಗಗಳಲ್ಲಿ ಒಂದು. ಪ್ರಾಗದಲ್ಲಿ ಅವರು ಬಿಡಾರ ಬಾಯ್ಬಡಕ ಕವಿಯೊಬ್ಬನ ನೆರೆಯಲ್ಲಿಯೇ ಮಾಡಿದ್ದರು. ಡಾ. ಪೊಂತೇ ಎಂಬ ಆ ಕವಿಯು ಒಳ್ಳೇ ಪೋಲಿಪೋರನು. ಮೊಝಾರ್ಟನ ಹೊಸ ನಾಟಕದ ಗೀತ ಗಳಿಗೆ ಅವನು ಶಬ್ದಗಳನ್ನು ಪೂರೈಸುವ ವರ್ತಕನು! ನಾಟಕ ಬರೆದು ಸಾಗುತ್ತಿದ್ದಂತೆ ಸಂಗೀತಗಾರನೂ ಸಂಗಾಡಿ ಕವಿಯೂ ಬೀದಿಯ ಇದಿರುಬದರು ಮನೆಗಳಿಂದ ಕೂಗಾಡಿ ಒಬ್ಬರನ್ನೊಬ್ಬರು ಕರೆಯುತ್ತಿದ್ದರು. ತಾವು ಬರೆದ ಹಾಳೆಗಳನ್ನು ಓದಿ ಕಾಣಿಸಲಿಕ್ಕೆ! ಈ ಕೂಗಿನ ಕರೆಯು 'ವಿಷಯ' ಲಂಪಟತನಕ್ಕೆ ದಿನ ರಾತ್ರಿಯೆಂಬ ಭೇದವೇ ಇದ್ದಿಲ್ಲ. ಇಲ್ಲವೆ ಇಬ್ಬರೂ ಕೈ ತೋಳಿಗೆ ತೋಳು ಸಿಕ್ಕಿಸಿ ಮದವೇರಿ ತೂಗುತ್ತ ಹಾದಿಯುದ್ದಕ್ಕೂ ದೊಡ್ಡ ದನಿಯಲ್ಲಿ ಹಾಡುತ್ತ ಮದ್ಯ ಕುಡಿಯಲು 'ಮುನಿಯ'ನ ಅಂಗಡಿಗೆ ನಡೆಯುತ್ತಿದ್ದರು. ಬೀದಿಯ ಜನ ಕ್ಕೆಲ್ಲ ಮರುದಿನ ಅದನ್ನು ಕೇಳಿದ ಪ್ರಾಗದ ಪಟ್ಟಣಿಗರಿಗೆಲ್ಲ ಅದೊಂದು ಹಿಗ್ಗಿನ ನೋಟವೇ ಅನಿಸುತ್ತಿತ್ತು.

ಪ್ರಶಂಸಕರು ಅನೇಕರು ಮೊಝಾರ್ಟ ದಂಪತಿಗಳನ್ನು ತಮ್ಮಲ್ಲಿ ಔತಣಕ್ಕೆ ಕರೆಯುತ್ತಿದ್ದರು. ಕೆಲವೊಮ್ಮೆ ಈ ಔತಣಗಳ ಒತ್ತರದಲ್ಲಿ ದಿನದ ವೇಳೆಯೇ ಕಡಿಮೆ ಅನಿಸುತ್ತಿತ್ತು. ಅಷ್ಟೇ ಅಲ್ಲ, ರಾತ್ರಿ ನಾಟಕ ಆರಂಭವಾಗುವ ಹೊತ್ತಿನ ತನಕವೂ ಒಮ್ಮೊಮ್ಮೆ ಈ ಊಟ-ಉಪಹಾರಗಳ ಉಪಚಾರದ ಉಪಟಳ ನಡೆ ಯುತ್ತಿತ್ತು. ಒಮ್ಮೆ ಅಂತೂ, ನಾಟ್ಯಮಂದಿರ ಕಿಕ್ಕಿರಿದು ತುಂಬಿದೆ; ಮೂರನೆಯ ಘಂಟೆಯೂ, ಬಾರಿಸಿತು; ದೀಪಗಳೆಲ್ಲ ಮೇಲೆದ್ದು ಬೆಳಗಿದವು. ತೆರೆ ಏಳುವದೊಂದೇ ತಡ. ತಡವೇಕೆ? ಅಂದಿನ ನಾಟಕದ ಆರಂಭದ 'ಆಮುಖ'ದ ಸ್ವರರಚನೆಯೇ ವಾದಕರ ಕೈಸೇರಿದ್ದಿಲ್ಲ. ಕೂಡಲೇ ಮೊಝಾರ್ಟನು ಧಾವಿಸಿ ಬಂದು ಅಲ್ಲಿಯೇ ಆ ಕೃತಿಯನ್ನು ರಚಿಸಿ ಅದರ ಮಸಿಯೊಣಗದ ಹಾಳೆಗಳನ್ನು ವಾದಕವೃಂದದ ಮುಂದೆ ಒಳಗಿಂದ ಒಗೆದನು. ಆ ಧಾವಂತದ ಕೃತಿಯಲ್ಲಿಯೂ ಎಂಥ ಉಲ್ಲಾಸ!

ಎಂಥ ಉತ್ತೇಜಕ ಸ್ವರಾರೋಹ ! ವಾದಕರೆಲ್ಲರೂ ಯಾವಪೂರ್ವಾಭ್ಯಾಸವಿಲ್ಲದೇ ಅದನ್ನು ಬರೇ ನೋಡಿ ಬಾರಿಸಿ ಸಭಿಕರೊಂದಿಗೆ ತಾವೂ ಸುಖಿಸಿದರು.

ಮೊಝಾರ್ಟನ ಸಂಗೀತದ ಇನ್ನೊಂದು ವೈಶಿಷ್ಟ್ಯವೆಂದರೆ ಅದರಲ್ಲಿ ಒಡಮೂಡಿದ ವಿನೋದ. ಅಷ್ಟೊಂದು ಮಧುರ ಪರಿಣಾಮದಲ್ಲಿ ಸಂಗೀತವಲ್ಲಿ ವಿನೋದವು ಹಿಂದೆ ಎಂದೂ ಮೂಡಿಸಿದ್ದು ಇಲ್ಲ. ಸುಖಾಂತ ಭಾವರೂಪಕಗಳನ್ನೇ ಮೊಝಾರ್ಟನು ಮೂಡಿಸಬಲ್ಲನು. ದುಃಖಾಂತ ದುರಂತಗಳನ್ನು ರೂಪಿಸಲು ಅವನಿಗೆ ಬರುತ್ತಲೇ ಇದ್ದಿಲ್ಲವೆಂದು ಮಾತ್ರ ತಿಳಿಯಲಾಗದು. ಮೇಲೆ ಹೇಳಿದ ಅವನ 'ಡಾನ್' ರೂಪಕವು ಒಂದು ದೈತ್ಯಶಕ್ತಿಯ ನಾಟ್ಯಮಯ ದುರಂತ ದೃಶ್ಯವು. ಅದರ ಜನಾಕರ್ಷಣೆಯೂ ಅಷ್ಟೇ ಪ್ರಬಲವಾಗಿತ್ತು. ಮೂರು ತಾಸಿನ ನಾಟಕ ಮುಗಿಯಲು ಆರು ತಾಸು ಕಳೆಯಿತು. 'ಪಾರ್ಟಧಾರನ ಮನ'ವನ್ನು ಲೆಕ್ಕಿಸದೇ ಕೈತಟ್ಟಿ ಕೇಕೆಹಾಕಿ 'ವನ್ಸಮೋರ್'ನ ಒತ್ತಾಯದಿಂದ ಹಾಡುಗಳನ್ನು ಪುತ್ತೆ ಪುತ್ತೆ ಹಾಡಿಸಿ ನಡುನಡುವೆ ನೋಟಗಳನ್ನೂ ನಟ-ನಟಿಯರನ್ನೂ ತಡೆ ಹಿಡಿದು ನಾಟಕ ಮುಂದರಿಸುವದೇ ಕಷ್ಟವಾಗುವಂತೆ ಮಾಡಿದರು. ಆ ಪ್ರಯೋಗದ ಉತ್ಪನ್ನದಿಂದ ನಾಟ್ಯಮಂದಿರದ ಒಡೆಯನ 'ದಿವಾಳಿ' ತಪ್ಪಿತು; ಭಾಗ್ಯ ತೆರೆಯಿತು. ಆದರೆ ಆ ಭಾಗ್ಯದ ದೇವತೆಗೆ ನಾಟ್ಯ ಪ್ರಯೋಗದ ಸಂಚಾಲಕ ಸಂಗೀತಗಾರನಿಗೆ ಬರೇ ಸಾಮಾನ್ಯ-ಸಾಮಾನಿಗೂ ಸಾಲದ-ಪ್ರತಿಫಲ ದೊರೆಯಿತು.

ಮೊಝಾರ್ಟನ ಜೀವನದ ನಕ್ಷತ್ರವು ಕೊನೆಯಿಲ್ಲದ ಕತ್ತಲೆಯ ಕಡೆಗೆ ಧಾವಿಸುತ್ತ ಹೆಚ್ಚು ಹೆಚ್ಚು ವೇಗವನ್ನೂ ತೇಜವನ್ನೂ ಪಡೆಯುವಂತೆ ತೋರಿತು. ಅವನ ಕೊನೆಯ ಒಂಬತ್ತು ಕೃತಿಗಳು ಬಿದೋವಿನ್‌ನ ವಿಶ್ವವಿಖ್ಯಾತ ನವಗೀತಿಕೆಗಳ ಜತೆಗೆ ಅಷ್ಟೇ ಘನತೆಯಿಂದ ನಿಲ್ಲುವಂತೆ ಆದವು; ಆದರೆ ಅವುಗಳಲ್ಲಿ ಕೆಲವನ್ನು ಅವನ ಜೀವಮಾನದಲ್ಲಿ ಯಾರೂ ಬೇಡಿ ಕೇಳಿದವರೇ ಇಲ್ಲ ! ಮೊಝಾರ್ಟನ ಅನೇಕ ಪುಟ್ಟ ರಚನೆಗಳನ್ನು ಪಾಶ್ಚಾತ್ಯರಲ್ಲಿ ಮಕ್ಕಳಿಗೆ ಪಾಠ ಮಾಡಿಸುತ್ತಾರೆ. ಇದರಿಂದ ತಿಳುವಳಿಕೆ ಸಾಲದ, ತಾಳ್ಮೆ ಇಲ್ಲದ ಜನತೆಗೆ ಮೊಝಾರ್ಟನ ಕೃತಿಗಳೆಲ್ಲ ಬರೇ ಸದ್ದು ಮುದ್ದಾದ ಲಘುಕೃತಿಗಳೆಂದೇ ಭಾವನೆ. ಆದರೆ ತಾಳ್ಮೆಯಿಂದ ಕೇಳುವ ರಸಿಕರಿಗೆ ಅವನ ಸಂಗೀತದ ಲಾಲಿತ್ಯದ ಸ್ವಾದದೊಡನೆ ಗಾಂಭೀರ್ಯದ ಬೋಧವೂ ಆಗುವದು.

ಅವನ ೩೫ ನೇ ವರ್ಷ ಪ್ರಾಯದಲ್ಲಿ ವಿಯೆನ್ನಾದಲ್ಲಿ ಬೇನೆ ಬಿದ್ದಿದ್ದರೂ, ಅವನು 'ಮಾಯೆಯ ಮುರಲಿ' ಎಂಬ ಸುಪ್ರಸಿದ್ಧವಾದ ಯಕ್ಷಕಥೆಯ ಗೀತ ನಾಟಕವನ್ನು

ರಚಿಸಿದನು. ಒಬ್ಬ ಬಡ ಪರದೇಶಿ ಕಂಪನಿಯೊಡೆಯನು ಅದನ್ನು ಒಂದು ಅಸಡ್ಡಾಳ ಥಿಯೇಟರಿನಲ್ಲಿ ಅದನ್ನು ಮೊದಲು ಆಡಿಸಿದನು. ಆ ಪ್ರಯೋಗದ ಸುದ್ದಿ ಹಬ್ಬಿತು. ವಿಯೆನ್ನಾದ ನಗರಕ್ಕೆ ನಗರವೇ ಅದನ್ನು ನೋಡಿ ನಲಿಯಲು ಅಲ್ಲಿ ನುಗ್ಗಿತು. ಥಿಯೇಟರಿನ ಒಡೆಯನು ಅಂದು ಸಂಪಾದಿಸಿದ ಹಣದಿಂದ ಹೊಸದೊಂದು ಭವ್ಯ ಥಿಯೇಟರು ಕಟ್ಟಿಸಿದನು. ಆದರೆ ಆ ಪ್ರಾಪ್ತಿಯ ಯಾವ ಪಾಲೂ ಸಿಗದ ಮೊಝಾರ್ಟನು ಅಂದಿನ ಪ್ರಯೋಗವನ್ನು ಕೂಡ ನೋಡಲಿಲ್ಲ. ಬೇನೆಯಿಂದ ಮನೆಯಲ್ಲಿ ಬಿದ್ದುಕೊಂಡು ಇದ್ದನು. ತನ್ನ ಗಡಿಯಾರವನ್ನು ನೋಡಿ 'ಇದೀಗ ನಾಟಕ ಆರಂಭವಾಗುವದು.' 'ಈಗ ಅಂಕದ ತೆರೆ ಎದ್ದಿತು!' 'ಈಗ ಆ ಪಾತ್ರ ಸಮೂಹವು ಮೈ ಸುಟ್ಟುಕೊಳ್ಳದೇ ಅಗ್ನಿಪ್ರವೇಶ ಮಾಡುತ್ತಿದ್ದಾರೆ-ಮಾಯೆಯ ಮುರಲಿಗೆ ಮರುಳಾಗಿ!' ಹೀಗೆ ಕತ್ತಲೆಯಲ್ಲಿ ಕಣ್ಣಿಟ್ಟು ಶೂನ್ಯದಲ್ಲಿ ರಂಗದ ಸೃಷ್ಟಿಯನ್ನು ಕಟ್ಟಿ ಕಾಣುತ್ತ ಮಲಗಿದ್ದನು!

ಕೆಲವು ತಿಂಗಳು ಮೊದಲು ಒಬ್ಬ ಉರಿಮೋರೆಯ ಅಪರಿಚಿತ ಗೃಹಸ್ಥನು ಮೊಝಾರ್ಟನಿಗೆ ಭೆಟ್ಟಿಕೊಟ್ಟನು. ಆ ಗೃಹಸ್ಥನ ಒಡೆಯನ ಮಡದಿ ಮಡಿದಿದ್ದಳಂತೆ. ಆಕೆಯ ನೆನಪಿಗಾಗಿ ಗಂಡು-ಹೆಣ್ಣು ಕಂಠಗಳು ಕೂಡಿಯೇ ಹಾಡಿ, ಆಡಿ ಕಾಣಿಸಲು ಒಂದು ಸ್ಮಶಾನಸಂಗೀತ ರೂಪಕವನ್ನು ರಚಿಸಲು ಮೊಝಾರ್ಟನನ್ನು ಕೇಳಿಕೊಂಡನು. ಒಡೆಯನ ಹೆಸರನ್ನು ಅವನು ಹೇಳಲು ಒಪ್ಪಲಿಲ್ಲ. ಆ ಒಡೆಯನು ಯಾರೆಂದು ಈಗ ತಿಳಿದಿದೆ. ಅವನು ಕೌಂಟವಾಟ್ಸೆಗ್ ಎಂಬ ಮನ್ನೆಯವನು. ಹೀಗೆ ಗುಪ್ತವಾಗಿ ಸಂಗೀತ ಕೃತಿಗಳನ್ನು ರಚಿಸಿ ಪಡೆದುಕೊಂಡು ತನ್ನದೇ ಎಂದು ಪ್ರಕಟಿಸುವ ಡಾಂಭಿಕ ದುಶ್ಚಟವು ಅವನಿಗಿತ್ತು!

ಮೊಝಾರ್ಟನು ಒಪ್ಪಿದನು. ಆದರೆ ಕೃತಿಯನ್ನು ರಚಿಸಿ ಸಕಾಲಕ್ಕೆ ಒಪ್ಪಿಸಲಿಕ್ಕೆ ಅವನಿಗೆ ಆ ಹಲವು ಅಡೆ-ತಡೆಗಳು ಬಂದವು. ನಡುನಡುವೆ ಆ ಉರಿಮೋರೆಯ ಗೃಹಸ್ಥನು ಬಂದು ಗ್ರಹಚಾರದಂತೆ ಕಾಡುತ್ತಿದ್ದನು. ಇತ್ತ ಮೊಝಾರ್ಟನ ಕಾಯಿಲೇ ಬಲಿಯುತ್ತಲೇ ಇತ್ತು. ಈ ನಡುವೆ ಆ ಕೆಲಸ ಕೊಟ್ಟವನ ಕಾಟ ಹೆಚ್ಚಾಗಿ, ಕಾಯಿಲೆಯ ಕಂಗೆಟ್ಟ ಸ್ಥಿತಿಯಲ್ಲಿ ಸನ್ನಿಪಾತದಂತೆ ಭ್ರಮೆಯ ಮಬ್ಬು ಕವಿಯಿತು. ಆ ಭ್ರಮೆಯಲ್ಲಿ ತನಗೆ ಕಾಡಲು ಬರುವ ಗೃಹಸ್ಥನು ಪರಲೋಕದ ದೂತನೆಂದೂ ಅವನು ಕಟ್ಟಲು ಹೇಳಿದ ಕೃತಿಯೂ ತನ್ನದೇ ಮರಣಗೀತದ ರೂಪಕವೆಂದೂ ಅವನಿಗೆ ಕನವರಿಕೆ ಆಯಿತು. ಆ ಕನವರಿಕೆಯ ಕಾವಿನಲ್ಲಿಯೇ ಎದ್ದು ಕೂತು ಅವನು ಆ ಪ್ರೇತಗೀತಿಕೆಯನ್ನು ರಚಿಸಿ ಮುಗಿಸಿದನು. ಆ ನಾಟ್ಯ ಗೀತದಲ್ಲಿ ಅಗಾಧವಾದ ದುಃಖವು ಹೃದಯವನ್ನು ಕಂಪಿಸುವ ಅನುತಾಪವೂ

ಮೊಳಗಿದೆ; ಮಾನವನ ಅಮರತ್ವದ, ಉತ್ಕಟ ಆಕಾಂಕ್ಷೆಯು, ಪರಮಾವಧಿಯು ಅಲ್ಲಿ ವ್ಯಂಜನೆಯನ್ನು ಪಡೆದಿದೆ; ಮತ್ತು ಗೀತವು ಶ್ರದ್ಧೆಯನ್ನು ಸೂಚಿಸುವ ಶುದ್ಧ ಸ್ವರಾಲಾಪದಲ್ಲಿ ಮುಕ್ತಾಯವನ್ನು ಹೊಂದಿದೆ. ಈ ಮರಣಗೀತದಲ್ಲಿ ದೇವರ ಅಂತಿಮ ನ್ಯಾಯದಾನದ ದಿನವನ್ನು ಸೂಚಿಸುವ, ತೂರ್ಯಸ್ವರದ ಶಂಖ ಧ್ವನಿಯನ್ನು ಮೊರ್ಝಾರ್ಟನು ಸಾಯುವ ಗಳಿಗೆಯಲ್ಲಿ ಜೀವದ ಗೆಳೆಯರು ಸುತ್ತಲು ಕೂತಿರುವಾಗ ತನ್ನ ಕ್ಷೀಣ ತುಟಿಗಳಿಂದ ರೂಪಿಸಿದನು.

ಬಿದೋವಿನ್‌ನ ಸಾವಿನಂತೆ ಇವನ ಸಾವಿನ ಸಮಯದಲ್ಲಿಯೂ ಬಿರುಗಾಳಿಯು ಬೀಸಿತು; ಆದರೆ ಇಲ್ಲಿ ಅದು ಸಾವಿನ ನಂತರ ಬಂದಿತು–ಕೆಲವು ಗೆಳೆಯರು ಆ ಬರಲಿರುವ ಬಿರುಗಾಳಿಯ ಕರಾಳಮಬ್ಬು ಕತ್ತಲಲ್ಲಿ ಮೊರ್ಝಾರ್ಟನ ಶವಪೇಟಿಕೆಯನ್ನು ಸಮಾಧಿಯಲ್ಲಿ ಇಳಿಸಿ ಅಂತ್ಯವಿಧಿಯ ಸೂಕ್ತಪಠಣವನ್ನು ಕೇಳಿದರು. ಅವರು ಸಮಾಧಿಯ ಸ್ಥಳವನ್ನು ಸಮೀಪಿಸುತ್ತಿರುವಾಗಲೇ ಸಿಡಿಲು ಬೆಳಗಿ ಮಿಂಚಿತು. ಚಾಟಿಯ ಏಟಿನಂತೆ ಅಡ್ಡ ಮಳೆ ಹೊಡೆಯಿತು. ಗಾಳಿಯು ಎಲುಬನ್ನು ಕೊರೆಯುವಂತೆ ತಿವಿದು ಬೀಸಿತು. ಆಕಾಶದ ಈ ಉಗ್ರ ಅಟೋಪದ ಮುಂದೆ ಅವರು ತಲೆಬಾಗಿ ಬಗ್ಗಿದರು. ಭೂಮಿಯ ಸಂಗೀತದ ಒಂದು ಮಹಾವತಾರದ ಪರಿಸಮಾಪ್ತಿಗೆ ನಿಸರ್ಗವು ತನ್ನ ರುದ್ರ ರಭಸದ ಪಾರ್ಶ್ವ ಸಂಗೀತವನ್ನು ನುಡಿಸಿತು ! ತಲೆಬಾಗಿ ಬಗ್ಗಿದ ಜೀವದ ಗೆಳೆಯರು ಮೊರ್ಝಾರ್ಟನ ದೇಹವನ್ನು ಮತ್ತೆ ಮುಂದೆ ಹಿಂಬಾಲಿಸಲಿಲ್ಲ. ಬಿರುಗಾಳಿಗೆ ಹೆದರಿ ಹಿಂಜರಿದರು. ಮೃತ ದೇಹವನ್ನು ಹೊತ್ತ ಮಂದಿಯಷ್ಟೇ ಮುಂದೆ ಹೋದರು. ಭೂಮಿಗೆ ಭೂಷಣ ಪ್ರಾಯವಾಗಿ, 'ಗಾಳಿಗೊಡೆದ ಬುದ್ಬುದ'ದಂತೆ ಬಾಳಿಹೋದ ಸರ್ವಶ್ರೇಷ್ಠ ಸಂಗೀತಶಕ್ತಿಯ ಆವಾಸವಾಗಿದ್ದ ಆ ಕ್ಷೀಣವೂ ಕ್ಷುದ್ರವೂ ಆದ ಕಳೆಬರವನ್ನು, ಸುತ್ತಲೂ ಕೊಳೆತು ಹುಳಹುಪ್ಪಡಿಯ ಕೂಳಾಗುತ್ತಿರುವ ಹಳತು ಹುಡಿಯಾಗುತ್ತಿರುವ, ದೀನದಲಿತರ, ವಿಟವೇಶ್ಯೆಯರ ದೇಹಾವಶೇಷಗಳ ನಡುವೆ, ತೆರೆದು ಬಿದ್ದ ಒಂದು ಸಮಾಧಿಯ ಕುಳಿಯಲ್ಲಿ ಒಗೆಯಲಾಯಿತು !

ಆದರೆ ಮೊರ್ಝಾರ್ಟನು ಮಣ್ಣುಪಾಲಾಗಲಿಲ್ಲ. ಮೊರ್ಝಾರ್ಟನು ಅನ್ಯಾಯ, ಅನಾರೋಗ್ಯ, ಸಾಲ ಮತ್ತು ಸಾವುಗಳನ್ನೇ ಸೋಲಿಸಿ ಅಳಿವಿಲ್ಲದ ಅಳತೆ ಇಲ್ಲದ ಗೆಲುವನ್ನು ಗಳಿಸಿದನು. ಬದುಕಿನಲ್ಲಿ ಅವನು ಪಡೆದ ಎಲ್ಲ ಶೋಕ ಎಲ್ಲ ಶಾಪಗಳಿಗೆ ಪ್ರತಿಯಾಗಿ ಅವನು ಇತ್ತ ಉತ್ತರವು ಜೀವನಾನಂದದ ಸ್ಫೂರ್ತಿಯನ್ನೇ ಉತ್ತರೋತ್ತರವಾಗಿ ಮಿಡಿಯುತ್ತಿದೆ. ನಗು ನಲಿವಿನ ಮಗುವೊಲವಿನ ಮೊರ್ಝಾರ್ಟನ ಚಿರ ತರುಣ ಹೃದಯದಿಂದ ಹೊರಚಿಮ್ಮಿದ ಸಂಗೀತವು ಬೆಳಕಿನ ಬುಗ್ಗೆಯಾಗಿ ಇನ್ನು ಪುಟಿಯುತ್ತಿದೆ.

●

# ವಿಲ್‌ಹೆಲ್ಮ್ ರಿಚರ್ಡ್ ವಾಗ್ನರ್

ರಿಚರ್ಡ್ ವಾಗ್ನರ್‌ನ ಹೆಸರನ್ನು ನೀವು ಕೇಳಿ ಬಲ್ಲಿರಾ ? ಅವನೊಬ್ಬ ಭವ್ಯಜೀವಿ. ಅವನು ಬದುಕಿದ್ದು, ದುಡಿದದ್ದು, ಬರೆದದ್ದು ಎಲ್ಲವೂ ಬಹು ಭವ್ಯವಾದ ಮಾನ ದಲ್ಲಿಯೇ. ಅವನು ಪ್ರತಿಭೆಯಲ್ಲಿ ದೈತ್ಯ-ದಿವ್ಯತೆಯು ದೈತ್ಯ ! ಅವನ ಜೀವನ ಚೈತನ್ಯಮಯವೂ; ಗತಿ ಶಕ್ತಿಮಯವು. ಭಾವಾವೇಶ, ಬಡತನ ಮತ್ತು ವೈಭವ ಶಾಲಿಯಾದ ಕೃತಿರಚನೆ ಇವುಗಳ ಮಿಶ್ರಣವಾದ ಅವನ ವ್ಯಕ್ತಿತ್ವವೂ ಕಲೆಯೂ ಪಾಶ್ಚಾತ್ಯ ಜಗತ್ತಿನ ಮೇಲೆಯೇ ಮುದ್ರೆಯನ್ನು ಒತ್ತಿತು. ಅವನು ರಚಿಸಿದ ಸಂಗೀತ ನವೋನವವಾಗಿತ್ತು-ಎಷ್ಟು ನವೀನವೋ ಅಷ್ಟೇ ಪ್ರಚಂಡವಾಗಿತ್ತು. ಅವನ ಗುರಿಯು ಗೀತನಾಟ್ಯಗಳ ಸಮಗ್ರ ಗಾನರೂಪಕವನ್ನು ಹೊಸತಾಗಿ ಸಂಘಟಿಸುವದಿತ್ತು. ನಾಟ್ಯಮಯ ಏಕಾಗ್ರತೆಯು ರೂಪಕದ ಅಖಂಡತೆಯು ಕಲೆಯ ಲಕ್ಷ್ಯವಾಗಬೇಕೆಂದಿತ್ತು. ಈ 'ಒಪೆರಾ'ದ ನವನಿರ್ಮಾಣವು-ಗೀತನಾಟಕ ಇಲ್ಲವೇ ಸಂಗೀತ ರೂಪಕದ ಪುನರ್ಘಟನೆಯು ವಾಗ್ನರನು ಕೈಗೊಂಡು ಕೈ ಗೂಡಿಸಿದ ಸಂಗೀತ ಕ್ರಾಂತಿಯಾಗಿತ್ತು. 'ಒಪೆರಾ' ರೂಪಕವು ಕೇವಲ ಸಂಗೀತ ವಾಗಕೂಡದು; ಕಥೆ, ಅಭಿನಯ, ಪ್ರಯೋಗಕೌಶಲ್ಯ, ಇವು ಮೂರು ಸಂಗೀತ ದೊಡನೆ ಸಂಗತವಾಗಿ ಕೂಡಿ 'ಒಪೆರಾ'ದ ಸಾಮರ್ಥ್ಯವು ಚತುರಂಗಬಲದ್ದಾಗಬೇಕು. ಇದು ವಾಗ್ನರ್‌ನ ಪ್ರತಿಜ್ಞೆ. ಕೇವಲ ಸಂಗೀತದಲ್ಲಿಯೂ ಕೂಡ ಆತನು ಕೃತಿ ಕಾರನೂ ಕ್ರಾಂತಿಕಾರನೂ ಆದನು. ಅವನ ವ್ಯಕ್ತಿತ್ವ ಮತ್ತು ಕಾರ್ಯಗಳ ಸುತ್ತಲೂ ವಾದವಿವಾದಗಳ ಬಿರುಗಾಳಿಗಳೆದ್ದು ಮುತ್ತಿದವು. ಆದರೂ ಇಂದಿಗೆ ವಾಗ್ನರನು-ಪಾಶ್ಚಾತ್ಯ ಗಂಧರ್ವಲೋಕದ ದಿವ್ಯ ಕಿನ್ನರನು-ಪ್ರಪಂಚದ ಸರ್ವಶ್ರೇಷ್ಠ ಕಲಾವಿದರ ಕಕ್ಷೆಯಲ್ಲಿ ಕೀರ್ತಿಭದ್ರನಾಗಿ ಕಂಗೊಳಿಸುತ್ತಾನೆ.

ಡ್ರೆಸ್‌ಡನ್ ಪಟ್ಟಣದ ಒಂದು ಶಾಲೆಯ ಧೂಳಿ ತುಂಬಿದ ಕೋಣೆಯಲ್ಲಿ ಒಬ್ಬ ಹುಡುಗನು ಓದುತ್ತ ಕೂತಿದ್ದನು. ಸುತ್ತಲೂ ಶಾಂತತೆ ಇತ್ತು. ಗೋಡೆಯ ಮೇಲೆ ಗಡಿಯಾರವು 'ಗೆಳೆತನ'ದಿಂದ 'ಟಿಕ್‌ಟಿಕ್' ಅನ್ನುತ್ತಿತ್ತು; ಒಂದೊಮ್ಮೆ ಹುಡುಗನು ಪುಸ್ತಕದ ಪುಟ ತಿರುವಿದಾಗ 'ಸರಸರ' ಸದ್ದಾಗುತಿತ್ತು; ಇವಲ್ಲದೇ ಯಾವ ಶಬ್ದವೂ ಅಲ್ಲಿಯ ಶಾಂತತೆಯನ್ನು ಭಂಗಮಾಡುತ್ತಿದ್ದಿಲ್ಲ. ಹುಡುಗನ ಮನಸ್ಸು ಕೋಣೆಯಲ್ಲಿಯಾಗಲಿ ಶಾಲೆಯಲ್ಲಿಯಾಗಲಿ ಇದ್ದಿಲ್ಲ. ಅದೇಕೆ ? ಆ ಪಟ್ಟಣ ದೇಶ ಇಲ್ಲವೇ ವರ್ತಮಾನದಲ್ಲಿಯೂ ಇದ್ದಿಲ್ಲ. ಪುಣ್ಯಕಥೆಗಳಲ್ಲಿ ಬರುವ ಪುರಾತನ ದೇವದಾನವರ ಜೀವನಗಳನ್ನು ಮತ್ತೆ ಜೀವಿತಗೊಳಿಸುವವರಲ್ಲಿ ಅದು

ತೊಡಗಿತ್ತು. ಪುಸ್ತಕದಲ್ಲಿ ಓದುವ ನಾಮಗಳ ಹಿಂದಿನ ರೂಪಗಳನ್ನು ಕಲ್ಪಿಸಿ ಅವುಗಳಲ್ಲಿ ಜೀವಕಳೆಯನ್ನು ಊದಿ ಅಂದಿನ ಅದ್ಭುತರಮ್ಯ ಪ್ರಪಂಚವನ್ನು ಮತ್ತೆ ಕಂಡುಕೊಳ್ಳುವದರಲ್ಲಿ ಅವನ ವೃತ್ತಿಯು ಮಗ್ನವಾಗಿತ್ತು. ಒಂದು ತಾಸು ಕಳೆಯಿತು. ಹುಡುಗನು ಪುಸ್ತಕವನ್ನು ಮುಚ್ಚಿದನು. ಆದರೆ ದೂರದ ಅಂತರಾಳದಲ್ಲಿ ದೃಷ್ಟಿಯನ್ನು ನಟ್ಟು ಶೂನ್ಯದಲ್ಲಿ ಛಾಯೆಯನ್ನೂ ಛಾಯೆಯಲ್ಲಿ ಕಾಯೆಯನ್ನೂ ಕಾಯೆಯಲ್ಲಿ ಮಾಯೆಯನ್ನೂ ಕಲ್ಪಿಸುತ್ತ ಪ್ರಾಚೀನ ಧೀರೋದ್ಧತ ನಾಯಕರ ಪ್ರಚಂಡ ಕೃತಿ-ಆಕೃತಿಗಳನ್ನು ಅವನ ಚಕಿತ ಚಂಚಲ ಕಣ್ಣುಗಳು ರೂಪಿಸಿಕೊಳ್ಳುತ್ತಲೇ ಇದ್ದವು. ಈ ರೂಪಕಲ್ಪನೆಯಲ್ಲಿಯೇ ಮುಂದೆ ಪಾಶ್ಚಾತ್ಯ–ಅದೇಕೆ ? ವಿಶ್ವದ–ಸಂಗೀತಪ್ರಪಂಚಕ್ಕೆಯೇ ವಿಸ್ಮಯಗೊಳಿಸಿದ ಕಲ್ಪನಾರೂಪಗಳ ಬೀಜಗಳನ್ನು ಅವನ ಕಣ್ಣುಗಳು ನೆಟ್ಟವು.

ಈ ಸ್ವಪ್ನಜೀವಿಯಾದ ಬಾಲಕನೇ ರಿಚರ್ಡ್ ವಾಗ್ನರ್. ಅವನ ಜನ್ಮ ಲಿಪ್‌ಝಿಗ್ ಪಟ್ಟಣದಲ್ಲಿ ೧೮೧೩ ರಲ್ಲಿ. ಅದಾಗಲೇ ನೆಪೋಲಿಯನ್‌ನ ವಿರುದ್ಧ ಯುರೋಪದ ವಿಮೋಚನೆಯ ಮಹಾಯುದ್ಧವು ಆರಂಭವಾಗಿತ್ತು. ಆ ಪಟ್ಟಣದ ಹತ್ತಿರವೇ ಕೆಲವು ತಿಂಗಳ ನಂತರ ನೆಪೋಲಿಯನ್‌ನನ್ನು ಪರಾಭವಗೊಳಿಸಿದ ರಾಷ್ಟ್ರಗಳ ರಣರಂಗದ ತೋಪುಗಳು ಹಾರಲಿದ್ದವು. ಇಂಥ ಸುತ್ತಲಿನ ಉತ್ಪಾತ ವಿಪ್ಲವಗಳ ನಡುವೆ ಸಂಗೀತದ ಸ್ವಪ್ನಶಿಲ್ಪಿಯು ಹುಟ್ಟಿದನು !

ರಂಗಭೂಮಿಯ ಪರಿಸರದಲ್ಲಿಯೇ ಅವನು ಬೆಳೆದನು. ಅವನ ತಂದೆಯ ಹೆಸರು ಫ್ರೆಡ್ರಿಕ್‌ಚ್‌ವಾಗ್ನರ್.–ವೃತ್ತಿಯಿಂದ ಪೋಲಿಸ ಕರಣಿಕನಿದ್ದರೂ, ಪ್ರವೃತ್ತಿಯಿಂದ ರಂಗಭೂಮಿ ಮತ್ತು ವಾಙ್ಮಯದ ಭಕ್ತನಾಗಿದ್ದನು. ರಿಚರ್ಡನು ಹುಟ್ಟಿದೊಡನೆಯೇ ತಂದೆಯು ತೀರಿಕೊಂಡನು. ಮಗುವನ್ನು ಅವನು ಚೆನ್ನಾಗಿ ನೋಡಿಯೂ ಇದ್ದಿಲ್ಲ. ಆದರೆ ಅವನ 'ಮಲ–ತಂದೆ'ಯು–ಅಂದರೆ ಅವನ ತಾಯಿ ಮತ್ತೆ ಮದುವೆಯಾದವನು–ನಟ, ನಾಟಕಕಾರ ಮತ್ತು ಚಿತ್ರಕಾರನಾಗಿದ್ದನು, ರಂಗಭೂಮಿಯ ಆವರಣ ರಿಚರ್ಡನ ಬಾಲ್ಯವನ್ನು ಸುತ್ತಿಯೇ ಉಳಿಯಿತು.

ಈ ಮಲತಂದೆಯು–ಅವನ ಹೆಸರು ಲುಡ್ವಿಗ್ ಗೆಯರ್–ಸೋಜಿಗದ ಸದ್ಗೃಹಸ್ಥನಿದ್ದನು. ಅವನು ವಿಚಿತ್ರವರ್ತನೆಯ ನಟನಾಗಿದ್ದನು. ಚಿಕ್ಕ ರಿಚರ್ಡನ ಕೈ ಹಿಡಿದುಕೊಂಡು ಅವನು ನಾಟ್ಯ ಮಂದಿರಕ್ಕೆ ನಾಟಕದ 'ತಾಲೀಮಿ'ಗಾಗಿ ಹೋಗುತ್ತಿದ್ದನು. ಅಲ್ಲಿ ಯಾರೊಬ್ಬ ಹೊಸ ಹಸಿಬಿಸಿ ನಟನ ಒರಟು ಅಭಿನಯವನ್ನು ನಿರೀಕ್ಷಿಸಿ ಕೆಲಹೊತ್ತು ಗೊಣಗುಡುತ್ತ ಬೇಸರಪಟ್ಟ ಮೇಲೆ, ತಾಳಲಾರದೇ, ಕಲಾಪ್ರೇಮದ

ಆವೇಶದಿಂದ ಲುಡ್ವಿಗ್‌ನು ತಾನೆ, ತೆರವಾದ ರಂಗಭೂಮಿಗೆ ಜಿಗಿದು ಸೊಗಸಾದ ಅಭಿನಯುವನ್ನು ಆರಂಭಿಸುವನು. ಆ ಅಭಿನಯುವಾದರೂ ಯಾತರದು ? ನಡೆಯುತ್ತಿರುವ ನಾಟಕದ್ದೇ ? ಛೇ ! ಮುನ್ನಾದಿನ ರಾತ್ರೆ ಪುಟ್ಟ ರಿಚರ್ಡನನ್ನು ಮೈದಡವಿ ಮಲಗಿಸುವಾಗ ಹೇಳಿದ ಅದ್ಭುತ ಆಖ್ಯಾಯಿಕೆಯಲ್ಲಿ ಬಂದು ಹೋದ ಘಟನೆಗಳೇ ಲುಡ್ವಿಗ್‌ನ ನಟನೆಯಲ್ಲಿ ಮೈವೆತ್ತು ನಿಲ್ಲತೊಡಗುವವು. ನಾಟ್ಯ-ಮಂದಿರದ ಮಬ್ಬುಗತ್ತಲಿನಲ್ಲಿ ದೂರದ ಒಂದು ಮೆತ್ತನ್ನ ಆಸನವನ್ನೇರಿ ಕೂತ ಬಾಲಕ ರಿಚರ್ಡನು ಹೊಳೆಯುವ ಬೆರಗುಗಣ್ಣುಗಳಿಂದ ಆ ಅದ್ಭುತ ಅಭಿನಯದ ಅವತಾರವನ್ನು ದಿಟ್ಟಿಸಿ ದಿಟ್ಟಿಸಿ ನೋಡುವನು. ದೀಪಗಳನ್ನು ಆರಿಸಿದ ಮೇಲೆ, ಲುಡ್ವಿಗ್ ರಿಚರ್ಡ್ ಇಬ್ಬರೂ ಕೈಯಲ್ಲಿ ಕೈ ಇಟ್ಟು ಲಗುಬಗೆಯಿಂದ ಹೆಜ್ಜೆ ಇಡುತ್ತ ಮನೆಗೆ ನಡೆಯುವರು.

ರಿಚರ್ಡನು ಶಾಲೆಗೆ ಹೋಗಹತ್ತಿದನು, ಅಲ್ಲಿ ಯಾರ ನೆರವೂ ಇಲದೆ ಗ್ರೀಕರ ಒಂದು ಮಹಾಕಾವ್ಯವಾದ 'ಓಡಿಸ್ಸೀ' ಗ್ರಂಥದ ಹನ್ನೆರಡು ಪರ್ವಗಳನ್ನು ಅವನು ಅನುವಾದಿಸಿದನು. ಹೋಮರ ಕವಿಯ ಕ್ಲಿಷ್ಟಗ್ರೀಕ ಭಾಷೆಯ ೬೦೦೦ ಸಾಲುಗಳನ್ನು ೧೩ ವರ್ಷದ ಹುಡುಗನು ಈ ಭಾಷಾಂತರಿಸುವದೆಂದರೆ ಸುಲಭ ಕೆಲಸವಲ್ಲ. ಇದಕ್ಕೂ ಒಂದು ವರ್ಷ ಮುಂಚೆ ಅವನು ಪಿಯಾನೊ ಪಾಠಗಳನ್ನು ಆರಂಭಿಸಿದ್ದನು. ಆದರೆ ಆ ನಿಟ್ಟಿನಲ್ಲಿ ವಿಶೇಷ ಪ್ರಗತಿಯನ್ನು ಹೊಂದಲಿಲ್ಲ.

ಆದರೆ ಅವನ ಹೃದಯಕ್ಕೆ ಸಂಗೀತದ ಜಾಗೃತಿ ಅಕಸ್ಮಾತ್ತಾಗಿ ಬಂದಿತು. ಒಂದು ಸಂಗೀತ ರಚೇರಿಯಲ್ಲಿ ಅವನು ಬಿಥೋವಿನ್‌ನ ರಾಗ-ಕೃತಿಯನ್ನೊಂದು ಕೇಳಿದನು. ಆ ಕೃತಿಯನ್ನು ನುಡಿಸಿದವರು ಅಷ್ಟೇನು ನಿಪುಣರಿದ್ದಿಲ್ಲ. ಅಲ್ಲಿ ಇಲ್ಲಿಂದ ಕಲೆಹಾಕಿ ತಂದ ಕೆಲವು ವಾದ್ಯಸಮ್ಮೇಳನದವರು ದೆಸೆಗೆಟ್ಟ ರೀತಿಯಲ್ಲಿ ಅದನ್ನು ಬಾರಿಸಿದನು. ಆದರೂ ರಿಚರ್ಡನು ಮೈಯೆಲ್ಲ ಕಿವಿಯಾಗಿ ಕೇಳಿದನು; ಅವನ ನರನಾಡಿಗಳಲ್ಲಿ ಮಿಂಚು ಹರಿದಾಡಿತು. ಹರ್ಷೋದ್ರೇಕದಲ್ಲಿ ಅವನು ಸ್ತಂಭೀಭೂತನಾದನು. ಮೇಳದ ಗೀತವಾದನವು ಮುಗಿದಾಗ ಸಭೆಯು ಹರ್ಷೋದ್ಗಾರದಲ್ಲಿ ಅವನು ದನಿಗೂಡಿಸಲಿಲ್ಲ. ಭಾವ ಪರವಶನಾದ ಅವನಿಗೆ ಧ್ವನಿಯೇ ಬರಲಿಲ್ಲ. ಮೇಳದವರು ತಮ್ಮ ವಾದ್ಯಗಳನ್ನೆಲ್ಲ ಕಟ್ಟಿಕೊಂಡು ಹೊರಟು ಹೋಗಿ, ಸಭಾಗೃಹವು ಬರಿದಾದರೂ ರಿಚರ್ಡನು ಅಲ್ಲಿಯೇ ಕೂತನು. ಕದಲಲೇ ಇಲ್ಲ. ಆ ಸಂಗೀತವು ಅವನ ಆತ್ಮಕ್ಕೆ ಸಮಾಧಿಯನ್ನೇ ತಂದಿತು.

ಅವನು ೨೦ ವರ್ಷದವನಾಗುವ ಮೊದಲೇ ಒಂದು ದುರಂತ ನಾಟಕವನ್ನು

ಬರೆದನು. ಅದೆಂಥ ದುರ್ಧರ ದುರಂತ ! ಮೊದಲಿನ ದೃಶ್ಯಗಳಲ್ಲಿಯೇ ಅವನು ೪೦-೭೦ ಪಾತ್ರಗಳನ್ನು ತಂದುಬಿಟ್ಟನು. ಅಷ್ಟೇ ಅಲ್ಲ, ನಾಟಕವು ನಡುಹಾಯುವ ಮೊದಲೇ ಮುಂದಿನ ದುರಂತಕ್ಕೆ ಅವಶ್ಯವಾದ ಹತ್ಯಾಕಾಂಡವು ಬಹು ದೊಡ್ಡ ಪ್ರಮಾಣವಲ್ಲಿ ಘಟಿಸಿ ಹೋಯಿತು. ಇದರಿಂದ ಮುಂದೆ ನಾಟಕ ಸಾಗುವದೇ ಅಶಕ್ಯವಾಗುವ ಭಯ ಉಂಟಾಯಿತು. ಏಕೆಂದರೆ ನಾಟಕದ ಪ್ರಮುಖ ಪಾತ್ರಗಳೆಲ್ಲ ಬಹುಮಟ್ಟಿಗೆ ಈಗಾಗಲೇ ಹತರಾಗಿದ್ದರು. ಆದ್ದರಿಂದ ಕಲ್ಪಿಕನಾದ ರಿಚರ್ಡನು ನಾಟಕದ ಉತ್ತರರಂಗವನ್ನು ಯಶಸ್ವಿಯಾಗಿ ಮುಕ್ತಾಯಗೊಳಿಸಲು ಸತ್ತವರನ್ನೆಲ್ಲ ಪಿಶಾಚಿಗಳನ್ನಾಗಿ ಮಾಡಿ ಮತ್ತೆ ಕುಣಿದಾಡಿಸಬೇಕಾಯಿತು ! ಈಗ ಬಿದೋವಿನ್ ಸಂಗೀತದ ನೆನಪಾಗಿ ಆ ಹುಡುಗನು ತನ್ನ ದುರಂತ ನಾಟಕಕ್ಕೆ ದೈತ್ಯಸಂಗೀತವನ್ನು ಕಟ್ಟಿ ಕೂಡಿಸಬೇಕೆಂದು ನಿರ್ಧರಿಸಿದನು. ಪ್ರೌಢ ವಾಗ್ನರನು ಇಲ್ಲಿ ನಮಗೆ ಕಾಣುತ್ತಾನೆ. ಪೂರ್ತಿಯಾಗಿ ಅಲ್ಲದಿದ್ದರೂ, ಒಂದು ಮಹತ್ವದ ಅಂಶದಲ್ಲಿ. ಆ ಅಂಶವೆಂದರೆ ಅವನ ಪ್ರಚಂಡವೂ ದುರ್ದಮವೂ ಆದ ಆತ್ಮವಿಶ್ವಾಸ. ಒಮ್ಮೆ ಕೇಳಿದ ಸಂಗೀತ ಕೃತಿಯು ಆಗಂತುಕ ಸಂಸ್ಕಾರದಿಂದಲೇ ಸ್ಫೂರ್ತಿಗೊಂಡ ವಾಗ್ನರನು ತನ್ನ ಆ ಅವ್ಯವಸ್ಥಿತ ನಾ ಟ ಕ ವ ನ್ನು ಸಂಗೀತ ರೂಪಕವಾಗಿ ಮಾಡುವದನ್ನು ನಿರ್ಧರಿಸಿಯೇ ಬಿಟ್ಟ-ಅಷ್ಟೇ ಅಲ್ಲ. ಅಂಥ ಸಂಗೀತೀಕರಣದ ಸಾಮರ್ಥ್ಯವು ತನಗೆಲ್ಲ ಪೂರ್ತಿ ಇದೆಯೆಂದೂ ನಿರ್ಧರಿಸಿಯೇ ಬಿಟ್ಟನು ! ಕೂಡಲೇ ಒಂದು ಗ್ರಂಥಸಂಗ್ರಹಾಲಯಕ್ಕೆ ಹೋಗಿ ಮಂದಶೃತಿಗಳ ಅಭ್ಯಾಸದ ಒಂದು ಪಠ್ಯಪುಸ್ತಕವನ್ನು ಹುಡುಕಿ ತಂದು, ತನ್ನ ಕೋಣೆಯ ಏಕಾಂತದಲ್ಲಿ ರಹಸ್ಯವಾಗಿ ಮೂರು ಕೃತಿಗಳನ್ನು ರಚಿಸಿದನು. ಆಯಿತು, ಅವನ ಸಂಗೀತ ಸಾಧನೆ ಆರಂಭ ವಾಯಿತು; ತಾನು ಸಂಗೀತಗಾರನಾಗುವೆನೆಂದು ಮನೆಯವರಿಗೆ ತಿಳಿಸಿದನು. ಅವನ ಈ ಘೋಷಣೆಯು ಮೊದಲನೇ ಪ್ರತಿಕ್ರಿಯೆ ಆಶ್ಚರ್ಯದ ಅಪನಂಬುಗೆಯು ದಾಯಿತು. ಮುಂದೆ ಆಶ್ಚರ್ಯ ಕಡಿಮೆಯಾಗಿ ಅಪನಂಬಿಗೆಯು ಅಳಿಸಿದಂತೆ ಮನೆಯವರು ಇವನ ಸಂಗೀತ ಸಾಧನೆಗೆ ಸಮ್ಮತಿಯಿತ್ತರು.

ಸಂಗೀತದ ಅಭ್ಯಾಸ-ಪಾಠ ಭರದಿಂದ ನಡೆಯುತೊಡಗಿತು. 'ಬಿ' ಶೃತಿಯು ಮಧ್ಯಮಕ್ಕೆ ೬-೮ ರ ಗತ್ತಿಗೆ ಗೀತ-ನಾಟಕದ ಒಂದು 'ಅಮುಖ' (ಸುರಾವಟ) ವನ್ನು ಅವನು ರಚಿಸಿದನು. ರಚಿಸಿದಮೇಲೆ ಸುಮ್ಮನೆ ಬಿದ್ದಿರುವ ಭೂಪನೇ ರಿಚರ್ಡನು ! ಊರಲ್ಲಿಯ ನಾಟ್ಯಮಂದಿರದಲ್ಲಿ ಒಂದು ನಾಟಕ ಪ್ರಯೋಗದ ಅಭ್ಯಂತರದಲ್ಲಿ ತನ್ನ ಹೊಸ ಕೃತಿಯನ್ನು ಬಾರಿಸಿ ಕುಣಿಸಿ ಸಭಿಕ ಸಮುದಾಯ ದಿಂದ ಕೂಡಲೇ ತಿರಸ್ಕಾರವನ್ನು ಗಳಿಸಿದನು ! ಅಂದಿನ ನೋಟವನ್ನು ಹೀಗೆ ಊಹಿಸಿಕೊಳ್ಳಬಹುದು. ಪ್ರತಿಷ್ಠಿತ ಪಟ್ಟಣಿಗರೂ ಅವರ ಮಡದಿಯರೂ,

ಒಬ್ಬಿಬ್ಬ ಜರ್ಮನ್ ಅಧಿಕಾರಿಗಳೂ ಅವರ ಪರಿವಾರದವರೂ, ಅಲ್ಲಲ್ಲಿ ಸ್ಥಾನಿಕ ಧರ್ಮಗುರುಗಳೂ ಸಭಿಕ ಸಮುದಾಯದ ಘಟಕರು. ನಾಟಕದ ಅಂಕ ಮುಗಿದು ಈಗ ತಾನೇ ತೆರೆಯು ಬಿದ್ದಿದೆ. ಕೂಡಲೇ ವಾಗ್ನರನ ಹೊಸ ಕೃತಿಯು ಆರಂಭವಾಗುತ್ತದೆ. ಆದರೆ ಅದೇಕೋ, ಸಂಗೀತಗಾರನು ಪ್ರತಿ ನಾಲ್ಕನೇ ಈ ಕಾಲದ ಆಘಾತಕ್ಕೆ ದೊಡ್ಡದೊಂದು ನಗಾರಿಯ 'ಧುಡುಂ' ಸಪ್ಪಳವನ್ನು ಏರ್ಪಡಿಸಿದ್ದಾನೆ. ಪ್ರತಿ 'ಧುಡುಂ' ಗುದ್ದಿಗೂ ಸಭಿಕರಲ್ಲಿ ನಗೆಯ ಕಿಲಿಬಿಲಿಯು ತೆರೆಯಂತೆ ತೇಲಿ ಹೋಗುತ್ತದೆ. ಆದರೆ ಇದು ಮೊದಮೊದಲು. ಕ್ರಮೇಣ ಸಹಾನುಭೂತಿಪರ ಸಭಿಕರಿಗೆ ಸಂಗೀತಗಾರನೊಂದಿಗೆ ಸಹಕರಿಸಲೇ ಬೇಕೆಂದು ಅನಿಸುತ್ತದೆ. ನಗಾರೆಯ ಗುದ್ದಿನೊಡನೆ ಸಾವಿರ ಕಾಲುಗಳೂ ನೆಲ ತುಳಿದು ತಾಳಬದ್ಧವಾದ ಗದ್ದಲವನ್ನು ಆ ರ ಂ ಭಿ ಸು ತ್ತ ವೆ. ನಡುವೆ ನಗೆಗಡಲು ಭೋರ್ಗರೆಯುತ್ತದೆ !

೧೮೩೦ ರಲ್ಲಿ ರಿಚರ್ಡನು ಲೀಪ್‌ಝಿಗ್ ವಿಶ್ವವಿದ್ಯಾಲಯದಿಂದ ಮ್ಯಾಟ್ರಿಕ್ ಪರೀಕ್ಷೆ ಪಾಸಾದನು. ಸಂಗೀತದ ರಾಜಧಾನಿಯೆನಿಸಿದ ವಿಯೆನ್ನಾ ನಗರವನ್ನು ಸೇರಲು ಅವನು ಹೊರಟನು. ಆದರೆ ಪ್ರಚಾರದಲ್ಲಿದ್ದ,–ನಾಟ್ಯಮಂದಿರ, ಸಂಗೀತ ಮಂದಿರಗಳಲ್ಲಿ ತುಂಬಿತುಳುಕುವ–'ಝುಂಪಾ' ಮುಂತಾದ ಗಾನಪದ್ಧತಿಗಳು ಅವನ ಮನಸ್ಸಿಗೆ ಹಿಡಿಸಲಿಲ್ಲ. ಅವನು ಬೇಸರದಿಂದ ಮರಳಿದನು. ಪ್ರಚಂಡ ಗೀತನಾಟಕಗಳ ರೂಪ ರೇಖೆಗಳು ಅವನ ಕನಸು–ಮನಸುಗಳನ್ನು ಆಕ್ರಮಿಸಿ ಬಿಟ್ಟಿದ್ದವು. ಚಿಕ್ಕಂದಿನಿಂದಲೂ ಕೇಳಿ ಮೆಚ್ಚಿ ನೆನಪಿನಲ್ಲಿ ಕಾದಿಟ್ಟುಕೊಂಡು ಬಂದ, ಪುರಾಣದ ಆಖ್ಯಾಯಿಕೆಗಳನ್ನು ಕಟ್ಟಬೇಕೆಂಬ ಪ್ರಬಲ ಆಕಾಂಕ್ಷೆಯು ಅವನ ಚಿತ್ತದಲ್ಲಿ ಬಿತ್ತಿಹೋಗಿತ್ತು. ಇದಕ್ಕಾಗಿ ಅವನು ಗ್ರೀಕ ದುರಂತ ರೂಪಕಗಳನ್ನು ಅಭ್ಯಾಸ ಮಾಡಿದನು; ಮತ್ತು ತನ್ನ ಸಿದ್ಧಾಂತಗಳನ್ನು 'ಭವಿಷ್ಯದ ಕಲಾಕಾರ್ಯ' ಎಂಬ ಪುಸ್ತಕದಲ್ಲಿ ಮಂಡಿಸಿದನು. ಅವನ ಕಲ್ಪನೆಗೆ ಅಲ್ಪವೆಂಬುದು ಗೊತ್ತೇ ಇದ್ದಿಲ್ಲ. ಅವನ ಹರಿದಾಟಕ್ಕೆ ಬಾನು ಬಯಲುಗಳೇ ಬೇಕು. ಸಂಗೀತಕ್ಕೆ ಶಬ್ದಗಳನ್ನು ರಚಿಸುವದರಲ್ಲಿ ಅವನಿಗೆ ತುಂಬ ಕಷ್ಟ. ಅವನಿಗೆ ಶಬ್ದಗಳೂ ಸಾಧಿಸಲಿಲ್ಲ. ಅವನು ಉಪಯೋಗಿಸುವ ಶಬ್ದಗಳು ಜಡ ಮತ್ತು ನಿರಸ. ಅವನ ಖಾಸಗಿ ಬದುಕು ಸ್ವಾರ್ಥ–ಅನ್ಯಾಯಗಳ ವರ್ತನೆಯಿಂದ ಕೂಡಿದ್ದು. ಆದರೆ ಸಂಗೀತ–ಭವ್ಯತೆಯೇ ಅವನ ದೇಹ; ದಿವ್ಯತೆಯೇ ಜೀವಾಳ !

೧೮೩೪ ರಲ್ಲಿ ವಾಗ್ನರನು ತನ್ನ ಮೊದಲನೇ ಗೀತನಾಟಕವನ್ನು ಪೂರ್ತಿ ಮಾಡಿದನು; ಅದಕ್ಕೆ 'ಡಿ ಫೀನ್' (ವನದೇವಿಗಳು) ಎಂದು ಹೆಸರಿಟ್ಟನು. ಅದು ಇಂದ್ರ

ಜಾಲಕರು, ಗವಿಗಳು, ವನದೇವತೆಗಳು ಪ್ರತಿಜ್ಞೆಗಳು ರಹಸ್ಯಗಳು—ಮುಂತಾದ ಮಾಯಾಪ್ರಪಂಚದಿಂದ ತುಂಬಿತ್ತು. ಅಲ್ಲದೇ ನಾಟಕದಲ್ಲಿ ಅಲ್ಲಲ್ಲಿ ಅಗ್ನಿದರ್ಶನವೂ ಬಹಳವಿತ್ತು. ಏಕೆಂದರೆ ಈಗಾಗಲೇ ವಾಗ್ನರನು 'ಅಗ್ನಿಮಿತ್ರ'ನಾಗಿದ್ದನು. ಬೆಂಕಿಯ ಬಗ್ಗೆ ಒಂದು ಹುಚ್ಚು ಉತ್ಸಾಹ ಅವನಲ್ಲಿ ಬೆಳೆದಿತ್ತು. ಆದರೆ ಈ ನಾಟಕದ ಹಸ್ತಪ್ರತಿಯು ಹಲವು ಹಸ್ತಾಂತರಗಳಾಗಿ ಬಹಳ ಜನ ಓದಿದರು; ಹೊಗತು ಅದು ರಂಗದಲ್ಲಿ ಪ್ರಯೋಗಕ್ಕೆ ಬರಲೇ ಇಲ್ಲ. ಎಲ್ಲಿಯೋ ಮೂಲೆಗುಂಪಾಯಿತು. ವಾಗ್ನರನ ಮರಣದ ೫ ವರ್ಷಗಳ ನಂತರ ಆ ನಾಟಕದ ಪ್ರಥಮ ಪ್ರಯೋಗವಾಯಿತು.

ಈ ಕಾಲದಲ್ಲಿ (ಅಂದರೆ ಮರಣಾನಂತರವಲ್ಲ !) ವಾಗ್ನರನು ಮ್ಯಾಗ್ಡೆಬರ್ಗ ಪಟ್ಟಣದಲ್ಲಿ 'ಒಪೆರಾ' (ಗೀತನಾಟಕ)ಗಳ ಸಂಚಾಲಕನಾಗಿ ಕೆಲಸಮಾಡುತಿದ್ದನು. ಅವನ ಬಳಿಯ ಕಲಾವಿದರ ಮಂಡಳಿಯಲ್ಲಿ ಒಬ್ಬ ಎಳೆವಯಸ್ಸಿನ ತರುಣಿ ಇದ್ದಳು. ಅವಳ ಹೆಸರು ವಿಲ್ಹೆಲ್ಮೀನ್ ಪ್ಲಾನರ ಎಂದಿತ್ತು. ಆಕೆಯು ಕಂಪನಿಯ ಪ್ರಯೋಗಗಳಲ್ಲಿ ಚಿಕ್ಕ ಪಾತ್ರಗಳನ್ನು ಅಭಿನಯಿಸುತಿದ್ದಳು. ಮುಂದೆ ಆಕೆ 'ಮಿನ್ನು' ಎಂದು ಹೆಸರುಗೊಂಡಳು: ಆಕೆಯೇ ವಾಗ್ನರನ ಮೊದಲನೆಯ ಹೆಂಡತಿ ಆಗಲಿದ್ದಳು.

೧೮೩೬ ರ ಒಳಗೆ ಆತನ ಇನ್ನೊಂದು 'ಒಪೆರಾ' ಸಿದ್ಧವಾಯಿತು. ಅದರ ಹೆಸರು 'ದಾಸ್ ಲೀ ಬೆಸ್ವರ್ ಬೋತ್' (ಪ್ರೀತಿ—ನಿಷೇಧ) ಎಂದಿತ್ತು. ಹತ್ತುದಿನ ಸಿದ್ಧತೆ ನಡೆಯಿಸಿ; ಕಂಪನಿಯು ಅದನ್ನು ಆಡಿ ತೋರಿಸಿತು. ಆದರೆ ಆಟದಲ್ಲಿ ತೋರಿ ಬಂದದ್ದೆಲ್ಲ ಅಪಯಶಸ್ಸಿನ ಅಂದಗೇಡೇ ಸರಿ. ಆಟದಲ್ಲಿ ಯಾವ ಹಾಡುಗಾರರಿಗೂ ತಮ್ಮ ಪಾತ್ರದ ಜ್ಞಾನವಿದ್ದಿಲ್ಲ. ದುರ್ದೈವದಿಂದ (ಅರ್ಥಾತ್ ವಾಗ್ನರನ !) ನಾಟಕದಲ್ಲಿ ಹಲವೆಡೆಗಳಲ್ಲಿ 'ತ್ರ—ಲಾ—ಲಾ'ದಂಥ ಬರೇ ತನನದ ಶಬ್ದಗಳು ಬಹಳ ಇದ್ದವೆಂಬುದು ಮಾತು ಮರೆತ ಹಾಡುಗಾರರಿಗೆ ತಮ್ಮ ಸುದೈವವೇ ಅನಿಸಿತು. ಶಬ್ದಗಳು ಸ್ಮರಣೆಗೆ ಬಾರದಿದ್ದಾಗೆಲ್ಲ ತ—ಲಾ—ಲಾ—ಲಾದ ತನನದಿಂದಲೇ ನಟರು ನಾಟಕವನ್ನು ತುಂಬಿದರು ! ಆ ದಿನ ಪ್ರಯೋಗ ಅಂದಗೇಡಾಯಿತೆಂದು, ಮರು ದಿನ ರಾತ್ರಿ ಮತ್ತೆ ನಾಟಕವನ್ನಿಡಲಾಯಿತು. ಆದರೆ ಅಂದು ನಟ ನಟಿಯರಿಗೆ ಜಗಳಾಡುವ ದುರ್ಬುದ್ಧಿ ತೋಚಿತು. ತಿಕೀಟಿನ ಹಣವನ್ನು ಬಾಗಿಲಲ್ಲಿ ಮರಳಿ ಕೊಡಲಾಯಿತು. ವಾಗ್ನರನು ಸಿಟ್ಟಿನಿಂದ ತಲೆಗೆಟ್ಟು ತೆರೆಗಳ ಹಿಂದೆ ಗುಡುಗಾಡುತ್ತ ನಿಲ್ಲಬೇಕಾಯಿತು.

ಕೆಲಕಾಲದ ನಂತರ ವಾಗ್ನರನು ಮಿನ್ನಾಳನ್ನು ಮದುವೆಯಾದನು. ಅದಾಗಲೇ

ಅವಳಿಗೆ ಒಬ್ಬ ಮಗಳಿದ್ದಳು. ಆ ಮಗಳೂ ಅವಳ ತಂಗಿಯಂತೆ ತೋರುತ್ತಿದ್ದಳು. ಅವನ ವಯಸ್ಸು ಬರೇ ೨೨, ಆಕೆಯದು ೨೭ ವರ್ಷ!

ಮುಂದಿನ ವರ್ಷ ವಾಗ್ನರನು ರಿಗಾಪಟ್ಟಣದಲ್ಲಿ ಸಂಗೀತಸಂಚಾಲಕನ ('ಕಂಡಕ್ಟರ')ನ ಕೆಲಸವನ್ನು ದೊರಕಿಸಿಕೊಂಡನು. (ಅಂದು ರಿಗಾ ರಸಿಯಾದ ಹದ್ದಿನಲ್ಲಿ ಇತ್ತು. ಇಂದು ಅದು ಪುಟ್ಟ ಸ್ವತಂತ್ರ ಲಾಟ್ವಿಯಾದ ರಾಜಧಾನಿ!) ಇಲ್ಲಿ ಬಂದ ಮೇಲೆ ಅವನು 'ರೀನ್‌ಝಿ' ಎಂಬ ಒಂದು ಅಸಾಧ್ಯ ಉದ್ದದ ಮತ್ತು ಬೆಡಗಿನ ಗೀತ ನಾಟಕವನ್ನು ರಚಿಸಲು ತೊಡಗಿದನು. ಆ ನಾಟಕ ಅರ್ಧ ಬರೆದಾಗುವಷ್ಟರಲಿಯೇ ವಾಗ್ನರನ ಕಂಡಕ್ಟರ ಕೆಲಸದ ಕರಾರಿನ ಅವಧಿ ಮುಗಿಯಿತು; ಆ ಅವಧಿಯಲ್ಲಿಯೇ ಅವನು ಮಾಡಿಟ್ಟ ಸಾಲದ ಮೂಲಕ ವಾಗ್ನರ ಕುಟುಂಬವು ಲಗುಬಗೆಯಿಂದ ರೀಗಾದಿಂದ ಕಾಲ್ದೆಗೆಯುವದೇ ಜಾಣತನವೆಂದುಕೊಂಡಿತು. ಆದರೆ ಅಲ್ಲಿಯೂ ಜಾಣತನ ಸಾಲಲಿಲ್ಲ. ವಾಗ್ನರನಿಗೆ ರಸಿಯನ್ ಗಡಿಯನ್ನು ದಾಟಲು ಅನುಜ್ಞಾ ಪತ್ರ (ಪಾಸಪೋರ್ಟ) ಸಿಗಲಿಲ್ಲ. ಅವನ ಹೆಂಡತಿಯ ನಾಟಕೀಯ ಅನುಭವ ಆಗ ಒಳ್ಳೇ ಉಪಯೋಗಕ್ಕೆ ಬಂದಿತು. ಆಕೆ ವೇಷಾಂತರಮಾಡಿ ದೇಶಾಂತರ ಸಾಧಿಸಿದಳು. ಆದರೆ ಆತನು, ಗಡಿಕಾಯುವ ಕಾವಲುಗಾರ ಸಿಪಾಯಿಯು ಗಸ್ತು ತಿರುಗುವಾಗ ಆಚೆಗೆ ಕಣ್ಣು ಹೊರಳಿಸುವತನಕ ಕಾವಲುಗಾರನು ನಿಲ್ಲಲು ಕಟ್ಟಿಟ್ಟ ಪೆಟ್ಟಿಗೆ ಕೋಣೆಯಲ್ಲಿ ಅವಿತುಕೊಂಡು ತಡೆದು ನಿಲ್ಲಬೇಕಾಯಿತು. 'ರೀನ್‌ಝಿ' ನಾಟಕದ ಪ್ರಯೋಗವು ಡ್ರೆಸ್‌ಡೆನ್ ಪಟ್ಟಣದಲ್ಲಿ ೧೮೪೨ ರಲ್ಲಿ ಜರುಗಿತು. ನಾಟ್ಯ ಮಂದಿರವು ಪ್ರೇಕ್ಷಕರಿಂದ ತುಂಬಿತ್ತು ನಿಜ; ಆದರೆ ಅವರಲ್ಲಿ ಅನೇಕ ಜನ ನಾಟಕದ ಗೀತಗಳ ಹಿಮ್ಮೇಳಕ್ಕೆ ನಿದ್ದೆ ಹೋಗಿ ತಾಲಕ್ಕೆ ಸರಿಯಾಗಿ ತಲೆತೂಕಡಿಸಹತ್ತಿದರು. ಸಂಜೆ ೬ ಕ್ಕೆ ಆರಂಭವಾದ ನಾಟಕ ನಡುರಾತ್ರಿಯಾದರೂ ಮುಗಿಯಲಿಲ್ಲ. ಆದಾಗ್ಯೂ ಪ್ರಯೋಗವು ಯಶಸ್ವಿಯೇ ಆಯಿತು. ವಾಗ್ನರನು ಮೊದಲಬಾರಿ ಧೈರ್ಯಪಟ್ಟುಕೊಂಡನು.

ಆತನ ಮುಂದಿನ ಗೀತನಾಟಕ 'ಫ್ಲಾಯಿಂಗ ಡಚ್‌ಮನ್' ('ಹಾರುವ ಡಚ್ಚನು') ಇದರ ಕಲ್ಪನೆ ಅವನಿಗೆ ರೀಗಾದಲ್ಲಿಯೇ ಹೊಳೆದಿತ್ತು. ಹೆನ್ರಿಚ್ ಹೇನ್‌ನು ಬರೆದು ತೆಗೆದ ಆ ಖ್ಯಾತಿವಂತ ಆಖ್ಯಾಯಿಕೆಯನ್ನು ಅವನು ಓದಿದ್ದನು. ಓದಿದ ವಸ್ತುವನ್ನೇ, ಪ್ಯಾರಿಸ ಪಟ್ಟಣಕ್ಕೆ ಹೋಗುವಾಗ ಪಿಲೌದಿಂದ ಲಂಡನಿಗೆ ಮಾಡಿದ ಕಡಲುಪಯಣದ ಸಂಕಟಮಯ ಅನುಭವದಿಂದ ಇನ್ನಿಷ್ಟು ವಿಸ್ತಾರವಾಗಿ ಅರಳಿಸಿಕೊಂಡು ಈ ಗೀತನಾಟಕವನ್ನು ಕಟ್ಟಿದನು. ಇದಕ್ಕೆ 'ರೀನ್‌ಝಿ' ಪಡೆದಷ್ಟು ಯಶಸ್ಸು ಲಭಿಸಲಿಲ್ಲ. ಸಾಕಷ್ಟು ತಾಲೀಮುಗಳು ಆಗದಿದ್ದಿಂದ

ಪ್ರಯೋಗಕ್ಕೆ ಹಾನಿ ತಟ್ಟಿತು. ರಂಗಭೂಮಿಯಿಂದ ಅದನ್ನು ಹಿಂದೆಗೆಯ ಬೇಕಾಯಿತು.

ಇದಾದ ಕೆಲವೇ ದಿನಗಳ ನಂತರ ವಾಗ್ನರನಿಗೆ 'ರಾಯಲ್ ಸಾಕ್ಸನ್ ಹೊಫ್ಕಾಪೆಲ್ ಮಿಸ್ಟರ' ಎಂಬ ಮಾರುದ್ದ ಹೆಸರಿನ ಸರಕಾರಿ ಸಂಗೀತಾಧಿಕಾರಿಯ ಪದವಿಯು ದೊರೆಯಿತು. ಅದರಿಂದ ನಿಯತವಾದ ವೇತನ ಬರುವಂತಾಯಿತು. ಅಂದಿನ ೨೦-೩೦ ವರ್ಷಗಳ ಅವನ ಆರ್ಥಿಕ-ದುರವಸ್ಥೆಯ ಗೊಂದಲದ ಅರ್ಥ ಮಾಡಿಕೊಳ್ಳಲು ಬಾರದಂತಾಗಿದೆ. ಮಿನ್ನಾಳು ಅವನಿಗೆ ನೆರವಾಗಲು ಆದಷ್ಟು ಹೆಣಗಿದಳು. ಆನಂತರ ೧೮೪೫ ರಲ್ಲಿ 'ತನ್ಹೊಸರ್' ಮತ್ತು ೧೮೪೮ ರಲ್ಲಿ 'ಲೊಹೆಂಗ್ರಿನ್' ಹೀಗೆರಡು ಗೀತ ನಾಟಕಗಳನ್ನು ಅವನು ರಚಿಸಿದ್ದನು. ಆದರೆ ಅವೂ ಅಷ್ಟೇನು ಗಣ್ಯವಾಗಲಿಲ್ಲ.

ಜರ್ಮನಿಯಲ್ಲಿ ಆಗ ಕೋಲಾಹಲವೆದ್ದಿತ್ತು. ಬವೇರಿಯಾದ ರಾಜ ಲುಡ್ವಿಗ್‌ನು ಲೋಲಾ ಮೊಂಟೇಜಳೆಂಬ ನರ್ತಕಿಯೊಡನೆ ಲೋಲಾಡುತ್ತಿದ್ದನು. ಬರ್ಲಿನದ ನಾಗರಿಕರು ಪ್ರಸಿಯಾದ ರಾಜಪುತ್ರ ವಿಲಿಯಮ್‌ನನ್ನು ಹೊರಗಟ್ಟಿದ್ದರು. (ಇದೇ ವಿಲಿಯಮ್‌ನು ಮುಂದೆ ಜರ್ಮನಿಯ ಪ್ರಥಮ ಚಕ್ರವರ್ತಿ ಆದನು.) ಈ ಕೋಲಾಹಲದ ಕಾಲಖಂಡದಲ್ಲಿ ವಾಗ್ನರನು ರಾಗಾಲಾಪಗಳನ್ನು ಬಿಟ್ಟು ರಾಜಕಾರಣದಲ್ಲಿ ಸಿಲುಕಿ ಬಿದ್ದನು. ಸಾಕ್ಸನ್ ಜನವು ತಮ್ಮ ಸರಕಾರದ ವಿರುದ್ಧ ಬಂಡಾಯವೆಬ್ಬಿಸಿತು. ಅದಕ್ಕೆ ಪುಟ ಕೊಟ್ಟವರಲ್ಲಿ ವಾಗ್ನರನೂ ಒಬ್ಬನೆಂದಾಯಿತು. ಅವನನ್ನು ಸೆರೆಹಿಡಿಯಲು ಸರಕಾರದ ಆಜ್ಞೆ ಹೊರಟಿತು. ಆದರೆ ಈಗ ಪಲಾಯನ ಮಾಡುವದು ವಾಗ್ನರನಿಗೆ ಹೊಸ ಅನುಭವವಿದ್ದಿಲ್ಲ. ಅವನು ಸ್ವಿತ್ಸರ್ಲಂಡದಲ್ಲಿ ಝ್ಯೂರಿಚ್ ಪಟ್ಟಣದಲ್ಲಿ ಆಶ್ರಯುವನ್ನು ಪಡೆದನು. ಅಲ್ಲಿಂದ ಮುಂದೆ ಪ್ಯಾರೀಸಿಗೂ ಪ್ಯಾರೀಸಿನಿಂದ ಬೋರ್ಡೋಕ್ಕೂ ಅವನು ಹೋದನು.

ಈ ೫ ವರ್ಷಕಾಲ ಅವನು 'ರಿಂಗ' ('ಮಂಡಲ') ಎಂಬ ಒಂದು ಪ್ರಚಂಡ ಪ್ರಮಾಣದ ಗೀತನಾಟಕಕ್ಕೆ ಕೈಹಾಕಿದನು. ಈ ನಾಟಕದ ವಸ್ತು ಜರ್ಮನರ ಒಂದು ಜಾನಪದ ಸಾಹಿತ್ಯದ ಆಖ್ಯಾಯಿಕೆ. ಈ ಬೃಹದಾಕಾರದ ಕೃತಿಯು ಅವನ ಮಿದುಳಿನಲ್ಲಿ ಕ್ರಮಶಃ ರೂಪಗೊಳ್ಳುತ್ತಲಿತ್ತು. ಅದರ ಸಮಗ್ರ ಸುದೀರ್ಘ ಪಾಠವನ್ನು ಅವನು ತಾನೇ ಬರೆದು ತೆಗೆದನು. ಅಂದಿನ ಹಂಗೇರಿಯನ್ ಸಂಗೀತಕಾರರಲ್ಲಿ ಹೆಸರಾದ ಲಿಸ್‌ಝಟ್ ಎಂಬ ಪಿಯಾನೊ ಪಟುವು ಈ ಸಮಯ ವಾಗ್ನರನ ಗೆಳೆಯನಾಗಿದ್ದನು. ರಿಂಗ ಗೀತನಾಟಕದ ಸಂಗೀತರಚನೆಗೆ ೨೦ ವರ್ಷಗಳು

ಹಿಡಿದವು. ಅದರ ಶಬ್ದರಚನೆಯು ಕಠಿಣವಾಗಿದೆ. ಆದರೆ ಸ್ವರರಚನೆಯು ಉದಾತ್ತರಮ್ಯವಾಗಿದೆ. ಈ ಕೃತಿಯು ವಾಗ್ನರನ ಗೀತನಾಟಕಗಳ ಸಿದ್ಧಾಂತಕ್ಕೆ ಉತ್ತಮ ಉದಾಹರಣೆಯಾಗಿದೆ. ಆ ಸಿದ್ಧಾಂತದಂತೆ ಮೊದಲು ನಾಟಕದ ಮುಖ್ಯ ಕಾರ್ಯಭಾಗವೆಂದರೆ ವಸ್ತು-ವಿಸ್ತಾರ, 'ಪುಸ್ತಕ'; ಆ ಮೇಲೆ ಗೀತ-ಸಂಗೀತದ ಸ್ವರಲೇಖನ !

೧೮೫೫ ರಲ್ಲಿ ವಾಗ್ನರನು ಲಂಡನ್ ನಗರಕ್ಕೆ ಭೆಟ್ಟಿಕೊಟ್ಟನು. ಅಲ್ಲಿ ಫಿಲ್ ಹಾರ್ಮೋನಿಕ್ ಸೊಸಾಯಿಟಿ ಎಂಬ ಹಿರಿದಾದ ಸಂಗೀತ ಸಂಸ್ಥೆ ಇತ್ತು. ಸಂಗೀತ ಪ್ರದರ್ಶನಕ್ಕಾಗಿ ಅವನನ್ನು ಅಲ್ಲಿಗೆ ಕರೆಯಿಸಿಕೊಳ್ಳಲಾಗಿತ್ತು. ಅಲ್ಲಿಂದ ಝ್ಯೂರಿಚ್ ಪಟ್ಟಣಕ್ಕೆ ಮರಳಿದನು. ವೇನಿಸ್, ಲುಕಾರ್ನೇ, ಪ್ಯಾರೀಸ, ಬ್ರುಸೆಲ್ಸ, ವಿಯೆನ್ನಾ ಹೀಗೆ ಅವನು ಸಂಚರಿಸಿದ್ದು ಕಂಡುಬರುತ್ತದೆ. ವಿಯೆನ್ನಾಕ್ಕೆ ಬಂದಾಗ ಅವನು 'ಟ್ರಿಸ್ಟನ್ ಮತ್ತು ಆಯ್‌ಸೋಲ್ಡ' ಎಂಬ ಗೀತನಾಟಕವನ್ನು ರಚಿಸುತ್ತಿದ್ದನು. ತನ್ನ ಕೃತಿರಚನೆಯ ಕಷ್ಟಗಳ ಕುರಿತು ವಾಗ್ನರನು ಹೀಗೆ ಉದ್ಗಾರ ತೆಗೆದಿದ್ದಾನೆ. 'ದುಃಖ-ದುರ್ದಸೆಗಳನ್ನು ಒಡಮೂಡಿಸುವ ಭಾಗಗಳನ್ನು ಬರೆಯಲು ನನಗೆ ಯಾವಾಗಲೂ ಬಹಳ ದೀರ್ಘಕಾಲ ಹಿಡಿಯುತ್ತದೆ; ಆದರೆ ಉತ್ಸಾಹದ ದಿವ್ಯ ಜೀವಿಗಳ ಕುರಿತು ಬರೆಯುವದು ಬಲು ಶೀಘ್ರವಾಗಿ ಮುಗಿಯುತ್ತದೆ. ಹೀಗೆ ಲೇಖನ ಕಾರ್ಯದ ಸಂದರ್ಭದಂತೆ ದುಃಖಿಯೂ ಸುಖಿಯೂ ಆಗುತ್ತೇನೆ.'

ಅವನು ಕೈಗೊಂಡ ಹೊಸ ಗೀತರೂಪಕವು, ಮೆಥಿಲ್ಡ್‌ಳೆಂಬ ಯುವತಿಯ ಪ್ರೇಮದ ಒತ್ತಾಯದಿಂದಲೇ ಆಗಿತ್ತು. ಆಕೆಯು ಒಬ್ಬ ಜರ್ಮನ್ ವರ್ತಕನ ಹೆಂಡತಿ. ಈ ವರ್ತಕನು ವಾಗ್ನರನ ಉದಾರ ಆಶ್ರಯದಾತರಲ್ಲಿ ಒಬ್ಬನಿದ್ದನು. 'ನಿನ್ನೊಡನೆ ಎಲ್ಲವನ್ನು ಮಾಡಬಲ್ಲೆ; ನೀನಿಲ್ಲದೆ ಏನೂ ಮಾಡಲೊಲ್ಲೆ !' ಎಂದು ವಾಗ್ನರನು ಆಕೆಗೆ ಬರೆಯುತ್ತಿದ್ದನು. ದಿನನಿತ್ಯವೂ ಹೆಂಡತಿ ಮಿನ್ನಾಳೊಡನೆ ಅವನು ಜಗಳಾಡ ಹತ್ತಿದನು. ಆ ಮೆಥಿಲ್ಡಳ ಮದನ ವ್ಯಥೆ ಈ ಮಿನ್ನಾಳ ಕದನದ ಕಥೆಗೆ ಕಾರಣ ವಾಯಿತು. ಆದರೆ ಮಿನ್ನಾಳು ತನ್ನ ಗೃಹಿಣಿಪದದ ಕರ್ತವ್ಯವನ್ನು ಅಷ್ಟೇ ಹಟದಿಂದ ಸಾಗಿಸಿಕೊಂಡು ಹೋದಳು. ಇದು ೧೮೬೧ ರ ತನಕ ಸಾಗಿತು. ಆ ನಂತರ ಪತಿ-ಪತ್ನಿ ಬೇರೆಯಾದರು. ಆದರೆ ಮಿನ್ನಾಳಿಂದ ಬೇರೆಯಾದ ಮಾತ್ರಕ್ಕೆ ಮೆಥೀಲ್ಡಳ ಪ್ರಾಪ್ತಿ ಕೂಡಿಬರಲಿಲ್ಲ. ಇನ್ನೊಬ್ಬ ರಮಣಿಯು ಇವನ ಹೃದಯವನ್ನು ಆಳಲು ಆರಂಭಿಸಿದಳು.

೧೮೫೯ ರಲ್ಲಿ ಆಸ್ಟ್ರಿಯಾದ ಚಕ್ರವರ್ತಿಯ ಸೂಚನೆಯಿಂದ ಪ್ಯಾರೀಸ್ ಒಪೆರಾ ಸಂಸ್ಥೆಯು ವಾಗ್ನರನ 'ತಾನ್ಹೊಸರ' ಗೀತರೂಪಕವನ್ನು ಪ್ರಯೋಗಕ್ಕಾಗಿ

ಸ್ವೀಕರಿಸಿತು. ೮,೦೦೦ ಪೌಂಡುಗಳಿಗೂ ಮಿಕ್ಕಿ ಹಣವೆಚ್ಚವಾಯಿತು. ರೂಪಕಕ್ಕಾಗಿ ಹೊಸ ಸಂಗೀತದ ರಚನೆಯೂ ಆಯಿತು. ಆದರೆ ಪ್ರಯೋಗವು ಕೆಟ್ಟಿತು. ಆಸ್ಟ್ರಿಯಾದ ವಿರುದ್ಧವಿದ್ದ ಕಿಡಿಗೇಡಿಗಳ ಗುಂಪು ಆ ಪುಣ್ಯವನ್ನು ಕಟ್ಟಿಕೊಂಡಿತು. ವಾಡಿಕೆಯಂತೆ ಎರಡನೆಯ ಅಂಕದಲ್ಲಿ ಬರಬೇಕಾದ 'ಬಾಲೆ' ನರ್ತನವನ್ನು ಈ ಹೊಸ ಪ್ರಯೋಗದಲ್ಲಿ ಮೊದಲಿಗೇ ತರಲಾಗಿತ್ತು. ಮೂರು ಪ್ರಯೋಗಗಳಾದವು. ಆದರೆ ಮೂರು ಮೂರಾಬಟ್ಟೆಯಾದವು. ವಾಗ್ನರನು ಹ ತಾ ಶ ನಾ ದ ನು. ವಿಯೆನ್ನಾಕ್ಕೆ ಮರಳಿ ಹೋದನು. ಅವನ ದುಃಖದಲ್ಲಿ ರಾಜಪುತ್ರಿ ಮೆಟ್ಟರ್ನಿಂಚಳು ಅವನನ್ನು ಕಾಪಾಡಿಕೊಂಡಳು. ಆಕೆಯ ಮಧ್ಯಸ್ಥಿಕೆಯ ಫಲವಾಗಿ ವಿಯೆನ್ನಾದೊಳಗಿನ ವಾಗ್ನರನ ವನವಾಸವು ಮುಗಿಯಿತು; ಅವನು ಜರ್ಮನಿಗೆ ಮರಳುವಂತಾಯಿತು.

೧೮೬೪ರಲ್ಲಿ ವಾಗ್ನರನು ತನ್ನನ್ನು ಅಡ್ಡಗಟ್ಟಿ ಹಣ ಕೇಳುವ ಸಾವುಕಾರರಿಂದ ತಪ್ಪಿಸಿಕೊಳ್ಳಲಿಕ್ಕೆ ಸ್ಟುಡ್ಗಾರ್ಟ ಪಟ್ಟಣಕ್ಕೆ ಪಲಾಯನ ಮಾಡಿದನು. ಅಲ್ಲಿ ಒಬ್ಬ ಅಧಿಕಾರಿ ಅವನನ್ನು ಭೆಟ್ಟಿಯಾದನು. ವಾಗ್ನರನಿಗೆ ಅಸಾಧ್ಯ ಗಾಬರಿ, ಇವನೆಲ್ಲಿಯ ಅಧಿಕಾರಿ ಗಂಟುಬಿದ್ದನೆಂದು ! ಆದರೆ ಅವನು ಬವೇರಿಯಾದ ರಾಜ ೨ ನೆಯ ಲುಡ್ವಿಗ್‌ನ ಕಾರ್ಯದರ್ಶಿಯಾಗಿದ್ದನು. ಅವನು ತನ್ನ ರಾಜನಿಂದ ವಾಗ್ನರನಿಗೆ ಆಸ್ಥಾನಕ್ಕೆ ಬರಲು ಒಂದು ಆಮಂತ್ರಣದ ಪತ್ರವನ್ನೂ ಶುಭಸೂಚನೆಯ ಕಾಣಿಕೆಯೆಂದು ಒಂದು ಕೆಂಪು ಹರಳಿನ ಉಂಗುರವನ್ನೂ ತಂದಿದ್ದನು. ಈ ಆಮಂತ್ರಣವನ್ನು ಆನಂದದಿಂದ ಮನ್ನಿಸಿ ವಾಗ್ನರನು ಬವೇರಿಯಾದ ರಾಜಧಾನಿ ಮ್ಯೂನಿಕ್ ಪಟ್ಟಣಕ್ಕೆ ಹೋದನು. ಅಲ್ಲಿ ಆ ತರುಣ ರಾಜನು ತನ್ನ ವಿಷಯಕ್ಕೆ ಹಿರಿದಾದ ಮೆಚ್ಚುಗೆಯ ಮನ್ನಣೆಯನ್ನು ಇಟ್ಟುಕೊಂಡಿದ್ದಾನೆಂಬುದನ್ನು ಕಂಡು ಬೆರಗಾದನು.

ಮರುವರ್ಷವೇ 'ತ್ರಿಸ್ತನ್' ಎಂಬ ಗೀತನಾಟಕದ ಪ್ರಥಮ ಪ್ರಯೋಗವು ಮ್ಯೂನಿಕ್‌ದಲ್ಲಿ ಜರುಗಿತು. ಪ್ರೇಕ್ಷಕ ಸಮುದಾಯವೆಲ್ಲ ಅದನ್ನು ವಿಸ್ಮಯದಿಂದ ನೋಡಿತು. ನಾಟಕದ ಪ್ರಯೋಗಸಂಚಾಲಕನು ಹಾನ್ಸ ಫ್ಯಾನ್ ಬುತೌ ಎಂಬಾತನು. ಇವನು ಕೊಸಿಮಾಳ ಗಂಡನು. ಇಬ್ಬರೂ ವಾಗ್ನರನ ಸಂಗಡವೇ ವಾಸಿಸುತ್ತಿದ್ದರು. ಈ ಪ್ರಯೋಗವು ಜರಗುವ ಎರಡು ತಿಂಗಳು ಮುಂಚೆ ಕೊಸಿಮಾಳಿಗೆ ಒಂದು ಹುಡುಗಿಯು ಹುಟ್ಟಿದಳು. ಆ ತಾಯಿ ಹೆತ್ತ ಕನ್ಯಾರತ್ನದ ತಂದೆತನವು ತಮ್ಮದೇ ಎಂದು ಬುತೌ ಮತ್ತು ವಾಗ್ನರ ಇಬ್ಬರೂ ಕೂಡಿಯೇ ಸಾಧಿಸುತ್ತಿದ್ದರು. ಪಾಶ್ಚಾತ್ಯ ನಾಗರಿಕ ಸಮಾಜದಲ್ಲಿ ಕೌಟುಂಬಿಕ ನೀತಿಯು ಯಾವ ಮಟ್ಟದಲ್ಲಿ ಇತ್ತೆಂಬುದನ್ನು ತಿಳಿಯಲು ಈ ಕಥೆ ಒಂದು ಸಾಧನ !

೧೮೬೬ ರಲ್ಲಿ ಒಂದು ದುಃಖದ ಸಂಗತಿ ಘಟಿಸಿತು. ವಾಗ್ನರನ ಸಾಧ್ವಿಯಾದ ಹೆಂಡತಿ ಮಿನ್ನಾಳು ಮೃತಳಾದಳು. ಪರಸ್ಪರ ತಪ್ಪು ತಿಳಿದುಕೊಂಡು ತಳಮಳದಲ್ಲಿ ತೊಳಲಾಡಿ ಹೇಗೋ ತೂಗಿಸಿಕೊಂಡು ಹೋದ ಅವರ ದಾಂಪತ್ಯದಲ್ಲಿ ದೊಂಬಿ ಯೆದ್ದು ಆಕೆಯು ಎಂದೋ ದೂರವಾಗಿದ್ದಳು. ಆದರೆ ದೂರವಿದ್ದೂ ಆಕೆ ಗಂಡನನ್ನು ದೂರಲಿಲ್ಲ. ಮೇಲಾಗಿ ಒಂದು ಪತ್ರವನ್ನು ಪ್ರಕಟಿಸಿ ಆ ಸಾಧ್ವಿಯು 'ಯಾವಾಗಲೂ–ದಾರಿದ್ರ್ಯ, ವಿಪತ್ತು, ಸಂಪತ್ತು ವ್ಯಾಧಿ–ವ್ಯಥೆ ಏನೇ ಬಂದಾಗಲೂ-ರಿಚರ್ಡನು ತನಗೆ ಆಧಾರನಾಗಿಯೇ ನಡೆದನು.' ಎಂದು ನಿಷ್ಠೆಯಿಂದ ಸಾರಿದಳು. ಈ ಪ್ರಕಟಣೆಯು ಪತಿಯ ಪ್ರಾಮಾಣಿಕತೆಯಿಂದ ಆಕೆಯ ಜೀವ ಮಾನದ ನಿಷ್ಠೆಯನ್ನೇ ಸಾರಿತು !

ಎರಡು ವರ್ಷಗಳ ನಂತರ ಹೊಸದೊಂದು ಗೀತನಾಟಕವನ್ನು ಪ್ರಯೋಗಿಸ ಲಾಯಿತು. ಅದಕ್ಕೆ ವಿಶೇಷ ಸ್ವಾಗತ ಸಿಗಬಹುದೆಂದು ವಾಗ್ನರನು ಭಾವಿಸಿದ್ದನು. ಆ ನಾಟಕದ ಪ್ರಯೋಗಗಳಿಂದ ಬರುವ ಧನದಿಂದ ಹೊಸದೊಂದು 'ಒಪೆರಾ' ಮಂದಿರವನ್ನು ಕಟ್ಟಿಸಬೇಕೆಂದು ವಾಗ್ನರನು ಯೋಚಿಸಿದ್ದನು. ಈ ಹೊಸ ನಾಟ್ಯ ಮಂದಿರದ ನಾಮಕರಣ 'ರಿಂಗ' ಎಂದು ಮಾಡುವವನಿದ್ದನು. ('ರಿಂಗ' ಇದು ಅವನ ಒಂದು ಭವ್ಯ ಗೀತನಾಟಕದ ಹೆಸರು.) ಈ ಮಂದಿರದ ನಿಧಿಗಾಗಿ ಹೊಸ ನಾಟಕದ ಪ್ರಯೋಗಗಳು ನಡೆದವು. ಈಗಲೂ ವ್ಹಾನ್‌ಬುತೌನೇ ಸಂಚಾಲಕನು. ಅವನು ವಾಗ್ನರನ ಪರಮಮಿತ್ರನಾಗಿಯೇ ಉಳಿದನು ! ಪ್ರಯೋಗಗಳು ಒಮ್ಮೆಲೇ ಯಶಸ್ವಿಯಾದವು.

೧೮೬೯ ರಲ್ಲಿ ವ್ಹಾನ್‌ಬುತೌ ಹೆಂಡತಿಯಿಂದ ಘಟಸ್ಫೋಟ ಪಡೆದನು. ಮರು ವರ್ಷವೇ ಕೊಸಿಮಾ ವಾಗ್ನರನನ್ನು ಮದುವೆಯಾದಳು. ಅದೇ ವರ್ಷ ಅವರಿಗೆ ಒಬ್ಬ ಹುಡುಗನು ಹುಟ್ಟಿದನು. ೧೮೭೬ ರಲ್ಲಿ ಅವನ ಮಹದಾಕಾಂಕ್ಷೆಯಾದ ನಾಟ್ಯಮಂದಿರವು ಬಾಯ್‌ರ್ಯೂಥ ಎಂಬಲ್ಲಿ ಕಟ್ಟಿ ಪೂರ್ತಿಯಾಯಿತು. ಪಾಶ್ಚಾತ್ಯ ಪ್ರಪಂಚದಲ್ಲೆಲ್ಲ ಸ್ಥಾಪಿತವಾದ ವಾಗ್ನರ ಪ್ರೇಮಿಗಳ ಮಂಡಳಗಳು ನಿಧಿಯನ್ನು ಕೂಡಿಸಿ ಈ ಕಟ್ಟಡದ ಕೆಲಸಕ್ಕೆ ಹಣ ಒದಗಿಸಿಕೊಟ್ಟರು. ರಾಜರು ಮಹಾರಾಜರು ಕೂಡ ಈ ಕೆಲಸವನ್ನು ಸಕ್ರಿಯವಾಗಿ ಪ್ರೋತ್ಸಾಹಿಸಿದರು.

ಈ ನಾಟ್ಯಮಂದಿರವು ವಾಗ್ನರನ ಕನಸಿನ ದುರ್ಗವಾಗಿತ್ತು; ಬವೇರಿಯಾದ ಮಲೆ ನಾಡಿನಲ್ಲಿ ಕಟ್ಟಿದ, ಜರ್ಮನ್ ಜಾನಪದ ಸಾಹಿತ್ಯಲೋಕದಿಂದ ಮೈವೆತ್ತಿಬಂದ, ಯಕ್ಷರಾಕ್ಷಸ ದೇವಗಂಧರ್ವರು ವಿವರಿಸುವ ರಂಗವದು; ಮೇಲಾಗಿ ಉತ್ತಮ

ಯಶಸ್ಸನ್ನು ವಾಗ್ನರನಿಗೆ ತಂದುಕೊಟ್ಟ ರಂಗಭೂಮಿಯದು. ಅಲ್ಲಿ ನಡೆದ 'ದಾಸ್‌ರ್‍ಹೀನ್‌ಗೋಲ್ಡ' 'ಡಿ, ವಾಕರ್' 'ಸೀಗ್‌ಫ್ರೀಡ್' 'ಗೊಟ್ಟರ್ಡಾಮರಂಗ್' ಮುಂತಾದ ನೂತನ ಗೀತನಾಟಕಗಳನ್ನು ಸಾಲುಸಾಲಾಗಿ ಅಟ್ಟ ಮೇಲಟ್ಟಗಳಲ್ಲಿ ಕಿಕ್ಕಿರಿದು ಕೂತು ಕಂಡ ಸಾವಿರಗಟ್ಲೆ ಪ್ರೇಕ್ಷಕರ ಹರ್ಷೋದ್ಗಾರಗಳು ಅಭ್ರ ಭೇದಿಯಾಗಿ ಅಬ್ಬರವೆಬ್ಬಿಸುತ್ತಿದ್ದವು. ರ್‍ಹೀನ್ ಕನ್ನಿಕೆಗಳ ಹಾಡುಗಳನ್ನು ಗುಣು ಗುಡುತ್ತ ಜನಸಾಮಾನ್ಯರೂ ದಾರಿಕೇರಿಗಳಲ್ಲಿ ವಾಗ್ನರನ ಸಂಗೀತವನ್ನು ಪಡಿ ನುಡಿಯುತ್ತಿದ್ದರು. ವಾಗ್ನರನು ಬಾಯ್‌ರ್‍ಯೂಥದಲ್ಲಿ ಮನೆಯ ಮೂಲೆಯಲ್ಲಿ ಕೂತು ನಗುತ್ತಿದ್ದನು. ಅವನು ತನ್ನ ಮನೆಯ ಮುಂಬಾಗಿಲ ಮಂಟಪದ ಮೇಲೆ ಈ ಮಾತನ್ನು ಕೊರೆಯಿಸಿದ್ದನು. 'ಈ ನನ್ನ ಮನೆಗೆ 'ವಹಾಂಫ್ರೀಡ್' ಎಂದು ಹೆಸರಿಡುತ್ತೇನೆ; ಏಕಂದರೆ ಇಲ್ಲಿ ನನ್ನ ಆಕಾಂಕ್ಷೆಗಳೆಲ್ಲ ತೃಪ್ತಿಗೊಂಡವು.' ವಾಗ್ನರನು ರಾಷ್ಟ್ರೀಯ ಮಹಾಪುರುಷನೆನಿಸಿಕೊಂಡನು. ಇನ್ನು ಅವನಿಗೆ ಆತ್ಮ ಹತ್ಯೆಯ ಮೋಹದ ಭಯ ಉಳಿಯಲಿಲ್ಲ. ಹೊಸ ಕೃತಿರಚನೆ ಹೇಗಾದೀತೆಂಬ ದಿಗಿಲಿನ ಕೂರಲಗೂ ಅವನ ಎದೆಯನ್ನು ಇನ್ನು ಕೊರೆಯುವಂತಿಲ್ಲ.

ವಾಗ್ನರನು ಸಾಧಿಸಿದ ಕ್ರಾಂತಿಕಾರ್ಯವೇನು ? ಜರ್ಮನ್ ಜನಾಂಗದ ಆತ್ಮವನ್ನೇ ಅವನು ಸಂಪನ್ನ ವರ್ಣಗಳ ಉಜ್ವಲ ಸ್ವರಾಲಾಪಗಳಲ್ಲಿ ನಾಟ್ಯಮಯವಾಗಿ ರೂಪಿಸಿದನು. ಪಾಶ್ಚಾತ್ಯ ಸಂಗೀತಕ್ಕೆ ವಾಗ್ನರನು ಒದಗುವ ಮೊದಲು ಇಟಾಲಿ ಯನ್ ಗೀತನಾಟಕಗಳ ರೀತಿಬದ್ಧವಾದ ಮಾದರಿಗಳು ಪ್ರಚಾರದಲ್ಲಿದ್ದವು. ಆದರೆ ವಾಗ್ನರನ ಪ್ರತಿಭೆಯ ಝುಂಝಾವಾತವು ಆ ಮಾದರಿಗಳನ್ನೆಲ್ಲ ಉಡುಗಿ ಹಾರಿಸಿತು. ಮೊದಲು ಸಂಗೀತಕ್ಕೆ ಶಬ್ದಗಳನ್ನು ಜೋಡಿಸುತ್ತಿದ್ದರು–ಗೂಟಕ್ಕೆ ಬಟ್ಟೆ ತೂಗಿಬಿಟ್ಟಂತೆ. ಆದರೆ ಈಗ ಶಬ್ದಗಳಿಗೆ ತಕ್ಕ ಶ್ರುತಿ ಯೋಜನೆ ಸ್ವರ ರಚನೆ ಆರಂಭವಾಯಿತು. ಕಾವ್ಯದ ಪ್ರಾಣಕ್ಕೆ ಸಮರ್ಪಕವಾಗಿ ಕೃತಿಯ (ಗೀತ ರೂಪಕದ) ಶರೀರವು ಒಡಮೂಡತೊಡಗಿತು. ಇಷ್ಟು ದೊಡ್ಡ ಕ್ರಾಂತಿಯೆಸಗಿದರೂ ಜರ್ಮನಿಯ ಹೊರಗೆ ವಾಗ್ನರನ ಸಂಗೀತಕ್ಕೆ ಸತ್ಕಾರ ಸಿಕ್ಕದ್ದು ಸಾವಕಾಶ ವಾಗಿಯೇ. ೧೮೭೭ ರಲ್ಲಿ ಅವನು ಸ್ವತಃ ಸಂಚಾಲಕನಾಗಿ ತನ್ನ ಕೃತಿಗಳನ್ನು ಲಂಡನ್ ಪಟ್ಟಣದ ಅಲ್ಬರ್ಟ ಸಭಾಭವನದಲ್ಲಿ ಪ್ರದರ್ಶಿಸಿದನು. ಆದರೆ ಸಭಾ ಭವನವು ಸಭಿಕರಿಂದ ಅಷ್ಟೇನು ತುಂಬಲಿಲ್ಲ. ವೃತ್ತಪತ್ರಗಳೂ ಅಷ್ಟೇನು ಉತ್ಸಾಹ ವನ್ನು ತೋರ್ಪಡಿಸಲಿಲ್ಲ. ಆದರೆ ಒಬ್ಬ ವಿಚಕ್ಷಣ ವಿಮರ್ಶಕನು ಮಾತ್ರ ವಾಗ್ನ ರನ ಕೃತಿಗಳು ಭವಿಷ್ಯದ ಸಂಗೀತರೂಪಗಳೆಂದು ಉಲ್ಲೇಖಿಸಿದನು.

ಇನ್ನು ಅವನ ಅವತಾರಕಾರ್ಯದ ಪರಿಸಮಾಪ್ತಿಗೆ ಕೊನೆಯದಾಗಿ ಉಳಿದವು

'ಪರ್ಸಿಫಾಲ' ಎಂಬ ಗೀತನಾಟಕ. ಇದು ಯೇಸುಪ್ರಭುವಿನ ಕೊನೆಯ ಭೋಜನದ ಪವಿತ್ರ ವಸ್ತುವಿನಿಂದ ಅರಳಿಸಿದ ರೂಪಕ. ಇದರ ಸಂಗೀತ ಕಲ್ಲುಸಕ್ಕರೆ ಕರಗಿದಷ್ಟು ಸೊಗಸಿನ ಮಧುಪಾಕು; ಎಷ್ಟು ವಿಸ್ಮಯಕರವೋ ಅಷ್ಟೇ ಬರ್ಬರ ಸೌಂದರ್ಯದ ಎರಕ. ಈ ನಾಟಕದ ಪ್ರಯೋಗವು ಬಾಯ್‌ರ್ಯೂಥದಲ್ಲಿಯೇ ೧೮೮೨ ರಲ್ಲಿ ನಡೆಯಿತು. ವಾಗ್ನರನ ಮರಣಕ್ಕೆ ಒಂದು ವರ್ಷ ಮೊದಲು. ಅದು ಜರ್ಮನಿಯು, ಅಲ್ಲ ಜಗತ್ತಿನ ರಸಿಕರಿಗೆ ಅವನು ಕೊಟ್ಟ ದಿವ್ಯಸಂಗೀತದ ಕೊನೆಯ ಭೋಜನವೇ ಆಯಿತು.

ವಾಗ್ನರನು ವ್ಹೆನಿಸ್‌ದಲ್ಲಿ ಹೃದಯವಿಕಾರದಿಂದ ಮೃತನಾದನು. ಅಲ್ಲಿ ಅವನ ಕುಟುಂಬವು ಚಳಿಗಾಲಕ್ಕಾಗಿ ಹೋಗಿ ತಂಗಿತ್ತು. ೧೮೮೩ ರಲ್ಲಿ ಫೆಬ್ರುವರಿ ೧೦ನೇ ದಿನಾಂಕಕ್ಕೆ ವಾಗ್ನರನ ವೈದ್ಯನು ಡಾ. ಕೆಪ್ಲರ ಎಂಬವನು ವಾಗ್ನರನನ್ನು ಸಂದರ್ಶಿಸಿದನು. ಆಗ ಸಂಗೀತಗಾರನು ತೀರ ಉದ್ರಿಕ್ತ ಸ್ಥಿತಿಯಲ್ಲಿ ಇದ್ದನು. 'ಪರ್ಸಿಫಾಲ'ದ ಸಂಚಾಲಕನಾದ ಲೆವ್ಹಿಯೊಂದಿಗೆ ನಡೆವ ಸಂಭಾಷಣದ ಪರಿಣಾಮವಾಗಿ ಅವನು ಕೆರಳಿ ಹೋಗಿದ್ದನು. ತಾನು ವ್ಹೆನಿಸ್ ಬಿಟ್ಟುಹೋದರೆ ತನ್ನ ಕ್ಷುಬ್ಧ ಮನಃಸ್ಥಿತಿಗೆ ನೆಮ್ಮದಿಯಾದೀತೆಂದು ವಾಗ್ನರನೇ ವೈದ್ಯನಿಗೆ ಸೂಚಿಸಿದನು. ಜತೆಗೆ ತನ್ನ ಮಗನನ್ನೂ ಒಯ್ಯುವೆನೆಂದನು. ವೈದ್ಯನು ಒಪ್ಪಿದನು. ವೆರೋನಾ ಎಂಬಲ್ಲಿಗೆ ಚಿಕ್ಕದೊಂದು ಯಾತ್ರೆಮಾಡುವದು ನಿಶ್ಚಯಿಸಿತು.

ಮೂರು ದಿನಗಳನಂತರ ಗೆಳೆಯನೊಬ್ಬನು ವಾಗ್ನರನ ಮನೆಗೆ ಬಂದನು. ಆಗ ಕೊಸಿಮಾ ಪಿಯಾನೋ ನುಡಿಸುತ್ತ ಕೂತಿದ್ದಳು. ಮಗ ಸೀಜಫ್ರಿಡ್‌ನು,– ಭವಿಷ್ಯದಲ್ಲಿ ಸುಪ್ರಸಿದ್ಧ ಸಂಗೀತ ಸಂಚಾಲಕ (ಕಂಡಕ್ಟರ) ನಾಗಲಿರುವ ಬಾಲಕನು– ತಾಯಿಯ ಬಳಿಯಲ್ಲಿಯೇ ಇದ್ದನು. ಪಿಯಾನೋ ನುಡಿಸುತ್ತಿರುವ ಕೊಸಿಮಾ ಅಳುತ್ತಿದ್ದಳು. ಅದೇ ಕ್ಷಣಕ್ಕೆ ಕೆಲಸದವಳು ಒಳಗೆ ಬಂದು, ವಾಗ್ನರನ ಮೈಯಲ್ಲಿ ನೆಟ್ಟಗಿಲ್ಲ; ಆದ್ದರಿಂದ ಊಟಕ್ಕೆ ಕೆಳಗೆ ಬರುವದಿಲ್ಲವೆಂದು ಸಮಾಚಾರ ತಂದಳು. ಕೊಸಿಮಾಳ ಮುಖ ಬಿಳುಪಿಟ್ಟಿತು. ಜಿಗಿದೆದ್ದು ಅವಳು ಮೇಲುಪ್ಪರಿಗೆಗೆ ಧಾವಿಸಿದಳು. ಕೂಡಲೇ ಕೆಳಗಿಳಿದು ಬಂದು ತನ್ನ ಗಂಡನಿಗೆ ಹೃದಯದ ಉಗ್ರವಾದ ವಿಕಾರವಾಗಿದೆಯೆಂದು ಕೂಗಿಕೊಂಡಳು. ವೈದ್ಯನಿಗೆ ಕರೆಯು ಹೋಯಿತು. ತನ್ನ 'ಸಹೋದರ'ನು ಬಂದ ಅರ್ಧತಾಸಿನಲ್ಲಿ ಯಮರಾಜನು ಸಂಗೀತಗಾರನನ್ನು ಅವನಿಂದ ತನ್ನವಶಕ್ಕೆ ಸೆಳೆದುಕೊಂಡನು. ಆ ವಿಶ್ವದ ಶ್ರೇಷ್ಠ ಕಲಾವಿದನು 'ಎಂಜಾಯಿನಾ ಪೆಕ್ಟೊರಿಸ್' ಎಂಬ ಹೃದಯವ್ಯಾಧಿಯು ವಿಕೋಪಿಸಿ ಕಾಲವಶನಾದನು. ಜೀವದ ಜತೆಗಾರ್ತಿ ಕೊಸಿಮಾಳ ಕೈಯಲ್ಲಿ ತನ್ನ ಕೈಯನ್ನು

ದೃಢವಾಗಿ ಇಟ್ಟು ವಾಗ್ನರನು ಸತ್ತನು.

ವಾಗ್ನರನ ಆಯುಷ್ಯದ ಎಲ್ಲ ವಿವರಗಳು ಯಾರಿಗೂ ಗೊತ್ತಿಲ್ಲ. ಆದರೆ ವಿಶ್ವದ ಸರ್ವಶ್ರೇಷ್ಠ ಸಂಗೀತಗಾರರಲ್ಲಿ ಒಬ್ಬನೆಂದು ಅವನಿಗೆ ಎಲ್ಲರೂ ರಾಜವಂದನೆಯನ್ನು ಸಲ್ಲಿಸುತ್ತಾರೆ. ಆಯುಷ್ಯದ ಬಹುಭಾಗ ತಿರಸ್ಕಾರ ಧಿಃಕಾರ ಕುತ್ಸಿತ ಕುಚೇಷ್ಟೆಗಳಿಗೆ ಬಲಿಯಾದರೂ ಅವೆಲ್ಲವನ್ನು ಗೆದ್ದು ಬಾಳಿ ಸಂಗೀತಕ್ಕೂ ಸಂಸಾರಕ್ಕೂ ಹೊಸದೊಂದು ಸೌಂದರ್ಯವನ್ನು ಅವನು ಕೊಟ್ಟು ಹೋದನು. ಅವನ ಹಂಗೇರಿಯನ್ ವಾದಕ ಮಿತ್ರನಾದ ಲಿಝ್ಟ್‌ನ ಶಬ್ದಗಳಲ್ಲಿ ಬಣ್ಣಿಸುವದಾದರೆ 'ವಾಗ್ನರನು ಚೈತನ್ಯದ ವ್ಹಿಸೋವಿಯಸ್! ಈ ಅಗ್ನಿ ಪರ್ವತವು ಜ್ವಾಲೆಗಳನ್ನು ಭುಗಿಲೆದ್ದು ತೂರುತ್ತಿತ್ತು; ಆದರೆ ಆ ಜ್ವಾಲೆಗಳೊಡನೆ ಜಾಜಿಮಲ್ಲಿಗೆ ಗುಲಾಬಿಯ ಹೂಗಳನ್ನೂ ಚೆಲ್ಲಾಡುತ್ತಿತ್ತು. ●

# ಪಶ್ಚಿಮದ ಪ್ರತಿಭೆ

**ಭಾಗ – ೨**

ಮಿಂಚಿನಬಳ್ಳಿ ಪ್ರಕಾಶನ ಧಾರವಾಡ
೧೯೫೧

## ಕ್ರಾಂತಿ ಪ್ರತಿಭೆ

ಇಂದಿನ ಪಾಶ್ಚಾತ್ಯ ರಾಜಕಾರಣದ ಮೂಲತತ್ವಗಳನ್ನು ಪ್ರತಿಪಾದಿಸಿದ ತ್ರಿಮೂರ್ತಿಗಳು.

* ರೂಸ್ಸೋ
* ವ್ಹಾಲ್ಟಾಯರ್
* ಚಾರ್ಲ್ಸ್ ಡಾರ್ವಿನ್

# ಜೀನ ಜಾಕ್ಸ ರೂಸ್ಸೋ

ರೂಸ್ಸೋ ಫ್ರಾನ್ಸಿನ ರಾಜ್ಯಕ್ರಾಂತಿಗೆ ೧೧ ವರ್ಷ ಮುಂಚಿತವಾಗಿಯೇ ಮಡಿದನು. ಆದರೆ ಒಂದು ಮಾತು ಸತ್ಯ. ಆ ಕ್ರಾಂತಿಯು ಅವನದೇ ಕೂಸು! ಕ್ರಾಂತಿ ಯಂಥ ಸಾಮಾಜಿಕ ವಿಪ್ಲವವನ್ನು ಯಾರೊಬ್ಬರ ವೈಯಕ್ತಿಕ ಹೊಣೆಗೆ ಹೇರಲು ಬರುವಂತಿದ್ದರೆ, ಜೀನ ಜಾಕ್ಸ ರೂಸ್ಸೋ ಎಂಬ ಈ ವ್ಯಕ್ತಿಯೇ ಆ ಮಹಾ ಕ್ರಾಂತಿಯ ಕಾರಣ ಪುರುಷನೆಂದು ನಿರ್ಭಯವಾಗಿ ಹೇಳಬಹುದು. 'ರಾಜಾ ಕಾಲಸ್ಯ ಕಾರಣಂ' ಎಂಬ ಮಾತು ನಿಜವೋ ಸುಳ್ಳೋ ಗೊತ್ತಿಲ್ಲ. ಆದರೆ ಲೇಖನಿಯ ರಾಜನು ತನ್ನ ಮುಂದಿನ ಯುಗಮಾನವನ್ನೇ ಮಾರ್ಪಡಿಸ ಬಲ್ಲನೆಂಬುದು ನಿಚ್ಚಳವಾದ ಸತ್ಯ. ರೂಸ್ಸೋನ ಲೇಖನವು ಅವನ ಸಮಯದ ಮೇಧಾವಿಗಳ ಮೇಲೆ ಅಷ್ಟೇ ಅಲ್ಲ, ಜಗತ್ತಿನ ಮುಂದಿನ ಇತಿಹಾಸದ ಮೇಲೆಯೂ ವ್ಯಾಪಕವಾದ ಪ್ರಭಾವವನ್ನು ಬೀರಿತು. ರಾಜ್ಯಸಂಸ್ಥೆಯಲ್ಲಿ ಪ್ರತಿಯೋರ್ವನಿಗೆ ಸಮಾನತೆ ಹಾಗು ಸ್ವಾತಂತ್ರ್ಯತೆ ಇವೆ, ಎಂದು ರೂಸ್ಸೋ ಘಂಟಾಘೋಷವಾಗಿ ಪ್ರತಿಪಾದಿಸಿದನು. ಮೌಲಿಕತೆ ಮತ್ತು ಸಾಮರ್ಥ್ಯ ಇವು ಅವನ ಬುದ್ಧಿ ಪ್ರತಿಭೆಯ ವಿಶೇಷಗಳು. ಸಾಮಾಜಿಕ ದೋಷ ದುಃಖಗಳ ಕುರಿತು ಹೇಗೋ, ಹಾಗೇ ಅವನ ಶಿಕ್ಷಣ ವಿಷಯಕ ಸಿದ್ಧಾಂತಗಳಲ್ಲಿಯೂ ಇವೆರಡೂ ಗುಣಗಳು ಪ್ರಭಾವಿಯಾಗಿ ವ್ಯಕ್ತವಾದವು. ಈ ಪ್ರಭಾವದ ಮೂಲಕವೇ ಅವನ ವಿಚಾರಗಳು 'ಆಧುನಿಕ'ವೆನಿಸುವವು.

ಆದರೆ ರೂಸ್ಸೋನ ಚರಿತ್ರವು ವಿಚಿತ್ರ, ವಿಕಾರವಶ, ದುಃಸಾಹಸಮಯ! ಅದರ ಸಮಾಪ್ತಿ–ಉನ್ಮಾದ ಭ್ರಮೆಯಲ್ಲಿ! ಅವನ ಕ್ರಾಂತಿಕಾರಿಯಾದ ವಿಚಾರ ಪ್ರಚೋದನೆಯ ಮಹತ್ಕಾರ್ಯದ ಹಿನ್ನೆಲೆಯಲ್ಲಿ ಈ ವಿಕಾರಗೆಟ್ಟ ಬಾಳು ಒಂದು ವಿಧಿಯ ವಿಕಟ ವಿಡಂಬನೆಯಾಗಿ ಕಾಣುತ್ತದೆ.

ಅವಧೂತ ಯೋಗಿಗಳು ಬಾಲ–ಉನ್ಮತ್ತ–ಪೈಶಾಚವೃತ್ತಿಯಲ್ಲಿ ನಡೆಯುವ ದುಂಟೆಂಬ ಮಾತು ಯೋಗಶಾಸ್ತ್ರದಲ್ಲಿ ಬಂದಿದೆ. ಹಾಗೆಯೇ ಪ್ರತಿಭೆಯು ಬುದ್ಧಿಭ್ರಂಶದ ತೀರ ಹತ್ತಿರದ ಬಂಧುವೆಂದು ಒಂದು ಲೋಕಪ್ರಿಯ ಪ್ರವಾದವಿದೆ. ಆ ಪ್ರವಾದದಲ್ಲಿ ಪ್ರಮಾದವೇನೂ ಇಲ್ಲ. ಈ ಸೃಷ್ಟಿ ವೈಚಿತ್ರ್ಯದ ಒಂದು ಸಮರ್ಪಕ ಉದಾಹರಣೆಯೆಂದರೆ ರೂಸ್ಸೋ. ಅವನ ಮನಸ್ಸು ಕಂಗೆಟ್ಟ ಕನವರಿಕೆ ಗಳ ತಾಂಡವ ರಂಗ; ಬಾಳಿನ ಕೊನೆ–ಕೊನೆಗೆ ಹುಚ್ಚಿನ ಹಾವಳಿಗಳಿಗೂ ಅದು

ತುತ್ತಾಯಿತು. ಕಾಮ, ಲೋಭ, ಮದ, ಮಾತ್ಸರ್ಯಗಳಿಗೆಲ್ಲವೂ ಅದು ಕ್ರೀಡಾಸ್ಥಾನವಿತ್ತು. ಆದರೆ ಇದೆಲ್ಲದರ ಜತೆಗೆ ಆ ಮನಸ್ಸು ಒಂದು ತೇಜಸ್ಸಿಗೆ ತವರಾಗಿತ್ತು. ಒಂದು ದಲಿತ ಜನಾಂಗದ ಗಲಿತ ಗಾತ್ರಗಳಲ್ಲಿ ಕ್ರಾಂತಿಯ ಚೈತನ್ಯವನ್ನು ಹೊತ್ತಿಸಿ ಬಿಡುಗಡೆಯ ದಾರಿಯನ್ನು ಅದು ಬೆಳಗಿತು. ನವಭಾಗ್ಯದ ಮುಂಬೆಳಕನ್ನು ಚಲ್ಲಿತು. ನೀತಿತತ್ವದ ಹೊಸ ಪ್ರಮೇಯಗಳನ್ನು ಬಗೆಹರಿಸುವ ಹಾದಿಯು ಕೈದೀಪವಾಯಿತು.

ರೂಸ್ಸೋನ ಕನಸುಗಳನ್ನೂ ಕಂಗೇಡನ್ನೂ ನಾವು ಇಲ್ಲಿ ಸಂಕ್ಷೇಪದಲ್ಲಿ ಅರಿತುಕೊಳ್ಳೋಣ. ಜತೆಗೆ ಅವನ ಅಂಥ ಕನವರಿಕೆಗೆ ಮೂಲವಾದ ಸ್ಥಿತಿಗತಿಗಳನ್ನೂ ಗುರುತಿಸಿಕೊಳ್ಳೋಣ. ಅವನ ದೈವವು–ಕೊನೆಗೂ ಬಗೆಹರಿಯದ ಬಗೆಗೇಡಿ ದೈವವೆಂದೇ ಕರೆಯುವದು. ಮತ್ತೇನು ?– ಅವನನ್ನು ಬದುಕಿನ ಕಷ್ಟ–ನಷ್ಟ–ನಿಷ್ಠುರಗಳೊಳಗಿಂದ ಆಸೆ ಎಳೆದೊಯ್ಯಿತು. ಅವನ ಸ್ವಭಾವದ ನೀಚಾಂಶಗಳು ಆ ದೈವದೊಡನೆ ಎಡೆಬಿಡದೆ ಎದೆಗೊಟ್ಟು ಹೋರಾಡುವಾಗ ಅವನ ಮನುಷ್ಯತ್ವದ ಉತ್ತಮಾಂಶಗಳೆಲ್ಲ ಹಿಂಡಿ ಹಿಪ್ಪೆಯಾದವು. ಆದರೆ ಇದೆಲ್ಲ ಕಸಕಡ್ಡಿ ಹಾಳು ಹೊಲಸಿನೊಳಗೂ ಅವನ ಪ್ರತಿಭೆಯ ರತ್ನಸ್ಫುಲಿಂಗವು ಪ್ರಜ್ವಲಿಸಿತು ! ಇದು ಪ್ರಪಂಚದ ಪುಣ್ಯ !

ರೂಸ್ಸೋ ಹುಟ್ಟಿದ್ದು ಜಿನೇವಾದಲ್ಲಿ–೧೭೧೨ ರಲ್ಲಿ, ಜೂನ ೨೮ ನೇ ದಿನ. ಅವನ ತಂದೆಯು ಗಡಿಯಾರ ಸರಿಮಾಡುವ ಹೋರೆಗಾರ. ಗಡಿಯಾರ ಇದ್ದವರೆಷ್ಟು ? ಅವುಗಳನ್ನು ಸರಿಮಾಡಿ ಬರುವ ಹಣವಾದರೂ ಎಷ್ಟು ! ತಂದೆಯು ತನ್ನ ಸಂಪಾದನೆಯ ಕೊರತೆ ತುಂಬಿ ಕೊಳ್ಳಲು ಬಿಡುವಿನ ವೇಳೆಯಲ್ಲಿ ನರ್ತನದ ಪಾಠಗಳನ್ನು ಹೇಳುತ್ತಿದ್ದನು. ರೂಸ್ಸೋನ ಪೂರ್ತಿ ಹೆಸರು ಜೀನ ಜಾಕ್ಸ ರೂಸ್ಸೋ. ಜೀನನ ಜನನದ ೧೫ ದಿನಗಳಲ್ಲಿ ಅವನ ತಾಯಿ ತೀರಿಕೊಂಡಳು. ಆದಾಗ್ಯೂ ಅವನ ಬಾಳಿನ ಮೊದಲಿನ ೧೦ ವರ್ಷಗಳು ತಂದೆಯ ಸಹವಾಸದಲ್ಲಿ ಸುಖವಾಗಿಯೇ ಕಳೆದವೆನ್ನಬಹುದು. ಆಗ ಅವನನ್ನು ನೋಡಿಕೊಳ್ಳುವವರೆಂದರೆ ತಂದೆಯ ಹೊರತು, ಜಾಕಿಲೈನ್ ಎಂಬ ದಾದಿ ಮತ್ತು ಒಬ್ಬ ಅಬಚಿ. ಮಾತೃವಾತ್ಸಲಕ್ಕೆ ವಂಚಿತನಾದ ರೂಸ್ಸೋನ ಭಾವಲೋಕವು ಈ ಮೂವರ ಮೂಲಕ ಬರಿದಾಗಲಿಲ್ಲ.

ತಂದೆಯು ಸಾಮಾನ್ಯ ಗಡಿಯಾರಗಾರನಿದ್ದಿಲ್ಲ. ಮಗನಿಗೆ ಓಮುಬರಹದೊಡನೆ, ಅಭಿಜಾತ ವಾಙ್ಮಯವನ್ನು ಮೆಚ್ಚಲೂ, ಜತೆಗೆ ಆ ಕಾಲದ ಕರುಣ–ಕಾದಂಬರಿ

ಗಳನ್ನು ಓದಿ ಕರಗಲೂ ಕಲಿಸಿದನು. ಆದರೆ ರೂಸ್ಸೋನಿಗೆ ಪಿತೃವಿಯೋಗದ ದುರ್ಯೋಗವು ೧೭೨೨ ರಲ್ಲಿ ಬಂದೊದಗಿತು. ತಂದೆಯು ಒಂದು ಜಗಳದಲ್ಲಿ ಸಿಲುಕಿ ಬಿದ್ದನು. ಅದರ ಫಲವಾಗಿ ಅವನು ಸೆರೆಮನೆ ಅಥವಾ ದೇಶತ್ಯಾಗ ಇವೆರಡರಲ್ಲಿ ಒಂದನ್ನು ಆಯ್ದುಕೊಳ್ಳುವ ಪೇಚು ಬಂದಿತು. ಆಗ ಸ್ವಾತಂತ್ರ್ಯದ ಮಂತ್ರದೃಷ್ಟಾರನ ಆ ಜನಕನು ಪಲಾಯನವನ್ನೇ ಸ್ವೀಕರಿಸಿದನು. ಹುಡುಗನನ್ನು ತನ್ನ ಸಹೋದರನ ವಶಕ್ಕೆ ಒಪ್ಪಿಸಿ ಲಿಯೋನ್ಸ ಪಟ್ಟಣಕ್ಕೆ 'ಫರಾರಿ'ಯಾದನು. ಈ ಬರ್ನಾರ್ಡ ಚಿಗಪ್ಪನಿಗೆ ರೂಸ್ಸೋನ ವಯಸ್ಸಿನ ಒಬ್ಬ ಮಗನಿದ್ದನು. ಇಬ್ಬರೂ ಸಮವಯಸ್ಕ ಹುಡುಗರನ್ನು ಬರ್ನಾರ್ಡನು ಬೋಯಿಸ್ಸೀ ಎಂಬಲ್ಲಿಯ ಧರ್ಮಗುರುವಿನಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದನು. ಈ ಗುರುವಿನ ಹೆಸರು ಮೊಶಿಯರ್ ಲ್ಯಾಂಬರ್ಸಿಯರ್. ಆ ಸದ್ಗುರುವು ಅವಿವಾಹಿತನಿದ್ದಿರಬೇಕು. ತನ್ನ ತಂಗಿಯೊಡನೆ ಮನೆ ನಡೆಯಿಸಿಕೊಂಡು ಇದ್ದನು. ಆ ತಂಗಿಯ ವಯಸ್ಸು ೩೦ ವರ್ಷ, ತರಳ ರೂಸ್ಸೋನಿಗೆ ಈ ವಯಸ್ಸು ಅಡ್ಡಿ ಆಗಲಿಲ್ಲ! ತನ್ನ ವಯಸ್ಸೂ ಕಡಿಮೆಯೆಂದು ಅವನು ತಡೆಯಲಿಲ್ಲ. ಆ ಪ್ರೌಢೆಯೊಡನೆ ಕೂಡಲೇ 'ಪ್ರೇಮದಲ್ಲಿ ಬಿದ್ದನು'! ಆಕೆಗೆ ಈ ಬಾಲಿಶ ಪ್ರೇಮದ ಹುಟ್ಟು-ಗುಟ್ಟು ರಟ್ಟಾಗಿದ್ದಿಲ್ಲ! ಆದರೂ ಈ ವ್ಯಾಮೋಹದ ಪರಿಣಾಮವು ಅವನ ಜೀವಮಾನವೆಲ್ಲ ಪ್ರಭಾವಿಯಾಗಿ ಉಳಿಯಿತೆಂದು ಅವನೇ ಬರೆದಿಟ್ಟಿದ್ದಾನೆ. ಈ ಮಾತಿನಲ್ಲಿ ಅತಿಶಯೋಕ್ತಿಯ ಅಂಶ ಬಹಳಷ್ಟು ಇದೆ. ರೂಸ್ಸೋ ಅಸಾಮಾನ್ಯ ಅಹಂಕಾರಿಯೂ ಆತ್ಮಸಂಮೋಹಿತನೂ ಆದ ವ್ಯಕ್ತಿ. ತನ್ನ ಅನಿಸಿಕೆಗಳನ್ನು ಅತಿಯಾಗಿ ಹಿಗ್ಗಿಸಿ ಬರೆದಿಡುವದು ಅವನಿಗೆ ಹತ್ತಿದ ಚಟ. ಆದಾಗ್ಯೂ ಇಷ್ಟೊಂದು ಒಪ್ಪಿಕೊಳ್ಳಬಹುದು. ಅವನ ಆ 'ಪ್ರಬುದ್ಧಪದ್ಮನಯನೆ'ಯ ವಿಷಯದ ಈ ಅಪ್ರಬುದ್ಧ ಪ್ರಣಯದಿಂದ ಅವನ ಆರಂಭ ಜೀವನವು ಅತ್ಯುಗ್ರ ಮನಃಕ್ಷೋಭೆ ಮತ್ತು ಭಾವಮಂಥನಗಳ ಕಾಲವಾಯಿತು. ಅವನ ಮನಃಕ್ಷೋಭದ ಈ ವೃತ್ತಿಯು ಮುಂದೆ ೬ ವರ್ಷಗಳ ತನಕವೂ ಅವನ ಅಂತರಂಗವನ್ನು ಬಾಧಿಸಿತು. ಆಗಲೂ ಕೊನೆಗೆ ಈ ಬಾಧೆಯ ಭೂತವನ್ನು ತೊಲಗಿಸಲು ಅವನು ಧರ್ಮಾಂತರವನ್ನು ಮಾಡಬೇಕಾಯಿತು.

ಈ ನಡುವೆ ರೂಸ್ಸೋ ತನ್ನ ಚಿಕ್ಕಪ್ಪ ಬರ್ನಾರ್ಡನಲ್ಲಿಗೆ ಮರಳಿದ್ದನು. ಮನೆಗೆ ಮರಳಿದ ಮೇಲೆ ೩-೪ ವರ್ಷ ಅವನು ಕೆತ್ತನೆಯ ಕೆಲಸಗಾರನಲ್ಲಿ ಕೆಲದಿನ-'ಉಮೇದ್ವಾರಿಕೆ'ಯನ್ನು ಮಾಡಿದನು. ಆದರೆ ಈ ಕಸುಬಿನ ತುಂಬು ಗದ್ದಲದ ಜೀವನವು ಈ ಸೌಮ್ಯ ನಡೆನುಡಿಯ, ಅರೆಮರವಿನ ಸ್ವಚ್ಛಂದ ವೃತ್ತಿಯ ಭಾವಜೀವ ಬಾಲಕನಿಗೆ ಒಗ್ಗುವದಾದರೂ ಹೇಗೆ? ಅವನ ಮನೋವಿಕಾಸಕ್ಕೆ ಅಲ್ಲಿಯ ಒಣ ವ್ಯಾವಹಾರಿಕ ವಾತಾವರಣವು ತೊಡಕಾಯಿತು. ಅದರ ಫಲವಾಗಿ

ವಿಕ್ಷಿಪ್ತ ವರ್ತನೆಯ ರೂಸ್ಸೋ ತುಡುಗು-ತುಂಟುಗಳ ಅಡ್ಡದಾರಿ ಹಿಡಿದನು. ತನ್ನ ಸಹದ್ಯೋಗಿಗಳೊಡನೆ ಸಲ್ಲದ ಕುಚೋದ್ಯಮಾಡತೊಡಗಿದನು, ತನ್ನ ಕೆತ್ತನೆಯ ಕಸುಬಿನ ಅಂಗವಾದ ರೇಖಾಚಿತ್ರಣದಲ್ಲಿ ಅವನು ಕೆಲಮಟ್ಟಿಗೆ ಪ್ರಗತಿಯನ್ನು ಕಾಣಿಸಿದರೂ ಜತೆಗೆ ಇಂಥ 'ಅಧೋಗತಿ'ಯನ್ನು ಸಾಧಿಸಿದನು ! ಅವನ ಒಡೆಯನು ಪ್ರಾಮಾಣಿಕನಿದ್ದನು. ಆದರೆ ಅಷ್ಟೇ ನಿಷ್ಠುರನಿದ್ದನು. ಹಾದಿಗೆಟ್ಟ ಹುಡುಗರಿಂದಲೂ ಕೆಲಸ ಮಾಡಿಸಿಕೊಳ್ಳುವ ಬಲ ಅವನಲ್ಲಿತ್ತು. ರೂಸ್ಸೋನ ಅಹಂಕಾರಕ್ಕೂ ಶರೀರಕ್ಕೂ ಈ ಬಲವು ಅಸಹ್ಯವಾಯಿತು. ಆ ಹಟಮಾರಿ ಹುಡುಗನು ಹೊಡೆತಕ್ಕೆ ಹೆದರಿ ಓಡಿ ಹೋದನು.

ತಾನೊಬ್ಬ ಬಂಡುಗಾರ. ಸಾಮಾನ್ಯ ಜೀವನದ ರೂಢಿ ರೀತಿಗಳ ವಿರುದ್ಧ ಬಂಡು ಹೂಡಿದ ಎದೆಗಾರನೆಂದೇ ಜಗತ್ತು ತನ್ನನ್ನು ಮನ್ನಿಸಬೇಕು, ಸ್ವಾಗತಿಸಬೇಕು- ಎಂದು ರೂಸ್ಸೋನ ಕನಸು. ಆದರೆ ಈ ಜಗತ್ತಿನ ನನಸು ಬೇರೆಯೇ ಇತ್ತು. ರೂಸ್ಸೋನ ವ್ಯಕ್ತಿತ್ವದ ಕುರಿತು ಅವನಿಗೂ ಜಗತ್ತಿಗೂ ಆಗ ಒಮ್ಮತವಾಗಲೇ ಇಲ್ಲ. ಉಂಡಾಡಿಯಾಗಿ ಅಂಡಲೆಯುವ ಪುಂಡನೆಂದೇ ಜನವು ಅವನನ್ನು ಗುರುತಿಸಿತು. ಆದ್ದರಿಂದ ಹೊಟ್ಟೆಗಾಗಿ, ಹಾದಿಯ ವೆಚ್ಚಕ್ಕಾಗಿ, ಬಿಕ್ಕೆಬೇಡು ವದಕ್ಕೂ ಹಿರಿದಾದ ಉಪಾಯ ಅವನಿಗೆ ಉಳಿಯಲಿಲ್ಲ. ಬಿಕ್ಕೆ ಬೇಡುತ್ತ ಅವನು ಜಿನೇವಾದ ನೆರೆಯ ಒಂದು ಊರಾದ ಕೊನಫಿಗ್ನಾನ್ ಎಂಬಲ್ಲಿಗೆ ಬಂದನು.

ಕೊನಫಿಗ್ನಾನದಲ್ಲಿ ಅವನಿಗೆ ಕ್ಯಾಥೋಲಿಕ್ ಪಂಥದ ಒಬ್ಬ ಧರ್ಮ ಗುರುವು ಭೆಟ್ಟಿಯಾದನು. ಆ ಪಾದ್ರಿಯು ಕ್ರಿಸ್ತಧರ್ಮ ಸಂಸ್ಥೆಯ ಚರ್ಚಿನ ಆರಾಧನೆಗೆ ಒಳಪಡುವದರಿಂದ ಒದಗುವ ತುಷ್ಟಿ-ಪುಷ್ಟಿಗಳನ್ನು ಬೆಡಗಿನ ನುಡಿಗಳಿಂದ ಬಣ್ಣಿಸಿದನು. ಇದರಿಂದ ರೂಸ್ಸೋನ ಭಾವ ಜೀವಕ್ಕೆ ಬತ್ತಿದ ಸೆಲೆಯು ಮತ್ತೆ ಒಡೆದಂತಾಯಿತು. ಅವನ ಗೊಂದಲಗೆಟ್ಟ, ಅಸಂದಿಗ್ಧ ಅಸ್ಪಷ್ಟ ಕಲ್ಪನೆಗಳ ತೊಡಕುಗಳು ಒಮ್ಮೆಲೇ ತಿಳಿಯಾದಂತೆ ಕಂಡವು. ಕ್ಯಾಥೋಲಿಕ್ ಪಂಥವನ್ನು ಸೇರಿದರೆ, ಜೀವನವು ಸರಳವಾಗುವದು. ಬಾಳಿನ ಬಗೆ ನೆಮ್ಮದಿಯಾಗುವದು. ಯಾವ ಭಯ, ಸಂಶಯಗಳೂ ಭಾವಿಕನಿಗೆ ಬಾಧಿಸಲಾರವು ಎಂಬ ನಿರ್ಧಾರ ಜೀನ ಜಾಕ್ಸನಲ್ಲಿ ಮೂಡಿತು.

ಪಾದ್ರಿಯು ಅವನನ್ನು ಎನ್ನಿಸಿಗೆ ಕಳುಹಿದನು. ಅಲ್ಲಿ ಧರ್ಮಾಂತರದ ಹೊಸ ದೀಕ್ಷೆಯನ್ನು ಪಡೆದ ಮಾದಮು ದ ವಾರೆನ್ಸ ಎಂಬ ಸಿರಿವಂತ ಮಹಿಳೆಯೊಬ್ಬಳು ವಾಸಿಸುತ್ತಿದ್ದಳು. ಆಕೆಯು ರೂಸ್ಸೋನನ್ನು ತನ್ನ ಪರಿವಾರದಲ್ಲಿ ಸೇರಿಸಿಕೊಂಡು

ಆತನ ಧಾರ್ಮಿಕ ಶಿಕ್ಷಣವನ್ನು ಪೂರ್ತಿಗೊಳಿಸಬೇಕೆಂಬ ಬಯಕೆಯಿಂದ ರೂಸ್ಸೋನನ್ನು ಪಾದ್ರಿಯು ಇಲ್ಲಿಗೆ ಕಳುಹಿದ್ದನು. ರೂಸ್ಸೋನು ಮಾದಮುಳಲ್ಲಿ ನಿಂತನು. ಖಾಸಗಿ ಕಾರ್ಯದರ್ಶಿಯಂತೆಯೂ ಕೆಲವೊಮ್ಮೆ ಪರಿಚಾರಕನಂತೆಯೂ ಕೆಲಸ ಮಾಡಿದನು. ಆಗ ಜೀನ ಜಾಕ್ಸನ ವಯಸ್ಸು ೧೬ ವರ್ಷ. ಒಳ್ಳೇ ತುಂಬಿದ ಮೈ ಕೈ, ಹೊಳೆಯುವ ಕಣ್ಣುಗಳು, ಕಪ್ಪು ತೊಳಗುವ ಕೂದಲುಗಳು, ಮಿನುಗುವ ಕಾಂತಿ, ಇವೆಲ್ಲವನ್ನೂ ಮೀರಿಸುವ ಮಿಗಿಲಾದ ಆತ್ಮಸಂಭಾವನೆಯ ದರ್ಪ, 'ಏವಂ ಗುಣ ವಿಶಿಷ್ಟ'ವಾಗಿತ್ತು–ಆಗಿನ ರೂಸ್ಸೋನ ವ್ಯಕ್ತಿತ್ವ. ಅವನ ಒಡತಿಯಾದರೋ ೨೮ ವರ್ಷದ ವಿಧವೆ. ಉದಾರ ಸ್ವಭಾವದವಳು. ತುಂಬ ಹಣವುಳ್ಳವಳು. ಒಳ್ಳೇ ಚಲುವೆ, ಯಾವಾಗಲೂ ಪರರಿಗೆ ನೆರವಾಗುವ ಹಂಬಲ, ಹಟವುಳ್ಳ ಜನ ಕೆಲವರಿರುತ್ತಾರೆ. ಮಾದಮು ವಾರೆನ್ಸ ಆ ಬಗೆಯ ಹೆಂಗಸು. ಆಗಂತುಕರನ್ನು ಕೂಡ ಎತ್ತಿಕೊಂಡು ಅವರ ಯೋಗಕ್ಷೇಮದ ಯೋಜನೆಗಳನ್ನು ಮಾಡುವದರಲ್ಲಿ ಸುಖಪಡುವ ಜೀವಿಯು ಅವಳು. ರೂಸ್ಸೋನಂಥ ಆಕರ್ಷಕ ತರುಣನು ತನ್ನ ಆರಾಧಕನಾಗಿ ನಡೆಯುತ್ತಿದ್ದ ಮೇಲೆ ಬೇರೆ ಕೇಳಬೇಕೆ ? ಆತನ ಪರೋಪಕಾರಕ್ಕೆ ಆಕೆಯು ಮೀಸಲಾಗದೇ ಉಳಿಯಬಹುದೇ ?

ಆದರೆ ರೂಸ್ಸೋ ತರುಣನಿದ್ದುದರಿಂದಲೇ ಚಂಚಲನಿದ್ದನು. ಒಡತಿಯ ಕುರಿತು, ಅವನು ತನ್ನ ಆರಾಧನಾ–ಬುದ್ಧಿಯನ್ನು ಸ್ಪಷ್ಟವಾಗಿಯೇ ತೋರ್ಪಡಿಸುತ್ತಿದ್ದನು. ಆದರೆ ಅದರಲ್ಲಿ ಬುದ್ಧಿಗೇಡಿತನವೂ ಆಗಾಗ್ಗೆ ಕೆಣಕುವಂತೆ ಸ್ಪಷ್ಟವಾಗುತ್ತಿತ್ತು. ಅವನಲ್ಲಿ ತರಳತನದ ಮೂಲಕ ಇಂಗಿತಜ್ಞತೆ ಅಥವಾ ಚಾತುರ್ಯವಿದ್ದಿಲ್ಲ. ಅವನದು ಒಡತಿಯ ಕುರಿತು ಭಕ್ತಿ–ಅಂಧವಿದ್ದಷ್ಟೇ ಮೊಂಡವಿದ್ದಿತ್ತು ! ಒಡತಿಯೊಡನೆ ಆತನು ಅತಿ ವಿನಯದಿಂದ ನಡಕೊಳ್ಳುತ್ತಿದ್ದನು. ಆದರೆ ಇದು 'ಧೂರ್ತ ಲಕ್ಷಣ'ವು ಮಾತ್ರ ಇದ್ದಿಲ್ಲ.

ಒಮ್ಮೆ ಸಬ್ಲಿನ್ ದಂಪತಿಯೊಡನೆ ರೂಸ್ಸೋನನ್ನು ಟ್ಯೂರಿನ್ನಿಗೆ ಕಳಿಸಿಕೊಡುವದು ಗೊತ್ತಾಯಿತು. ಟ್ಯೂರಿನ್‌ದಲ್ಲಿಯೇ ಒಂದು ಧರ್ಮಪೀಠದಲ್ಲಿ ಅವನ ಆತ್ಮಕ್ಕೆ ಹಾಗೂ ದೇಹಕ್ಕೆ ಕೂಡಿಯೇ ಪೋಷಣೆ ದೊರೆಯುವ ಅನುಕೂಲವಿತ್ತೆಂದು ತೀರ್ಮಾನವಾಗಿತ್ತು. ಸಬ್ಲಿನ್ ಗಂಡ ಹೆಂಡಿರು ಮತ್ತೂ ರೂಸ್ಸೋ ಮೂವರೂ ಪಾದಚಾರಿಯಾಗಿಯೇ ಟ್ಯೂರಿನ್ನಿಗೆ ಹೊರಟರು. ಶ್ರೀಮತಿ ಸಬ್ಲಿನ್ ತನ್ನ ವಿಷಯ ಒಂದು ಉದ್ದೇಶವನ್ನು ಇಟ್ಟುಕೊಂಡಿದ್ದಳೆಂದು ರೂಸ್ಸೋ 'ಆತ್ಮನಿವೇದನೆಗಳು' ಎಂಬ ತನ್ನ ಸ್ವಯಂ ಲಿಖಿತ ಚರಿತ್ರದಲ್ಲಿ ಬರೆಯುತ್ತಾನೆ. (ಆದರೆ ಈ ನಿವೇದನೆಗಳಲ್ಲಿ ಎಷ್ಟೋ ವಿವರಗಳು ವಿಶ್ವಸನೀಯವಾಗಿಲ್ಲ. ರೂಸ್ಸೋನಂಥ ತೀವ್ರ

ಭಾವನಾಮಯ ಜೀವಿಗೆ ತನ್ನ ಬಾಳಿನ ಸಂಗತಿಗಳನ್ನು ಅಲಿಪ್ತ ವೃತ್ತಿಯಿಂದ ತಿಳಿಯಾಗಿ ನೆನಪಿಸಿಕೊಂಡು ತಿಳಿದು ತೂಗಿ ತಾರತಮ್ಯದಿಂದ ವಿವರಿಸುವ ವಿವೇಕ ವಿರುವದು ಅಷ್ಟೇನು ಸುಲಭವಲ್ಲ.) ಶ್ರೀಮತಿ ಸಬ್ಲಿನ್ ಆತನೊಡನೆ ಹೇಗೊ ವರ್ತಿಸಿರಲಿ, ನಡುದಾರಿಯಲ್ಲಿ ಅವನ ಕತ್ತಿಯ ಬೆಳ್ಳಿಯ ಪಟ್ಟಿಯು ಕಳೆದು ಹೋಯಿತಂತೆ. ಈ ಪಟ್ಟಿಯನ್ನು ಮಾದಮ ವಾರೆನ್ಸಳು ಆತನಿಗೆ ಕೊಟ್ಟಿದ್ದಳಂತೆ. ಶ್ರೀಮತಿ ಸಬ್ಲಿನ್‌ಳೇ ಅದನ್ನು ಕಳವು ಮಾಡಿದಳೆಂದು ರೂಸ್ಸೋನ ಆರೋಪ. ಆದರೆ ಕಳ್ಳರು ಯಾರಿರಬಹುದೆಂಬುದಕ್ಕೆ ಇನ್ನೊಂದು ಉದಾಹರಣೆ ಬೆಳಕು ಕೊಡುವಂತಿದೆ. ಕೆಲ ಸಮಯದ ಹಿಂದೆ, ರೂಸ್ಸೋ ಸ್ವಲ್ಪ ಕಾಲ ವ್ಹರ್ಸೆಲ್ಲಿ ಎಂಬವನಲ್ಲಿ ಚಾಕರಿಗೆ ಇದ್ದನು. ಆಗ ಅಲ್ಲಿಯೂ ಇನ್ನೊಂದು ಬೆಳ್ಳಿಯ ಪಟ್ಟಿಯು ಕಳೆದು ಹೋಗಿತ್ತು. ಕದ್ದವನು ರೂಸ್ಸೋನೇ ಆಗಿದ್ದನು. ಆದರೆ ಕಳವು ಬೆಳಕಿಗೆ ಬಂದಾಗ ಕದ್ದ ವ್ಯಕ್ತಿ ಒಬ್ಬ ಕೆಲಸಗಿತ್ತಿ ಎಂದು ರೂಸ್ಸೋ ಆರೋಪ ಹೊರಿಸಿದನು. ಆದರೆ ಆ ಕೆಲಸಗಿತ್ತಿಯೂ ತಾನೂ ಇವನಂತೆ ನಿರಪರಾಧಿಯೆಂದು ಹೇಳಿಕೊಳ್ಳಹತ್ತಿದ್ದಳು. ಅವರಿಬ್ಬರಲ್ಲಿ ಅಪರಾಧಿ ಯಾರೆಂದು ತೀರ್ಮಾನಿಸು ವದಕ್ಕಿಂತ ಇಬ್ಬರನ್ನೂ ಕೆಲಸದಿಂದ ತಳ್ಳುವದೇ ವ್ಹರ್ಸೆಲ್ಲಿಗೆ ಸುಲಭವೆನಿಸಿತು.

ರೂಸ್ಸೋ ಆನಂತರ ಗೌವೋನದ ಸರದಾರನಲ್ಲಿ ಕೆಲಸಕ್ಕೆ ನಿಂತನು. ಆ ಸರದಾರನು ಅವನನ್ನು ಚೆನ್ನಾಗಿ ನಡೆಯಿಸಿಕೊಂಡನು. ಆದರೆ ಆಗ ರೂಸ್ಸೋನಿಗೆ ತನ್ನ ಮಾದಮ ವಾರೆನ್ಸಳ ನೆನಪು ಒಮ್ಮೆಲೇ ಬಲವಾಗಿ ಆಯಿತು. ಆಕೆಯನ್ನು ಮತ್ತೆ ಸೇರಬೇಕೆಂದು ರೂಸ್ಸೋ ಬುದ್ಧಿಪೂರ್ವಕವಾಗಿ ಗೌವೋನನಲ್ಲಿ ಅಸಭ್ಯವಾಗಿ ನಡೆದನು. ಅವನ ಈ ದುರ್ನಡತೆಯು ಮರ್ಮವರಿಯದೇ ಆ ಸರದಾರನು ಅವನನ್ನು ಕೆಲಸದಿಂದ ತೆಗೆದನು. ರೂಸ್ಸೋ ಸ್ವತಂತ್ರನಾಗಿ ಮಾದಮಳಲ್ಲಿಗೆ ಮರಳಿದನು. ಅವಳೂ ಅವನನ್ನು ಮಮತೆಯಿಂದ ಸ್ವಾಗತಿಸಿದಳು. ಆದರೆ ಕೂಡಲೇ ಅವನನ್ನು ಸೆಂಟ ಲಾರ್ಝೀರ್ ಎಂಬ ಧರ್ಮಸಂಸ್ಥೆಗೆ, ಶಿಕ್ಷಣವನ್ನು ಪೂರ್ಣಗೊಳಿಸಲೆಂದು ಅಟ್ಟಿದಳು.

ಮಾದಮ ವಾರೆನ್ಸ ಮತ್ತು ರೂಸ್ಸೋ ಇವರೀರ್ವರ ಋಣಾನುಬಂಧವು ಸೋಜಿಗ ವಿತ್ತು, ಆಕೆ ಅವನನ್ನು ಚಿಕ್ಕದೊಂದು ಕೆಲಸಕ್ಕೆ ನೇಮಿಸಿದ್ದಳು. ಆಮಟ್ಟಿಗೆ ಅವನು ಮಾದಮಳ ಸೇವಕ. ಆದರೆ ಅವನ ಶಿಕ್ಷಣಕ್ಕಾಗಿ ಹಣವನ್ನು ತೆರುತ್ತಿದ್ದಳು. ಆತನಿಗೆ ಸಂಗೀತವನ್ನು ಕಲಿಸಿದಳು. ಅವನು ಆಕೆಯನ್ನು ಒಡತಿ ಯೆಂದು ಮನ್ನಿಸುವ ಜೊತೆಗೆ 'ಮಾಮನ್' ಎಂಬ ಅಚ್ಚೆಯ ಹೆಸರಿನಿಂದ ಕರೆಯುತ್ತಿದ್ದನು. ಸಲಿಗೆಯಿಂದ ನಡೆಯುತ್ತಿದ್ದನು. ವ್ಹರ್ಸೆಲ್ಲಿ, ಗೌವಾನ್ ಇಂತಹ

ರಲ್ಲಿ ಹೋಗಿ ರೂಸ್ಸೋ ಚಾಕರಿಗೆ ನಿಂತರೂ ಮನಸ್ಸಿಗೆ ಬಂದಾಗ ಮಾದಮಳಲ್ಲಿಗೆ ಬಂದು ಬಿಡುತ್ತಿದ್ದನು !

ರೂಸ್ಸೋ ಸೆಂಟ ಲಾರ್ಷೀರಿಗೆ ಹೊರಟನು. ಜೊತೆಗೆ ಒಬ್ಬ ವಿದ್ಯಾರ್ಥಿಯಿದ್ದನು. ದಾರಿಯಲ್ಲಿ ಒಮ್ಮೆಲೆ ಆ ವಿದ್ಯಾರ್ಥಿಗೆ ಅಪಸ್ಮಾರದ ವಿಕಾರವಾಯಿತು. ದಾರಿಯ ಬದಿಗೆ ಚಡಪಡಿಸುತ್ತ ಕಣ್ಣುಬಿಡುತ್ತ ಆ ಹುಡುಗ ಉರುಳಾಡಹತ್ತಿದ. ಬಾಯಲ್ಲಿ ನೊರೆಬರುತ್ತಿತ್ತು. ರೂಸ್ಸೋ ಕೂ ಗಾ ಡಿ ದಾರಿಹೋಕರನ್ನು ಕೂಡಿಸಿದ. ಮೂರ್ಛಿತ-ರೋಗಿಯ ಸುತ್ತಲೂ ಜನ ನೆರೆದೊಡನೆ, ಸಂಧಿ ಸಾಧಿಸಿ ರೂಸ್ಸೋ ಕಾಲಿಗೆ ಬುದ್ಧಿ ಹೇಳಿದ, ಮಾದಮಳಲ್ಲಿಗೆ ಓಡಿಬಂದ. ಆದರೆ ಆಕೆ ಊರಲ್ಲಿರಲಿಲ್ಲ. ಆಗ ಮಾದಮಳು ಕಲಿಸಿದ ಸಂಗೀತ ಉಪಯೋಗ ಬಿದ್ದಿತು. ಅಲ್ಲಿ ಇಲ್ಲಿ ಸಂಗೀತದ ಪಾಠ ಕೊಡುತ್ತ ಅಲೆದಾಡಿದ ಕೆಲದಿನ. ಕೊನೆಗೆ ಒಬ್ಬ ಗ್ರೀಕ ಸರಕಾರದ ಪ್ರತಿನಿಧಿಯ ಕಾರ್ಯದರ್ಶಿಯಾಗಿ ಕೆ ಲ ಸ ಕ್ಕೆ ನಿಂತ. ಅಲ್ಲಿಂದ ಫ್ರೆಂಚ ರಾಯಭಾರಿಯ ಪತ್ರವನ್ನೊಂದು ದೊರಕಿಸಿಕೊಂಡು, ಅವನು ಫ್ರಾನ್ಸಿಗೆ ಪಯಣ ಬೆಳೆಸಿದನು. ಫ್ರಾನ್ಸದಲ್ಲಿ ಪ್ರತಿಷ್ಠಿತ ಸಮಾಜದಲ್ಲಿ ಕೂಡಿ ಕಲೆತು, ಒಡನಾಡಿದನು. ಶಿಷ್ಟಾಚಾರದ ನಯ ನಾಜೂಕುಗಳನ್ನು ಅವನು ಕಲಿತದ್ದು ಅಲ್ಲಿಯೇ. ಅವನ ಮೂಲದ ಒರಟು, ಒಗರು ವೃತ್ತಿಯ ಮೊನೆ-ಮೂಕೆಗಳೆಲ್ಲ ಆ ಸಭ್ಯ ಸಂಸ್ಕಾರ ದಿಂದ, ಸವೆದು ನುಣುಪಾದವು.

ಹೀಗೆ ಅವನ ನಾಲ್ಕು ವರ್ಷಗಳು ಕಳೆದವು. ಅವನ ೨೦ ನೇ ವರ್ಷ ಮತ್ತೆ 'ಮಾದಮಳ ಮಿಲನಮುಹೂರ್ತ' ಒದಗಿ ಬಂದಿತು. ಅವರ ಈ ಪುನರ್ಮಿಲನವು ಒಳ್ಳೇ ಪ್ರೀತಿಯದಾಯಿತು. ಆಕೆ ಆತನನ್ನು ಕುರಿತು ಉದಾಸೀನಳಾಗಿರಲಿಲ್ಲ. ಈಗ ರೂಸ್ಸೋನ ಸ್ಥಾನ ಸಂದಿಗ್ಧವಾಗಿ ಉಳಿಯಲಿಲ್ಲ. ರೂಸ್ಸೋ ಮಾದಮಳ ವಲ್ಲಭನಾಗಿಯೇ ನಿಂತನು. ಅವರೀರ್ವರೂ ಪರಸ್ಪರ ಸಮಾಗಮದಲ್ಲಿ, ಸಾಹಿತ್ಯ, ಸಂಗೀತ, ಸಂಕಥಾ ವಿನೋದವನ್ನೂ ರಸಾಯನ ಶಾಸ್ತ್ರದ ಅಭ್ಯಾಸವನ್ನೂ ಸಾಗಿಸಿದರು. ವ್ಹೊಲ್ಟಾಯರನ ಚರಿತ್ರದಲ್ಲಿಯೂ ಇಂಥ ಸಹವಾಸದ ಮಾದರಿಯು ಬಂದಿದೆ. ಅಂದಿನ ಸಮಾಜದಲ್ಲಿ ಸುಸಂಸ್ಕೃತ ಪ್ರತಿಷ್ಠಿತ ಮತ್ತು ಶ್ರೀಮಂತ ವ ರ್ಗ ಗ ಳ ಲ್ಲಿ ಈ ಮಾದರಿಯ 'ದ್ವಂದ್ವ ಸಹವಾಸದ' ಉದಾಹರಣೆಗಳು ಸಾಮಾನ್ಯವಾಗಿದ್ದವು.

೧೭೩೬ ರಲ್ಲಿ ರೂಸ್ಸೋ ವಿಪರೀತ ಬೇನೆಬಿದ್ದನು. ಬೇನೆಯಿಂದ ಎದ್ದೊಡನೆ ಅವನ ಶಕ್ತಿವರ್ಧನೆಗಾಗಿ, ಮಾದಮಳು 'ಲಾಚಾರ್ಮೆಟಿಸ್' ಎಂಬ ಒಂದು ರಮ್ಯ ಗ್ರಾಮ ನಿವಾಸದ ಮನೆಯನ್ನು ಕೊಂಡುಕೊಂಡಳು. ರೂಸ್ಸೋನೊಡನೆ, ಅಲ್ಲಿ ಹೋಗಿ

ಉಳಿದು ಅವನ ಆರೈಕೆ ಮಾಡಿ, ಆರೋಗ್ಯವಂತನನ್ನಾಗಿ ಮಾಡಬೇಕೆಂಬುದೇ ಆಕೆಯ ಬಯಕೆಯಾಗಿದ್ದಿತ್ತು. ಆದರೆ ರೂಸ್ಸೋನ ಆಕಾಂಕ್ಷೆ ಬೇರೆಯಿದ್ದಿತ್ತು. ತನ್ನ ಆರೋಗ್ಯಕ್ಕಾಗಿ, 'ಮಾಂತಪಿಲ್ಲೆನ್' ಎಂಬಲ್ಲಿಗೆ ಹೋಗಿ ವಾಸಿಸಬೇಕೆಂದು ಅವನ ಸಂಕಲ್ಪ. ಈ ಸಂಕಲ್ಪಕ್ಕೆ ಪ್ರೇರಣೆ ಕೊಟ್ಟ ಸ್ಫೂರ್ತಿಯು ಮಾದಮದ ಲಾರ್ನೇಜ ಳೆಂಬ ಇನ್ನೊಬ್ಬ ರಮಣೀಯೇ ಎಂದು ವಾರೆನ್ಸಳು ಕಂಡು ಹಿಡಿದಳು. ಈ ಲಾರ್ನೇಜಳ ಸಹವಾಸ ರೂಸ್ಸೋನಿಗೆ ಅವಶ್ಯವೆನಿಸಿತ್ತು. ರೂಸ್ಸೋ ಮತ್ತೆ 'ಮಾದಮಳನ್ನು' ಬಿಟ್ಟು ಹೋದನು. ಆದರೆ ಲಾರ್ನೇಜಳೊಡನೆ ಆತ ಬಹುಕಾಲ ನಿಲ್ಲಲಿಲ್ಲ. ಎಂದಿನಂತೆಯೇ ಮತ್ತೆ ಮಾದಮ ವಾರೆನ್ಸಳಲ್ಲಿಗೆ ಲಾಚಾರ್ಮೆಟಿಸ್ ನಿವಾಸಕ್ಕೆ ಬಂದನು. ಆದರೆ ಅಲ್ಲಿ ಅವನು ಅನವಶ್ಯಕನಾಗಿದ್ದನು. ಈ ಸಲ ಅವನ ಅಭಾವವನ್ನು ಅನ್ಯನೊಬ್ಬನು ಯಶಸ್ವಿಯಾಗಿ ತುಂಬಿದ್ದನು ! ಆದರೆ ಅಭಿಮಾನಿ ರೂಸ್ಸೋ ಈ ನಿರಾಶೆಯಿಂದ ಎಂದೂ ನೊಂದುಕೊಂಡಂತೆ ಕಾಣಲಿಲ್ಲ. ಒಂದು ಶಿಕ್ಷಕ ವೃತ್ತಿಯನ್ನು ಸ್ವೀಕರಿಸಿ, ೧೭೪೧ರಲ್ಲಿ ಪ್ಯಾರಿಸ್ಸಿಗೆ ಮರಳಿದನು.

೧೭೪೧ ನೇ ವರ್ಷವು ರೂಸ್ಸೋನ ಜೀವನದಲ್ಲಿ ಒಂದು ಪರ್ವಕಾಲವು. ರೂಸ್ಸೋನ ನಿರುಪಯೋಗಿ ಜೀವನವು ಇಲ್ಲಿಗೆ ಮುಗಿಯಿತು. ಕಾಮುಕ ತುಲಸಿದಾಸನು ಕವಿಯಾದಂತೆ, ರೂಸ್ಸೋನ ಜೀವನದಲ್ಲಿಯೂ ಕಾಯಕಲ್ಪವಾಯಿತು. ರೂಸ್ಸೋನ ಪ್ರತಿಭೆಯು ಮತ್ತೆ ಪ್ರಕಟವಾಗತೊಡಗಿತು. ಆದರೆ ರೂಸ್ಸೋನಲ್ಲಿ ಕವಿತ್ವವು ಕಾಮುಕತನವನ್ನು ಕೊಲ್ಲಲಿಲ್ಲ. ಎರಡೂ ಎಳೆಗಳು ಕೂಡಿಯೇ ಅವನ ಬದುಕಿನ ಜಾಡವನ್ನು ನೆಯ್ದವು.

ಪ್ಯಾರಿಸದಲ್ಲಿ ರೂಸ್ಸೋನ ಜೀವನದಲ್ಲಿ ಮಾರ್ಪಾಟಾಗುವಂತೆ, ಅವನಿಗೆ ಮಹತ್ವದ ಮಿತ್ರಲಾಭವು ಕೂಡಿಬಂದಿತು. ಅಲ್ಲಿ 'ವಿಶ್ವಜ್ಞಾನಕೋಶ' ಒಂದು ಪ್ರಕಟವಾಗುತ್ತಲ್ಲಿತ್ತು. ಅದರ ಸಂಪಾದಕರಲ್ಲಿ ಒಬ್ಬನಾದ ಡಿಡೆರೋಟನು ಒಬ್ಬ ಅಸಾಮಾನ್ಯ ವಿಚಾರವಂತನಾಗಿದ್ದನು. ಪ್ಯಾರಿಸದ ವಿದ್ವತ್ಪ್ರಪಂಚಕ್ಕೆ ಅವನು ಒಬ್ಬ ಮುಂದಾಳುವಾಗಿದ್ದನು. ರೂಸ್ಸೋನಿಗೆ ಈ ಡಿಡೆರೋಟನ ಹಾಗು ಅವನ ಗೆಳೆಯನಾದ ಡ್ಯುಪಿನ ಕುಟುಂಬದ ಸ್ನೇಹವು ಲಭಿಸಿತು. ಈ ಡ್ಯುಪಿನ್ನರ ಮುಖಾಂತರ ರೂಸ್ಸೋನಿಗೆ, ವ್ಹೆನಿಸದಲ್ಲಿಯ ಫ್ರೆಂಚರಾಯಭಾರಿಯ ಕಾರ್ಯದರ್ಶಿಯ ನೌಕರಿಯು ದೊರೆಯಿತು. ಈ ರೀತಿ ಮಿತ್ರನ ಮಿತ್ರರೂ ಉಪಯೋಗಿ ಮಿತ್ರರಾದರು. ವ್ಹೆನಿಸ್‌ದಿಂದ ರೂಸ್ಸೋ ೧೭೪೫ರಲ್ಲಿ, ಪ್ಯಾರಿಸಕ್ಕೆ ಮರಳಿದನು. ಈ ನಡುವೆ ಅವನು ತನ್ನ ಸಂಗೀತ ಜ್ಞಾನವನ್ನು ಒರೆಗೆ ಹಚ್ಚಿ ನೋಡಿದನು.

ಹೊಸದೊಂದು ಸ್ವರಪ್ರಸ್ತಾರದ ಪದ್ಧತಿಯನ್ನು ಸಂಶೋಧಿಸಿ, ಅದನ್ನು ಸಂಗೀತ ಪರಿಷತ್ತಿಗೆ ಕಳುಹಿಸಿದನು. ಆದರೆ ಅದಕ್ಕೆ ಯಾವ ಪುರಸ್ಕಾರವೂ ಸಿಗಲಿಲ್ಲ. ಮರಳಿ ಬಂದ ಮೇಲೆ ಅವನು ರಚಿಸಿದ ಒಂದು ಸಂಗೀತ ರೂಪಕವೂ ರಂಗಭೂಮಿಗೆ ಬಂದಿತು. ಡಿಡೆರೋಟನು ಅವನಿಗೆ ಲೇಖಗಳನ್ನು ಬರೆಯಲು ಕೊಡತೊಡಗಿದನು.

೧೭೪೫ ರಲ್ಲಿ ಅವನಿಗೆ ಒಬ್ಬ ಹೊಲಿಗೆಗೆಲಸದ ಹೆಣ್ಣಿಗೆ ಭೆಟ್ಟಿಯಾಯಿತು. ಅವಳ ಹೆಸರು ಥೆರೆಸಾ. ಆಕೆಯನ್ನೇ ಅವನು ಮುಂದೆ ಮದುವೆಯಾದನು. ತನ್ನ 'ಆತ್ಮ ನಿವೇದನೆ'ಗಳಲ್ಲಿ ಆ ಥೆರೆಸಾಳನ್ನು ರೂಸ್ಸೋ ಬಣ್ಣಿಸಿದ್ದು ನಿಜವೇ ಇದ್ದರೆ ಆಕೆ 'ಕುರೂಪಿ, ಅಜ್ಞಾನಿ, ಮೂರ್ಖ ಹಾಗೂ ನಿಂದ್ಯ ನಡತೆಯ ತಾಯಿ' ಇದ್ದಳು. ಇಂಥವಳಲ್ಲಿ ರೂಸ್ಸೋ ಯಾವ ಆಕರ್ಷಣವನ್ನು ಕಂಡನೋ ! ಎಂಬುದೆ ಒಂದು ಗೂಢ. ಆಕರ್ಷಣವಿರಲಿ ಇಲ್ಲದಿರಲಿ, ಆ ಮದುವೆಯಿಂದ ೫ ಮಕ್ಕಳು ಹುಟ್ಟಿದವು. ಐದೂ ಮಕ್ಕಳನ್ನೂ ಅವು ಹುಟ್ಟಿದೊಡನೆ ರೂಸ್ಸೋ ಒಂದು ಅನಾಥಾಲಯದ ಮೆಟ್ಟಿಲಿನ ಮೇಲೆ ಇಡುತ್ತ ಬಂದನು ! ಮನೆಯ ವೆಚ್ಚವನ್ನು ಕಡಿಮೆ ಮಾಡಲು, ಇದು ಅವನು ಹೂಡಿದ ಉಪಾಯವಂತೆ ! ಹೊಟ್ಟೆಯ ಮಕ್ಕಳನ್ನು ಹೀಗೆ ಹುಟ್ಟಿದೊಡನೆ ತಬ್ಬಲಿಕುನ್ನಿಗಳಂತೆ ಹಾದಿಯಲ್ಲಿ ಬಿಡುವ ಈ 'ಶಿಶುಪಾಲ' ತಂದೆಯು ಮುಂದೆ ಶಿಶುಗಳ ಪಾಲನೆ ಪೋಷಣೆ ಮತ್ತು ಶಿಕ್ಷಣಗಳ ಕುರಿತು ಅತ್ಯಂತ ವಿವೇಕಯುಕ್ತವೂ 'ಆಧುನಿಕ'ವೂ ಆದ ಗ್ರಂಥವನ್ನು ಬರೆದು, ಬಾಲ ಪ್ರಪಂಚದ ಹೊಸಮಾದರಿಯ ಮನೋವಿಕಾಸದ ಪದ್ಧತಿಗಳಿಗೆಲ್ಲ ಆದ್ಯಗುರು ವೆನಿಸಿಕೊಂಡನು ! ಶಿಕ್ಷಣ ಪದ್ಧತಿಯಲ್ಲಿ ವಿಷಯದ ಬದಲು, ಶಿಷ್ಯ-ಶಿಶುವಿನ ವ್ಯಕ್ತಿತ್ವವನ್ನೇ ಕೇಂದ್ರವಾಗಿ ಇಟ್ಟುಕೊಳ್ಳುವ ಕ್ರಾಂತಿಗೆ ಅವನೇ ಪ್ರವರ್ತಕನು !

ಹೀಗೆ ಒಂದೆಡೆಗೆ ಅಂದಗೇಡಿ ಕೌಟುಂಬಿಕ ಜೀವನವನ್ನು ಸಾಗಿಸುತಿದ್ದಾಗ ರೂಸ್ಸೋ ಇನ್ನೊಂದೆಡೆಗೆ ಎಡಬಿಡದೆ ಬರೆಯತೊಡಗಿದ್ದನು. ಆದರೆ ಲೇಖನ ಕಾರ್ಯದಲ್ಲಿ ಅವನಿಗೆ ಯಶಸ್ಸು ಬಂದದ್ದು ೧೭೫೦ ರಲ್ಲಿ-ಒಂದು ಸಾಹಿತ್ಯ ಪರಿಷತ್ತು ಏರ್ಪಡಿಸಿದ ಪ್ರಬಂಧ ಸ್ಪರ್ಧೆಯಲ್ಲಿ ಅವನಿಗೆ ಬಹುಮಾನ ದೊರೆತಾಗ. 'ಕಲೆಗಳ ಹಾಗೂ ಶಾಸ್ತ್ರಗಳ ಪ್ರಗತಿಯು ನೀತಿಮತ್ತೆಯನ್ನು ಕೆಡಿಸಲು ನೆರವಾಗಿದೆಯೋ ಅಥವಾ ಶುಚಿಗೊಳಿಸಲೋ ?' ಎಂಬ ವಿಷಯದ ಮೇಲೆ ಆ ಪ್ರಬಂಧ ಬರೆಯ ಲಾಗಿತ್ತು. ಈ ಬಹುಮಾನದ ಯಶಸ್ಸಿನಿಂದ ಅವನು ಇನ್ನೂ ದೊಡ್ಡ ಸನ್ಮಾನದ ಯಶಸ್ಸಿಗೆ ಏರಿದನು. 'ಲೀ ಡೆವ್ವಿನ್ ಡು ವಿಲ್ಲೇ' ಎಂಬದೊಂದು ಪುಟ್ಟ ಗೀತ ನಾಟಕವನ್ನು ಅವನು ಬರೆದು ಪ್ರಯೋಗಕ್ಕೆ ತಂದನು. ಇದರಿಂದ ಒಮ್ಮೆಲೆ ಅವನಿಗೆ ರಾಜಮನ್ನಣೆ ದೊರೆಯುವಂತಾಯಿತು. ಅವನಿಗೆ 'ಆಸ್ಥಾನ ವಿದ್ವಾನ್'

ನಾಗುವ ಯೋಗವೂ ಆ ಯೋಗಕ್ಕೆ ತಕ್ಕ ವೇತನ ಭೋಗವೂ ನಡೆದುಬಂದವು. ಆದರೆ ಅವನು ಜೀವನದಲ್ಲಿ ಮೊದಲನೆಯ ಬಾರಿ ಅಪ್ರತಿಮ ಆತ್ಮಸಂಯಮವನ್ನೂ ಪ್ರಕಟಿಸಿದನು. ತನ್ನ ಲೇಖನದಲ್ಲಿ ಪ್ರತಿಪಾದಿಸಿದ ತತ್ವಗಳಂತೆ ತಾನೂ ನಡೆಯ ಬಲ್ಲನೆಂಬುದನ್ನೂ ಕಾಣಿಸಿದನು. ಅವನ ವಿಚಿತ್ರ ವಿಧಿವಿಲಾಸದ ಬಾಳು ಅವನಿಗೆ ಕೆಡುಕಾದ ಸಂಗತಿಗಳನ್ನು ಬಹಳಷ್ಟು ಕಲಿಸಿತ್ತು. ಆದರೆ ಅದರ ಸಂಗಡವೇ ಅವನು ಫ್ರೆಂಚ ಜನತೆಯ, ಕಾಡು ಹಸಿವೆಯಿಂದ ಕಂಗೆಟ್ಟ, ದಾರುಣ ದಾರಿದ್ರ್ಯದ ಕರುಣ ಚಿತ್ರವನ್ನು ಕಂಡುಕೊಂಡಿದ್ದನು; ಆ ಚಿತ್ರದ ಹಿನ್ನೆಲೆಯಲ್ಲಿ ಫ್ರೆಂಚ ರಾಜಾಸ್ಥಾನದಲ್ಲಿಯ ವೈಭವ ವಿಲಾಸದ, ವ್ಯಸನ ವ್ಯಾಮೋಹಗಳ, ದುಂದು ಗಾರಿಕೆಯ ಗರ್ವಾಂಧತೆಯ ವಿಕಾರಗೆಟ್ಟ ಚರಿತ್ರವನ್ನೂ ನೋಡಿದ್ದನು. ಆದ್ದರಿಂದ ತನ್ನ ಸ್ಥಾನವು ಆಸ್ಥಾನದಲ್ಲಿ ಅಲ್ಲವೆಂದು ನಿರ್ಧರಿಸಲಿಕ್ಕೆ ಅವನು ಹಿಂದೆಮುಂದೆ ನೋಡಲಿಲ್ಲ. ಆಸ್ಥಾನದ ವೇತನ ಮತ್ತು ಪ್ರತಿಷ್ಠೆಯ ಪದವಿ ಇವೆರಡೂ ಬಂದಿದ್ದರೆ, ಅವನ ಬಾಳಿಗೆ ಅಂಟಿಕೊಂಡಿದ್ದ ಜ್ಯೇಷ್ಠಾ ಲಕ್ಷ್ಮಿಯು ತೊಲಗುತ್ತಿದ್ದಳು. ಆದಾಗ್ಯೂ ಅವನು ಅವುಗಳ ಮೋಹಕ್ಕೆ ವಶನಾಗಲಿಲ್ಲ.

ಇದಾದ ಕೆಲವೇ ದಿನಗಳಲ್ಲಿ ಅವನು ಒಂದು ಮಹತ್ವದ ಪ್ರಬಂಧವನ್ನು ಪ್ರಕಟಿಸಿದನು. ಅದರ ಹೆಸರು 'ವಿಷಮತೆಯ ಮೂಲಗಳು.' ಅನಂತರ ಅವನು ೧೭೫೪ ರಲ್ಲಿ ಜಿನೇವಾಕ್ಕೆ ಮತ್ತೆ ಭೆಟ್ಟಿಕೊಟ್ಟನು. ಆಗ ತನ್ನ ಕ್ಯಾಥೊಲಿಕ್ ಪಂಥವನ್ನು ಬಿಟ್ಟುಕೊಟ್ಟನು. ಪ್ಯಾರಿಸಿಗೆ ಮರಳಿ ಬಂದ ಮೇಲೆ ಮಾದಮ ಇಪ್ಪೆನೇ ಎಂಬ ಸಿರಿವಂತ ಮಹಿಳೆಯೊಬ್ಬಳು ರೂಸ್ಸೋನಿಗೆ 'ಹರ್ಮಿಟೇಜ' (ಪರ್ಣಕುಟಿ) ಎಂಬ ಚಿಕ್ಕ ಮನೆಯನ್ನು ನಿವಾಸಕ್ಕಾಗಿ ಒಪ್ಪಿಸಿದಳು. ಈ ಇಪ್ಪೆನೇ ಮಾದಮಳು ಶ್ರೀಮತಿ ಡ್ಯುಪಿನಳ ಅಳಿಯನ 'ಗೆಳತಿ'ಯಾಗಿದ್ದಳು. ಈ 'ಪರ್ಣಕುಟಿ'ಯಲ್ಲಿ ರೂಸ್ಸೋ ತನ್ನ ಪ್ರಸಿದ್ಧ 'ಜ್ಯೂಲೀ' ಎಂಬ ನೀಳ್ಗತೆಯನ್ನು ಬರೆದನು. ಅದು ಪ್ರಕಟವಾದ ಕೂಡಲೇ ಲೋಕಪ್ರಿಯವಾಯಿತು; ಒಮ್ಮೆಲೇ ಯಶಸ್ವಿಯಾಯಿತು. ಆದರೆ ಕೆಲವು ಕಡೆಗೆ ಆ ಪುಸ್ತಕಕ್ಕೆ ಬಹಿಷ್ಕಾರವು ಬಿತ್ತು. ಏಕೆಂದರೆ ಅದರಲ್ಲಿ 'ಸ್ವೈರ ವಿಚಾರ'ಗಳ ಪ್ರಚಾರವಿತ್ತೆಂಬುದರ ವಾಸನೆ ಮೂಗುಗಳಿಗೆ ಬಡೆಯಿತು. ಆ ಕಥಾವಸ್ತುವಿನಲ್ಲಿ ಬಡವರ ಹಕ್ಕುಗಳನ್ನೂ ಧನಿಕರ ಕರ್ತವ್ಯಗಳನ್ನೂ ಪ್ರತಿಪಾದಿಸಲಾಗಿತ್ತು. ಈ ವಿಚಾರವೇನು ಕಡಿಮೆ ಸ್ವೈರವೇ ?

'ಜ್ಯೂಲಿ' ಪ್ರಸಿದ್ಧವಾದದ್ದು ೧೭೬೦ ರಲ್ಲಿ. ಆದರೆ ಅದಕ್ಕೂ ಮುಂಚೆಯೇ ರೂಸ್ಸೋ ತನ್ನ ಆಶ್ರಯದಾತ್ರಿ ಇಪ್ಪೆನೇಯೊಂದಿಗೆ ಜಗಳಾಡಿದ್ದನು. ತನ್ನನ್ನು

'ಪರ್ಣಕುಟಿ'ಯಲ್ಲಿ ತಂದು ಇಟ್ಟದ್ದು, ಕೇವಲ ತನ್ನ ಮನ್ನಣೆಗಾಗಿ ಅಲ್ಲ; ಆ 'ಬೆರಗು ಬಿನ್ನಾಣ'ದ ಹಿಂದೆ ಇಪ್ಪೇನೇಯ ಒಳಸಂಚು ಬೇರೆಯೇ ಇತ್ತು. ತನ್ನ ವಾಸ್ತವ್ಯದ ಉಪಯೋಗವನ್ನು ಪಡೆದು ಆಕೆಯ 'ಗೆಳೆಯ'ರಿಗೆ ಮಾತ್ರ ಆಕೆಯೊಡನೆ ಕೂಡಲು ಅನುಕೂಲವಾಗುತ್ತಿತ್ತು ಎಂಬುದರ ಸುಳುವು ರೂಸ್ಸೋನಿಗೆ ಹೊಳೆಯಿತು. ತನ್ನ 'ಬೆನ್ನು' ಹೀಗೆ ಮಾದಮಳ ಸ್ವೈರಾಚಾರಕ್ಕೆ ಒಂದು ತೆರೆಯಾಗುವದು ರೂಸ್ಸೋನಿಗೆ ಅಪಮಾನವೆನಿಸಿತು. ಕೂಡಲೇ ಅವನು ಆ 'ಹರ್ಮಿಟೇಜ' ವನ್ನು ಬಿಟ್ಟು, ಹತ್ತಿರದ ಮೌಂಟಲುಯಿ ಎಂಬ ಊರಿಗೆ ಹೋಗಿ ಉಳಿದನು. ಅಲ್ಲಿ ಲಕ್ಸೆಂಬರ್ಗದ ಜಹಗೀರದಾರ ದಂಪತಿಗಳು ಅವನನ್ನು ತಮ್ಮ ಆಶ್ರಿತ-ಪೋಷಿತನಾಗಿ ಸ್ವಾಗತಿಸಿದರು. ಈ ಆಶ್ರಯ ಪೋಷಣೆಯೂ ಅದಕ್ಕೆ ಕಾರಣವಾದ ಅಪವಾದ-ಸ್ಥಾನಾಂತರಗಳೂ ಒಳಿತಿಗಾಗಿಯೇ ಒದಗಿದವೆನ್ನಬೇಕು. ಏಕೆಂದರೆ ರೂಸ್ಸೋನ ಉತ್ತಮ ಕೃತಿಗಳೆಲ್ಲ ಈ ಹೊಸ ನಿವಾಸದಲ್ಲಿಯೇ-ಮೌಂಟಲುಯಿಯಲ್ಲಿಯೇ, ರಚಿತವಾದವು.

೧೭೬೨ ರಲ್ಲಿ ಅವನ ಮಹಾಗ್ರಂಥ 'ಲಾ ಕಾಂಟ್ರ್ಯಾಕ್ಟ ಸೋಶಿಯಲ್' ಪ್ರಕಟಿಸಲ್ಪಟ್ಟಿತು. ಅದು ಸುರಕ್ಷಿತತೆಯ ಬಗ್ಗೆ ಆಮಸ್ಟರಡ್ಯಾಮದಲ್ಲಿ ಪ್ರಕಟವಾಯಿತು ! ತನ್ನ ದೇಶದ ಸರಕಾರದ ಕ್ಷೋಭೆ ಅವನಿಗೆ ಬೇಕಿದ್ದಿಲ್ಲ. ಆ ಗ್ರಂಥದಲ್ಲಿ ಅವನು ರಾಜ್ಯ, ಸಮಾಜ ಮತ್ತು ವ್ಯಕ್ತಿ ಇವರ ಸಂಬಂಧಗಳ ಕುರಿತು ಕ್ರಾಂತಿಕಾರಿಯಾದ ವಿಚಾರಗಳನ್ನು ಪ್ರತಿಪಾದಿಸಿದನು. 'ಎಲ್ಲ ರಾಜ್ಯ ಶಾಸನವು ಶಾಸಿತರ ಪ್ರತ್ಯಕ್ಷ ಇಲ್ಲವೇ ಅಪ್ರತ್ಯಕ್ಷ ಸಮ್ಮತಿಯನ್ನೇ ಅವಲಂಬಿಸಿ ಇದೆ.' ಎಂಬುದನ್ನು ಈ ಗ್ರಂಥವು ಅಧಿಕಾರವಾಣಿಯಿಂದ ಸಾರಿತು. ಈ ಮಾತಿನ ಕಿಡಿಯಿಂದಲೇ ಮುಂದೆ ಮುಂದಾಳುಗಳ ಹೃದಯಗಳಲ್ಲಿ ಫ್ರೆಂಚ ರಾಜ್ಯಕ್ರಾಂತಿಯ ಉರಿಯು ಹೊತ್ತಿತು.

ಸಮಾಜವೆಂಬ ಸಂಸ್ಥೆಯು ಮೂಲದಲ್ಲಿ ಒಂದು 'ಕಾಂಟ್ರ್ಯಾಕ್ಟ' ಅಂದರೆ ಒಂದು ಒಪ್ಪಂದದ ಮೇಲೆ ನಿಂತಿದೆ. ಒಂದು ಸಮಾಜಕ್ಕೆ ಒಳಪಟ್ಟ ಪ್ರತಿ ವ್ಯಕ್ತಿಯೂ ತನ್ನ ಇಚ್ಛೆಯನ್ನು ಎಲ್ಲರ ಇಚ್ಛೆಗೆ ಒಪ್ಪಿಸುತ್ತಾನೆ. ಹೀಗೆ ಒಪ್ಪಿಸಲು ಆ ವ್ಯಕ್ತಿ ಒಪ್ಪುವದು ಹೇಗೆ ? ತನಗೆ ಸಂರಕ್ಷಣೆ ಬೇಕು. ಸಮಾಜವು ತನ್ನನ್ನು ಕಾಪಾಡಬೇಕು, ಎಂಬ ಶರ್ತಿನ ಮೇಲೆ ಈ ಒಪ್ಪಂದ ನಡೆಯುತ್ತದೆ. ಈ ಒಪ್ಪಂದವು ಒಂದು ತಾಮ್ರಪಟವಲ್ಲ; ಕರಾರು ಪತ್ರವಲ್ಲ; ಯಾವುದೋ ಒಂದು ಕಾಲದಲ್ಲಿ ಒಂದು ಮಿತಿಗೆ ಎಲ್ಲರೂ ಒಂದೆಡೆಗೆ ಕೂಡಿ ಮುದ್ರೆಯೊತ್ತಿ ಸ್ವೀಕರಿಸಿದ ಶಾಸನವಲ್ಲ. ಮಾನವ ಸಮಾಜವು ಹುಟ್ಟಿದ್ದೇ ವ್ಯಕ್ತಿಗಾಗಿ-ವ್ಯಕ್ತಿಯ ಅಸಹಾಯತೆಯ ಫಲವಾಗಿ; ವ್ಯಕ್ತಿಯ ಸ್ವಾತಂತ್ರ್ಯವನ್ನು ವ್ಯಕ್ತಿಯ ಯೋಗಕ್ಷೇಮದ

ಹಾಗೂ ವಿಕಾಸದ ಸಂಧಿಯನ್ನು ಸಂರಕ್ಷಿಸುವದೇ ಸಮಾಜದ ಕರ್ತವ್ಯವು. ಸಮಾಜದ ಅಸ್ತಿತ್ವಕ್ಕೆ ಅದೊಂದೇ ಪ್ರಯೋಜನ. ಸಮಾಜ ಒಂದು ಸಾಧನ. ವ್ಯಕ್ತಿಯ ಸ್ವಾತಂತ್ರ್ಯ ಅದರ ಸಾಧ್ಯ.

ಈ ತತ್ವದಿಂದ ಮುಂದಿನ ಹೆಜ್ಜೆ ಲೋಕಸತ್ತೆಯ ಬೇಡಿಕೆ. ಸರ್ವರ-ಹಿತವು ಸರ್ವಾನುಮತವಾಗಬೇಕು. ಲೋಕಸತ್ತೆಯೇ ರಾಜ್ಯ ಪದ್ಧತಿಯಾಗಬೇಕು. ಅದಕ್ಕೆ ಪ್ರಜೆಗಳಿಗೆಲ್ಲ ಪ್ರೌಢಮತಾಧಿಕಾರವಿರಬೇಕು. ಪ್ರತಿ ನಾಗರಿಕನು, ಪ್ರತಿ ಪ್ರಜೆಯು ಪ್ರೌಢಬುದ್ಧಿಯಿಂದ ಕೊಟ್ಟ ಮತದ, ಸಾಮೂಹಿಕ ಫಲವಾಗಿ, ಪ್ರಜಾಸತ್ತೆಯು ಸಂಘಟಿತವಾಗಬೇಕು. ಆ ಸಂಘಟನೆಯ ಗುರಿ ನಾಗರಿಕರ ಮೂರು ಮೂಲ ಹಕ್ಕುಗಳು. ಸ್ವಾತಂತ್ರ್ಯ ಸಮತ್ವ, ಮತ್ತು ಬಂಧುತ್ವ. ರೂಸ್ಸೋನು ಘೋಷಿಸಿದ ಈ ಮೂರು ನಾಗರಿಕ ಹಕ್ಕುಗಳ ಸೂತ್ರವೇ ಮುಂದೆ ಫ್ರೆಂಚ ರಾಜ್ಯಕ್ರಾಂತಿಯ ರಣಗರ್ಜನೆಯ ವೀರಮಂತ್ರವಾಯಿತು ! ಸ್ವಾತಂತ್ರ್ಯವಿಲ್ಲದೆ ಮನುಷ್ಯನಿಗೆ ಬೆಲೆ ಇಲ್ಲ; ಸಮತ್ವವಿಲ್ಲದೆ ಆ ಸ್ವಾತಂತ್ರ್ಯಕ್ಕೆ ನೆಲೆ ಇಲ್ಲ; ಬಂಧುತ್ವವಿಲ್ಲದೆ ಸಮತ್ವಕ್ಕೆ ಕಳೆ ಇಲ್ಲ. ಈ ಮೂರು ಶಬ್ದಗಳ ಕ್ರಾಂತಿಮಂತ್ರದ ಋಷಿಯು ರೂಸ್ಸೋ !

'ಸೋಶಿಯಲ್ ಕಾಂಟ್ರ್ಯಾಕ್ಟ' ಗ್ರಂಥವನ್ನು ಪ್ರಕಟಿಸುವ ವರ್ಷವೇ ಅವನ ಇನ್ನೊಂದು ಕ್ರಾಂತಿಕಾರಿಯಾದ ಪುಸ್ತಕವು ಬೆಳಕಿಗೆ ಬಂದಿತು. ಅದರ ಹೆಸರು 'ಎಮಿಲ್'. ಮಕ್ಕಳ ಶಿಕ್ಷಣ ವಿಶೇಷವಾಗಿ ಮನೆಯೊಳಗಿನ ಶಿಕ್ಷಣ ಹೇಗಿರ ಬೇಕೆಂಬುದರ ಕುರಿತು ಈ ಪುಸ್ತಕವು ಅತ್ಯಂತ ವಿಚಾರ ಪ್ರಚೋದಕವೂ ಪ್ರಭಾವಿಯೂ ಆಯಿತು. ಚರ್ಚ ಸಂಸ್ಥೆಯಿಂದ ದೀಕ್ಷೆ ಪಡೆದು ಯುರೋಪದ ಮಕ್ಕಳು ಹುಟ್ಟಿದೊಡನೆ ಕ್ರೈಸ್ತ ಧರ್ಮದಲ್ಲಿ ಬೆಳೆಯುತ್ತಿರುವಾಗ ರೂಸ್ಸೋ ಮಕ್ಕಳ ವ್ಯಕ್ತಿವಿಕಾಸಕ್ಕೆ 'ನೈಸರ್ಗಿಕ ಧರ್ಮ'ವನ್ನು ಪ್ರತಿಪಾದಿಸಿದನು. ಅದಕ್ಕೆ ಅನುಗುಣವಾದ ಆಹಾರ ವಿಹಾರವನ್ನು ಆರೋಗ್ಯ ಶಿಕ್ಷಣವನ್ನು ವಿವರಿಸಿದನು. ಇವೆಲ್ಲ ಪ್ರತಿಪಾದನೆ ವಿವರಣೆಗಳು ಅಂದಿನ ಪ್ರಾಜ್ಞರ ಪ್ರಪಂಚಕ್ಕೆ ಅಭೂತ ಪೂರ್ವವೆನಿಸಿದವು, ತೀರ ನವೀನವೆನಿಸಿದವು. ಕೇವಲ ಗ್ರಾಂಥಿಕ ಅಧ್ಯಾಪನದ ಪಾಠಪಾಂಡಿತ್ಯದ ವಿರುದ್ಧ 'ಎಮಿಲಿ' ಒಂದು ಬಂಡಾಯವನ್ನೇ ಸಾರಿತು. ಶಿಶುವಿನ ಮಾನಸಿಕ, ಶಾರೀರಿಕ ಮತ್ತು ನೈತಿಕ ಶಕ್ತಿಗಳನ್ನು ವಿಕಾಸಗೊಳಿಸುವ ನೀತಿಯನ್ನು ರೀತಿಯನ್ನು ರೂಸ್ಸೋ ಆ ಪುಸ್ತಕದಲ್ಲಿ ವರ್ಣಿಸಿದನು. 'ಎಮಿಲಿ' ಎಂಬ ಒಬ್ಬ ಹುಡುಗಿಯ ಸಂಗೋಪನ ಸಂವರ್ಧನೆಯ ಕಥನ ರೂಪವಾದ ಆ ಗ್ರಂಥವು, ಶಿಕ್ಷಣ ಶಾಸ್ತ್ರದಲ್ಲಿ ಒಂದು ಮನ್ವಂತರದ ನಾಂದಿಯನ್ನೇ ನೆರವೇರಿಸಿತು ಆಧುನಿಕ ಶಿಕ್ಷಣ ಪದ್ಧತಿಯ ಪ್ರವರ್ತಕರಲ್ಲಿ ಅಗ್ರಣಿಗಳಾದ ಫ್ರೋಬೆಲ್, ಪೆಸ್ಟೋ-ಲೋಝಿ ಮುಂತಾದವರ ಮೇಲೆ ರೂಸ್ಸೋನ ಈ ನಿಸರ್ಗವಾದವು ನಿಸ್ಸಂದೇಹವಾಗಿ

ಪ್ರಭಾವವನ್ನು ಬೀರಿತು. ಗುಣಗೇಡಿಯಾದ ಗಂಡು, ಹೊಣೆಗೇಡಿಯಾದ ತಂದೆ–ಎಂದು ಹೆಸರು ಪಡೆದ ಈ ವಿಕ್ಷಿಪ್ತ ವ್ಯಕ್ತಿಯು ಶಿಶುಗಳ ಶೀಲ ಮತ್ತು ಶಿಕ್ಷಣ ವಿಕಾಸದ ವಿದ್ಯೆಗೆ ಆದಿಗುರುವಾದದ್ದು ಒಂದು ಆಶ್ಚರ್ಯವೇ ಸರಿ !

'ಎಮಿಲಿ' ನೈಸರ್ಗಿಕ ಧರ್ಮವನ್ನು ಪ್ರಚಾರ ಮಾಡಿತು. ಅಂದರೆ ಅದು ಪ್ರಚಲಿತ ಧರ್ಮಸಂಸ್ಥೆಯ ಹಾಗೂ ಆ ಸಂಸ್ಥೆಯನ್ನು ನಂಬಿನಿಂತ ಪ್ರತಿಷ್ಠಿತ ಸಮಾಜದ ವಿರುದ್ಧ ಬಂಡು ಹೂಡಿದಂತಾಯಿತು. ಆದ್ದರಿಂದ ರೂಸ್ಸೋನನ್ನು ಸೆರೆ ಹಿಡಿಯುವ ಆಜ್ಞೆ ಹೊರಟಿತು. ಕಾರಾವಾಸದ ಕರಾಳ ಭಯದಿಂದ ತಪ್ಪಿಸಿ ಕೊಳ್ಳಲು ರೂಸ್ಸೋ ದೇಶಾಂತರಕ್ಕೆ ಪಲಾಯನ ಮಾಡಿದನು. ವ್ಹಾಲ್ಟಾಯರನಿಗೆ ಆಶ್ರಯವನ್ನಿತ್ತ ಫ್ರೆಡ್ರಿಕ್ ಚಕ್ರವರ್ತಿಯ ಸೀಮೆಯೊಂದರಲ್ಲಿ ರೂಸ್ಸೋ ಆಶ್ರಯ ವನ್ನು ಪಡೆದನು. ಈ ಸೀಮೆ ಸ್ವಿಟ್ಝರ್ಲಂಡದಲ್ಲಿ ಇತ್ತು. ಅಲ್ಲಿಂದಲೂ ಅವನು ಕಾಲ್ದೆಗೆಯುವ ಪ್ರಸಂಗ ಒದಗಿತು. ಅಲ್ಲಿ ಅದನ್ನು ಅವನೇ ತಂದು ಕೊಂಡನು. ಇನ್ನು ತಾನು ಸುರಕ್ಷಿತನೆಂದು ಬಗೆದು ಅವನು 'ಮೌಂಟ್ಸೀನನ ಪತ್ರಗಳು' ಎಂಬ ಲೇಖಮಾಲೆಯನ್ನು ಪ್ರಕಟಿಸಿ, ತನ್ನನ್ನು ಪ್ರತಿಭಟಿಸಿದವರನ್ನು 'ಪ್ರತಿದಾಳಿಗೆ' ಗುರಿಮಾಡಿದನು. ಇದರಿಂದ ಅವನನ್ನು ಸ್ವಿಟ್ಝರ್ಲಂಡದಲ್ಲಿ ಉಳಿಯಲು ಬಿಡುವದೂ, ಅಲ್ಲಿಯ ಅಧಿಕಾರಿಗಳಿಗೆ ಕ್ಷೇಮವೆನಿಸಲಿಲ್ಲ. ಅವನಿಗೆ ಮತ್ತೆ ಪಲಾಯನಯೋಗ ಒದಗಿತು. ಈ ಸಲ ಪಲಾಯನವು ಕಡಲುಪಯಣ ವಾಯಿತು. ವ್ಹಾಲ್ಟಾಯರ್‌ನಂತೆ ರೂಸ್ಸೋ ಕೂಡ ಇಂಗ್ಲಂಡದ ಭದ್ರತೆಗೆ ಶರಣುಹೋದನು. ಅಲ್ಲಿ ಅಂದಿನ ಪ್ರಸಿದ್ಧ ಮೇಧಾವಿಯೂ ರಾಜಕೀಯ ತತ್ವವೇತ್ತನೂ ಆದ ಡೆವ್ಹಿಡ್ ಹ್ಯೂಮನ ಆಶ್ರಯವನ್ನು ಪಡೆದನು.

ಈ ಎಲ್ಲ ದೇಶಾಂತರ ದಶಾಂತರಗಳ ಭವಣೆಯಲ್ಲಿ, ಒಡ ಜೀವಿ ಥೆರೆಸಾ ಅವನನ್ನು ಹಿಂಬಾಲಿಸಿಯೇ ಇದ್ದಳು. ಅವಳನ್ನು ಫ್ರಾನ್ಸದಿಂದ ಇಂಗ್ಲಂಡಿಗೆ ಕರೆದು ತರುವ ಕೆಲಸವನ್ನು ಡಾ. ಜಾನ್ಸನ್‌ರ ಪ್ರಸಿದ್ಧ ಬಾಸ್ವೆಲ್‌ನು ಮಾಡಬೇಕಾಯಿತು. ಇದರಿಂದ ವಿಚಿತ್ರ ಬುದ್ಧಿಯ ಡಾ. ಜಾನ್ಸನ್‌ನು ಏನು ಭಾವಿಸಿರಬಹುದೆಂಬುದನ್ನು ಕಲ್ಪಿಸುವದೂ ಕಠಿಣ ! ಲಂಡನಿನಲ್ಲಿ ರೂಸ್ಸೋನ ಸ್ವಾಗತವು ಸಂಮಿಶ್ರ ಸ್ವರೂಪದ್ದಾಯಿತು. ಅಂದರೆ, ಬಹಿರಂಗವಾಗಿ ಪ್ರತಿಷ್ಠಿತ ಸುಸಂಸ್ಕೃತ ಸಾಹಿತ್ಯಿಕ ವರ್ಗಗಳಲ್ಲಿ ರೂಸ್ಸೋನಿಗೆ ಕೌತುಕದ ಸತ್ಕಾರವಾಯಿತು. ಜತೆಗೆ, ಕಾಫಿ ಕ್ಲಬ್ಬುಗಳಲ್ಲಿ, ಶಿಷ್ಟರ ಚಾವಡಿಗಳಲ್ಲಿ ಈ ನವೋದಿತ ತಾರೆಯು ನಕ್ಷತ್ರವೋ, ಧೂಮಕೇತುವೋ ಎಂಬ ಸಂಶಯವು ಚರ್ಚಿಸಲ್ಪಡಹತ್ತಿತು; ಈ ಮಹಾವ್ಯಕ್ತಿಯ ವಿಚಿತ್ರ ವರ್ತನದ ಕುರಿತು ಪಿಸುಣರು ಪಿಸುಗುಡಲುಹತ್ತಿದರು. ಆದರೆ ರೂಸ್ಸೋ ನಿಗೆ ರಾಜಮನ್ನಣೆಯೂ ದೊರೆಯಿತು. ರಾಜಾಜ್ಞೆಯಿಂದ ಅವನ ಸತ್ಕಾರ

ಪ್ರೀತ್ಯರ್ಥವಾಗಿ ಡ್ರೂರೀಲೇನ್ ರಂಗಮಂದಿರದಲ್ಲಿ ರಂಗಪ್ರಯೋಗಗಳು ಆದವು.

ಆದರೆ ದೈವಗೇಡಿ ರೂಸ್ಸೋನು ಹೊರಗಿನ ಹಗೆಗಳಿಂದ ಪಾರಾಗಿ ಬಂದರೂ, ತನ್ನಿಂದ ತಾನು ಪಾರಾಗಲಿಲ್ಲ! ವಿಚಿತ್ರ ವಿಕ್ಷಿಪ್ತವಾಗಿ ಕಾಣಿಸಿಕೊಳ್ಳುವ ಅವನ ಚಿತ್ತವೃತ್ತಿಗಳು ಕ್ರಮೇಣ ವಿಕಾರಗೆಟ್ಟು ಬುದ್ಧಿ ಭ್ರಂಶದತ್ತ ಅವನನ್ನು ಭರದಿಂದ ಒಯ್ಯತೊಡಗಿದವು. ಒಂದೆಡೆಗೆ ಸನ್ಮಾನ–ಸತ್ಕಾರಗಳೂ ಸಂತೋಷ ಕೂಟಗಳೂ ಪ್ರತಿಷ್ಠಿತರ ಮತ್ತು ಪ್ರತಿಭಾಶಾಲಿಗಳ ಪ್ರಶಸ್ತಿ ಪ್ರಶಂಸೆಗಳೂ ಅವನಿಗೆ ದೊರೆಯುತ್ತಿರುವಾಗ, ಇನ್ನೊಂದೆಡೆಗೆ ಅವನ ಬುದ್ಧಿ ವಿಪರೀತವಾಗಿ ಅವನಿಗೆ ವೈರಬಗೆಯಿತು. ವಿನಾಕಾರಣವಾಗಿ ಅವನಲ್ಲಿ ದಂಡನೆ–ಪೀಡನೆಗಳ ಭಯವು ಬಲಿಯ ತೊಡಗಿತು. ತಾನು ಅನುಭವಿಸಿದ ಕಷ್ಟ ನಿಷ್ಠುರಗಳ ಮೂಲಕವಾಗಿಯೋ ಏನೋ, ಅವನ ನೊಂದ ಅಹಂಕಾರವು ಮಿತ್ರರಲ್ಲಿಯೂ ಶತ್ರುಗಳನ್ನು ಕಾಣತೊಡಗಿತು. ಪ್ರಪಂಚವೇ ವಂಚಕರ ಒಳಸಂಚೆಂದು ತಿಳಿಯತೊಡಗಿತು. ಎಲ್ಲರಿಂದಲೂ ಮನ ಮುದುಡಿಕೊಂಡು ಉಳಿಯಬೇಕೆಂಬ ಅಸಹ್ಯ ಪ್ರವೃತ್ತಿ ಅವನಲ್ಲಿ ಉಂಟಾಯಿತು. ನೆರೆ ನೆರವನ್ನು ನೀಡಿದವರನ್ನೇ ಅವನು ನಂಬುವದು ಕಡಿಮೆ ಆಯಿತು. ಬಿಚ್ಚು ಮನಸ್ಸಿನ ಮೆಚ್ಚುಮಾತಿನ ಅವನ ನಡತೆ ಕೆಟ್ಟು ಹೋಗಿ, ಅವನ ಭ್ರಮೆಗೊಂಡ ಭೀತಿಯು ಸುತ್ತಲೂ ಅವಿಶ್ವಾಸದ ಮತ್ತು ಮೋಸದ ವ್ಯೂಹವನ್ನೇ ಭಾವಿಸ ಹತ್ತಿತು. ಮಿತ್ರರೊಂದಿಗೆ, ಆಶ್ರಯವಿತ್ತವರೊಂದಿಗೆ ರೂಸ್ಸೋನ ವ್ಯವಹಾರವು ಹೆಚ್ಚು ಹೆಚ್ಚು ಸಂಶಯಗ್ರಸ್ತವೂ ಭಯಗ್ರಸ್ತವೂ ಆಗತೊಡಗಿತು.

ಡೆವ್ಹಿಡ್ ಹ್ಯೂಮನು ಅವನನ್ನು ವೂಟನ್ ಎಂಬಲ್ಲಿ ಒಯ್ದು ಇಟ್ಟುಕೊಂಡನು. ಅಲ್ಲಿಯ ಪ್ರಶಾಂತ ಆವರಣವು ತನ್ನ ಅತಿಥಿಯನ್ನು ಪ್ರಸನ್ನಗೊಳಿಸಬಹುದೆಂದು ಅವನು ಆಶಿಸಿದನು. ಅಲ್ಲಿಯೂ ರೂಸ್ಸೋ ವಿಚಿತ್ರವಾಗಿ ವರ್ತಿಸತೊಡಗಿದನು. ಅಮೇರಿಕೆಯ ಮಾದರಿಯ ಉಡಿಗೆತೊಡಿಗೆಯಲ್ಲಿ ಕಾಣಿಸಿಕೊಳ್ಳಲು ಆರಂಭಿಸಿದನು. ತನ್ನ 'ಆತ್ಮನಿವೇದನ'ಗಳ ಬಹು ಅಂಶವನ್ನು ರೂಸ್ಸೋ ಅಲ್ಲಿಯೇ ಬರೆದನು. ಆ ನಿವೇದನೆಗಳಲ್ಲಿಯೂ ಅವನ ನೊಂದ ಆತ್ಮದ ವೇದನೆಗಳೇ ವ್ಯಕ್ತವಾಗಿವೆ; ಅವನ ವ್ಯಕ್ತಿತ್ವದ ಒಡಕು ಬಿರುಕುಗಳೇ ಒಡಮೂಡಿವೆ.

ಒಟ್ಟಾರೆ ರೂಸ್ಸೋನ ಇಂಗ್ಲಂಡ ಯಾತ್ರೆಯು ಸಫಲವಾಗಲಿಲ್ಲ. ಹ್ಯೂಮ ನೊಂದಿಗೆ ಅವನು ಕೊನೆಗೆ ಬಹಳ ಉಗ್ರವಾಗಿ ಜಗಳಾಡಿದನು. ಅನಂತರ ೧೭೬೭ ರಲ್ಲಿ ಸ್ವದೇಶಕ್ಕೆ ಮರಳಿದನು. ಮುಂದೆ ಅದೇ ರೀತಿ ತನ್ನ ಆಶ್ರಯದಾತನೊಡನೆ ಕೃತಘ್ನತೆಯಿಂದ ಜಗಳಾಡುತ್ತ, ಸದಾಕಾಲವೂ ದುಃಖಿತನಾಗಿ, ಯಾರನ್ನೂ

ನಂಬದೆ, ಎಲ್ಲರಿಗೂ ಹೆದರುತ್ತ ಎಲ್ಲೆಡೆಯಲ್ಲಿಯೂ ಒಳಸಂಚನ್ನು ಭಾವಿಸಿ ಹಿಂಜರಿಯುತ್ತ ಅವನು ನೆಲೆ ತಪ್ಪಿದ ಉನ್ಮತ್ತ ಪಿಶಾಚಿಯಂತೆ ಅಲೆದಾಡಿದನು. ಅವನ ಮಿದುಳಿನಲ್ಲಿ ಭೂತಾಕಾರದ ಪೀಡೆ, ನಿರಾಶಯು ಕೊರೆತ, ಇವೆರಡೂ ಕ್ಷೋಭವನ್ನು ಹೊತ್ತಿಸಿದ್ದವು !

ಈ ಕ್ಷೋಭದಲ್ಲಿಯೂ ಸ್ವಲ್ಪ ಸಮಯ ಅವನು ವಿರಾಮವನ್ನು ಕಂಡನು. ೧೭೭೦ ರಲ್ಲಿ ಪ್ಯಾರಿಸಕ್ಕೆ ಬಂದನು. ಅಲ್ಲಿ ಕೆಲಕಾಲ ಅವನು ನೆಮ್ಮದಿಯಾಗಿ ಬಾಳಿದನು. 'ಆತ್ಮನಿವೇದನೆ' ಗಳನ್ನು ಆಗಲೇ ಅವನು ಪೂರ್ತಿಗೊಳಿಸಿದನು. 'ಸಂವಾದಗಳು' ಎಂಬ ಪುಸ್ತಕವನ್ನೂ ಅಲ್ಲಿಯೇ ಬರೆದನು. 'ಪ್ರೊಮಿನೇಡ್ಸ ಡುನ್ ಸೊಲಿಟಾಯರ್' (ಏಕಾಕಿಯ ಅಲೆದಾಟಗಳು) ಎಂಬ ಪುಸ್ತಕವನ್ನೂ ಬರೆಯಲಾರಂಭಿಸಿದನು. ಕಲೆಯ ದೃಷ್ಟಿಯಿಂದ, ಅವನ ಎಲ್ಲ ಗ್ರಂಥಗಳಲ್ಲಿ ಇದು ಉತ್ತಮ ಕೃತಿಯೆನಿಸಿ ಕೊಂಡಿದೆ. ೧೭೭೮ ರಲ್ಲಿ ಒಬ್ಬ ಸಿರಿವಂತ ಸಾವುಕಾರನು ರೆಮಿನೊನಿಲ್ಲ ಎಂಬಲ್ಲಿ ರೂಸ್ಸೋನಿಗೆ ಉಳಿಯಲು ಒಂದು ಮನೆಯನ್ನು ಕೊಟ್ಟನು. ಅಲ್ಲಿ ಅವನು ವರ್ಷಗಟ್ಲೆ ಸುಖವಾಗಿ ವಾಸಿಸಬಹುದಿತ್ತು. ಆದರೆ ಈಸಲ ಅವನ ದುರ್ದೈವ ಇನ್ನೊಂದು ಅಸಹ್ಯ ಅಪಮಾನವನ್ನು ಅವನಿಗೆ ತಂದೊಡ್ಡಿತು. ಅವನ ಗೋವಿನಂದದ ಥೆರೆಸಾ, ಅಷ್ಟೆಲ್ಲ ವರ್ಷಗಳ ನಿಷ್ಠಾವಂತ ದಾಂಪತ್ಯ ನಡೆಸಿದವಳು, ತನ್ನ ಆ ಇಳಿವಯಸ್ಸಿನಲ್ಲಿ, ಪತಿಯ ಪರಿವೆಯಿಲ್ಲದೆ ಪ್ರಕಟವಾಗಿ ವ್ಯಭಿಚಾರಕ್ಕೆ ಇಳಿದಳು. ಅದೂ ಯಾರೊಡನೆ ? ಒಬ್ಬ ಕುದುರೆಲಾಯದ ಜವಾನನೊಡನೆ ! ಹಲವು ಮಕ್ಕಳ ತಾಯಿಯಾದ ಒಡಜೀವಿಯೆನಿಸಿಕೊಂಡ, ತನ್ನ ಹೆಂಡತಿಯು ಬಗೆದ ಈ ದ್ರೋಹವನ್ನು ಕಂಡು, ರೂಸ್ಸೋನ ಎದೆಯು ಇನ್ನಷ್ಟು ಗಾಯ ಗೊಂಡಿತು; ಮಿದುಳು ಮತ್ತೆ ಕೆಟ್ಟು ಕ್ಷೋಭಗೊಂಡಿತು. ಹುಚ್ಚು ವಿಕಾರ ಭುಗಿ ಲೆದ್ದಿತು. ತನ್ನ ಥೆರೆಸಾಳೂ ತನ್ನನ್ನು ಮೋಸಗೊಳಿಸಿದಳೆಂದ ಮೇಲೆ, ಜಗತ್ತೇ ತನ್ನ ನಾಶಕ್ಕೆ ಪಣ ತೊಟ್ಟಿತೆಂಬ ಸಂಶಯಕ್ಕೆ-ಇನ್ನೂ ಹೆಚ್ಚಿನ ಪ್ರಮಾಣವೇನು ಬೇಕು ? ಎಂದು ರೂಸ್ಸೋನಿಗೆ ಅನಿಸಿತು. ಬುದ್ಧಿಭ್ರಂಶಕ್ಕೆ ಇವಕ್ಕೂ ಹೆಚ್ಚಿನ ಬೇರೆ ಕಾರಣವೇನು ಬೇಕು ?

೧೭೭೮ ನೆಯ ವರ್ಷ ಜುಲೈ ೨ನೆಯ ದಿನ ರೂಸ್ಸೋನು ಸತ್ತುಬಿದ್ದದ್ದು ಕಂಡು ಬಂದಿತು. ಅವನ ಮೋರೆಯು ಕಪ್ಪಿಟ್ಟಿತ್ತು ಬಾತು ಹೋಗಿತ್ತು. ಸಾವಿನ ಕಾರಣವು ಸನ್ನಿಪಾತದ ಆಘಾತವೋ, ಆತ್ಮಹತ್ಯೆಯೋ ಎಂಬುದನ್ನು ಕಟ್ಟುನಿಟ್ಟಾಗಿ ಹೇಳಲು ವೈದ್ಯಕೀಯ ಅಧಿಕಾರಿಗಳು ಅಸಮರ್ಥರಾದರು.

ಜಗತ್ತಿನ ಸುಧಾರಕರಲ್ಲಿಯ ಅತಿ ವಿಚಿತ್ರ ಪುರುಷರಲ್ಲಿ ಒಬ್ಬನ ದುರಂತವು

ಹೀಗೆ ಮುಗಿಯಿತು. ಸ್ವತಃ ಪರಮ ಸ್ವಾರ್ಥಿಯಾಗಿದ್ದ ರೂಸ್ಸೋ, ರಾಜಸತ್ತೆಯ ಸ್ವಾರ್ಥಾಂಧತೆಯನ್ನು ಧಿಃಕರಿಸಿದನು. ರಾಜನ ಒಬ್ಬಾಳಿಕೆಯೂ ದಬ್ಬಾಳಿಕೆಯೂ— ಅತಿದೊಡ್ಡ ಸಂಖ್ಯೆಯ ಜನಕ್ಕೆ ಅತಿ ದೊಡ್ಡ ಪ್ರಮಾಣದ ದುಃಖ, ದುರ್ದೆಸೆಗಳನ್ನು ತರುವದೆಂದು ಮನಗಂಡನು; ಮನಗಂಡದ್ದನ್ನು ಪ್ರಕಟವಾಗಿ ಸಾರುವಷ್ಟು ಗಂಡಸುತನವೂ ಅವನಲ್ಲಿತ್ತು. ಸ್ವತಃ ನೈತಿಕ ಹೊಣೆಗಾರಿಕೆಯನ್ನು ಬಹುಮಟ್ಟಿಗೆ ತಪ್ಪಿಸಿಕೊಳ್ಳುವ ಈ ಲೇಖಕನು ತರುಣರ ವ್ಯಕ್ತಿವಿಕಾಸಕ್ಕಾಗಿ ನಿರಾಮಯವೂ ಸತ್ವಮಯವೂ ಉಪಯುಕ್ತವೂ ಆದ ನೈತಿಕ ಬೆಲೆಯ ಮಾರ್ಗದರ್ಶಕ ಗ್ರಂಥವನ್ನು ಬರೆದನು. ಪ್ರಪಂಚವು ಅದರ ಬೆಲೆಯನ್ನರಿತು ಮಾರ್ಗದರ್ಶನವನ್ನೂ ಪಡೆಯಿತು. ವಿಖ್ಯಾತ ಬ್ರಿಟಿಶ್ ಮುತ್ಸದ್ದಿ ಲಾರ್ಡ ಮೊರ್ಲೇ ಇವರು ಉದ್ಗರಿಸಿದಂತೆ :– 'ಮರಣಾಂತಿಕ ಜರ್ಜರತೆಯು ಫ್ರಾನ್ಸಿನ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯನ್ನು ಆಕ್ರಮಿಸಿ ಒತ್ತಿ ಹಿಡಿದಿತ್ತು. ಈ ಆಕ್ರಮಣದ ಹಿಡಿತದಿಂದ ಫ್ರಾನ್ಸವು ತಲೆಯೆತ್ತಿ ಎದ್ದುದಕ್ಕೆ ಯಾವನೇ ಒಬ್ಬ ವ್ಯಕ್ತಿಯು ಕಾರಣವಾಗಿದ್ದಾದರೆ ಅದು ರೂಸ್ಸೋನ ಕಾರ್ಯವೇ ಸರಿ. ಆ ದೇಶವು ಒಳಗಿನಿಂದ ವಿಧ್ವಂಸವನ್ನು ಹೊರಗಿನಿಂದ ವಿಚ್ಛೇದನೆಯನ್ನು ತಪ್ಪಿಸಿಕೊಳ್ಳುವಷ್ಟು ಚೈತನ್ಯವನ್ನು ಅವನಿಂದ ಪಡೆಯಿತು.'

ಒಂದೇ ವಾಕ್ಯದಲ್ಲಿ ಹೇಳುವದಾದರೆ, ಫ್ರೆಂಚ ರಾಜ್ಯಕ್ರಾಂತಿಯ ಮಹಾ ವಿಪ್ಲವವನ್ನು ಆರಂಭಿಸಿದವನು ರೂಸ್ಸೋ. ಇನ್ನು ಆ ವಿಪ್ಲವದ ಮೂರ್ತ ಪರಿಣಾಮಗಳು ಸ್ಫುಟವಾಗಿ ವ್ಯಕ್ತವಾಗಲು ಕಾಲುಶತಮಾನಕ್ಕೂ ಮಿಕ್ಕಿದ ಕಾಲಾವಧಿಯು ಹಿಡಿಯಿತು, ಆ ಮಾತು ಬೇರೆ.

ಅವನು ತನ್ನ 'ಆತ್ಮನಿವೇದನೆ' ಗಳಲ್ಲಿ ಒಂದು ಸಾರದ ತತ್ವವನ್ನು ಸಾರಿದ್ದಾನೆ. 'ಮಾನವನು ದೂರದರ್ಶಿಯಾಗಿದ್ದರೆ ಸಾಕು; ಅವನಿಗೆ ಬೇರೆ ಸದ್ಗುಣಗಳು ಬೇಕಿಲ್ಲ'— ಎಂಬುದೇ ಆ ತತ್ವ. ಆದರೆ ಆಶ್ಚರ್ಯವೇನು ನೋಡಿ. ಈ ತತ್ವವನ್ನು ನಿವೇದಿಸಿದ ದಾರ್ಶನಿಕನು ದೂರದರ್ಶಿಯೂ ಇರಲಿಲ್ಲ. ಸದ್ಗುಣಿಯೂ ಆಗಲಿಲ್ಲ! ಅಂದರೆ ದಾರ್ಶನಿಕನು ಆಚರಿಸಿ ತೋರಿಸಲು ತಪ್ಪಿದ್ದರಿಂದಲೇ ಅವನು ಸಾರಿದ ತತ್ವವು ಸತ್ಯವೆಂದು ಸಿದ್ಧವಾಗುವದೇನೋ!

# ವ್ಹೊಲ್ಟಾಯರ್

ಪ್ರಪಂಚದ ಅತಿಶ್ರೇಷ್ಠ ಪತ್ರಿಕಾ ವ್ಯವಸಾಯಿ ಯಾರು ? ಆಧುನಿಕ ಯುರೋಪದ ವಿಚಾರಕ್ರಾಂತಿಯ ರಣಕಹಳೆಯನ್ನು ಊದಿದವರು ಯಾರು ? ವಿವಿಧ ವಿಷಯ ಗಳಲ್ಲಿ ಒಂದೇ ನಿರಂಕುಶಗತಿಯಿಂದ ಲೆಕ್ಕಣಿಕೆಯನ್ನು ಓಡಿಸುವ ಸವ್ಯಸಾಚಿತ್ವದೊಡನೆ ಅಪ್ರತಿಮ ಲೇಖನ ಕೌಶಲ್ಯವನ್ನೂ ಪ್ರಚಾರ ತಂತ್ರದ ಪ್ರಭುತ್ವವನ್ನೂ ಬೆಳೆಸಿ ಬೆಳಗಿದವನು ಯಾರು ? ಸತ್ಯ ಮತ್ತು ವಿಮರ್ಶೆಯ ವೈಭವಶಾಲಿಯಾದ ಪ್ರತಿಪಾದಕನು ಯಾರು ? ವ್ಯಂಗ್ಯ ಮತ್ತು ಉಪರೋಧಗಳ ಚುಚ್ಚುಮಾತುಗಳ ಮರ್ಮಭೇದಕ ಉಪಯೋಗಕ್ಕೆ ಉಪಮೆ ಇಲ್ಲದ ಗುರು ಯಾರು ? ಶುಬ್ಬು ಗಾರಿಕೆಯ ('ಪತ್ತೆದಾರಿ'ಯ) ಕತೆಯ ಮೂಲ ಕಲ್ಪಕನು ಯಾರು ? ವ್ಹೊಲ್ಟಾಯರ್ ! ಅತ್ತ ಇಂಗ್ಲಂಡಿನಲ್ಲಿ ಡಾ. ಜ್ಹೊನ್ಸನ್ ಗ್ಯಾಲನ್‌ಗಟ್ಲೆ ಚಹ ಕುಡಿಯುತ್ತ ತನ್ನ ಪ್ರಚಂಡ ದೇಹಕ್ಕೆ ಒಪ್ಪುವ ಪ್ರಚಂಡ ಬುದ್ಧಿಮತ್ತೆಯ ಅಬ್ಬರದಿಂದ ಧರ್ಮ-ನೀತಿಗಳಿಗಾಗಿ ಗದ್ದರಿಸುತ್ತ, ಇರುವ ಸಮಯ, ಇತ್ತ ಫ್ರಾನ್ಸದಲ್ಲಿ ಮುದುಡಿದ ಮೈಯ ಕಿರುಕಳು ಆಕೃತಿಯ, ವ್ಹೊಲ್ಟಾಯರ್‌ನು ಲೋಟಗಟ್ಲೆ ಕಾಫಿ ಬಗ್ಗಿಸುತ್ತ ತನ್ನ ಪ್ರಬಲವಾದ ಕಟುವಾದ ಚಾಟೂಕ್ತಿಗಳ ಚಾಟಿಯ ಪೆಟ್ಟುಗಳಿಂದ ಪುರಾಣ ಮತಾಭಿಮಾನವನ್ನೂ ಗತಾನುಗತಿಕ ಡಂಭಾ ಚಾರವನ್ನೂ ಹೊಡೆದಟ್ಟಲು ಹೋರಾಡಿದನು. ಅವನ ಮಾತಿನ ಪ್ರಭುತ್ವವು ಯಾವ ಪ್ರಭುತ್ವದ ಮಾತಿಗೂ ಮಿಗಿಲಾಗಿ ಯುರೋಪದ ಆಳರಸರ ಹೃದಯ ಗಳನ್ನೇ ಆಳುವ ಶಕ್ತಿ ಸಂಪನ್ನವಾಯಿತು. ಈ ಶಕ್ತಿಮಯ ವ್ಯಕ್ತಿಯ ಕತೆಯನ್ನು ಕೇಳಿ...

ಆಕೌತನ ತೀರ ಕಿರಿಯ ಕೂಸು ೧೬೯೪ರಲ್ಲಿ ಪ್ಯಾರಿಸ ನಗರದಲ್ಲಿ ಹುಟ್ಟಿದಾಗ ಅದು ಬದುಕಿ ಉಳಿಯಬಹುದೆಂದು ಯಾರೂ ಭಾವಿಸಿದ್ದಿಲ್ಲ. ಹುಟ್ಟು ಬೇನೆಯ ನರಳಿಕೆಯ ಆ ಕೂಸು-ಗಂಡುಕೂಸು-ದಾದಿಯ ತೋಳುಗಳಲ್ಲಿ ಕಿರುಚುತ್ತಿತ್ತು- ಅಪಸ್ಮಾರದ ಬಾಧೆಯಿಂದಲೋ ಎಂಬಂತೆ ಕೈಕಾಲು ಒಗೆದಾಡುತ್ತಿತ್ತು. ಆ ರೂಪ ನೋಡಿ, ಧರ್ಮದೀಕ್ಷೆ ಇಲ್ಲದೆ ಮಗು ಸಾಯಬಾರದು-(ಹಾಗೆ ಸತ್ತರೆ ನರಕದ ಪಿಶಾಚಿ ಆಗಿ ಬಂದರೆ !)- ಎಂದು ಲಗುಬಗೆಯಿಂದ ಅವರ ದೀಕ್ಷಾವಿಧಿ ಮುಗಿಸಿ ಹೆಸರಿಟ್ಟರು-ಫ್ರಾನ್ಸಿಸ್, ಮೊವಾರಿ, ಆಕೌತ ಎಂದು. ಆದರೆ ಮಗು ಮಡಿಯಲಿಲ್ಲ. ಆಯುಷ್ಯ ರೇಖೆ ಗಟ್ಟಿಯಾಗಿಯೇ ಇತ್ತು. ದೇಹಬಲ ಏನೂ ಇದ್ದಿಲ್ಲ: ಆದರೂ ಮಿದುಳಿನ ಬಲ ಪ್ರಚಂಡವಾಗಿ ಬೆಳೆಯಿತು ಕೂಸಿಗೆ. ಚಿಕ್ಕ ವಯಸ್ಸಿನಲ್ಲಿಯೂ ತನ್ನ ಪ್ರಾಯಕ್ಕೆ ಮಿಕ್ಕಿದ ಬುದ್ಧಿಯನ್ನು ಅವನು

ಪ್ರಕಟಿಸಿದನು. ಮೂರನೆ ವರ್ಷದಲ್ಲಿಯೇ ಅವನು ತಾನೂ ಓದಿದ ಕತೆಗಳನ್ನೂ ಕಂಠಪಾಠವಾಗಿ ಬರೇ ನೆನಪಿನಿಂದ ಹೇಳುತ್ತಿದ್ದನು.

ಅವನಿಗೆ ನಾಮಕರಣ ಮಾಡಿದ ಓರಿಯನು ಒಬ್ಬ ಧರ್ಮಗುರುವಾಗಿದ್ದನು. ಆತನೇ ಪಾಲಕ-ತಂದೆಯಂತೆ ಅವನ ಶಿಕ್ಷಣಕ್ಕೆ ಅಣಿಯಾದನು. ಈ ಗುರುವಿನಲ್ಲಿ ಧರ್ಮ ತುಸು ಕಡಿಮೆಯೇ ಇತ್ತೆಂದು ಊರ ಜನ ತಿಳಿಯುತ್ತಿದ್ದರು. ಆತನ ಆಚಾರ, ಧರ್ಮಗುರುಗಳ-ಪಾದ್ರಿಗಳ-ಪರಿಪಾಟಿಯಲ್ಲಿಯೇ ನೇರವಾಗಿ ನಡೆಯುತ್ತಿದ್ದಿಲ್ಲ. ನಡೆನುಡಿಯಲ್ಲಿ ಅವನು ತುಸು ಸ್ವೈರನಾಗಿದ್ದನು. ಆ ಠಕ್ಕ ಮುದುಕನಿಗೆ ಬಾಲಕ ವ್ಹೊಲ್ಟಾಯರ್‌ನು ತಕ್ಕ ಶಿಷ್ಯನಾದನು. ಸಂಭಾವಿತ ಮತ್ತು ಭಾವಿಕ ಗೃಹಸ್ಥರೆಲ್ಲ ಈ ಧರ್ಮಗುರುವಿನ ವಿಷಯ ಮೂಗುಮುರಿದರೂ, ಆತನ ಜ್ಞಾನದ ವಿಷಯ ಯಾರೂ ಏನೂ ಅನ್ನುವಂತಿದ್ದಿಲ್ಲ. ಆತನು ವ್ಹೊಲ್ಟಾಯರ್‌ನ ಓದುಬರಹದ ಹೊಣೆಯನ್ನು ಹೊತ್ತನು. ಓದುಬರಹದೊಂದಿಗೆ ತನ್ನ ಓರೆನೋಟದ ಕೊಂಕು ಮತಗಳನ್ನು ಗುರುವು ಶಿಷ್ಯನಿಗೆ ಕಲಿಸದೇ ಇರಲಿಲ್ಲ.

'ಪೋರನಿಗೆ ಈಗಾಗಲೇ 'ಮೊಸೈದ್' ಪಾಠವಿದೆ!' ಎಂದು ಮುದುಕನು ಹಿಗ್ಗಿ, ಗೆಳೆಯರ ಬಳಿಯಲ್ಲಿ ಉದ್ಗಾರ ತೆಗೆದನು. ಈ 'ಮೊಸೈದ್' ಒಂದು ಕುಪ್ರಸಿದ್ಧ ಧರ್ಮಲಂಡ ಕವಿತೆ, ಈ ವ್ಹೊಲ್ಟಾಯರ್‌ನ ಬುದ್ಧಿ, ವಿಚಾರ, ಆ ಧರ್ಮಗುರುವು ನಿನೊನ್‌ಳಿಗೂ ಹೇಳಿದ್ದನು. ನಿನೊನ್‌ಳು ಅಂದಿನ ಒಬ್ಬ ಸಾಮಾಜಿಕ ಆಕರ್ಷಣೆಯ ವ್ಯಕ್ತಿ. ಆಕೆಯ ಸೌಂದರ್ಯವು ಮೂರು ಪೀಳಿಗೆಯ ಜನರನ್ನೂ ಆಕರ್ಷಿಸಿತ್ತು. ವಯಸ್ಸು ಅವಕ್ಕೆ ತಡೆಯಾಗಲಿಲ್ಲ! ಆದರೆ ಮುಂದೆ ಆಕೆ ಕೇವಲ ಬುದ್ಧಿ ಚಾತುರ್ಯದ ಆಕರ್ಷಣೆಯನ್ನೇ ತನ್ನ ಮುಖ್ಯ ಅಸ್ತ್ರವಾಗಿ ಇಟ್ಟುಕೊಂಡಳು. ಕುಮಾರ ವ್ಹೊಲ್ಟಾಯರ್‌ನೂ 'ಮೊಸೈದ್'ದಂಥ ನಾಸ್ತಿಕ ಕವನಗಳನ್ನು ತಾನೇ ಕಟ್ಟುವನೆಂದು ಕೇಳಿ, ಆಕೆ ಅವನನ್ನು ಕರೆಕಳುಹಿದಳು. ಆಗ ಅವನು ವ್ಹೊಲ್ಟಾ-ಯರ್‌ನಿದ್ದಿಲ್ಲ; ಬರೇ ಕುಮಾರ ಅಕೌತನಾಗಿದ್ದನು. ಇದೇ ತರಳನು ಮುಂದೆ ಪ್ರಪಂಚವನ್ನೇ-ಚಿರತರುಣಿಯೆಂದು ತಿಳಿದ ಆಕೆಯು ಕೂಡ ಬಿಟ್ಟು ಹೋದ ಮೇಲಿನ ಪ್ರಪಂಚವನ್ನು!-ಪ್ರಭಾವ ಚಕಿತವನ್ನಾಗಿ ಮಾಡುವನೆಂಬ ಕಲ್ಪನೆಯು ಆ ಮುಪ್ಪುಒಪ್ಪದ. ಸರೆತ ಚಲುವೆಗೆ ಎಲ್ಲಿಂದ ಬರಬೇಕು? ಅದೇ ತರಳನು ಪ್ರೌಢದೆಸೆಗೆ ಬಂದಮೇಲೆ, ವ್ಹೊಲ್ಟಾಯರ್ ಎಂಬ ಹೆಸರನ್ನು ಇಟ್ಟುಕೊಂಡನು. ಅಣಕಗಾರ, ಪ್ರತ್ಯುತ್ಪನ್ನಮತಿ, ಪ್ರತ್ಯುತ್ತರಪಟು, ಚಾಟೂಕ್ತಿ ಚತುರ, ತತ್ವವೇತ್ತ, ಸನಾತನಿವೃತ್ತಿಯ ಮತ್ತು ಸಾಂಪ್ರದಾಯಿಕತೆಯ ಕಡುವೈರಿ, ಎಂದು ಹೆಸರಾದವನು ಇದೇ ವ್ಹೊಲ್ಟಾಯರ್. ಜಗತ್ತಿಗೆ ಇದೇ ಹೆಸರು ಗೊತ್ತು. ಆದರೆ ಅಂದು ಆ ಹುಡುಗನನ್ನು ಕರೆತಂದು ಅವನ ಸುಕ್ಕುಮೋರೆಯನ್ನು

ಕಣ್ಣಲ್ಲಿ ಕಣ್ಣಿಟ್ಟು ನೋಡುವಾಗ ನರೆತು ನಿರಿಬಿದ್ದ ಚಲುವೆ ನಿನೊನ್‌ಳಿಗೆ ಇದೆಲ್ಲ ಏನು ಗೊತ್ತು ?

೧೦ ವರ್ಷ ಪ್ರಾಯಕ್ಕೆ ವ್ಹೊಲ್ಟಾಯರ್‌ನನ್ನು ಒಂದು 'ಜೇಸುವೈಟ' ಶಾಲೆಗೆ ಹಾಕಲಾಯಿತು. ಅಲ್ಲಿ ಈ ಬಾಲಕನು ತನ್ನ ಬುದ್ಧಿಯ ಕುಶಾಗ್ರತೆಯಿಂದ, ದಣಿವಿಲ್ಲದ ತಣಿವಿಲ್ಲದ ಕುತೂಹಲದಿಂದ ಮತ್ತು ನಡೆನುಡಿಯ ಮೋಡಿಯಿಂದ, ಗುರುಗಳನ್ನು ಬೆರಗುಗೊಳಿಸಿದನು. ಅವನ ಶಾಲೆಯ ಜೀವನವು ಯಾವದೇ ಹುಡುಗನು ಹೆಮ್ಮೆಪಡುವಷ್ಟು ಯಾವದೇ ಹಿರಿಯರು ನೋಡಿ ಹಿಗ್ಗುವಷ್ಟು ಉಜ್ಜ್ವಲವಾಯಿತು. ಅದನ್ನು ಕಂಡು ಅವನ ತಂದೆ ಮಗನಿಗಾಗಿ ವಕೀಲಿವೃತ್ತಿ ಕಲ್ಪಿಸಿ ಕೊಡಲು ಮನಸು ಮಾಡಿದನು. ಆದರೆ ಮಗನ ಕಲ್ಪನೆ ಬೇರೆಯೇ ಇತ್ತು; 'ನನಗೆ ಬೇರೆ ಯಾವವೃತ್ತಿಯೂ ಬೇಕಿಲ್ಲ; ನಾನು ಸಾಹಿತಿಯಾಗಬೇಕೆಂದಿರುವೆನು !' ಎಂದು ಆ ಬುದ್ಧಿವಂತನು ಅಂದು ಬಿಟ್ಟನು. ತಂದೆಗೆ ಇದೊಂದು ಆಘಾತವೇ ಆಯಿತು.

ಇದೇ ಸಂಧಿಯನ್ನು ಅವನ ಸಾಕು ತಂದೆ–ಪಾಖಂಡಿಪಾದ್ರಿ–ಕಾಯುತ್ತಿದ್ದನು. ಈ ಹುಡುಗ ಈ ರೀತಿ ತಂದೆಯಿಂದ ದೂರ ಅಂದರೆ ತಂದೆ ತಿದ್ದಿ ಬೆಳೆದ ಪರಿಪಾಟಿಯು ಹೊರತಾಗಿ–ಬೆಳೆದದ್ದನ್ನು ನೋಡಿ, ಅವನಿಗೆ ಮನವಾರೆ ಹಿಗ್ಗೆನಿಸಿತು. ವ್ಹೊಲ್ಟಾಯರ್‌ನ ಅಣ್ಣ, ನಿಷ್ಠಾವಂತ ನೇಮನಿಷ್ಠನಾಗಿ ಬೆಳೆದಿದ್ದನು. ಇವನು ಅಣ್ಣನ ತಮ್ಮನಾಗಲಿಲ್ಲ. ಈಗ ಪಾದ್ರಿಯು ವೊಲ್ಟಾಯರ್‌ನನ್ನು ತನ್ನ ವರಿಷ್ಠ ವರ್ಗದ ವಿಲಾಸಿಗಳಾದ ಗೆಳೆಯರಿಗೆ ಪರಿಚಯ ಮಾಡಿಕೊಟ್ಟನು. ಅಷ್ಟು ಅಲ್ಪ ವಯಸ್ಸಿಗೇ ಇಷ್ಟೊಂದು ಪ್ರಶಂಸೆ ಪಡೆಯುದರ ಪರಿಣಾಮ ಆಗದೇ ಹೋದೀತೆ ? ಯಶವು ಒಂದು ಮದ್ಯದಂತೆ. ಚಿಕ್ಕ ಮಿದುಳಿಗೆ ಅವರ ದೊಡ್ಡ ಗುಟುಕು ಕೂಡಲೇ ಮದವೇರಿಸುವದು. ತರುಣ ವೊಲ್ಟಾಯರ್‌ನಿಗೂ ಹಾಗೆಯೇ 'ಏರಿತು'. ಅವನದು ಇನ್ನೂ ಒಂದು ವೈಚಿತ್ರ್ಯ ! ದೇಹವಲ್ಲಿ ಎಷ್ಟು ಬಡಕ, ಹಗುರು, ನಾಜೂಕು. ಆದರೆ ಬುದ್ಧಿ ಎಷ್ಟು ಪುಷ್ಟ, ಎಷ್ಟು ಬಲಿಷ್ಠ ! ಇದರಿಂದ ರಾಜಪುತ್ರರು ಅವನನ್ನು ಸಂಭ್ರಮದಿಂದ ಸತ್ಕರಿಸಿದರು. ಸುಂದರ ರಮಣಿಯರು ಅವನನ್ನು ಸಂಮೋಹದಿಂದ ಮುದ್ದಾಡಿದರು. ಮೊನೆ ಮಾತಿನ ಸುಭಾಷಿತಗಳಿಂದ, ಉರಿ ಉಗುಳುವ ಉಪರೋಧ ಪ್ರಹಸನಗಳಿಗೂ. ಅಲ್ಲಿಂದ ಗಂಭೀರ ನಾಟಕಗಳಿಗೂ ಅವನ ಬರಹಗಾರಿಕೆಯು ಕೈ ಚಾಚಿತು. 'ಯುಡಿಪಿ' ಎಂಬುವದು ಅವನ ಪ್ರಥಮ ದುರಂತ ನಾಟಕ. 'ಚೆನ್ನಾದ ವಸ್ತು' ಎಂದರು ಅವರ ಗೆಳೆಯರು–ನಾಟಕದ ಕರಡನ್ನು ಒಮ್ಮೆಯೂ ನೋಡದೇ ! ಮುದ್ದುಗೆಡಿಸಿದ ತರುಣ

ಲೇಖಕನು ತಿಳಿವಷ್ಟು ತ್ವರೆಯಿಂದ ಅರಮನೆಯ ನಾಟಕ ಮಂಡಳಿಯು ಅದನ್ನು ಆಡಲು ಕೈಗೊಳ್ಳಲೇ ಇಲ್ಲ.

ಆದರೆ ಅವನ ದಾರಿ ಬೇರೆ ದಿಕ್ಕಿಗೆ ಸಾಗಿತು. ಈ ಪಾಖಂಡಿ ಧರ್ಮ ಲಂಡ ಶಿಷ್ಟರ ಸಹವಾಸದಿಂದ ತಪ್ಪಿಸುವದಕ್ಕಾಗಿ, ತಂದೆಯು ಅವನನ್ನು ಹಾಲಂಡಿಗೆ ಕಳುಹಿಸಿಕೊಟ್ಟನು. ಅವನ ಸಾಕು ತಂದೆ ಪಾಖಂಡಿ ಪಾದ್ರಿಯ ಸಹೋದರ ನೊಬ್ಬನು ಫ್ರೆಂಚ ಸರಕಾರದ ರಾಯಭಾರಿಯಾಗಿ ಹಾಲಂಡದಲ್ಲಿ ಇದ್ದನು. ವ್ಹೊಲ್ಟಾಯರ್ ಅವನಲ್ಲಿ ಆಶ್ರಯ ಹೊಂದಿದನು. ಅವನ ಪಾಲಕತ್ವದಲ್ಲಿ ಉಳಿಯ ಬೇಕಾಯಿತು. ಆದರೆ ಅಲ್ಲಿ ಹೋದ ಈ ತರುಣ, ಕಾವಲಿಯಿಂದ ಕಿಚ್ಚಿಗೆ ಹಾರಿದನು. ಕಾವ್ಯ ಕಟ್ಟುವದರಿಂದ ಕಾವ್ಯ ಜೀವನಕ್ಕೆ ಇಳಿದನು ! ಅಂದರೆ ಅವನ ಬಾಳಿನ ಮೊದಲನೆಯ ಪ್ರಣಯ ಪ್ರಸಂಗ ಅಲ್ಲಿ ಘಟಿಸಿತು ! ಆಗ ಅವನು ರಾಯ ಭಾರಿಯೊಡನೆ ಹೇಗ್ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಅಲ್ಲಿ ಒಲಿಂಪಿ ಡುನೋಯರ್ ಎಂಬಾಕೆಯನ್ನು ಭೆಟ್ಟಿಯಾದನು. ಆದರೆ ಆ ಪಿಂಪೆಟ್ಟಳ ತಾಯಿ (ಪಿಂಪೆಟ್ ಇದು ನಲ್ಲನು ನಲ್ಲೆಗಿಟ್ಟ ಮುದ್ದಿನ ಪುಟ್ಟ ಹೆಸರು !) ಇದಕ್ಕಾಗಿ ಮಹಾ ಗದ್ದಲ ಎಬ್ಬಿಸಿದಳು. ಅವಳ ದೂರು ರಾಯಭಾರಿ ತನಕವೂ ಬಂದಿತು. ಅವನಿಗೆ ಇದು ಇಷ್ಟವಿದ್ದಿಲ್ಲ. ಆದ್ದರಿಂದ ಕುಮಾರ ವ್ಹೊಲ್ಟಾಯರ್‌ನನ್ನು ಅವನು 'ಮರುಟಪಾಲಿಗೆ' ಮನೆಗೆ–ಪ್ಯಾರಿಸಿಗೆ–ರವಾನಿಸಿಬಿಟ್ಟು, ನಿಟ್ಟುಸಿರು ಎಳೆದನು.

೧೭೧೫ ರಲ್ಲಿ ೧೪ ನೆಯ ಲುಯಿಯು ತೀರಿಕೊಂಡನು. ೧೫ ನೆಯ ಲುಯಿಯು ಅಲ್ಪವಯಿಯಾಗಿದ್ದನು. ಒರ್ಲಿಯಾನ್ಸದ ಡ್ಯೂಕನು ರಾಜರಕ್ಷಕನಾಗಿ ಆಡಳಿತ ನಡೆಯಿಸಹತ್ತಿದನು. ೧೪ ನೆಯ ಲುಯಿಯು ಪ್ರಪಂಚಕ್ಕೇ ಅದ್ವಿತೀಯ ದಬ್ಬಾಳಿಕೆ ಗಾರನಾಗಿ ಹೋದನು. ಅವನ ಮರಣದ ಮೂಲಕ ಪ್ರಜೆಗಳ ಜೀವನದ ಮೇಲಿನ ವಜ್ರಮುಷ್ಟಿಯು ಸಡಿಲಿಸಿಹೋಯಿತು. ನಿರ್ಬಂಧ ನಿಯಂತ್ರಣಗಳ ಬಿಗುವು ಕರಗಿ ಹೋಯಿತು. ಮಂದಿ ಮನಬಂದಂತೆ ಮನವಾರೆ ನಡೆ–ನುಡಿಯುವಂತಾಯಿತು; ಓದುಬರೆಯುವಂತಾಯಿತು. ಈ ಮಂದಿಯಲ್ಲಿ ವ್ಹೊಲ್ಟಾಯರ್‌ನೂ ಒಬ್ಬನಿದ್ದನು. ಆದರೆ ಇವನ ಹದಗೆಟ್ಟ ಲೆಕ್ಕಣಿಕೆ ಬರೆಯುವ ಸ್ವೈರ ಭರದಲ್ಲಿ ರಾಜರಕ್ಷಕನ ಮೇಲೆಯೂ ತುಸು ಹರಿತವಾಗಿ ನಡೆಯಿತು. ಡ್ಯೂಕನ ಕ್ರೋಧಕ್ಕೆ ಈ ದುಡುಕಿನ ಲೇಖಕನು ಬಲಿಯಾದನು. ಅವನನ್ನು ರಾಜಾಜ್ಞೆಯಂತೆ ೧೮ ತಿಂಗಳು ಬ್ಯಾಸ್ಟಿಲ ಸೆರೆಮನೆಯಲ್ಲಿ ನೂಕಲಾಯಿತು.

ಸೆರೆಮನೆಯಲ್ಲಿ ಹೊತ್ತು ಕಳೆಯುವದು ಹೇಗೆ ? ಫ್ರೆಂಚ ಅರಸು ೪ ನೆಯ ಹೆನ್ರಿಯ ಕುರಿತು ಒಂದು ಮಹಾಕಾವ್ಯವನ್ನೇ ಬರೆಯಲು ವ್ಹೊಲ್ಟಾಯರ್‌ನು ಆರಂಭಿಸಿದನು.

ಆ ಕಾವ್ಯ ಅಲ್ಲಿ ಪೂರ್ತಿ ಆಗಲಿಲ್ಲ. ಸೆರೆಯಿಂದ ಬಿಡುಗಡೆಯಾದೊಡನೆ ಡೂಸದ ಬೆಥ್ಯೂನ್ ಎಂಬ ಮಿತ್ರನೊಬ್ಬನು ಅವನನ್ನು ಆರೋಗ್ಯಸಂಪಾದನೆಗಾಗಿ ಸುಲ್ಲಿ ಎಂಬಲ್ಲಿಗೆ ಒಯ್ದನು. ಅಲ್ಲಿ ಮಿ. ಲೇಡಿ ಲಿವ್ರಿ ಎಂಬ ನಟಿಯ ಪ್ರಭಾವಕ್ಕೆ ಅವನು ಸೆರೆಯಾದನು ! ಆಕೆಯು ಪಾತ್ರವಹಿಸಬೇಕೆಂಬ ಉದ್ದೇಶದಿಂದ ಅವನು ಕೆಲವು ನಾಟಕಗಳನ್ನು ಅಲ್ಲಿ ಬರೆಯತೊಡಗಿದನು. ಅಲ್ಲಿಂದ ಪ್ಯಾರಿಸಿಗೆ ಮರಳಿದ ಮೇಲೆ ಹಿಂದೆಯೇ ಬರೆದ 'ಯುಡಿಪಿ' ನಾಟಕವನ್ನು ರಂಗಕ್ಕೆ ತರಲು ಯತ್ನಿಸಿ ಹೇಗೋ ಯಶಸ್ವಿಯಾದನು. ಅದರ ಪ್ರಯೋಗ ಪ್ರಚಂಡವಾಗಿ ಯಶಸ್ವಿಯಾಯಿತು. ಆದರೆ ಆ ಯಶಸ್ಸಿನ ಮರ್ಮ ಬೇರೆಯೇ ಇತ್ತು. ಮಂದಿ ಮೆಚ್ಚಿದ್ದು ನಾಟಕದ ಗುಣಕ್ಕೆ ಅಲ್ಲ; ನಾಟಕದಲ್ಲಿ ನಾಯಕನ ಕೈಯಿಂದ ಘಟಿಸುವ ಅಪರಾಧ ಕೃತ್ಯ, ಮೂಲದಲ್ಲಿ ರಾಜರಕ್ಷಕನದೇ ಎಂಬ ಆರೋಪವು ಜನಜನಿತವಾಗಿ ಹಬ್ಬಿದ ಸುದ್ದಿಗೆ ! ನಾಟಕದ ವಿಪರೀತ ಯಶಸ್ಸಿಗೆ ಈ ಅಪಪ್ರಚಾರವೇ ಕಾರಣವಾಗಿತ್ತು. ಅರಮನೆಯಲ್ಲಿ ನಡೆಯುವ ದುಷ್ಕೃತ್ಯಗಳನ್ನು ಪ್ರಖರವಾಗಿ ಟೀಕಿಸಲೇ 'ಯುಡಿಪಿ' ನಾಟಕವನ್ನು ಬರೆದು ಆಡಲಾಗಿದೆಯೆಂದು ಜನ ನಂಬಿತು ಮತ್ತು ನಾಟಕ ಗೃಹವು ಕಿಕ್ಕಿರಿದು ತುಂಬಹತ್ತಿತು. ಹೀಗೆ ಒಮ್ಮೆಲೆ ವ್ಹೊಲ್ಟಾಯರನ ಖ್ಯಾತಿಯು ಹಬ್ಬಿತು. ಆದರೆ ಅವನ ಇತರ ನಾಟಕಗಳು ಯಶಸ್ವಿ ಆಗಲಿಲ್ಲ. ಅವುಗಳಿಗೆ ಇಂಥ ಆಗಂತುಕ ನೆವಗಳು ಎಲ್ಲಿಂದ ಸಿಗಬೇಕು ? ಆದ್ದರಿಂದ ವ್ಹೊಲ್ಟಾಯರ್‌ನು ನಾಟಕಗಳ ಗೊಡವೆಯನ್ನು ಬಿಟ್ಟು, ಹಿಂದೆ ಸೆರೆಮನೆಯಲ್ಲಿ ಬರೆಯಲು ಕೈಗೊಂಡ ಕಾವ್ಯವನ್ನು ಪೂರ್ತಿ ಮಾಡಿ ಪ್ರಕಟಿಸುವದರಲ್ಲಿ ಮನಸ್ಸು ಹಾಕಿದನು. ಆ ಕಾವ್ಯಕ್ಕೆ 'ಹೇನ್ರಿಯಾದ್' ಎಂದು ಹೆಸರು ಕೊಟ್ಟನು. ಇದೇ ಸಂದರ್ಭದಲ್ಲಿ ತನ್ನ ಹೆಸರನ್ನು ಬದಲಿಸಿ ಈಗ ವಿಶ್ವವಿಖ್ಯಾತವಾದ ವ್ಹೊಲ್ಟಾಯರ್ ಎಂಬ ಅಭಿದಾನವನ್ನು ತನಗೆ ಇಟ್ಟುಕೊಂಡನು. ಇದು ಅವನ ಮೂಲದ ಹೆಸರಿನ ಅಕ್ಷರಗಳಿಂದಲೇ ಹೇಗೋ ಕೂಡಿಸಿ ವಿನೋದವಾಗಿ ಕಟ್ಟಿದ ಹೊಸ ಶಬ್ದವಾಗಿತ್ತೆಂದು ಅನ್ನುತ್ತಾರೆ. ಆದರೆ 'ಆರೌತ'ದಿಂದ 'ವ್ಹೊಲ್ಟಾಯರ್' ಶಬ್ದ ಉಂಟಾಗುವದೆಂದರೆ ಒಂದು ವಿನೋದವೇ ಉಂಟಾದಂತೆ !

'ಹೇನ್ರಿಯಾದ್' ಕಾವ್ಯದ ಪ್ರಕಟಣೆಗೆ ಸರಕಾರದಿಂದ ಅನುಮತಿ ದೊರೆಯಲಿಲ್ಲ. ಆ ಕಾವ್ಯದಲ್ಲಿ ಪ್ರೊಟೆಸ್ಟೆಂಟ ಮತಪ ಹಾಗು ಪರಮತ ಸಹಿಷ್ಣುತೆಯ ಪಕ್ಷವನ್ನು ಎತ್ತಿ ಹಿಡಿಯಲಾಗಿದೆಯೆಂದು ಸರಕಾರವು ಕಂಡು ಹಿಡಿಯಿತು. (ರಾಜಧರ್ಮವು ಕ್ಯಾಥೋಲಿಕ್ ಪಂಥದ್ದಾಗಿತ್ತು.) ಆದರೂ ವ್ಹೊಲ್ಟಾಯರ್ ಎದೆಗುಂದಲಿಲ್ಲ. ಅಪೂರ್ವ ಎದೆಗಾರಿಕೆಯನ್ನೇ ತೋರಿಸಿದನು. ರೊಯೆನ್ ಪಟ್ಟಣದಲ್ಲಿ ೧೭೨೩ ರಲ್ಲಿ ತನ್ನ ಸ್ವಂತ ಹೊಣೆಯಿಂದ ಆ ಕಾವ್ಯವನ್ನು ಅಚ್ಚು ಹಾಕಿಸಿ ಪ್ರಕಟಿಸಿದನು. ಅದೇ

ಕೆಲಸದಲ್ಲಿ ತೊಡಗಿದ್ದಾಗ ಅವನಿಗೆ ವೈಲಿಯಾಯಿತು–ಕೆಲವುಕಾಲ ಸಾವಿನ ಬಾಗಿಲಿಗೆ ಬಿದ್ದುಳಿದನು.

ಇದಕ್ಕೂ ಉಗ್ರ ಆಪತ್ತು ಅವನಿಗೆ ಮುಂದೆ ೨ ವರ್ಷಗಳಲ್ಲಿ ಒದಗಿತು. ಅವನನ್ನು ರೋಹಾನದ ಸರದಾರನು ಅಪಮಾನಗೊಳಿಸಿದನು. ಅದಕ್ಕೆ ಪ್ರತಿಯಾಗಿ ಅವನು ಕುಹಕಮಾತಿನ, ಕಟು ಟೀಕೆಯ, ಬಾಣಗಳನ್ನು ಅವನ ಮೇಲೆ ಎಸೆದನು. ಸರದಾರನಿಗೆ ಅವನ ಈ ಚಪಲೋಕ್ತಿಯ ಚಾಟಿಯು ಏಟು ಅಸಹ್ಯವಾಯಿತು. ಇದರ ಪ್ರತಿಕ್ರಿಯೆ ಶೀಘ್ರದಲ್ಲಿಯೇ ಒದಗಿತು. ಒಂದು ದಿನ ಸುಲ್ಲಿಯಲ್ಲಿ ಗೆಳೆಯ ಬಿಥ್ಯೂನನೊಡನೆ ವ್ಹೊಲ್ಟಾಯರ್‌ನು ಊಟಕ್ಕೆ ಕುಳಿತಿದ್ದನು ಹೊರಗೆ ಯಾರೋ ಅವನನ್ನು ಕರೆದರು. ಎದ್ದು ನೋಡಲು ಹೋದನು. ಹೊರಗೆ ಬಿದ್ದೊಡನೆ ನಾಲ್ಕು ಜಟ್ಟಿ ಜವಾನರು ಅವನನ್ನು ಒಮ್ಮೆಲೇ ಮುತ್ತಿ ಹಿಡಿದು, ಹೊಡೆದು ನುಗ್ಗು ಮಾಡಿದರು. ಅವರನ್ನು ರೋಹಾನದ ಸರದಾರನೇ ಈ ಅತ್ಯಾಚಾರಕ್ಕೆ ನೇಮಿಸಿದ್ದನು; ತಾನು ದೂರನಿಂತು ಆ ಕೃತ್ಯವನ್ನು ನೋಡಿ ಸಂತೋಷಪಟ್ಟನು. ಈ ಪ್ರಸಂಗದಲ್ಲಿ ಅವನ ಗೆಳೆಯರು ಕೂಡ ಬೆಂಬಲಕ್ಕೆ ಬರಲಿಲ್ಲ. ಕೊನೆಗೂ ಅಂದಿನ ಯುಗದ ವ್ಯಾಜ್ಯತೀರಿಸುವ ಒಂದು ರೀತಿಯಾದ ದ್ವಂದ್ವಯುದ್ಧಕ್ಕೆ ವ್ಹೊಲ್ಟಾಯರನು ರೋಹಾನದ ಸರದಾರನನ್ನು ಆಹ್ವಾನಿಸಿದನು. ಆದರೆ ದ್ವಂದ್ವಯುದ್ಧವು ಜರಗುವ ದಿನ ಮುಂಜಾನೆಯೇ ವ್ಹೊಲ್ಟಾಯರನನ್ನು ಸೆರೆ ಹಿಡಿಯಲಾಯಿತು; ಮತ್ತು ಪುನಃ ಬ್ಯಾಸ್ಟಿಲ ಕಾರಾಗೃಹದಲ್ಲಿ ಹಾಕಲಾಯಿತು. ಅಲ್ಲಿ ಈ ಬಾರಿ ೧೫ ದಿನವೇ ಅವನು ಉಳಿದನು. ಅನಂತರ ಅವನದೇ ವಿನಂತಿಯ ಮೇರೆಗೆ ಇಂಗ್ಲಂಡಕ್ಕೆ 'ರಫ್ತು' ಮಾಡಲ್ಪಟ್ಟನು. ಕೋಪಸಂತಾಪದ ಅತಿರೇಕದಲ್ಲಿ ಅವನು ಫ್ರಾನ್ಸದ ದಂಡೆಯನ್ನು ಬಿಟ್ಟನು. ಫ್ರಾನ್ಸವು ಅವನ ಮೇಲೆ ಅಪಮಾನ ಅನ್ಯಾಯಗಳನ್ನು ರಾಶಿರಾಶಿಯಾಗಿ ಹೇರಿತ್ತು. ಇಲ್ಲಿ ಸಿಗದ ಸಹಾನುಭೂತಿ ಇಂಗ್ಲಂಡವಲ್ಲಿ ದೊರೆಯಬಹುದೆಂದು ಆತನು ನಂಬಿದನು.

ಇಂಗ್ಲಂಡವಲ್ಲಿ ಲಾರ್ಡ ಬೊಲಿಂಗಬ್ರೂಕನ ಪರಿಚಯ ಪತ್ರದೊಡನೆ ಹೋಗಿ, ಆ ಕಾಲದ ಮಹತ್ತಮ ಮೇಧಾವಿಗಳನ್ನು ಅವನು ಭೆಟ್ಟಿಯಾದನು. ಇಂಗ್ಲಂಡಿನ ಅಂದಿನ ವ್ಯಂಗ್ಯ ವಿಡಂಬನಕಾರನಾದ, ಸ್ವಿಫ್ಟನನ್ನು ಅವನು ಕಂಡು ಮಾತನಾಡಿಸಿದನು. ಅವನನ್ನು 'ಇಂಗ್ಲಿಷ ರೆಬೆಲೀಸ್' ಎಂದು ಕರೆದನು. ಹಾಗೆಯೇ ಪೋಪ, ಯಂಗ, ಗ್ರೆ, ಕೊಂಗ್ರೀವ ಹಾಗೂ ಮಾರ್ಲಬರೋದ ಡಚೆಸ್, ಚೆಸ್ಟರಫೀಲ್ಡ ಮುಂತಾದ ಅನೇಕ ಶ್ರೇಷ್ಠ ವ್ಯಕ್ತಿಗಳನ್ನು ಅವನು ಭೆಟ್ಟಿಯಾದನು. ಇಂಗ್ಲಿಷ ಸಮಾಜದ ಇಂಗ್ಲಂಡದಲ್ಲಿ ಕಂಡು–ಬರುವ ವ್ಯಕ್ತಿಸ್ವಾತಂತ್ರ್ಯ, ವಿಚಾರ

ಸ್ವಾತಂತ್ರ್ಯಗಳ ವಿಷಯದ ಸಹಿಷ್ಣುತೆ ಇವುಗಳಿಂದ ವ್ಹೊಲ್ಟಾಯರನ ಮೇಲೆ ಒಳ್ಳೇಪ್ರಭಾವ ಬಿದ್ದಿತು. ಬೊಲಿಂಗಬ್ರೂಕ ಮತ್ತು ಇತರ ಬುದ್ಧಿವಾದಿ ಆಸ್ತಿಕರು-ದೇವರೆಂಬ ವ್ಯಕ್ತಿತ್ವವನ್ನು ಅಲ್ಲಗಳೆದರೂ, ಆದಿತತ್ವವನ್ನು ಒಪ್ಪಿಕೊಳ್ಳುವ ಪಂಥದವರು. ಅವನಿಗೆ ಹೊಸ ತಾತ್ವಿಕ ವಿಚಾರಗಳನ್ನು ನೀಡಿದರು. ತನ್ನ ಹೇನ್ರಿಯಾದ್ ಕಾವ್ಯದ ಹೊಸ ಆವೃತ್ತಿಯನ್ನು ಇಂಗ್ಲಂಡದಲ್ಲಿ ಪ್ರಕಟಿಸಿ ಕೆಲವು ಸಾವಿರ ಪೌಂಡು ಧನವನ್ನು ಗಳಿಸಿದನು. ಆ ಆವೃತ್ತಿಯನ್ನು ಇಂಗ್ಲಂಡದ ಅಂದಿನ ರಾಣಿ ಕ್ಯಾರೊಲಿನಳಿಗೆ ಸಮರ್ಪಿಸಿದನು. ೧೭೨೯ ರಲ್ಲಿ ಫ್ರಾನ್ಸಕ್ಕೆ ಮರಳಿದನು. ಮರಳುವಾಗ ಅವನು '೧೨ನೆಯ ಚಾರ್ಲಸನ ಇತಿಹಾಸ' 'ಇಂಗ್ಲಿಷ ಜನದ ಕುರಿತು ಪತ್ರಗಳು' ಇವೆರಡು ಪುಸ್ತಕಗಳ ಸಿದ್ಧತೆಯನ್ನು ಮುಗಿಸಿದ್ದನು.

ಫ್ರಾನ್ಸಕ್ಕೆ ಹಿಂತಿರುಗಿದನೇನೋ ನಿಜ; ಆದರೆ ಪ್ಯಾರೀಸದಲ್ಲಿ ಅವನ ವಾಸ್ತವ್ಯ ಸ್ವಲ್ಪವೇ ಆಯಿತು. ಧರ್ಮ ಸಂಸ್ಥೆಯ ರೋಷಕ್ಕೆ ತುತ್ತಾಗುವಂತೆ ಅವನು ನಡೆಯುವಂತಾಯಿತು. ಆಗಿನ ಫ್ರೆಂಚ ನಟಿಯರಲ್ಲಿ ಹೆಸರಾದ ಎಡ್ರೀಸಿ ಎಂಬಾಕೆ ಸತ್ತಳು; ಆಗ ಅವಳ ಶವಸಂಸ್ಕಾರವು ಧಾರ್ಮಿಕ ವಿಧಿ ಇಲ್ಲದೆ ಮಾಡಲ್ಪಟ್ಟಿತು. ಇದಕ್ಕಾಗಿ ಮಾನವತಾವಾದಿಯಾದ ವ್ಹೊಲ್ಟಾಯರ್‌ನು ಸಾತ್ವಿಕಸಂತಾಪದಿಂದ ಕೆರಳಿ, ಒಂದು ಕಟುವಾದ ಟೀಕಾತ್ಮಕ ಕವನದಲ್ಲಿ ಬೆಂಕಿಯನ್ನೇ ಕಾರಿದನು. ಕ್ಯಾಥೋಲಿಕ್ ಧರ್ಮ ಸಂಸ್ಥೆಯು, ಅವನ ಈ ಕೃತ್ಯವು ಭ್ರಷ್ಟಾಚಾರವೆಂದು ಎಣಿಸಿತು. ವೊಲ್ಟಾಯರ್‌ನು ರೊಯೆನ್ನಿಗೆ ಪಲಾಯನ ಮಾಡಿದನು. ಅಲ್ಲಿಂದ 'ತಾತ್ವಿಕ ಪತ್ರಗಳು' ಎಂಬ ಬರಹಗಳನ್ನು ಪ್ರಕಟಿಸಿದನು. ಅವುಗಳಲ್ಲಿ ಅವನು ಇಂಗ್ಲಂಡಿನಲ್ಲಿ ಪಡೆದ ಅನುಭವದ ಪಾಕವಿತ್ತು; ಅವುಗಳಲ್ಲಿ ಬಹುತರ ಎಲ್ಲ ಧಾರ್ಮಿಕ ಸಂಪ್ರದಾಯಗಳನ್ನೂ ಫ್ರಾನ್ಸಿನಲ್ಲಿ ಪ್ರೀತಿಯಿಂದ ಜತನಮಾಡಿ ಬೆಳೆಸಿದ ಅನೇಕ ಸಂಸ್ಥೆಗಳನ್ನೂ ಅವನು ಪ್ರಖರವಾಗಿ ಟೀಕಿಸಿದ್ದನು. ಇದಲ್ಲದೆ ಜನಸಾಮಾನ್ಯರಿಗಾಗಿ ಸಾಧಾರಣ ತಿಳುವಳಿಕೆಗೆ ನಿಲುಕಬಹುದಾದ ಶೈಲಿಯಲ್ಲಿ, ಇತ್ತೀಚೆಗೆ ಬರೆಯಲಾಗುವ ಸುಗಮ ತತ್ವ ವಿವೇಚನೆಯ ಮೊತ್ತದ ಪ್ರಯತ್ನವೂ ಆ ಪತ್ರಗಳಲ್ಲಿ ಇತ್ತು. ತತ್ವಜ್ಞಾನವನ್ನು ಲೋಕಪ್ರಿಯ ಮಾಡುವ ನಿಟ್ಟಿನಲ್ಲಿಯ ಮೊದಲನೆಯ ಹೆಜ್ಜೆಗಳನ್ನು ವ್ಹೊಲ್ಟಾಯರ್‌ನು ಆ ಪತ್ರಗಳಲ್ಲಿ ಹಾಕಿದನು.

ಈ 'ತಾತ್ವಿಕ ಪತ್ರಗಳು' ಎಂಬ ಪುಸ್ತಕವು ಧರ್ಮದೇವತೆಯ ಮಸ್ತಕವನ್ನೇ ಕೆಡಿಸಿತು. ೧೭೭೪ ರಲ್ಲಿ ಸರಕಾರೀ ಗಲ್ಲಿನಾಳು (ಮರಣಶಿಕ್ಷೆ ಕೊಡುವ ಅಧಿಕಾರಿಯು) ಆ ಪುಸ್ತಕವನ್ನು ಸಾರ್ವಜನಿಕವಾಗಿ ಸುಟ್ಟು ಹಾಕಿದನು. ಪುಸ್ತಕದ ಮಾರಾಟಗಾರನು

ಬ್ಯಾಸ್ಟಿಲ ಸೆರೆಮನೆಯನ್ನು ಸೇರಬೇಕಾಯಿತು. ವ್ಹೊಲ್ಟಾಯರ್‌ನ ಸ್ಥಾನ ಎಂದಿಗಿಂತಲೂ ಬಿಕ್ಕಟ್ಟಿನದಾಯಿತು. ವಿಶೇಷವಾಗಿ, ಅವನು ಹೊಸತಾಗಿ ಬರೆಯಲು ತೊಡಗಿರುವ ಪ್ರಹಸನದ ಭಯಾನಕ ಸುದ್ದಿಯು, ಅವನ ಕ್ಷೇಮಕ್ಕೆ ಸಂಕಟ ತಂದಿತು. ಫ್ರಾನ್ಸದ ಒಂದು ರಾಷ್ಟ್ರೀಯ ಪೂಜಾಸ್ಥಾನವಾದ, ಸಾಧ್ವಿಜೋನಳ ಚರಿತ್ರೆಯನ್ನೂ ವೊಲ್ಟಾಯರ್‌ನು ವ್ಯಂಗ್ಯಹಾಸ್ಯಕ್ಕೆ ಗುರಿಮಾಡಲಿದ್ದಾನೆಂದು ಸುದ್ದಿ ಹಬ್ಬಿತ್ತು. ಈ ಸಂಕಟದಿಂದ ಅವನನ್ನು ಪಾರುಮಾಡಿದವಳು ಚ್ಯಾತಲೇದ ಒಡತಿ. ಅವಳು ಮಾದಾಮ ದಿ ಚ್ಯಾತಲೇ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಆಕೆಯು ಕ್ರೀಸ್ತಿಯಲ್ಲಿಯ ತನ್ನ ಗಂಡನ ಕೋಟೆಯಲ್ಲಿ ವ್ಹೊಲ್ಟಾಯರ್‌ನಿಗೆ ಆಶ್ರಯವಿತ್ತಳು. ಕ್ರೀಸ್ತಿ ಲೊರೇನ್ ಪ್ರಾಂತದಲ್ಲಿಯ ಪಟ್ಟಣ. ಆ ಪ್ರಾಂತ, ಆಗ ಸ್ವತಂತ್ರ ಸಂಸ್ಥಾನದಂತಿತ್ತು. ಅಲ್ಲಿ ಆಕೆಯ ಆಶ್ರಯದಲ್ಲಿ ವ್ಹೊಲ್ಟಾಯರ್‌ನ ಜೀವನದ ಪ್ರಚಂಡ ಮೋಹವಶತೆಯು ಆರಂಭವಾಯಿತು. ಚ್ಯಾತಲೇ ಜಹಗೀರಿನ ಒಡತಿ, ಅವನ ಹೃದಯದ ಒಡತಿಯೂ ಆದಳು. ಅವರೀರ್ವರ ಪ್ರಣಯ ೧೫ ವರ್ಷ, ಅವಳ ಮರಣದ ತನಕ ನಿರಾತಂಕವಾಗಿ ನಡೆಯಿತು.

ಆಗ ಅವನ ವಯಸ್ಸು ೩೯; ಆಕೆ ಅವನಿಗಿಂತಲೂ ೧೧ ವರ್ಷ ಕಿರಿಯಳು; ವಿವಾಹಿತಳು. ಆದರೆ ನಿಪುತ್ರಿಕಳು. ಆಕೆಯ ಪತಿಯು ಈ ಪ್ರೀತಿಯ 'ವ್ಯಸ್ತ ತ್ರೈರಾಶಿಕ'ದ ಕುರಿತು ಗಮನ ಕೊಟ್ಟಂತೆ ಕಾಣಲಿಲ್ಲ. ಆಕೆಯು ವ್ಹೊಲ್ಟಾಯರನ ಬಳಿಯಲ್ಲಿ ಪಾಠ ಕಲಿಯಹತ್ತಿದಳು. ಅದೂ ಎಂಥ ಪಾಠ? ಅವನು ಕವಿ, ನಾಟಕಕಾರ, ಹೆಚ್ಚೆಂದರೆ ತತ್ವವಿಚಾರಿ, ಆದರೆ ಆಕೆಗೆ ಅವನು ಸರ್ವಜ್ಞನೇ ಅನಿಸಿರಬೇಕು. ಏಕೆಂದರೆ ಆಕೆಗೆ ಅವನು ಸರ್ವಜ್ಞನೂ ಮರ್ಮಜ್ಞನೂ ಆಗಿದ್ದನು. 'ಪ್ರಿಯಶಿಷ್ಯೆ'ಯು 'ಮಿಥಃಸಖಿ' ಯಾಗಿದ್ದಳು. ಆದರೆ ಅಜನ ಇಂದುಮತಿಯಂತೆ 'ಲಲಿತ ಕಲಾವಿಧಿ'ಗಳಲ್ಲಿ ಅಲ್ಲ. ಇಂದುಮತಿ ಸಖಿ ಇದ್ದು ಶಿಷ್ಯ ಆಗಿದ್ದಳಂತೆ-ಕಾಲಿದಾಸನ ಮಾತು ನಿಜವಾಗಿದ್ದರೆ,-ಆದರೆ ಈ ವ್ಹೊಲ್ಟಾಯರನ ಯಜಮಾನಿನಿ ಶಿಷ್ಯೆಯೆಂದು ಇದ್ದು ಸಖಿಯಾದಳು. ಖಗೋಲ ಶಾಸ್ತ್ರ ರಸಾಯನ ಶಾಸ್ತ್ರ ಮತ್ತೂ ತತ್ವಶಾಸ್ತ್ರಗಳನ್ನು ಆಕೆ ನಿರಂತರವಾಗಿ ಕಲಿಯ ತೊಡಗಿದಳು? ಆ ಆಕರ್ಷಕನೂ ಅಷ್ಟೇ ಅಪಾಯಕರನೂ ಆದ ಲೇಖಕನ ಹತ್ತಿರ! ಇನ್ನು ಆಕೆಯಲ್ಲಿಯಾದರೂ ಯಾವ ಆಕರ್ಷಣೆ? ಆಕೆ ಕುರೂಪಿ-ದಿಂಡು ಕೆರೆಯಲಿಕ್ಕೆ ಉಪಯೋಗಿಸುವ ಮುಳ್ಳುಮುಳ್ಳಾದ ಮಣಿಯಂತೆ ಆಕೆಯ ಮೈದೊಗಲೆಂದು ಗೆಳತಿಯರೇ ಚೇಷ್ಟೆಮಾಡುತಿದ್ದರು. ಆದರೆ ಚಲುವೆ ಅಲ್ಲದಿದ್ದರೂ ಆಕೆ ಚತುರೆ, ಬುದ್ಧಿಮತಿ ಹಾಗೂ ಸಹಾನುಭೂತಿಯುಳ್ಳ ಸಹೃದಯೆ. ಆದ್ದರಿಂದ ಇಬ್ಬರೂ ಸುಖವಾಗಿ ಬಾಳಿದರು. ಜಗಳಾಡುತ್ತ, ಒಬ್ಬರನ್ನೊಬ್ಬರು ಬಯ್ದಾಡುತ್ತ (ಅವರೂ

ಫ್ರೆಂಚ ಭಾಷೆಯಲ್ಲಿ ಅಲ್ಲ; ಇಂಗ್ಲಿಷಿನಲ್ಲಿ–(ಮನಪಾರೆ ಬಯ್ಯಲು ಇಂಗ್ಲಿಷ ಭಾಷೆಯೇ ಹೆಚ್ಚು ಅನುಕೂಲವಂತೆ) ಕೆಲಕಾಲ ಮಾತು ಬಿಟ್ಟು ಒಬ್ಬರಿಗೊಬ್ಬರು ಕಣ್ಣು ಬಿಡುತ್ತ, ಮತ್ತೆ ಕೂಡಿ ದೀರ್ಘವಾಗಿ ಅಭ್ಯಾಸದಲ್ಲಿ ಇಬ್ಬರೂ ದುಡಿಯುತ್ತ ಚಿಕ್ಕ ನಾಟಕ ದೃಶ್ಯಗಳನ್ನು ರಚಿಸುತ್ತ, ಆಕೆಯು ಮನೆಯಲ್ಲಿಯೇ ಕಟ್ಟಿದ ಪುಟ್ಟ ನಾಟ್ಯಮಂದಿರದಲ್ಲಿ ಅತಿಥಿಗಳಿಗೆ ಆಡಿಸಿ ತೋರಿಸುತ್ತ, ಚಕ್ಕಂದವಾಗಿ ಒಬ್ಬರ ನೊಬ್ಬರು ಪ್ರೀತಿಸುತ್ತ, ಮತ್ತೆ ಸೆಣಸಾಡುತ್ತ, ಅವರೀರ್ವರೂ ಕೂಡಿ ಸುಖವಾಗಿ ಬಾಳಿದರು.

೧೭೩೬ ರ ಅಗಸ್ಟ ತಿಂಗಳಲ್ಲಿ ಒಂದು ದಿನ ವ್ಹೊಲ್ಟಾಯರ್‌ನಿಗೆ ಪ್ರುಸಿಯಾದ ರಾಜಪುತ್ರನಿಂದ ಒಂದು ಪ್ರಶಂಸಾಪರವಾದ ಪತ್ರವು ಬಂದಿತು. ಅದಕ್ಕೆ ಅವನು ಆತುರದಿಂದಲೂ ವಿನಯದಿಂದಲೂ ಉತ್ತರವನ್ನು ಬರೆದನು. ೪ ವರ್ಷಗಳ ನಂತರ ರಾಜಪುತ್ರನು ರಾಜನಾದನು. ಅವನೇ ಪ್ರುಸಿಯಾದ ಘನವಂತನಾದ ಫ್ರೆಡ್ರಿಕನು. ರಾಜನಾದ ಮೇಲೆ ವ್ಹೊಲ್ಟಾಯರ್‌ನು ತನ್ನ ಆಸ್ಥಾನವನ್ನು ಅಲಂಕರಿಸಬೇಕೆಂದು ಅವನು ಆಮಂತ್ರಣ ಕಳುಹಿಸಿದನು. ಆದರೆ ವ್ಹೊಲ್ಟಾಯರ್‌ನು ಫ್ರಾನ್ಸದಲ್ಲಿಯೇ ಉಳಿದನು. ಏಕೆ ? ಅವನ ಪ್ರೇಯಸಿ ಚ್ಯಾತಲೇದ ಒಡತಿ ಪ್ರುಸಿಯಾಕ್ಕೆ ಹೋಗಲು ಒಪ್ಪಲಿಲ್ಲ.

ಕೊನೆಗೂ ದೈವವು ಅವನ ಮೇಲೆ ಅಪ್ರಸನ್ನವಾಗುತ್ತಿರುವಂತೆ ತೋರಿತು. ಫ್ರಾನ್ಸದ ಅರಸು, ೧೫ ನೆಯ ಲುಯಿಗೆ, ಅವನ ಕುರಿತು ಅನಾದರವೇ ಇತ್ತು. ಆದರೆ ಲುಯಿಯ ಮೇಲೆ ಮಾದಪ್ ದಿ ಪೊಂಪಾದೋ ಎಂಬುವಳ ವರ್ಚಸ್ವವು ವಿಶೇಷವಿತ್ತು. ಫ್ರಾನ್ಸದ ಆಸ್ಥಾನ ಆಕೆಯ ಹುಬ್ಬಿನೊಂದಿಗೆ ಹಾರುತ್ತಿತ್ತು. ಆಕೆಯು ವ್ಹೊಲ್ಟಾಯರ್‌ನನ್ನು ಅನುಗ್ರಹದಿಂದ ನೋಡಿದಳು. ಅವಳ ಚರಿತ್ರವು ಅವನ ಭಾಗ್ಯವನ್ನು ತೆರೆಯಿತು. ಅವನನ್ನು ಆಸ್ಥಾನದ ನಾಟ್ಯಾಚಾರ್ಯನೆಂದು ನೇಮಿಸಲಾಯಿತು. ಇದು ೧೭೪೫ ರಲ್ಲಿ. ಮರು ವರ್ಷವೇ ಫ್ರಾನ್ಸದ ಸಾಹಿತ್ಯ ಪರಿಷತ್ತಿಗೆ ಅವನನ್ನು ಸದಸ್ಯನಾಗಿ ಆರಿಸಲಾಯಿತು. ಅದೊಂದು ಅಪೂರ್ವ ಗೌರವ. ಆಗ ಲೊರೇನ್‌ದ ಸಂಸ್ಥಾನಿಕನು ವ್ಹೊಲ್ಟಾಯರ್‌ನನ್ನೂ ಮಾದಮ ದಿ ಚ್ಯಾತಲೇಯನ್ನೂ ತನ್ನ ಆಸ್ಥಾನಕ್ಕೆ ಕರೆದುಕೊಂಡನು. ಈ ಸಲ ಇಬ್ಬರೂ ರಾಜನ ಆಮಂತ್ರಣವನ್ನು ಸ್ವೀಕರಿಸಿ ಹೋದರು. (ಫ್ರೆಡ್ರಿಕನು ವ್ಹೊಲ್ಟಾಯರ್‌ನನ್ನು ಮಾತ್ರ ಆಮಂತ್ರಿಸಿದ್ದನು. ಅವನ ಬೆನ್ನಿಗೆ ಮಾದಮಳು ಹೋಗಲು ಒಪ್ಪಿದ್ದಿಲ್ಲ !) ಉಭಯತರೂ ಹೋಗಿ ಅರಮನೆಯಲ್ಲಿ 'ವಿವಿಧ ವಿನೋದಾವಳಿ' ಗಳನ್ನೂ ಇತರ ದೃಶ್ಯಗಳನ್ನೂ ಆಡಿಸಿ ಅರಸನನ್ನು ಸಂತೋಷಪಡಿಸಿದರು.

ಅಲ್ಲಿ-ಲೊರೇನ್‌ದ ಆಸ್ಥಾನದಲ್ಲಿ-ಮಾದಮ ದಿ ಚ್ಯಾತಲೇ ನಟಿಯಾಗಿ, ಗಾಯಕಿಯಾಗಿ, ಎಲ್ಲ ಬಗೆಯ ವಿಟ, ನಟ, ವಿಲಾಸಿ ರಸಿಕರೊಡನೆ ಕೂಡಿಕಲೆತು ಬೆರಗು-ಬೆಡಗುಗಳ ಉಲ್ಲಾಸ-ಜೀವನವನ್ನೇ ಪ್ರವೇಶಿಸಿದಳು. ಈ ಉಲ್ಲಾಸದಿಂದ ಒಂದು ಉತ್ಪಾತವು ಎದ್ದು ನಿಂತಿತು ! ಆಕೆಯ ಪ್ರಶಂಸಕ ಪ್ರಭಾವಳಿಯಲ್ಲಿ, ಮೊಶಿಯರ್ ದಿ ಸೇಂಟ ಲ್ಯಾಂಬಾರ್ತನೆಂಬ ಒಬ್ಬ ಉತ್ಸಾಹಿ ತರುಣನಿದ್ದನು. ಮಿಕ್ಕವರಿಗಿಂತ ಆತನ ದೃಷ್ಟಿ, ಮಾದಮಳ ಮೇಲೆ ಹೆಚ್ಚು ಹೆಚ್ಚು ಬೀಳತೊಡಗಿತು. ವ್ಹೊಲ್ಟಾಯರ್‌ನು ಹೇಳಿಕೇಳಿ ಪ್ರೌಢವಯಸ್ಕನು. ಆಕೆ ಅವನಿಗಿಂತ ೧೧ ವರ್ಷಕ್ಕೆ ಕಿರಿಯಳು, ಎಳೆಯಳು. ಸೇಂಟ ಲ್ಯಾಂಬಾರ್ತನು 'ಸೇಂಟ' (ಸಾಧು)ನಿದ್ದಿಲ್ಲ. ಅವನದೇ ಒಂದು ಮೋಹಕ ಮೋಡಿ ಇತ್ತು. ಮುಂದೇನು ?

ವ್ಹೊಲ್ಟಾಯರನು ಪ್ರೌಢನಾದರೇನು, ಮೂಢನಿದ್ದನೆ ? ಪರಮ ಪ್ರತಿಭಾಶಾಲಿಯಾದವನಿಗೆ ತನ್ನ ಪ್ರೇಯಸಿಯ ಇಂಗಿತವು ಹೃದಯೇಶ್ವರಿಯ ಹೃದಯವು-ಗೊತ್ತಾಗದೆ ಹೋಗುವದೆ ? ಅವನು ಎಲ್ಲವನ್ನು ಕಂಡು ಹಿಡಿದನು. ಮಾದಮಳೇ ತನ್ನ ಹೊಸ ಪ್ರಣಯದ ಕೆಲವು ತೊಡಕುಗಳನ್ನು ಆತನಲ್ಲಿ ತೋಡಿಕೊಂಡಿರಬಹುದು. ಲ್ಯಾಂಬಾರ್ತನೊಂದಿಗೆ ಕೂಡಿದ, ಈ ತ್ರೈರಾಶಿಕವು ಮಾದಮಳ ಗಂಡನೊಡನೆ ಇದ್ದಂತೆ ಸಮವಾಗಲಿಲ್ಲ; ವ್ಯಸ್ತವಾಗಿಯೇ ಘಟಿಸಿತು. ಮೂವರೂ ಜಗಳಾಡಿದರು. ಚ್ಯಾತಲೇದ ಒಡೆಯನಿದ್ದೆಡೆಗೆ ಅವಸರದ ಮರುಪಯಣವಾಯಿತು. ಮುಂದೆ ವ್ಹೊಲ್ಟಾಯರನಿಗೆ ಚಿಂತಾತುರ ಪ್ರತೀಕ್ಷೆಯ ಕಾಲ ಒದಗಿಬಂದಿತು. ಮಾದಮಳಿಗೆ ಆಗ ಪ್ರಾಯ ೪೪ ಇರಬಹುದು. ಆಕಸ್ಮಿಕವಾಗಿ ಆಕೆಯ ಪ್ರಣಯ ಜೀವನಾಕಾಶವನ್ನು ಕವಿದ ಈ ಪ್ರಳಯದ ಬಿರುಗಾಳಿಯಿಂದ ಅವಳು ತೀರ ಗಾಬರಿಯಾಗಿ ಬಿದ್ದಳು. ಗಾಬರಿಗೆ ಕಾರಣ ಈ ಬಿರುಗಾಳಿಯ ಗರ್ಭದಲ್ಲಿ ಹೊಸ ಬಾಳಿನ ಹುಟ್ಟು ಅಡಗಿತ್ತು. ಆಕೆ ತೋಡಿಕೊಂಡ ತೊಡಕು ಕರುಳಿನ ತೊಡಕಾಗಿತ್ತು ! ಲ್ಯಾಂಬಾರ್ತನೊಡನೆ ಆಕೆಯ ಪ್ರಣಯ 'ಸಫಲ'ವಾಗಿತ್ತು. ವ್ಹೊಲ್ಟಾಯರ್‌ನ ಚಿಂತೆಯಲ್ಲಿ ಮಾದಮಳ ಆತುರವೂ ಕೂಡಿತ್ತು. ಬಡ ಮಾರ್ಕ್ವಿಸ್‌ನು (ಮಾದಮಳ ಯಾವ ಯೋಚನೆಯೂ ಇಲ್ಲದ ಯಜಮಾನ) ತನ್ನ ಗೆಳೆಯರನ್ನೆಲ್ಲ ಕರೆ ಕರೆದು ಕಂಡು ತನ್ನ ಕುಲವನ್ನು ಬೆಳಗಿಸಲಿದ್ದ ಶುಭವರ್ತಮಾನವನ್ನು ಅರುಹ ತೊಡಗಿದನು. ಅತ್ತ ವ್ಹೊಲ್ಟಾಯರ್‌ನು ಸಂತಾಪದಿಂದ ಉರಿಉರಿಯಾದನು, ಅವಡುಗಚ್ಚಿಕೊಂಡನು. ಆದರೆ ಜಗಿದ ಬಾಣ, ಚಿಗಿತ ಬೀಜ ತಡೆಯುವದೆ ? ೬ ದಿನಗಳ ನಂತರ ಮಾದಮ ದಿ ಚ್ಯಾತಲೆಯು ಹೆಣ್ಣು ಕೂಸನ್ನು ಹೆತ್ತಳು-ಕೂಸು ಹೆಣ್ಣೋ ಗಂಡೋ ಎಂಬುದನ್ನು ನೋಡಲು ಆಕೆ ಬದುಕಲಿಲ್ಲ. ವ್ಹೊಲ್ಟಾಯರ್‌ನ ಜ್ವಾಲಾಮುಖಿಯು ಸ್ಫೋಟವಾಯಿತು. ಲ್ಯಾಂಬಾರ್ತನನ್ನು

ಮನವಾರೆ ಶಪಿಸಿದನು. 'ನನ್ನವಳನ್ನು ನೀನೇ ಕೊಂದೆ !' ಎಂದು ಆಕ್ರೋಶ ಮಾಡಿದನು ಮತ್ತು ಹಾಗೆಯೇ ಪ್ಯಾರೀಸಿಗೆ ಹಿಂತಿರುಗಿದನು. ಅಲ್ಲಿ ತನ್ನ ದುಃಖದ ದಕ್ಕಿಸಲಾರದ ಎದೆಯುಕ್ಕನ್ನು ನಾಟಕಗಳಲ್ಲಿಯೂ ಕಾದಂಬರಿಗಳಲ್ಲಿಯೂ ಹರಿಸಿದನು. ಪ್ರುಸಿಯಾದ ಚಕ್ರವರ್ತಿ ಫ್ರೆಡ್ರಿಕ್‌ನ ಆ ಸ್ಥಾನದಲ್ಲಿ ಸಡಗರದ ಸ್ವಾಗತವನ್ನು ಪಡೆದಾಗಲೇ ಅವನಿಗೆ ಆ ದುಃಖದ ಮರವು ಬಂದಿರಬೇಕು. ಈ ಫ್ರೆಡ್ರಿಕ್‌ನು ಸಾಹಿತಿಗಳ ಅನುನಯ ಅನುಕರಣ ಮಾಡುವದರಲ್ಲಿ ಧನ್ಯತೆಯನ್ನು ಕಾಣುತ್ತಿದ್ದನು; ಕೇವಲ ಚಕ್ರವರ್ತಿಯಾಗಿ ಮೆರೆಯುವದಕ್ಕಿಂತ ವ್ಹೊಲ್ಟಾಯರ್‌ನನ್ನು ಮೆಚ್ಚಿ ಆತನ ಮಿತ್ರನೆನಿಸಿಕೊಳ್ಳುವದು ಮಿಗಿಲೆಂದು ನಂಬುತ್ತಿದ್ದನು.

ಆದರೆ ಈ ರಾಜಮೈತ್ರಿ ಬಹುಕಾಲ ಸಂಘಟಿಸಲಿಲ್ಲ. ಮಹಾಪ್ರಭುಗಳ ಅನುಗ್ರಹವನ್ನು ಹೊತ್ತು ನೋಡಿ ಹೊಗಳುತ್ತ, ತನ್ನ ಬೇಳೆ ಬೇಯಿಸಿ ಕೊಳ್ಳುವ ಬಾಲಬಡಕ ವೃತ್ತಿ, ಮನಸ್ವಿಯೂ ತೇಜಸ್ವಿಯೂ ಆದ ಈ ಸಾಹಿತಿಗೆ ಒಗ್ಗುವ ವಿದ್ಯೆ ಇದ್ದಿಲ್ಲ. ಚಕ್ರವರ್ತಿಯು ವ್ಹೊಲ್ಟಾಯರ್‌ನೊಡನೆ ವಕ್ರವೃತ್ತಿಯನ್ನು ತಾಳಲು ತಡವಾಗಲಿಲ್ಲ. ವ್ಹೊಲ್ಟಾಯರ್ ಸ್ಪಷ್ಟವಾದಿ–ಪ್ರಿಯವಾದಿಯಂತೂ ಅಲ್ಲವೇ ಅಲ್ಲ. ಅವನದು ಮೊನೆಯಿಲ್ಲದ ಮಾತಲ್ಲ. ಕಟುಸತ್ಯವನ್ನು ಆದಷ್ಟು ಹಟದಿಂದಲೇ ಹೇಳುವ ಚಟವು ಅವನದು. 'ನೀನು ಚಕ್ರವರ್ತಿ ಇರಬಹುದು. ಆದರೆ ಜೋಕೆ, ನನ್ನ ಹತ್ತಿರ ಲೆಕ್ಕಣಿಕೆ ಇದೆ !'–ಎಂಬ ಧೀರ ದರ್ಪದ ಉದ್ಗಾರವು ಅವನದು. ಧರ್ಮಾಧಿಕಾರಿ ಮಠಾಧಿಪತಿಗಳ ವಿರುದ್ಧ ಅವನು ಕತ್ತಿ ಎತ್ತಿದ ಸಾಹಿತ್ಯ ಸವ್ಯಸಾಚಿ. 'ಪ್ರಪಂಚದ ಮೊದಲನೆಯ ಧೂರ್ತನು ಮೊದಲನೆಯ ಮೂರ್ಖನನ್ನು ಭೆಟ್ಟಿಯಾದಾಗಲೇ ಮೊದಲನೆಯ ಅರ್ಚಕನು ಅಥವಾ ಧರ್ಮಾಧಿಕಾರಿಯ ಅವತಾರವಾಯಿತು !' ಎಂದು ಅವನು ಭಟ್ಟರ ಹುಟ್ಟು ಗುಟ್ಟನ್ನು ಕೂಡಿಯೇ ಪ್ರಕಟಮಾಡಿದನು ! 'ಈ ಧರ್ಮಗುರುಗಳೆಂಬುವವರು, ನಾವು ನೀವು ತಿಳಿದಷ್ಟು ಸರಳ ಪ್ರಾಣಿಗಳಲ್ಲ. ನಮ್ಮ ನಿಮ್ಮ ಕುರುಡು ನಂಬಿಗೆಯೇ ಅವರ ಜ್ಞಾನ !' ಎಂದು ಧರ್ಮಶಾಸ್ತ್ರಜ್ಞರ ಪಾಂಡಿತ್ಯವನ್ನು ಅವನು ವ್ಯಾಖ್ಯಾನಿಸಿದನು. ಇಂಥ ಹರಿತ ನಾಲಿಗೆ ಮತ್ತು ಉರಿಯ ಲೆಕ್ಕಣಿಕೆಗಾಗಿ ತನ್ನ ಸಮಾಜದವರ ಕ್ಷೋಭೆಗೆ ಮುಳುವಾದ ಈ ಸತ್ಯ ಪರಾಕ್ರಮಿಯು ಒಬ್ಬ ಅರಸನ ಆಸ್ಥಾನದಲ್ಲಿಯ ಮನ್ನಣೆಯ ಮಣೆಗಾಗಿ ತನ್ನನ್ನು ಮಾರಿಕೊಳ್ಳುವನೇ ? ಫ್ರೆಡ್ರಿಕ್‌ನಿಗೂ ಈ ಸ್ವತಂತ್ರ ವೃತ್ತಿಯ ಸಾಹಿತಿಗೂ ಕಲಹ ಉಂಟಾಯಿತು. ಅತಿಥಿಯು ಆಮಂತ್ರಣದ 'ತಿಥಿ'ಯನ್ನೂ ಮೀರಿ ಉಳಕೊಂಡನೆಂದು ಅನಿಸಿತು ಆತ್ಮಚ್ಛಂದಾನುವರ್ತಿಯಾದ ಯಜಮಾನನಿಗೆ.

ಆದರೆ ವ್ಹೊಲ್ಟಾಯರ್‌ನು ಹೋಗುವದೆಲ್ಲಿಗೆ ? ಫ್ರಾನ್ಸಕ್ಕೆ ಮರಳುವಂತಿದ್ದಿಲ್ಲ.

ಇಂಗ್ಲಂಡದಲ್ಲಿಯೂ ಈ ಕಟು ಮನಸ್ಸಿನ ಪ್ರಜಾರಾಜ್ಯದ ನಾಗರಿಕನಿಗೆ ಆಶ್ರಯವು ಸಿಗುವಂತೆ ತೋರಲಿಲ್ಲ. ಆದ್ದರಿಂದ ಅವನು ತನ್ನ ದಣಿದ ಹೆಜ್ಜೆಗಳನ್ನು ಸ್ವಿಟ್ಝರ್ಲಂಡದತ್ತ ಹೊರಳಿಸಿದನು. ಅಲ್ಲಿಯೇ ಕೊನೆಗೆ ೬೦ ವರ್ಷದ ವಯಸ್ಸಿಗೆ ಜಿನೇವಾದ ಬಳಿಯಲ್ಲಿ ಫರ್ನೆ ಎಂಬ ಹಳ್ಳಿಯಲ್ಲಿ ಅವನು ವಾನಪ್ರಸ್ಥವನ್ನು ಸ್ವೀಕರಿಸಿದನು.

ವಾನಪ್ರಸ್ಥದಲ್ಲಿಯೂ ಅವನು ಸನ್ಯಸ್ತನಾಗಲಿಲ್ಲ! ಕಸಬುಗಾರನಾಗಿ ಉದ್ಯೋಗ ತಜ್ಞನಾಗಿ, ರೈತನಾಗಿ ಅಲ್ಲದೆ ಇತರ ಅನೇಕ ರೂಪಿಯಾಗಿ ಅವನು ದುಡಿಯುತ್ತಲೇ ಉಳಿದನು. ಲೆಕ್ಕಣಿಕೆಯನ್ನು ಬದಿಗಿರಿಸಿ, ಕತ್ತಿ, ಕುಡಗೋಲು, ಕೊಡ್ಲಿ–ಕುಠಾರಿಗಳನ್ನು ಕೈಗೊಂಡನು. ಅಗಿಯುವದು, ಉಳುವದು ಮತ್ತು ಬಿತ್ತುವದು, ಕುದುರೆಗಳ ಪೀಳಿಗೆಗಳಲ್ಲಿ ಪ್ರಯೋಗ ನಡೆಯಿಸುವದು, ತನ್ನ ಹೊಲದ ಕೆಲಸಗಾರರಿಗಾಗಿ ಮನೆಗಳನ್ನು ಕಟ್ಟಿಸುವದು.–ಇವೇ ದುಡಿಮೆಗಳಲ್ಲಿ ಅವನು ತೊಡಗಿದನು. ಇವಿಷ್ಟೂ ಸಾಲದೋ ಎಂಬಂತೆ, ರೇಶ್ಮೆಯ ಕಾಲುಚೀಲಗಳ ಕಾರಖಾನೆ ತೆರೆದನು. 'ಕಸೂತಿ ಕೆಲಸದ ಅಂಚುಪಟ್ಟಿ' ಗಳ (ಲೇಸು) ತಯಾರಿಕೆಯ ಕೇಂದ್ರವನ್ನು ಆರಂಭಿಸಿದನು. ಬಿಡುವಿನ ವೇಳೆಯ ಉದ್ದಿಮೆಯೆಂದು ಗಡಿಯಾರಗಳ ವ್ಯಾಪಾರವನ್ನೂ ನಡೆಯಿಸಿದನು. ಅವನ ಬುದ್ಧಿಯ ಬಹುಮುಖತೆಯನ್ನು ನೋಡಿ.

ಇದೆಲ್ಲ ನಡೆಯುತ್ತಿದ್ದಾಗ ಅವನ 'ಸ್ವಧರ್ಮ'ವಾದ ಲೇಖನ ವ್ಯವಸಾಯವು ಅನವರತವಾಗಿ ಸಾಗಿಯೇ ಇತ್ತು. ಅವನ ಲೆಕ್ಕಣಿಕೆಯು ಎಂದಿನಂತೆಯೇ ಜ್ವಾಲಾ ಮುಖಿಯಾಗಿಯೇ ಕಿಡಿಕಾರುತ್ತಿತ್ತು. ಆದರೆ ಆ ಕಟು–ಕುಟಿಲ ಪ್ರಖರವಾದ ಪ್ರತಿಭೆಯ ವಿಷಯವು ಬೇರೆಯಾಯಿತು. ಧರ್ಮಸಂಸ್ಥೆ, ದುಷ್ಟಕಾನೂನುಗಳ ವಿರುದ್ಧ ಸಾಮಾನ್ಯವಾಗಿ ಉದ್ರಿಕ್ತ ಉತ್ತೇಜಕ ಪ್ರಚಾರಪರ ಲೇಖನ ಶಕ್ತಿಯನ್ನು ವ್ಹಾಲ್ಟಾಯರ್‌ನು ತನ್ನ ಪ್ರತಿಭೆಯ ತೀಕ್ಷ್ಣ ಶಸ್ತ್ರವನ್ನಾಗಿಸಿ ಅನ್ಯಾಯದ ವಿರುದ್ಧ ನಿರ್ಬಲರ ಮತ್ತು ನಿರಪರಾಧಿಗಳ ರಕ್ಷಣೆಗಾಗಿ ಪ್ರಭಾವಿಯಾಗಿ ಪ್ರಯೋಗಿಸ ತೊಡಗಿದನು. ಜೀನ ಕ್ಯಾಲಾಸ್ ಎಂಬುವನನ್ನು ಮಗನನ್ನು ಕೊಲೆಮಾಡಿದ್ದಾನೆಂ ಸುಳ್ಳು ಆರೋಪಕ್ಕಾಗಿ ಚಿತ್ರಹಿಂಸೆಯ ಮರಣದಂಡನೆಗೆ ಗುರಿಮಾಡಿದ್ದರು. ವ್ಹಾಲ್ಟಾಯರ್‌ನ ಲೆಕ್ಕಣಿಕೆಯು ಅವನ ಪಕ್ಷವಹಿಸಿಕೊಂಡು ಅವನ ಸಮರ್ಥನೆ ಯನ್ನು ಮಾಡಿ ಅವನು ನಿರಪರಾಧಿಯೆಂಬುವನ್ನು ಪ್ರಕಟಮಾಡಿತು. ಶಿವ್ಹಾಲಿಯರ ಡ ಲಾ ಬಾರೆ ಎಂಬಾತನನ್ನು ಜೀವಂತ ಚಿತೆಯಲ್ಲಿ ಸುಡುವ ದೇಹಾಂತ ಶಿಕ್ಷೆಯಿಂದ ವ್ಹಾಲ್ಟಾಯರ್‌ನ ಸತ್ಯ ಪ್ರತಿಪಾದನೆಯೇ ಉಳಿಸಿತು. ತನ್ನ ಕಾಲದ ಅಪರಾಧ ದಂಡನೆಯ ಅಮಾನುಷ ಕಟ್ಟಳೆಗಳನ್ನು ಕಿತ್ತೊಗೆಯಬೇಕೆಂದು ಅವನು ತನ್ನ

ವಾಕ್ಸಾಮರ್ಥ್ಯದ ಮತ್ತು ವಾದಕೌಶಲ್ಯದ ಸಕಲ ಶಕ್ತಿಯಿಂದ ಹೋರಾಡಿದನು. ಮತ ಸ್ವಾತಂತ್ರ್ಯ-ವ್ಯಕ್ತಿಸ್ವಾತಂತ್ರ್ಯ-ವಿಚಾರ ಸ್ವಾತಂತ್ರ್ಯ ಈ ರತ್ನತ್ರಯುಗಳಿಗಾಗಿ ಅವನು ಯಾವ ಬೆಲೆಯನ್ನೂ ಭಾರಿಯೆಂದು ಭಾವಿಸಲಿಲ್ಲ.

'ನಿನ್ನ ಮತವನ್ನು ನನ್ನ ಮೇಲೆ ಹೇರಲು ಬಂದರೆ ನನ್ನ ಜೀವವನ್ನೇ ತೆತ್ತು ಅದನ್ನು ಪ್ರತಿಭಟಿಸುವೆನು. ಆದರೆ ನಿನ್ನ ಮತವನ್ನು ಸಾರುವ ನಿನ್ನ ಹಕ್ಕನ್ನು ರಕ್ಷಿಸಲಿಕ್ಕೆ ನನ್ನ ಜೀವವನ್ನಾದರೂ ತೆತ್ತೇನು !'-ಎಂಬ ಅವನ ಧಿರೋದ್ಗಾರದಲ್ಲಿ ಈ ಸ್ವಾತಂತ್ರ್ಯ ಭಕ್ತಿಯು ಉಜ್ಜ್ವಲವಾಗಿ ಪ್ರಕಟವಾಗಿದೆ. ತಾನು ಕಂಡುಕೊಂಡ ಸತ್ಯದಂತೆ ನಡೆಯಬೇಕು. ಪ್ರತಿಯೊಬ್ಬರಿಗೂ ಅವರು ಕಂಡ ಸತ್ಯದಂತೆ ನಡೆಯಲು ಬಿಡಬೇಕು. ಸತ್ಯವು ಬಲತ್ಕಾರದ ಸೊತ್ತಲ್ಲ. ಮತಸ್ವಾತಂತ್ರ್ಯವು ವಿಚಾರ ಸ್ವಾತಂತ್ರ್ಯದ ಪ್ರಮಾಣ-ವ್ಯಕ್ತಿಸ್ವಾತಂತ್ರ್ಯದ ಆಧಾರವು. ಪ್ರತಿಯೊಬ್ಬರಿಗೂ ಅದನ್ನು ಪ್ರತಿಯೊಬ್ಬರಲ್ಲಿ ರಕ್ಷಿಸಲಿಕ್ಕೆ ಸ್ವಯಂ ಸಿದ್ಧ ಅಧಿಕಾರವಿದೆ. ಈ ಅಧಿಕಾರ ವಾಣಿಯು ವ್ಹಾಲ್ಟೈಯರ್‌ನ, ಮೇಲಿನ ಉದ್ಗಾರದಲ್ಲಿ ವ್ಯಕ್ತವಾದಷ್ಟು ದಿವ್ಯವಾಗಿ ಇನ್ನೆಲ್ಲಿಯೂ ಪ್ರಸಿದ್ಧವಾಗಿಲ್ಲ.

ಫೆರ್ನೀಯಲ್ಲಿ ಅವನ ಮನೆಗೆ ಬರಹೋಗುವವರೆಷ್ಟು !-ಅಲ್ಲ, ಬರುವವರೆಷ್ಟು ! ಹೋಗಲು ಮರೆತು ಉಳಿದೇ ಬಿಡುವವರೆಷ್ಟು ! ಅಂಥ ಇಷ್ಟು (?) ಮಿತ್ರರನ್ನು ಕುರಿತು ಅವನು ಆಡಿದ ಮಾತೊಂದು ಜಗತ್ಪ್ರಸಿದ್ಧವಾಗಿದೆ ! 'ದೇವರೆ ! ನನ್ನ ಮಿತ್ರರಿಂದ ನನ್ನನ್ನು ಒಮ್ಮೆ ಕಾಪಾಡು ! ನನ್ನ ಶತ್ರುಗಳನ್ನು ನಾನೇ ನೋಡಿ ಕೊಳ್ಳುವೆನು !'-ಈ ಮಾತಿನ ಔಚಿತ್ಯವನ್ನು ಅರಿತುಕೊಂಡಷ್ಟೂ ಕಡಿಮೆ. ಶತ್ರುಗಳು ಹೇಳಿಕೇಳಿ ಹಗೆಗಳು, ಹೇಗೂ ನಮ್ಮ ಬಗ್ಗೆ ಕೆಟ್ಟ ಅಭಿಪ್ರಾಯ ಇಟ್ಟು ಕೊಳ್ಳುವವರೇ, ಕೇಡುಬಗೆಯುವವರೇ, ಅವರೊಂದಿಗೆ ಹೇಗೆ ನಡಕೊಂಡರೇನು ? ಆದ್ದರಿಂದ ಶತ್ರುಗಳೊಡನೆ ಹೋರಾಡುವದರಲ್ಲಿ ವ್ಹಾಲ್ಟೈಯರ್‌ನು ದೇವರ ಸಹಾಯ ಅಪೇಕ್ಷಿಸುವದಿಲ್ಲ, ಮಾನವ ಸಾಮರ್ಥ್ಯ ಸಾಕು ಅದಕ್ಕೆ. ಆದರೆ ಮಿತ್ರರ ಪ್ರಸಂಗವೇ ಬೇರೆ ! ಅವರಲ್ಲಿ-ಹೀಗೆ ನಡೆದರೆ ಕಡಿಮೆ; ಹಾಗೆ ನುಡಿದರೆ ಹೆಚ್ಚು ! ಗಂಟುಬಿದ್ದ ಗೆಳೆಯರನ್ನು ಗಂಟಲಿಗೆ ಗಾಳವಾಗದಂತೆ ಉಪಾಯಾಂತರದಿಂದ ಬಿಡಿಸಿಕೊಳ್ಳುವ ಚಾತುರ್ಯ ದೇವರ ಅನುಗ್ರಹದಿಂದಲೇ ಬರಬೇಕು. ಆದ್ದರಿಂದ ಋಣಾನುಬಂಧಕ್ಕೆ ಭಂಗ ಬಾರದೆ, ಋಣಪಾತಕಕ್ಕೆ ತಲೆಯೊಡ್ಡದೆ, ಋಜುವಾದ ರೀತಿಯಲ್ಲಿ ಮಿತ್ರರೊಡನೆ ವ್ಯವಹರಿಸುವದು ಕಷ್ಟ, ಎಂಬ ಕಟುವಾದ ಕಟ್ಟು ನಿಟ್ಟಿಗೆ ವ್ಹಾಲ್ಟೈಯರ್ ಬಂದು ಮುಟ್ಟಿದನೆಂದು ತೋರುತ್ತದೆ. ಮೇಲಿನ ಉದ್ಗಾರವು ಅಂಥ ಕಟು ಅನುಭವದ ಅರ್ಕವನ್ನೇ ತುಂಬಿಕೊಂಡಿದೆ. ಇತಿಮಿತಿ

ಇಲ್ಲದೇ ಮನೆಗೆ ಬರುವ ಅತಿಥಿ ಅಭ್ಯಾಗತರ ಕುರಿತು ಕೊನೆಗೂ ಅವನು ಒವೆ
ಕೆರಳಿದ್ದುಂಟು. ಒಬ್ಬ ಅತಿಥಿದೇವರೊಡನೆ ಅವನು ಈ ರೀತಿ ಮಾತನಾಡಿವನಂತೆ
'ಸ್ವಾಮಿ! ನೀವು 'ಡಾನ ಕ್ವಿಗ್ಝೋಟ'ನ ಕಥೆಯನ್ನು ಕೇಳಿರಲು ಸಾಕು
ನಿಮ್ಮನ್ನು ಕಂಡರೆ ಕ್ವಿಗ್ಝೋಟನ ನೆನಪಾಗುತ್ತದೆ, ನೋಡಿ. ಆದರೆ ನಿಮಗೂ
ಆ ಜಗತ್ಪ್ರಸಿದ್ಧ ಕಥಾನಾಯಕನಿಗೂ ಒಂದೇ ಮಹತ್ವದ ವ್ಯತ್ಯಾಸ! ಅವನು
ಪ್ರತಿಯೊಂದು 'ಹೊಟೆಲ್'ನ್ನೂ ಕೋಟೆಯೆಂದು ಭಾವಿಸುತ್ತಿದ್ದನು. ನೀ
ಪ್ರತಿಯೊಂದು ಕೋಟೆಯನ್ನೂ 'ಹೊಟೆಲ್' ಎಂದು ತಪ್ಪು ತಿಳಿಯುವಿರಿ
ಈ ಮಾತನ್ನೂ ಕೇಳಿ ಆ 'ದೇವರು' ಅಂತರ್ಧಾನರಾದರೋ ಇಲ್ಲವೋ ಗೊತ್ತಿಲ್ಲ
ಆದರೆ ಬಹುಶಃ ಆಗಿರಲಿಕ್ಕಿಲ್ಲ. ಅತಿಥಿಗೆ ದೇವರೆನ್ನುವದೇಕೆ? ದೇವರಂತೆ ಅವ
ಸರ್ವಾಂತರ್ಯಾಮಿ! ಎಲ್ಲರ ಮನೆಯಲ್ಲಿಯೂ ಹೊಕ್ಕು ಸದಾಕಾಲ ಉಳಿಯ
ಬಾತನು! ಇಂಥ ಜಾಣರಿಗೆ ಮಾತಿನ ಪೆಟ್ಟು ಸಾಲುವದೇ?

ಕೊನೆಯದಾಗಿ ಫರ್ನೀಯ ನಿವಾಸದಲ್ಲಿಯೇ ವ್ಹೊಲ್ಟಾಯರ್‌ನ ಅತಿ ಪ್ರಸಿದ್ಧ ಕಥ
ಕೃತಿಯೊಂದು ರೂಪುಗೊಂಡಿತು. ಅದರ ಹೆಸರು 'ಕ್ಯಾಂಡೈಡ' ಆ ಕೃತಿಯ
ಅವನ ಪ್ರತಿಭೆಯೇ ಪೂರ್ಣತೆಯ ಎರಕದಿಂದ ಆಕೃತಿಗೊಂಡಿದೆ. ಅದೊಂದ
ಕೃತಿಯ ಪರಿಪಕ್ವ ಮಾನವತೆ ಮತ್ತು ಕಾಲವು ಕೆಡಿಸಿದ ನಿತ್ಯನೂತನ ವ್ಯಂ
ವಿನೋದ ಇವೆರಡು ಗುಣಗಳು ಅವನ ಹೆಸರನ್ನು ವಿಶ್ವಸಾಹಿತ್ಯದ 'ಅಮರ
ಕೋಶದಲ್ಲಿ ಕೊರೆದಿಡುವಂತೆ ಮಾಡಿವೆ!

ವರ್ಷಗಳು ವರ್ಷಗಳನ್ನು ಬೆನ್ನಟ್ಟಿಕೊಂಡು ಹೋದವು. ಕಾಲವು ಗತಿಸಿದಂ
ವ್ಹೊಲ್ಟಾಯರ್‌ನಿಗೆ ಹಿಂದೆಂದೂ ದೊರೆಯದ ಗೌರವ ಮತ್ತು ಶಾಂತಿಯ
ಲಭಿಸಿದವು. ಅವನ ಬಾಳೆಲ್ಲ ಬಿರುಗಾಳಿಯಲ್ಲಿ ಕಳೆದಿತ್ತು. ಫರ್ನೀಯ ಆ ಪ್ರಕ್ಷು
ಕಡಲು ಪಯಣವನ್ನು ಕೊನೆಗಾಣಿಸುವ ಸುರಕ್ಷಿತ ಬಂದರವಾಯಿತು. ಯುರೋಪ
ರಸಿಕರಿಗೂ ಮೇಧಾವಿಗಳಿಗೂ ಫರ್ನೀಯು ಯಾತ್ರಾಕ್ಷೇತ್ರವಾಯಿತು. ಚಕ್ರವರ್ತಿ
ಫ್ರೆಡ್ರಿಕ್‌ನು ಮರಳಿ ವ್ಹೊಲ್ಟಾಯರನ ಸ್ನೇಹವನ್ನು ಕಟ್ಟಿಕೊಂಡನು. ಫ್ರಾನ್ಸು
ತನ್ನ ನಿರ್ವಾಸಿತ ಮಹಾಸಾಹಿತಿಯನ್ನು ವಿಚಾರ ಜಾಗೃತಿಯ ಜಾಜ್ವಲ್ಯ ಜ್ಯೋ
ಯನ್ನು ನಗೆಮೊಗದಿಂದ ಸ್ವಾಗತಿಸಿತು. ಆಗ ವ್ಹೊಲ್ಟಾಯರ್‌ನಿಗೆ ೮೩ ವರ
ವಯಸ್ಸು! ಆವಾಗಲೇ ಅವನು 'ಇರೀನ್' ಎಂಬ ಒಂದು ದುರಂತ ನಾಟಕವನ
ಬರೆದು ಮುಗಿಸಿದ್ದನು. (೮೩ ವರ್ಷದ ತರುಣನ ಕಾರ್ಯಕ್ಷಮತೆಯನ್ನು ನೋಡಿ
ಆ ನಾಟಕದ ಪ್ರಯೋಗವು ಪ್ಯಾರಿಸ್‌ದಲ್ಲಿ ಜರುಗಲಿತ್ತು. ಆ ಪ್ರಯೋಗ
ಪ್ರಥಮ ರಾತ್ರಿಗಾಗಿ ವ್ಹೊಲ್ಟಾಯರ್ ಪ್ಯಾರಿಸಕ್ಕೆ ಹೋಗಲೇಬೇಕು.

ಅದೊಂದು ವಿಜಯಯಾತ್ರೆಯೇ ಆಯಿತು. ಫರ್ನೀಯಿಂದ ಪ್ಯಾರಿಸಕ್ಕೆ ಆ

ಪ್ರವಾಸವು ಮೆರವಣಿಗೆಯಂತೆ ಮಹೋತ್ಸವದಲ್ಲಿ ಸಾಗಿತು. ಪ್ರವಾಸದ ಪರಿಸಮಾಪ್ತಿ ಎಲ್ಲಿ ? ನಾಟಕದ ಪ್ರಯೋಗಾನಂತರ ರಂಗಭೂಮಿಯ ಮೇಲೆ ಈ ಸಾಹಿತ್ಯಸಾಮ್ರಾಟನಿಗೆ ಪುಷ್ಪಮುಕುಟವನ್ನೇರಿಸಿ ಮುಗಿಯುವ ಸತ್ಕಾರ ಸಮಾರಂಭದಲ್ಲಿ ! 'ಈರೀನ್' ನಾಟಕದ ಪ್ರಯೋಗವು ಪ್ರಚಂಡ ಯಶಸ್ವಿಯಾಯಿತು. ಆದರೆ ಪ್ರಯೋಗದ ಅಂಕದ ತೆರೆಯು ಬಿದ್ದಾಗ ಕಾಲನ ಕಾಣದ ತೆರೆಯೂ ನಾಟಕಕಾರನ ಜೀವನರಂಗದಲ್ಲಿ ಇಳಿಯುತ್ತಲಿತ್ತು. ಸಮಾರಂಭದ ಯಶೋತ್ಸವದ ನಡುವೆಯೇ ವ್ಹಾಲ್ಟಾಯರ್‌ನ ಎದೆಯಲ್ಲಿ ಘೋರಯಾತನೆಗಳ ತೀವ್ರಶೂಲಿಯು ಎದ್ದಿತು.

ಮೇ ೩೦ ನೆಯ ದಿನ ೧೭೭೮ ರಲ್ಲಿ ಭೆಟ್ಟಿಗೆ ಬರಹೋಗುತ್ತಿರುವ ಪ್ರಶಂಸಕ ಜನಸ್ತೋಮದ ಕಿಕ್ಕಿರಿದ ಕಲಕಲದಲ್ಲಿ ವ್ಹಾಲ್ಟಾಯರ್‌ನ ಪ್ರಾಣೋತ್ಕ್ರಮಣವಾಯಿತು. ಅವನ ಕೊನೆಯ ಶಬ್ದಗಳಿವು; 'ನನಗೆ ಶಾಂತವಾಗಿ ಸಾಯಲು ಬಿಡಿರಿ ?'

ಪ್ರಪಂಚದ ಸಾಹಿತ್ಯವನ್ನೂ, ಸಾಹಿತ್ಯದ ಪ್ರಪಂಚವನ್ನೂ, ಕೆಲವೊಮ್ಮೆ ಭೀಷಣವೆನಿಸಿದರೂ, ಸದಾಕಾಲವೂ ಭೂಷಣಪ್ರಾಯನಾಗಿಯೇ ಅಲಂಕರಿಸಿದ ಅವಿಸ್ಮರಣೀಯ ವ್ಯಕ್ತಿತ್ವವು ಅಂದು ಆ ರೀತಿ ಕಣ್ಮರೆ ಆಯಿತು. ಅವನ ಪ್ರತಿಭೆಗೆ ಗಾಂಧಾರಿಯ ಗರ್ಭ; ಆದರೆ ಕುಂತಿಯ ಸಂತತಿ ! ಅವನು ನಿರ್ಮಿಸಿದ ವಿವಿಧ ವಿಪುಲ ಸಾಹಿತ್ಯದಲ್ಲಿ ಅವನ ಉಜ್ಜ್ವಲ ಚಾಟೂಕ್ತಿಯ, ಸಂಪನ್ನ ವ್ಯಂಗ್ಯೋಕ್ತಿಯ, ತೀಕ್ಷ್ಣ ಉಪರೋಧದ, ಸೂಕ್ಷ್ಮವಿವೇಕದ ಶೋಭಾಮುದ್ರೆಯೊತ್ತದ ಒಂದೂ ಪುಟವಿಲ್ಲ. ಬರಹಗಾರಿಕೆಗೆ ಬಹಳ ಬಾಯಿಗಳಿದ್ದರೂ ಅವನ ಅಚ್ಚುಮೆಚ್ಚಿಗೆಯ ಲೇಖನ ಪ್ರಕಾರವು ನಾಟಕವು. ರಂಗಭೂಮಿಯ ಕುರಿತು ಅವನಿಗೆ ಇಂಗದಮೋಹ. ಅದಕ್ಕಾಗಿ ಅವನು ಸುಮಾರು ೫೦ ರೂಪಕಗಳನ್ನು ಬರೆದನು. ಅವುಗಳಲ್ಲಿ ಉತ್ತಮವೆನಿಸಿಕೊಂಡವು ಮೂರು–ಝಾಯಿರ್ (೧೭೩೨), ಮೆರೋಪ್ ಮತ್ತು ಮೊಹಮೆತ್ ೧೭೪೧). ಮೂರೂ ಕೃತಿಗಳು ದುರಂತನಾಟಕಗಳು. ಅವನ ಉಪರೋಧಗರ್ಭಕಾವ್ಯವಾದ 'ಲಾಪುಸೆಲ್ಲೆ' ಗುಣದಲ್ಲಿ ಒಂದೆ ಸಮವಿಲ್ಲ; ಆದರೂ ರಂಜಕವಾಗಿವೆ. ಆದರೆ ಅವನು ಅವ್ಯಾಹತವಾಗಿ ಪ್ರಕಟಿಸಿದ ಐತಿಹಾಸಿಕ ಮತ್ತು ತಾತ್ವಿಕ ಲೇಖನಗಳಲ್ಲಿಯೂ ಪ್ರಚಂಡ ಪತ್ರವ್ಯವಹಾರದಲ್ಲಿಯೂ, ಕೇವಲ ಅಕ್ಷರ ಕ್ರಮದಿಂದ ಅವನು ಬರೆಯಲು ಹೊರಟ ಅದ್ಭುತ ಜ್ಞಾನಕೋಶದಲ್ಲಿಯೂ, ಅವನ ಸವ್ಯಸಾಚಿಯಾದ ಪ್ರತಿಭೆಯ, ದೂರಗಾಮಿಯಾದ ವಿಚಕ್ಷಣತೆಯ ಮತ್ತೂ ಪೂರ್ಣತೆಯನ್ನು ಪಡೆದ ಕಲಾಕುಶಲತೆಯ ಪ್ರಮಾಣಗಳು ಸತತವಾಗಿ ಸಿಗುತ್ತವೆ !

# ಚಾರ್ಲ್ಸ ಡಾರ್ವಿನ

ಜಗತ್ತಿನಲ್ಲಿ ವಾದ-ವಿವಾದಗಳ ಬಿರುಗಾಳಿಯು ಭುಗಿಲೆಬ್ಬಿಸಿದ ಪುಸ್ತಕವು ಯಾವದು ? ಅದೊಂದು ತೀರ ನಿರುಪದ್ರವಿಯಾದ ಗಂಭೀರವಾದ ಅಭ್ಯಾಸ ಜಡವಾದ ಶಾಸ್ತ್ರೀಯ ಪ್ರಬಂಧ. ಈ ಪ್ರಬಂಧದ ಹೆಸರು 'ಒರಿಜಿನ್ ಆಫ ಸ್ಪೇಸಿಜ್' ಅಂದರೆ 'ಪ್ರಾಣಿ ಜಾತಿಗಳ ಉಗಮ' ಅದನ್ನು ಬರೆದವನು ಚಾರ್ಲಸ ಡಾರ್ವಿನ. ಅದರಲ್ಲಿ ಅವನು ಜೀವವಿಕಾಸ ಕ್ರಮದ ತತ್ವವನ್ನು 'ಉತ್ಕ್ರಾಂತಿ'ವಾದದ ರಹಸ್ಯವನ್ನು ಮಂಡಿಸಿದನು. ಈ ಹೊಸ ತತ್ವವು ಒಂದು 'ಪಾಖಂಡಿ'ವಾದವೆಂದು ಧರ್ಮಾನುಯಾಯಿಗಳಿಂದ ಹಾದಿ ಹೋಕರ ಬಾಯಿಗಳವರೆಗೂ ಎಲ್ಲೆಡೆಯಲ್ಲಿ ಧಿಃಕಾರ ತಿರಸ್ಕಾರಗಳ ಗುಂಡಿನ ಮಳೆಗೆ ಗುರಿಯಾಯಿತು. ಈ ಪ್ರಬಂಧವು ಯುರೋಪದಲ್ಲಿ ವಿಚಾರ ಕ್ರಾಂತಿಯನ್ನು ಹಬ್ಬಿಸಿತು. ಆದರೆ ಸತ್ಯವು ತೋರಿಕೆಗೆ ಎಷ್ಟೇ ಭಯಂಕರವಾದರೂ ತಿಳುವಳಿಕೆಗೆ ಶುಭಕರವೇ ಸರಿ. ಉತ್ಕ್ರಾಂತಿ ತತ್ವವನ್ನು ವಿಜ್ಞಾನಿಯು ದಕ್ಷತೆಯಿಂದ ಪರಿಶೀಲಿಸಿ ಕೊನೆಗೂ ಸ್ವೀಕರಿಸಬೇಕಾಯಿತು. ತೆಗಳಲು ಬಂದವರು ಹೊಗಳಲು ನಿಂತಂತಾಯಿತು. ಇಂದಿಗೆ ಈ ಸಿದ್ಧಾಂತವು ಸಾದ್ಯಂತವಾಗಿ ಮೊದಲಿಗೆ ಇದ್ದಂತೆಯೇ ಇಲ್ಲ. ಕೆಲವು ಅಂಶದಲ್ಲಿ ಅದರಲ್ಲಿ ಸ್ಥಿತ್ಯಂತರವಾಗಿದೆ. ಆದರೂ ವಿಜ್ಞಾನಿಯು ಈ ಉತ್ಕ್ರಾಂತಿ ತತ್ವವನ್ನು ಒಪ್ಪಿದ್ದಾನೆ, ಡಾರ್ವಿನನ ಹೆಸರಿಗೆ ಅಳಿವಿಲ್ಲ. ಏಕೆಂದರೆ, ಸೃಷ್ಟಿಯ ಹೊಸತೊಂದು ಕಲ್ಪನೆಯನ್ನೇ-ಸಮರ್ಪಕವೂ ಸುಸಂಗತವೂ ಆದ ಸಿದ್ಧಾಂತವನ್ನು ನಮಗೆ ದಯಪಾಲಿಸಿದ್ದ ಪ್ರತಿಭೆ ಅವನದು.

೧೮ ನೇ ಶತಮಾನದ ಉತ್ತರಾರ್ಧದಲ್ಲಿ, ಲಿಚ್‌ಫೀಲ್ಡ ಎಂಬಲ್ಲಿ ಇರಾಸ್ಮಸ್ ಡಾರ್ವಿನ್ ಎಂಬ ಒಬ್ಬ ಗೃಹಸ್ಥನಿದ್ದನು. ಇರ್ಯಾಸ್ಮಸನು ಪ್ರಸಿದ್ಧ ವೈದ್ಯನಾಗಿದ್ದನು. ಆಗಿನ ಬ್ರಿಟಿಷ್ ಚಕ್ರವರ್ತಿ ೩ನೆಯ ಜಾರ್ಜನು ಇರ್ಯಾಸ್ಮಸನಿಗೆ ಲಿಚ್‌ಫೀಲ್ಡದಿಂದ ಲಂಡನ್ನಿಗೆ ಬಂದು ಉಳಿಯಲು ಆಮಂತ್ರಿಸಿದ್ದನು. ಆದರೆ ಇರ್ಯಾಸ್ಮಸನು ಲಿಚ್‌ಫೀಲ್ಡದಲ್ಲಿಯೇ ಉಳಿದನು. ಸಸ್ಯಶಾಸ್ತ್ರದಲ್ಲಿ ಅವನಿಗೆ ತುಂಬಾ ಕುತೂಹಲವಿತ್ತು. ಲಿಚ್‌ಫೀಲ್ಡದಲ್ಲಿ ತಾನು ಬೆಳೆಸಿದ ವಿವಿಧ ವೃಕ್ಷವಾಟಿಕೆಗಳನ್ನು ಬಿಟ್ಟು ಹೋಗಲು ಅವನಿಂದಾಗಲಿಲ್ಲ. ಅವನು ಸಸ್ಯಶಾಸ್ತ್ರಜ್ಞನಿದ್ದಂತೆ ಕವಿಯೂ ಆಗಿದ್ದನು. ಕವಿಯೂ ಹೇಗೋ ಹಾಗೆಯೇ ಕ್ರಾಂತಿವಾದಿಯೂ ಸ್ವತಂತ್ರ ವಿಚಾರದವನೂ ಆಗಿದ್ದನು.

ಕವಿಯು ಶಾಸ್ತ್ರಜ್ಞನಾಗಿ ಬಿಟ್ಟರೆ, ಅವನ ಶಾಸ್ತ್ರಕ್ಕೆ ಕಾವ್ಯದ ಕಳೆಬರಬಹುದು; ಆದರೆ ಸತ್ಯದ ಬೆಲೆ ಆ ಮೂಲಕ ಕಡಿಮೆ ಆಗಬಹುದು. ಅದೇ ಮೇರೆಗೆ,

ಶಾಸ್ತ್ರಜ್ಞನು ಕವಿಯಾದರೆ ಕಾವ್ಯದ ರಸದಲ್ಲಿ ವರದಿ, ವಿವರಗಳ ಚರ್ಚೆ. ಚರ್ವಣಗಳ ಕಸವು ಬಂದು ಸೇರಬಹುದು. ಇರ್ರ್ಯಾಸ್ಮಸನು ಕವಿಯೆಂಬ ಮಟ್ಟದಲ್ಲಿ ಯಾವ ಎತ್ತರವನ್ನೂ ಮುಟ್ಟಲಿಲ್ಲ, ಆದಾಗ್ಯೂ ಅವನ ಕವನದಲ್ಲಿ ವ್ಯಕ್ತವಾದ ಊಹನೆಗಳು ವಿಚಾರಣೀಯವೆನಿಸಿದ್ದವು. ಏಕೆಂದರೆ ಅವುಗಳಲ್ಲಿ ಹೆಚ್ಚಿನ ಹಿರಿಯ ಸತ್ಯಗಳ ಸುಳುವು ಹೊಳವುಗಳು ಮೂಡಿದ್ದವು. ಅವನ ಕಾಲಮಾನದ ಅನೇಕ ಶಾಸ್ತ್ರಜ್ಞರು ಸೃಷ್ಟಿಯ ಕುರಿತು 'ಪೃಥಗುತ್ಪತ್ತಿ'ಯ ಸಿದ್ಧಾಂತವನ್ನೇ ನಂಬಿದ್ದರು. ಈ ಸಿದ್ಧಾಂತದಂತೆ, ಪ್ರತಿಯೊಂದು ಜೀವಜಾತಿಯೂ, ಪ್ರಾಣಿವರ್ಗವೂ ಈಗ ಇದ್ದ ಸ್ಥಿತಿಯಲ್ಲಿಯೂ ರೀತಿಯಲ್ಲಿಯೂ ಅನಾದಿಯಿಂದಲೂ ಪ್ರತ್ಯೇಕವಾಗಿ ಉತ್ಪನ್ನವಾಗಿದ್ದು ಹಾಗೆಯೇ ಅವಿಚ್ಛಿನ್ನವಾಗಿ ಅದು ನಡೆದು ಬಂದಿದೆಯೆಂದು ಬಲ್ಲವರೆಲ್ಲರೂ ತಪ್ಪದೇ ಒಪ್ಪಿದ್ದರು. ಆದರೆ ಡಾ. ಇರ್ರ್ಯಾಸ್ಮಸನು ಈ ಉತ್ಪತ್ತಿವಾದವನ್ನು ಬಿಟ್ಟು 'ಉತ್ಕ್ರಾಂತಿ'ವಾದವನ್ನು ನಂಬಿದ್ದನು. ಈ ಹೊಸವಾದವು ಆಗ ಒಂದು ಕಲ್ಪನೆಯಾಗಿಯೇ ಉಳಿದಿತ್ತು; ಅಲ್ಲದೆ ಒಂದು ಸಿದ್ಧಾಂತವೆಂದು ಖಚಿತವಾಗಿದ್ದಿಲ್ಲ.

ಇರ್ರ್ಯಾಸ್ಮಸ್ ಡಾರ್ವಿನ್ ೧೮೦೨ ರಲ್ಲಿ ಸತ್ತನು. ಅವನು ಸಾಯುವ ಒಂದು ವರ್ಷ ಮುಂಚೆಯೇ ಲ್ಯಾಮಾರ್ಕನೆಂಬ ಪಶುಶಾಸ್ತ್ರಜ್ಞನು ಉತ್ಕ್ರಾಂತಿ ತತ್ವದ ಕುರಿತು ಶೋಧವನ್ನು ಸಾಗಿಸಿ ತನ್ನ ಅಭ್ಯಾಸದ ಪ್ರಥಮ ಫಲಗಳನ್ನು ಪ್ರಕಟಿಸಲು ಆರಂಭಿಸಿದನು. ಸಸ್ಯಜೀವನದಲ್ಲಿ ಪರಿಸ್ಥಿತಿಯ ಪ್ರಭಾವದಿಂದಲೂ, ಪ್ರಾಣಿಜೀವನದಲ್ಲಿ ಆನುವಂಶಿಕ ಸಂಸ್ಕಾರದ ಬಲದಿಂದಲೂ ಉತ್ಕ್ರಾಂತಿಯು ಒದಗಿಬರುವದೆಂಬ ವಿವೇಚನೆಯನ್ನು ಅವನು ಎರಡು ಗ್ರಂಥಗಳಲ್ಲಿ ಪ್ರಕಟಿಸಿದ್ದನು. ಆದರೆ ಅವನ ವಿವೇಚನೆಯು ಒಂದೂ ವಾದದ ಪ್ರತಿಪಾದನೆಯೇ ಆಯಿತು. ಪ್ರತ್ಯಕ್ಷ ಹಾಗೂ ಪ್ರಮಾದಕ್ಕೆ ಎಡೆಗೊಡದ ಪ್ರಮಾಣಗಳ ಅಭಾವದ ಮೂಲಕ ಲ್ಯಾಮಾರ್ಕನ ಸಿದ್ಧಾಂತಗಳು ಅಸಂದಿಗ್ಧ ನಿಸರ್ಗ ನಿಯಮಗಳೆಂದು ಸಿದ್ಧವಾಗದೇ ಉಳಿದವು.

ಭೂಸ್ತರಗಳಲ್ಲಿ ದೊರೆಯುವ ಕಲ್ಲುಗಳ ಭೌಗೋಲಿಕ ಪರಿಸ್ಥಿತಿಯ ವರ್ಗೀಕರಣದ, ಪ್ರಾಣಿಗಳ ಸಂತತಿಯ ಕುರಿತು ಸಾಗಿದ ಪ್ರಯೋಗಗಳ, ಅಭ್ಯಾಸ ಪರಿಶೀಲನೆಯಿಂದ ಮುಂದೆ ಉತ್ಕ್ರಾಂತಿವಾದವು ಒಂದು ವಾಸ್ತವ ಸತ್ಯವಾಗಿ ಸ್ಥಾಪಿತವಾಯಿತು. ಚಾರ್ಲಸ ಡಾರ್ವಿನನು ಮಂಡಿಸಿದ 'ನೈಸರ್ಗಿಕ ನಿಶ್ಚಯ'ದ ತತ್ವವು-ಅವನ 'ಪ್ರಾಣಿಜಾತಿಗಳ ಉಗಮ' ಎಂಬ ಪುಸ್ತಕದ ವಿಷಯವು-ಉತ್ಕ್ರಾಂತಿಯ ಪ್ರಕ್ರಿಯೆಯನ್ನು ಸಾರಿತು, ಉತ್ಕ್ರಾಂತಿಯೆಂಬ ಪ್ರಾಕೃತಿಕ ವ್ಯಾಪಾರವು ಹೇಗೆ ಒದಗಿಬರುತ್ತದೆಂಬುದರ ಪ್ರಕೃತಿ ಧರ್ಮವನ್ನು ಉದಾಹರಿಸಿತು. ಈ ನಿಯಮವು

ಕೇವಲ ಕಲ್ಪನೆ ಇಲ್ಲವೆ ಊಹೆ-ಅನುಮಾನಗಳ ಕಾಯಕವಾಗಿ ಉಳಿಯಲಿಲ್ಲ. ನಿರೀಕ್ಷಣೆ-ಪರೀಕ್ಷಣೆಗಳ ಪ್ರಯೋಗ-ಪ್ರಮಾಣಗಳ ಕ್ಷೇತ್ರವಾಗಿ ನಿಂತಿತು.

ಇನ್ನು ಈ ಉತ್ಕ್ರಾಂತಿ ತತ್ವವು ಯಾವದು ? ಜೀವ ವಿಕಾಸದ ವ್ಯಾಕರಣವನ್ನು ವಿಶದ ಮಾಡುವ ಈ ಸೂತ್ರದ ವ್ಯಾಖ್ಯೆ ಏನು ? ಈ ತತ್ವವನ್ನು ಸಂಕ್ಷೇಪದಲ್ಲಿ ಮಂಡಿಸುವದಾದರೆ, ಅದು 'ಜೀವಯೋಗ್ಯರ ಬದುಕು' ಎಂದು ಅನ್ನಬಹುದು.- ಜೀವಯೋಗ್ಯರೆಂದರೆ ಭದ್ರಜೀವಿಗಳು. ಮಿಕ್ಕವರು ಅಳಿದು, ಉಳಿದವರು ಬದುಕುವದು. ಜೀವನ ಕಲಹದಲ್ಲಿ ಅಯೋಗ್ಯರು ಅಭದ್ರರು ಹಿಂದೆ ಬಿದ್ದು ಅಳಿದು, ಯೋಗ್ಯರು, ಭದ್ರರು ಪರಿಸ್ಥಿತಿಗೆ ಅನುಕೂಲವಾಗಿ ಪರಿಸ್ಥಿತಿಯನ್ನು ಅಳಿಕೊಂಡು ಅಳವಡಿಸಿಕೊಂಡು ತಾಳಬಲ್ಲವರು ಬಾಳುವದು.-ಎಂದು ಈ ದೀರ್ಘಸಮಾಸದ ಅರ್ಥ. 'ಸರ್ವ್ಹಾಯಿವಲ್ ಆಫ ದ ಫಿಟೆಸ್ಟ' ಎಂಬುದು ಮೂಲದ ಸುಪ್ರಸಿದ್ಧ ಪದವು. ಅದನ್ನೇ ಜೀವಯೋಗ್ಯರ ಬದುಕು ಎಂದು 'ಕನ್ನಡಿ'ಸಿದ್ದು.

ಜೀವಯೋಗ್ಯರ ಯೋಗ್ಯತೆಯನ್ನು-ಬದುಕಿ ಉಳಿಯಲು, ಬಾಳಿ ಬೆಳೆಯಲು ತಕ್ಕುದಾದ ಗುಣಬಲವನ್ನು-ಒಂದು ಪ್ರಾಣಿ ಅಥವಾ ಜೀವ ತನ್ನಲ್ಲಿ ತಂದು ಕೊಳ್ಳುವದು ಹೇಗೆ ? ಅದೊಂದು 'ತ್ರಿಕರಣ' ಪೂರ್ವಕ ಬಂದ ಸಿದ್ಧಿ. ಮೂರು ಸಂಗತಿಗಳ ಮೇಳದ ಪರಿಣಾಮವದು. ಆ ಪ್ರಾಣಿಯ ಅನುವಂಶಿಕ ಗುಣ, ಪ್ರತ್ಯಕ್ಷ ಪರಿಸ್ಥಿತಿಯೊಂದಿಗೆ ಘರ್ಷಣೆ, (ಇದಕ್ಕೇ 'ಜೀವನ ಕಲಹ'ವೆಂಬ ವಿಖ್ಯಾತ ಹೆಸರು ! ಕಾರ್ಲಮಾರ್ಕ್ಸನು 'ವರ್ಗಕಲಹ'ವನ್ನು ತಂದಂತೆ, ಚಾರ್ಲ್ಸ ಡಾರ್ವಿನನು 'ಜೀವನ ಕಲಹ'ವನ್ನು ಬಳಿಕೆಯ ಮಾತಿನಲ್ಲಿ ತಂದನು.) ಮತ್ತು ಜಾತಿಯಲ್ಲಿ ಜರಗುವ ವಿವಿಧೀಕರಣ ಈ ಮೂರು ಉತ್ಕ್ರಾಂತಿಯ ಹಂತವನ್ನೇರಲು ಜೀವಕ್ಕೆ ಪಾತ್ರತೆಯನ್ನು ನಿಶ್ಚಯಿಸುತ್ತವೆ. ಇದೇ 'ನೈಸರ್ಗಿಕ ನಿಶ್ಚಯ' ಪ್ರಕೃತಿಯು ಪ್ರಾಣಿಕೋಟಿಯಲ್ಲಿ ಮಾಡುವ ಆಯ್ಕೆ. ಜೀವನವು ಕೇವಲ 'ಜನ್ಮಸಿದ್ಧ ಹಕ್ಕು' ಅಲ್ಲ, ಹುಟ್ಟಿದವೆಲ್ಲವೂ ಬದುಕಿಬಾಳಲು ತಕ್ಕುದಲ್ಲ. 'ತಗುವಂತಹ' ಹದ ತಕ್ಕದ್ದು. ಈ ಭೂಮಿಯ ಮೇಲೆ ಪ್ರಾಣಿಕೋಟಿ ಹುಟ್ಟಿ ಹದಗೊಂಡು ಮಾರ್ಪಟ್ಟು ಬೇರ್ಪಟ್ಟು ಬಂದದ್ದೆ ಈ ಕ್ರಮದಿಂದ. ಜೀವಕ್ಕೆ ಬಾಹ್ಯಪರಿಸ್ಥಿತಿಗೆ ಅನುಕೂಲ ವಾಗಿ ಇಂದ್ರಿಯ-ಅವಯವಗಳು ಉಂಟಾದವು. ಅವುಗಳಲ್ಲಿ ಜೀವನಕ್ಕೆ ಅಂದರೆ ಆ ಪರಿಸ್ಥಿತಿಯ ಆಗು ಹೋಗುಗಳ ಹಿಡಿತಕ್ಕೆ-ಸಹಾಯಕರವಾದವಷ್ಟೇ ಉಳಿಯುವ ಸಂಭವ ಉಂಟಾಯಿತು. ಹೀಗೆ ಉಳಿದು ಬಂದ ಸಹಾಯಕ ಅಂಗ-ಅಂಶಗಳೆ ವಂಶವಲ್ಲಿ 'ಇಳಿದು' ಬರುವಂತಾಯಿತು. ಇಂಥ ಅನುವಂಶಿಕನಾಗಿ ಬಂದ ಇಂದ್ರಿಯ-ಅವಯವ, ಅಂಗ-ಉಪಾಂಗ, ಮತ್ತು ಗುಣ-ಧರ್ಮಗಳ ಒಟ್ಟು

ಫಲವಾಗಿ ಒಂದು ಪ್ರಾಣಿವರ್ಗದಿಂದ ಇನ್ನೊಂದು ಮಾದರಿಯು ಉಂಟಾಗುವದು. ಇದು ಆ ಪ್ರಾಣಿಯಲ್ಲಿ ಒದಗಿಬಂದ ಉತ್ಕ್ರಾಂತಿ. ಪ್ರಾಣಿ ಜಾತಿಯಲ್ಲಿ 'ಅನು ಕೂಲವಾಗಿ ಒದಗಿದ ರೂಪಲಕ್ಷಣ. ಗುಣಧರ್ಮಗಳ ವ್ಯತ್ಯಾಸಗಳೆಲ್ಲ ಸಂರಕ್ಷಿಸಲ್ಪಡುತ್ತವೆ; ಪ್ರತಿಕೂಲ ಅನಾನುಕೂಲವಾದವುಗಳೆಲ್ಲ ನಷ್ಟವಾಗುತ್ತವೆ. ಇದೇ 'ಜೀವ ಯೋಗ್ಯ'ರ ಬದುಕು. ಈ ತತ್ವದ ದ್ರಷ್ಟಾರನು ಚಾರ್ಲ್ಸ ಡಾರ್ವಿನ- ಡಾ. ಇರ್ಯಾಸ್ಮಸ ಡಾರ್ವಿನನ ಮೂರನೆಯ ಮಗನ ಮಗನು.

ಇರ್ಯಾಸ್ಮಸನ ಮೂರನೆಯ ಮಗ ರಾಬರ್ಟನು ತಂದೆಯಂತೆಯೇ ಡಾಕ್ಟರನಾಗಿ ಶ್ರೂಸ್ಬರಿ ಎಂಬಲ್ಲಿ ಸ್ಥಾಯಿಕನಾಗಿದ್ದನು. ಅಲ್ಲಿ ೧೮೦೯ ರಲ್ಲಿ ಚಾರ್ಲ್ಸ ಡಾರ್ವಿನನ ಜನನವಾಯಿತು. ಸೃಷ್ಟಿವಿಕಾಸ ಕ್ರಮದ ಒಂದೇ ಒಂದು ಸುಗಮವೂ ಸುಸಂಗತವೂ ಆದ ವ್ಯಾಖ್ಯೆಯನ್ನು ಕಂಡುಹಿಡಿಯುವ ಕ್ರಾಂತಿದರ್ಶಿಯು ಅಂದು ಉದಿಸಿದನು.

ಡಾರ್ವಿನನ ಉತ್ಕ್ರಾಂತಿ ಸಿದ್ಧಾಂತವು ವಿಜ್ಞಾನದ ವಿಶ್ವದಲ್ಲಿಯೇ ಒಂದು ವಿಪ್ಲವ ಕಾರಿಯಾದ ಶಕ್ತಿ ಆಯಿತು. ಎಲ್ಲ ವಿಜ್ಞಾನಿಗಳು ಅದನ್ನು ಒಪ್ಪಿಕೊಂಡರು, ಮುಂದೆ ಗರ್ಭವಿಕಾಸ ಶಾಸ್ತ್ರದಲ್ಲಿಯ ಸಂಶೋಧನಗಳು ಈ ತತ್ವವನ್ನೇ ಸಮರ್ಥಿ ಸಿದವು. ಮಾನವ ವಂಶಶಾಸ್ತ್ರ, ಜನಾಂಗ ವಿಕಾಸಶಾಸ್ತ್ರ, ಮನಃಶಾಸ್ತ್ರ ಮುಂತಾದ ಆಧುನಿಕ ಆನುಷಂಗಿಕ ವಿಜ್ಞಾನಶಾಸ್ತ್ರಗಳಿಗೆಲ್ಲ ಉತ್ಕ್ರಾಂತಿ ತತ್ವವು ರಕ್ತದಾನವನ್ನೇ ಮಾಡಿತೆನ್ನಬಹುದು. ಆ ತತ್ವವನ್ನು ಅಲ್ಲಗಳೆಯುವ ಯಾವ ಪ್ರಮಾಣವೂ ಇನ್ನೂ ದೊರೆತಿಲ್ಲ. ಕೆಲವೊಂದು ತಿದ್ದುಪಡಿಗಳೊಡನೆ ಡಾರ್ವಿನನ ಉತ್ಕ್ರಾಂತಿ ಸಿದ್ಧಾಂತವು ಇಂದಿಗೂ ಪ್ರಾಣಿವಿಜ್ಞಾನವನ್ನು ಅಧಿಕಾರದಿಂದ ಆಳುತ್ತದೆ. ಇರಲಿ.

೧೮೧೮ ರಲ್ಲಿ ಅವನು ಶ್ರೂಸ್ಬರಿಯ ಶಾಲೆಯ ವಸತಿಗೃಹವನ್ನು ಸೇರಿದನು. ಅಂದಿನ ರೂಢಿಯಂತೆ, ಆ ಶಾಲೆಯ ಶಿಕ್ಷಣವು ಸಾಹಿತ್ಯದ್ದಾಗಿತ್ತು.–ಲ್ಯಾಟಿನ ಭಾಷೆಯ ಅಭ್ಯಾಸದ್ದಾಗಿತ್ತು. (ನಮ್ಮ ಹಳೆಯ ಸಂಸ್ಕೃತ ಪಾಠಶಾಲೆಯ ಅಧ್ಯ ಯನದಂತೆ) ಚಾರ್ಲ್ಸನ ದೃಷ್ಟಿಯಲ್ಲಿ ಅವನು ಪಡೆದ ನಿಜವಾದ ಶಿಕ್ಷಣವೆಂದರೆ ಭೂಮಿತಿಯ ಕೆಲವು 'ಖಾಸಗಿ' ಪಾಠಗಳು. ಅಲ್ಲದೆ, ಅವನ ಅಣ್ಣನು ಮನೆಯ ಹಿಂದೆ ಸಾಮಾನಿನ ಕೋಣೆಯೊಂದರಲ್ಲಿ ಪ್ರಯೋಗ ಶಾಲೆಯನ್ನು ಏರ್ಪಡಿಸಿದ್ದನು. ಅಲ್ಲಿ ಮಾಡಿದ ಕೆಲವು ರಸಾಯನಶಾಸ್ತ್ರದ ಪ್ರಯೋಗಗಳ ಪರಿಚಯು. ಆದರೆ ಈ ಪ್ರಯೋಗಗಳ ಕುರಿತು ಶ್ರೂಸ್ಬರಿಯಲ್ಲಿ ತೀವ್ರ ತಿರಸ್ಕಾರವಿತ್ತು. (ವಿದ್ಯೆ ಎಂಬುದು ಕೇವಲ ಓದಿ ಊರುಹಾಕುವದೇ ಹೊರತು ಮಾಡಿ ಅರಿತುಕೊಳ್ಳುವದಲ್ಲವೆಂದು ಅಂದಿನ ಭಾವನೆ ಇತ್ತು!) ಪ್ರಯೋಗ, ಪ್ರಯೋಗವೆಂದು ತನ್ನ ವೇಳೆಯ

ದುರುಪಯೋಗ ಮಾಡುತ್ತಿರುವನೆಂದು ಅವನ ಶಾಲೆಯವರು ಡಾರ್ವಿನನನ್ನು ಛೀ ಹಾಕುತ್ತಿದ್ದರು. ಶಾಲೆಯಿಂದ ಹೊರಬಿದ್ದಾಗೆಲ್ಲ ತರಳ ಚಾರ್ಲಸನಿಗೆ ಇನ್ನೊಂದು 'ವೇಳೆಗಳೆತ'ದ ಚಟವು ಅಂಟಿಕೊಂಡಿತ್ತು. ಈ ಚಟವೆಂದರೆ ಚಿತ್ರ ವಿಚಿತ್ರ ವಸ್ತು. ವನಸ್ಪತಿಗಳನ್ನು ಕಲೆಹಾಕುವದು. ಈ ಸಂಗ್ರಹಾಭಿರುಚಿಯೇ ಅವನನ್ನು ಮುಂದೆ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರದ ಕಡೆಗೆ ಒಯ್ಯುವ ಕಾಲುದಾರಿಯಾಯಿತು, ಸೋಜಿಗದ ಹೂವು, ಗಿಡ, ಗೂಡು, ಚಿಪ್ಪು, ಎಲುಬುಗಲ್ಲು (ಹಳಕು) ಲೋಹದ ತುಂಡು, ಹಳೆಯ ನಾಣ್ಯ ಮುಂತಾದ ವಸ್ತುಗಳನ್ನು ಹುಡುಕಾಡಲು ಡಾರ್ವಿನನು ಬಯಲು, ಬೆಟ್ಟಗಳನ್ನು ಸುತ್ತುತ್ತಿದ್ದನು. ಆ ಸಂಚಾರದಲ್ಲಿ ಅವನಿಗೆ ಬಂದೂಕಿನ ಬಳಿಕೆಯು ಆಯಿತು. ಅವನು 'ಶಿಕಾರಿ'ಯ 'ಷೋಕಿ' ಆದನು.

'ನಾನು ಶಾಲೆಗೆ ಹೋಗಲು ತೊಡಗುವಷ್ಟರಲ್ಲಿ, ನಿಸರ್ಗದ ಚರಿತ್ರ ನಿರೀಕ್ಷಣೆಯ ಮತ್ತು ವಸ್ತುಸಂಗ್ರಹದ ನನ್ನ ಅಭಿರುಚಿಯು ಚೆನ್ನಾಗಿ ಬೆಳೆದಿತ್ತು. ಗಿಡಬಳ್ಳಿಗಳ ಗುರುತು ಹಚ್ಚಿ ಅವುಗಳ ಹೆಸರುಗಳನ್ನು ನಾನು ಕಲಿತೆನು. ಎಲ್ಲ ಬಗೆಯ ವಸ್ತುಗಳನ್ನು ಒಟ್ಟು ಹಾಕುವ ಚಟ ನನ್ನಲ್ಲಿ ಬಲಿಯಿತು. ಅಂಥ ವಸ್ತುಗಳಲ್ಲಿ ಸಿಂಪುಗಳು, ಮುದ್ರೆಗಳು, ನಾಣ್ಯಗಳು, ಲೋಹಗಳು ಎಲ್ಲವೂ ಬಂದವು. ಈ ಸಂಗ್ರಹವೃತ್ತಿಯು ಒಬ್ಬನನ್ನು ಸಸ್ಯ ವಿಜ್ಞಾನಿಯನ್ನೋ ಭೂಗರ್ಭಶಾಸ್ತ್ರಜ್ಞ ನನ್ನೋ, ರತ್ನ-ಕೃತಿ ಪರೀಕ್ಷಕನನ್ನೋ ಅಥವಾ ಜಿಪುಣಾಗ್ರೇಸರನನ್ನೋ ಆಗುವಂತೆ ಮಾಡುವ ಶಕ್ತಿಯುಳ್ಳದ್ದು. ಈ ಸಂಗ್ರಹದ ಆವೇಶ ನನ್ನಲ್ಲಿ ಬಲು ಬಲಿಷ್ಠ ವಾಗಿತ್ತು. ಬಲಿಷ್ಠವಿದ್ದಂತೆಯೇ ಅದು ಕೇವಲ ನನಗೆ ಸಹಜವಾಗಿತ್ತು.' ಎಂದು ಡಾರ್ವಿನ್ನನು ಬರೆದಿದ್ದಾನೆ.

ಚಾರ್ಲಸನು ತಂದೆ ತಾತಂದಿರ ವೃತ್ತಿಯನ್ನೇ ಅನುಸರಿಸುವದೆಂದು ನಿಶ್ಚಯ ವಾಗಿತ್ತು. ಆದ್ದರಿಂದ ವೈದ್ಯಕವನ್ನು ಕಲಿಯಲು ಅವನು ೧೮೨೫ ರಲ್ಲಿ ಎಡಿನ್‌ಬರ ವಿಶ್ವವಿದ್ಯಾಲಯವನ್ನು ಸೇರಿದನು. ಆದರೆ ವೈದ್ಯವಿದ್ಯೆಯಲ್ಲಿ ಮುದ್ದುಗಾರಿಕೆಯಲ್ಲಿ ಅವನಿಗೆ ಯಾವ ಆಕರ್ಷಣವೂ ತೋರಲಿಲ್ಲ; ಶರೀರ ರಚನಾಶಾಸ್ತ್ರವು ಅವನಲ್ಲಿ ಹೇಸಿಗೆಯನ್ನೇ ಉಂಟುಮಾಡಿತು; ಹಾಗೆಯೇ, ಶಸ್ತ್ರಕ್ರಿಯೆಯ ಶಾಲೆಯು ಅವನಿಗೆ ಚಿತ್ರಹಿಂಸೆಯ ಯಮಪುರಿಯಂತೆಯೇ ತೋರಿತು !

ಆದ್ದರಿಂದ ಡಾಕ್ಟರಿ ವಿದ್ಯೆಗೆ ಶರಣು ಹೊಡೆದು ಅವನು ಧರ್ಮಗುರುವಾಗುವವನು ನಿರ್ಧರಿಸಿದನು.-ದೇಹವನ್ನು ವಾಸಿಮಾಡುವದಕ್ಕಿಂತ ಆತ್ಮವನ್ನೇ ಗುಣಪಡಿಸುವದು ಅವನಿಗೆ ಲೇಸೆನಿಸಿರಬೇಕು ! ಆದರೆ ಎಡಿನ್ ಬರ್ಗವನ್ನು ಬಿಟ್ಟು ಹೊರಡುತ ಮೊದಲೆ, ಅವನ ವಿದ್ವಾನ್ ಮಿತ್ರ ಡಾ. ಗ್ರಾಂಟನು ಅವನ ಲಕ್ಷ್ಯವನು

ನಿಸರ್ಗದ ಅಭ್ಯಾಸದ ಕಡೆಗೆ ಹೊರಳಿಸಿದನು. ಗ್ರಾಂಟನು ಪಶುಶಾಸ್ತ್ರಜ್ಞನಿದ್ದನು. ಗ್ರಾಂಟನ ಪ್ರಭಾವದಲ್ಲಿ ಡಾರ್ವಿನನು ಕೆಲವು ಸಮುದ್ರತೀರದ ವನಸ್ಪತಿಗಳ ಪರಿಶೀಲನೆಯನ್ನು ಮಾಡಿದನಲ್ಲದೆ, ಕೆಲವು ಅಪರೂಪದ ಕೀಟಕಗಳನ್ನೂ ಕಲೆ ಹಾಕಿದನು.

೧೮೨೭ ರಲ್ಲಿ ಅವನು ಕೇಂಬ್ರಿಜದ ಕ್ರೈಸ್ತ ಕಾಲೇಜದಲ್ಲಿ ಹೆಸರು ಹಚ್ಚಿಸಿದನು. ತನ್ನ ಹೇಳತು ಹೋದ ಲ್ಯಾಟಿನ್ ಸಾಹಿತ್ಯದ ಪಾಠಗಳನ್ನು ಮತ್ತೆ ಓದಿ ಮುಗಿಸಿದನು. ಮೂರು ವರ್ಷ ಕಾಲೇಜು ಸೇರಿದನು. ಆ ವಿಶ್ವವಿದ್ಯಾಲಯದ ಹೊಸ ಜೀವನದಲ್ಲಿ ಅವನು ಒಳ್ಳೇ ಆಸಕ್ತಿಯಿಂದ ಸಮರಸನಾದನು. ಪದವಿಯನ್ನು ಪಡೆಯಲು ಅಗತ್ಯವಿದ್ದಷ್ಟೇ ಅಭ್ಯಾಸವನ್ನು ಮಾಡುತ್ತಿದ್ದನು. ಉಳಿದ ವೇಳೆಯನ್ನೆಲ್ಲ ಶಿಕಾರಿ ಮಾಡುವದರಲ್ಲಿ ಕುದುರೆಯ ಸವಾರಿಯಲ್ಲಿ, ಹಾಗೂ ಕ್ರಿಮಿ–ಕೀಟಕಗಳ ಸಂಗ್ರಹ ಕಾರ್ಯದಲ್ಲಿ ಕಳೆಯುತ್ತಿದ್ದನು.

'ಕೇಂಬ್ರಿಜದಲ್ಲಿಯ ಯಾವ ವ್ಯಾಸಂಗವೂ ಈ ಕೀಟ ಸಂಗ್ರಹದ ಕಾರ್ಯದಷ್ಟು ಉತ್ಸಾಹವನ್ನುಂಟು ಮಾಡುತ್ತಿದ್ದಿಲ್ಲ. ಬರೇ ಕಲೆಹಾಕುವದೊಂದೇ ನನ್ನ ಆವೇಶ ವಾಗಿತ್ತು. ಕೂಡಿಸಿದ ಕೀಟಕಗಳನ್ನು ನಾನು ವಿಂಗಡಿಸಿ ಸೀಳಿ ನೋಡುತ್ತಿದ್ದಿಲ್ಲ. ಪ್ರಸಿದ್ಧವಾದ ಅವುಗಳ ವರ್ಣನೆಗಳೊಂದಿಗೆ ಅವುಗಳ ಅಂಗಲಕ್ಷಣಗಳನ್ನು ಹೊಂದಿಸಿ, ಹೋಲಿಸಿ ನೋಡುತ್ತಿದ್ದಿಲ್ಲ. ಹೇಗೊ ಕೂಡಿಸಿ, ಹೇಗೊ ಗುರುತಿಸಿ ಅವುಗಳಿಗೆ ನಾನು ಹೆಸರಿಡುತ್ತಿದ್ದೆನು. ಅಂದಿನ ನನ್ನ ಉತ್ಸಾಹದ ಆವೇಶವು ಹೇಗಿತ್ತೆಂಬುದಕ್ಕೆ ಒಂದು ಉದಾಹರಣೆಯನ್ನೇ ಕೊಡುತ್ತೇನೆ. ಒಂದು ದಿನ, ಒಂದು ಹಳೆಯ ಮರದ ತೊಗಟೆಯನ್ನು ಹರಿದು ತೆಗೆಯಲಾಗಿ, ಒಳಗೆ ಎರಡು ಅಪರೂಪದ ಕೀಟಕಗಳನ್ನು ಕಂಡೆನು; ಒಂದೊಂದು ಕೈಯಲ್ಲಿ ಒಂದೊಂದನ್ನು ಕೂಡಲೇ ಎತ್ತಿಕೊಂಡೆನು. ಆಗ ಇನ್ನೊಂದು ಮೂರನೆಯದನ್ನು ನೋಡಿದೆನು. ಅದು ಹೊಸ ಜಾತಿಯ ಕೀಟಕವಿತ್ತು. ಅದನ್ನು ಕಳೆದುಕೊಳ್ಳುವದು ಹೇಗೆ ? ಆಗ ನನ್ನ ಬಲಗೈಯೊಳಗಿನ ಕೀಟಕವನ್ನು ಒಮ್ಮೆಲೆ ಬಾಯಿಯಲ್ಲಿ ಹಾಕಿ ಕೊಂಡೆನು–ಮೂರನೆಯದರ ಕಡೆಗೆ ಕೈ ಚಾಚಲಿಕ್ಕೆ ! ಆದರೇನು ? ಬಾಯಿಯಲ್ಲಿ ಆ ಕೀಟಕವು ಒಂದು ಅತಿ ಉಗ್ರವಾದ ಉರಿಯುವ ದ್ರವವನ್ನು ಚೆಲ್ಲಿತು. ಅದರಿಂದ ನನ್ನ ನಾಲಿಗೆಯೆಲ್ಲ ಸುಟ್ಟು ಹೋಯಿತು ! ಆ ನೋವಿನ ಉರಿಗೆ ಆ ಕೀಟಕವನ್ನೇ ಉಗುಳಿಬಿಟ್ಟೆನು; ಇತ್ತ ಈ ಗಡಬಿಡಿಯಲ್ಲಿ ಮೂರನೆಯ ಕೀಟಕವನ್ನೂ ಕಳೆದುಕೊಂಡೆನು'–ಈ ಮಾರ್ಮಿಕ ವರ್ಣನೆಯನ್ನು ಡಾರ್ವಿನನೇ ಬರೆದಿಟ್ಟಿದ್ದಾನೆ.

ಕೇಂಬ್ರಿಜದಲ್ಲಿ ಅವನು ಹೊಸತೊಂದು ಪ್ರಭಾವಕ್ಕೆ ಒಳಗಾದನು, ಹೆಂಬೋಲ್ಟ

ಎಂಬ ನಿಸರ್ಗ ವಿಮರ್ಶಕನ 'ವೈಯ್ಯಕ್ತಿಕಕಥನ' ವೆಂಬ ಪುಸ್ತಕವನ್ನು-ಅವನ
ಆತ್ಮವೃತ್ತವನ್ನು-ಡಾರ್ವಿನನು ಓದಿದನು. ಕೂಡಲೇ ಸಸ್ಯ ಮತ್ತು ಜೀವ
ಶಾಸ್ತ್ರಗಳ ಅಭ್ಯಾಸದ ಉತ್ಸಾಹವು ಅವನಲ್ಲಿ ಭುಗಿಲೆದ್ದಿತು. ಅಂಥ
ಶಾಸ್ತ್ರಾಭ್ಯಾಸಿಗಳಂತೆ ತಾನೂ ನಿಸರ್ಗಾವಲೋಕನೆಯ ಸಂಚಾರವನ್ನು ಕೈಗೊಳ್ಳ
ಬೇಕೆಂಬ ಹುಮ್ಮಸು ಅವನಲ್ಲಿ ಹುಟ್ಟಿದ್ದಿತು. ಟೆನೆರೀಫ ಎಂಬಲ್ಲಿಗೆ ಹೋಗಿ
ಬರಲು ಒಂದು ಸಂಗಾಡಿಗಳ ಗುಂಪನ್ನು ಅವನು ಕೂಡಿಸಿದನು. ಅದೇಸಮಯ
ಅವನು ತನ್ನ ಕಾಲೇಜಿನ ಸಸ್ಯಶಾಸ್ತ್ರದ ಪ್ರಾಧ್ಯಾಪಕನಾದ ಹೆನ್‌ಸ್ಲೋ ಎಂಬವನ
ಗೆಳೆತನವನ್ನು ಮಾಡಿ ಕೊಂಡನು. ಈ ಗೆಳೆತನದ ಮೂಲಕ ಡಾರ್ವಿನನ ಗೇಲಿಯು
ಗೆಳೆಯರಲ್ಲಿ ಆಯಿತು. ಡಾರ್ವಿನ ಅಂದರೇನು ? 'ಹೆನ್‌ಸ್ಲೊನೊಡನೆ ತಿರುಗಾಡುವ
ಪ್ರಾಣಿ' ಎಂಬ ವ್ಯಾಖ್ಯಾಯ ವಿನೋದದ ಬಾಯ್ಮಾತಾಯಿತು.

ಆದರೆ ಹೆನ್‌ಸ್ಲೊನೊಡನೆ ತಿರುಗಾಡುವದು ಬರೇ ವಿನೋದಕ್ಕಲ್ಲ. ಡಾರ್ವಿನನಿ
ಅದರಿಂದ ಮಿಗಿಲಾದ ಫಲವು ದೊರೆಯಿತು. ಹೆನಸ್ಲೋನು ಡಾರ್ವಿನನಿ
ಭೂಗರ್ಭಶಾಸ್ತ್ರದ ಉಪನ್ಯಾಸಗಳನ್ನು ಕೇಳಲು ಮನಒಲಿಸಿದನು. ಅದಕ್ಕೂ
ವಿಶೇಷ ಫಲವೆಂದರೆ, 'ಬೀಗ್ಲೀ' ಪರ್ಯಟನದ ಯೋಜನೆಯಲ್ಲಿ ಹೆನ್‌ಸ್ಲೋನ
ಡಾರ್ವಿನನನ್ನು ನಿಸರ್ಗ ವಿಮರ್ಶಕನೆಂದು ನೇಮಿಸಿಕೊಳ್ಳುವಂತೆ ಮಾಡಿದನು
ಕ್ಯಾಪ್ಟನ್ ಕಿಂಗ ಎಂಬವನು ೧೮೨೬ ರಲ್ಲಿ ದಕ್ಷಿಣ ಅಮೇರಿಕೆಯ ದಂಡೆಗಳ ಗುಂ
ನಿರೀಕ್ಷಣೆಯ ಪರ್ಯಟನಕ್ಕಾಗಿ ಬೀಗ್ಲೋ ಎಂಬ ಹಡಗವನ್ನು ಸಜ್ಜುಗೊಳಿಸಿದ್ದನ
ಈ ಜಲ ಪರ್ಯಟನದ ಉದ್ದೇಶವು ಆ ಹೊಸ ಖಂಡದ ಅಜ್ಞಾತ ಕರಾವಳಿಯ
ಪ್ರಾಕೃತಿಕ ಪರಿಚಯವಲ್ಲದೆ, 'ಭೂಗೋಲದ ಸುತ್ತಲು ವಿಶಿಷ್ಟಕಾಲ ಮಾಪ
ಯಂತ್ರೋಪಕರಣಗಳ ಸಹಾಯದಿಂದ ರೇಖಾಂಶಗಳನ್ನು ಅಳೆದು ರೇಖಾವೃತ
ಗಳನ್ನು ಗೊತ್ತು ಮಾಡುವದೂ' ಇದ್ದಿತ್ತು.

ಡಾರ್ವಿನನು ಆಗ ತಾನೆ ವೇಲ್ಸನ ಉತ್ತರ ಪ್ರದೇಶದಿಂದ ಭೌಗರ್ಭಿಕ ನಿರೀಕ್ಷಣೆಯ
ಸಂಚಾರ ಮುಗಿಸಿಕೊಂಡು ಮನೆಗೆ ಮರಳಿದ್ದನು. ಆಗಲೇ ಈ ಬೀಗ್ಲೀ ಪರ್ಯಟ
ಯೋಜನೆಯ ವಿಚಾರವಾಗಿ ಬರೆದ ಹೆನಸ್ಲೋನ ಪತ್ರವು ಡಾರ್ವಿನನ ಕೈ ಸೇರಿತ
'ನಿನ್ನ ಅಯೋಗ್ಯತೆಯ ಕುರಿತು ಏನಾದರೊಂದು ಲಜ್ಜಾವಿನಯದ ಭೀತಿ, ಶಂ
ಗಳನ್ನು ಮುಂದೊಡ್ಡಬೇಡ.' ಹೆನ್‌ಸ್ಲೋ ಬರೆದಿದ್ದನು. 'ಏಕೆಂದರೆ ನ
ಮಾತನ್ನು ನಂಬು. ಅವರು ಹುಡುಕುತ್ತಿರುವ ಯೋಗ್ಯತೆಯ ವ್ಯಕ್ತಿಯು ನೀ
ಎಂಬುವದು ನನಗೆ ಗೊತ್ತು. ಆದ್ದರಿಂದ ನಿನಗೆ ಸೆರೆಹಿಡಿಯಲಿಕ್ಕೆ ಬೇಲೀಫ
ಬಂದು ಹೆಗಲನ್ನು ತಟ್ಟಿದನೆಂದು ತಿಳಿ. ನಿನ್ನ ನಚ್ಚಿನ ಗೆಳೆಯ......'

ಆದರೆ ಡಾರ್ವಿನನ ತಂದೆಯು ಈ ಯೋಜನೆಗೆ ವಿರೋಧವನ್ನು ಒಡ್ಡಿದನು. ಆಗ ಡಾರ್ವಿನನು ತಾನು ಒಪ್ಪಲಾರೆನೆಂದು ಬರೆದು ಕಳಿಸಿದನು. ಆದರೆ, ಅವನ ಸೋದರಮಾವನು ಈ ಹೊಸ ನೇಮಕವನ್ನು ಎತ್ತಿ ಹಿಡಿದನು. ಚಾರ್ಲಸನಿಗೆ ಹೋಗೆಂದು ಹುರುಪಿನಿಂದ ಹುರಿದುಂಬಿಸಿದನು. ಕೊನೆಗೂ ರಾಬರ್ಟ ಡಾರ್ವಿನನ ಸಮ್ಮತಿಯನ್ನು ಗೆದ್ದುಕೊಂಡಿದ್ದಾಯಿತು. ಚಾರ್ಲಸನು ಮರುದಿನವೇ ನಸುಕಿನಲ್ಲಿ ಕೇಂಬ್ರಿಜಕ್ಕಾಗಿ ಹೊರಟನು. ಅಲ್ಲಿ ತನ್ನ 'ಸಚ್ಚಿನ ಬೇಲೀಫ ಗೆಳೆಯ' ಹೆನಸ್ಲೋನನ್ನು ಕಂಡು ಲಂಡನ್ನಿಗೆ ತೆರಳಿದನು. ಅಲ್ಲಿ ಫಿಟ್ಝರಾಯ ಎಂಬ ಕಪ್ತಾನನನ್ನು ಭೆಟ್ಟಿಯಾದನು. ಈ ಕಪ್ತಾನನು ಮುಂದೆ ಡಾರ್ವಿನನ ಸಿದ್ಧಾಂತದ ಅತ್ಯುಗ್ರ ವಿರೋಧಕನಾದನು; ವಿರೋಧಕ್ಕೂ ಮೀರಿದ ವ್ಯಥೆ ಅವನದಿತ್ತು. ಈ ಸಿದ್ಧಾಂತವನ್ನು ಉಂಟುಮಾಡುವದರಲ್ಲಿ ಡಾರ್ವಿನನ ಕಾರ್ಯಕ್ಕೆ ತಾನೆ ಅಪ್ರತ್ಯಕ್ಷ ಹೊಣೆಗಾರನಾದೆನೆಂದೇ ಅವನ ಮಿಗಿಲಾದ ವ್ಯಥೆ. (ಆ ಬೀಗ್ಲೇ ಪರ್ಯಟನದ ಫಲವಾಗಿಯೇ ಡಾರ್ವಿನನಿಗೆ ತನ್ನ ಸಿದ್ಧಾಂತದ ಕಾರ್ಯದಲ್ಲಿ ತುಂಬ ಪ್ರಮಾಣಗಳು ದೊರೆತಿದ್ದವು. ಅಂತೆಯೇ ಫಿಟ್ಝರಾಯನಿಗೆ ಅಷ್ಟು ವ್ಯಥೆ ಅನಿಸಿತು !) ಈ ಕಪ್ತಾನನು ಕೆಲಮಟ್ಟಿಗೆ ಮುಖಸಾಮುದ್ರಿಕ ಬಲ್ಲವನಾಗಿದ್ದನು. ಡಾರ್ವಿನನ ಮುಖಚರ್ಯೆಯನ್ನು ನೋಡಿಯೇ ಆ ಪುಣ್ಯಾತ್ಮನು ಆ ತರುಣ ಶಾಸ್ತ್ರಜ್ಞನ ಕುರಿತು ಅದೇಕ್ಷಣ ತೀವ್ರ ಪ್ರತಿಕೂಲ ಭಾವವನ್ನು ತಾಳಿದನು. ಚಾರ್ಲಸನಿಗಿದ್ದಂಥ ಆಕಾರದ ಮೂಗಿನ ಯಾವನೂ ಜಲಪರ್ಯಟನಕ್ಕೆ ಬೇಕಾದ ಸಾಮರ್ಥ್ಯವನ್ನೂ ನಿರ್ಧಾರವನ್ನೂ ಪಡೆದಿರುವದು ಶಕ್ಯವಿಲ್ಲವೆಂದು ಆತನು ಹೆನಸ್ಲೋನೊಂದಿಗೆ ಉದ್ಗಾರ ತೆಗೆದನು.

೧೮೩೧ ನೇ ವರ್ಷ ಡಿಸೆಂಬರ ೨೭ ನೇ ದಿನ ಡಾರ್ವಿನನು ಬೀಗ್ಲೇ ಹಡಗವನ್ನು ಸೇರಿದನು. ಹಡಗದ ಅಧಿಪತ್ಯ ಕ್ಯಾಪ್ಟನ್‌ಫೀಡರ ರಾಯನದಿತ್ತು. (ಕ್ಯಾಪ್ಟನ್ ಕಿಂಗನು ಇಡೀ ಪರ್ಯಟನ ಯೋಜನೆಯ ಮುಖಂಡನಿದ್ದನು.) ಚಾರ್ಲಸನು ವೇತನವಿಲ್ಲದ ನಿಸರ್ಗ ವಿಮರ್ಶಕನೆಂದು ನೇಮಿಸಲ್ಪಟ್ಟನು. ಹಡಗು ದಕ್ಷಿಣದ ಕಡಲುಗಳಲ್ಲಿ ಸಾಗಿತು.

ಜಲಪರ್ಯಟನವು ೫ ವರ್ಷ ಸಾಗಿತು. ದಕ್ಷಿಣಅಮೇರಿಕೆಯ ದಂಡೆಗಳಲ್ಲದೆ, ತಾಹಿತಿ, ಆಸ್ಟ್ರೇಲಿಯಾ, ನ್ಯೂಝೀಲಂಡ, ತಾಸ್ಮಾನಿಯಾ, ಮಾಲದೀವದ್ವೀಪಗಳು, ಮೋರೀಶಸ್, ಸೆಂಟಹೆಲೇನಾ, ಕೇಪ ವರ್ದೆ ಮುಂತಾದ ಪ್ರದೇಶಗಳನ್ನೆಲ್ಲ ಬೀಗ್ಲೇ ಹಡಗವು ಸುತ್ತಾಡಿ ಬಂದಿತು. ಡಾರ್ವಿನನು ಅದ್ಭುತ ಅನುಭವ ಸಂಪತ್ತಿಯ ಸಂಗ್ರಹವನ್ನು ಕಲೆಹಾಕಿದನು. ಭೂಗರ್ಭಶಾಸ್ತ್ರ, ಪ್ರಾಣಿಶಾಸ್ತ್ರಗಳ, ಪರಿಪೂರ್ಣ

ಪರಿಜ್ಞಾನವನ್ನು ಪಡೆದು ಬಂದನು. ದಕ್ಷಿಣಅಮೇರಿಕೆಯ ಈ ದಂಡೆಗಳಲ್ಲಿ ಕಂಡುಕೊಂಡ, ಎಲಬುಗಲ್ಲುಗಳೂ, ಗಾಲಾಪೆಗೋಸ್ ದ್ವೀಪಗಳಲ್ಲಿಯ ಅಪೂರ್ವ ಪಕ್ಷಿಜೀವನವೂ ಆ ವಿಶಾಲ ಪರ್ಯಟನದಿಂದ ಮನಗಂಡ ಸರ್ವ ಜೀವಿಗಳ ಅನ್ಯೋನ್ಯಾವಲಂಬನದ ವ್ಯಾಪಕವಾದ ಪ್ರಕೃತಿಧರ್ಮವೂ ಡಾರ್ವಿನನ ವಿಚಾರಗಳನ್ನು ಉತ್ಕ್ರಾಂತಿಯ ಕಡೆಗೆ ಹೊರಳಿಸಿದವು.

'ಬೀಗ್ಲೀಯ ಕಡಲ ಪಯಣವು ನನ್ನ ಜೀವನದಲ್ಲಿ ಅತಿ ಮಹತ್ವದ ಘಟನೆಯು. ಅದು ನನ್ನ ಮುಂದಿನ ಜೀವನಕ್ರಮವನ್ನೇ ರೂಪುಗೊಳಿಸಿತು. ನನ್ನ ಮನಸ್ಸಿನ ನಿಜವಾದ ಶಿಕ್ಷಣ ಇಲ್ಲವೆ ಸಂಸ್ಕಾರಕ್ಕಾಗಿ ಮೊತ್ತಮೊದಲು ಆ ಪರ್ಯಟನಕ್ಕೆ ನಾನು ಋಣಿಯಾಗಿದ್ದೇನೆಂಬುದು ನನಗೆ ಯಾವಾಗಲೂ ಅನಿಸಿದೆ. ಪ್ರಕೃತಿಧರ್ಮದ, ವಿಕಾಸಕ್ರಮದ ವಿವಿಧ ಶಾಖೆಗಳನ್ನು ಗಮನಿಸಲು ಅದೇ ಪರ್ಯಟನದಿಂದ ನನಗೆ ಪ್ರೇರಣೆಯಾಯಿತು. ನನ್ನ ನಿರೀಕ್ಷಣ ಶಕ್ತಿಯು, ಈ ಪರ್ಯಟಣದಿಂದ ಪರಿಪಕ್ವವಾಯಿತು.–' ಎಂದು ಡಾರ್ವಿನನು ನಮಗೆ ಹೇಳುತ್ತಾನೆ.

ಪರ್ಯಟನ ಮುಗಿಸಿ ಮರಳಿದ ಮೇಲೆ ಕೆಲ ಕಾಲ ಅವನು ಆ ಪರ್ಯಟನದ ಪರಿಣಾಮಗಳನ್ನು-ಅಂದಿನ ತನ್ನ ಕಾರ್ಯದ ಫಲಿತಗಳನ್ನು,–ಪ್ರಕಟಿಸುವದರಲ್ಲಿ ಮಗ್ನನಾದನು. ೧೮೩೮ ರಲ್ಲಿ ಅವನು ಭೂಗರ್ಭಶಾಸ್ತ್ರಜ್ಞರ ಸಂಘಕ್ಕೆ (ಜಿಯೋಲೊಜಿಕಲ ಸೊಸಾಯಿಟಿ.) ಕಾರ್ಯದರ್ಶಿಯಾಗಿ ನೇಮಿಸಲ್ಪಟ್ಟನು. ಈ ಅಧಿಕಾರದಲ್ಲಿ ಅವನು ೨ ವರ್ಷ ಉಳಿದನು.

೧೮೩೯ ರಲ್ಲಿ ಅವನು ತನ್ನ ಸೋದರಮಾವನ ಮಗಳಾದ ಎಮ್ಮಾ ವೆಜವುಡಳನ್ನು ಮದುವೆಯಾದನು. ನವದಂಪತಿಗಳು ಲಂಡನ್ನಿನಲ್ಲಿ ವಾಸಿಸತೊಡಗಿದರು. ಆದರೆ ದೀರ್ಘಾವಧಿಯ ಶಾರೀರಿಕ ಅಸ್ವಾಸ್ಥ್ಯದ ಮೂಲಕ ಡಾರ್ವಿನನು ಆ ಮಹಾನಗರವನ್ನು ಬಿಡಬೇಕಾಯಿತು. ೧೮೪೨ ರಲ್ಲಿ ಅವನು ಕೆಂಟ ಪ್ರಾಂತದ ಡೌನೆ ಎಂಬಲ್ಲಿ ಹೋಗಿ ವಾಸವಾದನು. 'ಇಲ್ಲಿಯ ಮುಖ್ಯ ಗುಣವೆಂದರೆ ಇದರ ಅತ್ಯಂತ ಗ್ರಾಮೀಣತೆ. ಇದಕ್ಕೂ ಪೂರ್ಣವಾದ ಪ್ರಶಾಂತ ಗ್ರಾಮೀಣ ಆವರಣದಲ್ಲಿ ನಾನು ಎಂದೂ ಉಳಿದಿದ್ದಿಲ್ಲ–' ಎಂದು ಡಾರ್ವಿನನು ಉದ್ಗರಿಸುತ್ತಾನೆ. ಅವನ ಅಸ್ವಾಸ್ಥ್ಯ ಮಲಬದ್ಧತೆಯ ಮೂಲಕವಿತ್ತು. ಜೀವಮಾನವೆಲ್ಲ ಅದು ಅವನನ್ನು ಕಾಡಿತು. ಆದರೂ ಅವನಿಗೆ ತನ್ನ ರೋಗದ ವೇದನೆಗಳನ್ನು ಹೊರಗೆ ಕಾಣಿಸದಿರುವ ರೂಢಿಯಾಗಿತ್ತು.

ಡೌನೆಯಲ್ಲಿಯ ಮೊದಲು ಕೆಲವು ವರ್ಷಗಳಲ್ಲಿ ಅವನು ದಕ್ಷಿಣ ಅಮೇರಿಕೆಯ

ಭೂಸ್ತರಗಳ ಕುರಿತೂ ಜ್ವಾಲಾಮುಖಿ ದ್ವೀಪಗಳ ಕುರಿತೂ ಪ್ರಬಂಧಗಳನ್ನು ಬರೆದನು. ಅದಲ್ಲದೆ, 'ಬಾರ್ನೆಕಲ್' ಎಂಬ ಒಂದು ಜಾತಿಯು ಉತ್ತರ ಧ್ರುವ ಪ್ರದೇಶದ ಬಾತುಕೋಳಿಯಿದೆ. ಅದು ಚಳಿಗಾಲದಲ್ಲೆಲ್ಲ ಬ್ರಿಟಿಶ ನಡುಗಡ್ಡೆಗಳಿಗೆ ಆಶ್ರಯಕ್ಕೆ ಬರುತ್ತದೆ. ಆ ಕೋಳಿಗಳ ಕುರಿತೂ ಅವನು ಒಂದು ನಿಬಂಧವನ್ನು ಪ್ರಕಟಿಸಿದನು. ಇದೆಲ್ಲ ಲೇಖನವು ನಡೆದಿರುವಾಗಲೆ, ಅವನು ತನ್ನ ಭವ್ಯಕೃತಿಯಾದ 'ಉತ್ಕ್ರಾಂತಿ' ತತ್ವದ ಮಹಾಸಿದ್ಧಾಂತವನ್ನು ಯೋಜಿಸುತ್ತ, ನಿರೂಪಿಸುತ್ತ, ರಚಿಸುತ್ತಲಿದ್ದನು. ಆದರೆ ಈ ಉತ್ಕ್ರಾಂತಿ ತತ್ವದಲ್ಲಿ, ಅವನ ಮೂಲನಂಬಿಗೆ ಇದ್ದಿಲ್ಲ. ಆರಂಭದ ವಯಸ್ಸಿನಲ್ಲಿ ಅವನು ಸನಾತನೀ ಮತಗಳನ್ನೇ ಅಂಟಿ ಕೊಂಡಿದ್ದನು. ಇದಕ್ಕೆ ಅವನು ೧೮೩೭ ರಲ್ಲಿ ತನ್ನ ದಿನಚರಿಯಲ್ಲಿ ಒಂದೆಡೆಗೆ ಬರೆದಿಟ್ಟ ಈ ಸಾಲುಗಳೇ ಸಾಕ್ಷಿ :—

'......ಈ ದೇಶವು ಸಮುದ್ರದಿಂದ ಎದ್ದು ನಿಂತಂದಿನಿಂದ ಈ ಪ್ರಾಣಿಗಳ ಸೃಷ್ಟಿ ಆಗಿಲ್ಲವಾದ್ದರಿಂದಲೇ ಅವುಗಳ ಕೊರತೆಯಾಗಿರಬಹುದೆಂದು ಊಹಿಸಿದರೆ ಅಸಂಭವನೀಯವಲ್ಲ.'

ಆದರೆ ಇದು ೧೮೩೭ ರಲ್ಲಿ. ೧೮೪೨ ರಲ್ಲಿ ಅವನು ತನ್ನ 'ನೈಸರ್ಗಿಕ ನಿಶ್ಚಯ'ದ ಸಿದ್ಧಾಂತವನ್ನು ರೂಪಿಸಿದ್ದನು. ಅದರ ಕರಡು ೩೫ ಪುಟಗಳನ್ನು ವ್ಯಾಪಿಸಿತ್ತು. ೧೮೩೮ ರಲ್ಲಿ ಅವನು ಮಾಲ್ಥಸ್ ಎಂಬ ತಜ್ಞನ 'ಜನಸಂಖ್ಯೆ' ಎಂಬ ಪುಸ್ತಕವನ್ನು ಓದಿದನು. ಆ ಓದಿನ ಪ್ರಭಾವವು ಅವನ ಅನುಮಾನಗಳ ಮೇಲೆ ಆಯಿತು. ಆ ಕರಡನ್ನು ಅವನು ಒಮ್ಮೆಲೆ ಪ್ರಕಟಿಸಲಿಲ್ಲ. ಸತ್ಯಪಕ್ಷಪಾತಿಯು ತನಗೆ ತಾನೆ ವೈರಿಯಾಗಿರುತ್ತಾನೆ. ತನಗೆ ತಾನೆ ನಿಷ್ಠುರ ವಿಮರ್ಶಕನಾಗಿರುತ್ತಾನೆ. ಎರಡು ವರ್ಷಗಳ ತನಕ ತನ್ನ ಸಿದ್ಧಾಂತವನ್ನು ತೂಗಿ, ತಿದ್ದಿ, ಸುಧಾರಿಸಿ–ವಿಸ್ತರಿಸಿ ೨೩೦ ಪುಟಗಳನ್ನು ತುಂಬುವ ಕರಡನ್ನು ಡಾರ್ವಿನನು ಬರೆದನು ! ಅನಂತರ ಅವನು ಪ್ರಮಾಣಗಳನ್ನು ಕಲೆಹಾಕಹತ್ತಿದನು; ಕಷ್ಟಕರವಾದ ಪ್ರಯೋಗಗಳನ್ನು ಮಾಡತೊಡಗಿದನು; ಹಕ್ಕಿಗಳ ಎಲುವಿನ ಹಂದರಗಳನ್ನು ಹೊಂದಿಸಿ ಸರಿಗೂಡಿಸ ಲಾರಂಭಿಸಿದನು; ಪಾರಿವಾಳಗಳ ಪೀಳಿಗೆಗಳ ಮೇಲೆ ಪ್ರಯೋಗಗಳನ್ನು ಸುರು ಮಾಡಿದನು. ಸಸ್ಯ ಸಂತತಿಯ ಮೂಲವಾದ ಬೀಜಗಳ ಸಾಗಿಗೆಯ ವಿಚಾರವಾಗಿ ಪರಿಶೀಲನೆಗೆ ಮೊದಲು ಮಾಡಿದನು;—ಇಷ್ಟೆಲ್ಲ ನಡೆಯುವಾಗಲೆ ತನ್ನ ಮಿತ್ರ ರೊಂದಿಗೆ ಬೆಲೆಯುಳ್ಳ ಪತ್ರವ್ಯವಹಾರವನ್ನು ನಡೆಯಿಸುತ್ತಲೆ ಇದ್ದನು. ಈ ಮಿತ್ರರೆಂದರೆ ಲಿಯೆಲ್ ಎಂಬ ಹಿರಿಯ ಭೂಗರ್ಭಶಾಸ್ತ್ರಜ್ಞ. ಮತ್ತೂ ಹೂಕರ ಹಾಗೂ ಅಸಾಗ್ರೇ ಎಂಬ ಸಸ್ಯಶಾಸ್ತ್ರಜ್ಞರು. ಕೊನೆಗೆ ೧೮೫೬ ರಲ್ಲಿ ಲಿಯೆಲ್‌ನು ಡಾರ್ವಿನನಿಗೆ ಅವನ ಸಂಶೋಧನದ ಫಲಿತಾಂಶಗಳನ್ನು ಪ್ರಕಟಿಸಲು ಕೇಳಿಕೊಂಡನು. ಡಾರ್ವಿನನು ಅವುಗಳನ್ನು ಬರೆದು ತೆಗೆಯಲು ತೊಡಗಿದನು.

ಆನಂತರ ಒಂದು ಮುಂಜಾನೆ, ಡಾರ್ವಿನನಿಗೆ ಒಂದು ಪತ್ರವು ಬಂದಿತು. ಆ ಪತ್ರದ ಮೇಲೆ ಮಲಾಯಾ ಸರಕಾರದ ಸ್ಟಾಂಪು ಇತ್ತು. ಅಲ್ಲಿ ಹೋಗಿದ್ದ ಒಬ್ಬ ವಿಖ್ಯಾತ ಬ್ರಿಟಿಶ ನಿಸರ್ಗ ಸಂಶೋಧಕ ಮತ್ತೂ ಶೋಧಸಂಚಾರಿಯೂ ಆ ಪತ್ರವನ್ನು ಬರೆದಿದ್ದನು. ಅವನ ಹೆಸರು ಆಲ್ಫ್ರೆಡರಸೆಲ್ ವಾಲೇಸ. ಆ ಪತ್ರದಲ್ಲಿ ಬರೆದದ್ದಾದರೂ ಏನು ? ಡಾರ್ವಿನನು ಬರೆಯಲು ತೊಡಗಿರುವ ತತ್ವವನ್ನೇ ನಿರೂಪಿಸುವ ನಿಬಂಧವು ಆ ಪತ್ರದಲ್ಲಿ ಇತ್ತು ! 'ಇದಕ್ಕೂ ಮಿಗಿಲಾದ ಯೋಗಾಯೋಗ ನಾನು ಎಂದೂ ನೋಡಿದ್ದಿಲ್ಲ !' ಎಂದು ಡಾರ್ವಿನ ಉದ್ಗರಿಸುತ್ತಾನೆ. 'ಆಲ್ಫ್ರೆಡ್‌ವಾಲೇಸನ ಬಳಿಗೆ ನಾನು ೧೮೪೨ ರಲ್ಲಿ ಬರೆದ ಕರಡು ಇದ್ದಿದ್ದರೆ ಕೂಡ ಇದಕ್ಕಿಂತ ಉತ್ತಮ ಸಾರಾಂಶವನ್ನು ಅವನು ನಿರೂಪಿಸುತ್ತಿರಲಿಲ್ಲ !' ಎರಡು ಮಹಾ ಪ್ರಜ್ಞೆಗಳು ಒಂದೇ ಜಿಜ್ಞಾಸೆಗೆ ತಾಗಿ, ಒಂದೇ ಅಭ್ಯಾಸದಲ್ಲಿ ಸಾಗಿ ಒಂದೇ ಸಿದ್ಧಾಂತಕ್ಕೆ ತಲ್ಪಿದ್ದು ಒಂದು ಕೌತುಕವಾದರೂ, ಪ್ರತಿಭಾ ಪ್ರಪಂಚದ ವ್ಯಾಪಾರದಲ್ಲಿ ಅದು ಸೋಜಿಗವಲ್ಲ.

ಆದರೆ ಡಾರ್ವಿನ್‌ನಿಗೆ ಈ ಹೊಸ ಘಟನೆಯಿಂದ ದಿಗ್ಭ್ರಮೆಗೊಂಡಂತಾಯಿತು. ವಾಲೇಸನು ತನ್ನ ನಿಬಂಧವನ್ನಷ್ಟೇ ಡಾರ್ವಿನನ ನಿದರ್ಶನಕ್ಕೆ ತಂದನು; ಆ ಸಿದ್ಧಾಂತದ ಪ್ರಕಟನೆಯ ಕುರಿತು ಏನನ್ನೂ ಹೇಳಲಿಲ್ಲ. ಆದರೆ ಡಾರ್ವಿನನು ಪ್ರಾಜ್ಞನು, ಪ್ರಾಮಾಣಿಕನು. ಆಲ್ಫ್ರೆಡ ವಾಲೇಸನೂ ಅದೇ ಕ್ಷೇತ್ರದಲ್ಲಿ ಕಾರ್ಯ ಮಾಡುತ್ತಿರುವನೆಂದು ಅಂತರಂಗವಾಗಿ ತಿಳಿದೂ, ತನ್ನ ಕಾರ್ಯದ ಫಲಿತಾಂಶವನ್ನಷ್ಟೇ ತಾನೊಬ್ಬನೇ ಆ ಕ್ಷೇತ್ರದಲ್ಲಿ ಸಂಶೋಧಕನೆಂಬ ಹೆಮ್ಮೆಯಿಂದ ಕೂಡಲೇ ಪ್ರಕಟಿಸುವದು ಡಾರ್ವಿನನಿಗೆ ಅಪ್ರಾಮಾಣಿಕವೆನಿಸಿತು. ವಾಲೇಸನನ್ನು ವಂಚಿಸಿದಂತೆ ಎಂದೆನಿಸಿತು. ಆಗ ತಾನು ಏನು ಮಾಡಬೇಕೆಂದು ಆತನು ತನ್ನ ವಿದ್ವನ್ಮಿತ್ರ ಲಿಯೆಲ್ ಹೂಕರರನ್ನು ಕೇಳಿದನು.

ಆ ಮಿತ್ರರು ಈ ಉಭಯ ಸಂಕಟದಿಂದ ಪಾರಾಗುವ ದಾರಿಯನ್ನು ತೋರಿಸಿದರು. ಡಾರ್ವಿನ ವಾಲೇಸ ಇಬ್ಬರೂ ತಮ್ಮ ತಮ್ಮ ಸಿದ್ಧಾಂತಗಳನ್ನು ಏಕಕಾಲಕ್ಕೆ ಪ್ರಕಟಿಸಬೇಕು. ಹೆಚ್ಚು ಕಡಿಮೆ ಅದೇ ದಾರಿಯಿಂದ ಡಾರ್ವಿನ ನಡೆದನು. ವಾಲೇಸನ ನಿಬಂಧದ ಪ್ರಕಟ ವಾಚನವಾಯಿತು. ಅದರೊಂದಿಗೆ ಡಾರ್ವಿನನ ಒಂದು ಪತ್ರವನ್ನೂ ಅದೇ ಸಭೆಯಲ್ಲಿ ಓದಲಾಯಿತು. ಆ ಪತ್ರವನ್ನು ಡಾರ್ವಿನನು ಅಸಾಗ್ರೇಗೆ ಬರೆದಿದ್ದನು. ಆ ಪತ್ರದ ತಾರೀಖು ಸೆಪ್ಟೆಂಬರ ೧೮೫೭. ಆ ಪತ್ರದಲ್ಲಿ ಅವನ ಸಿದ್ಧಾಂತದ ರೂಪರೇಖೆ ಬಂದಿತ್ತು; ಜತೆಗೆ ಅವನು ೧೮೪೪ ರಲ್ಲಿ ಬರೆದ ಪ್ರಬಂಧದ ಮಹತ್ವದ ಅಂಶಗಳನ್ನು ಆಯ್ದುಕೊಡಲಾಗಿತ್ತು.

ಈ ಪ್ರಕಟೀಕರಣವಾದಮೇಲೆ, ಡಾರ್ವಿನನು ತನ್ನ ಗ್ರಂಥದ ಕಾರ್ಯಕ್ಕೆ ಬೆನ್ನು ಹತ್ತಿದನು. ಆ ಕೆಲಸ ಕಠಿಣವಿತ್ತು, ಮಂದವಾಗಿ ಮುಂದುವರಿಯುತ್ತಿತ್ತು. ಡಾರ್ವಿನನಿಗೆ ಪ್ರಯೋಗಗಳನ್ನು ಮಾಡುವದೆಂದರೆ ಬಲು ಪ್ರೀತಿ; ಆದರೆ ಅವುಗಳ ವಿವರ ವಿದ್ಯಮಾನಗಳನ್ನು ಬರೆದು ತೆಗೆಯುವದೆಂದರೆ ಅಷ್ಟೇ ತಲೆಬೇಸರ. ಬೇಸರವಿಲ್ಲದಿದ್ದಾಗ, ಬರೆಯಲು ಕೂತಾಗೆಲ್ಲ ಅವನ ಬೇನೆ ಬೇರೆ. ಕೊನೆಗೆ ಗ್ರಂಥವು ಪೂರ್ತಿ ಆಯಿತು. ೧೮೫೯ ರ ಸೆಪ್ಟೆಂಬರ ೧೧ ನೇ ದಿನ ಅವನು ಲೇಖನ ಸಮಾಪ್ತಿಯನ್ನು ಮಾಡಿದನು. 'ಅಬ್ಬಬ್ಬ, ದೇವರೆ! ಓದಿ ವಿಷಯುವನ್ನೆ, ಇನ್ನು ಮನಸ್ಸಿನಿಂದ ಹೊರದೂಡಿದ್ದರಿಂದ ಮಿದುಳಿಗೂ ಮೈಗೂ, ಏನು ಸುಖ!'– ಎಂದು ಡಾರ್ವಿನನಂಥವನೂ ಮುಗಿಸಿ ಮನವಾರೆ ಶ್ರಮಪರಿಹಾರದ ಸುಖದ ಉಸಿರು ಎಳೆದನು.

ಡಾರ್ವಿನನು ಎಂದಿಗೂ ಅಜ್ಞಾವಿನಯಶೀಲನಾಗಿದ್ದನು. ತನ್ನ ಎಲ್ಲ ಪರಿಶ್ರಮದ ಪರಿಣಾಮವನ್ನು ಅವನು ಹೆದರುತ್ತಲೇ ಹಿಂದೆ ಮುಂದೆ ನೋಡುತ್ತಲೇ ಪ್ರಕಟಿಸಿದನು. ಒಮ್ಮೆ ಒಂದು ಪ್ರತಿಯೊಂದಿಗೆ ಅವನು ಹೀಗೆ ಬರೆದು ಕಳಿಸಿದ್ದು ಉಂಟು :–

'ಒಂದೊಂದು ವಿಷಯುವನ್ನು ವರ್ಷಗಟ್ಲೆ ಅಭ್ಯಾಸಿಸಿ ಅತ್ಯಂತ ಮೂರ್ಖ ಸಿದ್ಧಾಂತಗಳ ಸತ್ಯತೆಯನ್ನು ಕೂಡ ತಿಳಿದುಕೊಂಡೆವೆಂದು ತಮ್ಮನ್ನೇ ನಂಬಿಕೊಂಡ ಅನೇಕ ಜನರ ಉದಾಹರಣೆಗಳನ್ನು ಕುರಿತು ವಿಚಾರಮಾಡಿದಾಗೆಲ್ಲ, ನಾನೂ ಅಂಥ ಒಗ್ಗುಳಿಯಾದ ಹುಚ್ಚನಲ್ಲವಷ್ಟೇ-ಎಂದು ನಾನು ಕೆಲವು ಸಲ ಸ್ವಲ್ಪ ಅಂಜುತ್ತೇನೆ!' ತನ್ನ ಕುರಿತು ಇಷ್ಟೊಂದು ಅಲಿಪ್ತವೃತ್ತಿಯಿಂದ ನೋಡುವ, ನುಡಿಯುವ ಶಕ್ತಿಯು ಸತ್ಯ ಶೋಧಕನಿಗಲ್ಲದೆ ಇನ್ನಾರಿಗೆ ?

'ಪ್ರಾಣಜಾತಿಗಳ ಉಗಮ' ಎಂಬ ಅವನ ಆದ್ಯಗ್ರಂಥವು ೧೮೫೯ ನೇ ವರ್ಷ ಪ್ರಕಟವಾಯಿತು. ಮೊದಲನೆಯ ಆವೃತ್ತಿಯ ೧೨೫೦ ಪ್ರತಿಗಳೆಲ್ಲ ಪ್ರಕಟನೆಯ ದಿನವೇ ಮಾರಿಹೋದವು! ಯಾವ ಕಾದಂಬರಿ ಇಂಥ ಮನ್ನಣೆಯನ್ನು ಪಡೆದದ್ದುಂಟು ? ಆ ಗ್ರಂಥವು ವಾದ-ಪ್ರತಿವಾದದ ಮಹಾ ಬಿರುಗಾಳಿಯ ನ್ನೆಬ್ಬಿಸಿತು! ವಿಶ್ವೋತ್ಪತ್ತಿ ವರ್ಣನೆಯನ್ನು ಜೀವಜಾತದ ಪ್ರತ್ಯೇಕ ಸೃಷ್ಟಿಯನ್ನು ನಂಬುವವರು ಈ ಗ್ರಂಥದ ಮೇಲೆ ಮುರಿದುಬಿದ್ದರು; ಮತ್ತು ವಿಜ್ಞಾನಿಗಳೆಲ್ಲರೂ ಗ್ರಂಥದ ರಕ್ಷಣೆಗಾಗಿ ಪ್ರತಿದಾಳಿ ಹೂಡಲು ಮುಂದುವರಿದರು. ಈ ಕಾಳಗವು ಬಹಳ ವರ್ಷ ನಡೆಯಿತು. ಆದರೂ ಡಾರ್ವಿನನಿಗೆ ಇಷ್ಟವಿದ್ದ ವರ್ಗಗಳಲ್ಲಿ ಸಾಕಷ್ಟು ಅನುಯಾಯಿಗಳೂ ಅಭಿಮಾನಿಗಳೂ ದೊರೆತರು.

ತನ್ನ ಹೊಸ ಸಿದ್ಧಾಂತಕ್ಕೆ ಈ ಕೆಳಗೆ ಕೊಟ್ಟ ಅನುಯಾಯಿಗಳೂ ಬೆಂಬಲಿಗರೂ ದೊರೆತರೆಂದು ಬೆರಗಿನಿಂದಲೂ ಹಿಗ್ಗಿನಿಂದಲೂ ಡಾರ್ವಿನನು ಹೂಕರನಿಗೆ ಪತ್ರಬರೆದು ಈ ಹೆಸರುಗಳ ಪರಿವಿಡಿಯನ್ನು ಕಳಿಸಿದನು. ಪರಿವಿಡಿಯೊಳಗಿನ ಹೆಸರುಗಳು ಅಂದಿನ ವಿದ್ವಾನರ ಮತ್ತು ವ್ಯಾಸಂಗಿಗಳ ಪ್ರಪಂಚಕ್ಕೆ ಒಳ್ಳೇ ಪ್ರಭಾವಿಯಾಗಿ ತೋರಿದವು.

ಲಿಯೆಲ್ಲ, ರಾಮುಸೆ, ಜ್ಯೂಲ್ಸ, ರೋಜರ್ಸ–ಎಂಬ ಭೂಗರ್ಭಶಾಸ್ತ್ರಜ್ಞರು. ಹಕ್ಸಲೇ, ಲುಬ್ಬೊಕ, ಜೆನಿನ್ಸ, (ಬಹಳ ಮಟ್ಟಿಗೆ) ಸ್ಕಾರ್ಲವುಡ,–ಎಂಬ ಪ್ರಾಣಿ ಶಾಸ್ತ್ರಜ್ಞರು. ಕಾರ್ಪೆಂಜರ, ಸರ ಹಾಲಂಡ (ಬಹಳ ಮಟ್ಟಿಗೆ)–ಎಂಬ ಶರೀರ ಶಾಸ್ತ್ರಜ್ಞರು. ಹೂಕರ, ವಾಟ್ಸನ್, ಅಸಾಗ್ರೇ (ಕೆಲ ಮಟ್ಟಿಗೆ) ಡಾ. ಬೂಟ್ಟ (ಕೆಲಮಟ್ಟಿಗೆ)–ಎಂಬ ಸಸ್ಯಶಾಸ್ತ್ರಜ್ಞರು.

ಡಾರ್ವಿನ್‌ನ 'ವಿದ್ವಜ್ಜನ ಪರಿಶ್ರಮ'ವನ್ನು ತಿಳಿಯಬಲ್ಲ ವಿದ್ವಾನರಿವರು. ಆದರೆ ಅವನು ಕೇವಲ ಈ ಮಹಾಮೇಧಾವಿಗಳ ಬೆಂಬಲವನ್ನೇ ನಂಬಿದ್ದಿಲ್ಲ. ಸತ್ಯದ ಹಂಬಲವೇ ಅವನ ನಂಬಿಗೆಯ ಅಳಿವ ಲಂಗರು ಆಗಿತ್ತು!

ಈ ಉತ್ಕ್ರಾಂತಿವಾದದ ಮೂಲಕ ಉಂಟಾದ ಕೋಲಾಹಲದ ಒಂದು ಮಾದರಿಯ ಉದಾಹರಣೆಯು ತುಂಬ ನಾಟ್ಯಮಯವಿದೆ. ಅದು ಜರುಗಿದ್ದೂ ಅತಿ ಮಹತ್ವದ ಪ್ರಸಂಗದಲ್ಲಿಯೇ–೧೮೬೦ ನೆಯ ವರ್ಷ ಜೂನ ತಿಂಗಳ ಕೊನೆಯ ದಿನ. ಆಕ್ಸಫೋರ್ಡಿನಲ್ಲಿ ವಿಖ್ಯಾತ ಬ್ರಿಟಿಶ ಅಸೋಶಿಯೇಶನ್‌ದ ಸಭೆಯೇ ಆ ದೃಶ್ಯದ ನಾಟ್ಯರಂಗ. ಸಭೆ ಕೂಡಿದ ಕಾರಣ, ಡಾರ್ವಿನನ 'ಪ್ರಾಣಿಜಾತಿಗಳ ಉಗಮ.' ಎಂಬ ಮಹಾಗ್ರಂಥದ ಜಾಹೀರು ಪ್ರಕಟಣೆ. ಸಭೆಗೆ ಡಾರ್ವಿನನು ಬಂದಿದ್ದಿಲ್ಲ. ಅವನ ಉಗ್ರ ಪ್ರತಿವಾದಿಗಳು ಅವನ ವಿರುದ್ಧ (ಅಂದರೆ ಅವನ ಸಿದ್ಧಾಂತದ ವಿರುದ್ಧ) ದೊಡ್ಡದಾಳಿಯ ವ್ಯೂಹವನ್ನೇ ಹೂಡಲಿದ್ದರು. ಈ ದಾಳಿಯ ದಂಡ ನಾಯಕನು ಆಕ್ಸಫೋರ್ಡದ ಮುಖ್ಯ ಧರ್ಮಗುರು ಬಿಷಪ್ ವಿಲ್ಬರಫೋರ್ಸನೆ ಆಗಿದ್ದನು. ವ್ಯಾಸಪೀಠದ ಮೇಲೆ ಡಾರ್ವಿನನ ಸಮರ್ಥನೆಗಾಗಿ ಅವನ ಪಕ್ಷದ ಸಂರಕ್ಷಣೆಗಾಗಿ ಹೂಕರ–ಹಕ್ಸಲೆ ಇವರೀರ್ವರೂ ಮಹಾಶಾಸ್ತ್ರಜ್ಞರು ಕೂತಿದ್ದರು ಸಜ್ಜಾಗಿ. ಸಭೆಯ ವಾತಾವರಣದಲ್ಲಿ ಉತ್ಸುಕತೆಯ ಮಿಂಚು ಸಂಚರಿಸಿತ್ತು. ಎಲ್ಲೆ ಡೆಯಲ್ಲಿಯೂ ಆವೇಶ ಉದ್ರೇಕಗಳು ಅತಿರೇಕವಾಗಿ ಕಂಡು ಬರುತ್ತಿದ್ದವು. ಮೊದಲು ಸಭೆ ಕೂಡಬೇಕೆಂದು ಗೊತ್ತುಪಡಿಸಿದ ಸಭಾಗೃಹವು ಜನಸಂದಣಿಗೆ ಕಿರಿದಾಗಿ, ಸಭೆಯನ್ನು ಗ್ರಂಥಾಲಯದ ಭವ್ಯಶಾಲೆಗೆ ಒಯ್ಯಲಾಯಿತು.

ಅಲ್ಲಿಯೂ ಈ ವಾಗ್ಯುದ್ಧದ ವಿದ್ವದ್ವೀರರು ತಮ್ಮ ದಲಬಲದೊಡನೆ ಬರುವ ಮೊದಲೆ, ಪ್ರಚಂಡ ಜನಸಮೂಹವು ಕಿಕ್ಕಿರಿದು ತುಂಬಿತ್ತು.

ಸಭೆಯು ಆರಂಭವಾಯಿತು. ಬಿಷಪ್ ವಿಲ್ಬರಫೋರ್ಸನು ಸಮಯಕ್ಕೆ ಸರಿಯಾಗಿ ಭಾಷಣಕ್ಕೆ ಎದ್ದು ನಿಂತನು. ಪೂರ್ತಿ ಅರ್ಧ ತಾಸು ಅವನು ಅಪ್ರತಿಮ ಆವೇಶ ಮತ್ತು ಶೂನ್ಯ ಆಡಂಬರದೊಡನೆ ಮಾತಾಡಿದನು. ಪ್ರತ್ಯಕ್ಷ ಜ್ಞಾನವಿಲ್ಲದ ಅಭಿಪ್ರಾಯಗಳನ್ನು ಕಂಠಪಾಠ ಮಾಡಿಸಿ ಯಾರೋ ತುಂಬಿದ್ದಾರೆಂದು ಅವನು ಆ ವಿಷಯವನ್ನು ಮಾತನಾಡುವಾಗಲೇ ಸ್ಪಷ್ಟವಾಗುತ್ತಿತ್ತು. ತನ್ನ ಆ ಸಿದ್ಧಭಾಷಣದ ಕೊನೆಗೆ ಅವನು ಪಕ್ಕದಲ್ಲಿ ಕೂತ ಹಕ್ಸಲೆಯ ಕಡೆಗೆ ಹೊರಳಿದನು; ಮತ್ತು ನಂಜಿನ ನಗೆಯಲ್ಲಿ ಅಣಕವಾಡುತ್ತ ಕೇಳಿದನು. 'ಸ್ವಾಮಿ, ತಾವು ಮಂಗನಿಂದ ಇಳಿದು ಬಂದಿರುವಿರೆಂದು ಸಾಧಿಸುತ್ತೀರಿ. ಈ ಕಪಿವಂಶವು ಬಂದದ್ದು ತಮ್ಮ ಅಜ್ಜನ ಕುಲದಿಂದಲೋ ಅಜ್ಜಿಯ ಕುಲದಿಂದಲೋ ?' ಡಾರ್ವಿನನ ಅಭಿಪ್ರಾಯಗಳು ಬೈಬಲದ ದೈವೀವಾಣಿಗೆ ವಿರುದ್ಧವಾಗಿವೆಯೆಂದು ಸಾರಿ ತನ್ನ ಭಾಷಣವನ್ನು ಮುಗಿಸಿದನು. ಆಮೇಲೆ ತನ್ನ ಪ್ರತಿಭೆಗೆ ತಾನೆ ಪ್ರಸನ್ನನಾಗಿ ತಲೆದೂಗುತ್ತ, ಅಲ್ಲಿ ಕಲೆತ ಅನೇಕ ಧರ್ಮಗುರುಗಳ ಚಪ್ಪಾಳೆಗಳಿಗೆ ಸಂತೋಷಪಡುತ್ತ, ಹಲವು ಭಾವಿಕ ಮಹಿಳೆಯರು ಹರ್ಷದಿಂದ ಹಾರಾಡಿಸಿದ ಕರವಸ್ತ್ರಗಳನ್ನು ಕಂಡು ಲೋಕಾಭಿರಾಮನಾಗಿ ನಗುತ್ತ, ತನ್ನ ಸ್ಥಳದಲ್ಲಿ ಹೋಗಿ ಕೂತನು.

ಹಕ್ಸಲೆಯು ಬಿಷಪನ ಕೋಪಾಟೋಪದ ಮಾತುಗಳನ್ನೆಲ್ಲ ಕೇಳುತ್ತ ತನ್ನ ಅಂಗೈಗಳಿಂದ ತೊಡೆಬಡೆದುಕೊಳ್ಳುತ್ತ ಅಂದನು. 'ದೇವರೇ ಇವನನ್ನು ನನ್ನ ಕೈಗೆ ಒಡ್ಡಿದ್ದಾನೆ !' ಬಿಷಪನ ಭೀಷಣ ಭಾಷಣ ಮುಗಿದೊಡನೆ ಸಭೆಯಲ್ಲೆಲ್ಲ ಹಕ್ಸಲೆಯ ಹೆಸರಿನ ಕೂಗುಗಳ ಕಲ್ಲೋಲವೆದ್ದಿತು. ಆದರೂ ಅಧ್ಯಕ್ಷರೇ ತನ್ನನ್ನು ಭಾಷಣಕ್ಕಾಗಿ ಕರೆಯುವತನಕ ಅವನು ಸುಮ್ಮನೆ ಕೂತನು. ಅಧ್ಯಕ್ಷರ ಕರೆ ಆದೊಡನೆ ಹಕ್ಸಲೆ ತನ್ನ ಎಂದಿನ ಹರಿತವಾದ ದನಿಯಲ್ಲಿ 'ನಾನು ಇಲ್ಲಿ ನಿಂತದ್ದು ಕೇವಲ ವಿಜ್ಞಾನದ ಹಿತಕ್ಕಾಗಿ. ನನ್ನ ಆ ಸನ್ಮಾನ್ಯ ಕಕ್ಷಿಗಾರನ ಪಕ್ಷಕ್ಕೆ ಹಾನಿಯಾಗುವಂತಹ ಯಾವ ಮಾತನ್ನೂ ನಾನು ಈಗ ಕೇಳಿಲ್ಲ.' ಈ ವಾಕ್ಯಗಳಿಂದ ಮೊದಲು ಮಾಡಿ ಅವನು, ಬಿಷಪ ವಿಲ್ಬರಫೋರ್ಸನು ಈ ವಾದವಿವಾದದಲ್ಲಿ ಬಾಯಿಹಾಕಲು ಎಷ್ಟು ಅಯೋಗ್ಯನೂ ಅನಧಿಕಾರಿಯೂ ಎಂಬುದನ್ನೂ ಸಿದ್ಧಮಾಡಿದನು. ಅನಂತರ ಸೃಷ್ಟಿಯ ಉತ್ಪತ್ತಿಯ ಪ್ರಶ್ನೆಯನ್ನೂ ಅವನು ಉಲ್ಲೇಖಿಸಿದನು. 'ಉತ್ಕ್ರಾಂತಿ ವಿಕಾಸವು ದೇವರನ್ನೂ ಓಡಿಸುತ್ತದೆಂದು ನೀವು ಅನ್ನುವಿರಿ. ಆದರೆ ನೋಡಿ, ದೇವರೇ ನಿಮ್ಮನ್ನುಂಟುಮಾಡಿದನೆಂದು ನೀವು ಒತ್ತಿ ಹೇಳುವಿರಿ. ಆದರೂ ನೀವು

ಮೂಲದಲ್ಲಿ ಒಂದು ಚಿಕ್ಕ ಬಿಂದುವಷ್ಟು, ಈ ಚಿನ್ನದ ಪೇನ್ಸಿಲ್ಲಿನ ತುದಿಯು ಮನೆಯಷ್ಟು 'ದೊಡ್ಡ' ಮಾಂಸದ ತುಂಡಾಗಿದ್ದಿರೆಂಬುವದನ್ನು ನೀವು ಬಲ್ಲಿರಿ!' ಹೀಗೆಯೇ ಮುಂದರಿಯುತ್ತ ಅವನು ಕಪಿವಂಶದ ಮೂಡಲಿಕೆಯ ಪ್ರಶ್ನೆಗೆ ಬಂದನು. ಅದಕ್ಕೆ ಅವನು ಅಲ್ಲಿ ಕೊಟ್ಟ ಉತ್ತರವು ಮಾತುಗಾರಿಕೆಯ ಇತಿಹಾಸದಲ್ಲಿಯೇ ಸುಪ್ರಸಿದ್ಧವಾಗಿದೆ. ಆ 'ಸಾಬೂನುಸ್ಯಾಮ'ನ ತಂದೆ ಸ್ಯಾಮ್ಯುಅಲ ವಿಲ್ಬರಫೋರ್ಸನು ಒಬ್ಬ ಕುಪ್ರಸಿದ್ಧ 'ದೊಡ್ಡ ಮನುಷ್ಯ'ನಾಗಿದ್ದನು. ಆ ಸಂಗತಿಯನ್ನು ಅನ್ವಯಿಸಿ ಹಕ್ಸಲೆ ಉದ್ಗರಿಸಿದನು:-'ನಾನು ಮಂಗನನ್ನೇ ನನ್ನ ಪೂರ್ವಜನೆಂದು ಒಪ್ಪಿಕೊಳ್ಳುವದು ಲೇಸೆಂದು ಎಣಿಸುವೆನು. ಆ ಉಗಮದಿಂದ ಹುಟ್ಟಿಬಂದೆನೆಂಬುದಕ್ಕೆ ನನಗೆ ನಾಚಿಕೆ ಎನಿಸುವದಿಲ್ಲ. ಆದರೆ ಯಾವನು ತನ್ನ ಸಂಸ್ಕೃತಿಯ ಮತ್ತು ವಾಗ್ಮಿತೆಯ ಶಕ್ತಿಯನ್ನೆಲ್ಲ ಮೂಢಭಾವನೆಯ ಹಾಗೂ ಅಸತ್ಯದ ಸೇವೆಗಾಗಿ ದುರುಪಯೋಗಕ್ಕೆ ಒಡ್ಡಿದನೋ, ಅಂಥವನಿಂದ ಹುಟ್ಟಿದೆನೆಂದು ಅಂದರೆ ನನಗೆ ನಾಚಿಕೆಯೇ ಅನಿಸೀತು!'

ಈ ಮಾತು ಮುಗಿದದ್ದೇ ತಡ. ಸಭೆಯಲ್ಲಿ ಒಮ್ಮೆಲೇ ಮಹಾ ಕೋಲಾಹಲವೆದ್ದಿತು. ಬಿಷಪನು ತನ್ನ ಹೇಡಿವಾಡಿಕೆಯಂತೆ, ಹೀಗೆ ಇದುರಾಳಿಯ ಮರ್ಮಘಾತಕ್ಕೆ ತುತ್ತಾದಾಗ ದೇಶಾವರಿಯ ಹಾಸ್ಯ ಮಾಡಿ ಹಲ್ಲು ಕಿರಿದನು. ಆದರೆ ಸಭೆಯ ಜನರೆಲ್ಲ ಜಗ್ಗನೆ ಎದ್ದುನಿಂತು ನಿಷೇಧದಿಂದ ಕೂಗಾಡಿದರು. ಸಂತೋಷದಿಂದ ಕೈತಟ್ಟಿ ಕೇಕೆ ಹಾಕಿದರು. ಲೇಡಿಬ್ರ್ಯೂಸ್ಟರಳೆಂಬ ಮಹಿಳೆಯು ಅಲ್ಲಿಯೇ ಎಚ್ಚರತಪ್ಪಿ ಬಿದ್ದು ಎಂದೂ ಇಲ್ಲದ ಮುಂದೂ ಇಲ್ಲದ ಖ್ಯಾತಿಯನ್ನು ಗಳಿಸಿದಳು. ಆಕೆಯನ್ನು ಎತ್ತಿ ಹೊರಗೆ ಒಯ್ಯಬೇಕಾಯಿತು. ಧರ್ಮಗುರುಗಳ ಕರಿನಿಲುವಂಗಿಗಳ ಕಾರ್ಮೋಡಗಳಿಂದ ಅತ್ಯಂತ ಅಪವಿತ್ರ ಸಿಟ್ಟಿನ ಸಿಡಿಲು, ಗುಡುಗು ಕೇಳಬರತೊಡಗಿತು!

ಸಾಕಷ್ಟು ಶಾಂತತೆಯು ಮತ್ತೆ ಸ್ಥಾಪಿತವಾದೊಡನೆಯೇ ಮುಂದಿನ ಮಾತುಗಾರನು ಮುಂದೆ ಬಂದನು. ಅವನು ಮತ್ತಾರೂ ಅಲ್ಲ. ನಮ್ಮ ಹಳೆಯ ಪರಿಚಯದ ಬೀಗ್ಲೇಯ ಕಪ್ತಾನ (ಈಗ ಎಡ್ಮಿರಲ್) ಫಿಟ್ಝರಾಯನೇ! ಅವನಿಗೆ ಎಲ್ಲೂ ಹಿಡಿಸದಷ್ಟು ಕೋಪ, ಕೋಪಕ್ಕೂ ಹೆಚ್ಚು ಲಜ್ಜಾಭಯ! ಡಾರ್ವಿನನು ಇಂಥ ಪಾಖಂಡತನವನ್ನು ಉಂಟುಮಾಡಿದ ಉತ್ಪಾತಕ್ಕೆ ತಾನೇ ಅಪ್ರತ್ಯಕ್ಷ ಆದಿಕಾರಣನೆಂದು ಆತನ ದೃಢವಾದ ಗ್ರಹಿಕೆ. ಅದಕ್ಕಾಗಿ ಅವನಿಗೆ ಪ್ರಚಂಡ ಸಾತ್ವಿಕ ಸಂತಾಪ! ಆ ಸಂತಾಪದ ಆವೇಶದಲ್ಲಿ ಆ ಕಪ್ತಾನನು ಕೈಯಲ್ಲಿ ಬೈಬಲನ್ನು ಎತ್ತಿಹಿಡಿದು ಬೀಸುತ್ತ ಬಾಯಿಂದ ಬೈಗಳ ಮಳೆಗರೆಯುತ್ತ ಆ ಗ್ರಂಥದ

ಅನಾದಿಸಿದ್ಧ ಅಧಿಕಾರವನ್ನು ಸನಾತನ ಶಬ್ದ ಪ್ರಾಮಾಣ್ಯವನ್ನು ಒದರಿ ಸಾರಿದನು. ಆ ಕಪ್ತಾನನ ಕೋಪದ ಸ್ಫೋಟವು ಮುಗಿದ ಕೂಡಲೆ, ಒಂದೆರಡು ಬೇರೆ ಮಾತುಗಾರರು ಮಾತನಾಡಿದರು. ಆಮೇಲೆ ಹೂಕರನು ಹುಂಕರಿಸಿ ಹೋರಾಟಕ್ಕೆ ನಿಂತನು. ಹಕ್ಸಲೆ ಸಭಿಕರಲ್ಲಿ ಕಲ್ಲೋಲವೆಬ್ಬಿಸಿ ಒಂದು ವ್ಯಕ್ತಿಯನ್ನು ಮೂರ್ಛಿತ ಮಾಡಿದ್ದೂ ಅವನಿಗೆ ಸಾಕೆನಿಸಲಿಲ್ಲ. ಡಾರ್ವಿನನ ರಕ್ಷಣೆಗೆ ಉತ್ಕ್ರಾಂತಿಯ ಸಮರ್ಥನೆಗೆ ಇನ್ನೂ ಹೆಚ್ಚಿನ ಪ್ರಭಾವವನ್ನು ತಾನು ತರಬೇಕೆಂದು ಅವನಿಗೆ ಇಲ್ಲದ ಆತುರ. ಅಂದಿನ ಯುದ್ಧರಂಗವನ್ನು ತಾನೇ ಗೆಲ್ಲಬೇಕೆಂದು ಅವನ ಹಟವಿದ್ದಿರಬೇಕು. ಅವನೇ ಮುಂದೆ ಡಾರ್ವಿನನಿಗೆ ಆ ವಾಗ್ಯುದ್ಧದ ವಿವರಗಳನ್ನು ವೀರಾವೇಶದಿಂದ ವರ್ಣಿಸಿದಾಗ ಇಂತೆಂದನು. 'ಆ 'ಸಾಬೂನುಸ್ಯಾಮು'ನನ್ನು ನಾನು ಸದೆಬಡಿದೆನು. ಸಭೆಯು ಮತ್ತೆ ಮತ್ತೆ ಹರ್ಷೋದ್ಗಾರಗಳಿಂದ ಉಕ್ಕಿ ಹರಿಯುತ್ತಿತ್ತು. ನಾನು ಆತನ ಬಾಯಿಂದಲೇ ಆಯ್ದ ಹತ್ತು ಮಾತುಗಳಿಂದ ಮೊದಲಿನ ಪೆಟ್ಟಿಗೇ ಗಂಡುಹೊಡೆದವಂತೆ ಅವನ ಉಸಿರನ್ನೇ ಬತ್ತಿಸಿಬಿಟ್ಟೆನು. ಮುಂದೆ ಅದಕ್ಕೆ ನಿದರ್ಶನವೆಂದು ಹೀಗೆ ಸಿದ್ಧಮಾಡಿದೆನು; (೧) ಅವನು ನಿನ್ನ ಗ್ರಂಥವನ್ನು ಓದಿಯೇ ಇರಲಾರನು; (೨) ಅವನು ಸಸ್ಯಶಾಸ್ತ್ರದಲ್ಲಿ ಶ್ರೀಗಣೇಶವನ್ನೂ ಕೂಡ ಅರಿಯದ ಅಜ್ಞಾನಿಯು. ಈ ಮಾತಿಗೆ ಸ್ಯಾಮನು ಪಿಟ್ಟೆಂದು ಮಾರ್ನುಡಿಯಲಿಲ್ಲ. ಮಾರ್ಮಲೆಯುವ ಮಾತಿರಲಿ. ಸಭೆಯು ವಿಸರ್ಜನ ಹೊಂದಿತು. ನಾಲ್ಕು ತಾಸುಗಳ ಘನಘೋರ ಕದನದನಂತರ ಯುದ್ಧಭೂಮಿಗೆ ನೇನೇ ಪ್ರಭುವಾಗಿ ಉಳಿದಿ !'

ುತ್ತಲೆಲ್ಲ ಇಂಥ ಸುಂಟರಗಾಳಿಯು ಬೀಸುತ್ತಿದ್ದಾಗ ಡಾರ್ವಿನನು ಏನು ಮಾಡುತ್ತಿದ್ದನು ? ಪ್ರತೀಕಾರಕ್ಕಾಗಿ ಲೆಕ್ಕಣಿಕೆ ಮಸೆದು ಪತ್ರಿಕೆಗಳಲ್ಲಿ ುಗ್ಗುತ್ತಿದ್ದನೇ ? ಅಲ್ಲಲ್ಲಿ ತನ್ನ ಪಕ್ಷದ ಮಂಡನೆಗಾಗಿ ವ್ಯಾಖ್ಯಾನಗಳನ್ನು ಕೊಡುತ್ತ ರುಗುತ್ತಿದ್ದನೇ ? ಇಲ್ಲ. ಅಂಥ ಪ್ರಚಾರಕ್ಕೆ ಅವನಿಗೆ ಸಮಯವೂ ಇದ್ದಿಲ್ಲ. ಾಮರ್ಥ್ಯವೂ ಇದ್ದಿಲ್ಲ. ಸತ್ಯದ ಚಿಕ್ಕ ಕಿರಣವು ಸಾವಿರ ಸುಳ್ಳುಗಳ ಎಂಥ ಬ್ಬುಗತ್ತಲೆಯನ್ನೂ ಮಂಜಿನಂತೆ ಕರಗಿಸಬಹುದು; ಅಂಥ ಸತ್ಯದ ಬೆಳಕನ್ನು ೀರುವವರಲ್ಲಿ ಅವನು ಸದ್ದಿಲ್ಲದೆ ತೊಡಗಿದ್ದನು. ತನ್ನ ಸಿದ್ಧಾಂತವನ್ನು ಇನ್ನೂ ರಿಪುಷ್ಟಗೊಳಿಸಿ ಬೆಳೆಸುವದರಲ್ಲಿ ಆತನು ದುಡಿಯುತ್ತಿದ್ದನು. ಅದಲ್ಲದೆ ಇತರ ಷಯುಗಳೂ ಅವನ ಲಕ್ಷ್ಯವನ್ನು ಸೆರೆಹಿಡಿದಿದ್ದವು. ಸಸ್ಯಶಾಸ್ತ್ರದಲ್ಲಿ ಕೆಲವೊಂದು ಂಶೋಧನೆಗಳನ್ನು ಅವನು ಆರಂಭಿಸಿ ಅವರ ಫಲವಾಗಿ ೧೮೭೮ ರಲ್ಲಿ ಡಾರ್ವಿನನು ಶ್ರಿತ ಹೂ ಗಿಡಗಳ ಬೀಜ ಪೋಷಣೆ' ಎಂಬ ಗ್ರಂಥವನ್ನು ಪ್ರಕಟಿಸಿದನು. ರಡು ವರ್ಷಗಳ ನಂತರ ಅವನು 'ತರುಲತೆಗಳ (ಏರುವ ಬಳ್ಳಿಗಳ) ಚಲನ

ವಲನಗಳೂ ಚಟಗಳೂ' ಎಂಬ ಪ್ರಬಂಧವನ್ನು ಬರೆದನು. ಗಿಡ ಬಳ್ಳಿಗಳ ಜಡಬಧಿರ ಜೀವನದ ತತ್ತ್ವ ಭಾಷ್ಯವನ್ನು ಭಾಷೆ ಬಲ್ಲವರ ಜಡ ಬುದ್ಧಿಗೆ ತಿಳಿಸಿ ಹೇಳಿದ ಆಚಾರ್ಯರಲ್ಲಿ ಇವನೇ ಅಗ್ರಗಣ್ಯನು !

ತನ್ನ ಉತ್ಕ್ರಾಂತಿ ಸಿದ್ಧಾಂತವನ್ನು ಪರಿಷ್ಕರಿಸಿ ಪರಿವರ್ಧಿಸಿ ಅವನು ಮತ್ತೆ ಪ್ರಸಿದ್ಧಿಗೆಕೊಟ್ಟದ್ದು ೧೮೬೮ ರಲ್ಲಿ. ಆ ಹೊಸಗ್ರಂಥದ ಹೆಸರು' ಈಲು ಮಾಡಿದ ಪ್ರಾಣಿಗಳ ಮತ್ತು ಗಿಡಗಳ ವ್ಯತ್ಯಾಸಗಳು.' ಈ ನಂತರ ಅವನ ಮುಂದಿನ ಗ್ರಂಥ 'ಮಾನವನ ಅವತಾರ' (೧೮೭೧ ರಲ್ಲಿ) ಇದೇ ಅವನ ಅತಿಪ್ರಸಿದ್ಧ, ಅತಿಕ್ರಾಂತಿಕಾರಿಯಾದ ಗ್ರಂಥ !–ಮಾನವ ಪ್ರಾಣಿಯ ಹುಟ್ಟುಗುಟ್ಟಿನ ಮೇಲೆ ಲೋಕವೇ ದಿಟ್ಟಿಸುವಂತೆ ಬಿಟ್ಟ ಶೋಧ ಜ್ಯೋತಿ !

ಆ ಜ್ಯೋತಿಯಲ್ಲಿ ಕಂಡುಕೊಂಡ ಶೋಧವೇನು ? ಮಾನವ ಜನ್ಮ, ಪೂರ್ವ ಪುಣ್ಯದ ಸಂಚಿತ ಫಲವಲ್ಲ. ವಿಶ್ವಪ್ರಪಂಚಕ್ಕೆ ಮಾನವ ಪ್ರಾಣಿಯು–ರೆಕ್ಕೆಗಳಿಲ್ಲದ ಎರಡು ಕಾಲುಗಳ ಮೇಲೆ ಸರಿದಾಡುವ ಈ ಅಂದಗೇಡಿಯಾದ ಸಸ್ತನ ಪಶುವು ಮಹಾಪ್ರಭುವಲ್ಲ. ಚಿಂಪೆಂಝಿ ಓರೆಂಗೊಟೆಂಗ್, ಗೋರಿಲ್ಲಾ ಮುಂತಾದ 'ವಾ–ನರ'ರ ಕುಲದ ಒಂದು ಶಾಖೆಯೇ ವ್ಯತ್ಯಾಸ, ವಿಕಾಸ ಹೊಂದಿ 'ವಾ'ದ ಬಾಲವನ್ನು ಕಳಕೊಂಡು 'ನರ' ಕುಲವಾಗಿದೆ. ಶ್ರೀರಾಮನಾದರೂ ಸುಗ್ರೀವ ನಂತೆಯೇ ಮೂಲದಲ್ಲಿ 'ಸೂರ್ಯವಂಶ'ದವನೇ ಸರಿ ! ಉಷ್ಣ ಕಟಿಬಂಧದ ಶಾಖಾಮೃಗವೆ, ಶಾಖೆಯಿಂದ ಇಳಿದು ಬಂದು ಹಿಂಗಾಲ ಮೇಲೆ ನೀಳವಾ ನಿಲ್ಲಲು ಕಲಿತು, ಶಾಖೆಯನ್ನೇ ಮುರಿದು ನೋಡಿ, ಆಯುಧವಾಗಿ ಬಳಿಸು ಬುದ್ಧಿ ಬೆಳಿಸಿಕೊಂಡು ಉತ್ಕ್ರಾಂತಿಯ ಹೆದ್ದಾರಿಯಲ್ಲಿ ಹೊಸ ಮಟ್ಟವನ್ ಮುಟ್ಟಿ ಮಾನವನೆನಿಸಿಕೊಂಡಿತು ! ಹೀಗೆ ಸಂಸ್ಕೃತಿ ನಾಗರಿಕತೆಗಳ ಉಪೋದ್ಘಾತ ಒಂದು ಅಪಘಾತ ! ಮಾನವ ವಂಶದ ಈ 'ಜನ್ಮ ರಹಸ'ವು 'ಮಾನವಾವತಾರ ಗ್ರಂಥದ ಸಾರಾಂಶವು. ನಿಜವಾಗಿ ಇದು 'ಅವತಾರ'ವಲ್ಲ. 'ಅಧಿರೋಹ' 'ಇಳಿದು' ಬಂದುದಲ್ಲ. 'ಏರಿ' ಬಂದುದು–ನೀರಿನಿಂದ ನೆಲಕ್ಕೆ, ಗವಿಯಿಂ ಗೋಪುರಕ್ಕೆ, ಪಶುವು ಪಶುಪತಿಯಾಗಿ 'ತನ್ನ ಕಾಲಿನ ಮೇಲೆ ತಾನು ಎದ್ದ ನಿಂತದ್ದು' ಈ ಸಿದ್ಧಾಂತವಲ್ಲದೆ, 'ಲೈಂಗಿಕ ಆಯ್ಕೆ'ಯ ಕುರಿತೂ ಅವ ಮೌಲಿಕ ತತ್ತ್ವಗಳನ್ನು ಪ್ರತಿಪಾದಿಸಿದನು. 'ಮಾನವಾತವತಾರ'ದಲ್ಲಿಯ ಸಿದ್ಧಾಂತವೂ ಸಾರ್ವತ್ರಿಕ ಒಪ್ಪಿಗೆಯನ್ನು ಪಡೆದಿಲ್ಲವಾದರೂ ಅದರ ಮು ಅಂಶಗಳೆಲ್ಲ ಎಂದೋ ಮಾನ್ಯವಾಗಿವೆ. ಜೀವಶಾಸ್ತ್ರದ ಮುಂದಿನ ವಿಸ್ತಾರಕ್ಕೆ ಡಾರ್ವಿನನ ಗ್ರಂಥ ಅಸ್ತಿವಾರವಾಗಿದೆ.

೧೮೭೨ ರಲ್ಲಿ ಡಾರ್ವಿನನು ತನ್ನ ಈ ಹೊಸ ತತ್ವದ ವಿನ್ಯಾಸಕ್ಕೆ ಇನ್ನೊಂದು ಕೊಡುಗೆಯನ್ನು ಸಲ್ಲಿಸಿದನು. 'ಮಾನವ ಮತ್ತು ಇತರ ಪ್ರಾಣಿಗಳಲ್ಲಿ ಭಾವನೆಗಳ ಅಭಿವ್ಯಕ್ತಿ' ಎಂಬ ಗ್ರಂಥವನ್ನು ಅವನು ಪ್ರಕಟಿಸಿದನು. ಅವನ ಶೇಷಾಯುಷ್ಯವೆಲ್ಲ ಮುಂದೆ ಮುಖ್ಯವಾಗಿ ಸಸ್ಯಶಾಸ್ತ್ರದ ವಿಷಯುಗಳ ಕುರಿತು ಲೇಖನಕ್ಕೆ ಮುಡು ಪಾಯಿತು. ಅವನ ಈ ಲೇಖನ ಕಾರ್ಯವು ಅವನ ಕೊನೆಯ ತನಕವೂ ಅವ್ಯಾಹತವಾಗಿ ಸಾಗಿತು. ಪ್ರಕೃತಿಯ ಅಸ್ವಾಸ್ಥ್ಯದ ಮೂಲಕ ಅವನು ತನ್ನ ಕಾರ್ಯದ ಒಂದು ಪೂರ್ವಯೋಜನೆಯನ್ನೇ ಸಿದ್ಧವಿಟ್ಟು ಅದರಂತೆ ಕೆಲಸವನ್ನು ಹಂತಹಂತವಾಗಿ ಮುಗಿಸುತ್ತಿದ್ದನು. ಎಡಬಿಡದ ಕೆಲಸ, ಆ ಮೇಲೆ ಕೆಲಕಾಲ ಪೂರ್ತಿ ವಿರಾಮ, ಮತ್ತೆ ಕೆಲಸ ಮತ್ತೆ ಬಿಡುವು–ಹೀಗೆ ತುಂಬಿತ್ತು ಅವನ 'ವೇಳಾ ಪತ್ರಿಕೆ'. ತನ್ನ ಯಶಸ್ಸಿನ ಗುಟ್ಟು ಯಾವದೆಂದು ಅವನೇ ಬರೆದಿಟ್ಟಿದ್ದಾನೆ. ಸಾಮಾನ್ಯ ಮಂದಿಗಿಂತ ತನಗೆ ನಿರೀಕ್ಷಣ ಶಕ್ತಿ ಹೆಚ್ಚು ತೀವ್ರವೂ ಸೂಕ್ಷ್ಮವೂ ಇತ್ತೆಂದು ಅವನು ಒಪ್ಪುತ್ತಾನೆ. ಜನರೊಡನೆ ಸಂಗತಿಗಳನ್ನೇ ಆತ ನೋಡುತ್ತಿದ್ದ; ಆದರೆ ಅವರು ನೋಡದ ವಿವರಗಳೂ ವಿಶೇಷಗಳೂ ಅವನ ನೋಟಕ್ಕೆ ಬರುತ್ತಿದ್ದವು. ಅವನ ಬಿಡುವಿನ ವೇಳೆಯ ಮುಖ್ಯ ಮನೋರಂಜನವು, ಕಾದಂಬರಿಗಳನ್ನು ಓದುವದು. ಅವೂ ಸುಖಾಂತ ಕಥೆಗಳುಳ್ಳವು. ಆನಂದ ಪರ್ಯವಸಾಯಿ ಕಾದಂಬರಿಗಳನ್ನು ಬರೆಯುವ ಎಲ್ಲ ಕತೆಗಾರರನ್ನು ಅವನು ಮನಸಾರೆ ಹರಸಿದ್ದಾನೆ.

ಅವನ ಸ್ವಂತ ಪರ್ಯವಸಾನವು ೧೮೮೨ ರಲ್ಲಿ ಏಪ್ರಿಲ ೧೯ ಕ್ಕೆ ಒದಗಿ ಬಂದಿತು. ವಿಜ್ಞಾನದ ಕಡೆಗೆ ಅದೊಂದು ದುರಂತ. ಸೃಷ್ಟಿಯ ಕುರಿತೂ ತನ್ನ ಕುರಿತೂ ಮಾನವನ ದೃಷ್ಟಿಯನ್ನೇ ಪಲ್ಲಟಿಸಿದ ಈ ಕ್ರಾಂತಿದರ್ಶಿಯನ್ನು ಬಲ್ಲವರು ಎಂದು ಮರೆತಾರು ?

# ಕಾವ್ಯ ಪ್ರತಿಭೆ

ಪಾಶ್ಚಾತ್ಯ ಸಾಹಿತ್ಯ ಪ್ರಪಂಚದಲ್ಲಿ
ಮಿ ನು ಗು ವ ತಾ ರೆ ಗ ಳು

* ಡಾ. ಜಾನ್ಸನ್
* ಷೆಲ್ಲಿ
* ಬಾಯರನ್
* ಕೀಟ್ಸ

# ಡಾಕ್ಟರ ಜಾನ್ಸನ್

೧೮ ನೇ ಶತಮಾನವು ಇಂಗ್ಲಂಡಿನ ಮಟ್ಟಿಗೆ ಪ್ರತಿಭೆಯ ಸುವರ್ಣ ಯುಗವಾಗಿ ಪರಿಣಮಿಸಿತು. ಬರ್ಕನಂಥ ಮಹಾವಾಗ್ಮಿ, ರೆನೋಲ್ಡ್ಸನಂಥ ಚಿತ್ರಕಾರ, ಗ್ಯಾರಿಕ್‌ನಂಥ ನಟ, ಗಿಬನ್‌ನಂಥ ಇತಿಹಾಸ ಲೇಖಕ, ಗೋಲ್ಡ್‌ಸ್ಮಿಥ್‌ನಂಥ ಕವಿ, ಫೊಕ್ಸನಂಥ ರಾಜಕಾರಣಿ, ಅಡ್ಯಾಮಸ್ಮಿಥ್‌ನಂಥ ಅರ್ಥಶಾಸ್ತ್ರದ ಪಿತಾಮಹ– ಇಂಥ ಪ್ರಥಿತಯಶರಾದ ಪ್ರತಿಭಾ ಸಮರ್ಥರು ಅಂದಿನ ವಿದ್ಯೆಗಳಿಗೆಲ್ಲ ಮುಂದಾಳುಗಳಾಗಿದ್ದರು. ಬುದ್ಧಿಮತ್ತೆಯ ಕುಲಪರ್ವತರಂತೆ ಇದ್ದರು. ವಿಚಾರ ಪ್ರಪಂಚದ ಶ್ರೇಷ್ಠ ವರ್ಗವೆನಿಸಿಕೊಂಡರು.

ಆದರೆ ಇವರೆಲ್ಲರನ್ನೂ ಆಕ್ರಮಿಸಿ ಬಲಭೀಮನಂತೆ ಒಬ್ಬ ವ್ಯಕ್ತಿ ನಿಂತಿದ್ದನು. ಈ ಶ್ರೇಷ್ಠ ವರ್ಗದವರೆಲ್ಲ ತಮ್ಮ ನಾಯಕನೆಂದು ಒಪ್ಪಿಕೊಂಡ ಮನುಷ್ಯನೊಬ್ಬನಿದ್ದನು. ಅವನೇ ಡಾಕ್ಟರ ಜಾನ್ಸನ್. ಅವನ ಲೇಖನಕ್ಕಿಂತಲೂ ವಿದ್ವತ್ತೆ ಹಿರಿಯದಿತ್ತು; ವಿ ದ್ವ ತ್ತೆ ಗಿಂ ತ ಲೂ ಅವನ ಬುದ್ಧಿಮತ್ತೆ ಮಿಗಿಲಾಗಿತ್ತು; ಅವನ ಚಪಲಚಾಟೂಕ್ತಿಗಳ ಮಿಂಚಿನ ಮಳೆಗರೆಯುವ ಚತುರ ಪ್ರತಿಭೆಯು ಈ ಮೂರೂ ವಿಶೇಷಗಳನ್ನು ಮೀರಿ ಮೆರೆಯಿತು. ಇಂಗ್ಲಿಷ ಭಾಷೆಯಲ್ಲಿ ಅವನು ಅದ್ವಿತೀಯನೂ ಅತ್ಯುತ್ತಮನೂ ಆದ ಸಂಭಾಷಣಪಟುವು,–ಸಾಮಾನ್ಯ ವಿವೇಕವನ್ನು ಅಸಾಮಾನ್ಯ ವಾಗ್ವಿಲಾಸದಿಂದ ವ್ಯಕ್ತಮಾಡುವ ಗುರುವು. ಇಷ್ಟೆಲ್ಲ ಆಗಿಯೂ ಅವನ ಯೋಗ್ಯತೆಯು ಇಷ್ಟೇ ಅಲ್ಲ ! ಅದು ಏನೆಂಬುದರ ಪರಿಚಯ ಮಾಡಿ ಕೊಳ್ಳೋಣವೇ ?

ಬೇಸಿಗೆಯಲ್ಲಿ ಒಂದು ರಾತ್ರಿ. ಲಂಡನ್ನಿನಲ್ಲಿ ಫ್ಲೀಟಸ್ಟ್ರೀಟ ಎಂಬ ಬೀದಿಯಲ್ಲಿ ಎಲ್ಲವೂ ಸ್ತಬ್ಧ–ನಿಃಶಬ್ದ. ನಡುರಾತ್ರಿಯ ಆ ನಿಬಿಡ ಮೌನವನ್ನು ಒಮ್ಮೆಲೇ ಭೇದಿಸಿ, ಒಂದು ಪ್ರಚಂಡ ಗರ್ಜನೆಯ ಮಹಾಸ್ಫೋಟವಾಗುತ್ತದೆ. ಆ ಧ್ವನಿಗೆ ಬೀದಿಯ ಪಕ್ಕದ ಮನೆಗಳಲ್ಲಿಯ ಸಭ್ಯ ನಾಗರಿಕರೆಲ್ಲ ಅಸ್ವಸ್ಥರಾಗಿ ತಮ್ಮ ತಮ್ಮ ಹಸೆಗಳಲ್ಲಿ ಹೊರಳುತ್ತಾರೆ.–ಮತ್ತೆ ಬೆಚ್ಚಿಬಿದ್ದು ಅಸ್ವಸ್ಥರಾಗುತ್ತಾರೆ ಇನ್ನೊಂದು ಸ್ಫೋಟಕ್ಕೆ. ಗರ್ಜನೆಯ ಶಬ್ದ ಬೆಳೆದು ದೊಡ್ಡದಾಗುತ್ತದೆ. ಅತ್ತ ಟೆಂಪಲಬಾರ ಕಟ್ಟಡದಿಂದಲೂ ಕೂಗು ಮೊಳಗುತ್ತದೆ. ಈ ಮಹಾ ಕೋಲಾಹಲವು ಮುಂದು ವರಿದು ಸೆಂಟಪಾಲ ಧರ್ಮಮಂದಿರದ ತನಕವೂ ಗಾಳಿಗುಂಟ ಅಬ್ಬರಿಸುತ್ತ ಹಬ್ಬುತ್ತದೆ. ಇದೇನು ಕೊಲೆಯೋ ? ಪುಂಡರ ಹಾವಳಿಯೋ ? ದಂಗೆ–

ದಾಳಿಯೋ ಎಂದು ಮೇಲುಪ್ಪರಿಗೆಗಳ ಕಿಡಕಿಗಳು ಅಲ್ಲಿ ಇಲ್ಲಿ ಕೊಂಚ ತೆರೆಯು ತ್ತವೆ. ಕಿವಿಟೊಪ್ಪಿಗೆಗಳೊಳಗಿಂದ ತೇಲ್ಗಣ್ಣುಗಳು ಹೊರಗೆ ಇಣಕಿ ನೋಡುತ್ತವೆ. ಏನನ್ನು ನೋಡುತ್ತವೆ ?

ಟೆಂಪಲ ಕಟ್ಟಡದ ಅಗಸೆಯ ಬಾಗಿಲಲ್ಲಿ ದೀಪಸ್ತಂಭದಡಿಯಲ್ಲಿ ಆ ಕರ್ಣ ಕಠೋರ ಕಲಕಲದ ಮಹಾಕಾರಣವು ನಿಂತಿದೆ. ನಿಂತಿದೆಯೆಂದರೂ ಸರಿಯಲ್ಲ. ಒಂದು ಪ್ರಚಂಡ ದೇಹದ ವ್ಯಕ್ತಿಯು ಮಾರ್ಗದ ಪಕ್ಕದ 'ಪಾದಪಥ'ದಲ್ಲಿ ಒಂದು ಕಂಬವನ್ನು ಎರಡೂ ಕೈಗಳಿಂದ ಬಿಗಿದು ಹಿಡಿದು ಜೋಲಿಹೊಡೆಯುತ್ತಿದ್ದಾನೆ. ಅವನ ಹ್ಯಾಟು ನೆಲದ ಮೇಲೆ ಉರುಳಿದೆ. ಅವನ ವಿಶಾಲಶರೀರವು ಉನ್ಮಾದ ವಾಯು ಸೇರಿದಂತೆ ಹೊರಳಿಹೊಯ್ದಾಡುತ್ತಿದೆ. ಆ ದೇಹದೊಳಗಿಂದಲೆ ಅಂಥ ಕರ್ಣ ಭಯಂಕರ ಧ್ವನಿಗಳುಹೊರಹೊಮ್ಮುತಿವೆ. ಅವನ ಪಕ್ಕದಲ್ಲಿಯೇ ಪಾಪ, ಇನ್ನೊಬ್ಬ ವ್ಯಕ್ತಿ ಮಾತಿಲ್ಲದೆ ಮುಂದುಗಾಣದೆ ಅಸಹಾಯನಾಗಿ ತೆಪ್ಪಗೆ ನಿಂತಿದ್ದಾನೆ !

'ಯಾರೋ ಬಡಪಾಯಿ ಒಂದೆರಡು ಸೀಸೆ ಹೆಚ್ಚು ಕುಡಿದಿರಬೇಕು, ಅಲ್ಲವೆ ! ಯಾರೋ ಹುಚ್ಚ, ತಾಳಗೆಟ್ಟು ಹೀಗೆ ಬೇತಾಳನಂತೆ ಕೇರಿಯ ನಿದ್ದೆಗೆಡಿಸುತ್ತ ಕುಣಿದಾಡುತ್ತಿರಬೇಕು !' ಎಂದು ಸಿಡುಕಿನಿಂದ ಒಟಗುಡುತ್ತ ,ಕಿಡಕಿಯ ಕದವನ್ನಿಕ್ಕಿ ಆ ಕಿವಿಟೊಪ್ಪಿಗೆಗಳು ತಿರುಗಿ ಹಸೆಗೆ ಹೋಗಿ ಬಿದ್ದಿರಬೇಕು, ಕಂಬಳಿಯಲ್ಲಿ ತಲೆ ಮುಚ್ಚಿಕೊಂಡು ! ಆದರೆ ಸಿಡುಕು ಸರಿ ಇದ್ದರೂ ಅವರ ತಿಳುವಳಿಕೆ ತಪ್ಪಿದೆ. ಅಲ್ಲಿ ಬೀದಿಯಲ್ಲಿ ಗದ್ದಲ ಹಾಕುವವನು ಹುಚ್ಚನೂ ಅಲ್ಲ ಬೇತಾಳನೂ ಅಲ್ಲ: ಅವನೇ ಈ ಸ್ಯಾಮ್ಯುಅಲ್ ಜಾನ್ಸನ್. ಅವನು ಸಾಮಾನ್ಯನಲ್ಲ. ಇಡಿ ಇಂಗ್ಲೆಂಡಿ ದಲ್ಲಿ ಎಲ್ಲರಿಗೂ ಹೆಚ್ಚು ವಿದ್ವತ್ತೆಯುಳ್ಳ ಎಲ್ಲರಿಗಿಂತಲೂ ಹೆಚ್ಚು ಮನ್ನಣೆಯನ್ನು ಪಡಕೊಳ್ಳುವ ವ್ಯಕ್ತಿ ಆತನು ! ಆ ನಡುರಾತ್ರಿಯ ನಿದ್ದೆಗೆಡಿಸುವ ಕೋಲಾಹಲದ ಗರ್ಜನಾ ಸ್ಫೋಟವು ಕೇವಲ ಅವನ ಹಾಸ್ಯದ 'ಗಹಗಹ' !

ಮೇಲೆ ಬಣ್ಣಿಸಿದ ಡಾ। ಜಾನ್ಸನ್‌ನ ಚಿತ್ರ, ನಮ್ಮ ಕಲಾಕೃತಿಯಲ್ಲಿ. ಅವನ ಹತ್ತಿರದ ಆಪ್ತಮಿತ್ರನಾದ ಬಾಸ್ವೆಲ್‌ನು-ಆ ಬೀದಿಯಲ್ಲಿ ಅವನ ಪಕ್ಕದಲ್ಲಿಯೇ ತೆಪ್ಪಗೆ ನಿಂತವನು !-ವರ್ಣಿಸಿದ ಪ್ರಸಂಗವದು. ಆ ಚಿತ್ರವು ಆ ಆಂಗ್ಲವಿಭೂತಿಯ ಪ್ರತೀಕವೆ ಆಗಿ ನಿಲ್ಲುವಂತಿದೆ. ಪ್ರಚಂಡನೂ ಪ್ರತಿವಾದಿಭಯಂಕರನೂ ಚಿಂತಾ ಕುಲನೂ ಪೂಜ್ಯನೂ ಆದ ಜಾನ್ಸನ್‌ನು ಅವನ ಅಚ್ಚುಮೆಚ್ಚಿನ ಬೀದಿಯಾದ ಫ್ಲೀಟಸ್ಟ್ರೀಟಿನಲ್ಲಿ ಮಧ್ಯರಾತ್ರಿಯಲ್ಲಿ ನಿಂತು ಭೂಕಂಪದಂತೆ ಬೊಬ್ಬಿರಿವ ನಗುತ್ತಿದ್ದಾನೆ. ಜಾನ್ಸನ್‌ನ ಹಾಸ್ಯವು ಅವನ ಶರೀರಕ್ಕೆ ತಕ್ಕಂತೆಯೇ ಇತ್ತು

ಅವನ ಹೃದಯವುದಷ್ಟೇ ವಿಶಾಲವಿತ್ತು, ಉನ್ನತವಿತ್ತು, ಉದಾರವಿತ್ತು. 'ವಿಶಾಲ' ಇದು ಜಾನ್ಸನ್‌ನಿಗಾಗಿಯೇ ಉಂಟಾದ ವಿಶೇಷಣವಿರಬೇಕು. ಅವನದು ಎಲ್ಲವೂ ವಿಶಾಲ. ಅವನು ವಿಶಾಲಕಾಯ, ವಿಶಾಲಹೃದಯ, ವಿಶಾಲಾತ್ಮ. ಅವನು ತನ್ನ ಲೇಖನದಿಂದಲೂ ಚತುರ ಚಾಟೂಕ್ತಿಯಿಂದಲೂ ಪ್ರಪಂಚವನ್ನು ಸಂಪನ್ನಗೊಳಿಸಿದನು.–ಅವೆರಡಕ್ಕೂ ಹೆಚ್ಚು ತನ್ನ ಜೀವನದಿಂದ ಆ ಸಂಪತ್ತನ್ನು ಸಮೃದ್ಧವಾಗಿ ಮಾಡಿದನು. ಅವನ ವಿಶಾಲ ವ್ಯಕ್ತಿತ್ವದ ನೆರಳು ಫ್ಲೀಟಸ್ಟ್ರೀಟಿನ ಉದ್ದಕ್ಕೂ–ವೃತ್ತವ್ಯವಸಾಯ ಮತ್ತು ಪತ್ರಿಕಾ ಪ್ರಪಂಚದ ಇತಿಹಾಸದ ಉದ್ದಕ್ಕೂ ಚಾಚಿದೆ. ಅವನ ವಿಶಾಲವಾದ ಉದರದಿಂದ ಉದಾರವಾಗಿ ಹೊಮ್ಮಿದ ಹಾಸ್ಯದ ಮಹಾಧ್ವನಿಯು ಇನ್ನೂ ಇಂಗ್ಲಂಡದ ಅಲ್ಲ ಇಂಗ್ಲಿಷ ಭಾಷೆಯ ರಸಿಕರ–ಕಿವಿಯಲ್ಲಿ ಮೊಳಗುತ್ತಲಿದೆ.

ಜಾನ್ಸನ್‌ನ ಚರಿತ್ರವನ್ನು ಬಾಸ್ವೆಲ್‌ನು ಬರೆದನು. ಬಾಸ್ವೆಲ್‌ನ ಬರಹದಿಂದಲೇ ಜಾನ್ಸನ್ ಅಮರನಾಗಿದ್ದಾನೆಂದು ಒಂದು ನಂಬಿಕೆಯಿದೆ. ಆದರೆ ಎಲ್ಲ ನಂಬಿಕೆಗಳಂತೆ ಇದರಲ್ಲಿಯೂ ನಿಜವು ಒಂದು ಅಂಶವೇ ವಾಲ್ಮೀಕಿಯಿಂದ ಶ್ರೀರಾಮಚಂದ್ರ, ವ್ಯಾಸನಿಂದ ಶ್ರೀಕೃಷ್ಣ, ಪ್ಲೇಟೋನಿಂದ ಸಾಕ್ರೆಟಿಸ್,–ಹೀಗೆಲ್ಲ ಚರಿತ್ರಕಾರ ಕವಿಗಳಿಂದ ಚರಿತ್ರನಾಯಕ ವಿಭೂತಿಗಳು ವಿಶ್ವವಿಖ್ಯಾತವಾಗಿ ದೇಶ, ಕಾಲಗಳ ಸೀಮೆಯನ್ನು ಮೀರಿದ ಸೀಮಾಪುರುಷರಾಗಿರುವುದುಂಟು. ಅದಕ್ಕೆ ಕಾರಣ ನಿಜವಾಗಿ ಆ ವಿಭೂತಿಗಳು ಹೇಗಿದ್ದರೋ, ಅವರ ವ್ಯಕ್ತಿತ್ವಗಳನ್ನು ಆ ಮಹಾಕವಿಗಳ ಪ್ರತಿಭೆಯು ರಾಹುಗನ್ನಡಿಯೊಳಗಿಂದ ನೋಡಿದ ನಮಗೆ ಅವು ಅಷ್ಟು ದಿವಸ ಭವ್ಯವಾಗಿ ಕಂಗೊಳಿಸುವವು ನಿಜ. ಆದರೆ ಬಾಸ್ವೆಲ್‌ನ ಪ್ರತಿಭೆಯಿಂದ ಜಾನ್ಸನ್‌ನ ವ್ಯಕ್ತಿತ್ವ ಮಹಿಮೆಯನ್ನು ಪಡೆದಿಲ್ಲ. ಅಂಥ ಅದ್ವಿತೀಯ ಚರಿತ್ರವನ್ನು ಪ್ರಾಮಾಣಿಕವಾಗಿ ಪ್ರತಿಬಿಂಬಿಸಿದ್ದರಿಂದಲೇ ಬಾಸ್ವೆಲ್‌ನು ಬರೆದ ಚರಿತ್ರವು ಒಂದು ಉತ್ಕೃಷ್ಟ ಕೃತಿಯಾಯಿತು. ಮೂಲದ ವ್ಯಕ್ತಿತ್ವ ಅಷ್ಟೊಂದು ಅಪ್ರತಿಮ ಗುಣಲಕ್ಷಣಗಳಿಂದ ಮಂಡಿತವಾಗಿದ್ದರಿಂದಲೇ ಅವನ ಚರಿತ್ರ ಚಿತ್ರಣವು ಅಷ್ಟು ಉಜ್ಜ್ವಲವಾಗಿದೆ.

ಆದರೆ ಜಾನ್ಸನ್‌ನಿಗೆ ಬಾಸ್ವೆಲ್ ಓರ್ವನೆ ಆಜೀವ ಸಹಚರನಿದ್ದಿಲ್ಲ. ಅವನ ಜೀವನ ಗೆಳತಿಯು ಒಬ್ಬಳಿದ್ದಳು. ಈ ಗೆಳೆಯನಿಗಿಂತಲೂ ಆ ಗೆಳತಿಯು ಹಳಬಳು–ಆ ಗೆಳತಿ ಅವನ ದಾರಿದ್ರ್ಯ! ಬಾಸ್ವೆಲ್‌ನಿಗಿಂತಲೂ ಹೆಚ್ಚು ನಿಕಟ ನಿಷ್ಠೆಯಿಂದ ಬಡತನವು ಅವನ ಒಡನಾಡಿಯಾಗಿ ಬಂದಿತು! ಜಾನ್ಸನ್‌ನ ಜನ್ಮ ೧೭೦೯ ರಲ್ಲಿ–ಲಿಚ್‌ಫೀಲ್ಡ ಎಂಬಲ್ಲಿ. ಆಗ ಅವನ ತಂದೆಯು ಪುಸ್ತಕಗಳ ಮಾರಾಟವನ್ನು

ಮಾಡುತ್ತಿದ್ದನು. ಆದರೆ ಪರಿಸ್ಥಿತಿಯು ಇಕ್ಕಟ್ಟಿನ ಮೂಲಕ ಅವನು ಬಲು ಜೋಕೆಯಿಂದ ಜೀವನ ದೂಡಬೇಕಾಗಿತ್ತು. ಆಗ ಮಗನಿಗೂ ತನ್ನ ವಿಶಾಲದೇಹವನ್ನು ಅದೆ ಇಕ್ಕಟ್ಟಿನೊಳಗಿಂದ ದೂಡಬೇಕಾಗಿ ಬಂದಿತು.

ಅವನಿಗೆ ಚಿಕ್ಕಂದಿನಲ್ಲಿ ಮೈತುಂಬ ಕಜ್ಜಿ ಆಯಿತು. ಅಂದಿನ ಕಾಲದಲ್ಲಿ ಕಜ್ಜಿಯು ಸಾಮಾನ್ಯ ಬೇನೆಯೆನಿಸಿಕೊಳ್ಳುತ್ತಿದ್ದಿಲ್ಲ. ಅದಕ್ಕೆ 'ಅರಸುಬೇನೆ' ಯೆಂದು ಹೆಸರಿತ್ತು. ಅದಕ್ಕೆ ಅರಸು ಮದ್ದನ್ನೇ ಅರಸಬೇಕಿತ್ತು. ಆ ಮದ್ದೆಂದರೆ, ಅರಸರ ಕೈಯಿಂದ ಕಜ್ಜಿಯು ಮೈಯನ್ನು ಮುಟ್ಟಿಸುವದು ! ಇದೊಂದು ಅಂದಿನ ಲೋಕ ಭ್ರಮೆ. ಜಾನ್ಸನ್‌ನನ್ನೂ ಲಂಡನಿಗೆ ತರಲಾಯಿತು. ಆನ್ ರಾಣಿಯಿಂದ ಅವನ ಮೈಮೇಲೆ ಕೈ ಆಡಿಸಲಾಯಿತು. ಆದರೆ ಈ ರಾಜಸ್ಪರ್ಶವನ್ನು ಕಜ್ಜಿಯು ಲೆಕ್ಕಿಸಲೇ ಇಲ್ಲ. ಈ ಕಜ್ಜಿಯ ವಿಕೋಪದಿಂದ ಜಾನ್ಸನ್‌ನ ಮೋರೆಯು ವಿದ್ರೂಪವಾಯಿತು. ಒಂದು ಕಣ್ಣು ಕೂಡ ಕೆಟ್ಟು ಹೋಯಿತು. ಮುಂದೆ ಜೀವಮಾನವೆಲ್ಲ ಆ ಕಣ್ಣು ಇದ್ದೂ ಇಲ್ಲದಂತೆ ಆಯಿತು.

ಅವನ ಶರೀರಕ್ಕೆ ಕಜ್ಜಿಯಲ್ಲದೆ ಇನ್ನೊಂದು 'ಮಹಾರಿಪು' ಬಾಧಿಸಿತ್ತು. ಅದು ಆಲಸ್ಯ. ಮೈಗಜ್ಜಿಯ ಕಾಟಕ್ಕೆ ಮೈಗಳ್ಳತನದ ಚಟವು ಕೂಡಿತು. ಆದರೂ ಈ ಕಳ್ಳತನ ಬರೇ ಮೈಯಮಟ್ಟಿಗೆ ಇತ್ತು. ಮನಸ್ಸಿನಲ್ಲಿ ವಿಚಾರದ ತೀಕ್ಷ್ಣತೆ, ವಾಚನದ ತೀವ್ರತೆ, ವ್ಯಾಸಂಗದ ದೃಢತೆ ಅವನಲ್ಲಿ ತುಂಬ ಇತ್ತು. ಅಭ್ಯಾಸ ವೃತ್ತಿಯು ಅವನಲ್ಲಿ ಅಸಾಮಾನ್ಯವಾಗಿ ಕಂಡುಬಂದಿತು. ಅವನು ಎಲ್ಲ ಐರೋಪ್ಯ ಭಾಷೆಗಳ ಪುಸ್ತಕಗಳನ್ನು ಸಿಕ್ಕಷ್ಟು, ಸಿಕ್ಕಾಗೆಲ್ಲ ಸಿಕ್ಕಂತೆ ಓದಿ ಹಾಕತೊಡಗಿದನು. ಆ ಓದಿನಲ್ಲಿ ಕಟ್ಟು, ನಿಟ್ಟು ಏನೂ ಇದ್ದಿಲ್ಲ. ಆದರೆ ಓದಿದ್ದನ್ನೆಲ್ಲ ಜಾನ್ಸನ್ ಅರಿತು ಅರಗಿಸಿಕೊಳ್ಳುತ್ತಿದ್ದನು–ಬೆಂಡು ನೀರನ್ನು ಹೀರಿಕೊಂಡಂತೆ. ಇತರ ಫಲವೆಂದರೆ ಅವನ ದೇಹವು ಎಷ್ಟು ಸ್ಥೂಲವೋ ಬುದ್ಧಿ–ಜ್ಞಾನಗಳೂ ಅಷ್ಟೇ ವಿಶಾಲವಾದವು. ೧೯ ನೇ ವರ್ಷ ವಯಸ್ಸಿಗೇ ಅವನು ಆಕ್ಸಫೋರ್ಡಿಗೆ ಹೋದನು. ಅವನ ಹತ್ತಿರ ಹಣವಿದ್ದಿಲ್ಲ. ಆದರೆ ಗೆಳೆಯನೊಬ್ಬನು ಹಣದ ನೆರವನ್ನು ನೀಡುವೆನೆಂದು ಮಾತುಕೊಟ್ಟನು. ಆದರೆ ಮಾತೊಂದೇ ಕೊಟ್ಟದ್ದಾಯಿತು. ಹಣವಾಗಲೀ ನೆರವಾಗಲೀ ಆ ಗೆಳೆಯನಿಂದ ದೊರೆಯುವ ದಿನ ಮೂಡಲಿಲ್ಲ. ಆದ್ದರಿಂದ ಕೊನೆಗೂ ಜಾನ್ಸನ್‌ನು ಯಾವ ಪದವಿ (ಉಪಾಧಿ ?) ಯನ್ನೂ ಪಡೆಯದೆ ಹಿಂದಿರುಗಬೇಕಾಯಿತು.

ಆದರೆ ಆಕ್ಸಫೊರ್ಡದಲ್ಲಿ ಇದ್ದಷ್ಟು ಕಾಲ ಜಾನ್ಸನ್‌ನು ಒಬ್ಬ ಅಲೌಕಿಕ ವಿದ್ಯಾರ್ಥಿಯೆನಿಸಿಕೊಂಡನು–ಅನೇಕ ಅಲ್ಪಜ್ಞ ಅಧ್ಯಾಪಕರಿಗೆ 'ಮಸ್ತಕ ಶೂಲಿ' ಯಾದನು.

ಒಮ್ಮೆ ಯಾವದೋ ಅಜ್ಞಾತ ಲ್ಯಾಟಿನ್ ಕವಿಯ ಒಂದು ವಚನವನ್ನು ಉದಾಹರಿಸಿ ತನ್ನ ಅಧ್ಯಾಪಕರನ್ನು ಒಮ್ಮೆಲೇ ದಿಗಿಲುಗೊಳಿಸಿದರೆ, ಇನ್ನೊಮ್ಮೆ ಅವನು ವರ್ಗವನ್ನು ತಪ್ಪಿಸಿ ಅವರನ್ನು ರೇಗಿಸುತ್ತಿದ್ದನು. ಏಕೆ ವರ್ಗಕ್ಕೆ ಬರಲಿಲ್ಲವೆಂದು ಕೇಳಿದಾಗ, 'ಏನಿಲ್ಲ ಆ ಕ್ರಿಶ್ಚನ್ ಚರ್ಚ ಬಯಲಿನ ಹಸರಿನಲ್ಲಿ ಅಡ್ಡಾಗಿದ್ದೆನು ! ' ಎಂದು ಸತ್ಯವನ್ನೇ ಹೇಳಿ ಸೋಜಿಗವನ್ನು ಆ ಅಧಿಕಾರ ಜಡ ಅಧ್ಯಾಪಕರಲ್ಲಿ ಉಂಟುಮಾಡುತ್ತಿದ್ದನು ! ತನ್ನ ನಾಯಕನು ಹೀಗೆ ಗುರುಗಳಿಗೆ ಇದುರಾಡಿದ್ದನ್ನು ಕೇಳಿ ಮುಂದೆ ಬಾಸ್ವೆಲ್ ಅವನ ತಾರುಣ್ಯದ ಆ ಸ್ವಚ್ಛಂದ ಸಾಹಸಕ್ಕೆ ತಲೆದೂಗಿ ಕೇಳಿದನು. 'ಸ್ವಾಮಿ, ತಾವು ಹಾಗೆ ಅಂದದ್ದು ಒಳ್ಳೇ ಧಾಷ್ಟ್ಯ್ರವಲ್ಲವೆ ?' ಅದಕ್ಕೆ ಜಾನ್ಸನ್ ಉತ್ತರವಿತ್ತನು ಏನು ಗೊತ್ತೆ ?– 'ಇಲ್ಲ ಸ್ವಾಮಿ ಅದರಲ್ಲಿ ಧಾಷ್ಟ್ಯ್ರವೇನೂ ಇಲ್ಲ. ಅದು ಕೇವಲ ಪರಿವೆಗೇಡಿತನ.– ಪರಿಣಾಮದ ಬಗ್ಗೆ ಜಡಬುದ್ಧಿಯ ತೀರ ಅಲಕ್ಷ್ಯ !'

ಜಾನ್ಸನ್ ಆಕ್ಸಫೋರ್ಡಿನಲ್ಲಿ ಕಳೆದ ಬಡತನದ ಬವಣೆಗೆ ಮಿತಿಯೇ ಇದ್ದಿಲ್ಲ. ಅವನ ಚಪ್ಪಲಿಗಳು ಸವೆದು ಹರಿದು ತೂತುಗಳೊಳಗಿಂದ ಕಾಲ್ಬೆರಳುಗಳು ಕಾಣ ಹತ್ತಿದವೆಂದು ನಾಚಿಕೊಂಡು ಆ ಬಡ ಯುವಕನು ಹಲವು ಪಾಠ ಪ್ರವಚನಗಳಿಗೆ ಹೋಗುವದನ್ನೇ ಬಿಟ್ಟುಕೊಟ್ಟನು. ಬರಿಯ ಬಡತನದಲ್ಲಿ ಅಷ್ಟು ದುಃಖವಿಲ್ಲ; ಬಡತನಕ್ಕೆ ಬಿಂಕದ ಕಡುತನವೂ ಬಂದು ಸೇರಿದಾಗ ಬಡತನದಷ್ಟು ದುಃಖ ಬೇರೆ ಯಾವದೂ ಅಲ್ಲ. ಆದರೆ ಸೋಜಿಗ ನೋಡಿ, ಅಂಥ ಬಿಂಕದ ಬಿಗುಮಾನದ ಬಡವನಿಗೆ ತಾನು ದುಃಖಿಯೆನಿಸುವದಕ್ಕಿಂತ ಯಾರ ಹಂಗಿಗನೂ ಅಲ್ಲವೆಂಬ ಸಮಾಧಾನವೇ ಹೆಚ್ಚು ಸುಖ ಕೊಡುತ್ತದೆ. ಹರಕು ಚಪ್ಪಲಿಗಳಲ್ಲಿ ಹಾದಿ ತುಳಿಯುವ ಜಾನ್ಸನ್‌ನನ್ನು ಕಂಡು ಕನಿಕರಪಟ್ಟು ಯಾರೋ ಪುಣ್ಯಾತ್ಮರು ಅವನ ಬಾಗಿಲಿನ ಹೊರಗೆ ಹೊಸ ಬೂಟುಗಳ ಜೋಡಿಯೊಂದನ್ನೊಂದು ಇಟ್ಟರು. ಆದರೆ ಜಾನ್ಸನ್‌ನ ಸ್ವಾಭಿಮಾನಿಯಾದ ಸ್ವತಂತ್ರ ವೃತ್ತಿಯು ಅದನ್ನು ಹೇಗೆ ಸಹಿಸೀತು ? ಅವನಿಗೆ ಆ ಕನಿಕರವೇ ಕಟುಕತನವೆನಿಸಿತು; ಸಿಟ್ಟಿನ ಭರದಲ್ಲಿ ಆ ಬೂಟುಗಳನ್ನೆತ್ತಿ ದೂರ ಬಿಸಾಡಿಬಿಟ್ಟನು.

ಆಕ್ಸಫೋರ್ಡದಿಂದ ಭಗ್ನಮನೋರಥನಾಗಿ ಬಂದ ಮೇಲೆ ಈ ಮೇಧಾವಿಗಳ ಮಹಾರಥಿಯು ಜ್ಞಾನಯಾತ್ರೆಯ ಸಾರಥಿಯಾದನು. ಅಂದರೆ ಶಾಲಾಶಿಕ್ಷಕನಾಗಿ ದುಡಿಯಹತ್ತಿದನು. ಅಲ್ಲಿಯೂ ಅವನಿಗೆ ಹಂಗಿನ ಹೋರೆ ಸೇರಲಿಲ್ಲ. ಇದಿಯಲ್ ಎಂಬಲ್ಲಿ ೧೭೩೬ ರಲ್ಲಿ ತನ್ನದೆ ಆದ ಶಾಲೆಯನ್ನು ತೆರೆದನು. ಶಾಲೆಗೆ ಸೇರಿದವರು ಮೂರೇ ಮೂರು ವಿದ್ಯಾರ್ಥಿಗಳು. ಅವರಲ್ಲಿ ಒಬ್ಬನು ಡೆವ್ಹಿಡ್‌ಗ್ಯಾರಿಕ್.

ಮುಂದೆ ಪ್ರಸಿದ್ಧಿಗೆ ಬಂದನಟ. ಶಾಲೆಯನ್ನು ತೆರೆಯುವ ಒಂದು ವರ್ಷ ಮೊದಲೇ, ಜಾನ್ಸನ್‌ನು 'ಆಚಾರ್ಯ ಪತ್ನಿ'ಯನ್ನು ಮನೆಗೆ ತಂದಿದ್ದನು. ಅ ವಿಧಿ ತಂದ ವಧು ಒಬ್ಬ ವಿಧವೆಯಾಗಿದ್ದಳು. ಆ ವಿಧವೆಯೂ ವಯಸ್ಸಿನಿಂದ ಅವನಿಗೆ ಹಲವು ವರ್ಷ ಹಿರಿಯಳು. ಆಕೆಯ ಮೊದಲಿನ ಹೆಸರು ಶ್ರೀಮತಿ ಪೋರ್ಟರ. ಅವರೀರ್ವರ ವಿವಾಹ ಒಂದು ವಿಚಿತ್ರಯುತಿ. ಅವರ ಆರಂಭವೇ ಒಂದು ಪ್ರಣಯ–ಅಲ್ಲ, ಪರಿಣಯ ಕಲಹದಿಂದ! ಜಾನ್ಸನ್‌ನೆ ಅದನ್ನು ಹೀಗೆ ಬಣ್ಣಿಸುತ್ತಾನೆ:–

'ಸ್ವಾಮಿ, ಆಕೆ ಹಳೆಯ ಪ್ರಣಯ ಕಾದಂಬರಿಗಳನ್ನು ಓದಿದವಳು. ಅದರ ಪರಿಣಾಮವಾಗಿ ಪ್ರಿಯಕರನನ್ನು ನಾಯಿಯಂತೆಯೇ ನಾಯಿಕೆ ನಡೆಯಿಸಿಕೊಳ್ಳ ಬೇಕೆಂಬ ವಿಕಟಕಲ್ಪನೆಯು ಆಕೆಯ ತಲೆಯಲ್ಲಿ ತುಂಬಿತ್ತು. ಆದ್ದರಿಂದ, ನಮ್ಮ ಈ ಪಯಣದಲ್ಲಿ, ನಾನು ತೀರ ತ್ವರೆಯಿಂದ ಮುಂದೋಡುವೆನೆಂದು ಆ ಮೊದಲು ದೂರಿಕೊಂಡಳು. ನನ್ನೊಡನೆ ಹೆಜ್ಜೆ ಇಡಲು ಬರುವದಿಲ್ಲವೆಂದಳು ಆಗ ನಾನು ತುಸು ನಿಧಾನವಾಗಿ ನಡೆಯಹತ್ತಿದೆನು. ಆದರೆ ಆಕೆಯೇ ಆಗ ನನ್ನನ್ನು ಹಾಯ್ದು ಮುಂದಾದಳು. ಆಗ ನಾನೆ ಹಿಂದೆ ಬೀಳುತ್ತಿದ್ದೇನೆಂದು ಆ ಮತ್ತೆ ದೂರಿಕೊಂಡಳು. ಇನ್ನು ನನ್ನಿಂದ ತಡೆಯಲು ಆಗಲಿಲ್ಲ. ಒಂದು ಲಹರಿಗೆ ಹೀಗೆ ಗುಲಾಮನಾಗಿ ನನ್ನನ್ನು ಮಾಡಲು ನಾನು ಒಪ್ಪಲಿಲ್ಲ. ನಾನು ನಿರ್ಧಾ ಮಾಡಿಬಿಟ್ಟೆ; ಪಯಣದ ಕೊನೆಯನ್ನು ಹೇಗೆ ಮುಟ್ಟಬೇಕೆಂದು ಮೊದಲು ಗೊತ್ತು ಮಾಡಿದ್ದೆನೋ, ಹಾಗೆಯೇ ನಡೆಯಲು ಆರಂಭಿಸಬೇಕೆಂದು. ಆದ್ದರಿಂದ ನಾನು ಲಗುಬಗೆಯಿಂದ ಹೆಜ್ಜೆ ಹಾಕಹತ್ತಿದೆ. ನೋಡ ನೋಡುತ್ತ ನಾನು ಆಕೆಯ ಕಣ್ಮರೆಯಾಗಿ ಬಿಟ್ಟೆನು. ನಮ್ಮ ಹಾದಿಯು ಎರಡು ಬೇಲಿಗಳ ನಡುವಿನಿಂದ ನೇರವಾಗಿ ಹಾದಿತ್ತು. ದಾರಿತಪ್ಪುವದು ಆಕೆಗೆ ಶಕ್ಯವೆ ಇಲ್ಲವೆಂದು ನನ್ನ ನಂಬಿ ಇತ್ತು. ಆಕೆಯೇ ಕ್ರಮೇಣ ನನ್ನನ್ನು ಬಂದು ಕೂಡಿಕೊಳ್ಳುವಂತೆ ನಾನು ನಡೆಯುತ್ತಿದ್ದೆ. ಹಾಗೆಯೇ ಆಕೆ ಬಂದು ಕೂಡಿದಳು. ಆದರೆ, ಆಗ ಆಕೆಯು ಕಣ್ಣೀರುಗರೆಯುತ್ತಿರುವದನ್ನು ಕಂಡೆನು!'

ಇದೊಂದು ಅವರೀರ್ವರ ಕಲಹದ ಚಿಕ್ಕ ಚಿತ್ರ. ಈ ಚಿತ್ರವು ಅವರ ದಾಂಪತ್ಯದ ಸಂಸಾರಯಾತ್ರೆಯ ಪ್ರತೀಕವೂ ಅಹುದು. ಆದಾಗ್ಯೂ ಅವರದು ಪ್ರೀ ವಿವಾಹವಾಗಿತ್ತು. ಜಾನ್ಸನ್‌ನು ಒಳ್ಳೆಯ ಗಂಡನಾಗಿದ್ದನು; ಹೆಂಡತಿಯನು ಆಕೆಯ ಸಾವಿನ ತನಕವೂ, ಸಾವಿನ ಆಚೆಗೂ ಮನವಾರೆ ಪ್ರೀತಿಸಿ ಬಾಳಿದನು.

ಇದಿಯಲ್‌ದ ಶಾಲೆ ಸರಿಯಾಗಿ ಸಾಗಲಿಲ್ಲ. ಜಾನ್ಸನ್‌ನ ಬೊಜ್ಜು ತುಂಬುತ್ತಿದ್ದರೂ

ಬೊಕ್ಕಸ ತುಂಬಲಿಲ್ಲ. ಆಗ ಅವನು ತನ್ನ ಶಿಷ್ಯ ಗ್ಯಾರಿಕ್‌ನೊಡನೆ ಲಂಡನ್ನಿಗೆ ಬಂದನು. ಅಲ್ಲಿ ಬಡತನದೊಂದಿಗೆ ಸೆಣಸಾಡುತ್ತ, ಹೊಟ್ಟೆಯಿಂದ ಹಸಿವೆಯನ್ನು ಆದಷ್ಟು ದೂರವಿಡಲು ಅವನು ವೃತ್ತಪತ್ರಗಳಿಗೆ ಬರೆಯತೊಡಗಿದನು. ಪುಸ್ತಕ ಮಾರುವವರಲ್ಲಿ ದುಡಿದನು. ಆ ದುಡಿತ ಎಂತಹದು ? ಲೆಕ್ಕದ ಕೂಲಿಗೆ ಲೆಕ್ಕಣಿ 'ಚಲಾಯಿಸಿ' ಹೆಸರಿಲ್ಲದ ಹಂಗಿಗನಾಗಿ ಬಾಡಿಗೆಯ ಕುದುರೆಯಂತೆ ಪುಸ್ತಕಗಳನ್ನು ಬರೆದುಕೊಡುವದು. ಅಂಗಡಿಯವನು ತನ್ನ ಹೆಸರಿನಿಂದ ಅವುಗಳನ್ನು ಅಚ್ಚುಹಾಕಿಸಿ ಮಾರಿ ಹಣಮಾಡುವನು.

ಆದರೆ ೧೭೩೮ ರಲ್ಲಿ ಜಾನ್ಸನ್‌ನಿಗೂ ಪ್ರಸಿದ್ಧಿ ಬಂದಿತು. ಲಂಡನ್ ಪಟ್ಟಣದ ಕುರಿತು ಅವನು ಒಂದು ವಿಡಂಬನ ಕವನವನ್ನು ಪ್ರಕಟಿಸಿದನು. ಅದು ಅವನ ಖ್ಯಾತಿಗೆ ನೆಲೆಯಾಯಿತು. ಆದರೇನು ? ಖ್ಯಾತಿಯೇನು ರೊಟ್ಟಿಯೇ ? ಕವನ ದಿಂದ ಹೊಟ್ಟೆಗೆ ಹವನವಾಗುವದೇ?

ಬಡ ಜಾನ್ಸನ್‌ನ ಹೋರಾಟ ಹಾಗೆಯೇ ಮುಂದುವರಿಯಿತು.–ದೈನ್ಯವಿಲ್ಲದೆ ದಾರಿದ್ರ್ಯದೊಡನೆ ನಡೆದ ಎಡಬಿಡದ ಎದೆಗೆಡದ ಹೋರಾಟವದು. ದಾರಿದ್ರ್ಯ ಒಂದೇ ಅಲ್ಲ, ವ್ಯಾಧಿಯೊಡನೆಯೂ ಅವನು ಹೋರಾಡಬೇಕಿತ್ತು. ಜೀವಮಾನವೆಲ್ಲ ಅವನಿಗೆ ಅನಾರೋಗ್ಯ ಅಂಟಿಕೊಂಡಿತ್ತು. ಆ ಆರಂಭದಲ್ಲಿ ಅವನಿಗೆ ಒಂದು ಬಗೆಯ ಅಪಸ್ಮಾರ ವಿಕಾರ ಪೀಡಿಸುತ್ತಿತ್ತು. (ಬಾಲಗ್ರಹದ ಬಾಧೆಯಂತಹದು) ಮುಂದೆ ನಡುವಯಸ್ಸಿನಲ್ಲಿಯೂ ಮುಪ್ಪಿನಲ್ಲಿಯೂ ದಮ್ಮಿನ ರೋಗ ಅವನನ್ನು ಪೀಡಿಸಿತು. ಆದರೆ ಶ್ವಾಸದ ಬಲುಮೆ ಕಡಿಮೆಯಾದರೂ ವಿಶ್ವಾಸದ ಬಲ ತುಂಬ ಇತ್ತು ಜಾನ್ಸನ್‌ನಲ್ಲಿ. ಲೇಖನವನ್ನೇ ಉಪಜೀವಿಕೆಯ ಉಪಾಯವಾಗಿಟ್ಟುಕೊಂಡ ಅವನು ನಿಬಂಧಗಳನ್ನು ಬರೆದನು. ಪ್ರಚಾರ ಪುಸ್ತಕಗಳನ್ನು ಬರೆದನು. ಪ್ರಸ್ತಾವನೆಗಳನ್ನು ಬರೆದನು. ಪಾರ್ಲಿಮೆಂಟದಲ್ಲಿಯ ಚರ್ಚೆಗಳ ವರದಿ ಗಳನ್ನು ಬರೆದನು. ೧೭೪೪ ರಲ್ಲಿ 'ರಿಚರ್ಡ ಸ್ಯಾವೇಜನ ಚರಿತ್ರ'ವೆಂಬ ಪುಸ್ತಕ ಬರೆದನು. ಇದರಿಂದ ಅವನ ಖ್ಯಾತಿಯು ಇನ್ನಿಷ್ಟು ಹೆಚ್ಚಿತು. ೧೭೪೭ ರಲ್ಲಿ ಅವನ ಜೀವನದ ಅವತಾರ ಕಾರ್ಯದ ಘೋಷಣೆಯು ಹೊರಟಿತು. ಆಂಗ್ಲ ಭಾಷೆಯ ಶಬ್ದಕೋಶವನ್ನು ರಚಿಸುವ ಮಹಾಯೋಜನೆಯನ್ನು ಅವನು ಪ್ರಕಟಿ ಸಿದನು. ಇದೊಂದೇ ಕಾರ್ಯದಿಂದಲೂ ಅವನು ಸಾಹಿತ್ಯ ಪ್ರಪಂಚದಲ್ಲಿ ಅಮರ ನಾಗುತ್ತಿದ್ದನು. ಜಾನ್ಸನ್‌ನು ಏಕಾಕಿಯಾಗಿ ಈ ಮಹಾಗ್ರಂಥದ ರಚನೆಯಲ್ಲಿ ೮ ವರ್ಷ ದುಡಿದನು. ನಿಯತವಾಗಿ ದುಡಿಯುವದು ಅವನಿಗೆ ಸಾಧ್ಯವಿದ್ದಿಲ್ಲ; ಅಸ್ವಾಸ್ಥ್ಯದ ಮೂಲಕ. ಆದರೆ ನಡುನಡುವೆ ಉತ್ಸಾಹದ ಉದ್ರೇಕವಾದಾಗ ಶಕ್ತಿ ಸಂಚಾರವಾದಂತೆ ಸತತವಾಗಿ ಬರೆಯುತ್ತಿದ್ದನು. ಅದೇ ಸಮಯ ೧೭೫೦ ರಿಂದ

೫೨ ರ ತನಕ ಅವನು 'ರ್‍ಯಾಂಬ್ಲರ' (ಅಲೆದಾಡಿ ?) ಎಂಬ ಒಂದು 'ಅರೆ-ವಾರ' ಪತ್ರಿಕೆಯನ್ನು ನಡೆಯಿಸಿದನು. ಈ ಪತ್ರಿಕೆಯು ಮಾತ್ರ ಒಳ್ಳೆ ಯಶಸ್ಸ ಪಡೆಯಿತು.

೧೭೫೨ ರಲ್ಲಿ ಅವನ ನಚ್ಚಿನ ಮಡದಿ ತೀರಿಕೊಂಡಳು. ಅವನ ದುಃಖಕ್ಕೆ ಅಂತ ಪಾರವಿರಲಿಲ್ಲ. ಆದರೂ ಕೈಕೊಂಡ ಕೆಲಸವನ್ನು ಧೃತಿಗೆಡದೆ ಮುಂದರಿಸಿದನು. ಅವನ ಆಳವಾದ ಅಚಲವಾದ (ಅಂಧವೆಂದರೂ ಅನ್ನಬಹುದಾದ) ಧರ್ಮಶ್ರದ್ಧೆಯು ಅವನಿಗೆ ಧೃತಿಗೆಡದಂತೆ ಕಾಪಾಡಿತು. ಅವನ ಗ್ರಂಥ ರಾಜವು ಆ ಮಹಾಶಬ್ದಕೋಶವು,—ಆಂಗ್ಲ ಭಾಷೆಯೊಳಗಿನ ಆ ಆದ್ಯಕೋಶವು ೧೭೫೫ ರಲ್ಲಿ ಪ್ರಸಿದ್ಧವಾಯಿತು. ಆ ಮಹಾಕೋಶದ ರಚನೆ, ಪ್ರಕಟಣೆಯೆಂದರೆ ಒಂದು ಅಸಹಾಯ ಶೌರ್ಯದ ಭೀಮ ಸಾಹಸ. ಯಾರಿಂದಲೂ ನೆರವಿಲ್ಲದೆ ಹುರುಪಿಲ್ಲದೆ, ಮೈಯಲ್ಲಿ ಕಸುವಿಲ್ಲದೆ ಕೈಯಲ್ಲಿ ಕಾಸಿಲ್ಲದೆ ಜಾನ್ಸನ್‌ನು ಆ ಮಹತ್ಕಾರ್ಯವನ್ನು ಮಾಡಿ ಮುಗಿಸಿದನು. ಅಂಥ ಕಾರ್ಯವನ್ನು ಏಕಾಕಿಯಾಗಿ ಕೈಗೊಂಡು ಕೈಗೂಡಿಸಿದನೆಂಬುದೇ ಒಂದು ಪ್ರಚಂಡ ಯಶಸ್ಸು.

ನೆರವು ಬೇಕಾದಾಗ ನೆರವು ದೊರೆಯದಿದ್ದರೆ ಅದೊಂದು ದೊಡ್ಡ ದುಃಖ. ಆಗಲೂ, ನೆರವನ್ನು ಹೆರವರಲ್ಲಿ ಕೇಳಲು ಹೋಗಿ ಚಾಚಿದ ಕೈಯನ್ನು ಬರಿದಾಗಿಯೇ ಹಿಂದೆ ತೆರುವಂತಾದರೆ ಅದು ಇನ್ನೂ ದೊಡ್ಡ ಕನಿಕರದ ಸಂಗತಿ. ಆದರೆ ಅದಕ್ಕೂ ಕಟುವಾದ ಭಂಗವು ಒಂದು ಉಂಟು. ಅದು, ಬೇಕಾದಾಗ ಸಿಗದ, ಬೇಡಿದಾಗಲೂ ಬರದ ನೆರವು ಕೆಲಸ ಮುಗಿದ ಮೇಲೆ ಬರೆ ಒಣ ಹೆಮ್ಮೆಯಿಂದ ಕೊಡಮಾಡುವದು ! ಜಾನ್ಸನ್‌ನಿಗೆ ಈ ಮೂರೂ ವಿಷಾನುಭವಗಳು ಬಂದವು. ಅದೆಲ್ಲ ವಿಷವನ್ನೂ ಅವನು ಪಚನ ಮಾಡಿ ವಿಶ್ವ ಸಾಹಿತ್ಯಕ್ಕೆ ಅಪೂರ್ವವಾದ ಅರ್ಥ ಗಾಂಭೀರ್ಯದ ಒಂದು ಪುಟ್ಟ ಕೃತಿಯನ್ನು ಅಮೃತ ಬಿಂದುವಿನಂತೆ ಉಂಟುಮಾಡಿದನು. ಆ ಕೃತಿಯು ಅವನು ಬರೆದ ಒಂದು ಪತ್ರ. ಚೆಸ್ಟರಫೀಲ್ಡದ ಅರ್ಲನು ಒಬ್ಬ ಹೆಸರಾದ ಜಹಾಗೀರುದಾರನಾಗಿದ್ದನು. ಕಲೆ-ವಿದ್ಯೆಗಳಿಗೆಲ್ಲ ಅವನು ಪೋಷಕ ಪುರಸ್ಕರ್ತನೆಂದು ಹೆಸರಾಗಿದ್ದನು. ಆದರೆ ಅವನ ಈ ಪೋಷಣೆ ಪುರಸ್ಕಾರಗಳು ಆತ್ಮಸಂಭಾವನೆಯ ವೃಥಾಡಂಬರವಾಗಿತ್ತು. ಅವನನ್ನು ಕುರಿತು ಜಾನ್ಸನ್‌ನು ಈ ಪತ್ರವನ್ನು ಬರೆದದ್ದು, ಶಬ್ದಕೋಶವು ಪ್ರಸಿದ್ಧವಾಗಿ ಜಾನ್ಸನ್‌ನ ಹೆಸರು ಸರ್ವತೋಮುಖವಾಗುವಂತಿದ್ದಾಗ ಈ ಶ್ರೀಮದ್ಗಾಂಭೀರ್ಯದ ಸರದಾರ ಮಹಾಶಯರು ಅವನ ಪುಸ್ತಕಕ್ಕಾಗಿ ಸಂಭಾವನೆಯನ್ನು ಕೊಡಮಾಡಿದರು. ಆದರೆ ಆಗ ಅಂಥ ಸಂಭಾವಿತ ಸಹಾಯದ ಅವಶ್ಯಕತೆಯು ಎಂದೋ ಕಳೆದು ಹೋಗಿತ್ತು. ಪ್ರೀತಿಯ ಹೆಂಡತಿಯನ್ನು

ಕೊನೆಯ ಕಾಲದಲ್ಲಿ ಸುಖಿಯಾಗಿಡಲು ಹಣದ ನೆರವು ಬೇಕಾಗಿ ಜಾನ್ಸನ್‌ನು ತಾನು ಬರೆದು ಮುಗಿಸುತ್ತಲಿರುವ ಶಬ್ದಕೋಶವನ್ನು ಆ ಚೆಸ್ಟರಫೀಲ್ಡದ ಆರ್ಲನಿಗೆ ಅರ್ಪಣೆ ಮಾಡಲು ಸಮರ್ಪಿಸಿ ಸ್ವಲ್ಪ ಸಹಾಯವನ್ನು ಕೋರಲು-ಸಂಕಲ್ಪಿಸಿದ್ದನು. ಆದರೆ ಅಲ್ಲಿ ಅವನ ಆಶೆಯು ಮಣ್ಣುಗೂಡಿತು-ಆಶೆಯೊಂದಿಗೆ ಇತ್ತ ಪ್ರೀತಿಯ ಹೆಂಡತಿಯೂ ಮಣ್ಣುಗೂಡಿದಳು ! ಅನಂತರ ಆ ಸರದಾರನು ಶಬ್ದಕೋಶವು ಪ್ರಸಿದ್ಧವಾಗಿ ಸುಪ್ರಸಿದ್ಧಿಯನ್ನು ಪಡೆಯುತ್ತಲಿರುವಾಗ ಪುರಸ್ಕಾರಕ್ಕಾಗಿ ಮುಂದೆ ಬಂದನು. ಮಾನಧನನೂ ಜ್ಞಾನಘನನೂ ಆದ ಜಾನ್ಸನ್ ಅದನ್ನು ಹೇಗೆ ಸಹನಮಾಡ್ಯಾನು ?

ತನ್ನ ಮಹಾಗ್ರಂಥದ ಯಶಸ್ಸಿನ ಕುರಿತು ಜಾನ್ಸನ್‌ನಿಗೆ ಪೂರ್ತಿನಂಬಿಗೆ ಇತ್ತು. ಆದ್ದರಿಂದ ಆ ಗ್ರಂಥ ಪ್ರಕಟವಾಗುವ ತರುಣದಲ್ಲಿಯೇ ಅವನು ಚೆಸ್ಟರಫೀಲ್ಡದ ಆರ್ಲನಿಗೆ ಒಂದು ಪತ್ರವನ್ನು ಬರೆದನು. ಅರ್ಥಗೌರವ, ಭಾವಗಾಂಭೀರ್ಯ ಮತ್ತು ಕರುಣವಾದ ಕಟುತೆ ಇವುಗಳಿಗಾಗಿ ಆ ಪತ್ರವು ಅಜರಾಮರವಾಗಿದೆ. ಅದರ ಅಲ್ಪ ಅನುವಾದವು ಇಂತಿದೆ :-

'ನನ್ನ ಪ್ರಭುವೆ,

ನನ್ನ ಶಬ್ದಕೋಶವನ್ನು ಸಾರ್ವಜನಿಕರ ಅವಲೋಕನೆಗಾಗಿ ಯೋಗ್ಯವೆಂದು ಹೊಗಳುವ ಎರಡು ಬರಹಗಳನ್ನು ತಮ್ಮ ಸನ್ನಿಧಿಯು ಬರೆದಿದೆಯೆಂದು 'ವರ್ಲ್ಡ' ಪತ್ರಿಕೆಯ ಒಡೆಯರು ಇತ್ತೀಚೆಗೆ ನನಗೆ ತಿಳಿಸಿದರು. ಹೀಗೆ ವಿಶೇಷ ಮನ್ನಣೆಯನ್ನು ಹೊಂದುವದು ಒಂದು ಗೌರವವು. ಆದರೆ ಅಂಥ ಶ್ರೇಷ್ಠರ ಅನುಗ್ರಹಗಳ ರೂಢಿಯೇ ಇಲ್ಲದ ಮೂಲಕ ಈ ಗೌರವವನ್ನು ಹೇಗೆ ಸ್ವೀಕರಿಸಬೇಕು, ಯಾವ ಮಾತುಗಳಲ್ಲಿ ಅದಕ್ಕಾಗಿ ಆಭಾರಮನ್ನಿಸಬೇಕು ಎಂಬುದೇ ನನಗೆ ಚೆನ್ನಾಗಿ ತಿಳಿಯದು.

ಸ್ವಲ್ಪ ಪ್ರೋತ್ಸಾಹದ ಮೂಲಕ, ತನ್ನ ಸನ್ನಿಧಿಯ ಭೆಟ್ಟಿಯನ್ನು ತೆಗೆದುಕೊಂಡಾಗ ನಾನು ಮಿಕ್ಕ ಮಾನವ ಕೋಟಿಯಂತೆ ತಮ್ಮ ಮಾತುಕತೆಯ ಮೋಹಕತೆಗೆ ಮನಸೋತು ಹೋದೆನು. ನಾನು ಆ ಮಟ್ಟಿಗೆ ಭೂಮಿಯ ಭಾಗ್ಯಶಾಲಿಗಳಲ್ಲಿ ಭಾಗ್ಯಶಾಲಿಯೆಂದು ಹೆಮ್ಮೆಪಟ್ಟುಕೊಳ್ಳಬೇಕೆಂಬ ಮತ್ತು ಪ್ರಪಂಚವೇ ತಮ್ಮಿಂದ ಪಡಕೊಳ್ಳಲು ಹೋರಾಡುವ ಆದರವನ್ನು ನಾನು ದೊರಕಿಸಬಹುದೆಂಬ ಬಯಕೆಯನ್ನು ತಡೆಯದಾದೆನು. ಆದರೆ ನನ್ನ ವಿನಯೋಪಚಾರಗಳಿಗೆ ಇಷ್ಟು ಪ್ರೋತ್ಸಾಹ ದೊರೆಯಿತು, ಅದನ್ನು ಮುಂದರಿಸುವದು ನನ್ನ ಅಭಿಮಾನಕ್ಕಾಗಲಿ, ದಾಕ್ಷಿಣ್ಯಕ್ಕಾಗಲೀ ಅಸಹ್ಯವೆನಿಸಿತು. ತಮ್ಮ ಸನ್ನಿಧಿಯನ್ನು ಒಮ್ಮೆ ಸಾರ್ವಜನಿಕರ ಇದುರು

ಬಿನ್ನವಿಸಿಕೊಂಡಾಗ, ನಿವೃತ್ತನೂ ವಿನಯವಂತ ವಿದ್ವಾಂಸನೂ ತಾಳಿರ ಬಹುದಾದ ಎಲ್ಲ ಅನುನಯ ಕಲೆಯನ್ನು ನಾನು ಬಳಸಿ ಮುಗಿಸಿದ್ದಾಯಿತು. ನನ್ನಿಂದ ಶಕ್ಯವಿದ್ದುದೆಲ್ಲವೂ ನಾನು ಮಾಡಿ ಆಯಿತು ಮತ್ತು ತಾನು ಮಾಡಿದ್ದೆಲ್ಲ ಅದು ಎಷ್ಟೇ ಅಲ್ಪವಿರಲಿ ಉಪೇಕ್ಷಿತವಾಗುವದು ಯಾವ ಮನುಷ್ಯನಿಗೂ ಸೊಗಯಿಸ ಲಾರದು.

ತಮ್ಮ ಹೊರಕೋಣೆಗಳಲ್ಲಿ ಕಾಯುತ್ತ ನಿಂತಂದಿನಿಂದ. ತಮ್ಮ ಬಾಗಿಲಿನಿಂದ ಹೊರಗೆ ತಳ್ಳಲ್ಪಟ್ಟಂದಿನಿಂದ, ಸ್ವಾಮೀ, ಇಂದಿಗೆ ಏಳು ವರ್ಷಗಳು ಸರಿದಿವೆ. ಆ ಅವಧಿಯಲ್ಲೆಲ್ಲ, ಸಹಾಯದ ಒಂದು ಕೃತಿಯೂ ಇಲ್ಲದೆ, ಪ್ರೋತ್ಸಾಹದ ಒಂದು ಮಾತೂ ಸಿಗದೆ, ಅನುಗ್ರಹದ ಒಂದು ಸ್ಮಿತವೂ ದೊರೆಯದೆ, ಕಷ್ಟಗಳೊಳಗಿಂದ ನಾನು ನನ್ನ ಕಾರ್ಯವನ್ನು ಮುಂದೂಡುತ್ತ ಬಂದಿದ್ದೇನೆ, ಅದನ್ನು ಪ್ರಕಟಣೆಯ ಅಂಚಿನ ತನಕವೂ ತಂದಿದ್ದೇನೆ. ಅಂಥ ಯಾವ ನಡುವಳಿಕೆಯನ್ನು ನಾನು ಅಪೇಕ್ಷಿಸಲಿಲ್ಲ; ಏಕಂದರೆ ನನಗೆ ಯಾವಾಗಲೂ ಪೋಷಕ ಪ್ರಭುವು ಇದ್ದಿಲ್ಲ.

ವ್ಹರ್ಜಿಲ್‌ನ ಕಾವ್ಯದಲ್ಲಿಯ ಕುರುಬನು ಕೊನೆಗೂ ಒಮ್ಮೆ ಪ್ರೀತಿಯ ಪರಿಚಯ ವನ್ನು ಮಾಡಿಕೊಂಡನು; ಅದನ್ನು ಬಂಡೆಗಲ್ಲುಗಳ ರಹಿವಾಸಿಯೆಂದು ಕಂಡು ಕೊಂಡನು.

ಮಹಾಪ್ರಭುಗಳೇ, ಒಬ್ಬ ಮನುಷ್ಯನು ನೀರೊಳಗೆ ಮುಳುಗುತ್ತ ಬಾಳಿಗಾಗಿ ಒದ್ದಾಡುವಾಗ ಪರಿವೆ ಇಲ್ಲದೆ ನಿರೀಕ್ಷಿಸುತ್ತ, ಆತನು ನೆಲವನ್ನು ತಲ್ಪಿದ ಮೇಲೆ ನೆರವಿನ ಭಾರವನ್ನು ಅವನ ಮೇಲೆ ಹೇರಲು ಬರುವಾತನೇ ಪೋಷಕನಲ್ಲವೇ ?' ನನ್ನ ಶ್ರಮಗಳನ್ನು ಗಮನಿಸುವದರಲ್ಲಿ ತಾವು ಸಂತೋಷ ಪಟ್ಟಿರುವಿರಿ. ಈ ಗಮನವು ಮುಂಚಿತವಾಗಿ ಬಂದಿದ್ದರೆ ಕೃಪೆಯೆನಿಸುತ್ತಿತ್ತು: ಆದರೆ ಅದು ಈ ವರೆಗೆ ವಿಲಂಬಗೊಂಡಿತು. ಈಗ ನಾನು ಉದಾಸೀನನಾಗಿದ್ದರಿಂದ ಅದನ್ನು ಭೋಗಿಸಲಾರೆನು; ಏಕಾಕಿಯಾಗಿರುವೆನಾದ್ದರಿಂದ, ಅನ್ಯರೊಡನೆ ಭಾಗಿಸಿ ಕೊಳ್ಳಲಾರೆನು; ಮತ್ತು ಸಾಕಷ್ಟು ಲೋಕಪರಿಚಿತನಾಗಿದ್ದೇನಾದ್ದರಿಂದ, ಅವಶ್ಯ ವೆಂದು ಅಪೇಕ್ಷಿಸಲಾರೆನು.

ನನ್ನ ಆಶೆ ಇಷ್ಟೇ ಲಾಭಾನುಗ್ರಹಗಳನ್ನು ಪಡೆಯದಿದ್ದಲ್ಲಿ ಋಣವನ್ನು ಒಪ್ಪಿ ಕೊಳ್ಳದಿರುವದು. ಅಥವಾ ದೇವರ ಅನುಗ್ರಹದಿಂದ ನಾನು ಸ್ವತಃ ಸಾಧಿಸಲು ಸಮರ್ಥವಾದುದಕ್ಕೆ ನಾನು ಒಬ್ಬ ಪೋಷಕ ಪ್ರಭುವಿಗೆ ಋಣಿಯಾಗಿದ್ದೇನೆಂದು ಸಾರ್ವಜನಿಕರು ತಿಳಿಯುವದು ನನಗೆ ಒಪ್ಪಿಗೆಯಾಗದಿರುವದು ಕೇವಲ ಕುಹಕ ಕಟುವೃತ್ತಿಯಾಗಲಿಕ್ಕಿಲ್ಲ.

ಇದುವರೆಗೆ ಯಾವದೇ ವಿದ್ವದಾಶ್ರಯದ ದಾತಾರನ ಸ್ವಲ್ಪವೂ ಋಣವಿಲ್ಲದೆ ಈ ಮಟ್ಟಕ್ಕೆ ಕಾರ್ಯವನ್ನು ನಿರ್ವಹಿಸಿ ತಂದ ನನಗೆ ಆ ಕಾರ್ಯವನ್ನು ಅದಕ್ಕೂ ಕಡಿಮೆ ಋಣದಿಂದ ಸಮಾಪ್ತಿಗೊಳಿಸಬೇಕಾಗಿ ಬಂದರೂ ನಿರಾಶೆಯಾಗಲಿಕ್ಕಿಲ್ಲ. ಏಕೆಂದರೆ, ಮಹಾಸ್ವಾಮಿ, ಹಿಂದೊಮ್ಮೆ ಅಷ್ಟೊಂದು ಉತ್ಸಾಹದಿಂದ ಜಂಭ ಪಟ್ಟುಕೊಂಡಂಥ ಆಶೆಯ ಸ್ವಪ್ನದಿಂದ ನಾನು ಎಚ್ಚತ್ತು ದೀರ್ಘಕಾಲವಾಯಿತು.

ತಮ್ಮ ಸನ್ನಿಧಿಯ ಅತಿವಿನಮ್ರ ಅತಿವಿಧೇಯ ಸೇವಕ

– ಸ್ಯಾಮ ಜಾನ್ಸನ್.'

ಮೊದಲಿಗೆ ಒಪ್ಪಿರುವೆನು. ಇದು ಮೂಲ ಪತ್ರದ ಅತ್ಯಲ್ಪ ಯೋಗ್ಯತೆಯ ಅನುವಾದ. ಮಾತಿನ ಸಂಯಮ, ಭಾವದ ಗಾಂಭೀರ್ಯ, ವಾಕ್ಸರಣಿಯ ಸಮತೂಕ, 'ವಾಗರ್ಥ ಪ್ರತಿಪತ್ತಿ' ಯ ಅಸಾಮಾನ್ಯ ಔಚಿತ್ಯ–ಎಲ್ಲದಕ್ಕೂ ಹಿನ್ನೆಲೆ ಯಲ್ಲಿ ಸ್ಫುರಿಸುವ ಕಾರುಣ್ಯದ ಮಿಡಿತ, ಎಲ್ಲವನ್ನೂ ಮೀರಿಸಿ ಮಿರುಗಿಸುವ ಭಾಷಾ ಪ್ರಭುತ್ವದ ಪ್ರೌಢಿಮೆ. ಇವೆಲ್ಲ ಲಕ್ಷಣಗಳಿಂದ ಒಪ್ಪುವ ಆ ಪತ್ರವನ್ನು ಮೂಲದಲ್ಲಿಯೇ ಓದಬೇಕು. ಅದನ್ನು ಓದಿದವರಿಗೆ ಈ ಅನುವಾದದಲ್ಲಿ ಯಾವ ಸ್ವಾರಸ್ಯವೂ ಅನಿಸಲಿಕ್ಕಿಲ್ಲ. ಅದನ್ನು ಓದದವರಿಗೂ ಈ ಅನುವಾದದಲ್ಲಿ ನಿಜವಾದ ಸ್ವಾರಸ್ಯವು ತಿಳಿಯಲಿಕ್ಕಿಲ್ಲ.

ಆಂಗ್ಲ ಶಬ್ದಕೋಶವಲ್ಲದೆ ಅವನ ಇನ್ನುಳಿದ ಗ್ರಂಥ ನಿರ್ಮಿತಿಯು ಇಂತಿದೆ. ೧೭೫೯ ರಲ್ಲಿ ಅವನು 'ರಾಸೆಲಾಸ್' ಎಂಬ ಒಂದು ಅದ್ಭುತ ರಮ್ಯಕಾದಂಬರಿ ಯನ್ನು ಪ್ರಕಟಿಸಿದನು. ಅದು ರೂಪದಲ್ಲಿ ಕಾದಂಬರಿಯಿದ್ದರೂ, ಗುಣದಲ್ಲಿ ತತ್ವೋಪದೇಶವೇ ಆಗಿತ್ತು. ಅದೇ ವರ್ಷವೇ ಅವನು 'ಐಡ್ಲರ' (ಸೋಮಾರಿ) ಎಂಬ ಸಾಪ್ತಾಹಿಕವನ್ನು ನಡೆಸಿದನು. ೧೭೭೩ ರಲ್ಲಿ ಅವನು ತನ್ನ 'ಅಂತೆವಾಸಿ' ಬಾಸ್ವೆಲ್‌ನೊಡನೆ ಹೆಬ್ರಾಯಿಡ್ಸ ಪ್ರದೇಶದಲ್ಲಿ ಪ್ರವಾಸಮಾಡಿ ಬಂದನು. ಎರಡು ವರ್ಷಗಳ ನಂತರ ಆ ಪ್ರವಾಸದ ವೃತ್ತವನ್ನು ಪ್ರಕಟಿಸಿದನು. ೧೭೭೯ ರಿಂದ ೮೧ ರಲ್ಲಿ ಅವನು 'ಆಂಗ್ಲ ಕವಿ ಚರಿತ್ರ'ಗಳನ್ನು ಬರೆದನು. ಆ ಚರಿತ್ರಗಳಲ್ಲಿಯೇ ಅವನ ವಿಮರ್ಶ ವಿಚಕ್ಷಣತೆಯು ಮೊದಲು ವ್ಯಕ್ತವಾಯಿತು. ೧೭೭೫ ರಲ್ಲಿ ಅವನ ಜೀವನದ ಅತ್ಯುಚ್ಚ ಗೌರವವು–ಅವನ ಸಾಹಿತ್ಯ ಪಾಂಡಿತ್ಯದ ಪರಮೋಚ್ಚ ಪದವಿಯು ಅವನಿಗೆ ದೊರೆಯಿತು. ಆಕ್ಸಫೋರ್ಡ (ಕವಿ ರವೀಂದ್ರರ ಪ್ರಯೋಗ ದಂತೆ 'ಉಕ್ಷತೀರ್ಥ' !) ವಿಶ್ವವಿದ್ಯಾಲಯವು ಜಾನ್ಸನ್‌ನಿಗೆ 'ಡಾಕ್ಟರ ಆಫ ಲಾಜ' ಎಂಬ ಪದವಿಯನ್ನು ದಯಪಾಲಿಸಿ ತನ್ನ ಗೌರವವನ್ನು ಕಾಪಾಡಿಕೊಂಡಿತು. (ಈ 'ಡಾಕ್ಟರ' ಪದವಿಯು ನಮ್ಮ ಪ್ರಾಚೀನ ವಿದ್ವತ್ತೆಯಲ್ಲಿಯ 'ಭಟ್ಟ' ಎಂಬ ಪದವಿ

ಯಂತೆ ಪಾಂಡಿತ್ಯದ ಪರಮಾವಧಿ.) ಆದರೆ ಜಾನ್ಸನ್‌ನಿಗೆ ಪದವಿಯ ಮೋಹವು ತಿಲಮಾತ್ರವೂ ಇದ್ದಿಲ್ಲ. ತನ್ನ ಮಟ್ಟಿಗೆ ಮಂದಿಯ ಮಟ್ಟಿಗೆ ಅವನು ಸ್ಯಾಮು-ಜಾನ್ಸನ್‌ನೇ ಉಳಿದನು. ಈ ವಿನಯ ಮಾಹಾತ್ಮ್ಯವೆ ವಿದ್ಯೆಯ ಕುರುಹಲ್ಲವೇ ? ೧೭೮೫ ರಲ್ಲಿ–ಅವನು ತೀರಿಹೋದ ಮರುವರುಷ–ಅವನ 'ಪ್ರಾರ್ಥನೆಗಳೂ, ಧ್ಯಾನಚಿಂತನೆಗಳೂ' ಎಂಬ ಪುಸ್ತಕವು ಬೆಳಕಿಗೆ ಬಂದಿತು.

ಆದರೆ ಜಾನ್ಸನ್ ತನ್ನ ಕೃತಿಗಳಿಂದ ಅಮರನಾಗಲಿಲ್ಲ. ಅವನಿಂದ ಆ ಕೃತಿಗಳು ಅಮರವೆನಿಸಿಕೊಂಡವು. ಜಾನ್ಸನ್ ತನ್ನ ಕೃತಿಗಳಿಗಿಂತಲೂ ಶ್ರೇಷ್ಠನು. ಅವನ ಪುಸ್ತಕಗಳಲ್ಲಿ ವ್ಯಕ್ತವಾದ ಅವನ ವ್ಯಕ್ತಿತ್ವಕ್ಕಿಂತಲೂ, ತತ್ಕಾಲಿನ ಸಾಹಿತ್ಯ ಪ್ರಪಂಚದಲ್ಲಿ, ಆಗಿನ ಕವಿಕಲಾವಿದ ಲೇಖಕರ ಪ್ರತಿಷ್ಠಿತ ಪ್ರಥಿತಯಶವ ವರ್ಗ-ಗಳಲ್ಲಿ, ಪ್ರಭಾವಿಯಾದ ಅವನ ಪ್ರಭುತ್ವವೇ ಇನ್ನೂ ಸಜೀವವಾಗಿ ಉಳಿದಿದೆ.

೧೭೬೩ ರಲ್ಲಿ ಜೇಮ್ಸಬೊಸ್ವೆಲ್‌ನು ಜಾನ್ಸನ್‌ನಿಗೆ ಭೆಟ್ಟಿಯಾದನು. ಈ ಭೆಟ್ಟಿ ಉಭಯತರಿಗೂ ಉಳಿದ ಜಗತ್ತಿಗೂ ಉಪಕಾರಿಯಾಯಿತು. ಈ ಭೆಟ್ಟಿಗಾಗಿ ಪ್ರಪಂಚವು ಇಬ್ಬರಿಗೂ ಋಣಿಯಾಗಿರಬೇಕು. ಈ ಭೆಟ್ಟಿಯಿಂದ ಜಾನ್ಸನ್‌ನ ಅವ್ಯವಸ್ಥಿತವೂ, ವಿಚಿತ್ರವೂ ಅಲೌಕಿಕವೂ ಆದ ಪ್ರತಿಭೆಯ ಪ್ರಭುತ್ವಕ್ಕೆ ಪ್ರಪಂಚದ ಮೇಧಾವಿಗಳೂ ರಸಿಕರೂ ಕೌತುಕದ ಕಪ್ಪಗಾಣಿಕೆ ಕೊಡುವಂತಾಯಿತು. ಜಾನ್ಸನ್‌ನೆಂಬ ಸೂರ್ಯನಿಗೆ ಬಾಸ್ವೆಲ್‌ನು ಚಂದ್ರನಾಗಿ ದೊರೆತನು–ಬಿಂಬಗ್ರಾಹಿ-ಯಾದನು. ಬಾಸ್ವೆಲ್‌ನೂ ಮಾದರಿಯ ಚರಿತ್ರಕಾರನೆಂದು ಸೂರ್ಯಚಂದ್ರ-ರಿರುವನಕವೂ ವಿಶ್ವವು ಒಪ್ಪುವಂತಾಯಿತು. 'ಯಾವ ಧೀರೋದಾತ್ತ ನಾಯಕನೂ ಅವನ ಪರಿಚಾರಕನಿಗೆ ನಾಯಕನೆನಿಸುವದಿಲ್ಲ.' ಎಂಬ ಅರ್ಥದ ಜಾಣ್ನುಡಿಯೊಂದು ಆಂಗ್ಲ ಭಾಷೆಯಲ್ಲಿ ರೂಢವಾಗಿದೆ. ಹತ್ತಿರದವರಿಗೆ ದೋಷಗಳೇ ತೋರುತ್ತವೆ. ದೂರದವರಿಗೆ ಗುಣಗಳೇ ಅವು 'ಬೆಟ್ಟದಂತೆ ನುಣ್ಣಗೆ' ಕಾಣುತ್ತವೆ. ಆದರೆ ದೂರದರ್ಶಿಯೂ ಆದರಿಂದಲೂ, ಸಮೀಪದ ಆಪ್ತತೆಯಿಂದಲೂ ಮಹಾತ್ಮರ ವ್ಯಕ್ತಿತ್ವವನ್ನೂ ನೋಡಿ ತೂಗಿ ತಲೆದೂಗಿ ಅದನ್ನು ಯಥಾರ್ಥವಾಗಿ ಬಣ್ಣಿ-ಸುವಾಗಲೂ ಸಮರ್ಥ ಅಸಾಮಾನ್ಯ ಕಾರ್ಯಕರ್ತನು–ಕೇವಲ ಜಾನ್ಸನ್‌ನ ಆಪ್ತ ಕಾರ್ಯದರ್ಶಿಯಲ್ಲ. ಅವನ ನಂತರದ ಅಂಥ ಪ್ರಾಮಾಣಿಕ, ಪ್ರತಿಭಾಶಾಲಿ ಚರಿತ್ರ ಚಿತ್ರಕನೆಂದರೆ ನಮ್ಮ ಪೂಜ್ಯ ಬಾಪೂಜಿಯವರಿಗೆ 'ತಂದೆಯಂತೆಯೂ ಮಗನಂತೆಯೂ' ಆಗಿ ಹೋದ ಮಹಾದೇವ ದೇಸಾಯಿಯೆ ಸರಿ ! ಇರಲಿ. ಜಾನ್ಸನ್‌ನ 'ಜೀವನ ಚರಿತ್ರ'ವನ್ನು ಬರೆದು ಒಂದು ಅತ್ಯುತ್ತಮ ಕೃತಿಯನ್ನು–ಆದರ್ಶಚರಿತ್ರ ಗ್ರಂಥವನ್ನು ವಿಶ್ವ ಸಾಹಿತ್ಯಕ್ಕೆ ಬಾಸ್ವೆಲನು ಸಲ್ಲಿಸಿದನು. ಆ ಕೃತಿ

ಯಲ್ಲಿ ಜಾನ್ಸನ್‌ನು ಮಾನವ ವ್ಯಕ್ತಿಯಾಗಿ ನಿಂತಿದ್ದಾನೆ; ಅವನ ಮಾತುಕತೆ ಮೌಲಿಕವಾಗಿ ಮಾರ್ಮಿಕವಾಗಿ ಮಿಂಚಿದೆ. ಎರಡೂ ಅದ್ವಿತೀಯವಾಗಿ ಮೂಡಿವೆ.

ಇದೋ ನೋಡಿ, ೧೭೬೩ ರಲ್ಲಿ ಜಾನ್ಸನ್‌ನು ಗೃಹಸ್ಥಾಶ್ರಮಿಯಾಗಿ ಹೀಗೆ ಶೋಭಿಸುತ್ತಾನೆ :-

'ಅವನ ಕಂದಿಬಣ್ಣದ ಕೋಟು-ಚಣ್ಣಗಳು ಜಂಗುಹಿಡಿದಂತೆ ಕಾಣುತ್ತಿದ್ದವು. ಅವನ ತಲೆಗೆ ಚಿಕ್ಕದೊಂದು ಮುದುಡಿ ಮಡಚಿಹೋದ, ಪಾವಡಕ ಹಾಕದಂಥ ಟೋಪ್ಪು,-ಅದೂ ಅವನ ತಲೆಗೆ ತೀರಚಿಕ್ಕದಾಗಿತ್ತು. ಅವನ ಶರ್ಟಿನ ಕುತ್ತಿಗೆ ಪಟ್ಟಿಯೂ, ಚಣ್ಣದ ಮಂಡಿಗಳೂ ಸವೆದು ಸಡಿಲಾಗಿದ್ದವು. ಅವನ ಕಪ್ಪು ಉಣ್ಣೆಯ ಕಾಲಚೀಲಗಳು ಸರಿಯಾಗಿ ಮೇಲೆ ಜಗ್ಗಿಕೊಂಡಿಲ್ಲ; ಒಕ್ಕಲುಬಿಟ್ಟ ಕಿರಿಬೂಟುಗಳನ್ನೇ ಚಪ್ಪಲಿಯಂತೆ ಅವನು ಮೆಟ್ಟಿದ್ದನು. ಆದರೆ ಇವೆಲ್ಲ ಅಸಡ್ಡಾಳ ವೇಷ ಭೂಷೆಯ ವಿವರಗಳು, ಅವನು ಮಾತನಾಡಲು ಆರಂಭಿಸಿದೊಡನೆಯೇ ಒಮ್ಮೆಲೆ ಮರೆತು ಮಾಯವಾಗುತ್ತಿದ್ದವು.'

ಮಾತನಾಡಲು ಆರಂಭಿಸಿದ ಕ್ಷಣಕ್ಕೆ ಈ ಹೊಲಸು ಬಟ್ಟೆಯ ಮಾಸಿದ ಮೈಯ ಅಂದಗೆಟ್ಟ ಮನುಷ್ಯನು ಮಾಯೆಯ ಮಾಂತ್ರಿಕನಾಗಿ ಬಿಡುತ್ತಿದ್ದನು. ಶಬ್ದಗಳ ಇಂದ್ರಜಾಲವನ್ನು ಪ್ರತಿಭೆಯ ಇಂದ್ರಚಾಪವನ್ನು ನಿರ್ಮಿಸುತ್ತಿದ್ದನು. ಲಿಟರರಿ ಕ್ಲಬ್ ಎಂಬುದೊಂದು ಅವರ ಸಾಹಿತಿಗಳ ಸಂಘವಿತ್ತು. ಆ ಸಂಘದ ಸದಸ್ಯರೆಲ್ಲರೂ ಪ್ರಾಜ್ಞ ವರ್ಗದ ಅಂತರಿಕ್ಷದಲ್ಲಿ ತೊಳಗುವ ತಾರೆಗಳೇ. ಆ ತಾರಾ ಮಂಡಲಕ್ಕೆ ಇವನೇ ಅರಸನು. ಅವನ ಕಾಲದ ಆಂಗ್ಲ ಮಹಾಪುರುಷರೆಲ್ಲ-ಸರ್ ಜೊಸುವಾ ರೆನಾಲ್ಡ್ಸ್, ಗೋಲ್ಡ್‌ಸ್ಮಿಥ್, ಗ್ಯಾರಿಕ್, ಗಿಬನ್, ಬರ್ಕ, ಫೊಕ್ಸ್, ಮುಂತಾದ ಉದ್ದಾಮ ಪ್ರತಿಭಾಶಾಲಿಗಳು ಅವನ ಸುತ್ತಲು ಕಲೆಯುತ್ತಿದ್ದರು. ಅವನನ್ನು ಕಿವಿನಿಮಿರಿಸಿಕೊಂಡು ಕೇಳುತಿದ್ದರು. ಅವನ ಮೇಲೆ ಮನಸಾರೆ ಮಮತೆಯ ಮಳೆಗರೆಯುತಿದ್ದರು. 'ಇಲ್ಲ ಸ್ವಾಮಿ'-ಎಂದು ಅವನು ಗುಡುಗುತ್ತಿದ್ದನು. 'ಏಕೆ ಸ್ವಾಮಿ ?' ಎಂದು ಅವನು ವಾದಿಸುತಿದ್ದನು. ಆದರೆ ಅವನು ಹಲಸಿನ ಹಣ್ಣಿನಂತೆ-ಹೊರಗೆಲ್ಲ ಮುಳ್ಳುದೊರಗು, ಒಳಗೆಲ್ಲ ಅಷ್ಟೇ ಸವಿ ! ನೋಟಕ್ಕೆ-ನಯನೀತಿಗಳಲ್ಲಿ ಆತ ಒರಟು ಆಳು; ಆದರೆ ಹೃದಯದಿಂದ ತುಂಬ ಕರುಣಾಳು ! ಅವನು ಸದಾ ದರಿದ್ರನಿದ್ದನು-ಆದರೆ ಹಾಗೆಯೇ ದಯಾರ್ದ್ರನಿದ್ದನು. ಅವನ ಔದಾರ್ಯ ಎಂದಿಗೂ ಕುಗ್ಗಲಿಲ್ಲ. ಅವನ ಧಾರ್ಮಿಕತೆ-ಕ್ರೈಸ್ತ ಧರ್ಮಾಚರಣೆ-ಶ್ರದ್ಧೆ, ಭಯಲೋಕ ಭ್ರಮದಿಂದ ತುಂಬಿತ್ತು. ಆದರೆ ಅವನ ದಯಾಧರ್ಮ ಯಾವಾಗಲೂ ವಿವೇಕಿಯಾಗಿತ್ತು, ವ್ಯಾವಹಾರಿಕವಾಗಿತ್ತು.

ಒಮ್ಮೆ ಫ್ಲೀಟಸ್ಟ್ರೀಟಿನಲ್ಲಿ–ಈ ಕೇರಿಯು ಲಂಡನ್ನಿನ ಜಗತ್ಪ್ರಸಿದ್ಧ ಪತ್ರಿಕಾ ವ್ಯವಸಾಯದ ಓಣಿಯು,–ಅವನು ಹಾದು ಬರುತ್ತಿದ್ದನು. ದೇಹವು ಸ್ಥೂಲ ಜೋಲಿಹೊಡೆಯುವ ನಡಿಗೆ. ಅವನು ಗಟಾರಿನ ಗುಂಟ ಬಿದ್ದ ಒಬ್ಬ ಹೆಂಗಸನ್ನು ಎಡವಿ ಬಿದ್ದನು. ಆಕೆ ಒಬ್ಬ ಬೀದಿಯ ಬಸವಿ. ಜಾನ್ಸನ್‌ನು ಎದ್ದು ಆಕೆಯನ್ನು ತನ್ನ ವಿಶಾಲವಾದ ಬೆನ್ನಿನ ತಪ್ಪಲಿಗೆ ಏರಿಸಿ ಹೇಗೋ ಕಷ್ಟಪಟ್ಟು ತನ್ನ ಮನೆಗೆ ಹೊತ್ತುತಂದನು. ತಂದ ಮಾತ್ರಕ್ಕೆ ಮುಗಿಯಲಿಲ್ಲ ತೊಂದರೆ. ಆಕೆ ಹಾಗೆಯೇ ದೀರ್ಘಾವಧಿ ಕಾಯಿಲೆ ಬಿದ್ದಳು. ಆತನು ಅವಳನ್ನು ಬೇಸೆಯಲ್ಲಿಲ್ಲ ಉಪ ಚರಿಸಿದನು. ಆರೈಕೆಯನ್ನು ಒದಗಿಸಿ ಗುಣಪಡಿಸಿದನು. ಪೂರ್ತಿವಾಸಿಯಾದ ಮೇಲ ಆಕೆಗೆ ಒಂದು ಕೆಲಸವನ್ನು ಹುಡುಕಿಕೊಟ್ಟನು. ಅವನ ಮನೆಯು ಅಸಹಾಯ ಗೆಳೆಯರಿಗೂ ಅವಲಂಬಿ ಆಪ್ತರಿಗೂ ಒಂದು ಧರ್ಮಶಾಲೆ. ಅಲ್ಲಿ–ಅಂಥವರೇ ಅವನ ವಿಚಿತ್ರ ಬಳಗ. ಅವನ ಮಮತೆಯಲ್ಲಿ ಪಾಲು ಕೇಳಲು ಬಂದ ಯಾರಿಗೂ ಅವನು ನೆರವಾದಷ್ಟೂ ಕಡಿಮೆಯೇ.

'ಕಿರುಕೊಳು ಬಿಕ್ಕೆಬೇಡುವವರಿಗೆಲ್ಲ ಬಿಡಿಕಾಸುಗಳನ್ನು ಕೊಡುತ್ತ ಹೋದರ ಪ್ರಯೋಜನವೇನು ?'–ಯಾರೋ ಬುದ್ಧಿವಂತರು ಒಮ್ಮೆ ಜಾನ್ಸನ್‌ನಿಗೆ ಕೇಳಿದರು ಅವನ ಅಪಾರ ಉದಾರತೆಯನ್ನು ನೋಡಿ, 'ಹಾಗೆಲ್ಲ ಹಣ ಚಲ್ಲಿದರೆ ಬರುವ ದೇನು ? ಆ ಬಡ ಪಿಶಾಚಿಗಳು ಅವನ್ನು ಹೆಂಡ ಹೊಗೆಸೊಪ್ಪುಗಳಿಗಾಗಿಯೇ ಹಾಳು ಮಾಡಿಬಿಡುವರು !' ಎಂದು ತಮ್ಮ 'ಸೂಕ್ತ ಸಲಹೆ'ಯನ್ನು ಮುಗಿಸಿದರು.

'ಹೆಂಡ–ಹೊಗೆಸೊಪ್ಪುಗಳ ಮೇಲೆ ಹಣ ಚೆಲ್ಲಿದರೆ ಏನು ಹಾಳು ? ಅವರ ಬದುಕನ್ನು ಸವಿಗೊಳಿಸುವಂಥ ಅಂಥ ವಸ್ತುಗಳನ್ನು ಪಾಪ, ಆ ಬಡಪಾಯಿ ಗಳೇಕೆ ಕೊಂಡುಕೊಳ್ಳಬಾರದು ?'–ಎಂದು ಜಾನ್ಸನ್ ಅದಕ್ಕೆ ಮರುಸವಾಲಿ ನಿಂದಲೇ ಉತ್ತರಕೊಟ್ಟನು.

ಏಕೆಂದರೆ, ಜಾನ್ಸನ್ ವಿರಕ್ತ ಬೂದಿಬಸವನಿದ್ದಿಲ್ಲ–ಉದಾಸೀನ ಘಟಿಂಗನಿದ್ದಿಲ್ಲ ಬಡವನಿದ್ದ; ಚಿಂತಾಕ್ರಾಂತನೂ ಇದ್ದ; ವ್ಯಾಧಿಗಳಿಂದ ಜರ್ಜರನೂ ಆಗಿದ್ದ ಆದರೇನು? ಅವನ ಎದೆಯಲ್ಲಿ ಕಾರುಣ್ಯದೊಡನೆ ಸದಾತಾರುಣ್ಯವು ಪುಟಿಯುತಿತ್ತು. ಜೀವನದ ಆಸಕ್ತಿ–ಜೀವನಾನಂದವನ್ನು ಭೋಗಿಸಬೇಕೆಂಬ ರಸಿಕ ವೃತ್ತಿ-ಜಾನ್ಸನ್‌ನಲ್ಲಿ ತೀವ್ರವಾಗಿತ್ತು. ಸದಾ ಜಾಗ್ರತವಾಗಿತ್ತು. ನಗುವಿನಲ್ಲಿ ಅವನು ಅಬ್ಬರ ತಡಸಲಿ ಸರಿ; ಅವನು ಕುಡಿಯುವದು ಕಡಿಮೆಯೇ: ಆದ ಅವನು ತುಂಬ ತಿಂಡಿಪ್ರೋತ. ಹೃದಯದಂತೆ ಅವನ ಉದರವೂ ಉದಾರ

ಕ್ರೈಸ್ತನೂ ಆಂಗ್ಲನೂ ಆಗಿದ್ದರೂ ಭೋಜನ ಪ್ರಿಯತೆಯ ಮಟ್ಟಿಗೆ ಅವನು ಮಹಾಬ್ರಾಹ್ಮಣನೇ ಅನ್ನಬೇಕು. 'ಅನ್ನ ಬೇಕು! ಉಂಡು ತಿನ್ನಬೇಕು'– ಎಂಬುದೆ ಆ ಗ್ರಾಸಯ್ಯನ ಸೊಲ್ಲು! ಒಳ್ಳೆ ಮಾತುಕತೆ, ಹುರಿಕಟ್ಟಾದ ಹರಟೆ, ವೇಗದ ಸಂಚಾರ, ಅವನಿಗೆ ತುಂಬ ಇಷ್ಟ. ಅವನಿಗೂ ಸೌಂದರ್ಯಕ್ಕೂ ಅಭಾವ ಸಂಬಂಧವಿದ್ದರೂ, ಚೆಲುವೆಯರೆಂದರೆ ಜಾನ್ಸನ್‌ನಿಗೆ ತುಂಬ ಮೆಚ್ಚಿಗೆ. ಆದರೆ ಬರೆ ದೇಹದ ಚೆಲುವಿನಿಂದ ಅವನು ತೃಪ್ತನಿದ್ದಿಲ್ಲ. ಬುದ್ಧಿಯ ಚೆಲುವು ಅವನಿಗೆ ಅವಶ್ಯವಿತ್ತು. ಒಮ್ಮೆ ಅವನು ವೇಗದಿಂದ ಮಾರ್ಗವನ್ನು ಆಕ್ರಮಿಸುತ್ತಿದ್ದಾಗ ಹೀಗೆ ಅಂದಿದ್ದನು. 'ಬೇರೆ ಕರ್ತವ್ಯಗಳು ನನಗೆ ಇದ್ದಿಲ್ಲವಾದರೆ, ಭವಿಷ್ಯದ ಸಂದರ್ಭ ಇಲ್ಲದಿದ್ದರೆ, ನನ್ನ ಆಯುಷ್ಯವನ್ನೆಲ್ಲ ಯಾರೊಬ್ಬ ಚೆಲುವೆಯೊಡನೆ ಒಂದು ಸಾರೋಟಿನಲ್ಲಿ ಕೂತು ಅತಿ ವೇಗದಿಂದ ಪ್ರಯಾಣ ಮಾಡುವದರಲ್ಲಿಯೇ ಕಳೆಯುತ್ತಿದ್ದೆನು. ಆದರೆ ಒಂದು ಶರ್ತು, ಆ ಚೆಲುವೆಯು ನನ್ನನ್ನು ಅರಿತು ಕೊಳ್ಳುವಂತಿರಬೇಕು. ನನ್ನೊಡನೆ ಸಂಭಾಷಣವನ್ನು ಬೆಳಿಸುವಂತಿರಬೇಕು'

ಮತ್ತು ಸೋಜಿಗವೇನೆಂದರೆ, ಅಂಥ ಚೆಲುವೆಯರೂ ಚಪಲೆಯರೂ ಅವನನ್ನು ಮೆಚ್ಚುತಿದ್ದರು. ಅವನ ವಿಕಟವ್ಯಂಗ ಅಂಗವಿಕ್ಷೇಪಗಳೂ ವೃತ್ತಿ ವರ್ತನದ ವೈಚಿತ್ರ್ಯ ಗಳೂ ಏನೇ ಇದ್ದರೂ ಸ್ತ್ರೀಯರು ಅವನ ಕುರಿತು ಆದರ-ಅನುರಾಗಗಳನ್ನು ತೋರುತ್ತಿದ್ದರು. ಅವನ ಅಂಗವಿಕ್ಷೇಪಗಳು–ಮೈಕೈಗಳ ನ್ಯಾಸಗಳು–ನಿಜವಾಗಿಯೂ ವಿಚಿತ್ರವಿದ್ದವು. ಹೊರಳುವದು, ತನ್ನ ಪ್ರಚಂಡ ದೇಹವನ್ನು ವಿಕಾರವಾಗಿ ಮಣಿಸಿ ಕುಣಿಸುವದು, ತುಟಿಯೊಳಗೆ ಗೊಣಗುಟ್ಟುತ್ತ ಸಿಳ್ಳುಹಾಕುತ್ತ ಉಳಿಯುವದು, ತಲೆಯನ್ನು ತೂಗಾಡಿಸುತ್ತ ಇರುವದು, ಗಲ್ಲಗಳನ್ನು ಆಗಾಗ್ಗ ಉಬ್ಬಿಸಿ ಉಸಿರು ಬಿಡುವದು–ಒಂದಲ್ಲ ಎರಡಲ್ಲ ಅವನ ಅಂಗಚೇಷ್ಟೆಗಳೂ ಮಂಗಚೇಷ್ಟೆಗಳೂ ಅನೇಕ ಇದ್ದವು. ಆದರೆ ಅವು ಯಾವವೂ ಅವನ ಬುದ್ಧಿ ಪ್ರತಿಭೆಯನ್ನು ಸೋಂಕಲಿಲ್ಲ. ಕೊನೆಯ ಗಳಿಗೆಯಲ್ಲಿಯೂ ಕೂಡ ಜಾನ್ಸನ್‌ನ ಮೇಧಾಶಕ್ತಿಯೂ, ಪ್ರತ್ಯುತ್ಪನ್ನ ಮತಿಯೂ (ಕುಶಲ ಪ್ರಜ್ಞೆಯೂ) ತೀಕ್ಷ್ಣವಾಗಿದ್ದವು, ಅಜೇಯವಾಗಿದ್ದವು.

ಜಾನ್ಸನ್‌ನ ಮಾತಿನಲ್ಲಿ ಅಂಥ ಮೆಚ್ಚುಮದ್ದು ಯಾವದಿತ್ತು? ಅದೇನು ಕಂಚಿನ ಕಂಠದ ಮಿಂಚಿನ ಭಾಷಣವಲ್ಲ. ಆದರೆ ಚಾಟಿಯ ಪೆಟ್ಟಿನಂತೆ ಸಿಡಿಲಿನ ಕಿಡಿಯಂತೆ ಹಾಸ್ಯದ ಕಿರಣದಂತೆ ಬುದ್ಧಿಯನ್ನು ಬಡಿದೆಚ್ಚರಿಸುವ, ಕೇಳಿದಾಗಲೇ ಸೋಲುವಂತೆ ಮಾಡುವ, ಚತುರ ಚಪಲ ಚಾಟೂಕ್ತಿಯ ವಾಕ್‌ಶಕ್ತಿ ಅವನದಾಗಿತ್ತು. ಅವನ ಅಂಥ ಅನೇಕ ಸೂಕ್ತಿಗಳು ಆಂಗ್ಲ ಭಾಷೆಯಲ್ಲಿ ಬಲ್ಲವರ ಸರಸ ಸಲ್ಲಾಪಗಳಲ್ಲಿ ನಿತ್ಯ ಬಳಿಕೆಯ ಒಡಪುಗಳಾಗಿವೆ.

ಅವನ ಚಚ್ಚು ಮಾತುಗಳು ಕತ್ತಿಯ ತಿವಿತಗಳೇ ಆಗಿದ್ದವು. ಬಾಸ್ವೆಲ್ ಒಂದು ದಿನ ಒಳ್ಳೆ ಬೆರಗಿನಿಂದ ಮನೆಗೆ ಬಂದನು. ಅವನು ಅಂದು ಓರ್ವ ಮಹಿಳೆಯ ಧಾರ್ಮಿಕ ಪ್ರವಚನವನ್ನು ಕೇಳಿದ್ದನು. ಅದನ್ನು ಕುರಿತು ಜಾನ್ಸನ್ ಉವಾಚ :- 'ಸ್ವಾಮಿ, ಹೆಂಗಸು ಧಾರ್ಮಿಕ ಪ್ರವಚನ ಕೊಡುವದೆಂದರೆ ಒಂದು ನಾಯಿ ಹಿಂಗಾಲುಗಳ ಮೇಲೆ ನಿಂತು ನಡೆದಂತೆ. ಆ ನಡಿಗೆ ಹೇಗೆ ನಡೆದರೂ ಅಂದ ವಾಗುವದಿಲ್ಲ. ಆದರೆ ಹಾಗೆ ನಡೆಯಿತು ಎಂಬುವದಕ್ಕೇ ನೀವು ಬೆರಗಾಗಬೇಕು !'

ಇನ್ನೊಂದು ದಿನ, ಒಬ್ಬ ಸ್ಕಾಟ್ಲಂಡಿನ ಆಸಾಮಿ ಜಾನ್ಸನ್‌ನ ಇದುರು ತನ್ನ ನಾಡಿನ ಪ್ರಕೃತಿ ಸೌಂದರ್ಯವನ್ನು ಬಾಯ್ತುಂಬ ಹೊಗಳಿದನು. ಪಾಪ, ಸ್ಕಾಟ್ಲಂಡದ ಕುರಿತೂ, ಸ್ಕಾಟಿಶ್ ಜನರ ಕುರಿತೂ ಜಾನ್ಸನ್‌ನಿಗೆ ತುಂಬ ತಿರಸ್ಕಾರವಿತ್ತೆಂಬುದನ್ನು ಅವನು ತಿಳಿಯದಿರಬೇಕು. ಜಾನ್ಸನ್ ಒಮ್ಮೆ ಆ ಪ್ರಶಂಸೆಯನ್ನೆಲ್ಲ ಕೇಳಿಕೊಂಡನು; ಕೂಡಲೇ ಬಂದಿತು ಅವನ ವಿಧ್ವಂಸಕ ಪ್ರತ್ಯುತ್ತರ,-ಸರ್, ಸ್ಕಾಟಿಶ ಜನರು ಮೆಚ್ಚುವ ಅತ್ಯಂತ ಭವ್ಯವಾದ ದೃಶ್ಯವೆಂದರೆ, ಅವರನ್ನು ಅನುಕೂಲವಾಗಿ ಇಂಗ್ಲಂಡಕ್ಕೆ ತಂದು ತಲ್ಪಿಸುವ ಹೆದ್ದಾರಿ !' (ಈ ಮಾತಿನ ಸ್ವಾರಸ್ಯ ಗೊತ್ತಾಯಿತೇ ? ಸ್ಕಾಟ್ಲಂಡು ಗುಡ್ಡಗಾಡು ದರಿದ್ರ ದೇಶ. ಸ್ಕಾಟಿಶ್ ಜನರು ಹೆಚ್ಚಾಗಿ ಇಂಗ್ಲಂಡಿಗೆ ಬಂದು ಹೊಟ್ಟೆ ಹೊರಕೊಳ್ಳುವರು. ಬ್ರಿಟಿಶ ಸಾಮ್ರಾಜ್ಯ ವನ್ನು ಭೂಗೋಲ ಸುತ್ತಲೂ ಹಬ್ಬಿಸಿದವರು ಸ್ಕಾಟ್ಲಂಡದವರೇ ಸರಿ !) ಆಯರ್ಲಂಡವೂ ಅವನ ಮಾತಿನ ಪೆಟ್ಟಿನಿಂದ ತಪ್ಪಿಲ್ಲ. ಆ ಮಾತಿನ ಮೊನೆಯನ್ನು ನೋಡಿ: 'ಐರಿಶ್ ಜನ ಯೋಗ್ಯ ದೃಷ್ಟಿಯ ಜನ; ಅವರು ತಮ್ಮಲ್ಲಿ ಒಬ್ಬರ ನ್ನೊಬ್ಬರ ಕುರಿತು ಎಂದೂ ಒಳಿತು ಮಾತಾಡುವದಿಲ್ಲ।'

ಮಾತು ಬಂದಾಗ ಸೋತು ಹೋಗುವ ಜಾಣ, ಜಾನ್ಸನ್ ಅಲ್ಲ. ಮೇಲಾಗಿ, ಮಾತಿನ ಮೇಲಾಟದಲ್ಲಿ, ಹರಟೆಯ ಹುದ್ದರಿಗಳ ಹೋರಾಟದಲ್ಲಿ ವಿಜಯವನ್ನು ಪಡೆಯಲು ಜಾನ್ಸನ್ ಯಾವಾಗಲೂ ಪ್ರಚಂಡವಾಗಿ ಹೆಣಗಾಡುತ್ತಿದ್ದನು. ಜೀವದ ಜತೆಗಾರನನ್ನಾದರೂ ಕಳಕೊಂಡಾನು; ಆದರೆ ಒಂದು 'ಜೋಕಿ'ನ ಅವಸರವನ್ನು ತಪ್ಪಿಸಲಿಕ್ಕಿಲ್ಲ ! ಹೀಗಿದ್ದರೂ ಅವನು ಒಮ್ಮೆ ಸಂತೋಷದಿಂದ ಸೋಲು ಒಪ್ಪಿ ಕೊಂಡನು.-ಅದೂ ಒಬ್ಬ ಹೆಂಗಸಿನೊಂದಿಗೆ. ಪ್ರಾಯಿಮೌಢದ ಒಬ್ಬ ಮಹಿಳೆ ಅವನನ್ನು ಭೆಟ್ಟಿಯಾಗಿ, ಅವನ ಜಗತ್ಪ್ರಸಿದ್ಧ ಶಬ್ದಕೋಶದಲ್ಲಿ ಒಂದು ವಾಕ್ಯೆಯು ತಪ್ಪಿದೆಯೆಂದು ಹೇಳಿ, ಆ ತಪ್ಪಿಗೆ ಕಾರಣವೇನೆಂದು ಕೇಳಿದಳು. 'ಅಜ್ಞಾನ, ದೇವಿಯವರೇ, ಶುದ್ಧ ಅಜ್ಞಾನ !' ಎಂದು ಡಾ. ಜಾನ್ಸನ್‌ನು ಉದ್ಗರಿಸಿದನು !

ಅವನ ಈ ಚಾಟೂಕ್ತಿಯ ಚಾಪಲ್ಯವು ಶಬ್ದಕೋಶದಲ್ಲಿಯು ಕಾಣದೆ ಹೋಗಿಲ್ಲ.

ಶಬ್ದಾರ್ಥ ಸಂಗ್ರಹದಲ್ಲಿ ಅರ್ಥಾಲಂಕಾರಗಳಿಗೆ ಅವಕಾಶವಿದೆಯೇ ? ನಮಗೆ ನಿಮಗೆ ಇರಲಿಕ್ಕಿಲ್ಲ. ಜಾನ್ಸನ್‌ನ ಪ್ರತಿಭೆಗೆ ಅಲ್ಲಿಯೂ ನಿರ್ಮಿತಿಯ ಆನಂದವಿದೆ. ಶಬ್ದಗಳ ಅರ್ಥ ವ್ಯಾಖ್ಯೆಗಳನ್ನು ಕೊಡುವಲ್ಲಿಯೂ ಅವನು ಮಾತಿನ ಮಾಯಾ ಜಾಲವನ್ನು ಬೀಸಬಲ್ಲನು. ಮಿಂಚಬಲ್ಲನು. ಗುಡುಗಬಲ್ಲನು. 'ಓಟ' ಇದೊಂದು ಧಾನ್ಯವೆಂದು ನಾವು ನೀವು ಬಲ್ಲೆವು. ಆದರೆ ಅಷ್ಟೇ ಅರ್ಥವನ್ನು ಬರೆದಿದ್ದರೆ ಜಾನ್ಸನ್‌ನ ಜಾಣ್ಮೆ ಎಲ್ಲಿ ? 'ಇಂಗ್ಲಂಡದಲ್ಲಿ ಸಾಮಾನ್ಯವಾಗಿ ಕುದುರೆಗಳಿಗೆ ಮೇವಾಗಿಯೂ, ಸ್ಕಾಟಲಂಡದಲ್ಲಿ ಜನರಿಗೆ ಅನ್ನವಾಗಿಯೂ ಇರುವ ಒಂದು ಧಾನ್ಯ'–ಎಂದು ಅವನು ಬರೆಯುವ ಅರ್ಥ ! 'ಪೆನ್ಶನ್'-ಅಂದರೆ ನಿವೃತ್ತಿವೇತನ-ಕೆಲಸದ ವಯಸ್ಸನ್ನು ಮೀರಿದವರಿಗೆ ಕೊಡಲಾಗುವ ಅಲ್ಪ ಧನಸಹಾಯ ('ಪಿಂಚಣಿ' ಎಂದು ಅಚ್ಚಕನ್ನಡ ಶಬ್ದವನ್ನು ಕೆಲವು ಪತ್ರಿಕೆಗಳಲ್ಲಿ ಪ್ರತಿಯಾಗಿ ಪ್ರಯೋಗಿಸುವದು ಕಂಡು ಬರುತ್ತದೆ !) ಜಾನ್ಸನ್ ಆ ಶಬ್ದವನ್ನು ಇತ್ಯರ್ಥ ಮಾಡುವದು ಹೇಗೆ ?' ಪ್ರತಿಯಾಗಿ ಏನನ್ನೂ ಪಡೆಯುವ ಆಸೆ ಇಲ್ಲದೆ ಯಾರೊಬ್ಬನಿಗೆ ಕೊಡುವ ವೇತನ. ಇಂಗ್ಲಂಡದಲ್ಲಿ ಸಾಮಾನ್ಯವಾಗಿ ಇದರ ಅರ್ಥವೇನೆಂದರೆ, ದೇಶಕ್ಕೆ ದ್ರೋಹವನ್ನು ಬಗೆದುದಕ್ಕಾಗಿ ಸರಕಾರಿ ಚಾಕರಿ ವಂತರಿಗೆ ತೆರಲಾಗುವ ಸಂಬಳ'–ಇವು ಡಾಕ್ಟರಮಹಾಶಯರು ಗಂಭೀರ ರೀತಿಯಲ್ಲಿ ಮಾಡಿದ ಭಾಷಾ ಭಾಷ್ಯಗಳು. ತುಸು ಹುಡುಗಾಟಿಕೆಯ ವೃತ್ತಿಯಲ್ಲಿ ಅವನು ಕೊಡುವ ಅರ್ಥ–ಅದೂ ತನ್ನ ಕಾರ್ಯದ ಕುರಿತೆ ಕೊಡುವ ಅರ್ಥ ವಿವರಣೆ ಯನ್ನು ನೋಡಿರಿ. 'ಲೆಕ್ಸಿಕೋಗ್ರಾಫರ'–ಎಂಬ ಒಂದು ನಾಲಿಗೆ ನೋಯಿಸುವ ಶಬ್ದವಿದೆ, ಅದರ ಅರ್ಥ 'ನಿಘಂಟುಕಾರ'ನೆಂದು. ಜಾನ್ಸನ್ ಬರೆಯುವ ಅರ್ಥ ಹೀಗೆ, 'ಶಬ್ದಕೋಶಗಳನ್ನು ಬರೆಯುವಾತ, ಓರ್ವ ನಿರುಪದ್ರವಿ ಪರಿಶ್ರಮಿಕ.'

ಮಾತುಕತೆಯಲ್ಲಿ ಅವನು ಎದುರಾಳಿಯನ್ನು ಅಪ್ರತಿಭನನ್ನಾಗಿ ಮಾಡಲು ಯಾವ ಉಪಾಯವನ್ನೂ–ಎಂಥ ಉತ್ತರವನ್ನೂ–ಬಳಸುತ್ತಿದ್ದನು. ಕೆಲವೊಮ್ಮೆ ಕೇವಲ ಶಬ್ದದ ಛಲಕ್ಕೆ ಇಳಿಯುವದೂ ಉಂಟು. ವಾದದ ನಿರ್ಣಯಕ್ಕಿಂತ ವಾದಿಯನ್ನು ನಿರುತ್ತರನನ್ನಾಗಿ ಮಾಡುವದೇ ಅವನ ಚರ್ಚೆಯ ಗುರಿಯಾಗುವದೂ ಉಂಟು. 'ಸ್ವಾಮಿ; ನಮಗೆಲ್ಲ ಇಚ್ಛಾ ಸ್ವಾತಂತ್ರ್ಯವೆಂಬುದಿದೆ. ನಿಜ. ಆದರೆ ಆ ಸ್ವತಂತ್ರ ಇಚ್ಛೆಗೂ ಒಂದು ಕೊನೆಯಿದೆ !'–ಎಂದು ಅವನು ಗರ್ಜಿಸುವನು. ಬಾಸ್ವೆಲ್‌ನು ಕೆಲವು ಸಲ ಕೆಣಕುವ ಕುತೂಹಲಕ್ಕಾಗಿ ತತ್ವ ವಿಜ್ಞಾಸೆಯ ತುರುಸಿನಲ್ಲಿ ತೀರ ದೂರ ಹೋದರೆ ಜಾನ್ಸನ್ ಅತನ ನಾಲಿಗೆಗೆ ಜಗ್ಗನೆ ಕಡಿವಾಣ ಹಾಕುವನು. 'ಅಲ್ಲ ಸರ್. ಬರೆಯದೆ ಇರುವದರಕಿಂತ ಬರೆಯುತ್ತಿರುವದರಲ್ಲಿ ನೀವು ಹೆಚ್ಚು ಆನಂದ ಪಡೆಯುತ್ತಿಲ್ಲ, ಇದಕ್ಕೆ ನಾನು ಸೋಜಿಗ ಪಡುತ್ತೇನೆ! '–ಎಂದು

ಶಿಷ್ಯ ಭಕ್ತನು ಯುಕ್ತಿವಂತಿಕೆಯಿಂದ ಪ್ರಶ್ನಿಸಿದರೆ, ಅದಕ್ಕೆ ಜಾನ್ಸನ್‌ನು 'ಪರವಾಇಲ್ಲ ಸರ್, ಸೋಜಿಗ ಪಡಬಹುದು !' ಎಂದು ಶಾಂತಚಿತ್ತನಾಗಿ ಉತ್ತರಿಸುವನು !

ಆದರೆ ಜಾನ್ಸನ್‌ನ ಒರಟುತನ ಬರೇ ಹೊರನಡತೆಯದಾಗಿತ್ತು.-ಶಿಷ್ಟಾಚಾರದ ಲೋಪ-ದೋಷ-ಪ್ರಮಾದವಾಗಿತ್ತು. ಯಾರೋ ಅವನ ಒರಟು ವ್ಯವಹಾರಕ್ಕೆ ಒಮ್ಮೆಲೆ ನೊಂದುಕೊಂಡು ಅವನನ್ನು ಕರಡಿಯೆಂದು ಕರೆದರು. ಅದನ್ನು ಅವನ ಮಿತ್ರ ಗೋಲ್ಡ್‌ಸ್ಮಿಥನು ಕೇಳಿದನು. ಆಗ ಆ ಸುಪ್ರಸಿದ್ಧ ಸಾಹಿತಿಯು ಆ ಮಾತಿಗೆ ತನ್ನ ತಿದ್ದುಪಡೆಯನ್ನು ಸೇರಿಸಿದನು. 'ಅವನಲ್ಲಿ ಕರಡಿಯ ತೊಗಲಲ್ಲದೇ ಬೇರೆ ಯಾವ ಅಂಶವೂ ಇಲ್ಲ !' ಜಾನ್ಸನ್‌ನ ಇನ್ನೊಬ್ಬ ಪ್ರಶಂಸಕ ಸ್ನೇಹಿತನು ಎಡ್ಮಂಡ ಬರ್ಕನು. ಅಂದಿನ ಬ್ರಿಟಿಶ್ ಪಾರ್ಲಿಯಮೆಂಟಿನಲ್ಲಿಯ ಉದ್ದಾಮ ವಿದ್ವಾನನೂ ವಾಗ್ಮಿಯೂ ಆದ ಧುರೀಣನು. ಈ ಮೇಧಾವಿ ಮುತ್ಸದ್ದಿಯು ಜಾನ್ಸನ್‌ನ ಮರಣಾನಂತರ ಅವನ ಕುರಿತು ಬಲು ಚೆನ್ನಾದ ಮಾತುಗಳನ್ನು ಆಡಿದ್ದಾನೆ. 'ಮನುಷ್ಯ ಸಾಯುವಾಗ, ತಾನು ಮಾತುಕತೆಯಲ್ಲಿ ತುಸು ಒರಟಾಗಿದ್ದೇನೆಂಬುದಕ್ಕಿಂತ ಹೆಚ್ಚಿನ ವೇದನೆಯ ಭಾರಕ್ಕೆ ಆತನ ಅಂತಃಕರಣವು ಬಲಿಯಾಗದಿರುವದು ನಿಜವಾಗಿಯೂ ಒಳಿತು ! '

ಈ ವಾಕ್ಯವೇ ಡಾ. ಜಾನ್ಸನ್‌ನ ಸಮಾಧಿಯ ಮೇಲೆ ಕೊರೆಯಲು ಅತ್ಯುಚಿತ ಶಿರೋಲೇಖವಾಗಬಹುದು. ೧೮ನೆಯ ಶತಮಾನದಲ್ಲಿ ಲಂಡನ ಪಟ್ಟಣದ ವಿದ್ವತ್ಪ್ರಪಂಚವನ್ನು ಮಹಾಗೋಪುರದಂತೆ ಪ್ರಭಾವಿಸಿ ನಿಂತ, ಪ್ರಚಂಡ ವ್ಯಕ್ತಿಯ ಬಾಳಿನ ಸಾರ ಈ ವಾಕ್ಯದಲ್ಲಿ ಬಂದಿದೆ. ಅವನು ವ್ಯಾಧಿಗ್ರಸ್ತನಿದ್ದನು; 'ಪ್ರಾತಿಂಕ ವೃತ್ತಿ'ಯೆನಿಸಿಕೊಳ್ಳುವ ಒಂದು ಬಗೆಯ ಗ್ರಾಮ್ಯ ಬುದ್ಧಿಯೂ ಅವನದಿತ್ತು. ಧರ್ಮಶ್ರದ್ಧೆಯುಳ್ಳವನಿದ್ದೂ ಮೂಢ ಭಾವಿಕತೆಯ ಭ್ರಾಮಕಭಯವೂ ಅವನನ್ನು ಬಾಧಿಸುತ್ತಿತ್ತು. ಅವನ ಕಂಠವು ಘಂಟೆಯಂತೆ ಇದ್ದೂ ಹೃದಯವು ಬಂಗಾರವಾಗಿತ್ತು. ಪುಸ್ತಕ ವ್ಯಾಪಾರಿಯ ಮಗನಾಗಿ ಹುಟ್ಟಿದ ಇವನು ತನ್ನ ಯುಗದ ಪ್ರಕಾಂಡ ಪಂಡಿತನಾಗಿ ಸತ್ತನು. ಅಂದಗೆಟ್ಟ ಬಟ್ಟೆಗಳಲ್ಲಿ ಅಲೆದಾಡುವ ಇವನು ಬೀದಿಯ ಪುಂಡರ ಗುಂಪನ್ನು ಕೂಡ ಥಳಿಸುವಷ್ಟು, ಸರದಾರರ ಕೆನ್ನೆಗೆ ತನ್ನ ಚಾಟೂಕ್ತಿಯ ಚಾಟಿಯೇಟಿನಿಂದ ಕೆಂಪೇರಿಸುವಷ್ಟು, ತನ್ನ ಚಕ್ರವರ್ತಿಯೊಡನೆ ಸಹಜವಾಗಿ ಸರಸವಾಡುವಷ್ಟು ತೇಜಸ್ವಿಯಾಗಿದ್ದನು. ಬಡ 'ಪಿಂಚಣಿ'ದಾರನಿದ್ದರೂ ಪರರವರ ಸಾಲ ತೀರಿಸಲು ಕಿಸೆ ಕತ್ತರಿಸಿಕೊಳ್ಳುವ ಹೃದಯ ಸಂಪನ್ನನಾಗಿದ್ದನು. ಒಂದು ನಡೆನುಡಿಯುವ ಕರಡಿಯಾಗಿದ್ದರೂ, ಉತ್ತಮೋತ್ತಮ ಜ್ಞಾನಿಗಳನ್ನು

ವಾಗ್ಮಿಗಳನ್ನು ಮೋಹಗೊಳಿಸುವ ಗಾರುಡಿಗನಾಗಿದ್ದನು. ಅಂಥ ಭಕ್ತಿಯ ಕ್ರೈಸ್ತನಿದ್ದರೂ ಮಹಾಪಾಪಿಗಳೊಂದಿಗೆ ಕೂತು ಉಣ್ಣುವ 'ಪಾಖಂಡಿ' ಯಾಗಿದ್ದನು. ನಿಷ್ಠುರ ನಿಷ್ಠಾವಂತ ಸದಾಚಾರಿಯಿದ್ದೂ, ಮಡಿವಂತ ನೀತಿಯ ಕನಿಕರಗೆಟ್ಟ ಕಟ್ಟುನಿಟ್ಟನ್ನು ತಿರಸ್ಕರಿಸುವಂಥವನಿದ್ದನು. ಇವನು ಮಾದರಿ ಯಾಗಿಯೂ ಮದವೇರಿದವನಿದ್ದಿಲ್ಲ. ಅಭಿಮಾನಿಯಾಗಿಯೂ ಅಹಂಕಾರಿಯಾಗಿದ್ದಿಲ್ಲ; ವಿನಯಶೀಲನಾಗಿಯೂ ಲಾಂಗೂಲ ಚಾಲಕನಿದ್ದಿಲ್ಲ. ಗೌರವದವನಾಗಿಯೂ ಗರ್ವಿಷ್ಠ ನಿದ್ದಿಲ್ಲ. ಡಾಕ್ಟರ ಪದವಿಯನ್ನು ಅಪೂರ್ವ ಸನ್ಮಾನವಾಗಿ ಪಡೆದರೂ ಬಡ 'ಸ್ಯಾಮ'ನಾಗಿಯೇ ಕೊನೆಯವರೆಗೂಕರೆಯಿಸಿಕೊಂಡ ಜಾನ್ಸನ್‌ನು ಮಹಾಪಂಡಿತ ನಾಗಿಯೂ ಮನುಷ್ಯತ್ವವನ್ನು ಮರೆಯಲಿಲ್ಲ ! ●

# ಷೆಲ್ಲಿ

ಕನ್ನಡದ ಹೊಸ ಕಾವ್ಯದ ಮೇಲೆ ಷೆಲ್ಲಿಯಷ್ಟು ಪ್ರಭಾವವನ್ನು, ಬೇರೆ ಯಾವ ಆಂಗ್ಲ ಕವಿಯೂ ಬೀರಿರಲಿಕ್ಕಿಲ್ಲ. 'ಷೆಲಿಯೊಳಗೆ ಸೆಲೆಯಾಗಿ ಹರಿದ ನೀರೇ !' ಎಂದು ಕವೀಂದ್ರ ಬೇಂದ್ರೆಯವರು ಹಾಡಿದ್ದಾರೆ ಸ್ವಾತಂತ್ರ್ಯ ದೇವಿಯನ್ನು ಕುರಿತು. ಹೊಸಗನ್ನಡ ಕಾವ್ಯಕ್ಕೆ 'ಇಂಗ್ಲಿಷ ಗೀತಗಳು' ಸ್ಫೂರ್ತಿಯ ಸೆಲೆಯಾದವು. ಆದರೆ ಆಧುನಿಕ ಇಂಗ್ಲಿಷ ಗೀತಕಾವ್ಯದ 'ಬಾಳಿನ ಬಣ್ಣ ಬಣ್ಣದ ಗೋಪುರ'ವನ್ನು ರೂಪಿಸಿದ ಅಮರ ತೇಜವೂ ಆ ಗೋಪುರದ ಅಮೃತ ಕಲಶವೂ ಷೆಲ್ಲಿಯ ಕಾವ್ಯವೇ ಸರಿ. ಅಂಥ ಕಾವ್ಯದ ಕಾರಣ ಪುರುಷನ ರಸಸೌಂದರ್ಯದ 'ಇನಿಜೇನಿನ ಹೊಂಗೊಡ'ವನ್ನು ಸೇರಿ ಸವಿದ 'ಅರಸುದುಂಬಿ'ಯ ಪರಿಚಯವು ಕನ್ನಡ ರಸಿಕರಿಗೆ ಬೇಡವೇ ?

ಆದರೆ ಪರಿಚಯವಾದರೂ ಎಂತಹ ಜೀವನದ್ದು ? ಅದೊಂದು ದ್ವಂದ್ವ ವೈಚಿತ್ರ್ಯದ, ವೈಭವಶಾಲಿಯಾದ ತಪರು ! ಬಂಡುಗಾರ ಯುವಕ; ಸ್ವಾತಂತ್ರ್ಯದ ಭಾವಾವಿಷ್ಟ ಪ್ರವಾದಿ; ಅನ್ಯಾಯ ಮಾಡುವವನಾಗಿಯೂ ಅನ್ಯಾಯವೇನೆಂದು ಅರಿಯದ ಮುಗ್ಧ ಜೀವಿ; ತಾನು ಪ್ರತಿಭಟಿಸಿದ ರೂಢಿಗಳಿಗೇ ಪ್ರತಿ ಇಲ್ಲದೆ ಬದ್ಧನಾದ ಅಸಹಾಯ ಪ್ರಾಣಿ; ತನ್ನೆದುರು ಪೂರ್ಣತ್ವ ಮತ್ತು ಸುಸಂಗತಿಯ ಆದರ್ಶಗಳನ್ನು ಇಟ್ಟುಕೊಂಡೂ ಆ ನಿಟ್ಟಿನಲ್ಲಿ ನಡೆಯಲು ತಪ್ಪಿದ ಧ್ಯೇಯವಾದಿ; ತನ್ನ ಬದುಕಿನ ವಿಕಟ ಚಟುವಟಿಕೆಗಳಿಂದ ಸಮಕಾಲೀನರನ್ನು ಚಕಿತಗೊಳಿಸಿದಂತೆ, ತನ್ನ ಕಾವ್ಯ ಪ್ರತಿಭೆಯಿಂದ ಭವಿತವ್ಯವನ್ನೇ ಕಣ್ಣು ಕುಕ್ಕಿಸಿ ದಿಗ್ಭ್ರಮೆಗೊಳಿಸಿದ ದಿಗ್ವಿಜಯಿ;–ಇವನೇ ಷೆಲ್ಲಿ ! ಅವನಲ್ಲಿಯ ಮಾನವನತೆಯೂ ಆತನ ಗುಣ ಕರ್ಮಗಳೂ ವಾದಕ್ಕೆ, ವಿಚಿಕಿತ್ಸೆಗೆ. ನಿಂದೆಗೆ ಅಥವಾ ಸ್ಪಷ್ಟೀಕರಣಕ್ಕೆ ಯಾವಾಗಲೂ ಆಸ್ಪದವಾಗಬಹುದು. ಆದರೆ ಅವನು ತನ್ನ ದಿವ್ಯ ಸ್ಮಾರಕವಾಗಿ ಬಿಟ್ಟ ವಿಶ್ವ ಸಾಹಿತ್ಯವನ್ನೇ ಅಲಂಕರಿಸಿದ ಅಮರಗೀತವ ರಸಗಂಗೆಯಲ್ಲಿ ಅವನ ಬದುಕಿನ ಅವೆಲ್ಲ ವಿವರಗಳು ತೇಲಿ ಮರವಿಗೂ ಮರೆಯಾಗುವವು. ! ಕೊಳದ ನೀರು ರಾಡಿಯಾದರೇನು ? ಅರಳಿ ನಿಂತ ಕಮಲವನ್ನು ದೇವರೇ ಮೆಚ್ಚುವದಿಲ್ಲವೇ ?

೧೭೯೨ ನೇ ವರ್ಷ. ಲಂಡನ್ನಿನಲ್ಲಿ, ವಿಲಿಯಮ ಬ್ಲೇಕನೆಂಬ ಹೊಸಕಾಲದ ಕವಿಯು 'ನಿರಾಸ ಗೀತಗಳ'ನ್ನು ರಚಿಸಿ ರಮಣೀಯ ಕಾವ್ಯರಚನೆಗಾಗಿ ಪ್ರಶಸ್ತಿ

ಪಡೆದ ಮೇಲೆ ತನ್ನ ದಾರ್ಶನಿಕ ಸ್ವರೂಪದ ಗೂಢಗುಂಜನದ ಕವನಗಳನ್ನು ಬರೆಯುತ್ತಿದ್ದನು. ಎಡಿನ್ ಬರ್ಗದಲ್ಲಿ ವಾಲ್ಟರ ಸ್ಕಾಟನೆಂಬ ಸ್ಕಾಟಯುವಕನು ಕಾನೂನಿನ ಅಭ್ಯಾಸ ಮಾಡುತ್ತಿರುವಾಗಲೇ, ತನ್ನ ತಾಯ್ನಾಡಿನ ಹಳೆಯ ಪವಾಡದ ಹಾಡುಗಳನ್ನು ಸಂಗ್ರಹಿಸಲು ತೊಡಗಿದ್ದನು. ಕೇಂಬ್ರಿಜದಲ್ಲಿ, ಸ್ಯಾಮ್ಯುಅಲ ಕೊಲರಿಜ ಎಂಬ ಜಗತ್ಪ್ರಸಿದ್ಧನಾದ ಕವಿಯು ಬರೇ ಉಂಡಾಡಿಯಾಗಿ ಅಲೆಯುತ್ತಿದ್ದನು. ಪ್ಯಾರೀಸದಲ್ಲಿ ವಿಲಿಯಮ ವರ್ಡ್ಸ್‌ವರ್ಥನೆಂಬ ಉತ್ಸಾಹಿಯಾದ ತರುಣ ಪ್ರಜಾವಾದಿಯು ಅಲ್ಲಿಯ ರಾಜ್ಯಕ್ರಾಂತಿಯ ಪ್ರಗತಿಯಲ್ಲಿ ಹರ್ಷಪಡುತ್ತ ಅದನ್ನು ಹರಸಿ ಹಾಡುತ್ತಿದ್ದನು. ದೂರ ಉತ್ತರದಲ್ಲಿ ಎಬರ್ಡೀನದಲ್ಲಿ ಬಾಯರನ್ ಎಂಬ ಒಬ್ಬ ಕುಂಟುವ ಹುಡುಗನು ಆಗ ತಾನೇ ಶಾಲೆಗೆ ಹೋಗಲಾರಂಭಿಸಿದ್ದನು ಮತ್ತು ಮೂರಫೀಲ್ಡ್ಸ ಎಂಬಲ್ಲಿ ಲಾಯದ ಜವಾನ ಕೀಟ್ಸನು ಕುದುರೆಗಳ ಮೈತೊಳೆಯುತ್ತಿದ್ದನು. ಅವನ ಪ್ರತಿಭಾಶಾಲಿಯಾದ ಮೊಮ್ಮಗನು ಹುಟ್ಟಿ ಬರಲು ಇನ್ನೂ ಮೂರು ವರ್ಷಗಳು ಇದ್ದವು.

ಇಂಥ ಸಂದರ್ಭದಲ್ಲಿ ಆಗಸ್ಟ ೪ ನೆಯ ದಿನ ಸಸೆಕ್ಸ ಪರಗಣೆಯ ವಾರ್ನಹ್ಯಾಮವೆಂಬಲ್ಲಿ ಮಹಾಕವಿಯಾದ ಕೀಟ್ಸನ ಮರಣ ವಿಲಾಪಿಕೆಯನ್ನು ಬರೆದು ಅಮರನಾದ ಪರ್ಸಿ ಬಿಷೇ ಷೆಲ್ಲಿಯು ಹುಟ್ಟಿದನು.

ಪರ್ಸಿಯು ಟಿಮೊಥೀ ಷೆಲ್ಲಿ ಎಂಬವನ ಹಿರಿಯ ಮಗನು. ಅವನ ಅಜ್ಜ ಬಿಷೇ ಷೆಲ್ಲಿಯು ತನ್ನ ಮಗನನ್ನು ಟಿಮೊಥಿಯನ್ನು ಮನವಾರೆ ತಿರಸ್ಕರಿಸುತ್ತಿದ್ದನು. ಬಿಷೇಯು ಸಿರಿವಂತನಿದ್ದನು; ಅರೆಹುಚ್ಚನಂತಿದ್ದನು; ೧೮೦೬ ರಲ್ಲಿ ಮನ್ನೆಯ ಪದವಿಯನ್ನು ಪಡೆದಿದ್ದನು. ಷೆಲ್ಲಿಯೂ ಆರಂಭದಿಂದಲೇ ತಂದೆಯನ್ನು ತಿರಸ್ಕರಿಸತೊಡಗಿದನು. ಈ ಪಿತೃದ್ವೇಷ ವಿಚಿತ್ರವೆನಿಸಬಹುದು. ಆದರೂ ಅದು ಇದ್ದುದು ನಿಜ. ಷೆಲ್ಲಿಯೂ ಚಿಕ್ಕಂದಿನಿಂದಲೇ ನಡಾವಳಿ ತೋರಿಕೆಗಳಲ್ಲಿ ಒಳ್ಳೇ ಅಚ್ಚುಕಟ್ಟು ಸದ್ದುಮುದ್ದುಗಳನ್ನು ಬಯಸಲು ಕಲಿತನು. ರೀತಿ–ರೂಪಗಳ ಒಪ್ಪು ಒನಪು ತಿದ್ದಿದಷ್ಟು ಕಡಿಮೆ ಅನಿಸುತಿತ್ತು ಅವನಿಗೆ. ಆದರೆ ಅವನ ತಂದೆಯು ಇದಕ್ಕೆ ತೀರ ವಿಪರೀತವಾಗಿದ್ದನು–ಮಾದರಿಯ ಅವ್ಯವಸ್ಥಿತ ವೃತ್ತಿಯವನು. ಷೆಲ್ಲಿಯಲ್ಲಿ ಬಾಲ್ಯದಿಂದಲೂ ಒಂದು ಹಟ. ಪೂರ್ಣತೆಯ ಆದರ್ಶವೆಂದು ತನಗೆ ಅನಿಸಿದ ಹೊರತು ಯಾರನ್ನೂ ಅವನು ಮೆಚ್ಚುತಿದ್ದಿಲ್ಲ. ಆ ತೂಕದಲ್ಲಿ ಅವನ ತಂದೆ ಯಾವ ತಕ್ಕಡಿಗೂ ಹಗುರು–ಯಾವ ಕಲ್ಲಿಗೂ ಸದರು. ಶಾಲೆಗಲಿಯುವ ಚತುರಬಾಲೆಯಂತೆ ಷೆಲ್ಲಿಯ ವೃತ್ತಿ–ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ಸುಸಂಗತಿಯನ್ನು ಅಪೇಕ್ಷಿಸುವನು. ಅವನ ತಂದೆ ಕೇವಲ ಅಸಂಗತಿ–ವಿಸಂಗತಿಗಳ ಮೊಟ್ಟೆ.

ಆದ್ದರಿಂದ ಷೆಲ್ಲಿಯ ಕಲಾಸಕ್ತ ಕಣ್ಣಿಗೆ ತಂದೆಯು ನೀತಿಯಲ್ಲಿ, ಬುದ್ಧಿಯಲ್ಲಿ ರಸಿಕತೆಯಲ್ಲಿ, ಎಲ್ಲ ವಿಧವಾಗಿಯೂ ನಿಂದ್ಯನಾಗಿಯೇ ತೋರಿದನು. ಕೇವ ಬುದ್ಧಿಗೇಡಿ ಅಧಿಕಾರದ ಮೂರ್ಖ ಸತ್ತೆಯ ಪ್ರತೀಕವಾಗಿ ತೋರಿದನು. ಅಂ ಸತ್ತಾಧಿಕಾರದ ಕುರುಡು ದಬ್ಬಾಳಿಕೆಯ ವಿರುದ್ಧ ಬಂಡುಹೂಡುವದು ತನ ಕರ್ತವ್ಯವೆಂದೇ ತಿಳಿದಿದ್ದನು. ಷೆಲ್ಲಿಯ ನೈತಿಕ ಬುದ್ಧಿಯು ವಯಸ್ಸಿಗೂ ಮೀ ತೀವ್ರವಾಗಿ ವಿಕೃತವಾಗಿ ಬೆಳೆದಿತ್ತು. ಪೂರ್ಣತೆಯ ಕಾಲ್ಪನಿಕ ಆದರ್ಶದ ನೆಲಿಸಿದ ಅವನ ಗಾಢವಾದ ಪ್ರೀತಿಯು ತಂದೆಯ ಲೋಪದೋಷಗಳ ಕುರಿತ ಅವನಲ್ಲಿ ಅಸಹ್ಯ ಅಸಹನೆಯನ್ನುಂಟುಮಾಡುವಂತಾಯಿತು. ಇದರ ಫ ವೇನಾಯಿತೆಂದರೆ, ಅವನ ಕಾವ್ಯ ಪ್ರಧಾನ ಕಲ್ಪನಾ ಶಕ್ತಿಗೆ ಅವನ ತಂದೆಯು ತುತ್ತಾದನು. ತಾನು ತಿಳಿದವರನ್ನೆಲ್ಲ ಆತ ಅದ್ಭುತ ರಮ್ಯ ಕಥೆಯ ಪಾತ್ರವನ್ನಾ ರೂಪಿಸಿಕೊಳ್ಳುವ ಪ್ರವೃತ್ತಿ ಅವನ ಕಲ್ಪನೆಯದಾಗಿತ್ತು. ತಂದೆಯು ಅಂ ಕಲ್ಪನಾರಂಗದಲ್ಲಿ ನಾಯಕ ಪಾತ್ರನಾಗಲು ಅನರ್ಹನೆನಿಸಿದ್ದರಿಂದ ಖಲಪುರುಷ ಭೂಮಿಕೆಯನ್ನು ಪಡೆಯಬೇಕಾಯಿತು !

ಕುಮಾರ ಷೆಲ್ಲಿಯು ಭೂಮಿಯ ಮೇಲೆ ಇರುತ್ತಲೇ ಇದ್ದಿಲ್ಲ. ಹಗಲುಗನಸುಗ ಯಕ್ಷಲೋಕದಲ್ಲಿಯೇ ಅವನು ವಿಹರಿಸುತ್ತ ಇದ್ದುಬಿಡುತಿದ್ದ. ೧೦ ವರ್ಷ ಪ್ರಾಯಕ್ಕೆ ಅವನು ಐಲವರ್ಥ– ಎಂಬಲ್ಲಿ ಸಿಯೋನ ಹೌಸ ವಿದ್ಯಾಸಂಸ್ಥೆಯನ ಸೇರಿದನು. ಆಗ ಅವನು ವಿಚಿತ್ರ ನಾಜೂಕಿನ ಕಳಲೆಯಂಥ ಕೋಮ ಜೀವಿಯಾಗಿದ್ದನು. ಶಾಲೆಯ ಕರ್ಕಶ ಪ್ರಪಂಚದಲ್ಲಿ ಅವನು ಅಸ್ವಸ್ಥನಾದನು ಅವನ ಸಮಕಾಲೀನನೊಬ್ಬನು ಅಂದಿನ ಷೆಲ್ಲಿಯನ್ನು ಹೀಗೆ ಬಣ್ಣಿಸಿದ್ದಾನೆ. :– 'ಗಂಡು ಉಡುಪಿನಲ್ಲಿ ನಡೆದಾಡುವ ಹೆಣ್ಣಿನಂತೆ, ಕೆರಳಿಸಿದಾಗ ಎರಡೂ ಕೈಗಳಿಂ ಹರಿದು ಒರಗಿ ಹೋರಾಡುವಂಥ, ಛಡಿಯ ಏಟುಗಳನ್ನು ತಿನ್ನುವಾಗ ನೆಲ ಮೇಲೆ ನೋವಿಗಿಂತಲೂ ಹೆಚ್ಚು ನಾಚಿಕೆಯಿಂದ ಮೋರೆ ಮುಚ್ಚಿಕೊಂಡು ಹೊರಳಾಡುವಾತ।'

ಆ ವಿದ್ಯಾಸಂಸ್ಥೆಯಲ್ಲಿ ಷೆಲ್ಲಿಗೆ ಕೆಲವು ಬಲವಾದ ಆಘಾತಗಳು ಆದವು. ಆಗಲೆ ಅವನು ಅದೇಕೋ ವಿಜ್ಞಾನದ ಕುರಿತು ಒಂದು ಒಲವನ್ನು ಕಂಡು ಕೊಂಡನು ಆ ಒಲವಿನ ಫಲ ಮತ್ತೇನೂ ಆಗಲಿಲ್ಲ. ಶಾಲೆಯಲ್ಲಿಯೂ ಮುಂದೆ ವಿಶ್ವ ವಿದ್ಯಾಲಯದ ಜೀವನದಲ್ಲಿಯೂ ಅವನು ಈ ಹುಚ್ಚಿನಿಂದ ರಾಸಾಯನಿ ಪ್ರಯೋಗಗಳ ಹವ್ಯಾಸಕ್ಕೆ ಬಿದ್ದು ಗಂಡಾಂತರದ ಪ್ರಸಂಗಗಳನ್ನು ಆಗಾಗ್ಗೆ ತಂದು ಕೊಳ್ಳುವಂತಾಯಿತು. ಅವನಿಗೆ ವೈಜ್ಞಾನಿಕ ಮನೋವೃತ್ತಿ ಇದ್ದಿಲ್ಲ; ಅಂ

ಪ್ರಯೋಗಗಳಿಗೆ ಅವಶ್ಯವಿರುವ ದಕ್ಷತೆ, ಸಹನೆ ಇಲ್ಲವೆ ಬುದ್ಧಿಯ ಸ್ಥಿರತೆ ಇದ್ದಿಲ್ಲ, ಅದೂ ಒಂದು ಅದ್ಭುತ ರಮ್ಯ ಉಪದ್ವ್ಯಾಪವೇ ಅನಿಸಿರಬೇಕು ಅವನ ಸೋಜಿಗದ ಕಣ್ಣಿಗೆ. ಅವನ ಚಮತ್ಕಾರ ಪ್ರಿಯತೆಯೇ ಅಂಥ ವಿಚಿತ್ರ ವಿಜ್ಞಾನಾಭಿರುಚಿಯಾಗಿ ಪರಿಣಮಿಸಿತು. ಇರಲಿ.

೨೦ ವರ್ಷ ವಯಸ್ಸಿನ ಒಳಗೇ ಅವನನ್ನು ಇಟನ್‌ದ ಶಾಲೆಗೆ ಕಳಿಸಲಾಯಿತು. ಆದರೆ ಅವನು ಅಲ್ಲಿಂದ ಬೇಗನೆ ಮರಳಬೇಕಾಯಿತು. ಈ ಲಗುಬಗೆಯ ಆಗಮನಕ್ಕೆ ಕಾರಣವೇನೆಂದರೆ, ಅಲ್ಲಿ ಅವನಿಗೆ ಇತರ ಹುಡುಗರು ವಿಪರೀತ ಪೀಡಿಸುತ್ತಿದ್ದರು. ಒಮ್ಮೆ ಅವರ ಪೀಡೆಗೆ ಸಹನೆ ಮೀರಿ ಕೆರಳಿ ಹುಚ್ಚೆದ್ದು ಅವನು ತನ್ನ ಪೀಡಕ ಪೋರರಲ್ಲಿ ಒಬ್ಬನ ಕೈಯನ್ನು ಇರಿದು ಅದನ್ನು ಹಾಗೆಯೇ ಚೂರಿಯ ಮೊನೆಯಿಂದ ಕಿರಿಮೇಜಿಗೆ ಮೊಳೆಹೊಡೆದಂತೆ ಜಡಿದು ಬಿಟ್ಟನು ! ದುರ್ಬಲರ ಕೋಪದಷ್ಟು ಕ್ರೂರಶಕ್ತಿ ಜಗತ್ತಿನಲ್ಲಿ ಬೇರೆ ಇಲ್ಲ।

ಆದರೆ ಇಟನ್ನದಿಂದ ಮರಳುವ ಮುಂಚೆ ಷೆಲ್ಲಿಯು ಒಂದು ಲಾಭವನ್ನು ಪಡೆದುಕೊಂಡನು. ಅದು ಮಿತ್ರಲಾಭವು. ಡಾ. ಲಿಂಡ ಎಂಬ ಸಜ್ಜನನ ಗೆಳೆತನವನ್ನು ಅವನು ಗಳಿಸಿದನು. ಈ ಗೆಳೆಯನು ಷೆಲ್ಲಿಯ ಹಿತಚಿಂತಕನಾದನು. ಒಳ್ಳೇ ಪ್ರೀತ್ಯಾದರಗಳಿಗೆ ಪಾತ್ರನಾದನು. ಲಿಂಡನು ಸಾಧಿಸಿದ ಒಂದು ಹಿತದ ಕೃತ್ಯವನ್ನು ಷೆಲ್ಲಿಯೇ ಬಣ್ಣಿಸಿದ್ದಾನೆ. 'ಒಮ್ಮೆ ನಾನು ಸೂಟಿಯ ದಿನಗಳಲ್ಲಿ ಬಹಳ ಬೇನೆ ಬಿದ್ದೆನು. ಆ ಜ್ವರದಿಂದ ಮೆಲ್ಲಗೆ ಗುಣಮುಖವಾಗುತ್ತಿದ್ದಾಗ,–ಆ ಜ್ವರವು ನನ್ನ ಮಿದುಳಿಗೆ ಆಘಾತವನ್ನು ಮಾಡಿತ್ತು–ನನ್ನ ತಂದೆಯು ನನ್ನನ್ನು ಒಂದು ಖಾಸಗಿ ಹುಚ್ಚರಾಸ್ಪತ್ರೆಗೆ ಕಳುಹಿಸುವ ಕುರಿತು, ಮಾತುಕತೆ ನಡೆಯಿಸುತ್ತಿರುವಾಗ ಒಬ್ಬ ಆಳು ಮಗನು ಕೇಳಿದನು. ನಮ್ಮ ಎಲ್ಲ ಆಳುಮಕ್ಕಳಿಗೂ ನಾನು ಮೆಚ್ಚಿಗೆಯಾಗಿದ್ದೆ, ಆದ್ದರಿಂದ ಹಸೆಯಲ್ಲಿ ಬಿದ್ದಿರುವ ನನ್ನ ಬಳಿಗೆ ಈ ಆಳು ಓಡಿ ಬಂದನು ಮತ್ತು ಎಲ್ಲವನ್ನೂ ಹೇಳಿದನು. ಆಗಿನ ನನ್ನ ಘೋರಭಯವು ಯಾವ ಮಾತಿಗೂ ಮೀರಿದ್ದು. ಅವರು ಆ ಯೋಜನೆಯಲ್ಲಿ ಮುಂದುವರಿದಿದ್ದರೆ ನಾನು ಹುಚ್ಚನಾಗುವದು ನಿಜವೇ ಇತ್ತು. ನನಗೆ ಒಂದೇ ಆಸೆ ಇತ್ತು. ಹಣದ ಮಟ್ಟಿಗೆ ನಾನು ನೂರು ಪೌಂಡುಗಳ ಧಣಿಯಾಗಿದ್ದೆನು. ಆ ಆಳಿನ ಸಹಾಯದಿಂದ, ನಾನು ಡಾ. ಲಿಂಡರಿಗೆ ಅಗತ್ಯದ ಸಂದೇಶವನ್ನು ಕಳಿಸಿದೆನು. ಅವರು ಬಂದರು. ಆಗಿನ ಅವರ ನಡೆನುಡಿಯ ರೀತಿಯನ್ನು ನಾನು ಎಂದೂ ಮರೆಯಲಾರೆನು. ಅವರ ವ್ಯವಸಾಯವು ಅವರಿಗೆ ಅಧಿಕಾರವನ್ನು ಕೊಟ್ಟಿತ್ತು; ಅವರು ನನ್ನ ಬಗೆಗೆ ತೋರಿದ ಪ್ರೇಮ ಉತ್ಸಾಹಗಳು ನನ್ನ ತಂದೆಗೆ ಆಹ್ವಾನವಾಗಿದ್ದವು. ಅವರ ಗದ್ದರಿಕೆಯ

ಪರಿಣಾಮವು ಅಪೇಕ್ಷಿಸಿದಂತೆಯೇ ಆಯಿತು.'

ಆದರೆ ಈ ಕತೆಯ ಕುರಿತು ಒಂದು ಮಾತನ್ನು ನೆನಪಿಡಬೇಕು. ಅದನ್ನು ಷೆಲ್ಲಿಯ ಮಿತ್ರ ಹೊಗ್ ಎಂಬಾತನೇ ಬರೆದಿಟ್ಟಿದ್ದಾನೆ. 'ಷೆಲ್ಲಿಯು ತನ್ನ ಈ ಜ್ವರದ ಹಾಗೂ ಫೀಲ್ಡ್ ಪ್ಲೇಸದ ಮನೆಯಲ್ಲಿಯ ಈ ಸನ್ನಿವೇಶದ ಕುರಿತು ಅನೇಕಸ ಮಾತಾಡಿದ್ದು ಕೇಳಿದ್ದೇನೆ. ಆದರೆ ನನಗೂ, ಇತರರಿಗೂ ಕೂಡ ತೋರುವದೆನೆಂದ ಆಗ ಅವನ ನೆನಹುಗಳು ಜ್ವರದಿಂದ ಪೂರ್ತಿ ಗುಣವಾಗದೇ ಇರುವ ವ್ಯಕ್ತಿಯ ವಾಗಿದ್ದವು. ಅವನ ಬೇನೆಯ ಭಯವು ಅವನನ್ನು ಇನ್ನೂ ಬಾಧಿಸುತ್ತಲೇ ಇತ್ತು. ಇನ್ನೊಬ್ಬ ಲೇಖಕನು ಹೀಗೆ ಟಿಪ್ಪಣಿಸುತ್ತಾನೆ:- ಷೆಲ್ಲಿಯ ಮನೋರಂಗದಲ್ಲಿ ಭ್ರಮೆಯ ಅದ್ಭುತ ರಮ್ಯ ಆಭಾಸಗಳನ್ನು ಉಂಟು ಮಾಡಲಿಕ್ಕೆ ಜ್ವರಕ್ಕಿಂತಲೂ ಕಡಿಮೆ ಕಾರಣವು ಸಾಕಾಗುತ್ತಿತ್ತು! ಅಂದರೆ ತಂದೆಯು ತನ್ನನ್ನು 'ಭ್ರಾಂತಿನಿಕೇತನ' ಕ್ಕೆ ಕಳುಹಿಸುವ ವಿಚಾರಮಾಡಿದ್ದು, ಡಾ. ಲಿಂಡನು ಬಂದ ತನ್ನ ಪಕ್ಷಹಿಡಿದು ಹೋರಾಡಿ ಗೆದ್ದದ್ದು-ಇದೆಲ್ಲ ಜರೋದ್ದೀಪಿತ ಕಲ್ಪನೆಯ ವಿಕಟ ವಿಲಾಸವೇ ಇರಬಹುದು!

೧೮೧೦ ರಲ್ಲಿ ಷೆಲ್ಲಿ ಆಕ್ಸಫರ್ಡಿನ ಯುನಿವ್ಹರ್ಸಿಟಿ ಕಾಲೇಜನ್ನು ಸೇರಿದನು. ಆಗಲೇ ಆತನು ಅಂದಿನ ಜಡಗಂಭೀರ ಶೈಲಿಯಲ್ಲಿ 'ಝಾಸ್ಟ್ರೊಝಿ (Zastrozzi)' ಎಂ ವರ್ಣನೆಯ ಕಲ್ಪನಾರಮ್ಯ ಕಥೆಯ ಲೇಖಕನೆಂದು ಸಾಹಿತ್ಯ ವೃಕ್ಷದಲ್ಲಿ ಕುಡಿಯಾ ಕೊನರಿದ್ದನು. ಅದೇ ಸಮಯ ಅವನ ಪ್ರಥಮ ಪ್ರಣಯ ಪ್ರಕರಣವು ಆವೇ ದಿಂದ ಪ್ರಾರಂಭವಾಯಿತು. ಆ ಪ್ರಣಯಿನಿ ಹ್ಯಾರಿಟ ಗ್ರೊವ್ಹ ಅವನ ಸೋದ ಸಂಬಂಧಿಕಳು. ಆದರೆ ಇನ್ನೊಬ್ಬನನ್ನು ಮದುವೆಯಾಗಬೇಕೆ? ಆತ ಷೆಲ್ಲಿಯ ಮತದಲ್ಲಿ, 'ಒಂದು ಮಣ್ಣಿನ ಪಿಂಡ.'

ಆಕ್ಸಫರ್ಡದಲ್ಲಿ ಅವನು ಒಬ್ಬ ಥೊಮಸಜೆಫರ್ಸನ ಹೊಗ್‌ನೊಡನೆ ನಿಕಟ ಗೆಳೆತನವನ್ನು ಬೆಳೆಸಿಕೊಂಡನು. ಷೆಲ್ಲಿಯ ವ್ಯಕ್ತಿ ಚಿತ್ರಣಕ್ಕಾಗಿ ನಾವು ಈ ಹೊಗ್‌ನಿಗೆ ಋಣಿಯಾಗಬೇಕು. ರಸಾಯನಶಾಸ್ತ್ರ, ಕಾವ್ಯ ಮತ್ತು ತತ್ವಜ್ಞಾ ಇವುಗಳಲ್ಲಿ ರಭಸದ ಆಸಕ್ತಿಯುಳ್ಳ ಷೆಲ್ಲಿಯ ಸ್ವರೂಪ ನಿರೂಪಣೆಯನ್ನು ಹೊಗ್‌ನ ಸಜೀವವಾಗಿ ಮೂಡಿಸಿದ್ದಾನೆ. ನಮ್ಮ ಹೊಗಳಿಕೆ ಏಕೆ? ಅವನ ನಿರೂಪಣೆಯನ್ನೆ ನೋಡಿರಿ :- 'ಅವನ (ಷೆಲ್ಲಿಯ) ಆಕೃತಿಯು ಬಡಕವಿತ್ತು, ನಾಜೂಕಾಗಿತ್ತು ಆದರೆ ಅವನ ಎಲುಬುಗಳೂ ಸಂದುಗೀಲಗಳೂ ದೊಡ್ಡವು ಗಟ್ಟಿಯೂ ಆಗಿದ್ದವು ಅವನು ಎತ್ತರ ನಿಲುವಿನವನು; ಆದರೂ, ಗಿಡ ಕಾಣುವಷ್ಟು ಅವನು ಬೆನ

ಬಗ್ಗಿಸಿ ಭುಜತಗ್ಗಿಸಿ ನಡೆಯುತ್ತಿದ್ದನು. ಅವನ ಬಟ್ಟೆಗಳು ಬೆಲೆಯುಳ್ಳವು, ಅಂದಿಗೆ ತೀರ ಕಾಲೋಚಿತ ಮಾದರಿಯಲ್ಲಿ ಮಾಡಿಸಿದವು; ಆದರೆ ಅವು ನಿರಿಗೆಬಿದ್ದು ತಿದ್ದಿ ತೀಡದೇ ಮುದುಡಿ ಮುದ್ದೆಯಾದವು. ಅವನ ಹಾವಭಾವಗಳು ಜಗ್ಗನೇ ಸೆಟೆದಂತೆ, ಕೆಲವೊಮ್ಮೆ ರಭಸದವು, ಒಮ್ಮೊಮ್ಮೆ ಅಸಡ್ಡಾಳವಾಗಿದ್ದವು; ಆದರೆ ಬಹುತಃ ಅವು ಸೌಮ್ಯವಾಗಿ ನಯವಾಗಿ ಇರುತ್ತಿದ್ದವು. ಅವನ ಅಂಗಕಾಂತಿ ಕೋಮಲವಿತ್ತು, ಸ್ತ್ರೈಣವೆನಿಸುವಂತಿತ್ತು, ಬಿಳಿಗೆಂಪಿನ ತಿಳಿಯಾದ ತೊಳಗುವ ಬಣ್ಣವಾಗಿತ್ತು; ಆದರೂ ಬಿಸಿಲಿಗೆ ಅದು ಕಪ್ಪಿಟ್ಟಿತ್ತು, ಕಲೆಬಿದ್ದು ಕಂದಿದಂತಿತ್ತು. ಅವನ ಮುಖಾಕೃತಿ, ಮಸ್ತಕ ತೀರ ಸಣ್ಣವಿದ್ದವು; ಆದರೆ ಉದ್ದ ಪೊದೆಗಟ್ಟಿದ ಕೂದಲುಗಳಿಂದ ಅವನ ತಲೆ ಬಲುದೊಡ್ಡದಾಗಿ ತೋರುತ್ತಿತ್ತು. ಅವನು ಕೂದಲುಗಳೊಳಗಿಂದ ತನ್ನ ನೀಳವಾದ ಬೆರಳುಗಳನ್ನು ಆಗಾಗ್ಗೆ ಅರಿವಿಲ್ಲದೆ ಆಡಿಸುತ್ತಿದ್ದನು; ಆದ್ದರಿಂದ ಅವು ಹುರುಬುರುಕಾಗಿ ಅವ್ಯವಸ್ಥಿತವಾಗಿ, ಎದ್ದು ಉಗ್ರವಾಗಿ ಕಾಣುತ್ತಿದ್ದವು. ಅವನ ಮುಖಚರ್ಯೆಯು ಒಂದು ಬಗೆಯ ಸ್ಫೂರ್ತಿಯನ್ನು, ಕಾವಿನ ಜೀವಕಳೆಯನ್ನು, ಉತ್ಸಾಹವನ್ನು, ಸುಸ್ಪಷ್ಟವಾದ ನಿಸರ್ಗವನ್ನೇ ಮೀರಿ ಮಿರುಗುವಂಥ ಬುದ್ಧಿ ತೇಜವನ್ನು ಸೂಸುತಿತ್ತು. ಬೇರೆ ಯಾವ ಮುಖಮುದ್ರೆಯಲ್ಲಿಯೂ ಇಂಥ 'ಸೌಸವ'ವನ್ನು ನಾನು ಕಂಡದ್ದಿಲ್ಲ. ಅವನ ನೈತಿಕ ಆವಿರ್ಭಾವವು ಬೌದ್ಧಿಕ ಆವಿರ್ಭಾವಕ್ಕಿಂತ ಸೌಂದರ್ಯದಲ್ಲಿ ಏನೂ ಕಡಿಮೆ ಇದ್ದಿಲ್ಲ.'– ಮುಂದರಿದು ಹೊಗ್‌ನು ಷೆಲ್ಲಿಯ ಒಂದೇ ಕುಂದನ್ನು ಉಲ್ಲೇಖಿಸುತ್ತಾನೆ. ಅದು ಅವನ ಉಚ್ಚ ಕರ್ಕಶ ಕಂಠ!'

ಷೆಲ್ಲಿಯ ತತ್ವಜ್ಞಾನವೂ ಧರ್ಮತ್ಯಾಗವೂ ಅವನನ್ನು ಗಂಡಾಂತರಕ್ಕೆ ಒಡ್ಡಿತು. ೧೮೧೧ ರಲ್ಲಿ ಅವನು ಒಂದು ಚಿಕ್ಕ ಹೊತ್ತಿಗೆಯನ್ನು ಪ್ರಕಟಿಸಿದನು. ಅದರ ಹೆಸರು 'ನಾಸ್ತಿಕತೆಯ ಅವಶ್ಯಕತೆ' (ನಾಸ್ತಿಕತೆ ಎಂದರೆ ನಿರೀಶ್ವರವಾದವೆಂದು ಬೇರೆ ಹೇಳಬೇಕೇ?) ಈ ಅಪರಾಧಕ್ಕಾಗಿ ಅವನನ್ನು ಕಾಲೇಜದಿಂದ ಹೊರ ತಳ್ಳಿದರು. ಅವನ ಗೆಳೆಯ ಹೊಗ್ ಈ ತ್ವರೆಯ ಶಿಕ್ಷೆಯ ಕ್ರಮವನ್ನು ಕಟುವಾಗಿ ನಿಷೇದಿಸಿದನು. ಆದರ ಫಲವೂ ತ್ವರೆಯಿಂದಲೇ ಆಯಿತು. ಅವನೂ ಹೊರ ತಳ್ಳಲ್ಪಟ್ಟನು. ಇಬ್ಬರೂ 'ನಿರ್ವಾಸಿತ' ಗೆಳೆಯರು ಆಕ್ಸಫರ್ಡ ಬಿಟ್ಟರು. ಲಂಡನ್ನಿನಲ್ಲಿ ಪೋಲಂಡ ಸ್ಟ್ರೀಟ ಎಂಬಲ್ಲಿ ಕೋಣೆಗಳನ್ನು ಬಾಡಿಗೆಹಿಡಿದು ತಳ ಊರಿದರು. ಆದರೆ ಮುಂದೆ ಎಪ್ರಿಲದಲ್ಲಿ ಹೊಗ್‌ನು ಯಾರ್ಕ ಶಹರಕ್ಕೆ ಹೋಗಿ ವಕೀಲಿಯ ವ್ಯವಸಾಯ ಕೈಗೊಂಡನು. ಷೆಲ್ಲಿ ತಂದೆಯೊಡನೆ ಹಿಂದೆಯೇ ಜಗಳಾಡಿದ್ದನು; ಈಗಲೂ ಒಡಂಬಡಿಕೆ ಮಾಡಿಕೊಳ್ಳಲು ಸಿದ್ಧನಿದ್ದಿಲ್ಲ. ಆದ್ದರಿಂದ ಚರಿತಾರ್ಥದ ಉಪಾಯವಿಲ್ಲದೆ ನೇತಾಡಬೇಕಾಯಿತು. ಆದರೆ ಅವನ

ಸಹೋದರಿಯರು ವ್ಯಾಂಡ್ಸವರ್ಥ ಎಂಬಲ್ಲಿ ಸಮೀಪದಲ್ಲಿಯೇ ಕಲಿಯುತ್ತಿದ್ದರು ಅವರು ಒಬ್ಬ ಗೆಳತಿಯೊಡನೆ ಷೆಲ್ಲಿಗೆ ಹಣವನ್ನು ಕಳಿಸಿಕೊಡತೊಡಗಿದರು ಆ ಹುಡುಗಿಯ ಹೆಸರು ಹ್ಯಾರಿಟ ವೆಸ್ಟಬ್ರೂಕ್. ಆಕೆಯ ವಯಸ್ಸು ಆಗ ೧ ವರ್ಷ; ಆಕೆಯ ತಂದೆ ಒಂದು ಕಾಫಿ ಹೋಟೆಲ್ಲಿನ ಒಡೆಯನಿದ್ದು ಆಗ ಮುಪ್ಪಿನ ಕೆಲಸಬಿಟ್ಟು ಮನೆಗೆ ಬಂದಿದ್ದನು. ಹ್ಯಾರಿಟಳೊಂದಿಗೆ ಆಕೆಯ ಅಕ್ಕ ಎಲಿಝ ಇವಳ ಪರಿಚಯವೂ ಷೆಲ್ಲಿಗೆ ಆಯಿತು. ಈ ಅಕ್ಕನು ಮುಂದಿಯ ಮದುವ ಕೂಡಿಸಿತರುವದರಲ್ಲಿ ಒಳ್ಳೆ ದೃಢನಿಶ್ಚಯದ ಧೋರಣೆಯಾಗಿದ್ದಳು. ಆ ವರ್ಷ ಮುಗಿಯುವ ಮುಂಚೆಯೇ ಷೆಲ್ಲಿಯು ಹ್ಯಾರಿಟಳನ್ನು ಮದುವೆಯಾದನು !

ಆ ಮದುವೆಯ ಕತೆಯನ್ನು ಅವನೇ ಹೇಳಬೇಕು. ತನ್ನ ಗೆಳತಿ ಕುಮಾರಿ ಹಿಚ್ನ ಎಂಬಾಕೆಗೆ ಅವನು ಅದನ್ನು ಬಣ್ಣಿಸಿದ್ದಾನೆ. ಆಗ ಅವನು ವೇಲ್ಸದಲ್ಲಿ ಇದ್ದನು 'ಒಂದು ದಿನ ಹ್ಯಾರಿಟಳ ಪತ್ರಬಂದಿತು. ಆಕೆಯ ತಂದೆಯ ದಬ್ಬಾಳಿಕೆಯು ವಿಪರೀತವಾಗಿತ್ತು. ಆ ಕುರಿತು ಪತ್ರದಲ್ಲಿ ತುಂಬ ದೂರಿಕೊಂಡಿದ್ದಳು. ಆತ್ಮಹತ ಆಕೆಯ ಮೆಚ್ಚಿಗೆಯ ವಿಷಯು. ಜೀವಮಾನವೆಲ್ಲ ಅದೇ ಆಸಕ್ತಿ ಆಕೆಯಲ್ಲಿ ವಿಶೇಷ ವಾಗಿತ್ತು. ಮುಂದೆ ಆಕೆಯ ಪತ್ರಗಳು ಹೆಚ್ಚು ಹೆಚ್ಚು ಚಿಂತಾಕ್ರಾಂತವಾಗ ತೊಡಗಿದವು. ಕೊನೆಗೂ ಒಂದು ಪತ್ರದ ಹತಾಶೆಯ ದೀನದನಿಯು ನನ್ನನ್ನು ಒಮ್ಮೆಲೆ ವೇಲ್ಸಬಿಟ್ಟು ಲಂಡನ್ನಿಗೆ ಧಾವಿಸುವಂತೆಮಾಡಿತು. ಆಕೆಯ ಚರ್ಯೆ- ಮುದ್ರೆಗಳಲ್ಲಿ ಪಲ್ಲಟವು ನನ್ನ ಮನಸ್ಸಿಗೆ ಆಘಾತವನ್ನುಂಟುಮಾಡಿತು. ಆ ಪಲ್ಲಟ ಇಂಗಿತವು ನನಗೆ ಆಗ ಹೊಳೆಯಲೇ ಇಲ್ಲ. ಆಕೆ ನನ್ನನ್ನು ಘನವಾಗಿ ಅಂಟಿಕೊಂಡ ಬಿಟ್ಟಳು. ಅಲ್ಲದೆ, ತನ್ನ ಅಂಟಿದ ನಂಟಿಗೆ ಪ್ರತಿಯಾಗಿ ನಾನು ಅಷ್ಟೇ ಸ್ನೇಹವನ್ನು ತೋರಿಸಲಿಕ್ಕಿಲ್ಲವೇನೋ-ಎಂದು ಆಕೆ ಹೆದರಿದ್ದಳು. ಈ ಪೂರ್ವಗ್ರಹಿಕೆಯ ಮೂಲಕ ಆಕೆಗೆ ಆತ್ಮನಿವೇದನೆಯು ಇನ್ನೂ ವೇದನೆಯದಾಯಿತು. ಆಕೆಯ ದೈನ್ಯ ದಿಂದ ಪ್ರಭಾವಿತನಾಗದೇ ಇರುವದು ಅವಶ್ಯಕವೇ ಇತ್ತು. ನಾನು ಲಂಡನ್ನಿನಲ್ಲಿ ಹಲವು ದಿನ ಉಳಿದೆನು. ಅಷ್ಟು ಅವಧಿಯಲ್ಲಿ ಆಕೆಯು ಚೇತರಿಸಿಕೊಂಡಳು ಮತ್ತೆ ಆಕೆ ಆಜ್ಞೆ ಮಾಡಿದಾಗ ನಾನು ಮರಳಿಬರುವೆನೆಂದು ಆಕೆಗೆ ಆಣೆಹೊತ್ತಿದ್ದೆನು ಎಲ್ಲರೂ ಆಕೆಯನ್ನು ಶಾಲೆಗೆ ಹಿಂದಿರುಗುವಂತೆ ಒತ್ತಾಯಪಡಿಸಿದರು. ಅಲ್ಲಿ ಆಕೆಗೆ ಪ್ರತಿಯೊಂದು ತಾಸು ಸಂಗಡಿಗರ ಗರ್ವ-ದುಷ್ಟತೆಗಳ ಮೂಲಕ ಅಸಹ ಕಟುವಾಗತೊಡಗಿತು. ಆಕೆ ಮತ್ತೆ ನನಗೆ ಬರೆದಳು. ನಾನು ಲಂಡನ್ನಿಗೆ ಬಂದೆನು ನಿನಗೆ ಹಿಂದೆಯೇ ತಿಳಿಸಿದ ಕಾರಣಗಳಿಗಾಗಿ ನಾನು ಮದುವೆಯ ಮಾತನ್ನೆತ್ತಿದೆನು ಆಕೆಯು ಒಪ್ಪಿಗೆ ಇತ್ತಳು. ನನ್ನನ್ನು ಹಳಿಯುವದಾದರೆ ಹಳಿಯಲು ಅಡ್ಡಿ ಇಲ್ಲ ನಚ್ಚಿನ ಗೆಳತಿಯೇ ! ನೀನು ಈಗಲೂ ನನಗೆ ಅಚ್ಚುಮೆಚ್ಚಿನವಳು. ನನ್ನನ್ನು

ಹಳಿಯುವಾಗಲೂ ನನ್ನ ತಪ್ಪಿಗಾಗಿ ಕನಿಕರವಿರಲಿ.'–ಈ ಪರಿಚ್ಛೇದದಿಂದ ಷೆಲ್ಲಿ, ಹ್ಯಾರಿಟ ಇವರ ಮನೋವೃತ್ತಿಗಳಂತೆ ಅವರ ಮದುವೆಯ ಹಿನ್ನೆಲೆ, ಸಂಬಂಧದ ಸ್ವರೂಪ ಎಲ್ಲವೂ ಕೂಡಿಯೇ ಸ್ಪಷ್ಟವಾಗುವವು.

ಷೆಲ್ಲಿ, ಹ್ಯಾರಿಟ ಎಡಿನ್‌ಬರ್ಗಕ್ಕೆ ಪಲಾಯನಮಾಡಿದರು. ಅಲ್ಲಿ ಅವರ ಅವಸರದ ವಿವಾಹವಿಧಿಯು ಜರುಗಿತು. ಆ ವಿವಾಹವು ವಿವೇಕಗೇಡಿಯಾಗಿತ್ತೆಂದು ಬೇರೆ ಹೇಳಬೇಕೆ ? ಇವನ ಕಡೆಯಿಂದ ಕೇವಲ ದಾಕ್ಷಿಣ್ಯದಯೆಯ ಕಾವ್ಯಮಯ ಆವೇಶ, ಅವಳ ಕಡೆಯಿಂದ ವ್ಯಾಮೋಹ ರಭಸ–ಇವೆರಡೇ ಗಾಲಿಗಳ ಮೇಲೆ ಅವರೀರ್ವರ ವೈವಾಹಿಕ ಜೀವನದ ಮನೋರಥವು ನಿಂತಿತ್ತು ! ಆದಾಗ್ಯೂ ಎರಡು ವರ್ಷಗಳಷ್ಟು ಕಾಲ,–ಆ ಎಲ್ಲ ಮಾತಿಗೆ ಅದು ಎರಡು ಗಳಿಗೆ ಯೆನಿಸಿದರೂ, ಅನುಭವದ ಕಣ್ಣಿಗೆ ಅಷ್ಟೇ ಅವಧಿ ಬಹುದೀರ್ಘ ಯುಗ ವೆನಿಸಬಹುದು ! ಅವರು ಸುಖವಾಗಿಯೇ ಕಳೆದರು. ಮುದ್ದು ಮಾಟದ ಹುಡುಗಿ ಹ್ಯಾರಿಟ್ ಷೆಲ್ಲಿಗೆ ನಚ್ಚಿನಷ್ಟೇ ನಿಷ್ಠೆಯ ಮಡದಿಯಾಗಿ ನಡೆದಳು. ಆದರೆ ಬರೇ ನಚ್ಚು ನಿಷ್ಠೆಗಳಷ್ಟೇ ಅವರ ಸಂಸಾರ ಸುಖಕ್ಕೆ ಆಧಾರವಿದ್ದಿಲ್ಲ. ಒಲುಮೆಯೊಂದೇ ಒಳಿಸಿಕೊಂಡರೆ ಬಡವ-ಬಡವಿಯರ ಬದುಕು 'ಎದಕ್ಕೂ' ಸಾಲದು. ಬಾಳಿನ ಕುಲುಮೆಗೆ ಉರುವಲ ಬೇಕು. ಷೆಲ್ಲಿಗೆ ಒಬ್ಬ ದೊಡ್ಡಪ್ಪನಿದ್ದನು–ಅವನ ಹೆಸರು ಪಿಲಿಫ್ಫೋಲ್ಡ. ಆತ ಸುಪ್ರಸಿದ್ಧ ನೆಲ್ಸನನ ಕಪ್ತಾನರಲ್ಲಿ ಒಬ್ಬನಾಗಿದ್ದನು. ಚಾಕರಿಯ ವಯಸ್ಸಿನಲ್ಲಿ, ಆತನು ಷೆಲ್ಲಿಯ ಸಂಸಾರಕ್ಕೆ ಹಣವನ್ನು ಪೂರೈಸ ಹತ್ತಿದನು. ಆ ಬೆಂಬಲದಿಂದ ಷೆಲ್ಲಿ ದಂಪತಿಗಳು ಜಂಗಮ ಜೀವನವನ್ನು ಹೂಡಿದರು. ಇಂಗ್ಲಂಡದಲ್ಲಿ ಅಲ್ಲಲ್ಲಿ ಅಲೆದಾಡುತ್ತ ಉಳಿವರು. ಯಾರ್ಕ, ಕೆಸ್ವಿಕ್, ಡಬ್ಲಿನ್, ಐಲ ಆಫ ಮ್ಯಾನ, ವೇಲ್ಸ, ಲಿನಮೌಥ ಮುಂತಾದ ಸ್ಥಳಗಳು ಅವರಿಗೆ ಮನೆಮಾಡಿಕೊಟ್ಟವು. ಆದರೆ ಯಾರ್ಕದಲ್ಲಿ ಹ್ಯಾರಿಟಳ ಅಕ್ಕ ಎಲಿಝಾ ವೆಸ್ಟಬ್ರೂಕ ಅವರನ್ನು ಬಂದು ಸೇರಿದಳು. ತನ್ನ ತಂಗಿಯ ಬಾಳನ್ನು ಆಕೆಯು ಮದುವೆಯಾಗಿದ್ದರೂ ತಾನೇ ಆಳಬೇಕು. ಆಕೆಯ ಮನೆಯ ಆಡಳಿತ ನಡೆಸಬೇಕು–ಎಂಬ ಹಟವುಳ್ಳ ಹಂಬಲ ಈ ಅಕ್ಕನದಿತ್ತು. ಈ ಕುಟುಂಬ ಪೀಡೆಯು ಅಂದಿನಿಂದ ಅಂತ್ಯದ ತನಕವೂ ಷೆಲ್ಲಿಗೆ ತಪ್ಪಲಿಲ್ಲ.

ಲಿನಮೌಥದಲ್ಲಿ ೧೮೧೨ ರಲ್ಲಿ ಆತನು 'ಕ್ವೀನಮ್ಯಾಬ' (ಮ್ಯಾಬರಾಣಿ) ಎಂಬ ಪ್ರಥಮ ಖಂಡಕಾವ್ಯವನ್ನು ರಚಿಸಿದನು. ಅವನ ಪ್ರತಿಭೆಯ ಸಂಪನ್ನ ಭವಿಷ್ಯದ ಮುಂಗುರುಹು ಆ ಕೃತಿಯಲ್ಲಿ ಮೂಡಿತ್ತು. 'ಭೂತ, ವರ್ತಮಾನ ಮತ್ತು ಭವಿಷ್ಯ ಗಳು ಈ ಕಾವ್ಯದ ಭವ್ಯವೂ ವ್ಯಾಪಕವೂ ಆದ ವಸ್ತು' ಎಂದು ಇವರ ಪರಿಚಯ ವನ್ನು ಷೆಲ್ಲಿಯು ಆಗ ಕೊಟ್ಟಿದ್ದನು.

೧೮೧೩ ರಲ್ಲಿ ಕವಿಯು ಒಂದು ಸಜೀವ ಕವನಕ್ಕೆ ಜನಕನಾದನು. ಹ್ಯಾರಿಟ್ ಒಂದ ಹೆಣ್ಣು ಕೂಸನ್ನು ಹೆತ್ತಳು. 'ಕ್ವೀನಮ್ಯಾಬ' ಕಾವ್ಯದ ನಾಯಕಿಯ ಆಯೆಂಥೆ ಎಂಬ ಹೆಸರನ್ನೇ ಈ ಕೂಸಿಗೆ ಇಡಲಾಯಿತು. ಮರುವರ್ಷ ಮಾರ್ಚದಲ್ಲಿಯೇ ಹ್ಯಾರಿಟ-ಷೆಲ್ಲಿಯರು ಲಂಡನ್ನಿನಲ್ಲಿ ಇನ್ನೊಮ್ಮೆ ವಿವಾಹಬದ್ಧರಾಗಬೇಕಾಯಿತು ಎಡಿನಬರ್ಗದಲ್ಲಿಯ ಲಗ್ನ ವಿಧಿಯು 'ಸಾಧು'ವಲ್ಲವೆಂಬ ಸಂದೇಹ ಉಂಟಾದದ್ದೆ ಈ 'ಪುನರ್ವಿವಾಹ'ಕ್ಕೆ ಕಾರಣ !

ಒಮ್ಮೆ ಮದುವೆಯಾದವಳನ್ನೇ ಮತ್ತೊಮ್ಮೆ ಮದುವೆಯಾಗಿ ಷೆಲ್ಲಿಯು ಹೆಂಡ ಯಿಂದ ಎಂದಿಗೂ ಬೇರೆಯಾಗಬಾರದೆಂದು ನಿರ್ಧರಿಸಿದ್ದನೆನ್ನಬಹುದು. ಹ್ಯಾರಿ ಳಿಂದ ದೂರವಾಗುವ ವಿಚಾರ ಆತನಿಗೆ ಎಂದೂ ಹೊಳೆಯಲಿಲ್ಲ, ಹೊಳೆಯ ವಂತಿಲ್ಲವೆಂದೂ ಅನ್ನಬಹುದು. ಆದರೆ ಸೋಜಿಗವೆಂದರೆ, ಹ್ಯಾರಿಟಳ ಕುರಿತ ಹಿಂದೆ ಇದ್ದ ಪ್ರೀತಿಯು ಈಗ ಕಡಿಮೆಯಾಗಿತ್ತು. ಆಕೆಯ ಅಕ್ಕ ಎಲಿಝಾ ಪಾರುಪತ್ಯದಲ್ಲಿ ಆತನು ಮನೆಯನ್ನೇ ದ್ವೇಷಿಸುವಂತೆ ಆಗಿತ್ತು. ಇದರಿಂದ ಷೆ ಶೀಘ್ರವಾಗಿ ಇನ್ನೊಂದು ಪ್ರಣಯಪಾಶದಲ್ಲಿ ಸಿಲುಕಿದನು. ವಿಲಯಮ ಗೊಡ್ವಿ ಎಂಬ ಒಬ್ಬ ನಾಮಾಂಕಿತ ನೀತಿ ಶಾಸ್ತ್ರಜ್ಞನ ಹುಡುಗಿ ಮೇರಿ ವೋಲಸ್ಟನಕ್ರ್ಯಾ ಎಂಬಾಕೆಯ ಪ್ರಯಣಕ್ಕೆ ಅವನು ಹುಚ್ಚಾದನು. ಗೊಡ್ವಿನ್ನನು 'ರಾಜಕೀಯ ನ್ಯಾಯ' ಎಂಬ ಗ್ರಂಥವನ್ನು ಬರೆದಿದ್ದನು. ಅದು ಒಳ್ಳೇ ಜನಪ್ರಿಯವಾಯಿತು ಷೆಲ್ಲಿಗೆ ಅದನ್ನು ಓದಿ ಸ್ಫೂರ್ತಿಯುಂಟಾಯಿತು. ಸ್ಫೂರ್ತಿಯ ಫಲವಾ ಅವರೀರ್ವರ ಪತ್ರವ್ಯವಹಾರವು ಆರಂಭವಾಯಿತು. ಗೊಡ್ವಿನ್ನನು ಕೇವ ಜ್ಞಾನಧನನೇ ಇದ್ದನು.-ಸದಾಕಾಲವೂ ಹಣದ ಅಡಚಣಿಯಲ್ಲಿ ಒದ್ದಾಡ ತ್ತಿದ್ದನು. ಈ ದರಿದ್ರ ದಾರ್ಶನಿಕನ ಸಲುವಾಗಿ ಷೆಲ್ಲಿ ಹಣ ಕೂಡಿಸಲು ಲಂಡನ ನಲ್ಲಿ ಪೇಚಾಡುತ್ತಿದ್ದನು. ಈ ನಿಮಿತ್ತವಾಗಿ ಅವನು ಗೊಡ್ವಿನ್ನನ ಮನೆ ಆಗಾಗ್ಗೆ ಬರಹೋಗ ತೊಡಗಿದ್ದನು. ಇದರಂದ ಅನಿವಾರ್ಯವಾಗಿ ಗೊಡ್ವಿನ್ನ ಕುವರಿ ಮೇರಿಯ ಪರಿಚಯ ಬೆಳೆಯಿತು. ಆಕೆ ಹ್ಯಾರಿಟಳಷ್ಟು ರೂಪವತಿ ಇದ್ದಿಲ್ಲ ಆದರೆ ನಿಸ್ಸಂಶಯವಾಗಿ ಆಕೆಗಿಂತ ಬುದ್ಧಿಮತಿ ಇದ್ದಳು. ಷೆಲ್ಲಿಯ ಕವಿಹೃದಯಕ ಸುಂದರಿ ಹ್ಯಾರಿಟ ಸ್ಫೂರ್ತಿ ನೀಡಬಹುದಿತ್ತು. ಆದರೆ ರಸಿಕ ಚತುರ ಮೇ ಆತನ ಕಲಾಪ್ರತಿಭೆಗೆ ಕಳೆಯನ್ನಿಡಬಲ್ಲವಳಾಗಿದ್ದಳು. ಕವಿಯು ತನ್ನ ಸಹಚರಿಯಾ ಯಾರನ್ನೂ ಆ ಸಿ ರಿ ದ ರೆ ಹೆಚ್ಚು ಸುಖಿಯಾಗಬಲ್ಲನು ? ತನ್ನ ಕಾವ್ಯವನ್ ಪ್ರೇರಿಸುವ ಮುಗ್ಧ ಪ್ರೇಯಸಿಯನ್ನೋ ? ಕಾವ್ಯವನ್ನು ಸೊಗಸುಗಾರಿಕೆಯಿಂ ಸವಿದು ಪ್ರಶಂಸಿಸುವ ಪ್ರಗಲ್ಭ ಪ್ರಣಯಿನಿಯನ್ನೋ ? ಇದೊಂದು ಸ್ವಾರಸ್ಯ ರಹಸ್ಯವು. ಇದನ್ನು ತಿಳಿದು ಹೇಳಲು ಕವಿಯೇ ಬೇಕು. ಆದರೆ ಕವಿಗೂ ಇದ

ತೀವರ್ಣನವಾಗುವದಿಲ್ಲವೇನೋ. ಷೆಲ್ಲಿಗಂತೂ' ಈ ಒಲುವೆಯ ಒಗಟು' ತಿಳಿಯಾಗಿ ಬಿಡಿಸಿ ತೊಡಕು ತೀರಲೇ ಇಲ್ಲ.

ಷೆಲ್ಲಿ, ಮೇರಿಯ ಪ್ರಣಯದಲ್ಲಿ ಆಳವಾಗಿ ಸಿಲುಕಿಬಿದ್ದನು. ಹ್ಯಾರಿಟಳಿಗೆ ತನ್ನಿಂದ ವಿಚ್ಛೇದ ಪಡೆಯಲು ಕೇಳಿಕೊಂಡನು ! ಆದರೆ ಆಕೆಗೆ ವಿಚ್ಛೇದವು ಬೇಕಿದ್ದಿಲ್ಲ. ಅವರೀರ್ವರಲ್ಲಿ ಅಂಥ ಮನಸ್ತಾಪವೇನೂ ಆಗಿಯೇ ಇರಲಿಲ್ಲ; ಮೇಲಾಗಿ ಆಕೆಗೆ ಷೆಲ್ಲಿಯೇ ಬೇಕು. ಆಗಿನ ಹೊತ್ತಿಗೆ ಅವನಿಂದ ದೂರ ಇರುವದು ಸುತರಾಂ ಶಕ್ಯವಿದ್ದಿಲ್ಲ. ಆಕೆಯು ಪ್ರಸೂತಿಕಾಲ ಹತ್ತಿರವಿತ್ತು. ಷೆಲ್ಲಿಯೂ ಒಳ್ಳೆ ಕಳಕಳಿಯಿಂದ ಆಕೆಯ ಶುಶ್ರೂಷೆಯನ್ನು ನಡೆಸಿದ್ದನು ! ಆದರೆ ಅತ್ತ ಮೇರಿಯ ಮೋಹಪಾಶವೂ ಬಲವಾಗಿ ಸೆಳೆಯುತಿತ್ತು. ಆಗ ೧೮೧೪ರಲ್ಲಿ ಆತನು ಮೇರಿಯೊಂದಿಗೆ ಒಮ್ಮೆಲೇ ಜುಲೈ ತಿಂಗಳಲ್ಲಿ ಫ್ರಾನ್ಸಿಗೆ ಪಲಾಯನ ಮಾಡಿದನು. ಹೋಗುವಾಗ ಜತೆಗೆ ಇನ್ನೊಬ್ಬ ಹುಡುಗಿಯನ್ನೂ ಒಯ್ದನು. ಆಕೆಯ ಹೆಸರು ಜೇನ ಕ್ಲಾರವೊಂಟ. ಗೊಡ್ವಿನ್ನನ ಎರಡನೆಯ ಹೆಂಡತಿಯ ಮೊದಲನೆಯ ವಿವಾಹದ ಅಪತ್ಯವದು ! (ಸಂಬಂಧ ಗಮನಕ್ಕೆ ಬಂದಿತೇ ?) ಫ್ರಾನ್ಸಿಗೆ ಹೋದ ಮೇಲೆ ಅವನಿಗೆ, ಇಂಗ್ಲಂಡದಲ್ಲಿ ಬಿಟ್ಟು ಬಂದ ಹೆಂಡತಿಯ ಹಂಬಲವಾಯಿತು. ಟ್ರೊಯಿಸದಿಂದ ಅವನು ಆಕೆಗೆ ಪತ್ರಬರೆದನು ಸ್ವಿಟ್ಝರ್ಲಂಡದಲ್ಲಿ ಬಂದು ತನ್ನೊಡನೆ ಸೇರೆಂದು ! ಬುದ್ಧಿಮತಿಯ ಮೋಹ, ರೂಪವತಿಯ ನೇಹ ಇವೆರಡೂ ಕವಿಯ ಜೀವನಕ್ಕೆ ಅಗತ್ಯವೆನಿಸಿದವು; ರೂಢಿ, ಧರ್ಮ, ಸಮಾಜದ ಮತ ಇವುಗಳ ಪರಿವೆ ಅವನಿಗೆ ಅವಶ್ಯವೆನಿಸಲೇ ಇಲ್ಲ !

ಆದರೆ ಷೆಲ್ಲಿ ಮೇರಿಯೊಡನೆ ಪ್ರಣಯ ಯಾತ್ರೆಯನ್ನು ಮುಗಿಸಿ ಯುರೋಪದಲ್ಲಿ ೬ ವಾರ ಸಂಚರಿಸಿ ಇಂಗ್ಲಂಡಿಗೆ ಮರಳಿದನು. ಅವರು ಬರುವನಕವೂ, ಹ್ಯಾರಿಟಳು ಆತನ ಎಲ್ಲ ಹಣವನ್ನು ತೆಗೆದು ಬಳಿಸಿ ಕೊಂಡಿದ್ದಳೆಂದು ಅವನು ಅರಿತುಕೊಂಡನು. ಷೆಲ್ಲಿ ಆಕೆಯನ್ನು ಕಾಣಲು ಹೋದನು. ಮುಂದೆ ಕೆಲವು ತಿಂಗಳುಗಳಲ್ಲಿ ಅವನು ಆಕೆಯನ್ನು ಆಗಾಗ್ಗೆ ಭೆಟ್ಟಿಯಾದನು. ನವೆಂಬರದಲ್ಲಿ ಆಕೆಯು ಗಂಡು ಕೂಸನ್ನು ಹೆತ್ತಳು.

ಆಗಿನ ಅವನ ಪರಿಸ್ಥಿತಿ ವಿಚಿತ್ರವಿದ್ದಷ್ಟೇ ದಯನೀಯವಿತ್ತು. ಷೆಲ್ಲಿಯ ಪತ್ನಿ ಪರಿತ್ಯಾಗವು ಒಂದು ಕಾವ್ಯ ರಮ್ಯ ಘಟನೆಯೆಂದು ಹಲವರು ತಿಳಿದರು. ಆದರೆ ಅದು ರಮ್ಯವೂ ಇದ್ದಿಲ್ಲ. ಕಾವ್ಯವೂ ಆಗಿದ್ದಿಲ್ಲ;– 'ಪರಿತ್ಯಾಗ'ವೆಂದೂ ಹೇಳಲು ಬರುವಂತಿಲ್ಲ ! ಅದು ಅವನ ಪ್ರತಿಭೆಯ ಲಕ್ಷಣವೆಂದು ಕೆಲವರು ಭಾವಿಸುವರು.

[ನಾಲ್ಕು ಜನ ನಡೆದಂತೆ ನಡೆದರೆ ಪ್ರತಿಭೆಯೆಲ್ಲಿಯದು ?] ಆದರೆ ಈ ಘಟ
ಯಲ್ಲಿ ದೈನ್ಯವನ್ನು ನೋಡಿದವರಿಗೆ ಅಲ್ಲಿ ಯಾವ ಪ್ರತಿಭಾ ವಿಲಾಸವ
ತೋರಲಿಕ್ಕಿಲ್ಲ. ಇನ್ನೂ ಕೆಲವರು ಷೆಲ್ಲಿಯು ಅಂದಿನ ಲಗ್ನಸಂಸ್ಥೆಯ ಅಂ
ರೂಢಿಯ ವಿರುದ್ಧ ಬಂಡು ಹೂಡಿ ಬಂಟನೆನಿಸಿದನೆಂದೂ ಹೊಗಳಿದರು. ಆದ
ಅಂತಹದೇನೂ ಅದ್ಭುತವೆಸಗಿಯೇ ಇದ್ದಿಲ್ಲ. ಆಗಿನ ಅವನ ಬದುಕು ದುರವಸ್
ಯದಿತ್ತು. ತಾನು ದೂರೀಕರಿಸಿದ ಹೆಂಡತಿಯಿಂದಲೇ ತನ್ನ ಉಪಜೀವಿಕೆಗಾ
ಆತನು ಹಣದ ನೆರವನ್ನು ಪಡೆಯಬೇಕಾಗಿ ಬಂತು. ಹ್ಯಾರಿಟಳನ್ನು ತಾನು ನಿ
ವಾಗಿಯೂ ಬಿಟ್ಟಿಲ್ಲವೆಂದು ಆಕೆಯನ್ನೂ ತನ್ನ ಆತ್ಮವನ್ನೂ ಮನಗಾಣಿಸು
ಭರದಲ್ಲಿ ಅತ್ತ, ಜಪ್ತಿಗೆ ಬಂದ ಬೇಲೀಫರನ್ನು ತಪ್ಪಿಸಿಕೊಳ್ಳುತ್ತ, ಸಾವುಕಾ
ರೊಡನೆ 'ಕಂತು-ಬಡ್ಡಿ-ಸೂಟು'ಗಳಿಗಾಗಿ ದುಂಬಾಲ ಬೀಳುತ್ತ ಆ ದಿವ
ಪ್ರತಿಭಾ-ಸಂಪನ್ನನಾದ ವಾಗೀಶ್ವರನು ಒದ್ದಾಡುತಿದ್ದನು !

ಕೊನೆಗೂ ಆ ಬೇಲೀಫರನ್ನೂ ಸಾವುಕಾರರನ್ನೂ ಸಂತೈಸಲು ಅನುವಾಯಿತು
೧೮೧೫ ರಲ್ಲಿ ಸರ್ ಬಿಷೇ ಷೆಲ್ಲಿಯು ಮಡಿದದ್ದರಿಂದ, ಅವನ ಮೃತ್ಯುಪತ್ರದಂ
ಷೆಲ್ಲಿಯ ಪಾಲಿಗೆ ಬರತಕ್ಕ ಆಸ್ತಿಯ ಅಂಶವನ್ನೆಲ್ಲ ಅವನ ತಂದೆ ಟಿಮೊಥಿಯ
ಕೊಂಡುಕೊಂಡನು. ಆ ಮೂಲಕ, ಷೆಲ್ಲಿಗೆ ವಾರ್ಷಿಕ ೧೦೦೦ ಪೌಂಡು ಉತ್ಪನ್
ಬರುವಂತೆ ಆಯಿತು. ಈ ಹಣದೊಳಗಿಂದ ಆತನು ಹ್ಯಾರಿಟಳಿಗೆ ೨೦೦ ಪೌಂಡಿ
ವಾರ್ಷಿಕ 'ಭುಕ್ತಾಂಶ'ವು ದೊರೆಯುವಂತೆ ಮಾಡಿದನು.

ಅದೇ ವರ್ಷ ಷೆಲ್ಲಿಯು 'ಎಲೆಸ್ಟೋರ' ಎಂಬ ಕಾವ್ಯವನ್ನು ಬರೆದನು. ಅದ
ಸರಳರಗಳೆಯಲ್ಲಿ ಬರೆದ ಒಂದು ಅತ್ಯುತ್ತಮ ಕೃತಿ. ಅದನ್ನು ಮರುವರ್ಷ
೧೮೧೬ ರಲ್ಲಿ ಪ್ರಕಟಿಸಲಾಯಿತು. ಆ ಪ್ರಕಟಣೆಯ ಎರಡು ತಿಂಗಳ ನಂತರ
ಷೆಲ್ಲಿಯು ಮೇರಿ ಮತ್ತು ಜೇನ ಕ್ಲಾರಮೊಂಟಳೊಂದಿಗೆ ಜಿನೇವಾಕ್ಕೆ ತೆರಳಿದನು
ಈಗ ಜೇನಳು ಕ್ಲಾರ ಎಂದು ಕರೆದುಕೊಳ್ಳುತ್ತಿದ್ದಳು. ಆಕೆ ಅವರೊಡನ
ಇರುವದು ಅವರಿಗೆ ಬೇಡವಿತ್ತು. ಅವರಿಗೆ ಆಕೆ ಭಾರವಾಗಿದ್ದಳು. ಆದರೆ ಆಕೆಯ
ಅವರನ್ನು ಬಳಿವಿಡಿದು ಬಂದಳು. ಆಕೆಯದೂ ಒಂದು ಭಾರವಿತ್ತು. ಅಂದಿ
ಇನ್ನೊಬ್ಬ ಸುಪ್ರಸಿದ್ಧ ಕವಿ ಬಾಯರನ್ನರೊಡನೆ ಆಕೆಯ ಸಂಧಾನವಿತ್ತು. ಅವನ
ಜಿನೇವಾಕ್ಕೆ ಹೊರಟಿದ್ದನು. ಅವನನ್ನು ಹಿಂಬಾಲಿಸಲು ಕ್ಲಾರ ಷೆಲ್ಲಿ ಕುಟುಂ
ದೊಡನೆ ಹೋದಳು. (ಬಾಯರನ್ನನ ವಿಚಾರ ಮುಂದೆ ಪ್ರತ್ಯೇಕವಾಗಿ ಬರಲಿದೆ.

ಸ್ವಿಟ್ಝರ್ಲಂಡದಲ್ಲಿ ಇಬ್ಬರೂ ಮಹಾಕವಿಗಳ ಭೆಟ್ಟಿಯು ಒದಗಿ ಬಂದಿತು. ಷೆ
ಬಾಯರನ್ನರದು ಇದೇ ಪ್ರಥಮ ಭೆಟ್ಟಿ. ಷೆಲ್ಲಿಯು ಬಾಯರನ್ನನ ಕಾವ್ಯವನ್ನು

ಆ ಮೊದಲೇ ಮೆಚ್ಚಿದ್ದನು, ಕಾವ್ಯವನ್ನು ಓದಿ ಕವಿಯನ್ನು ಅರಿತುಕೊಳ್ಳುವ ಆತುರ ಅವನಲ್ಲಿ ಉಂಟಾಗಿತ್ತು. ಆದರೆ ಬಾಯರನ್ನನು ಅರಸುದುಂಬಿ–ವಿರಕ್ತವಿಟ. ಉದಾಸೀನ ಉಪಭೋಗಿ. ಗಾಂಭೀರ್ಯವಿಲ್ಲದ ರಸಿಕ, ಅವನು ಷೆಲ್ಲಿಯನ್ನು ಮಹಾವ್ಯಕ್ತಿಯೆಂದು ಪ್ರತಿಭಾ ಪುರುಷನೆಂದು ಒಪ್ಪಿದನು. ಆದರೆ ಅವನ ಪ್ರಕೃತಿಗೆ ಷೆಲ್ಲಿ, ನಿರ್ಲಿಪ್ತ ಅನಾಸಕ್ತ ವ್ಯಕ್ತಿ ಅನಿಸಿದನು. ಷೆಲ್ಲಿಯಿಂದ ಆದರವನ್ನು ಪಡೆಯಬಹುದಲ್ಲದೆ ಆರಾಧನೆಯನ್ನಲ್ಲವೆಂಬುದನ್ನು ಬಾಯರನ್ನನು ಮನಗಂಡನು. ಇಬ್ಬರೂ ಜಿನೇವಾದಲ್ಲಿ ಕೆಲಕಾಲ ವಾಸಮಾಡಿದರು. ಬಾಯರನ್ನನು ಅಲ್ಲಿ ತನ್ನ 'ಶಿಲಾನದ ಸೆರೆಯಾಳು' [ಪ್ರಿಝ್ನರ ಆಫ ಶಿಲಾನ] ಎಂಬ ಸುಪ್ರಸಿದ್ಧ ದೀರ್ಘ ಕವನವನ್ನು ಅಲ್ಲಿಯೇ ಬರೆದನು. ಆದರೆ ಷೆಲ್ಲಿ ಬರೇ ಎರಡು ಕವಿತೆಗಳನ್ನು ಬರೆದನು: ಒಂದು ಮೌಂಟಬ್ಲಾಂಕ' ಶಿಖರದ ಕುರಿತು, ಇನ್ನೊಂದು ಬೌದ್ಧಿಕ ಸೌಂದರ್ಯದ ಸೂಕ್ತ' ['ಹಿಮ್,ಟು ದಿ ಇಂಟಿಲೆಕ್ಚ್ಯುಅಲ್ ಬ್ಯೂಟಿ']

ಇದೇ ಸಮಯ ಇನ್ನೊಂದು ಸೋಜಿಗವು ನಡೆಯಿತು. ಷೆಲ್ಲಿಯೂ ಬಾಯರನ್ನನೂ ಮೇರಿಯನ್ನು ಒತ್ತಾಯಪಡಿಸಿದರು ಏನಾದರೊಂದು ಕೃತಿಯನ್ನು ಬರೆಯಲಿಕ್ಕೆ. ಆಕೆ ಒಂದು ಕತೆಯನ್ನು ಬರೆದಳು. ಆ ಕತೆಯು ಜಗತ್ಪ್ರಸಿದ್ಧವಾಗಿ ಬಾಳಿದೆ. ವಾಚಕರಲ್ಲಿ ಕೆಲವರಾದರೂ, 'ಫ್ರ್ಯಾಂಕೇನ್ ಸ್ಟೀನ' ಎಂಬ ಭಯಾನಕ ಚಿತ್ರಪಟವನ್ನು ನೋಡಿರಲು ಸಾಕು. ಆ ಯಂತ್ರಾಸುರನ ಕತೆಯೇ ಮೇರಿಯು ಬರೆದ ಅಮರಕೃತಿ.

ಆಗಸ್ಟ ತಿಂಗಳಲ್ಲಿ ಷೆಲ್ಲಿ ದಂಪತಿ ಕ್ಲಾರಳೊಂದಿಗೆ ಇಂಗ್ಲಂಡಿಗೆ ಹಿಂದಿರುಗಿದರು. (ಬಾಯರನ್ ಆಕೆಯನ್ನು ಪರಿಗ್ರಹಿಸಲಿಲ್ಲ.) ಮನೆಗೆ ಮರಳಿದ ಮೇಲೆ ಷೆಲ್ಲಿ ...ೀ ಹಂಟ ಎಂಬ ವಿಖ್ಯಾತ ವಿಮರ್ಶಕ ಕವಿಯ ಪರಿಚಯವನ್ನು ಬೆಳೆಸಿದನು. ...ೀಯು ಷೆಲ್ಲಿಯ ಕವನಗಳ ವಿಮರ್ಶೆಯನ್ನು ಅನುಕೂಲವಾಗಿ ಅನುಗ್ರಹಪೂರ್ಣವಾಗಿಯೇ ಮಾಡಿದ್ದನು. ಆ ಡಿಸೆಂಬರ ತಿಂಗಳಲ್ಲಿ ಅವನು ಲ್ಹೀಯ ಜೊತೆಯಲ್ಲಿಯೇ ಉಳಿದನು. ಈ ನೂತನ ಮಿತ್ರ ಸಹವಾಸದಿಂದ ಹಿಂದಿರುಗಿ ...ೂಡನೆ ಅವನಿಗೆ ಅತಿ ದುರಂತ ವಾರ್ತೆಯೊಂದು ದೊರೆಯಿತು.–ಹ್ಯಾರಿಟಳು ...ರ್ಪೆಂಟೈನ ಹೊಳೆಯಲ್ಲಿ ಹಾರಿ ಮುಳುಗಿ ಸತ್ತಿದ್ದಳು. ಆವರೆಗೂ ಆಕೆ ಷೆಲ್ಲಿ ...ಯೊಂದಿಗೆ ಲಗ್ನವಿಚ್ಛೇದವನ್ನು ಮಾಡಿಕೊಂಡಿದ್ದಿಲ್ಲ, ಒಡಗೂಡಿಯೂ ಬಾಳಿದ್ದಿಲ್ಲ. ...ೇವಲ ಮೇರಿ ಷೆಲ್ಲಿಯರ ವಿವಾಹಕ್ಕೆ ವಿಘ್ನಳಾಗಿ ನಿಂತಿದ್ದಳು. ಆ ವಿಘ್ನ ಹೀಗೆ ನೀರು ...ಪಾಲಾದೊಡನೆ ಅವರೀರ್ವರೂ ಮದುವೆಯಾದರು. ಆದರೆ ಆಕೆಯ ಮರಣಕ್ಕೂ ...ಂಗಿಲಾಗಿ ಅವನಿಗೆ ವ್ಯಥೆಕೊಟ್ಟ ಸಂಗತಿಯೆಂದರೆ, ಆಕೆಯಲ್ಲಿ ಹುಟ್ಟಿದ ಅವನ

ಮಕ್ಕಳ ಪಾಲಕತ್ವವನ್ನು ಕೋರ್ಟು ಅವನಿಗೆ ಅಲ್ಲಗಳೆದದ್ದು. ತನ್ನ ಮಕ್ಕ ಪಾಲನೆಯ ಅಧಿಕಾರ ತನಗಿಲ್ಲವೆಂಬ ತೀರ್ಪು ಕೇಳಿ ಷೆಲ್ಲಿಯ ನೋವಿಗೂ ಸಿಟ್ಟಿಗೂ ನೆಲೆಯೇ ಉಳಿಯಲಿಲ್ಲ. ಆದರೆ ಕೇವಲ ಕವಿಯು ಏನು ಮಾಡ್ಯಾನು ? ಸಂತಾಪದ ಉಬ್ಬರದಲ್ಲಿ ಅವನು ತೀರ್ಪುಕೊಟ್ಟ ನ್ಯಾಯಾಧೀಶನಿಗೆ ಒಂದು ಕಟುವಾದ ಕವಿತೆಯನ್ನು ಬರೆದು ಕಳಿಸಿದನು ! ಡಾ. ಜಾನ್ಸನ್‌ನು ಲಾರ್ಡ ಚೆಸ್ಟರಫೀಲ್ಡನಿ ಬರೆದ ಪತ್ರದಂತೆ ಷೆಲ್ಲಿಯ ಈ ಕವನವೂ ಸಾಹಿತ್ಯ ಪ್ರಪಂಚಕ್ಕೆ ಕಾಣಿಕೆ ಆಯಿತೆ ಹೊರತು ಆ ಲಾರ್ಡನಂತೆ ಈ ನ್ಯಾಯಾಧೀಶನ ಕಣ್ಣು ತೆರೆಯುವ ಹಂಚಿ ಆಗಲಿಲ್ಲ !

೧೮೧೭ ರಲ್ಲಿ ಷೆಲ್ಲಿ ಥೇಮ್ಸ ನದಿಯ ತೀರದಲ್ಲಿ ಮಾರ್ಲೋ ಎಂಬಲ್ಲಿ ಒಂದು ಮನೆಯನ್ನು ಕೊಂಡು ವಾಸಮಾಡಿದನು. ಅಲ್ಲಿ ಅವನು 'ರೊಸಿಲಂಡ ಮತ್ತು ಹೆಲೆನ' ಎಂಬ ಕಾವ್ಯವನ್ನು ಆರಂಭಿಸಿದನು. 'ಇಸ್ಲಾಮದ ಬಂಡು' ಎಂಬುದನ್ನು ಪೂರ್ತಿಗೊಳಿಸಿದನು ಮತ್ತು 'ರಾಜಪುತ್ರ ಏಥೆನೇಸ' ಎಂಬ ಒಂದು ಕಾವ ಖಂಡವನ್ನು ಬರೆದನು. ಅವನ ಕಠಿಣ ಪರಿಶ್ರಮ, ಅಲ್ಲಿಯ ಹವಾಮಾನ ಇವೆರಡರ ಪರಿಣಾಮ ಅವನ ಆರೋಗ್ಯದ ಮೇಲೆ ಆಯಿತು. ಡಾಕ್ಟರನು ಅವನಿಗೆ ಪೂರ್ಣ ವಿಶಾಂತಿಯನ್ನು ತೆಗೆದುಕೊಳ್ಳಲು ಹೇಳಿದನು; ವಿಶ್ರಾಂತಿ ಯೊಂದಿಗೆ ಹವಾಪಲ್ಲಟವನ್ನೂ ಸೂಚಿಸಿದನು. ಷೆಲ್ಲಿಗೆ ಇಟಲಿಯನ್ನು ನೋಡ ನೋಡಬೇಕೆಂದಿತ್ತು, ಆದ್ದರಿಂದ ೧೮೧೮ ರ ಮಾರ್ಚದಲ್ಲಿ ಅವನು ಮೇರಿ ಮತ್ತು ಅವಳ ಮಕ್ಕಳೊಂದಿಗೆ ಇಂಗ್ಲಂಡನ್ನು ಬಿಟ್ಟನು. ಈ ಸಲವೂ ಕ್ಲ್ಯಾರಳು ಜತೆಗೆ ಇದ್ದಳು. ಅವಳೊಡನೆ ಅವಳಿಗೆ ಬಾಯರನ್ನನಿಂದ ಹುಟ್ಟಿದ ಮಗುವೂ ಇತ್ತು.

ಅವರು ಮಿಲಾನದಿಂದ ಲೆಗ್‌ಹಾರ್ನಿಗೂ ಲೆಗ್‌ಹಾರ್ನದಿಂದ ಲುಕ್ಕಾಕ್ಕೂ ಹೋದರು. ಕ್ಲ್ಯಾರಳು ತನ್ನ ಕೂಸನ್ನು ಬಾಯರನ್ನನ ಬಳಿಗೆ ಕಳುಹಿಸಿದಳು ಆಗ ಬಾಯರನ್ನ ವ್ಹೆನೀಸದಲ್ಲಿ ಇದ್ದನು. ಬಾಯರನ್ನನು ಕ್ಲ್ಯಾರಾಳ ಬಗ್ಗೆ ಉಗ್ರ ದ್ವೇಷವನ್ನು ಬೆಳಿಸಿಕೊಂಡು ಬಿಟ್ಟಿದ್ದನು. ಅವನಿಗೆ ಮೈತ್ರಿಣಿಯು ಪತ್ನಿಯಾಗು ವಷ್ಟು ಹತ್ತಿರ ಬಂದೊಡನೆ ಶತ್ರುವಾಗಿಯೇ ತೋರುತ್ತಿತ್ತು ! ಆದರೆ ಇ ಕ್ಲ್ಯಾರಾನ ಕೂಸನ್ನು ವಶಪಡಿಸಿಕೊಳ್ಳಲೇ ಬೇಕೆಂಬ ಹಟ ಅವನದಿತ್ತು. ಆ ಕುರಿತು ಮಧ್ಯಸ್ಥನಾಗಿ ಮಾತನಾಡಲು ಷೆಲ್ಲಿ ಬಾಯರನ್ನನಲ್ಲಿಗೆ ಎರಡು ಸಲ ಹೋ ಬಂದನು. ಅಲ್ಲಿ ಬಾಯರನ್ನನು ಬದುಕುವ ರೀತಿಯನ್ನು ಕಂಡು ಷೆಲ್ಲಿ ಬೆರಗಾದನು ಅವನ ವೈಲಾಸಿಕ ಸ್ವೈರತೆಗೆ ಹೇಸಿದನು. ಮುಂದೆ ಅವನು ಬರೆದ 'ಜ್ಯೂಲಿಯನ ಮತ್ತು ಮಡಾಲೋ' ಎಂಬ ಕಾವ್ಯದಲ್ಲಿ ತನ್ನ ಮತ್ತು ಬಾಯರನ್ನನ ನಡು ನಡೆದ ಸಂಭಾಷಣವನ್ನು ಅವನ ಕುರಿತ ತನ್ನ ಪ್ರತಿಕ್ರಿಯೆಗಳನ್ನೂ ನಿರೂಪಿಸಿದ್ದಾನೆ

ಇಟಲಿಯಲ್ಲಿ ಹೀಗೆ 'ಅನಿಕೇತನ'ನಾಗಿ ಸಂಚರಿಸುತ್ತಿರುವ ಅವಧಿಯಲ್ಲಿಯೇ ಶೆಲ್ಲಿ ತನ್ನ ಪ್ರತಿಭಾವಿನ್ಯಾಸದ ಪರಮಾವಧಿಯ ಉನ್ನತಿಯನ್ನು ಮುಟ್ಟಿದನು. ಆಗಲೇ ಅವನ ಕಾವ್ಯಚಂದ್ರನು ಪೂರ್ಣ ಕಲಾಮಂಡಿತವಾಗಿ ಬೆಳಗಿದನು. ೧೮೧೮ ರಲ್ಲಿ ಅವನು ತನ್ನ ವೈಭವಸಂಪನ್ನ ಕೃತಿಯಾದ 'ಪ್ರೊಮೆಥ್ಯೂಸನ ಬಂಧಮುಕ್ತಿ' ಎಂಬ ಕಾವ್ಯವನ್ನು ಆರಂಭಿಸಿದನು. ಅದನ್ನು ಮರುವರ್ಷ ಮುಗಿಸಿ, 'ಸೆನ್ಸಿ' ಎಂಬ ದೃಶ್ಯಕಾವ್ಯವನ್ನು ಬರೆದನು. ಅದು ಆಂಗ್ಲ ಭಾಷೆಯಲ್ಲಿಯೇ ಅತಿ ಸುಂದರ ಕವನ ರೂಪಕವೆನಿಸಿಕೊಂಡಿದೆ. ಇದೇ ಸಮಯವೇ ಅವನ ಭಾವೋದ್ದೀಪಿತವಾದ ಅನೇಕ ದಿವ್ಯ ಗೀತಗಳೂ ಸ್ಫುಟ ಕವಿತೆಗಳೂ ಸುಗ್ಗಿಯ ಮೊಗ್ಗೆಗಳಂತೆ ಅರಳಿ ಬರ ತೊಡಗಿದವು. ಆ ಕವಿತೆಗಳೇ ಶೆಲ್ಲಿಯನ್ನು ಆಂಗ್ಲ ಸಾಹಿತ್ಯದ ಅತ್ಯುತ್ತಮ ಗೀತ ಕವಿಯಾಗಿ ಮಾಡಿದವು. ಪ್ರಪಂಚದ ಅಕ್ಷರ ವಾಙ್ಮಯದಲ್ಲಿ ಅವು ಅಕ್ಷಯ ಮಹಿಮೆಯನ್ನು ಪಡೆದಿವೆ. ೧೮೧೯ ರಲ್ಲಿ ಅವನು 'ಪಶ್ಚಿಮ ಪವನದ ಸ್ತವನಗೀತ' ವನ್ನು (ಓಡ್ ಟುದ ವೆಸ್ಟವಿಂಡ) ಬರೆದನು. ಮರುವರ್ಷವೇ ಹೂಬಾಣಗಳಂತೆ ಪುಂಖಾನುಪುಂಖವಾಗಿ ಬಂದವು–'ಮೇಘ', 'ಚಂಡೋಲ' 'ಪಾನದೇವನ ಸೂಕ್ತ' 'ಅರೆಥೂಸಾ' ಮತ್ತು 'ಪ್ರೊಸರ್ಪಾಯಿನಳ ಹಾಡು'

೧೮೨೦ ರಲ್ಲಿ ಶೆಲ್ಲಿಯು ಎಮಿಲಿಯಾ ವಿವಿಯಾನಿ ಎಂಬ ಸುಂದರಿಯನ್ನು ಭೆಟ್ಟಿಯಾದನು. ಅವಳು ಒಂದು ಕ್ರೈಸ್ತಮಠದಲ್ಲಿ ಸೆರೆಯಾಳಾಗಿದ್ದಳು. ಆಕೆಯ ದರ್ಶನದಿಂದ ಸ್ಫೂರ್ತಿಯನ್ನು ಪಡೆದು 'ಇಪಿಸೈಕಿಡಿಯನ್' ಎಂಬ ಕಾವ್ಯವನ್ನು ಬರೆದನು. ಶೆಲ್ಲಿಯೇ ಬಣ್ಣಿಸುವಂತೆ 'ಈ ಕವಿತೆ ಒಂದು ರಹಸ್ಯ. ನಿಮಗೆ ಗೊತ್ತು, ನಾನು ವಾಸ್ತವ ರಕ್ತ ಮಾಂಸಗಳಲ್ಲಿ ವ್ಯವಹರಿಸುವದಿಲ್ಲ. ನನ್ನ ಕಡೆಯಿಂದ ದಿನಾಪರೊಂದು ಪಾರ್ಥಿವವನ್ನು ಇಲ್ಲವೆ ಮಾನುಷವನ್ನು ಅಪೇಕ್ಷಿಸುವದಕ್ಕಿಂತ ನೀವು ಮಾಂಸದ ಮುದ್ದೆಯ ಸಲುವಾಗಿ ಮದ್ಯದಂಗಡಿಗೆ ಹೋಗುವದು ಲೇಸು !' ಅವನ ಕಾವ್ಯ ಅವನು ನಿರ್ಮಿಸಿದ 'ಮೇಘ' 'ಚಂಡೋಲ' 'ಸ್ಕೈಲಾರ್ಕ'ಗಳಂತೆ ಭೂಮಿಯ ವಸ್ತುವೇ ಅಲ್ಲ. ಅದೊಂದು ದಿವ್ಯಸೃಷ್ಟಿ. ಇದನ್ನು ಅವನೂ ಬಲ್ಲನು.

೧೮೨೧ ರ ಫೆಬ್ರುವರಿಯಲ್ಲಿ ರೋಮ ನಗರದಲ್ಲಿ ಕೀಟ್ಸ ಕವಿಯು ತೀರಿಕೊಂಡನು. ಅವನೂ ಆಂಗ್ಲ ಕಾವ್ಯದ ವಿಭೂತಿಗಳಲ್ಲಿ ಒಬ್ಬನು. ಆ ದುರಂತವನ್ನು ಕೇಳಿ ಶೆಲ್ಲಿಯು ಕೆರಳಿದನು. ಕೆರಳಲು ಕಾರಣವೆಂದರೆ, ಆ ರೋಮ ಜೀವಿಯಾದ ಕವಿಯು ತನ್ನ 'ಎಂಡಿಮಿಯನ್' ಎಂಬ ಕಾವ್ಯಕ್ಕೆ ದೊರೆತ ಪ್ರತಿಕೂಲ ಟೀಕೆಯ ಆಘಾತದಿಂದ ಕೊಲ್ಲಲ್ಪಟ್ಟನೆಂದು ವಾರ್ತೆ ಹಬ್ಬಿತು. ಹೂವಿನ ಪೆಟ್ಟಿಗೆ ಸಾಯುವ

ಸೌಂದರ್ಯವನ್ನು ಕಾಲಿದಾಸನು ನಿರ್ಮಿಸಿದನು. ಅದೊಂದು ಕವಿ ಕಲ್ಪನೆಯ
ಕಾಯಕವೆನ್ನಬಹುದು. ಆದರೆ ಇಲ್ಲಿ ಟೀಕೆಯು ಪೆಟ್ಟಿಗೆ ಕವಿಯೇ ಸತ್ತನೆಂಬ ಸಂಗತಿ
'ಕವಿಕಂಡ' ಘಟನೆ! ಈ ವಾರ್ತೆಯನ್ನು ಕೇಳಿ ಸಂತಾಪಗೊಂಡು ಉದ್ರಿಕ್ತವಾದ
ಷೆಲ್ಲಿಯ ಪ್ರತಿಭೆಯು ಆಂಗ್ಲ ಸಾಹಿತ್ಯಕ್ಕೆ ಒಂದು ಉತ್ಕೃಷ್ಟ ಕವನವನ್ನು
ಕೊಟ್ಟಿತು. 'ಎಡೋನೀಸ' ಎಂಬ ಸುಪ್ರಸಿದ್ಧ 'ವಿಲಾಪಿಕೆ'ಯನ್ನು ಕೀಟ್ಸನ
ಮರಣದ ಕುರಿತು ಅವನು ಬರೆದನು. ಆದರೂ ಕೀಟ್ಸನ ಪರಿಚಯು ಷೆಲ್ಲಿಗೆ
ಅಲ್ಪವೇ ಇತ್ತು. ಆ ಅಲ್ಪಜೀವಿ ಕವಿಯ ಕವನಗಳನ್ನು ಷೆಲ್ಲಿ ಬಹಳ ಮೆಚ್ಚಿದ್ದ
ನೆಂದೂ ಅಲ್ಲ. 'ಹೈಪಿರಿಯೊನ್' ಎಂಬ ಕೀಟ್ಸನ ಕೃತಿಯನ್ನು ಮಾತ್ರ ಆತನು
ಮೆಚ್ಚಿದ್ದನು. ಆದರೇನು ? ನೋವಿನೊಡನೆ ಸಮರಸವಾಗಿ ಸಾವು-ಜೀವಗಳ
ಸಂದೇಶವನ್ನು ಸಾರುವ ಭಾವದ ಆವೇಶವು ಕವಿಯ ಧರ್ಮ! ಭಾವ ಜೀವಿಯಾದ
ಷೆಲ್ಲಿಯಂಥ ಕವಿಗೆ ಯಾವ ವ್ಯಕ್ತಿಯೂ ಒಂದೇ. ಕೀಟ್ಸನ ಮರಣದ ಸನ್ನಿವೇಶವೇ-
ಅದು ಸಂಘಟಿಸಿ ಬಂದ ಪ್ರಸಂಗದ ದಾರುಣ ಕರುಣವೇ ಷೆಲ್ಲಿಯ ಶೋಕಕ್ಕೆ
ಶ್ಲೋಕದ ಪಾಕವನ್ನು ಕೊಟ್ಟಿತು. ಬಾಳಿನ ನೋವನ್ನು ಕಂಡು ನಂಜನ್ನು ಉಂಡು
ಬೇವಿನ ಬೇರಿನಿಂದ ಮಾವಿನ ಹಣ್ಣನ್ನು ಬೆಳೆಯಿಸಿಕೊಡುವಂತೆ ಕವಿಯು ಆನಂದ
ರಸಾಯನದಿಂದ ನಮ್ಮ ಜೀವನದ ಬಟ್ಟಲನ್ನು ತುಂಬುತ್ತಾನೆ. ಷೆಲ್ಲಿಯಲ್ಲಿ ಈ
ಸಹಾನುಭೂತಿಯ ಧರ್ಮ ಅತ್ಯಂತ ತೀವ್ರವಿತ್ತು. ಕೀಟ್ಸನ ವ್ಯಕ್ತಿಜೀವನದ
ದುರಂತಕ್ಕೆ ಕರಗಿದ ಅವನ ಅಂತಃಕರಣ ಒಂದು ಜನಾಂಗದ ವಿಪ್ಲವದಿಂದಲೂ
ಕೆರಳುವಂತಹದಿತ್ತು. ಗ್ರೀಕರು ತುರ್ಕರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಯುದ್ಧ
ಹೂಡಿದರು. ಆ ವೀರಚರಿತದಿಂದ ಆವೇಶಗೊಂಡು ಷೆಲ್ಲಿ 'ಹೆಲ್ಲಾಸ' ಎಂಬ ಗೀತ
ರೂಪಕವನ್ನು ರಚಿಸಿದನು.

ಇದೇ ಸಹಾನುಭೂತಿಯ ಧರ್ಮವು ಅವನನ್ನು ಗೆಳೆಯರ ನೆರವಿಗೆ ಧಾವಿಸುವಂತೆ
ಮಾಡಿತು. ಬಾಯರನ್ ಲಾರ್ಡ ಕುಲದವನು; ತಕ್ಕಮಟ್ಟಿಗೆ ಸಿರಿವಂತ. ಅವನಿಂದ
ತನ್ನ ವಿಮರ್ಶಕಮಿತ್ರ ಲ್ಹೀ ಹಂಟನಿಗೆ ಏನಾದರೂ ಸಹಾಯವಾಗಬೇಕೆಂದು
ಷೆಲ್ಲಿ ಬಹಳ ಪೇಚಾಡಿದನು. ಗೊಡ್ವಿನ್ನನಂತೆ ಹಂಟನೂ ಹಣದ ಬಿಕ್ಕಟ್ಟಿನಲ್ಲಿ
ಯಾವಾಗಲೂ ಸಿಲುಕಿ ಹಣ್ಣಾಗುತ್ತಿದ್ದನು. ಬಾಯರನ್ನನು ಒಂದು ಮಾಸಿಕವನ್ನು
ಪ್ರಕಟಿಸುವ ಯೋಜನೆ ಹೂಡಿದನು. ಅದರಲ್ಲಿ ಹಂಟ, ಷೆಲ್ಲಿ ಮತ್ತು ತಾನು ಕೃತಿ
ಗಳನ್ನು ಪ್ರಸಿದ್ಧಿಸಬೇಕು. ತನ್ನಿಂದ ಉಳಿದವರಿಗೆ ನೆರವು ದೊರೆಯಬೇಕು ಎಂದು
ಆತನ ಸಂಕಲ್ಪ. ಯೋಜನೆಯಂತೆ, ಷೆಲ್ಲಿ ಹಂಟನಿಗೆ ಹಣಕಳುಹಿಸಿ, ಇಟಲಿಗೆ
ಬಂದು ತಮ್ಮನ್ನು ಕೂಡಿಕೊಳ್ಳಲು ಬಿನ್ನವಿಸಿದನು. ಆಗ ಷೆಲ್ಲಿ ಬಾಯರನ್ನನ ನೆರೆ
ಹೊರೆಯವನಾಗಿ ಪೀಸಾದಲ್ಲಿಯೇ ತಳವೂರಿದ್ದನು. ಅಲ್ಲಿ ಅವನು ಹೊಸ

ಗೆಳೆಯರನ್ನು ಮಾಡಿಕೊಂಡಿದ್ದನು. ಒಬ್ಬ ಗೆಳೆಯ ಎಡ್ವರ್ಡ ವಿಲಿಯಮ್ಸ; ಇನ್ನೊಬ್ಬನು, ಎಡ್ವರ್ಡ ಜಾನ ಟ್ರೆಲೊನೀ. ಈ ಟ್ರೆಲೋನೀಯು ಮುಂದೆ ಷೆಲ್ಲಿಯ ಚರಿತ್ರಕಾರರಲ್ಲಿ ಒಬ್ಬನಾಗಿ ಹೆಸರು ಪಡೆದನು.

೧೮೨೨ ರ ವಸಂತಮಾಸದಲ್ಲಿ, ಸ್ಪೆಝಿಯಾ ಉಪಸಾಗರವೆಂಬ ಕಡಲೊತ್ತಿನ ತೀರವಲ್ಲಿ, ಷೆಲ್ಲಿ ಮತ್ತು ವಿಲಿಯಮ್ಸ ಕುಟುಂಬಗಳೀರ್ವರೂ ಒಂದು ಮನೆಯನ್ನು ಕೊಂಡು ವಾಸವಾದರು. ವಿಲಿಯಮ್ಸನು ಪೂರ್ವಾಯುಷ್ಯದಲ್ಲಿ ಹಡಗುಪಡೆಯಲ್ಲಿ ಚಾಕರಿ ಮಾಡಿದವನು. ಕಾವ್ಯಮಯಿ ಷೆಲ್ಲಿಯೂ, ಕಡಲಪಯಣಿಗ ವಿಲಿಯಮ್ಸನೂ ಕೂಡಿ ಒಂದು ಚಿಕ್ಕ ನಾವೆಯನ್ನು ಕೊಂಡುಕೊಂಡರು. ನಾವೆಯು ಸಿದ್ಧವಾಗಿ ಬಂದಾಗ ಅದನ್ನು ನೋಡಿ ಟ್ರೆಲೋನಿಯು ಮೂಗು ಮುರಿದನು. ಅದರ ಕಟ್ಟು ಅವನಿಗೆ ಸರಿದೋರಲಿಲ್ಲ. ನಾವೆ ನೀರಿಗೆ ಬಿಟ್ಟಾಗ ಅದನ್ನು ನಡೆಯಿಸುವವರು ಈ ಮೂವರೇ! ಅವರಲ್ಲಿ ಷೆಲ್ಲಿಗೆ ಹುಟ್ಟು ಹಾಕುವದು ಒತ್ತಟ್ಟಿಗೆ ಇರಲಿ, ನಾವೆ ಬುಡಮೇಲಾದರೆ ಈಜಿ ಪಾರಾಗಲಿಕ್ಕೂ ಬರುತ್ತಿದ್ದಿಲ್ಲ! ಅವನ ನೆರವು ೂರುಪಯೋಗಕ್ಕೂ ಕೀಳು! ಅವನಿಗೆ ಚುಕ್ಕಾಣಿ ಕೊಟ್ಟು ಕೂಡ್ರಿಸಿದರೆ, ಇನ್ನೊಂದು ಕೈಯಲ್ಲಿ ಪುಸ್ತಕವನ್ನು ತೆರೆದು ಹಿಡಿದು ಓದುತ್ತಲೇ ನಾವೆಗೆ ದಾರಿ ಕಾಣಿ ಸುತಿದ್ದನು! ಚುಕ್ಕಾಣಿಯನ್ನೇ ಗಮನಿಸಲು ಗೆಳೆಯರು ಹೇಳಿದರೆ, 'ನಾನು ಇತ್ತ ಓದಲೂ ಬಲ್ಲೆನು, ಅತ್ತ ಚುಕ್ಕಾಣಿ ತಿರುಗಿಸಲೂ ಬಲ್ಲೆನು. ಏಕಕಾಲಕ್ಕೆ ಎರಡೂ ಕೆಲಸಗಳನ್ನು ಸಾಗಿಸಲು ಶಕ್ಯವಿದೆ. ಅದು ಮಾನಸಿಕ ಇದು ಶಾರೀರಿಕ!' ಎಂದು ಷೆಲ್ಲಿಯು ಮಲ್ಲಿನಾಥಿ! ವಿಲಿಯಮ್ಸ 'ಎಡಕ್ಕೆ' ಎಂದು ಕೂಗಿಕೊಂಡಾಗ ಅವನು ಬಲಕ್ಕೆ ಹೊರಳಿಸುವದಕ್ಕೆ ತಪ್ಪುತಿದ್ದಿಲ್ಲ. ಆಗ ಈ ತೊಂದರೆಯೇ ಬೇಡವೆಂದು ಆತನಿಗೆ ನಾವೆಯ ಪಟವನ್ನು ಕೊಟ್ಟು ಕೂಡ್ರಿಸಿದರು. ಅಲ್ಲಿಯೂ ಈ ಕವಿಯ ನೈಪುಣ್ಯ ಅಷ್ಟೇ. ಕಲ್ಪನೆಯ ಪಟವನ್ನು ಬಿಚ್ಚಿ ಕನಸಿನ ಕಡಲಲ್ಲಿ ಸ್ವೈರಸಂಚಾರಿಯಾಗುವ ಭಾವಜೀವಿಗೆ ನಾವೆಯ ಪಟವನ್ನು ತಡೆವ ಬಿಡುವ ಪಟುತ್ವ ಎಲ್ಲಿಂದ ಬರಬೇಕು? ಪಟವನ್ನು ಸಡಿಲುಬಿಡಲು ಹೇಳಿದರೆ ಅದನ್ನು ಒಮ್ಮೆಲೇ ಕೈಬಿಟ್ಟು ಸುತ್ತಿಸಿಕ್ಕಿ ಬೀಳುವಂತೆ ಮಾಡಿ ನಾವೆಯು ಹಿಡಿತವೇ ಕೆಡುವಷ್ಟು ಗಡಬಿಡಿ ಎಬ್ಬಿಸುತಿದ್ದನು. ಒಮ್ಮೆ ಅವನ ಹ್ಯಾಟು ನೀರಿಗೆ ಉರುಳಿತು. ಅವನು ಹ್ಯಾಟನ್ನು ಹಿಂಬಾಲಿ ಸುತಿದ್ದನು; ಅಷ್ಟರಲ್ಲಿ ಟ್ರೆಲೋನೀ ಅವನನ್ನು ಹಿಡಿದೆಳೆದ. ಕೊನೆಗೂ ವಿಲಿಯಮ್ಸ ಗೆ ತಡೆಯಲಾಗುತ್ತಿದ್ದಿಲ್ಲ; ಷೆಲ್ಲಿಯ ಮೇಲೆ ರೇಗಿಬಿದ್ದು ಗದ್ದರಿಸುತಿದ್ದನು. ಆಗ ಷೆಲ್ಲಿ ಓದಲು ತೆರೆದಿಟ್ಟ ಪ್ಲೇಟೋನ 'ಸಂಭಾಷಣ'ಗಳನ್ನು ಮುಚ್ಚಿ ಜೇಬಿಗೆ ತುರುಕಿ ಗಹಗಹಿಸಿ ನಕ್ಕು ಇಲ್ಲದ ಉಡಾಳತನವನ್ನು ಆರಂಭಿಸುತ್ತಿದ್ದನು.

ಬೇಸಿಗೆಯಲ್ಲಿಲ್ಲ ಷೆಲ್ಲಿ ಒಮ್ಮೆ ಅತಿ ಉಲ್ಲಾಸದಲ್ಲಿಯೂ ಒಮ್ಮೆ ಅಷ್ಟೇ

ಉದಾಸೀನನಾಗಿಯೂ ಇರುತ್ತಿದ್ದನು. ಉದಾಸೀನನಿದ್ದಾಗ ದಿನಗಟ್ಲೆ ಚಿಂತಾಕ್ರಾಂ
ನಾಗಿ ಸಾವಿನ ವಿಚಾರಗಳನ್ನೇ ಮಿದುಳಲ್ಲಿ 'ಮೆಲುಕು ಹಾಕುತ್ತ' ಉಳಿದ
ಬಿಡುವನು. ಅವನ ಇಂಥ ವಿಚಿತ್ರ ಚಿತ್ತವೃತ್ತಿಗಳ ಕುರಿತು ಹಲವು ಅಖ್ಯಾಯಿಕೆಗಳ
ಪ್ರಸಿದ್ಧವಾಗಿವೆ.

ಜೂನ ತಿಂಗಳಲ್ಲಿ ಲ್ಹೀ ಹಂಟನು ಜಿನೋವಾಕ್ಕೆ ಬಂದು ತಲ್ಪಿದ್ದಾನೆಂಬ ಸಮಾಚಾ
ಅವರಿಗೆ ಬಂದಿತು. ಷೆಲ್ಲಿ ವಿಲಿಯಮ್ಸ ಇಬ್ಬರೂ ಅವನನ್ನು ಭೆಟ್ಟಿಯಾ
ಕರೆತರಲು ಹೊರಟರು-ತಮ್ಮ ಹೊಸ ನಾವೆಯಲ್ಲಿ. ಲೆಗಹಾರ್ನಿನಲ್ಲಿ ಹಂ
ಕುಟುಂಬವನ್ನು ಕಂಡು ಬರಮಾಡಿಕೊಂಡು ಜುಲೈ ೮ ಕ್ಕೆ ಅವರೊಡನೆ ಪೀಸಾಕ
ಹೋಗಿ ಬಾಯರನ್ನನಿಗೆ ಭೆಟ್ಟಿಯಾಗಿ ಮತ್ತೆ ನಾವೆಯಲ್ಲಿಯೇ ಮನೆಗೆ ಮರ
ಬೇಕೆಂದು ಹಟದಿಂದ ಹೊರಟರು. ಲೆಗ್‌ಹಾರ್ನಿನಲ್ಲಿಯ ಇತರ ನಾವಿಕ
ತುಂಬ ಎಚ್ಚರಿಕೆಯನ್ನು ಕೊಟ್ಟರು-ಗಾಳಿ ನೀರು ಪ್ರತಿಕೂಲವಾಗಬಹುದೆಂದು
ಆದರೆ ಕವಿಗಳು ನಿರಂಕುಶರು. ಅಂದು ಸಂಜೆಗೆ ಇವರ ನಾವೆ ತೀರಬಿಟ್ಟು
ದೂರ ನೀರಿಗೆ ನಿಂತಿತ್ತು. ಅಲ್ಲಿಂದ ಅದು ಸಾಗುವಾಗ ಟ್ರೆಲೋನೀಯ
ದುರ್ಬೀನಿನಿಂದ ಅದನ್ನೊಮ್ಮೆ ನೋಡಿದನು. ಹೊತ್ತು ಕಂತುವಾಗ ಮಳೆ-
ಮಿಂಚಿನ ರಭಸದೊಡನೆ ಬಿರುಗಾಳಿ ಬಿರಿದೆದ್ದು ಕಡಲನ್ನು ಆವರಿಸಿತು....

ಹತ್ತು ದಿನಗಳ ನಂತರ ಒಂದು ಹಗುರಾದ ಒಡಕಲಾದ ನೀಳಾದ ಕಳೇಬರ
ವಿಯಾ ರೆಗಿಯೋ ಎಂಬಲ್ಲಿ ತೆರೆಯೊಡನೆ ತೇಲಿಬಂದು ತಡೆಗೆ ಬಿತ್ತು. ಅದ
ಜಾಕೀಟಿನ ಒಂದು ಜೇಬಿನಲ್ಲಿ ಗ್ರೀಕ ಕವಿ ಸೊಫೊಕ್ಲಿಜನ ದುರಂತ ನಾಟಕಗ
ಸಂಪುಟವೂ ಇನ್ನೊಂದು ಜೇಬಿನಲ್ಲಿ, ತೆರೆದು ತಿರುವಿ ಮಡಚಿಟ್ಟ ಕೀಟ್ಸನ ಕವ
ಸಂಗ್ರಹವೂ ಒದ್ದೆಮುದ್ದೆಯಾಗಿ ಇದ್ದವು.

ಈ ರೀತಿಯಾಗಿ ತಾರುಣ್ಯದ ಕವಿಯು ತನ್ನ ತಾರುಣ್ಯದಲ್ಲಿಯೇ, ತಾನು ಪ್ರೀತಿಸಿ
ಕಡಲಿನಲ್ಲಿ ಮುಳುಗಿ ಮಡಿದನು.

ಷೆಲ್ಲಿ ಬಂಡುಗಾರ. ಅವನು ಸತ್ತಮೇಲೆಯೂ ರೂಢಿಯ ವಿರುದ್ಧ ಬಂಡ
ಹೂಡಿದನು. ತನ್ನ ಶವವನ್ನು ಕ್ರೈಸ್ತರ ರೂಢಿಯಂತೆ 'ದಫನ' ಮಾಡದೇ ದಹ
ಮಾಡಬೇಕೆಂದು ಅವನ ಇಚ್ಛೆ ಇತ್ತು. ಆ ಇಚ್ಛೆ ಗೆಳೆಯರಿಗೆ ಗೊತ್ತು ಇತ್ತು
ಟ್ರೆಲೋನೀ, ಲ್ಹೀ ಹಂಟ ಮತ್ತು ಬಾಯರನ್ನ ಮೂವರೂ ಕಡಲ ತೀರದ
ಒಂದು ಚಿತೆಯನ್ನು ರಚಿಸಿದರು. ಕವಿಯ ಜಡದೇಹವನ್ನು ಅದರ ಮೇಲೆ ಇ

ಅಗ್ನಿಯನ್ನು ಇಟ್ಟರು. ಉಜ್ಜ್ವಲ ಊಹೆ ಉತ್ಪ್ರೇಕ್ಷೆಗಳಿಗೆ ಮನೆಯಾದ ಆ ಕಳೆಗೆಟ್ಟ ಕಳೇಬರವು ಧಗಧಗಿಸಿ ಜ್ವಲಿಸಹತ್ತಿತು. ಆ ದಿವ್ಯಾತ್ಮನಿಗೆ ದೀಪ್ತಿಮಂತ ಅಂತ್ಯವೇ ಯೋಗ್ಯವೆಂದು ವರುಣದೇವನು ಪ್ರೊಮೆಥ್ಯೂಸನು ದೇವಲೋಕದಿಂದ ತಂದ ಅಗ್ನಿಗೆ ಕವಿ ದೇಹದ ಕಾಣಿಕೆಯನ್ನು ಎತ್ತಿ ತಂದು ಅರ್ಪಿಸಿದನು.

ಆದರೆ ಆ ಅಗ್ನಿ ಸಂಸ್ಕಾರವನ್ನು ನಿಂತು ನೋಡುವದು ಷೆಲ್ಲಿಯ ಗೆಳೆಯರಿಂದ ಶಕ್ಯವಾಗಲಿಲ್ಲ. ಬಾಯರನ್ನನು ಆ ದೇಹದ ದಹನವನ್ನು ನೋಡಲಾಗದೆ, ಕಡಲಿಗೆ ಹಾರಿ ದೂರನಿಂತು ತನ್ನ ಹಡಗಕ್ಕೆ ಈಜಿಯೇ ಹೋದನು. ಚಿತೆಯ ಜ್ವಾಲೆಗಳು ಶವವನ್ನು ಸುತ್ತಿ ಹಬ್ಬಿ ಅದರ ಹೃದಯುವನ್ನು ಸುಡಲು ಮುತ್ತಿದವು. ಆಗ ಟ್ರೆಲೋನಿಯು ಜಗ್ಗನೆ ಎದ್ದು ಹೋಗಿ ಇನ್ನೂ ಕತ್ತು ಹೋಗದ ಹೃದಯುವನ್ನು ಚಿತೆಯೊಳಗಿಂದ ಎತ್ತಿ ತಂದನು.

ಮತ್ತು ಷೆಲ್ಲಿಯ ಭಸ್ಮಾವಶೇಷಗಳನ್ನು ಹೂಗಿದು ಕಟ್ಟಿದ ಸಮಾಧಿಯ ಮೇಲೆ ಈ ಸಾಲುಗಳನ್ನು ಕೊರೆದರು.

ಅವನದೇನೂ ಮಾಯವಾಗದು
ಕಡಲ ಪಲ್ಲಟವನ್ನೆ ಪಡೆವುದು
ನವ್ಯ ಸಂಪನ್ನತೆಯ ಪೊಂದುದು

# ಬಾಯರನ್

ವಿಚಿತ್ರ ಉಗ್ರ ಸುಂದರ ಭದ್ರಪುರುಷನು. ಚೂತವನದಲ್ಲಿ ಚೈತ್ರದ ಸಂಚಾರದಂ
ಯುರೋಪದ ರಸಿಕ ಪ್ರಪಂಚದಲ್ಲಿ ಚೈತ್ರಯಾತ್ರೆ ಮಾಡಿದವನು, ಲಂಡನ್ನಿ
ಸುವಿದ್ಯ ಸಮಾಜದ ಸಿಂಹನೆನಿಸಿಕೊಂಡವನು, ವೈಭವಶಾಲಿಯಾದ ವಿಟಪುರುಷನು
ಒಂದು ಗೂಢ ಪಾಪದ ಅಪವಾದ ಶಾಪದಿಂದ ಪ್ರತಿಷ್ಠೆಯ ಪೀಠದಿಂದ ನೆಲಕ್
ಉರುಳಿದವನು, ಸಾರ್ವಜನಿಕ ಕೋಪಕ್ಷೋಭದಿಂದ ದೇಶಭ್ರಷ್ಟನಾದವನು
ಇಟಲಿಯ ರೋಮಾಂಚಕರ ಆವರಣದಲ್ಲಿ ಉನ್ಮತ್ತ ದುಂದುಗಾರಿಕೆಯಿಂದ ಸ್ವಚ್ಛಂ
ಪ್ರಣಯ ಜೀವನವನ್ನೂ ಭೋಗಿಸಿದವನು, ಉಪಹಾಸ ಉಪರೋಧಗ
ವಾಙ್ಮಯಾಸ್ತ್ರದಿಂದ ತನ್ನ ಹಗೆಗಳನ್ನು ಸುಲಿದು ಸುಟ್ಟವನು, ಇಂಗ್ಲಂಡದ ನ
ಯುವಕರನ್ನು ತನ್ನ ಕಾವ್ಯದಿಂದ ಹುರಿದುಂಬಿ ಉರಿದೆಬ್ಬಿಸಿದವನು, ಸ್ವಾತಂತ್ರ್ಯ
ಆದರ್ಶಕ್ಕಾಗಿ ಗ್ರೀಸದ ಯುದ್ಧದಲ್ಲಿ ತನುಮನದಿಂದ ಧುಮುಕಿ ಹೋರಾಡಿದವನು
ಅಖಿಲ ಯುರೋಪದ ಗೌರವಚಕಿತ ಕಣ್ಣುಗಳ ಇದಿರು ವೀರಮರಣವನ್ನ
ವರಿಸಿದವನು—ಇಂಥ ಮಹಾಪುರುಷನು ಕವಿಶ್ರೇಷ್ಠ ಲಾರ್ಡ ಜಾರ್
ಬಾಯರನ್‌ನು.

ಬಾಯರನ್ನನನ್ನು ಲೋಕವು ಅಂದು ನೆಪೋಲಿಯನ್ನನೊಂದಿಗೆ ಹೋಲಿಸಿತ್ತು. ಅ
ಶತಮಾನದ ಮಹತ್ತಮ ವ್ಯಕ್ತಿಗಳೆಂದರೆ ಬಾಯರನ್ ಮತ್ತು ನೆಪೋಲಿಯನ
ಇವರಿಬ್ಬರೇ ಎಂದಿತು ಅಂದಿನ ಜನ. ಈ ಹೋಲಿಕೆಯು ಅನುಚಿತವಿದ್ದಿಲ್ಲ
ಏಕೆಂದರೆ ನೆಪೋಲಿಯನ್ನನು ಯುರೋಪವನ್ನು ಹೊಸತಾಗಿ ಎರಕ ಹೊಯ್ದನು
ಹಾಗೆಯೇ ಬಾಯರನ್‌ನು ಆ ಖಂಡದ ಸಾಹಿತ್ಯಕ್ಕೆ ಹೊಸದೊಂದು ಪಡಿಯಚ್ಚನ್ನ
ಕೊರೆದುಕೊಟ್ಟನು.

೧೭೮೫ ರಲ್ಲಿ ಬಾಯರನ್ ಎಂಬ ಲಾರ್ಡ ಮನೆತನದ ೫ನೆಯ ಯಜಮಾನನಾದ
ವಿಲಿಯಮ್ ಎಂಬವನು ನ್ಯೂಕೆಸಲ್ ಅಬ್ಬೇ ಎಂಬಲ್ಲಿ ಗೊಂಬೆಯಾಟದ ಪುಟ್ಟ
ಹಡಗಗಳಿಂದಲೂ ಜಿರ್ಲೆಯ ಶರ್ಯತ್ತುಗಳಿಂದಲೂ ಮನೋವಿನೋದನೆಯನ್ನು
ಮಾಡಿಕೊಳ್ಳುತ್ತಿದ್ದನು. ಅವನ ಚಾಕರಿಯಾಳುಗಳಿಗೂ ಗೆಳೆಯಾಳುಗಳಿಗೂ
ಆತನು 'ದುಷ್ಟ ಲಾರ್ಡ'ನೆಂದು ಪರಿಚಿತನಿದ್ದನು. ಆಗ ಅವನ 'ಮೈದುನತನದ
ಜಾಕ್ ಬಾಯರನ್ನನು—ಇವನಿಗೂ 'ಹುಚ್ಚ'ನೆಂಬ ಬಿರುದಾಂಕಿತವಿತ್ತು—ಕ್ಯಾಥರಿ
ಗೋರ್ಡನ ಎಂಬಾಕೆಯನ್ನು ಮದುವೆ ಆದನು. ಈ ಮದುವೆ ಹುಚ್ಚು ಜಾಕ

ಪ್ರಥಮ ಸಾಹಸವಲ್ಲ. ೧೦ ವರ್ಷ ಪೂರ್ವದಲ್ಲಿ ಲಾರ್ಡ ಕಾರ್ಮಾರ್ಥೆನ್‌ನ ಹೆಂಡತಿಯನ್ನು ಇವನು ಮೋಹಿಸಿ ಅಪಹರಿಸಿದ್ದನು. ಆಕೆಯು ತಂದೆಯ ಮನೆತನದ ಮನ್ನಣೆಯ ಬಿರುದನ್ನೂ ೪೦೦೦ ಪೌಂಡಿನ ವಾರ್ಷಿಕ ಉತ್ಪನ್ನವನ್ನೂ ತಂದೆಯ ಮರಣೋತ್ತರವಾಗಿ ಪಡೆದು ಈ ಜಾಕನ ಜತೆಗೆ ಪಲಾಯನ ಮಾಡಿದ್ದಳು. ಆಗ ಕಾರ್ಮಾರ್ಥೇನನು ಆಕೆಯಿಂದ ವಿವಾಹ ವಿಚ್ಛೇದವನ್ನು ಪಡೆದನು. ಜಾನ ಬಾಯರನ್ನನು ಆಕೆಯನ್ನು ಅನಂತರ ಮದುವೆಯಾದನು. ಅವರೀರ್ವರೂ ಫ್ರಾನ್ಸಿಗೆ ಹೋದರು. ಅಲ್ಲಿ ಅವರಿಗೆ ಆಗಸ್ಟಾ ಎಂಬ ಹುಡುಗಿ ಹುಟ್ಟಿದಳು. ಆದರೆ ೧೭೮೪ರಲ್ಲಿ ಆಗಸ್ಟಾಳ ಜನನವಾದ ಕೂಡಲೆ ಆಕೆಯ ತಾಯಿಯು ತೀರಿಕೊಂಡಳು. ಆಗ ಜಾನ ಬಾಯರನ್ನನಿಗೆ ಹೆಂಡತಿಯೂ ಉಳಿಯಲಿಲ್ಲ, ಹಣವಂತಿಕೆಯೂ ಉಳಿಯಲಿಲ್ಲ.

ಆಗ ಅವನು ಪ್ರಸಿದ್ಧ ಜಲಚಿಕಿತ್ಸಾ ಕೇಂದ್ರವಾದ ಔಷಧಿ ಸೆಲೆಗಳ ಸ್ಥಾನವಾದ ಬಾಥ ಎಂಬಲ್ಲಿ ಹೋಗಿ ಅಲ್ಲಿಯ ಓರಣ ಒಯ್ಯಾರಗಳ ಬದುಕಿನಲ್ಲಿ ಸಮರಸ ವಾಗಹತ್ತಿದನು. ಅಲ್ಲಿ ಆತನಿಗೆ ಹಿಂದೆ ಹೇಳಿದ ಕ್ಯಾಥೆರೀನ ಗೋರ್ಡನಳ ಪರಿಚಯ ವಾಯಿತು. ಗೋರ್ಡನ ಮನೆತನ ಒಂದು ಪ್ರಾಚೀನ ಸ್ಕೊಬ್ಟೆರ ಕುಲ. ಅವಕ್ಕೂ ಮಿಗಿಲಾದ ಮಾತೆಂದರೆ ಕ್ಯಾಥೆರೀನಳು ಸಂಪತ್ತಿಗೆ ಬಾಧ್ಯಸ್ಥಳಿದ್ದಳು. ಆಗ ಜಾನ್– ಅರ್ಥಾತ್ 'ಹುಚ್ಚ ಜ್ಯಾಕ'–ಆಕೆಯ ಪ್ರೀತಿ ಸಂಪಾದನೆಯನ್ನು ಮಾಡಿದನು. ವಿಧಿ ತಂದ ವಧುವನ್ನು ಆರಿಸಿ ವರಿಸುವ ಕಾಯಕ ಜಾನನಿಗೆ ಕರಗತವಾಗಿತ್ತು ! ಅವರೀರ್ವರೂ ಕ್ರೈಸ್ತ ತಿಳುವಳಿಕೆಯಂತೆ ಅತ್ಯಂತ ಅಶುಭ ತಿಂಗಳ ಅತ್ಯಂತ ಅಶುಭ ದಿನಕ್ಕೆ ಮದುವೆಯಾದರು. ಆ ದಿನ ಮೇ ೧೩. ಮುಂದೆ ೧೭೮೮ ನೇ ಜನೇವರಿ ೨೨ ಕ್ಕೆ ಅವರ ಮಗ ಜಾರ್ಜ ಗೋರ್ಡನ್ ಬಾಯರನ್ನನು ಹುಟ್ಟಿದನು. ಮಗ ಹುಟ್ಟಿದ ಮೇಲೆ ಎರಡು ವರ್ಷಗಳ ನಂತರ 'ಹುಚ್ಚ ಜಾಕ' ಜಾನ ಬಾಯರನ್ನನು, ಹೆಂಡತಿಯಿಂದ ತುಸು ಹಣವನ್ನು ಇಸಕೊಂಡು ಫ್ರಾನ್ಸಕ್ಕೆ ಪಯಣ ಬೆಳೆಸಿದನು. ಅಲ್ಲಿ ೧೨ ತಿಂಗಳಲ್ಲಿಯೇ ಆತ ಮರಣ ಹೊಂದಿದನು–೩೬ ನೆಯ ವರ್ಷದ ವಯಸ್ಸಿಗೆ. ಪರದೇಶಕ್ಕೆ ಹೋಗಿ ಸಾಯುವ ಮುನ್ನ ಅವನು ಸಾಧಿಸಿದ ಮಹತ್ಕಾರ್ಯಗಳು ಎರಡು; ಹೆಂಡತಿಯ ಸಂಪತ್ತನ್ನು ಯಶಸ್ವಿಯಾಗಿ ಕಲಿದು ದುಂದುಮಾಡಿ ಆಕೆಗೆ ಬರೇ ೧೫೦ ಪೌಂಡು ವಾರ್ಷಿಕ ಉತ್ಪನ್ನ ದೊರೆಯುವಂತೆ ಮಾಡಿದ್ದು, ಮತ್ತು ಒಬ್ಬ ವಿಕಾರವಶನೂ ಪ್ರತಿಭಾ ವೈಭವಿಯೂ ಆದ ಮಗನನ್ನು ಪ್ರಪಂಚಕ್ಕೆ ಬಿಟ್ಟು ಹೋಗಿ ಆ ಮೂಲಕ ವಿಶ್ವಸಾಹಿತ್ಯವನ್ನೇ ಸಂಪನ್ನಗೊಳಿಸಿದ್ದು !

ಜಾರ್ಜ ಬಾಯರನ್ನನೇ ಆ 'ರಸ್ನಗುವರ'. ಅವನ ತಾಯಿ ದೈನ್ಯ ಔದಾರ್ಯ

ಮತ್ತು ಸ್ನೇಹಗಳ ಮೂರ್ತಿಯಾಗಿದ್ದಳು. ಆದರೆ ಜತೆಗೆ ಆಕೆಯ ಮನಸ್ಸು ಕೆಟ್ಟರೆ–ವೃತ್ತಿ ಕೆರಳಿದರೆ, ಆ ಪಿತ್ತ ಪ್ರಕೋಪವು ಅಷ್ಟೇ ಉಗ್ರವೂ ಅನಿಯಂತ್ರಿತ ಆಗುತ್ತಿತ್ತು. ತಾಯಿ ಮಕ್ಕಳು ಸ್ಕಾಟ್ಲಂಡದಲ್ಲಿ ಅಬರ್ಡೀನ ಎಂಬ ಶಹರದ ವಾಸಿಸಹತ್ತಿದರು. ತಾಯಿತಂದೆಗಳ ಉಭಯ ಕುಲಗಳ ಉಗ್ರ ವಿಕಾರವಶ ಯನ್ನೂ ಕೆಲವು ಸದ್ಗುಣಗಳನ್ನೂ ಬಾಲಕ ಬಾಯರನ್ನನು ಪಡೆದು ಬಂದನು ಅವನ ಬಾಳನ್ನೇ ಹದಗೆಡಿಸಬಲ್ಲ ಒಂದು ದೈವೀ ದೋಷವೂ ಹುಟ್ಟಿನೊಂದಿ ಅವನಲ್ಲಿ ಬಂದಿತ್ತು. ಅವನ ಒಂದು ಪಾದವು ಆಕಾರಗೆಟ್ಟಿತ್ತು. ಆ ಮೂಲಕ ಅವನ ನಡೆಯುವಾಗ ಕುಂಟುತಿದ್ದನು. ಈ ಕುಂಟುತನವು ಅವನಿಗೆ ಚಿಕ್ಕಂದಿನಲ್ಲಿ ಬಹ ಶಾರೀರಕಯಾತನೆಗಳಿಗೂ ಮುಂದೆ ಜೀವನದ ಉದ್ದಕ್ಕೂ ಮಾನಸಿಕ ವ್ಯಥೆಗ ಕಾರಣವಾಯಿತು.

ಬಾಯರನ್ನನ ಪ್ರಾರಂಭದ ಶಿಕ್ಷಣವು ಅಬರ್ಡೀನದಲ್ಲಿಯ ಒಂದು ಹಗಲು ಶಾ ಯಲ್ಲಿ ಆಯಿತು. ಆ ಕುರಿತು ಅವನು ಅನ್ನುವದನ್ನು ಕೇಳಿರಿ. 'ನನ್ನನ್ನು ೫ ವಷ ಪ್ರಾಯಕ್ಕೊ, ಅದಕ್ಕೂ ಮುಂಚೆಯೋ ಬಾವರ್ಸ ಎಂಬ ಸದ್ಗೃಹಸ್ಥನು ನಡೆಯಿಸ ತಿದ್ದ ಶಾಲೆಗೆ ಹಾಕಲಾಯಿತು. ಅವನ ತಿದ್ದಿದ ಉಡುಗೆ ತೊಡುಗೆಗಳ ನಿಮಿತ್ತ ಅವನನ್ನು 'ಬೆಡಗಿನ ಬಾವರ್ಸ' ನೆಂದು ಕರೆಯಲಾಗುತಿತ್ತು. ಗಂಡು ಹೆಣ್ಣೆಂ ಭೇದವಿಲ್ಲದೆ, ಎಲ್ಲ ಮಕ್ಕಳಿಗಾಗಿ ಆ ಶಾಲೆ ಇದ್ದಿತ್ತು. ಅಲ್ಲಿ ನಾನು ಕಲಿತದ್ದ ಏನೂ ಇಲ್ಲ; ಏಕಾಪಯದ ಶಬ್ದಗಳ ಕೆಲವು ಪಾಠಗಳನ್ನು 'ಅರ್ಥದ ಮಮ ವನ್ನರಿಯದೆ ವ್ಯರ್ಥವಾಗಿ ಉರುಹಾಕಿದ್ದು. ಒಂದು ಅಕ್ಷರವನ್ನೂ ಬರೆಯಲ ಬಾರದೆ 'ದೇವರು ಮನುಷ್ಯನನ್ನು ಮಾಡಿದ್ದಾನೆ. ನಾವು ದೇವರನ್ನು ಪ್ರೀತಿಸುವ ಎಂಬ ಮಾದರಿಯ ಬಿಡಿಮಾತುಗಳನ್ನು ಬಾಯಿಪಾಠ ಮಾಡಿದ್ದೇ ಮಾಡಿದ್ದು ಬೇರೆಯವರು ಹೇಳಿದ್ದು ಕೇಳಿಕೇಳಿ, ಮನೆಯಲ್ಲಿ ನನ್ನ ಶಾಲಾ ಪ್ರಗತಿಯ ಪ್ರಮಾ ಪರೀಕ್ಷೆ ಕೊಂಡಾಗೆಲ್ಲ ಇವೇ ಮಹಾಕಾವ್ಯಗಳನ್ನು ನಾನು ಸ್ಪಷ್ಟವೇಗದಿಂ ಉಚ್ಚರಿಸಿ ಪಾರಾಗುತಿದ್ದೆನು. ಆದರೆ ಮರುವರ್ಷ ಪುಸ್ತಕದ ಹೊಸ ಹಾಳೆಯನ ಮರುವರ್ಷದ ಪಾಠ ಒಪ್ಪಿಸುವದಕ್ಕಾಗಿ ತಿರುವಿದಾಗಲೂ, ಅದೇ ವರ್ಷ 'ದೇವರ ನಾಮ' ಗಳನ್ನು ನಾನು ಮತ್ತೆಮತ್ತೆ ಪಠಿಸತೊಡಗಿದೆನು. ಆಗ ನ ಪ್ರಥಮ ವರ್ಷದ ಜ್ಞಾನಾರ್ಜನೆಯ ಕಿರಿಯಗಲದ ಸೀಮಾರೇಖೆಗಳು ಕೂಡ ಕಂಡು ಹಿಡಿಯಲ್ಪಟ್ಟವು; ಜತೆಗೆ ನನ್ನ ಕಿವಿಗಳೂ ಹಿಂಡಿಹಿಡಿಯಲ್ಪಟ್ಟವು. (ಆ ಈದಂಡ ಪೀಡನೆಗೆ ನನ್ನ ಕಿವಿಗಳು ಸರ್ವಥಾ ಪಾತ್ರವಿದ್ದಿಲ್ಲ. ಏಕೆಂದರೆ ನಾ ಪಡೆದಷ್ಟು ಅಕ್ಷರಜ್ಞಾನವನ್ನು ಅವುಗಳಿಂದಲೇ ಪಡೆದು ಕೊಂಡಿದ್ದೆನು.) ಆಮೆ ನನ್ನ ಬುದ್ಧಿಯನ್ನು ಹೊಸದೊಬ್ಬ ಗುರುವಿನ ವಶಕ್ಕೆ ಒಪ್ಪಿಸಲಾಯಿತು ಅವ

ಅತ್ಯಂತ ಭಗವದ್ಭಕ್ತನೂ ಕುಶಲನೂ ಆದ ಪುಟ್ಟ ಧರ್ಮಗುರುವಾಗಿದ್ದನು. ಅವನ ಹೆಸರು ರೊಸ್ಸ. ಅವನ ಸನ್ನಿಧಿಯಲ್ಲಿ ನಾನು ಆಶ್ಚರ್ಯಕರ ಪ್ರಗತಿಯನ್ನು ಸಾಧಿಸಿದೆನು. ಅವನ ಸೌಮ್ಯ ರೀತಿ ನೀತಿಗಳೂ ಸುಸ್ವಭಾವಿಯಾದ ಪರಿಶ್ರಮ ವೃತ್ತಿಯೂ ಇಂದಿಗೂ ನನ್ನ ನೆನಪಿಗೆ ಬರುತ್ತಿವೆ. ಓದಲು ಕಲಿತ ಕ್ಷಣದಿಂದಲೂ ನನ್ನ ಹಿರಿಯ ಹಂಬಲವು ಇತಿಹಾಸವಾಚನವಾಯಿತು. ಆದರೆ ಒಂದು ವಿಶೇಷ ಸಂಗತಿಯು ಏಕೆಂಬುದು ನನಗೆ ಗೊತ್ತಾಗಲಿಲ್ಲ; ಅದೇನೆಂದರೆ ರೋಮನ್ ಇತಿಹಾಸದಲ್ಲಿಯ ರೆಗಿಲಸ್ ಸರೋವರದ ತೀರದ ಯುದ್ಧವನ್ನು ಮೊತ್ತದಲ್ಲಿ ಓದಲು ನನ್ನ ಕೈಯಲ್ಲಿ ಕೊಡಲಾಯಿತು; ಆಗ ಆ ಯುದ್ಧವೃತ್ತಾಂತವು ನನ್ನನ್ನು ಪರವಶಗೊಳಿಸಿತು. ಆನಂತರದ ನನ್ನ ಶಿಕ್ಷಕನು ಪ್ಯಾಟರ್ಸನ್ ಎಂಬವನು ಒಳ್ಳೇ ಗಂಭೀರನೂ, ವೈಮನದ ಆಲಸ್ಯದಲ್ಲಿ ಶನೈಶ್ಚರ ವೃತ್ತಿಯವನೂ ಆಗಿದ್ದರೂ ದಯಾಳುವಾದ ತರುಣನಿದ್ದನು. ಅವನು ಒಬ್ಬ ಚಪ್ಪಲಿ ಹೊಲಿಯುವವನ ಮಗನು; ಅದಾಗ್ಯೂ ಒಳ್ಳೇ ವಿದ್ವಾನನಿದ್ದನು. ಹೀಗೆ ಇರುವದು ಸ್ಕಾಚ್ಚ ಜನರಲ್ಲಿ ವಾಡಿಕೆ, ಅವನು ಒಳ್ಳೇ ಕರ್ಮಠ ಪ್ರೆಸ್ಬಿಟೇರಿಯನ ಪಂಥದವನಿದ್ದನು. ಅವನೊಡನೆ ನಾನು ಲ್ಯಾಟಿನ ಭಾಷೆಯ ವ್ಯಾಕರಣವನ್ನು ಓದಲು ತೊಡಗಿದೆನು. ಮುಂದೆ ಸರಿಯಾಗಿ ಪ್ರಾಥಮಿಕ ಶಾಲೆಗೆ (ಅಂದು ಅಂಥವುಗಳಿಗೆ ವ್ಯಾಕರಣ ಶಾಲೆಗಳೆಂಬ ಹೆಸರಿತ್ತು) ಹೋಗಹತ್ತುವ ತನಕವೂ ಪ್ಯಾಟರ್ಸನ್ನನ ಬಳಿಯಲ್ಲಿಯೇ ಮುಂದರಿದೆನು.'

೧೭೯೬ ರಲ್ಲಿ ಬಾಯರನ್ನನು ಬಹಳ ಬೇನೆ ಬಿದ್ದನು, ಒಂದು ಬಗೆಯ ಜ್ವರದಿಂದ. ಆನಂತರ ತಾಯಿಯು ಅವನನ್ನು ಸ್ಕಾಟ್ಲಂಡದ ಮಲೆನಾಡಿಗೆ ಆರೋಗ್ಯಕ್ಕಾಗಿ ಒಯ್ದಳು. ಅಲ್ಲಿ ಅವನು ಬೆಟ್ಟಗುಡ್ಡಗಳ ಸೊಬಗಿನ ನೋಟಗಳನ್ನು ಮೆಚ್ಚಲು ಕಲಿತನು. ಆ ಸೊಬಗಿನ ಸವಿಯೊಂದಿಗೆ ಅವನ ಪ್ರಥಮ ಪ್ರಣಯ ವ್ಯವಹಾರವು ನಡೆದು ಹೋಯಿತು. ಆಗ ಆತನ ವಯಸ್ಸು ಕೇವಲ ೮ ವರ್ಷ. ಆದರೂ ಆ ವ್ಯಾಮೋಹಕ್ಕೆ ಅದು ವಿಘ್ನವಾಗಲಿಲ್ಲ. ಅದು ಸಫಲವಾಗಲಿಲ್ಲ.–ಅಂಥ ಪ್ರಣಯ ಹಾಗೆ ಆಗುವಂತೆಯೂ ಇರುವದಿಲ್ಲ–ಆ ಮಾತು ಬೇರೆ. ಆಕೆಯ ಹೆಸರು ಮೇರಿ ಡಫ್. ೮ ವರ್ಷಗಳ ನಂತರ ಮೇರಿ ಮದುವೆಯಾದಳು. ಆ ವಾರ್ತೆ ಕೇಳಿ ಅವನಿಗೆ ಸಿಡಿಲು ಬಡಿದಂತೆ ಆಯಿತಂತೆ ಅವನೇ ಹೇಳುತ್ತಾನೆ. ಅವನ ದುಃಖದ ಆಘಾತಕ್ಕೆ ಅವನ ತಾಯಿ ಚಕಿತಳಾದಳು. ಹತ್ತಿರದ ಎಲ್ಲರೂ ಅವನ ಈ ಕಳವಳವನ್ನು ನಂಬಲಾರದಾದರು. ೧೬ ವರ್ಷದ ಪೋರ ಒಬ್ಬ ಪೋರಿಯ ಪ್ರೀತಿಯ ಕುರಿತು ಇಷ್ಟೊಂದು ಹುಚ್ಚೆದ್ದು ಹಂಬಲಿಸಬಹುದೆಂಬುದೇ ಅವರ ಅನುಭವಕ್ಕೇ ಗೋಚರವಾಗಲಿಲ್ಲ.

ಬಾಯರನ್ನನು ೧೦ ವರ್ಷದವನಾದಾಗ ಅವನ ದೊಡ್ಡಪ್ಪನಾದ ಆ 'ದುಷ್ಟ

ಲಾರ್ಡ'ನು ಮಡಿದನು. ಆಗ ರೀತಿಯಂತೆ ಈ ಹುಡುಗನೇ ಲಾರ್ಡ ಪದವಿಗೆ ಅಧಿಕಾರಿಯಾದನು. ಲಾರ್ಡ ಪದವಿಯ ಜಾಗೀರು ಅವ್ಯವಸ್ಥೆಯಲ್ಲಿ ಇತ್ತು. ನ್ಯೂಸ್ಟೆಡದ ಅವರ ಮನೆತನದ ಆಸ್ತಿ ಆ ವಾಸಗಳು ಹಾಳು ಸುರಿಯುತ್ತಿದ್ದವು. ಆದರೆ ಕಾಯಿದೆಯಂತೆ ಬಾಯರನ್ನನ ತಾಯಿಗೆ ३೦೦ ಪೌಂಡಿನ ವರ್ಷಾಶನ ಬರಹತ್ತಿತು ಮತ್ತು ಬಾಯರನ್ನನ ಪಾಲಕತ್ವವು ದೂರದ ಆಪ್ತನೊಬ್ಬನಾದ ಲಾರ್ಡ ಕಾರ್ಲಾಯಿಲ ಎಂಬವನಿಗೆ ಹೋಯಿತು.

ಬಾಯರನ್ನನು ಒಂದು ಕಾಲಿನಿಂದ ಕುಂಟನಿದ್ದನೆಂಬ ಮಾತು ಹಿಂದೆ ಬಂದಿದೆಯಷ್ಟೇ. ಆತನ ತಾಯಿಯು ಮಗನ ಊನಾಂಗವನ್ನು ಸರಿಪಡಿಸಲೆಂದು ಆ ಕಾಲಮೇಲೆ ನಾಟಿಂಗಹ್ಯಾಮದ ಒಬ್ಬ ಹಸಿಬಿಸಿ ವೈದ್ಯನ ಉಪಚಾರವನ್ನು ಆರಂಭಿಸಿದಳು. ಆ ಮೂಲಕ ಅವನನ್ನು ಚಿತ್ರಹಿಂಸೆಗೆ ಗುರಿಮಾಡಿದಳು. ಆ ಉಪಚಾರವೆಂಬ ಉಪದ್ರವವು ಉಪಯೋಗ ಆಗಲಿಲ್ಲವೆಂದು ಕಂಡು ಬಂದ ಮೇಲೆ, ಬಾಯರನ್ನ ನನ್ನು ಲಂಡನ್ನಿಗೆ ತಂದು ಡಲವಿಚ್ ಎಂಬಲ್ಲಿ ಶಾಲೆಗೆ ಹಾಕಲಾಯಿತು. ಆದರೆ ತಾಯಿಯಿಂದ ಅವನಿಗೆ ಸರಿಯಾದ ನಿಜವಾದ ಸುಖ ಸಿಗಲಿಲ್ಲ. ಯಾವಾಗಲೂ ಮುದ್ದು-ಗುದ್ದುಗಳ ನಡುವೆ ಅವನು ಒದ್ದಾಡಬೇಕಾಗುತಿತ್ತು. ಒಮ್ಮೆ ಅತಿಶಯ ಅಚ್ಚೆಯಿಂದ ಅವನನ್ನು ಮುದ್ದುಗೆಡಿಸುವದು; ಇನ್ನೊಮ್ಮೆ ಅಷ್ಟೇ ಅಸಡ್ಡೆಯಿಂದ ಹಳಿದು ಥಳಿಸುವದು—ಇದು ಆ ತಾಯಿಯ ವಾತ್ಸಲ್ಯದ ರೀತಿಯಾಗಿತ್ತು. ಶಾಲೆ ಯಲ್ಲಿ ಅವನ ಸಂಗಾಡಿಗಳಲ್ಲಿ ಒಬ್ಬನು, 'ಬಾಯರನ್, ನಿನ್ನ ತಾಯಿ ಒಬ್ಬ ಮೂರ್ಖಳು !' ಎಂದನು. ಆಗ 'ಅಹುದು ನನಗೆ ಗೊತ್ತು' ಎಂದು ಖಿನ್ನ ಗಂಭೀರ ಉತ್ತರ ಬಂದಿತು ಬಾಯರನ್ನನಿಂದ.

ಕೊನೆಗೆ ಅವನನ್ನು ಸಿರಿವಂತರ ಮನ್ನೆಯರ ಮಕ್ಕಳ ಶಿಕ್ಷಣ ಸಂಸ್ಥೆಯಾದ ಹ್ಯಾರೋಗೆ ಕಳಿಸಲಾಯಿತು. ಅಲ್ಲಿ ಅವನ ಪ್ರತಿಭೆಯು ಉಜ್ವಲ ಆಲಸ್ಯವನ್ನು ಕಾಣಿಸಿತು. ಮುಷ್ಟಿಯುದ್ಧದಲ್ಲಿ ಹೋರಾಡುವದು, ಉತ್ತಮವಾಗಿ ಈಜುವದು ಕಾಲುಕುಂಟಾದರೂ, ಕ್ರಿಕೆಟ ಆಟದಲ್ಲಿ ಭಾಗವಹಿಸುವದು. ಇದೇ ಅವನ ವಿದ್ಯಾ ಭ್ಯಾಸವಾಯಿತು. ತರಳ ಬಾಯರನ್ನನ ದಾಕ್ಷಿಣ್ಯ ವೃತ್ತಿಯನ್ನು ಚೆನ್ನಾಗಿ ವ್ಯಕ್ತ ಮಾಡುವ ಒಂದು ಕತೆಯು ಅವನ ಅಂದಿನ ಶಾಲಾ ಜೀವನದ ಕುರಿತು ಪ್ರಸಿದ್ಧ ಇದೆ. ರಾಬರ್ಟಪೀಲ (ಮುಂದೆ ಇಂಗ್ಲಂಡದ ಪ್ರಧಾನ ಮಂತ್ರಿಯಾಗಿ ಪೋಲೀಸ ಪಡೆಯ ಪಿತಾಮಹನೆಂದು ಹೆಸರಾದ ಮುತ್ಸದ್ದಿ.) ಆಗ ಅದೇ ಶಾಲೆಯಲ್ಲಿ ಓದುತ್ತಿದ್ದನು. ಒಮ್ಮೆ ಒಬ್ಬ ಪುಂಡ ಹುಡುಗನು ಆ ಪೀಲನನ್ನು ಹೊಡೆಯು ತಿದ್ದನು. (ಕ್ಷೇತ್ರಕೊಬ್ಬ ಪುಂಡನಿರುವಂತೆ ವರ್ಗಕ್ಕೆ ಒಬ್ಬ ಪುಂಡನಿರುತ್ತಾನೆ.

ಅದನ್ನು ಬಾಯುರನ್ನನು ನೋಡಿದನು. ನೋಡಿ ತಡೆಯದಾದನು. ಆ ಪುಂಡ ಪೀಡಕನನ್ನು ದಂಡಿಸುವ ಕಸುವು ಅವನಲ್ಲಿ ಎಲ್ಲಿಯದು ? ಆದರೂ ಕೋಪ ಸಂತಾಪದಿಂದ ಅವನ ಕಣ್ಣುಗಳಲ್ಲಿ ನೀರು ತುಂಬಿಬಂದಿತು. ಪುಂಡನನ್ನು ತಡೆದು ಬಾಯುರನ್ ಕೇಳಿದನು. 'ಎಷ್ಟು ಚಾಟಿಯ ಪೆಟ್ಟು ಹೊಡೆಯಲಿರುವಿ ?' 'ಎಲಾ, ದುಷ್ಟ ಪಿಳ್ಳೆ, ನಿನಗೇಕೆ ಆ ಉಸಾಬರಿ ? ' ಎಂದು ಪುಂಡನು ಗದ್ದರಿಸಿದನು. 'ನೀನು ದಯಮಾಡಿ ಒಪ್ಪುವದಾದರೆ ಆ ಪೆಟ್ಟುಗಳಲ್ಲಿ ಅರ್ಧ ಪಾಲು ನಾನು ತೆಗೆದುಕೊಳ್ಳುವೆನು !' ಎಂದನು ಕೋಮಲಾಂತಃ ಕರಣಿ ಬಾಯುರನ್ನನು.

ಸೂಟಿಯಲ್ಲಿ ಆತನು ಊರಿಗೆ ಬರುತಿದ್ದನು. ಆಗ ಈ ಕುಮಾರನು ಮತ್ತೆ 'ಮಾರನ ಉಪಹತಿಗೆ' ಆಹುತಿಯಾದ ದುರ್ಘಟನೆ ಒಮ್ಮೆ ಒದಗಿಬಂದಿತು. ಇವಳು ಇನ್ನೊಬ್ಬ ಮೇರಿಯೇ. –ಮೇರಿ ಆ್ಯನ ಚಾವರ್ಥ ಎಂಬಾಕೆಯನ್ನು ಮೆಚ್ಚಿ ಹುಚ್ಚಾದನು. ಆಕೆ ಅವನಿಗಿಂತ ೨ ವರ್ಷ ಹಿರಿಯಳು. ಅಲ್ಲದೇ ಮೊದಲೇ ಇನ್ನೊಬ್ಬನ ವಾಗ್ದತ್ತ ವಧು ! ಪರಿಣಾಮ ಹಿಂದಿಸದೇ ಆಯಿತು. ದುಷ್ಯಂತನಾಗಲು ಹೋಗಿ ಆತ ದುರಂತ ಪಟ್ಟನು. ಈ ಭಗ್ನಪ್ರಣಯವು ಅವನಲ್ಲಿ ಕಟುವಾದ ಪರಿವರ್ತನೆಗಳನ್ನು ಮಾಡಿತು.

ಹ್ಯಾರೋದಿಂದ ಬಾಯುರನ್ ಕೇಂಬ್ರಿಜಕ್ಕೆ ಹೋದನು. ೧೮೦೫ ರಲ್ಲಿ ಟ್ರಿನಿಟಿ ಕಾಲೇಜನ್ನು ಸೇರಿದನು. ಅವನ ಅಂದಿನ ಜೀವನವು ಮೂರು ಕಡೆ ಹಂಚಿ ಹೋಗುತ್ತಿತ್ತು–ಕಾಲೇಜಿನಲ್ಲಿ, ಲಂಡನ್ನಿನಲ್ಲಿ ಅಥವಾ ಸೌಥವೇಲ್ಸ ಎಂಬಲ್ಲಿ ತಾಯಿ ಇದ್ದೆಡೆಗೆ. ಆ ಜೀವನವೂ ಸಾಮಾನ್ಯವಾದದ್ದು; ಇತರ 'ದೊಡ್ಡವರ' ಮಕ್ಕಳಂತೆ ದುಂಡಗಾರಿಕೆಯ ಸ್ವೈರಾಚಾರಗಳಲ್ಲಿ ವಿದ್ಯಾರ್ಥಿಯೆಂಬ ಹೆಸರಿನ ವಿಟ ವಿಲಾಸದ ವ್ಯರ್ಥರೂಪನಾಗಿ ದಿನಕಳೆಯುವದು. ಆದರೆ ಆ ಸ್ವೈರಾಚಾರದಲ್ಲಿಯೂ ಅವನು ತನ್ನ ಶರೀರ ಸಂಪತ್ತಿಗೆ ಲಕ್ಷ್ಯವನ್ನು ಪೂರೈಸಿದನು. ಜಂಟ್ಲಮನ್ ಜಾಕ್ಸನ ಎಂಬ ಒಬ್ಬ 'ಮುಷ್ಟಿಕ' ಮಲ್ಲನೊಡನೆ ಗೆಳೆತನವನ್ನು ಬೆಳಿಸಿದ್ದರಿಂದ ಅವನ ಗರಡಿಯ 'ತಾಲೀಮಿ'ನಲ್ಲಿ ಮೈಯ ಕೊಬ್ಬು ಕರಗಿ ಅಂಗಸೌಷ್ಠವವು ಹುರಿಕಟ್ಟಾಗಿ ಬೆಳೆಯಿತು. ಕೇಂಬ್ರಿಜಿಗೆ ಮರಳಿದಾಗ ಅವನು ರೂಪ ಸುಂದರನೂ ಆರೋಗ್ಯ ಸಂಪನ್ನನೂ ಒಳಗಿನಿಂದ ಬೆಳಕು ತುಂಬಿದ ನಯ ನಾಜೂಕಿನ ಸಂಗಮರವರೀ ಪುಷ್ಪಪಾತ್ರದಂತೆ ಅಂಗಕಾಂತಿಯಿಂದ ಒಪ್ಪುವವನೂ ಆಗಿ ಬರುತ್ತಿದ್ದನು– ಜಿಡುವಿನಲ್ಲಿ ವ್ಯಾಯಾಮವನ್ನು ಮುಗಿಸಿ.

ಈಗಾಗಲೇ ಬಾಯುರನ್ನನು ಕವನಗಳನ್ನು ರಚಿಸಲು ಆರಂಭಿಸಿದ್ದನು. ಆದರೆ ಆ ರಚನೆ ತನ್ನದೇ ರಂಜನೆಗಾಗಿತ್ತು. ೧೮೦೭ ರಲ್ಲಿ ಅವನ ಪ್ರಥಮ ಕವನಸಂಗ್ರಹವು

‘ಆಲಸ್ಯದ ಪ್ರಹರಗಳು’ ಎಂಬ ಹೆಸರಿನಲ್ಲಿ ಪ್ರಕಟವಾಯಿತು. ಅವುಗಳಲ್ಲಿ ವ್ಯಕ್ತವಾದ ಕಾವ್ಯಶಕ್ತಿಯು ಸಾಮಾನ್ಯ ಸ್ವರೂಪದ್ದೇ ಆಗಿತ್ತು. ಆದರೆ ಅದರಲ್ಲಿಯೂ ಆಶೋತ್ತರದ ಮುಂಗುರುತುಗಳು ಇದ್ದವು. ಆದಾಗ್ಯೂ ಎಡಿನ್‌ಬರ್ಗ ರಿವ್ಯೂ ಎಂಬ ಪತ್ರಿಕೆಯಲ್ಲಿ ಆ ಸಂಗ್ರಹದ ಮೇಲೆ ಉಗ್ರವಾದ ಟೀಕೆಯು ಬಂದಿತು. ಈ ಅನ್ಯಾಯದ ಟೀಕೆಯಿಂದ ನೊಂದು ಕೆರಳಿ ಬಾಯರನ್ನನು ಕೂಡಲೇ ಒಂದು ಪ್ರತ್ಯುತ್ತರವನ್ನು ರಚಿಸಲು ಕೂತನು. ಆದರೆ ಆ ಉಪರೋಧ ಕವನವನ್ನು ಬರೆಯಲು ಆರಂಭಿಸಿದ ಮೇಲೆ, ಅವನು ನಿಜವಾಗಿಯೂ ಕಟುವಾದ ಮರ್ಮ ಭೇದಕವಾದ ರಚನೆಯನ್ನು ಮಾಡಲು ಶಾಂತ ಮನಸ್ಸಿನ ಚಿಂತನವು ಅವಶ್ಯವೆಂದು ಕಾಯ್ದನು. ಆದ್ದರಿಂದ ಅವನ ಆ ಉಪರೋಧ ಕವನವು ೧ ವರ್ಷದನಂತರ ಪ್ರಕಟವಾಯಿತು. ಅದರ ಹೆಸರು ‘ಆಂಗ್ಲಕವಿಗಳೂ ಸ್ಕಾಚ್ ವಿಮರ್ಶಕರೂ’ ಎಂಬುದು. ಆ ಪುಸ್ತಕವು ಕೂಡಲೇ ಯಶಸ್ವಿಯಾಯಿತು. ಒಂದು ತಿಂಗಳಲ್ಲಿಯೇ ಎರಡನೆಯ ಅವೃತ್ತಿಯನ್ನು ಅಚ್ಚುಹಾಕುವಷ್ಟು ಜನಪ್ರಿಯವಾಯಿತು.

ಈ ನಡುವೆ ಬಾಯರನ್ನನು ಪ್ರಾಯಪ್ರಬುದ್ಧನಾದನು. ಕಾನೂನಿನಂತೆ ಲಾರ್ಡ್ಸ ಸಭೆಯಲ್ಲಿ ತನ್ನ ಸ್ಥಾನವನ್ನು ಸ್ವೀಕರಿಸಲು ಬಾಧ್ಯನಾದನು. ಪಾರ್ಲಿಮೆಂಟಿನಲ್ಲಿ ಆ ಸ್ಥಾನವನ್ನು ಸ್ವೀಕರಿಸಿದನು. ಆದರೆ ರಾಜಕಾರಣದಲ್ಲಿ ಆತನು ಭಾಗವಹಿಸಿದ್ದು ಅಷ್ಟಕ್ಕಷ್ಟೇ. ನ್ಯೂಸ್ಟೆಡ್‌ದಲ್ಲಿ ತನ್ನ ಹೊಸ ಮಿತ್ರಪರಿವಾರವನ್ನು ಹೊಸ ಜಾಗೀರ ದಾರಿಯ ಜರತಾರೀ ರೈಷೋಕಿನಿಂದ ಮೇಜವಾನಿಗಳನ್ನಿತ್ತು ಉಪಚರಿಸಿದ್ದೇ ಆಗಿ ಅವನ ಕಾರ್ಯ. ಇತ್ತ ತಾಯಿಯೊಡನೆ ಆತನ ಸಂಬಂಧವು ಸಿಡಿಯುತ್ತ ಬಂದಿತು- ಅದಕ್ಕೆ ಆಕೆಯ ಅಸಾಧ್ಯ ಸಿಡುಕಿನ ಸಿಡಿಮಿಡಿಯಾಗುವ ಸ್ವಭಾವವೇ ಕಾರಣ ತಾಯಿಯಿಂದ ದೂರ ಉಳಿಯುವದು ಅವನಿಗೆ ಅನಿವಾರ್ಯವೆನಿಸಿತು. ಆದಾಗ್ಯೂ ನ್ಯೂಸ್ಟೆಡ್‌ದಲ್ಲಿ ವಾಸಿಸುವದು ಅವನಿಗೆ ಒಪ್ಪಿಗೆಯಾಗಿದ್ದಿಲ್ಲ. ಈಗಾಗಲೇ ಅವನು ಸಾಕಷ್ಟು ಸಾಲದಲ್ಲಿ ಸಿಲುಕಿದ್ದನು. ಆದರೂ ಇನ್ನಿಷ್ಟು ಸಾಲತೆಗೆದು ೧೮೦೯ ರಲ್ಲಿ ಲಂಡನ್ನ ಬಿಟ್ಟು ಮಹಾಪ್ರಯಾಣಕ್ಕಾಗಿ ತೆರಳಿದನು. ಈ ಪ್ರಯಾಣದಲ್ಲಿ ಸಂಗಾತಿ ಅವನ ಕೇಂಬ್ರಿಜ್ ದಿನಗಳ ಹಳೆಯ ಮಿತ್ರ ಜಾನ್ ಹಾಬಹೌಸ್ ಅವನ ಪ್ರಯಾಣದ ಉದ್ದೇಶ ಪೂರ್ವದೇಶಗಳ ಪರ್ಯಟನ.

ಅವರೀರ್ವರೂ ಫ್ಲಿಮೌಥದಿಂದ ಲಿಸ್‌ಬನ್ನಿಗೆ ಪ್ರಯಾಣ ಬೆಳೆಸಿದರು. ಅಲ್ಲಿ ಬಾಯರನ್ನನು ತಾಗಸ ನದಿಯನ್ನು ಈಜಿ ದಾಟಿದನು! ಅಲ್ಲಿಂದ ಕ್ಯಾಡಿಝ ನಗರಕ್ಕೆ ಅಶ್ವಾರೋಹಿಯಾಗಿ ಹೋದನು. ಮುಂದೆ ಜಿಬ್ರಾಲ್ಟರತನಕ ಹಡಗದಿಂದ ನಡೆದನು. ಮಾಲ್ಟಾದಲ್ಲಿ ಮೂರು ವಾರ ತಂಗಿದನು. ಅಲ್ಲಿಂದ ಮರಳಿ ಯುರೋಪ

ದಂಡೆಗೆ ಬಂದು ಇಳಿದು ಇಬ್ಬರೂ ಆಲ್ಬೇನಿಯಾ ಎಂಬ ಕೇಳ ಹೆಸರಿಲ್ಲದ ಕಾಡು ನಾಡಿನ ಸಂಚಾರಕ್ಕೆ ಹೊರಟರು. ಆ ನಾಡಿನ ಕಾಡು ಬನಸಿರಿಯ ಉಗ್ರ ಸೊಬಗೂ ಬರ್ಬರ ಬದುಕಿನ ಜನವೂ ಬಾಯರನ್ನನ ಮೆಚ್ಚಿಗೆಗೆ ಪಾತ್ರವಾದವು; ಹಾಗೆಯೇ ಅಲ್ಲಿಯ ಅರಸನಾದ ಅಲಿ ಪಾಶಾನು ಅವರಿಗಿತ್ತ ಸಡಗರದ ಸ್ವಾಗತ ಸತ್ಕಾರವೂ. ಈ ರಸಿಕ ತೈಮೂರನ ಬಿಂಕಕ್ಕೆ ಬಿನ್ನಾಣವಾಯಿತು. ಆ ಅರಸನು ಬಾಯರನ್ನನಿಗೆ ಹಾಕಿದ ಮೊದಲನೆಯ ಪ್ರಶ್ನೆಯು :– 'ಇಷ್ಟು ಚಿಕ್ಕಪ್ರಾಯಕ್ಕೆ ಒಬ್ಬ ಸಾದಿಯನ್ನೂ ಜತೆಗೆ ತೆಗೆದುಕೊಳ್ಳದೆ ತಾವು ಸ್ವದೇಶವನ್ನು ಬಿಟ್ಟು ಬಂದದ್ದು ಹೇಗೆ ?' ಬಾಯರನ್ನನು ಪ್ರತಿಷ್ಠಿತ ಮನ್ನೆಯ ಮನೆತನದವನೆಂಬುದು ಅಲಿ ಪಾಶಾನಿಗೆ ಬ್ರಿಟಿಶ ರಾಯಭಾರಿಯು ಮುಂಚಿತವಾಗಿ ತಿಳಿಸಿದ್ದನು. ಆದರೂ, ತಮ್ಮ ಪುಟ್ಟ ಕಿವಿಗಳು, ಕುರುಳು ಕೂದಲು ಮತ್ತು ಬಿಳಿಯ ಅಂಗೈಗಳಿಂದ ತಾವು ಉತ್ತಮ ಕುಲದವರೆಂಬುದು ಖಚಿತವಾಗುತ್ತದೆ. ತುರ್ಕಸ್ತಾನದಲ್ಲಿ ಇರುವ ವನಕವೂ ನನ್ನನ್ನು ತಂದೆಯೆಂದು ತಿಳಿಯಿರಿ; ತಮ್ಮನ್ನು–ನಾನು ಮಗನೆಂದೇ ಭಾವಿಸುವೆನು !' ಎಂದು ಪಾಶಾನು ತರುಣ ಬಾಯರನ್ನನನ್ನು ಬರಮಾಡಿ ಕೊಂಡನು. ನಿಜವಾಗಿಯೂ ಅವನು ಈ ಕವಿಯನ್ನು ಪುಟ್ಟ ಬಾಲಕನಂತೆಯೇ ಕಂಡನು; ದಿನಕ್ಕೆ ೨೦ ಸಲ ಮಿಠಾಯಿ, ಹಣ್ಣು ಹಂಪಲ ಮತ್ತು ಬದಾಮುಗಳ ಕಾಣಿಕೆಯನ್ನು ಬಾಯರನ್ನನಿಗೆ ಪಾಶಾನು ಕಳುಹಿಸತೊಡಗಿದನು.

ಪಾಶಾ ಕಟುಕ ಹೃದಯಿ ಇದ್ದನು. ಆಗದವರಿಗೆ ನಯವಾಗಿ ವಿಷ ಹಾಕಿ ಕೊಲ್ಲುವ ಕಲೆಯು ಆತನ ಕೈಗೂಸು ಆಗಿತ್ತು. ಆದರೂ ಆ ಸವಿನುಡಿಯ ಕೊಳ್ಳೆಗಾರನು ತನ್ನ ರಾಜ್ಯದಲ್ಲಿ ಕ್ಷೇಮ ಸಂಚಾರವಾಗಲೆಂದು ಬಾಯರನ್ನನಿಗೂ ಆತನ ಗೆಳೆಯನಿಗೂ ಭದ್ರವಾದ ಬೆಂಗಾವಲನ್ನು ನೇಮಿಸಿದನು. ಆ ರಕ್ಷಣೆಯಲ್ಲಿಯೇ ನಮ್ಮ ಕವಿನಾಯಕನು ಗ್ರೀಸ ದೇಶದ ಕಡೆಗೆ ನಡೆದನು. ಇದೆಲ್ಲ ಪರ್ಯಟನದ ರಸಭರಿತ ಕಥೆಯನ್ನು ಅರುಹುವ ಅವನ ವಿಶ್ವವಿಖ್ಯಾತ ಕಾವ್ಯವನ್ನು ಬಾಯರನ್ನನು ಆಗಲೇ ಬರೆಯಲಾರಂಭಿಸಿದನು. ಪ್ರಿಯಪ್ರವಾಸ ಕಾವ್ಯದ ಹೆಸರು 'ಚಾಯಿಲ್ಡ ಹಾರಾಲ್ಡ.'

ಬಾಯರನ್ನನು ಹೀಗೆ ಅನೇಕ ಸ್ಥಲಾಂತರಗಳನ್ನು ಮಾಡುತ್ತ ಅಥೇನ್ಸ ಪಟ್ಟಣಕ್ಕೆ ಬಂದನು. ಅಥೇನ್ಸದ ಐತಿಹಾಸಿಕ ಪ್ರಾಂತದ ನೆನಹುಗಳಲ್ಲಿಯೂ ನಚ್ಚಿನ ಸಂಪರ್ಕ ದಲ್ಲಿಯೂ ಬಾಯರನ್ನನಿಗೆ ಎಂದೂ ಇಲ್ಲದ ಚೇತನಾ ಸ್ಫೂರ್ತಿ. ಆದಾಗ್ಯೂ ಅಥೇನ್ಸದ ಅತ್ಯುಚ್ಚ ದೃಶ್ಯವೆನಿಸಿಕೊಂಡ 'ಪಾರ್ಥನೊನ್' ದೇವಾಲಯದಿಂದ ಅವನು ಎಳ್ಳಷ್ಟೂ ಪ್ರಭಾವಿತವಾಗಲಿಲ್ಲ. ಗ್ರೀಕ ಸಂಸ್ಕೃತಿಯ ಭವ್ಯ ಅವಶೇಷಗಳ

ಶಿಲ್ಪಸುಂದರ ದರ್ಶನದಿಂದ ಅವನ ಕಲ್ಪನೆ ಕೊಂಚವೂ ಕೆರಳಲಿಲ್ಲ. ಅವನ ಎದೆ
ನಟ್ಟಿದ್ದು—ಒಳಗಣ್ಣನ್ನು ತಿವಿದದ್ದು ಪ್ರಾಚೀನ ವೈಭವದ ಗೋರಿಯ ಮೇಲೆ ನಿಂ
ಅಂದಿನ ಗ್ರೀಸದ ಪಾರತಂತ್ರ್ಯ ಮತ್ತು ಪರದಾಸ್ಯ. ಗ್ರೀಸ ಅಂದು ತುಕ
ದಬ್ಬಾಳಿಕೆಯ ತೊತ್ತಾಗಿ ತೊತ್ತುಳಿಗೊಂಡಿತ್ತು. 'ಗ್ರೀಸದ ದ್ವೀಪಗಳು !..
ಸೌಂದರ್ಯ ಶೃಂಗಾರ ಅಧಿದೇವತೆಯು ಒಲಿದೂ ಹಾಡಿದ ಸ್ಥಾನ !...ಸಂ
ವಿಗ್ರಹಗಳ ಯುದ್ಧ-ಶಾಂತಿಗಳ ಸಕಲ ಕಲೆಗಳು ಬೆಳೆದ ಬೀಡು ! ಈ
ಅದೆಲ್ಲವೂ ಮುಳುಗಿದೆ. ಅಲ್ಲಿಯ ಬಿಸಿಲಷ್ಟೇ ಉಳಿದಿದೆ !' ಎಂದು ಅವನ
ಭಾವಾವೇಶದಿಂದ ಹಾಡಿದನು !

ಅಥೆನ್ಸದಲ್ಲಿ ಮೂರು ತಿಂಗಳು ತಳವೂರಿ ಬಾಯರನ್ನನು ಸ್ಮರ್ನ್ನಾಕ್ಕೆ ಕಡ
ಪಯಣ ಬೆಳೆಸಿದನು. ಸ್ಮರ್ನ್ನಾದಲ್ಲಿ 'ಚಾಯಿಲ್ಡ ಹ್ಯಾರೊಲ್ಡ'ದ ಎರಡನೆಯ
ಸರ್ಗವನ್ನು ಅವನು ಬರೆದು ಮುಗಿಸಿದನು. ಅವನ ಗೆಳೆಯ ಹಾಬ್‌ಹೌಸನು
ಸರ್ಗವನ್ನು ತೀರ ಸಾಮಾನ್ಯವೆಂದು ಕಂಡನು. ಆದರೆ ಕವಿಯ ಗೆಳೆಯನೆಂದ
ಕಾವ್ಯದ ಬೆಲೆ ಕಟ್ಟಲು ಬಂದೀತೇ? ಸ್ಮರ್ನ್ನಾದಿಂದ ಬಾಯರನ್ನನು ಕಾನಸ್ಟಾಂ
ನೋಪಲ್ಲಿಗೆ (ಇಸ್ತಂಬೂಲ) ಬರುವಾಗ ಹೆಲೆಸ್ಪೋಂಟವನ್ನು ಈಜಿ ದಾಟಿದನು
ತನ್ನ ಈ ಪರಾಕ್ರಮದ ಕುರಿತು ಬಾಯುರನ್ನ ಯಾವಾಗಲೂ ಅತ್ಯಂತ ಹೆಮ
ಪಟ್ಟುಕೊಳ್ಳುತ್ತಿದ್ದನು. 'ಬೇರೆ ಯಾವದೇ ರಾಜಕೀಯ, ಕಾವ್ಯ ಮೂಲಕ
ಅಥವಾ ಶಬ್ದ ಶಕ್ತಿಯ ಕಾರ್ಯ ಗೌರವಕ್ಕಿಂತ ಈ ಸಾಧನೆಯ ಬಗ
ನನಗೆ ವಿಶೇಷ ಹೆಮ್ಮೆ ಅನಿಸುತ್ತದೆ ಎಂದು ಅವನೇ ಅಭಿಮಾನದಿಂ
ಅಂದದ್ದುಂಟು. ಇದರಲ್ಲಿ ಅವನವಷ್ಟೇ ಅಲ್ಲ. ಅವನಂಥ ಇತರ ಪ್ರತಿಭ
ವಿಭೂತಿಗಳ ಆತ್ಮ ಸಂಭಾವನೆಯ ಒಂದು ವಿಪರೀತ ಬುದ್ಧಿಯು ವ್ಯಕ್ತವಾಗುತ್ತದೆ
ಲೋಕವು ಕೊಂಡಾಡುವ ತಮ್ಮ ಮಹಾಕೃತಿಗಳ ಬಗ್ಗೆ ಅಥವಾ ಅಂಥ ಕೃತಿಗ
ನ್ನುಂಟು ಮಾಡುವ ತಮ್ಮ ಶಕ್ತಿಯ ಪ್ರಶಂಸೆಯ ಬಗ್ಗೆ ಇಂಥ ಕವಿಗಳೂ ಕಲೆಗಳ
ಅಷ್ಟೊಂದು ಆಸಕ್ತಿಯನ್ನು ಕಾಣಿಸುವದಿಲ್ಲ. ಆ ಪ್ರಶಂಸೆ ಕೊಂಡಾಟಗಳು ತಮ
ಸ್ವತಃಸಿದ್ಧ ಸ್ವಾಯತ್ತವೇ ಎಂದು ಅವರು ಇಟ್ಟುಕೊಂಡೇ ನಡೆಯುತ್ತಿರಬೇಕು
ಆದರೆ ತಮ್ಮ ಪ್ರತಿಭಾ ಕ್ಷೇತ್ರಕ್ಕೆ ಹೊರಪಟ್ಟ ವಿಶೇಷ ಸಂಗತಿಗಳಲ್ಲಿ ಒಂದನ
ತಾವು ಮಾಡುತ್ತಿದ್ದರೆ ಅವರಿಗೆ ಆ ಕುರಿತು ಮಂದಿ ತೋರಿಸಿದ ಅಲ್ಪ ಮೆಚ್ಚಿಗೆಯು
ಮಹಾ ಮನ್ನಣೆಯೆನಿಸುವದು. ಕವೀಂದ್ರ ರವೀಂದ್ರರಿಗೆ ವೃದ್ಧಾಪ್ಯದ
ಹೋಮಿಯೋಪಥಿಕ ಔಷಧಗಳನ್ನು ಕೊಡುವದರಲ್ಲಿ ಆಸಕ್ತಿ ಬೆಳೆಯಿತು. ಚಿತ್ರಕ
ಯಂತೆಯೇ ಆ ಚಿಕಿತ್ಸೆಯನ್ನು ಅವರು ಆರಂಭಿಸಿದರು. ಆಗ ನಮ್ಮ ಮಿ
ರೊಬ್ಬರು ಶಾಂತಿನಿಕೇತನಕ್ಕೆ ಹೋಗಿ ಗುರುದೇವರನ್ನು ಅವರ 'ಉತ್ತರಾಯಣ

ಟೀರದಲ್ಲಿ ಭೆಟ್ಟಿಯಾಗಿ ಬಂದವರು ಹೇಳುತ್ತಿದ್ದರು,–ತನ್ನನ್ನು ನೋಡಲು ಬಂದ ನಕ್ಕೆ ನೆಗಡಿಗೋ ಹೊಟ್ಟೆಶೂಲಿಗೋ ಅವರು ಜಾಗ್ರತೆಯಾಗಿ ಕೊಡುವ ಆ ಕ್ಕರೆಯ ಗುಳಿಗೆಗಳನ್ನು ನುಂಗಿ ಆ ಬೇನೆ ಕಡಿಮೆ ಆಯಿತೆಂದು ಆ ಜನ ಆಡಿ ೋರಿಸಿದರೆ ರವೀಂದ್ರರಿಗಾಗುವ ಆನಂದ ಅವರ ಗೀತಾಂಜಲಿಯ ದಿವ್ಯ ಕವನ ಳನ್ನು ಹೊಗಳಿದರೂ ಆಗುವಂತಿದ್ದಿಲ್ಲವಂತೆ! ಮುಸಲೋನಿಯನ್ನು ಸೋಲಿಸಿದ ಾರ್ಡ ವಾವೆಲ್ಲನಂಥ ದಿಗ್ವಿಜಯಿ ಸೇನಾಪತಿಗೆ ಅವನ ಲಿಬಿಯಾ ಯುದ್ಧದ ್ಯೂಹ ಚಾತುರ್ಯಕ್ಕಿಂತ ಅವನು ಮುಕ್ತಕಂಠದಿಂದ ಆಡಿ ತೋರಿಸುವ ಅವನೇ ಯದ್ದ ಆಂಗ್ಲ ಕವನಗಳನ್ನು ನೀವು ಮೆಚ್ಚಿದರೆ ಹೆಚ್ಚು ಧನ್ಯತೆ ಎನಿಸುತ್ತಿತ್ತು! ಲೌಕಿಕ ವ್ಯಕ್ತಿಗಳು ತಮ್ಮ ಅಸಾಧಾರಣ ಕೃತಿಗಳಿಗಿಂತ ಸರ್ವಸಾಮಾನ್ಯ ಚರಿತ್ರ ಲ್ಲಿಯ ಯಶಸ್ಸನ್ನೇ ಮಿಗಿಲಾದ ಶ್ರೇಯಸ್ಸೆಂದು ಭಾವಿಸಿ ಹೆಮ್ಮೆಪಡುವದು ಶ್ಚರ್ಯವೆನಿಸಿದರೂ ಅದೊಂದು ಚಮತ್ಕಾರವಲ್ಲ.

ಸ್ತಂಬೂಲ (ಕಾನಸ್ಟಂಟಿನೋಪಲ)ದಿಂದ ಹಾಬ್ ಹೌಸನು ಇಂಗ್ಲಂಡಿಗೆ ರಳಿದನು. ಆದರೆ ಬಾಯರನ್ನನು ತಿರುಗಿ ಗ್ರೀಸಕ್ಕೆ ಹೋದನು. ಅಲ್ಲಿ ಅವನು ಹೊರೇಸನ ಪ್ರೇರಣೆಗಳು' ಮತ್ತು 'ಮಿನರ್ವಾಳ ಶಾಪ' ಎಂಬ ಕೃತಿಗಳನ್ನು ೞಿಸಿದನು. ಆದರೆ ಕವನ ಸಂಗ್ರಹಗಳ ಕೋಟಿಕಟ್ಟಿ ಕಾಯಿದೆಯ ಕಾಟವನ್ನು ಪ್ಪಿಸಲು ಬಂದೀತೇ? ಹೆಣ ತಿರುಗಿ ಏಳಬೇಕೆಂದು ಯಾರೂ ಹಟ ಡಿಯುವದಿಲ್ಲ; ಆದರೆ ತೆತ್ತ ಹಣ ತಿರುಗಿ ಕೈ ಸೇರಬೇಕೆಂದು ಯಾರೂ ಹೆಣಗದೆ ಡುವದಿಲ್ಲ. ಸಾಲಮುಳುಗಿಸಲು ದೇಶಾಂತರಕ್ಕೆ ಹೋದವನು ಕವಿಯೆಂಬ ಾತ್ರಕ್ಕೆ ಸಾಹುಕಾರರಿಗೆ ಉತ್ಸಾಹವೆನಿಸುವದೆ? ಬಾಯರನ್ನನ ಪರ್ಯಟನವನ್ನು ಾಯನವೆಂದು ಭಯಪಟ್ಟ ಸಾಹುಕಾರರೂ ವಕೀಲರೂ ಅವನನ್ನು ಕೂಡಲೇ ಗ್ಲಂಡಿಗೆ ಬರುವಂತೆ ಒತ್ತಾಯಗೊಳಿಸಿದರು. ಹೀಗಾಗಿ ೧೮೧೧ ರ ಜುಲೈ ಗಳಲ್ಲಿ 'ಚಾಯಿಲ್ಡ ಹ್ಯಾರೋಲ್ಡ'ನು ತಾಯಿಯ ಮಡಲಿಗೆ ಮರಳಿದನು. ಆದರೆ ಡನ್ನಿನಲ್ಲಿ ಇಳಿದು ಅಲ್ಲಿಯ ವ್ಯವಹಾರವನ್ನು ಮುಗಿಸಿ ನ್ಯೂಸ್ಟೆಡಿಗೆ ಬರುವ ಆಗಸ್ಟ ೧ಕ್ಕೆ ಅವನ ತಾಯಿಯು ಮಡಿದಳು. ತಾಯ್ನಾಡಿಗೆ ಬಂದರೂ ಯಿಯನ್ನು ನೋಡಲಾಗಲಿಲ್ಲ; ಹಿಂದೆ ಹತ್ತಿರವಿದ್ದರೂ ದೂರವಿದ್ದಂತೆ ದ ಕವಿಪುತ್ರನು ಈಗ ದೂರದಿಂದ ನಡೆದು ಬಂದರೂ ತಾಯಿಗೆಹತ್ತಿರ ಂತೆ ಆಗಲೇ ಇಲ್ಲ.

ಯರನ್ನನು ಮರಳಿ ಬಂದವನೇ ತನ್ನ 'ಹೊರೇಸನ ಪ್ರೇರಣೆ'ಗಳ ಕರಡನ್ನು ಲ್ಲಾಸನೆಂಬ ಗೆಳೆಯನ ಕೈಗೆ ಕೊಟ್ಟನು. ಡಾಲ್ಲಾಸನಿಗೆ ಆ ಕವನದಿಂದ ತೀವ್ರ ಶೆಯೇ ಆಯಿತು. 'ಅಯ್ಯೋ ಪುಣ್ಯಾತ್ಮಾ, ನಿನ್ನ ಪ್ರವಾಸದ ಮತ್ಯಾವ

ಫಲಿತಾಂಶವೂ ಇಲ್ಲವೆ ?'-ಎಂದು ಅವನು ಕವಿಯನ್ನು ಕೇಳಿದನು. ಬಾಯರನ್ನನು ತುಸು ಸಿಡುಕಿನಿಂದಲೆ ಉತ್ತರವಿತ್ತನು-'ಕೆಲವು ಚಿಕ್ಕ ಕವನ ತುಣುಕುಗಳಿವೆ. ಅಲ್ಲದೆ ಹಲವಷ್ಟು ಸ್ಪೆನ್ಸರನ ಮಾದರಿಯ ಪದ್ಯಚರಣಗಳನ್ನು ಬರೆದಿಟ್ಟಿದ್ದೇನೆ. ಆದರೆ ಅವುಗಳಿಂದ ನಿನಗೇಕೆ ತೊಂದರೆ ಕೊಡಲಿ ?' ಬೇಕಾದರೆ ನೀನು ಒಮ್ಮೆ ನೋಡಲು ಏನೂ ಅಡ್ಡಿ ಇಲ್ಲ! ಇಷ್ಟೊಂದು 'ಮುನ್ನುಡಿ'ಯೊಂದಿಗೆ ಬಾಯರನ್ನನು ಡಾಲ್ಲಾಸನಿಗೆ 'ಚಾಯಿಲ್ಡ್ ಹ್ಯಾರೋಲ್ಡ್' ಕಾವ್ಯದ ಮೊದಲ ಎರಡು ಸರ್ಗಗಳನ್ನು ಒಪ್ಪಿಸಿದನು. ಡಾಲ್ಲಾಸನು ತಜ್ಞ ವಿಮರ್ಶಕನಿದ್ದನು, ರ ಕಾಣದ್ದನ್ನು ಕವಿ ಕಾಣಬಹುದು; ಆದರೆ ಕವಿ ಕಾಣದ್ದನ್ನು ಅವನನ್ನು ಸವಿಯು ವಿಮರ್ಶಕನು ಕಾಣುತ್ತಾನೆ,-ಪ್ರಪಂಚಕ್ಕೂ ಕಾಣಿಸುತ್ತಾನೆ. ತನ್ನನ್ನೂ ಕವಿಯನ್ನೂ ಪ್ರಪಂಚವನ್ನೂ ಕೃತಾರ್ಥರನ್ನಾಗಿಮಾಡುತ್ತಾನೆ! ಇಲ್ಲಿ ಹಾಗೆಯೇ ಆಯಿತು ಡಾಲ್ಲಾಸನು ಆ ಎರಡು ಸರ್ಗಗಳ ಪ್ರತಿಭಾ ಗುಣವನ್ನು ಕೂಡಲೇ ಕಂಡು ಕೊಂಡನು; ಅಂದಿನ ಪ್ರಸಿದ್ಧ ಪ್ರಕಾಶಕನಾದ ಜಾನ ಮುರೇಯ ಬಳಿ ಅವೆರಡನ್ನೂ ಒಯ್ದನು.

೧೮೧೨ ರ ಫೆಬ್ರುವರಿ ೨೭ ಕ್ಕೆ ಬಾಯರನ್ನನು ಮತ್ತೆ ಪಾರ್ಲಿಮೆಂಟಿನ ಲಾಡ ಸಭೆಯಲ್ಲಿ ಕೂತನು.-ಅಷ್ಟೇ ಅಲ್ಲ. ಮೊತ್ತಮೊದಲು ಮಾತನಾಡಲು ಎದ್ದುನಿಂತನು ನಾಟಿಂಗಹ್ಯಾಮದ ಕೆಲವು ಅಪರಾಧಿಗಳನ್ನು ಮರಣದಂಡನೆಗೆ ಗುರಿಮಾಡು ಪ್ರಸ್ತಾಪವು ಅಂದು ಸಭೆಯಲ್ಲಿ ಚರ್ಚೆಗೆ ಬಂದಿತ್ತು. ಬಾಯರನ್ನನು ಆ ಹಿಂ ಶಾಸನದ ವಿರುದ್ಧ ಮಾತನಾಡಿದನು. ಆ ಭಾಷಣವು ಸಾರ್ವಜನಿಕರ ಲಕ್ಷ್ಯವ ಕೆಲಮಟ್ಟಿಗೆ ಸೆಳೆಯಿತು. ಎರಡು ದಿನಗಳ ನಂತರ 'ಚಾಯಿಲ್ಡ್ ಹ್ಯಾರೋಲ್ಡ್ ಕಾವ್ಯದ ಎರಡು ಸರ್ಗಗಳು ಪ್ರಕಟವಾದವು. ಆ ಕವನವು ಲಂಡನ್ನಿನ ಪ್ರಾಜ್ಞ ಪ್ರಪಂಚವನ್ನು ಬಿರುಗಾಳಿಯಂತೆ ಆಕ್ರಮಿಸಿತು. ಒಂದು ತಿಂಗಳಲ್ಲಿ ಏಳು ಆವೃತ್ತಿಗಳು ಅಚ್ಚಾಗಿ ಮಾರಿಹೋದವು. 'ಒಂದು ಮುಂಜಾನೆ ನಾನು ಎಚ್ಚೆತ್ತ ಪ್ರಖ್ಯಾತನಾಗಿದ್ದೇನೆಂಬುದನ್ನು ಕಂಡೆನು!' ಎಂದು ಬಾಯರನ್ನ ಆ ಕುರಿ ಬರೆದಿದ್ದಾನೆ!

ಈ ಕಾವ್ಯರಮ್ಯ ಕವಿಗೆ ಲಂಡನ್ನಿನ ಪ್ರತಿಷ್ಠಿತ ಸುಸಂಸ್ಕೃತ ಸಮಾಜವು ತ ದ್ವಾರಗಳನ್ನು ತೆರಪಿಲ್ಲದೆ ತೆರೆಯಿತು. ಸತ್ಕಾರದಿಂದ ಸತ್ಕಾರಕ್ಕೆ, ಸ್ವಾಗತದಿಂ ಇನ್ನೂ ಹೆಚ್ಚಿನ ಸ್ವಾಗತಕ್ಕೆ ರೂಪಸುಂದರ ಬಾಯರನ್ನನು ರಾಜಹಂಸದಂ ತೇಲಿಹೋದನು. ಅವನ ಮಂದಕಾಂತಿಯ ಸೌಂದರ್ಯವು ಅವನ ಉಜ್ವಲ ಕ ಯಷ್ಟೇ ಪ್ರಶಂಸೆಯನ್ನು ಪಡೆಯಿತು. ಏಕಾಕಿಯಾದ ಆ ಪ್ರತಿಭಾ ಸಂ

ತರುಣನು ರಸಿಕರ ಕಂಠ ಮಣಿಯಾದನು; ಕವಿಗಳ ಶಿರೋಮಣಿ ಎನಿಸಿದನು. ಯೌವನ, ಸೌಂದರ್ಯ ಮತ್ತು ಕಾವ್ಯ ಪ್ರತಿಭೆ ಇವುಗಳಲ್ಲಿ ಒಂದೊಂದು ಕೂಡ ಉನ್ಮಾದವೇರಲು ಸಾಕು. ಮೂರು ಮಾದಕ ಶಕ್ತಿಗಳು ಕೂಡಿದ ಮೇಲೆ ಆ ವ್ಯಕ್ತಿಯು ಮೋಹ ಸಂಭ್ರಮವನ್ನು ಕೇಳಬೇಕೆ ? ಬಾಯರನ್ ಒಮ್ಮೆಲೇ ಅನೇಕ ಪ್ರಣಯ ವ್ಯವಹಾರಗಳಲ್ಲಿ ಮುಳುಗಿದನು; ಒಬ್ಬ ಪ್ರೇಯಸಿ ಲೇಡಿ ಕ್ಯಾರೋಲಿನ ಲ್ಯಾಂಬ, ಇನ್ನೊಬ್ಬಳು ಲೇಡಿ ಆಕ್ಸಫೋರ್ಡ, ಮೂರನೆಯವಳು ಕೇಳಿನಂಬಲಾರಿರಿ, ಆದರೆ ನಡೆದದ್ದು ತೀರ ನಿಜ-ತನ್ನ 'ಅರ್ಧಭಗಿನಿ' ಅಗಸ್ಟಾ. (ಅರ್ಧ ಭಗಿನಿ ಯೆಂದರೆ ತಾಯಿಯ ಅಥವಾ ತಂದೆಯ ಮೊದಲನೆಯ ಮದುವೆಯಿಂದ ಹುಟ್ಟಿದ 'ಸಹೋದರಿ' ಅಲ್ಲದ ಸೋದರಿ ! ಈ ಸಂಬಂಧ ಪುನರ್ವಿವಾಹಿತರಲ್ಲಿಯೇ ಸಂಭವವಿದೆ.)

ಪ್ರಶಂಸೆಯ ಪ್ರಕಾಶದಲ್ಲಿ ಬಾಯರನ್ನನ ಪ್ರತಿಭೆ ಸಹಸ್ರದಲವಾಗಿ ಅರಳಿತು. ಕವಿತೆಗಳೂ ಕಥನ ಕವನಗಳೂ ವಿಪುಲವಾಗಿ ವೇಗದಿಂದ ಬರತೊಡಗಿದವು. ಎಷ್ಟು ವೇಗದಿಂದ ಪ್ರಕಟವಾದವೋ ಅಷ್ಟೇ ತ್ವರೆಯಿಂದ ಅಷ್ಟೇ ತತ್ಪರತೆಯಿಂದ ಸಾರ್ವಜನಿಕರು ಅವುಗಳನ್ನು ಮುರಿದುಬಿದ್ದು ಮಿಠಾಯಿಗೆ ಮುಕುರುವ ಮಕ್ಕಳಂತೆ ಕೊಂಡು ಕೊಂಡಾಡತೊಡಗಿದರು. ೧೮೧೩ ರಲ್ಲಿ, ಎಪ್ರಿಲದಲ್ಲಿ 'ವಾಲಟ್ಝ್', ಮೇದಲ್ಲಿ 'ಗಿಯಾವೂರ', ಡಿಸೆಂಬರದಲ್ಲಿ 'ಎಬಿದೊಸ', ಪ್ರಕಟವಾದವು. ಮರು ವರ್ಷವೇ. 'ಕೊರ್ಸೇಕ', 'ಲಾರಾ', 'ಹಿಬ್ರೂ ಗೀತಗಳು' ಬಂದವು. ನೂರು ಸ್ವರ. ನೂರು ತರ ! ಒಂದೊಂದು ಅತಿ ಮಧುರ ! ಕವಿಯಂತೆ ಸುಂದರ !

೧೮೧೫ ರಲ್ಲಿ ಬಾಯರನ್ನನು ಅನ್ನಾಬೆಲ್ಲಾ ಮಿಲ್ಬ್ಯಾಂಕ ಎಂಬವಳನ್ನು ಮದುವೆ ಯಾದನು. ಆಕೆ ಮೇಲೆ ಹೇಳಿದ ಲೇಡಿ ಕ್ಯಾರೊಲಿನ ಲ್ಯಾಂಬಳ ಆಪ್ತಳು. ಒಂದು ಆಸ್ತಿಗೆ ಬಾಧ್ಯಳು. ಎರಡು ವರ್ಷ ಹಿಂದೆಯೇ ಅವನು ಆಕೆಯ ಕೈಯನ್ನು ಕೋರಿದ್ದನು. ಆದರೆ ಆಕೆಯೇ ಒಲ್ಲೆ ಎಂದಿದ್ದಳು. ಆದರೆ ಆನಂತರ ೧೮೧೪ ರ ಸೆಪ್ಟೆಂಬರದಲ್ಲಿ ಅವರೀರ್ವರ ವಿವಾಹ ನಿಶ್ಚಿತವಾಯಿತು. ಆ ವಿವಾಹವು ಬಾಯರನ್ನನ ಜೀವನ ಕಥೆಯ ಒಂದು ವಿಷಮಯ ರಹಸ್ಯವೇ ಸರಿ. ಅವನ ಚರಿತ್ರದ ಹಲವು ಗೂಢಗಳಲ್ಲಿ ಒಂದು. ಏಕೆಂದರೆ, ಅವನಿಗೆ ಆ ಹೆಂಡತಿಯಲ್ಲಿ ಪ್ರೀತಿ ಇರಲಿಲ್ಲ. ಆಕೆಯಿಂದ ಬರಬಹುದಾದ ಹಣವೂ ಬಹಳವಿದ್ದಿಲ್ಲ. ಆರಂಭ ದಿಂದಲೇ ಆ ವಿವಾಹದ ಹಣೆಯಲ್ಲಿ ವಿಧಿಯು ವಿಪತ್ತನ್ನೇ ಬರೆದಂತಿತ್ತು. ಮದುವೆಯಾದ ವರ್ಷದ ಕೊನೆಗೆ ಲೇಡಿ ಬಾಯರನ್ನಳು ಒಂದು ಹೆಣ್ಣು ಮಗುವನ್ನು ಹೆತ್ತಳು. ಕೂಸಿಗೆ ಅಗಸ್ಟಾ ಎಡಾ ಎಂದು ನಾಮಕರಣವಾಯಿತು.

ಐದುವಾರಗಳ ನಂತರ ಕೂಸಿನ ತಾಯಿಯು ಬಾಯರನ್ನನನ್ನು ಬಿಟ್ಟು ಹೋದಳು– ಹೋದವಳು ಮತ್ತೆ ಮರಳಲಿಲ್ಲ.

ಈ ವಿವಾಹ ವಿಚ್ಛೇದದ ರಹಸ್ಯದ ಕುರಿತು ಅದು ಒದಗಿದಂದಿನಿಂದ ಈ ವರೆಗೆ ನಡೆದ ತರ್ಕವಿತರ್ಕಗಳೂ ವಾದವಿವಾದಗಳೂ ಕೂಡಿ ಒಂದು ದೊಡ್ಡ ಹೊತ್ತಿಗೆಯಾಗಬಹುದು. ಆ ಹೊತ್ತಿಗೆಯು ಕೊನೆಗೂ ಆ ಮದುವೆ ಕೂಡಿದ್ದು ಹೇಗೆ? ಬಿಟ್ಟದ್ದು ಏಕೆ ? ಎಂಬ ವಿಷಯ ಸರಿಯಾದ ಇತ್ಯರ್ಥವು ಆಗದೇ ಹೋಗಬಹುದು. ಇತ್ಯರ್ಥವೇನೇ ಆಗಲಿ ಹೋಗಲಿ. ಅವರಿಂದ ದೊಡ್ಡ ಅನರ್ಥವು ಸಂಘಟಿಸಿತು. ಬಾಯರನ್ ಅನಾಬೆಲಾಳ ಅಗಲುವಿಕೆಯಿಂದ ಸಾರ್ವಜನಿಕರಲ್ಲಿ ಉಗ್ರವಾದ ಕೋಲಾಹಲವೆದ್ದಿತು. ಖ್ಯಾತಿಯೊಂದು ಉಸುರಿನಗುಳ್ಳೆ ; ಮರು ಉಸುರಿಗೆ ಅದು ಮೂಡಿದಷ್ಟೇ ಫಕ್ಕನೆ ಒಡೆಯಲೂ ಬಹುದು. ಬಾಯರನ್–ಪವಾಡದ ಪಾಡು ಹಾಗೇ ಆಯಿತು. ತಮ್ಮ ಅಜ್ಞಾನದ ಎಲ್ಲ ನಿಷ್ಠುರತೆಯಿಂದ ಕ್ಷುಬ್ಧವಾದ ಜನತೆ ವೃತ್ತಪತ್ರಗಳಲ್ಲಿ; ಚಿಕ್ಕದೊಡ್ಡ ಪ್ರಚಾರ ಪುಸ್ತಕಗಳಲ್ಲಿ, ಚರ್ಚು– ಚರ್ಚೆಗಳಲ್ಲಿ ಕ್ಲಬ್ಬು–ಕೂಟಗಳಲ್ಲಿ ಜನ ರೊಚ್ಚಿಗೆದ್ದು ಬಾಯರನ್ನನನ್ನು ಕ್ರೂರಟೀಕೆಗೆ ಗುರಿಮಾಡಿತು. ದೈವಗೇಡಿಯಾದ ಬಾಯರನ್ನ ಆಗ ಬಿಡಿಕಾಸಿಗೂ ಗತಿಯಿಲ್ಲದವನಾಗಿದ್ದನು. ಆದಾಗ್ಯೂ ಅವನ ಬಿಂಕವು ಬಗ್ಗಲಿಲ್ಲ. ಲಾಭಕ್ಕಾಗಿ ಗ್ರಂಥಗಳನ್ನು ಪ್ರಕಟಿಸುವದು ತನ್ನ ಗೌರವಕ್ಕೆ ಕುಂದೆಂಬ ವಿಚಿತ್ರಭಾವನೆ ಅವನದಿತ್ತು ! ಅದಕ್ಕಾಗಿ ಅವನು ತನ್ನ ಪ್ರಕಾಶಕರಿಂದ ಹಣವನ್ನು ಸ್ವೀಕರಿಸಲು ಒಪ್ಪಲಿಲ್ಲ. ಎಲ್ಲರೂ ಎಲ್ಲೆಡೆಯಲ್ಲಿಯೂ ಎಲ್ಲ ರೀತಿಯಿಂದಲೂ ಅವನಮೇಲೆ ಸಂಜುಕಾರುತ್ತಿದ್ದರು, ಕಿಡಿಯುಗುಳುತ್ತಿದ್ದರು. ಆದರೂ ಹಾಬ್‌ಹೌಸನಂಥ ಕೆಲವೇ ಅವನ ಗೆಳೆಯರು ಅವನೊಡನೆ ನಿಷ್ಠೆಯಿಂದ ನಿಂತರು. ಆದರೆ ಫಲವೇನು ? ಲೋಕಮತವು ಕಡಲ ತೆರೆಯಂತೆ–ಅನುಕೂಲವಿದ್ದಾಗ ಭರತದ ಏರಿಗೆ ಯಾವ ಎತ್ತರಕ್ಕೂ ಮುಟ್ಟಿಸಬಲ್ಲದು; ಪ್ರತಿಕೂಲವಾದಾಗ ಇಳಿತದ ಸೆಳವಿನಂತೆ ರಸಾತಳಕ್ಕೆ ಅಟ್ಟಿ ಮುಳುಗಿಸಲೂ ಬಲ್ಲದು. ಬಾಯರನ್ನನನ್ನು ಅದು ದೇಶದ ಹೊರಗೆ ಅಟ್ಟಿತು. ೧೮೧೬ ರ ಎಪ್ರಿಲ ತಿಂಗಳಲ್ಲಿ 'ಚಾಯಿಲ್ಡ ಹ್ಯಾರೊಲ್ಡ'ನು ಮತ್ತೆ ದೇಶಾಂತರದಲ್ಲಿ ಸಂಚಾರವನ್ನು ಆರಂಭಿಸಿದನು.

ಈ ಸಲ ಅವನು ಜಿನೇವಾದ ಕಡೆಗೆ ಪ್ರವಾಸಮಾಡಿದನು. ಅಲ್ಲಿ ಅವನಿಗೆ ಕ್ಲ್ಯಾರಳು ಭೆಟ್ಟಿಯಾದಳು. ಆಕೆಯು ಕಥೆ ಷೆಲ್ಲಿಯ ಚರಿತ್ರದಲ್ಲಿ ಬಂದಿದೆ. ಕ್ಲ್ಯಾರಳು ಇಂಗ್ಲಂಡದಲ್ಲಿ ಬಾಯರನ್ನನಿಗೆ ಒಲಿದ ಕೊನೆಯ ಪ್ರೇಯಸಿ. ಆಕೆ ತನ್ನ ಸೋದರಿ ಮೇರಿ ಮತ್ತು ಆಕೆಯ ಪ್ರಿಯತಮ ಷೆಲ್ಲಿ ಇವರೊಡನೆ ಪ್ರವಾಸಕ್ಕೆ

ಬಂದಿದ್ದಳು. ಷೆಲ್ಲಿ ಮತ್ತು ಬಾಯರನ್ನ ಸ್ವಭಾವದಲ್ಲಿ ಗುಣಧರ್ಮಗಳಲ್ಲಿ ಮನೋವೃತ್ತಿಗಳಲ್ಲಿ ಬಾಳನ್ನು ನೋಡುವ ದಿಟ್ಟಿ ನಿಟ್ಟುಗಳಲ್ಲಿ ತೀರ ಭಿನ್ನರು. ಆದಾಗ್ಯೂ ಇಬ್ಬರೂ ಕವಿಗಳು ಅನ್ಯೋನ್ಯರಿಗೆ ಆಕರ್ಷಿತರಾಗಿದ್ದರು, ಆಸಕ್ತರಾಗಿದ್ದರು ಮತ್ತು ಒಬ್ಬರು ಮತ್ತೊಬ್ಬರ ಮಹಿಮೆಯನ್ನೂ ಪ್ರತಿಭೆಯನ್ನೂ ಒಪ್ಪಿಮನ್ನಿಸಿದ್ದರು.

ಷೆಲ್ಲಿಯೊಂದಿಗೆ ಬಾಯರನ್ನ ಜಿನೇವಾದ ಸರೋವರದಲ್ಲಿ ಸಂಚರಿಸಿದನು. ಆ ಸಮಯದಲ್ಲಿಯೇ ಅವನು ತನ್ನ ಸುಪ್ರಸಿದ್ಧ 'ಶಿಲ್ಲಾನದ ಸೆರೆಯಾಳು' ಎಂಬ ಕವನವನ್ನು ಬರೆದನು. ಅದೇ ವರ್ಷ ಜುಲೈದಲ್ಲಿ ಅವನು 'ಚಾಯಿಲ್ಡ ಹ್ಯಾರೊಲ್ಡ'ದ ಮೂರನೆಯ ಸರ್ಗವನ್ನು ಮುಗಿಸಿದನು. ಅದನ್ನು ಬರೆದು ತುಳುಕಿ ಉಳಿದ ಸ್ಫೂರ್ತಿಯನ್ನು ಐದಾರು ಸ್ಫುಟ ಕವಿತೆಗಳಲ್ಲಿ ತೋಡಿಕೊಂಡನು. ಆನಂತರ 'ಮಾನಫ್ರೆಡ್' ಕಾವ್ಯವನ್ನು ಆರಂಭಿಸಿದನು. ಕ್ಲ್ಯಾರಳೊಡನೆ ಷೆಲ್ಲಿ ದಂಪತಿಗಳು ಇಂಗ್ಲಂಡಕ್ಕೆ ಮರಳಿದಾಗ ಬಾಯರನ್ ತನ್ನ ಗೆಳೆಯ ಹಾಬ್‌ಹಾಸನೊಡನೆ ಆಲ್ಪ್ಸ ಪರ್ವತಗಳಲ್ಲಿ ಸುತ್ತಾಡಿಬಂದನು; ಮುಂದೆ ಇಟಲಿಯ ಎತ್ತರ ಭಾಗದಲ್ಲಿ ಅಲೆದಾಡಿ ವ್ಹೆನಿಸದಲ್ಲಿ ಕೊನೆಗೆ ನೆಲೆಸಿದನು. ಅಲ್ಲಿ ಅವನು ಒಳ್ಳೆ ಸಡಗರದಿಂದ ಬಾಳಿದನು. ಅಷ್ಟೇ ದುಂದುಗಾರಿಕೆಯಿಂದ ಪ್ರಣಯದ ಜೂಜಾಡಿದನು. ಆದರೂ ಕಾವ್ಯದ ಕರ್ತವ್ಯವನ್ನು ಬಿಡಲಿಲ್ಲ. 'ಬೆಪ್ಪೊ' ಮತ್ತು 'ಮಝೆಪ್ಪಾ' ಎಂಬ ಕಥನ ಕವನಗಳನ್ನು ಬರೆದನು. ಆನಂತರ ಆತನ ಇನ್ನೊಂದು ಮಹಾಕೃತಿಯಾದ 'ಡಾನ ಜುವಾನ' ಎಂಬ ಕಾವ್ಯದ ಎರಡು ಸರ್ಗಗಳನ್ನು ಬರೆದನು.

ಈ ನಡುವೆ ಕ್ಲ್ಯಾರಳಿಗೆ ಒಂದು ಹೆಣ್ಣು ಹುಟ್ಟಿತು. ಕೂಸಿಗೆ ಎಲ್ಲೆಗ್ರಾ ಎಂದು ಹೆಸರಿಟ್ಟರು-ಷೆಲ್ಲಿ ಪರಿವಾರದವರು. ಇದು ನಡೆದದ್ದು ೧೮೧೭ ರಲ್ಲಿ. ಮರುವರ್ಷ ಆಕೆ ಷೆಲ್ಲಿಯೊಡನೆ ಇಟಲಿಗೆ ಬಂದಳು. ಎಲ್ಲೆಗ್ರಾಳನ್ನು ತಂದೆಯ ಬಳಿಗೆ ಕಳಿಸಲಾಯಿತು. ಬಾಯರನ್ನನು ಕ್ಲ್ಯಾರಳನ್ನು ತಿರಸ್ಕರಿಸಿದ್ದನು, ತಾತ್ಸಾರ ಮಾಡಿದ್ದನು. ಆದರೆ ಆಕೆಯ (ತನ್ನ) ಆ ಕೂಸನ್ನು ಬರಮಾಡಿಕೊಂಡು ಒಂದು ಕ್ರೈಸ್ತ ಮಹಿಳಾಶ್ರಮದಲ್ಲಿ ಇರಿಸಿದನು. ತಾಯಿ ಕೂಸಿಗಾಗಿ ಹಾತೊರೆದಳು; ಕೂಸಿನ ಪ್ರಕೃತಿ ಕೆಡುತ್ತಿದೆಯಾದ್ದರಿಂದ ತನ್ನನ್ನು ಒಂದು ಪರಿವಾರದೊಡನೆ ಒಳ್ಳೆ ಆರೋಗ್ಯದ ಹವೆಯ ಸ್ಥಳದಲ್ಲಿ ಇರಿಸಬೇಕೆಂದು ಬೇಡಿಕೊಂಡಳು. ಅವಳ ಪಕ್ಷವೆತ್ತಿ ಷೆಲ್ಲಿ ವಾದಿಸಿದನು. ಆದರೆ ಅವೆಲ್ಲ ವ್ಯರ್ಥವಾಯಿತು. ಬಾಯರನ್ನನು ನಿಷ್ಠುರವಾಗಿ ನಿರಾಕರಿಸಿದನು. ಕೂಸಿನ ಕುರಿತು ಅವನ ಮಮತೆಯೆಂಬುದು ವಿಚಿತ್ರವೇ ಅನ್ನಬೇಕು. ಹಟಕ್ಕೆ ಬಿದ್ದು ತಾಯಿಯಿಂದ ಕೂಸನ್ನು ಕಸಿದುಕೊಂಡನು. ಅವಳನ್ನು

ತನ್ನ ವೈಭವವಾಟಿಕೆಯಲ್ಲಿಟ್ಟುಕೊಳ್ಳದೇ ಉದಾಸೀನನಂತೆ ಒಂದು ಮಹಿಳಾಶ್ರಮದಲ್ಲಿ ಇರಿಸಿದನು; ಅನಂತರ ತಾಯಿಯು ಬೇಡಿದರೂ ಕೂಸನ್ನು ಆಕೆಗೆ ಒಪ್ಪಿಸಲಿಲ್ಲ. ಆಶ್ರಮದಿಂದ ತೆಗೆದು ಒಂದು ವಾತ್ಸಲ್ಯದ ಕುಟುಂಬದವರಲ್ಲಿಯೂ ಇಡಲಿಲ್ಲ. ಕೂಸು ೧೮೨೨ ರಲ್ಲಿ ತೀರಿಕೊಂಡಿತು. ಆಗ ಮಾತ್ರ ಬಾಯರನ್ನನು ನಿಜವಾಗಿಯೂ ದುಃಖಪಟ್ಟನು !

೧೮೧೯ ರಲ್ಲಿ ಬಾಯರನ್ನನು ಕೌಂಟೆಸ್ ಗ್ಯುಕಿಯೊಲಿ ಎಂಬಾಕೆಯನ್ನು ಭೆಟ್ಟಿಯಾದನು. ಆಕೆಯು ಒಬ್ಬ ೬೦ ವರ್ಷದ ವೃದ್ಧ ಸರದಾರನ ತೀರ ಹರೆಯದ ಹೆಂಡತಿ. ವ್ಹೆನಿಸದಲ್ಲಿ ಇರುವತನಕವೂ ಆಕೆಯು ಬಾಯರನ್ನನ ಪ್ರೇಯಸಿಯಾಗಿದ್ದಳು. ಮುಂದೆ ಆಕೆ ರವೆನ್ನಾಕ್ಕೆ ಹೋದಮೇಲೆ ತನ್ನ ಪ್ರಿಯತಮನನ್ನೂ ಅಲ್ಲಿಗೇ ಕರೆಯಿಸಿಕೊಂಡಳು. ರವೆನ್ನಾದಿಂದ ಬೊಲೊನಾಕ್ಕೆ. ಅಲ್ಲಿಂದ ಲಾಮಿರಾ ಎಂಬಲ್ಲಿಗೆ ಹೀಗೆ ಬಾಯರನ್ನ ಆಕೆಯನ್ನು ಕಂಪಿನ ಕರೆಗೆ ಸರಾಗವಾಗಿ ಸಾಗುವ ಭೃಂಗದಂತೆ ಹಿಂಬಾಲಿಸಿದನು. ಆಕೆ ಅವನನ್ನು ಮುಂದೆ ಜತೆಗೆಂದು ಒಯ್ದಿದ್ದಳು. ಲಾಮಿರಾದಲ್ಲಿ ಆತ ಪ್ರಕಟವಾಗಿ, ನೆರೆಹೊರೆಯವರು ಕಂಡು ಕೆರಳುವಂತೆ ಆಕೆಯೊಡನೆ ಅದೇ ಮನೆಯಲ್ಲಿ ವಾಸಿಸಿದನು. ಕೃದ್ಧನಾದ ಗಂಡನು ಬರುವತನಕ ! ಆದರೆ ಗಂಡ ಕೃದ್ಧನಾದರೇನು ? ಅವನು ವೃದ್ಧನೆಂಬುದು ಹರೆಯದ ಹೆಂಡತಿಗೆ ಗೊತ್ತು. ಆಕೆ ಚಾತುರ್ಯದಿಂದ ಆ ಪ್ರಸಂಗವನ್ನು ಪಾರು ಮಾಡಿದಳು. ನಮ್ರಳಾಗಿ ಪತಿಯೊಡನೆ ತಿರುಗಿ ರವೆನ್ನಾಕ್ಕೆ ಹೋದಳು. ಆದರೆ ಕೆಲವೇ ತಿಂಗಳುಗಳಲ್ಲಿ ಬಾಯರನ್ನನನ್ನು ಮತ್ತೆ ಅಲ್ಲಿಗೆ ಕರೆಯಿಸಿಕೊಂಡಳು ! ೧೮೨೦ ರ ಜುಲೈ ತಿಂಗಳಲ್ಲಿ ಪ್ರಸಂಗವು ಬಿಕ್ಕಟ್ಟಿಗೆ ಇಟ್ಟಿತು. ಪೋಪನು ಕೌಂಟೆಸ್‌ಳ ಲಗ್ನವಿಚ್ಛೇದಕ್ಕೆ ಒಪ್ಪಿಗೆ ಇತ್ತನು. ಕೌಂಟೆಸ್ಸ್ನ ರವೆನ್ನಾದಲ್ಲಿಯೇ ತಂದೆಯೊಡನೆ ಇರಹತ್ತಿದಳು.

ಮರುವರ್ಷ ಅವನು 'ಸಾರ್ದಾನಾಪಲ್ಸ್' ಮತ್ತು 'ಕೇನ' ಎಂಬ ಕಾವ್ಯಗಳನ್ನು ಬರೆದನು. ಕಾವ್ಯವನ್ನು ಬರೆಯುತ್ತಿದ್ದಾಗಲೇ ಬಾಯರನ್ನನು ಕೌಂಟೆಸ್ಸಳ ತಂದೆಯಾದ ಗ್ಯಾಂಬಾನ ಪರಿವಾರದೊಡನೆ ಕೂಡಿ ಆಸ್ಟ್ರಿಯಾದ ಸತ್ತೆಯ ವಿರುದ್ಧ ಒಳಸಂಚು ನಡೆಯಿಸಿದನು. ಆದರೆ ಆ ಸಂಚು ಹುಸಿ ಹೊಂಚಾಯಿತು. ಬಾಯರನ್ನನು ಬ್ರಿಟಿಶ ಲಾರ್ಡನಿದ್ದುದರಿಂದ ಯಾವ ದಂಡನೆಗೂ ನಿಲುಕಲಿಲ್ಲ. ಆದರೆ ಗ್ಯಾಂಬಾ ಪರಿವಾರವು ದೇಶಭ್ರಷ್ಟವಾಯಿತು. ಇದೇ ಸಮಯದ ಇಂಗ್ಲಂಡದಲ್ಲಿ ಪ್ರಕಟಿಸಲ್ಪಟ್ಟ 'ಕೇನ' ಕಾವ್ಯವು ಇನ್ನೊಂದು ಬಿರುಗಾಳಿಯನ್ನೇ ಎಬ್ಬಿಸಿತು. ಧಾರ್ಮಿಕ ಸನಾತನಿಗಳೆಲ್ಲರೂ ಅದನ್ನು ಕಟುವಾಗಿ ಉಗ್ರವಾಗಿ ಟೀಕಿಸಿದರು.

ಸಮಯದಲ್ಲಿ ಬಾಯರನ್ ಹೇಗಿದ್ದನೆಂಬುದಕ್ಕೆ ನಮಗೆ ಎರಡು ವ್ಯಕ್ತಿಚಿತ್ರಗಳು
ೊರೆಯುತ್ತವೆ. ಮೂರ್ ಎಂಬ ಒಬ್ಬ ನರಕವಿಯು ಈ ವರಕವಿಯನ್ನು
ೇನಿಸದಲ್ಲಿ ಭೆಟ್ಟಿಯಾದನು; (ವಿದ್ಯೆ ತೋರಿಸಲಿಕ್ಕೆ ಅಲ್ಲ!) ಅವನು ತನ್ನ
ಸಹನ್ನು ನಿವೇದಿಸಿದ್ದಾನೆ. 'ಆಗ ಬಾಯರನ್ನನು ಮೈಕಟ್ಟಿನಲ್ಲಿಯೂ ಮುಖ
ಲ್ಲಿಯೂ ಸ್ಥೂಲನಾಗಿದ್ದನು. ಮುಖಚರ್ಯೆಯು ವಿಶೇಷ ಮಾರ್ಪಟ್ಟಿತ್ತು. ಮುಖ
ಕ್ಷಣಗಳೆಲ್ಲ ವಿಸ್ತಾರಗೊಂಡ ಮೂಲಕ ಹಿಂದೆ ಒಡೆದದ್ದು ಒಪ್ಪುವ ಒಂದು
ರಿಷ್ಕೃತ ಭಾವವೂ ಅಧ್ಯಾತ್ಮಿಕವೋ ಎನ್ನುವಂಥ ಕಳೆಯೂ ಈಗ ಲೋಪವಾಗಿತ್ತು.
ದರೂ ಅವನು ಹಿಂದಿನಗಿಂತ ಅದ್ಭುತ ರಮ್ಯತೆಯಲ್ಲಿ ಕಡಿಮೆಯಾಗಿದ್ದರೂ
ನೋದವೃತ್ತಿಯಿಂದ ವಿಶೇಷವಾಗಿ ಶೋಭಿಸುತ್ತಿದ್ದನು.' ಈ ಚಿತ್ರ ೧೮೧೯ ನೇ
ರ್ಷದ್ದು. ಇನ್ನು ೧೮೨೦ ನೇ ವರ್ಷದ ಅವನ ವ್ಯಕ್ತಿಚಿತ್ರವನ್ನು ನೋಡಿರಿ.
ದನ್ನು ಚಿತ್ರಿಸಿದವನು ಇನ್ನೊಬ್ಬ ವರಕವಿ-ಇನ್ನಾರೂ ಅಲ್ಲ, ಷೆಲ್ಲಿ. ಅವನು
ಾಯರನ್ನನನ್ನು ರವೆನ್ನಾದಲ್ಲಿ ಕಂಡು ಹೀಗೆ ಬರೆದಿಟ್ಟಿದ್ದಾನೆ:–'ಲಾರ್ಡ ಬಾಯರನ್ನ
ಪ್ರತಿಯೊಂದು ರೀತಿಯಿಂದಲೂ ಬಹಳ ಸುಧಾರಿಸಿದ್ದಾನೆ-ಪ್ರತಿಭೆಯಲ್ಲಿ,
ನಃಸ್ಥಿತಿಯಲ್ಲಿ, ನೈತಿಕ ಅಭಿಪ್ರಾಯಗಳಲ್ಲಿ, ಆರೋಗ್ಯದಲ್ಲಿ ಮತ್ತು ಸೌಖ್ಯದಲ್ಲಿ.
ಕಿಯೊಲಿಯೊಡನೆ ಆತನ ಸಂಪರ್ಕವು ಅವನಿಗೆ ಅಮಿತ ಕಲ್ಯಾಣವನ್ನು ಮಾಡಿದೆ.
ವನು ಬೇಕಷ್ಟು ಸಡಗರದಲ್ಲಿ ಬಾಳುತ್ತಿದ್ದಾನೆ; ಆದರೆ ತನ್ನ ಗಳಿಕೆಯನ್ನು
ೀರುವದಿಲ್ಲ.'

ವರ್ಷದ ಕೊನೆಯಲ್ಲಿ ಬಾಯರನ್ನನು ತನ್ನ ಪ್ರಿಯತಮೆಯೊಡನೆ ಪಿಸಾಕ್ಕೆ
ೋಗಿ ಉಳಿದನು. ಅಲ್ಲಿ ಷೆಲ್ಲಿ ಕುಟುಂಬ ಅವನ ನೆರೆಹೊರೆಯಾಯಿತು. ಷೆಲ್ಲಿ
ಯರನ್ನನನ್ನು ಕವಿಯೆಂದು ಮೆಚ್ಚಿದ್ದನು; ಬಾಯರನ್ನನಿಗೆ ಷೆಲ್ಲಿಯು
ಾನವನೆಂದು ಸೇರುತ್ತಿದ್ದನು. ಟ್ರೆಲೊನಿಯು ಈ ಗುಂಪನ್ನು ಸೇರಿದನು.
ಂತರ ಲ್ಹಿ ಹಂಟ ಕುಟುಂಬದೊಡನೆ ಬಂದು ಕೂಡಿದನು. ಷೆಲ್ಲಿಯೇ ಲ್ಹಿಗೆ
ಟಲಿಗೆ ಬರಲು ಆಮಂತ್ರಣವಿತ್ತಿದ್ದನು. (ಇದರ ವಿದ್ಯಮಾನವೆಲ್ಲ ಹಿಂದೆ
ಲ್ಲಿಯ ಚರಿತ್ರದಲ್ಲಿ ಬಂದಿದೆ.)

ಲ್ಲಿಯ ಜಲಸಮಾಧಿಯ ದುರಂತ ನಡೆದುಹೋದ ಮೇಲೆ, ಬಾಯರನ್ನನು
ಟ ಪರಿವಾರವನ್ನು (ಹಂಟನ ಆರು ಮಕ್ಕಳೂ ಕೂಡಿ!) ಜಿನೇವಾಕ್ಕೆ
ಲಾಂತರಿಸಿದನು. ಅವರೀರ್ವರೂ 'ಲಿಬರಲ್' ಎಂಬ ಮಾಸಿಕವನ್ನು ಲಂಡನ್ನಿನಿಂದ
ೊರಡಿಸಲು ಆರಂಭಿಸಿದ್ದರು. ಅದು ಅಪಯಶಸ್ವಿಯಾಯಿತು. ಮುಂದೆ
ರೀರ್ವರೂ ಜಗಳಾಡಿದರು. ಬಾಯರನ್ ಹಂಟರಲ್ಲಿ ಯಾವ ಸಮಾನ
ರ್ಷವೂ ಇದ್ದಿಲ್ಲ; ಒಬ್ಬರಿಗೊಬ್ಬರು ಸಾಕಷ್ಟು ಪರಿಚಿತರೂ ಆಗಿದ್ದಿಲ್ಲ. ಷೆಲ್ಲಿಯ

ದಾಕ್ಷಿಣ್ಯಕ್ಕೆ ಬಾಯುರನ್ನ ಹಂಟನನ್ನು ಅವನ 'ಪ್ರಜಾಜನ'ವನ್ನು ರಕ್ಷಿಸುವ -
'ಲಿಬರಲ್' ಉದ್ಯೋಗವನ್ನು ಕೈಕೊಂಡಿದ್ದನು. ಆದರೂ ಜಗಳದ ಕೊನೆ
ಅವರನ್ನು ಬಾಯುರನ್ ಅಟ್ಟಿ ಹಾಕಲಿಲ್ಲ. ಜಿನೋವಾ ಬಿಟ್ಟುಹೋಗುವ ತನಕವ
ಹಂಟ ಕುಟುಂಬ ಬಾಯುರನ್‌ನ ಉದಾರಾಶ್ರಯದಲ್ಲಿಯೇ ಉದರಪೋಷಣೆಯನ
ಪಡೆಯಿತು.

ಈ ನಡುವೆ ಅವನು 'ಡಾನಜ್ಯುವಾನ' ದ ಕವನಕಾರ್ಯವನ್ನು ಮತ್ತೆ ಮುಂದ
ವರಿಸಿದನು. ಗ್ಯುಕಿಯೊಲಿಯ ಬಿನ್ನಹದಿಂದ ಅದನ್ನು ಅವನು ಬದಿಗಿರಿಸಿದ್ದನು
ಕಾವ್ಯವನ್ನು ಬಾಳುವ ಭರದಲ್ಲಿ ಕಾವ್ಯವನ್ನು ಬರೆಯುವ ತ್ವರೆ ಯಾರಿಗೆ ? ಆದ
ಈಗ ಆ ಅಮೋಘ ಮಹಾಕೃತಿಯ ಉಳಿದ ಸರ್ಗಗಳನ್ನು ಅವನು ಧಾರಾಕಾ
ವಾಗಿ ಬರೆದು ತೆಗೆದನು.

ಇದೇ ಸಮಯ, ಗ್ರೀಸದಲ್ಲಿ ತುರ್ಕರ ವಿರುದ್ಧ ಸ್ವಾತಂತ್ರ್ಯಯುದ್ಧವು ಘನಘೋ
ವಾಗಿ ನಡೆದಿತ್ತು. 'ಗ್ರೀಸ' ಎಂದೊಡನೆ ಬಾಯುರನ್ನನಿಗೆ ಮೈನಿಮಿರೇಳುತ್ತಿತ್ತು
ಮಾನವ ಪ್ರಪಂಚಕ್ಕೇ ಸ್ವಾತಂತ್ರ್ಯವನ್ನು ದಯಪಾಲಿಸಿದ ಆ ಪ್ರಾಚೀನ ದೇಶ
ಸ್ವಾತಂತ್ರ್ಯದ ಕನಸು ಬಾಯುರನ್ನನಲ್ಲಿ ಉತ್ತೇಜನವನ್ನುಂಟುಮಾಡಿತು. ಅವನ
ಕೂಡಲೇ ಆ ಮಹಾಯಜ್ಞದಲ್ಲಿ ಧುಮುಕಿದನು. ಲಂಡನ್ನಿನಲ್ಲಿ ಗ್ರೀಕರ ಸಹಾ
ಯಾರ್ಥವಾಗಿ ಒಂದು ಸಮಿತಿಯು ಏರ್ಪಟ್ಟಿತ್ತು. ಅದರೊಡನೆ ಪತ್ರವ್ಯವಹಾ
ವನ್ನು ಮಾಡಿ, ತನ್ನ ಹಣವನ್ನೆಲ್ಲ ಆ ಸ್ವಾತಂತ್ರ್ಯಯುದ್ಧದ ಸೈನಿಕರಿಗೆ ಉದಾ
ಅಂತಃಕರಣದಿಂದ ಸಮರ್ಪಿಸಿ, ೧೮೨೩ ರ ಜುಲೈ ತಿಂಗಳಲ್ಲಿ ಅವನು ಗ್ರೀಸ
ಪಯಣಬೆಳೆಸಿದನು.

ಈ ಮಹಾಕವಿಯ ಧೈರ್ಯ, ಔದಾರ್ಯ, ವಿಚಾರಗಾಂಭೀರ್ಯ ಮತ್ತ
ನಾಮಾಂಕಿತ ಶ್ರೇಯ ಇವೆಲ್ಲವೂ ಗ್ರೀಕ ಬಂಡುಗಾರರಿಗೆ ವೀರಾವೇಶ
ಸ್ಫೂರ್ತಿಯನ್ನೇ ತಂದವು. ಆದರೆ ಆ ಸ್ಫೂರ್ತಿಯ ಅಂತ್ಯವೂ ಸಮೀಪಿಸಿತ್ತು
ಗ್ರೀಕಬಂಡುಗಾರರ ಮುಂದಾಳುವಾದ ರಾಜಪುತ್ರ ಮಾವ್ರೊಕೊರ್ಡೆಟೊನನ
ಬಾಯುರನ್ನನು ಕೂಡಿದ ಕೆಲವು ತಿಂಗಳುಗಳಲ್ಲಿಯೇ ಅವನ ಆರೋಗ್ಯವು ಕೆಟ್ಟಿತು
ಅವನು ಜ್ವರವೇರಿ ಕಾಯಿಲೆಬಿದ್ದನು. ಎಪ್ರಿಲ ೧೯ ಕ್ಕೆ ಶಿಬಿರದಲ್ಲಿ ಕೂಗೆದ್ದಿತು
ಆ ಕೂಗು ಗ್ರೀಸ ದೇಶದಲ್ಲೆಲ್ಲ ಪ್ರತಿಧ್ವನಿಗೊಂಡಿತು. ಆ ಧ್ವನಿಯು ಯುರೋಪ
ಹೃದಯವನ್ನು ಭೇದಿಸಿತು. 'ಬಾಯುರನ್ನ ಮಡಿದನು.' ಎಂಬ ಸುದ್ದಿ ಸಂಸಾರ
ಸಾಹಿತ್ಯಕ್ಕೆ ಸೂತಕವನ್ನು ತಂದಿತು.

ಭೂಪತಿಯು ಕವಿಯಾದದ್ದುಂಟು. ಕವಿಯು ಚಮೂಪತಿಯಾದದ್ದು ಉಂಟು. ವಿಲಾಸಿಯು ತುಲಸೀದಾಸನಾದದ್ದುಂಟು. ಕಾಲಿದಾಸನು ವಿಲಾಸಿಯಾಗಿದ್ದುಂಟು. ಆದರೆ ವೈಲಾಸಿಕ ವಿಟವೃತ್ತಿಯು, ಏನಾದರೂ ವೀರಹೃದಯದ ಒಬ್ಬ ವರಕವಿಯು ತನ್ನ ದೇಶದಲ್ಲಿ ಕಲಂಕವನ್ನು ತೊಟ್ಟು ನಿರ್ವಾಸಿತನಾದರೂ, ದೂರದ ಒಂದು ದಲಿತ ರಾಷ್ಟ್ರದ ದಾಸ್ಯವಿಮೋಚನೆಯ ಕರೆಗೆ ಕಿವಿಗೊಟ್ಟು ಧಾವಿಸಿ ಹೋಗಿ ಸ್ಮರರಂಗದಿಂದ ಸಮರರಂಗಕ್ಕೆ ಅಷ್ಟೇ ಲೀಲೆಯಿಂದ ಅಡಿ ಇಟ್ಟದ್ದು, ಮತ್ತು ಸ್ವದೇಶಕ್ಕೆ ಲಜ್ಜೆಯ ಲಾಂಛನನಾದರೂ ಪರದೇಶದ ಸ್ವಾತಂತ್ರ್ಯ ಯುದ್ಧಕ್ಕೆ ಸ್ಫೂರ್ತಿಯ ಕೇತನನಾಗಿ ಮೆರೆದದ್ದು ಮೆರೆಸು ಮಡಿದದ್ದು ಇದೊಂದೇ ಉದಾಹರಣೆಯು.

ಅಸಾಮಾನ್ಯನೂ, ಔದಾರಿಯೂ, ಅದ್ಭುತರಮ್ಯನೂ ಆದ ಈ ವ್ಯಕ್ತಿಯು ಯುರೋಪದ ಆಕಾಶದಲ್ಲಿ ಉಲ್ಕೆಯಂತೆ ಉಜ್ವಲವಾಗಿ ಉರಿದು ಬಿದ್ದು ಮಾಯ ವಾದನು. ಯುರೋಪದ ಅಂದಿನ ಮನಃಸ್ಥಿತಿಗೆ ಅವನ ಕಾವ್ಯವು ಚೆನ್ನಾಗಿ ನಾಟಿತು. ಶಾಪ ಭ್ರಷ್ಟ ದೇವತೆಯಂತೆ ಬಾಯರನ್ನನ ಚರಿತ್ರವಾಯಿತು. ರೂಪಸುಂದರನಿದ್ದು ಕೊಂಡ ಪಾದದ ಕುಂಟನಾದನು; ಲಾರ್ಡ ಕುಲದವನಿದ್ದು, ಪೂರ್ವಜರ ಸಾಲಕ್ಕೆ ಭಾರವಾಗಿ ಒತ್ತೆಯಾದ ಸಿರಿವಂತಿಕೆಯ ದಾರಿದ್ರ್ಯವನ್ನು ಪಡೆದನು; ವಾತ್ಸಲ್ಯದ ತಾಯಿ ಇದ್ದರೂ ಆಕೆಯ ವಿಕಾರಗೆಟ್ಟ ಉಗ್ರವೃತ್ತಿಗೆ ಅವನು ಹೇಸಿದನು; ಅನೇಕ ಕುಲೀನ ಚೆಲುವೆಯರ ಪ್ರಣಯಪೂಜೆಯ ಕಾಮದೇವನಾಗಿದ್ದರೂ, ಏಕಾಕಿಯಾಗಿ ದುರ್ದೈವಿಯಾಗಿ ಬಾಳಿದನು; ಮದುವೆಯಾದರೂ ಮಡದಿಯನ್ನು ಒಲಿಸಿಕೊಳ್ಳ ಲಾರದೇ ಹೋದನು. ಇಂಗ್ಲಂಡದ ಕವಿಯಾದರೂ ಆಂಗ್ಲ ಕಾವ್ಯ ಸಾಂಪ್ರದಾಯಕ್ಕೆ ಆದರ್ಶನಾಗದೆ ಹೋದನು. ಸಾಹಿತ್ಯಕ್ಕೆ ಭೂಷಣನಾದರೂ ಸ್ವದೇಶಕ್ಕೆ ದೂಷಣ ಎನಿಸಿದನು ! ಹೀಗಿದ್ದರೂ ಬೇರೆ ಯಾವ ಕವಿ ತನ್ನ ಜೀವಮಾನದಲ್ಲಿ ಬಾಯರನ್ನ ನಷ್ಟು ಲೌಕಿಕ ಮತ್ತು ಆರ್ಥಿಕ ಯಶಸ್ಸನ್ನು ಸಂಪಾದಿಸಿಲ್ಲ. ಅವನ ಪ್ರತಿಭೆಯು ಯುರೋಪದ ಸಾಹಿತ್ಯಕ್ಕೆ ಸ್ಫೂರ್ತಿಯನ್ನು ನೀಡಿತು. ಹ್ಯೂಗೋ, ಲ್ಯಾಮಾರ್ಟಿನ, ಹೈನ್, ಪುಷ್ಕಿನ್, ಇವರೆಲ್ಲ ಅವನನ್ನು ತಮ್ಮ ಕಾವ್ಯಗುರುವಾಗಿ ಮನ್ನಿಸಿದರು. ವರ್ಣರಂಜಿತ ಕಥನಕ್ಕಾಗಿ, ಅದಕ್ಕೂ ಹೆಚ್ಚು, ಉಪರೋಧ ವ್ಯಂಗ್ಯದ ಪ್ರಭುತ್ವ ಕ್ಕಾಗಿ ನಾವು ಅವನ್ನೇ ಓದುತ್ತೇವೆ. ಅವನ ಹಿರಿಮೆಯು ಅವನ ಕಾವ್ಯದ ಪ್ರಭಾವದಲ್ಲಿದ್ದಂತೆಯೇ ಅದರ ವಸ್ತುವಿನಲ್ಲಿಯೂ ನೆಲೆಸಿದೆ. ೧೯ನೆಯ ಶತಮಾನದ ಯುರೋಪ್ಯ ಸಾಹಿತ್ಯದ ಕ್ಷಿತಿಜದ ಮೇಲೆ ಲಾರ್ಡ ಬಾಯರನ್ನನಿಗಿಂತಲೂ ಭವ್ಯವಾಗಿ ನಿಂತ ಮಹಾವ್ಯಕ್ತಿ ಬೇರೆ ಇಲ್ಲ !

ಸತ್ಯಾರ್ಥಿ

ಮಿಂಚಿನಬಳ್ಳಿ ಪ್ರಕಾಶನ, ಧಾರವಾಡ

೧೯೫೩

# ವಿಜ್ಞಾನ ಪ್ರತಿಭೆ

* ಸರ್ ಐಸಾಕ್-ನ್ಯೂಟನ್
* ಲುಯಿ ಪಾಶ್ಚರ
* ಥೋಮಸ್ ಎಡಿಸನ್

# ಸರ್ ಐಸಾಕ್ ನ್ಯೂಟನ್

ಇಂಗ್ಲಂಡದಲ್ಲಿ ಎಲ್ಲೆಡೆ ಸಮರಸನ್ನಾಹ. ಎಂಥ ಸಮರ ? ಹಗೆ ಯಾರು ? ರಾಜನ ವಿರುದ್ಧ ಪ್ರಜೆಗಳ ಬಂಡಾಯ. ರಾಜಪಕ್ಷದವರು ಪ್ರಜಾಪ್ರತಿನಿಧಿಗಳು, ಬಡವರು, ಮೇಲ್ವರ್ಗದವರು, ರೈತರು, ಪಟ್ಟಣಿಗರು, ಎಲ್ಲರೂ ಕೈಗೆಸಿಕ್ಕ ಆಯುಧಗಳನ್ನು ಎತ್ತಿ ತಮ್ಮ ಹಕ್ಕುಹಿತಗಳ ರಕ್ಷಣೆಗಾಗಿ ಹೋರಾಡಲು ಹೊರಟ ಸಮಯ— ೧೬೪೨ ನೇ ವರ್ಷದ ಕ್ರೈಸ್ತ ಜನ್ಮೋತ್ಸವದ ದಿನಗಳವು. ಆದರೆ ಅಂಥ ದೇಶದ ಉದ್ದಕ್ಕೂ ಹುಚ್ಚೆದ್ದು ಹಬ್ಬಿದ ಸುಂಟರಗಾಳಿಯ ನಡುವೆಯೂ ಲಿಂಕನ್‌ಶಾಯರ ಪರಗಣೆಯ ವೂಲ್ಸಿಥ್ರೋಪ ಎಂಬ ಹಳ್ಳಿಯಲ್ಲಿ ಎಲ್ಲವೂ ಶಾಂತವಿತ್ತು. ಅಲ್ಲಿಯ ಜನಕ್ಕೆ ಯುದ್ಧವಾಗಲೀ ಯುದ್ಧದ ವಾರ್ತೆಯಾಗಲೀ ಗಾಬರಿಗೊಳಿಸಿದ್ದು ಕಾಣಲಿಲ್ಲ. ಹಾಗೆಯೇ ಅವರು ಇಂಗ್ಲಂಡದ ಭಾವೀ ಜೀವನದ ಮೇಲೆ ಮಹತ್ವದ ಪರಿಣಾಮವನ್ನುಂಟುಮಾಡುವ, ಇನ್ನೊಂದು ಘಟನೆಯ ಕುರಿತೂ ಅಷ್ಟೇ ಉದಾಸೀನರಿದ್ದರು. ಆ ಘಟನೆಯೆಂದರೆ, 'ಸ್ವದೇಶ ಪೂಜ್ಯ'ನೆಂದುಕೊಂಡ ರಾಜನೇ ತನ್ನ ರಾಜ್ಯದಲ್ಲಿ ಕಳೆಗುಂದುತ್ತಿರುವಾಗ 'ಸರ್ವತ್ರ ಪೂಜ್ಯ'ನಾಗುವ ವಿಜ್ಞಾನಿಯು ಹುಟ್ಟಿಬಂದನು. ಕ್ರೈಸ್ತನ ಹುಟ್ಟುಹಬ್ಬದ ದಿನವೇ ವೂಲ್ಸಿಥ್ರೋಪ ದಲ್ಲಿ ಹ್ಯಾನ್ನಾನ್ಯೂಟನ ಎಂಬಾಕೆಯು ಗಂಡು ಶಿಶುವನ್ನೊಂದು ಹೆತ್ತಳು. ವಿಜ್ಞಾನದ ವಿಯತ್ತಳದಲ್ಲಿ ಹೊಸ ಚುಕ್ಕೆಯೊಂದು ಮೂಡಿ ಬಂದಿತು. ಸತ್ಯ ಶೋಧದ—ವಿಶ್ವದ ಆಧಾರ ಶಕ್ತಿಯನ್ನು ಕಂಡುಕೊಳ್ಳುವ ಜ್ಞಾನೋದಯದ ಅಮೃತ ಸಿದ್ಧಿಯೋಗವೊಂದು ಕೂಡಿಬಂದಿತು. ಆ ಗಂಡು ಶಿಶುವೇ ಐಸಾಕ್.

ಗುರುತ್ವಾಕರ್ಷಣದ ಗುರುತರವಾದ ರಹಸ್ಯದ ದ್ರಷ್ಟಾರನು ಐಸ್ಯಾಕ್ ನ್ಯೂಟನ್. ಸೂರ್ಯ, ಚಂದ್ರ, ಪೃಥ್ವಿಯೇ ಮುಂತಾದ ಗ್ರಹನಕ್ಷತ್ರಗಳ ಜ್ಯೋತಿರ್ಮಂಡಳ ವನ್ನು ಎತ್ತಿಹಿಡಿದು ಸುತ್ತಾಡಿಸುವ ಶಕ್ತಿಯು, ಈ ಋಷಿಯ ಜ್ಞಾನದೃಷ್ಟಿಗೆ ಹೊಳೆಯಿತು. ಇವನು ಇಂಗ್ಲಂಡದ ಸರ್ವಶ್ರೇಷ್ಠ ಗಣಿತಜ್ಞನೆಂದು ಮಾತ್ರ ತಿಳಿಯುವದು, ಅವನ ಕಾರ್ಯಗೌರವಕ್ಕೆ ಒಂದು ಕುಂದು. ಕೇವಲ ೨೪ ವರ್ಷದ ವಯಸ್ಸಿಗೆ ಆತನು ಗಣಿತ ಶಾಸ್ತ್ರದ ಹೊಸ ಎರಡು ಸಿದ್ಧಾಂತಗಳನ್ನು— 'ಬೈನೊಮಿಯಲ್' ಪ್ರಮೇಯ ಮತ್ತು 'ಇಂಟೇಗ್ರಲ್ ಕ್ಯಾಲ್‌ಕ್ಯುಲಸ್'ದ ತತ್ವವನ್ನು—ಶೋಧಿಸಿ ಜಗತ್ತಿಗೆ ಸಾರಿದನು. ಹೀಗೆ ಬರೆ ಲೆಕ್ಕಿಗತನದ ಮಟ್ಟಿಗೇ ಅವನ ವಿಕ್ರಮವು ಮುಗಿಯಿತೇ ? ಇಲ್ಲ. ಅವನ ಕಲ್ಪಕ ಪ್ರತಿಭೆಯು ಹೊಸ ಮಾಪರಿಯ ದೂರದರ್ಶಕವನ್ನು ಕಂಡುಕೊಂಡಿತು. ಈ ಶೋಧದಿಂದ ಆತನ

ಯೋಗ್ಯತೆಯನ್ನು ಅಂದಿನ ಆಂಗ್ಲ ವಿಜ್ಞಾನಿಗಳ ಶ್ರೇಷ್ಠ ಮಂಡಳವಾದ ರಾಯಲ್ ಸೊಸೈಟಿಯು ಕಂಡು ಹಿಡಿದು, ಮುಂದೆ ೨೫ ವರ್ಷಕಾಲ ಅವನನ್ನೆ ತನ್ನ ಮಂಡಳಕ್ಕೆ ಅಧ್ಯಕ್ಷನನ್ನಾಗಿ ಮಾಡಿಕೊಂಡಿತು. ಇದಕ್ಕಿಂತ ಹೆಚ್ಚಿನ ಗುಣಗೌರವ ಇನ್ನಾವದು ? ಅಲ್ಲದೆ ಸರಕಾರವು ಅವನಿಗೆ 'ಸರ್' ಎಂಬ ಪದವಿಯನ್ನೂ ಕೊಟ್ಟು ಗೌರವಿಸಿತು. ನಿಸರ್ಗದ ನಿಯಮಗಳನ್ನು, ಪ್ರಕೃತಿಯ ನಿಯತಿಯನ್ನು ಅರಸಿ, ಅರಿತು, ಅರ್ಥಮಾಡಿ ಹೇಳಿ ಜಗತ್ತಿನ ಯಂತ್ರವಿದ್ಯೆಗೆ ಹೊಸ ಮಂತ್ರ ಶಕ್ತಿಯ ವರವನ್ನೇ ಹರಸಿದ ಈ ಮಹಾಪುರುಷ.

ನ್ಯೂಟನ್‌ನ ಜನನವಾದ ಮೂರು ವರ್ಷಗಳಲ್ಲಿಯೇ ಆತನ ತಾಯಿಯು ಮತ್ತೆ ಮದುವೆ ಆದಳು. ಅವನ 'ಮಲತಂದೆ' ಬಾರ್ನಬಾಸ್‌ಸ್ಮಿಥ್ ಎಂಬವನು; ಲಿಂಕನ್ ಶಾಯರ ತಾಲೂಕಿನಲ್ಲಿ ಒಬ್ಬ ಧರ್ಮಾಧಿಕಾರಿ. ತಾಯಿ ಅಲ್ಲಿಗೆ ಅವನ ಸಂಸಾರ ವನ್ನು ಹೂಡಲು ಹೊರಟು ಹೋದಳು. ಬಾಲ ಐಸಾಕ್ ಅಜ್ಜಿಯ ಮನೆಯಲ್ಲಿ ಯೇ ಉಳಿದನು. ಅಲ್ಲಿ ಜಗತ್ತಿನ ಎಲ್ಲ ಅಜ್ಜಿಗಳ ಮೊಮ್ಮಕ್ಕಳಂತೆಯೇ ಈ ಹುಡುಗನೂ ತುಂಬ ಮುದ್ದಾಟದ ಮರಿಯಾಗಿ ಬೆಳೆದನು. ಇದರ ಪರಿಣಾಮ ಎಂದರೆ, ಓದಿನ ಕುರಿತು ತುಂಬ ತಲೆಬೇಸರವನ್ನೂ ಓರಿಗೆಯವರಲ್ಲಿ ನಾಚಿಕೆ ಯನ್ನೂ ನ್ಯೂಟನ್ ತೋರ್ಪಡಿಸಿದನು. ಮುದ್ದುಗೆಡಿಸಿದ ಮಕ್ಕಳು-ಒಂದು ತುಂಟರೂ ಜಗಳಗಂಟರೂ ಆಗುವದುಂಟು, ಇಲ್ಲವೆ ತಲೆತಗ್ಗಿಸುವ ಅಂಜುಬುರುಕ ಳುಬುರುಕರಾಗಿ ಹಿಂಜರಿಯುವದೂ ಉಂಟು.

ದರೆ ಒಂದು ದಿನ ಒಮ್ಮೆಲೆ ಒಂದು ಮಾರ್ಪಾಟವಾಯಿತು. ಈ 'ಹಿಂಜರಿವ ಂಜಿಕೆಯ' ನಾಚುಬುರುಕನಿಗೆ ಅವನ ವರ್ಗದ ಒಬ್ಬ ತುಂಟ ಗಂಟು ಬಿದ್ದನು. ಪ್ರತಿಶಾಲೆಯಲ್ಲಿಯೂ ಪ್ರತಿವರ್ಗದಲ್ಲಿಯೂ ಪುಂಡನೊಬ್ಬನು ಇದ್ದೇ ಇರುತ್ತಾನೆ. ಂಥ ಪುಂಡ ಮಿಸ್ಟರ್ ಸ್ಟೋಕ್ಸನು ಗ್ರಾಮಶಾಲೆಯಲ್ಲಿಯೂ ಇದ್ದನು. ಅವನ ೃಷ್ಟಿ ಈ ಬಡ ಹುಡುಗನ ಮೇಲೆ ಬಿದ್ದಿತು. ಸಂಗಡಿಗರಿಲ್ಲದೆ ಒಂಟಿಯಾಗಿ ಲೆಯುವ 'ಮಗು' ಐಸಾಕನು ಆ ಪುಂಡನಿಗೆ ಯೋಗ್ಯ ಬಲಿಯಾಗಿ ಕಂಡನು. ವನು ಕಾಲುಕೆದರಿ ಜಗಳಕ್ಕೆ ಮೊದಲು ಮಾಡಿದನು. ಐಸ್ಯಾಕನನ್ನು ಅಡ್ಡಗಟ್ಟಿ ಂಜತಟ್ಟಿ ಅವನ ಶಾಂತವೃತ್ತಿಯನ್ನು ಕೆಣಕಿದನು. ನ್ಯೂಟನ್ ಸೌಮ್ಯನಾಗಿದ್ದರೂ ಶಕ್ತನಾಗಿದ್ದಿಲ್ಲ. ಹೇಡಿಯೂ ಇದ್ದಿಲ್ಲ. ಮೈಮೇಲೆ ಪ್ರಸಂಗವೇ ಬಂದಾಗ ಆತನೂ ಕಸ್ಮಾತ್ತಾಗಿ ತನ್ನ ಕೈಯನ್ನು ತೋರಿಸಿಯೇ ಬಿಟ್ಟ. ತಾನಾಗಿ ತಂದುಕೊಂಡ ಆ ಂದ್ವದಲ್ಲಿ ಪುಂಡನು ಸೋತು ನೆಲಕ್ಕೆ ಕುಪ್ಪಳಿಸಿದನು.

ಕ್ಷಣಕ್ಕೆ ನ್ಯೂಟನ್‌ನಿಗೆ 'ಆತ್ಮಜ್ಞಾನ'ವಾಯಿತು. ತನ್ನ ಬಲ ತಿಳಿಯಿತು. ತನ್ನ

ಶಕ್ತಿಯ ಅರಿವಿನೊಡನೆ ಆತನಲ್ಲಿ ಆತ್ಮವಿಶ್ವಾಸ ಕುದುರಿತು. ಅದರಿಂದ ಅವನನ್ನು ಓರಿಗೆಯ ಒಡನಾಡಿಗಳು ಓಲೈಸ ತೊಡಗಿದರು. ವರ್ಗದಲ್ಲಿಯೂ ವರ್ಗದ ಪಾಠ ಪುಸ್ತಕಗಳಲ್ಲಿಯೂ ತನ್ನ ಅಭ್ಯಾಸದಲ್ಲಿಯೂ ಆತನ ಆಸಕ್ತಿ ಬೆಳೆಯಿತು. ಕೆಲವೇ ವಾರಗಳಲ್ಲಿ ಆತ ಹಿಂದುಳಿದ ಪಾಠಗಳನ್ನೆಲ್ಲ ಅರಗಿಸಿಕೊಂಡು ವರ್ಗಕ್ಕೆ ಸಮವಾಗಿ ಬಂದನು. ಒಂದು 'ಅಯನ'ದ ಅಂತ್ಯಕ್ಕೆ ಆತ ವರ್ಗದ ಅಗ್ರಸ್ಥಾನವನ್ನೇ ಆಕ್ರಮಿಸಿದನು.

ಆದರೆ ವಿಧಿಯು ಅದನ್ನು ಸಹನ ಮಾಡಲಿಲ್ಲ. ೧೬೫೬ ರಲ್ಲಿ ಅವನ ಮಲತಂದೆಯು ತೀರಿಕೊಂಡನು. ಆಗ ತಾಯಿ ಮತ್ತೆ ತನ್ನ ಹೊಲ ಮನೆಯ ಹೊಣೆಯನ್ನು ಒಂಟಿಯಾಗಿ ಹೊರುವ ಪ್ರಸಂಗವು ಬಂದಿತು. ಆಗ ಈ ೧೪ ವರ್ಷದ ಹುಡುಗನು ನೆರವಿಗೆ ಬೇಕಾದನು. ಐಸಾಕನು 'ಮ್ಯಾಟ್ರಿಕ್ಯುಲೇಶನ್' ತನಕ ಹೋಗದೆ ಶಾಲೆಬಿಟ್ಟು ತಾಯಿಗೆ ನೆರವಾಗಲು ನಡೆದನು.

ಆದರೆ ಈ ಹೊಲಮನೆಯ ಪ್ರಯೋಗ ಸಫಲವಾಗಲಿಲ್ಲ. ಈ ಹುಡುಗ ನೆತ್ತರಕ್ಕೆ ನಾಲಿಗೆ ಹಾಕಿದ ಹುಲಿಯ ಮರಿಯಂತೆ ಆಗಿದ್ದನು. ಅವನಿಗೆ ಗಣಿತದ ರುಚಿ ಪ್ರಬಲವಾಗಿ ಹತ್ತಿತ್ತು. ಹೊಲದಲ್ಲಿ ಕೂತು ಕುರಿಗಳ ಶಿರ ಗಣತಿ ಮಾಡುವದರಲ್ಲಿ ಅವನಿಗೆ ತೃಪ್ತಿ ಎಲ್ಲಿ ? ಗದ್ದೆ ಹೂಡುವಾಗ ಬಿದ್ದ ನೇಗಿಲಿನ ಸಮಾಂತರ ರೇಖೆಗಳನ್ನು ನೋಡುತ್ತ ನಡೆಯುವಾಗ ಭೂಮಿತಿಯ ಆಕರ್ಷಣೆ ಮಿತಿಮೀರಿ ಬೆಳೆಯಿತು. ನಡುವೆಯೇ ಶಾಲೆಬಿಡಿಸಿದ್ದರಿಂದ ಅವನ ಜ್ಞಾನಲಾಲಸೆ, ವಿಶೇಷತಃ ಗಣಿತ ಜಿಜ್ಞಾಸೆ–ಇನ್ನೂ ಕೆರಳಿ ಅವನಿಗೆ ಹುಚ್ಚು ಹಿಡಿಸಿತು. ಅವನ ಧ್ಯಾನ–ಧಾರಣೆಯೆಲ್ಲ ಅದೊಂದೆ ವಿಷಯವನ್ನು ತಿಳಿದುಕೊಳ್ಳುವದರಲ್ಲಿ ವ್ಯಗ್ರವಾದವು.

ಅವನ ತಾಯಿಗೆ ಮಗನ ಈ ಕೆಲಸಗೇಡಿ ಚಟುವಟಿಕೆಯು ಅರ್ಥವಾಗಿರಲಿಕ್ಕಿಲ್ಲ. ಬೇಸಾಯಕ್ಕೆ ಮನಸ್ಸು ಕೊಡದೆ ಸೋಮಾರಿಯಾಗಿ ಏನೇನೋ ಯೋಚಿಸುತ್ತ ಕಾಲಕಳೆಯುತ್ತಿರುವ ಐಸಾಕನನ್ನು ಕಂಡು ಆಕೆ ಬೇಸರಪಟ್ಟು ಕೊಂಡಿರಲು ಸಾಕು. ಆದರೆ, ಆ ಹುಡುಗನ ಸುದೈವದಿಂದ ಅವನ ಬಗೆಗೆ ಸಹಾನುಭೂತಿಯನ್ನು ತಾಳಿದ ಅವನ ಕಕ್ಕ ವಿಲಿಯಂ ಐಸಕಫ್ ಎಂಬಾತನು–ಅವನಿಗೆ ನೆರವಾದನು. ಅವನು,–ಇನ್ನೊಬ್ಬ ಧರ್ಮಗುರು–ಕೇಂಬ್ರಿಜ್ ವಿಶ್ವವಿದ್ಯಾಲಯದ ಟ್ರಿನಿಟಿ ಕಾಲೇಜಿನ ಸದಸ್ಯನಾಗಿದ್ದನು. ಅವನು ತನ್ನ ತಂಗಿಗೆ–ನ್ಯೂಟನ್‌ನ ತಾಯಿಗೆ ನ್ಯೂಟನ್‌ನನ್ನು ತಿರುಗಿ ಶಾಲೆಗೆ ಹಾಕಲು ಆಗ್ರಹಪಡಿಸಿದನು. ಹುಡುಗನ ಜ್ಞಾನಾರ್ಜನೆಯ ಹಸಿವನ್ನು ಕಂಡು, ವ್ಯಾಸಂಗಿಯಾದ ಅವನ ಮನಸ್ಸು ಕರಗಿತು.

ಹೀಗೆ ೧೬೬೦ ರಲ್ಲಿ ನ್ಯೂಟನ್ ಮತ್ತೆ ಶಾಲೆಯನ್ನು ಸೇರಿದನು-ಕಾಲೇಜ ಪ್ರವೇಶಕ್ಕೆ ಅರ್ಹನಾಗಿ ಹೋದ ಮರುವರ್ಷವೇ ಆತನು ಟ್ರಿನಿಟಿ ಕಾಲೇಜಿನಲ್ಲಿ ಆ ಸಂಸ್ಥೆಯ ಸಹಾಯಕ ಶಿಷ್ಯವೃತ್ತಿಯನ್ನು ಪಡೆವ ಕಿರಿಯ ವಿದ್ಯಾರ್ಥಿಯಾದನು. ಶಿಷ್ಯವೃತ್ತಿಗೆ ಒಮ್ಮೆಲೇ ಅರ್ಹನಾದನೆಂದ ಮೇಲೆ ಐಸಾಕನು ಹೊಲಗೆಲಸದ ದಿನಗಳಲ್ಲಿ ತನ್ನ ವಿದ್ಯಾಸಕ್ತಿಗೆ ಏನೂ ಜಂಗು ಹತ್ತದಂತೆ ನೋಡಿಕೊಂಡಿರ ಬೇಕೆಂಬುದು ಸ್ಪಷ್ಟವು.

೧೬೬೧ ನೇ ಇಸ್ವಿ ಜುಲೈದಲ್ಲಿ ಅವನು ಟ್ರಿನಿಟಿಯ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ೧೬೬೪ ರ ಎಪ್ರಿಲ್‌ದಲ್ಲಿ ಅವನು ಸ್ಕಾಲರನೆಂದು ಮನ್ನಣೆ ಪಡೆದನು; ಮತ್ತು ೧೬೬೫ ರಲ್ಲಿ ಈ ಕಾಲೇಜಿನ ಸ್ನಾತಕ (ಗ್ರ್ಯಾಜುಏಟ) ಆದನು. ಮೆಟ್ರಿಕ್ ಪರೀಕ್ಷೆಯಿಂದ ಗ್ರ್ಯಾಜುಏಟ ಆಗುವ ತನಕದ ಮೂರು ವರ್ಷಗಳಲ್ಲಿ ತನ್ನ ಅಚ್ಚುಮೆಚ್ಚಿನ ಗಣಿತಶಾಸ್ತ್ರದ ಮುಖ್ಯ ಗ್ರಂಥಗಳನ್ನೆಲ್ಲ ಆತನು ಅರಗಿಸಿಕೊಂಡಿರಬೇಕು. ಗ್ರ್ಯಾಜುಏಟ ಆದನಂತರದ ಎರಡು ವರ್ಷಗಳಲ್ಲಿ ಅವನ ಬೌದ್ಧಿಕ ಚಟುವಟಿಕೆಗಳು ಅಲೌಕಿಕವಾಗಿ ಕಂಡು ಬಂದವು. ಏಕೆಂದರೆ ಆಗಲೆ- ೧೬೬೫ ರಲ್ಲಿಯೇ-ಈಗ ಜಗತ್ಪ್ರಸಿದ್ಧವಾದ 'ಬೈನಾಮಿಯಲ್' ಪ್ರಮೇಯವನ್ನು ಆತನು ಕಂಡು ಹಿಡಿದನು. (ಈ ಪ್ರಮೇಯವನ್ನು ಕನ್ನಡದಲ್ಲಿ ದ್ವೈನಾಮಿಕವೆಂದು ಕರೆಯಬಹುದು !) ಮುಂದೆ ಕೆಲಕಾಲದಲ್ಲಿಯೇ, ಈಗ ಕ್ಯಾಲ್‌ಕ್ಯುಲಸ್ ಎಂದು ಹೆಸರಾದ ಗಣಿತ ವಿಭಾಗದ ತತ್ವಗಳನ್ನು ಆತ ಶೋಧಿಸಿದನು. (ಇದು ಸ್ಥಿರವಲ್ಲದ ಸಂಖ್ಯೆಗಳ ಚಲನ ಮಾನವನ್ನು ಲೆಕ್ಕಹಾಕುವ ಹೊಸ ಗಣಿತ.) ಇದಲ್ಲದೆ ಅದೇ ಅವಧಿಯಲ್ಲಿ ಆತನು ವರ್ತುಲ ಆಕೃತಿಗಳ ಕ್ಷೇತ್ರಫಲವನ್ನು ಘನವಸ್ತುಗಳ ಘನ ಫಲವನ್ನು ಗುಣಿಸಿ ತೆಗೆಯುವ ಪದ್ಧತಿಗಳನ್ನು ಕಂಡು ಹಿಡಿದನು. ಅವನ ಪ್ರತಿಭೆಯ ಅದ್ಭುತತೆಗೆ ಇದಕ್ಕೂ ಹೆಚ್ಚಿನ ಪವಾಡವು ಇನ್ನೇನು ಬೇಕು ?

೧೬೬೬ ರ ಮೇ ತಿಂಗಳಲ್ಲಿ ಅವನು ಹೀಗೆ ಬರೆಯುತ್ತಾನೆ. 'ಕ್ಯಾಲ್‌ಕ್ಯುಲಸ್‌ದ ವ್ಯಸ್ತ ಪದ್ಧತಿಯಲ್ಲಿ ನನಗೆ ಈಗಾಗಲೇ ಪ್ರವೇಶ ಸಿಕ್ಕಿತು; ಅದೇ ವರ್ಷ ಗುರುತ್ವಾಕರ್ಷಣೆಯ ವ್ಯಾಪ್ತಿಯನ್ನು ಚಂದ್ರಗೋಲಕ್ಕೂ ಅನ್ವಯಿಸುವದರ ವಿಷಯವಾಗಿ ನಾನು ವಿಚಾರಿಸಹತ್ತಿದೆನು. ಇವೆಲ್ಲ ಕೆಲಸ ೧೬೬೫-೬೬ ರಲ್ಲಿ ನಡೆದವು; ಏಕೆಂದರೆ ಆಗ ನಾನು ನನ್ನ ಪ್ರಾಯದ ನಡುಕಟ್ಟಿನಲ್ಲಿ ಇದ್ದೆನು.' ಯೌವನವು ಅವಿವೇಕದ ತವರೆಂದು ಬಂದ ಅಪಕೀರ್ತಿಗೆ ನ್ಯೂಟನ್‌ನಂಥ ತತ್ವದರ್ಶಿ ತರುಣರು ದಿವ್ಯ ಅಪವಾದಗಳು !

ಗುರುತ್ವಾಕರ್ಷಣೆಯ ಗುಟ್ಟನ್ನು ಆತ ಕಂಡುಹಿಡಿದ ಕತೆಯನ್ನು ಫ್ರೆಂಚ ಮೇಧಾವಿ

ವೋಲ್ಟಾಯರ್‌ನು ಬರೆದಿಟ್ಟಿದ್ದಾನೆ. ವೂಲ್ಸಥ್ರೊಪದಲ್ಲಿ ತನ್ನ ತೋಟವಲ್ಲಿ ತಿರುಗಾಡುತ್ತಿರುವಾಗ, ನ್ಯೂಟನ್ ಒಂದು ಸೇಬಿನ ಹಣ್ಣು ನೆಲಕ್ಕೆ ಉದುರಿದ್ದನ್ನು ನೋಡಿದನು. ಒಂದು ಹಣ್ಣು ಬಿದ್ದುದನ್ನು ಎಷ್ಟು ಜನ ನೋಡಿಲ್ಲ! ಲೋಕವೆಲ್ಲ ಅನಾದಿಯಿಂದ ಕಂಡದ್ದನ್ನೇ ನ್ಯೂಟನ್‌ನೂ ಕಂಡನು. ಆದರೆ ಅವನದು ಅಲೌಕಿಕ-ದೃಷ್ಟಿ. ಆ ಜ್ಞಾನದೃಷ್ಟಿಯು ಕ್ರಾಂತದರ್ಶನಕ್ಕೆ ಲೋಕಕ್ಕೆ ಆಧಾರವಾದ ಶಕ್ತಿಯ ಸೂತ್ರವೇ ಕಂಡಿತು. ಆದರೆ ಜನ ಎಂಥ ಡೊಂಕು ನೋಡಿ! ಈ ಸೇಬಿನ ಹಣ್ಣಿನ ಸಾದಾ ಕತೆಯು ಸುಳ್ಳಿರಬೇಕೆಂದು ಸಾಧಿಸಿದ ಜನವೂ ಉಂಟು. ಆದರೆ ವೋಲ್ಟಾಯರ್‌ನಿಗೆ ಈ ಘಟನೆಯನ್ನು ನ್ಯೂಟನ್‌ನ ನಿಕಟಸಂಬಂಧದ ಶ್ರೀಮತಿ ಕಾಂಡಿಯಟ್ ಎಂಬಾಕೆ ಹೇಳಿದಳು. ಆಕೆ ಇದನ್ನು ಘಟಿಸಿ ಹೇಳುವಂತಿಲ್ಲ.

ಗುರುತ್ವಾಕರ್ಷಣೆಯ ತತ್ವವನ್ನು ಆತನು ಪ್ರತಿಪಾದಿಸಿದನು. ಆ ತತ್ವಕ್ಕೆ ಅನುಸಾರವಾಗಿ ಚಂದ್ರಾದಿ ಗ್ರಹಗೋಲಗಳ ಗತಿಗಳನ್ನು ಗುಣಿಸಿ, ಗಣಿತಮಾಡಿ ಹೇಳುವಾಗ ಆತನಿಗೆ ಪೂರ್ತಿ ಯಶಸ್ಸು ಬರಲಿಲ್ಲ. ಅವಕ್ಕೆ ಕಾರಣ ಆತನು ಆ ಗಣಿತಕ್ಕೋಸ್ಕರ ಇಟ್ಟುಕೊಂಡ ಒಂದು ಮೂಲ ಮಾನವು ತಪ್ಪಿತ್ತು. ಪೃಥ್ವಿಯ ತ್ರಿಜ್ಯವನ್ನು ಲೆಕ್ಕ ಹಾಕಲು ಅವನು ಇಟ್ಟುಕೊಂಡ ಅಕ್ಷಾಂಶದ ಒಂದು ಅಂಶದ ಉದ್ದಳತೆಯ ತಪ್ಪು ಲೆಕ್ಕವು ಆಗ ಪ್ರಚಾರದಲ್ಲಿತ್ತು. ಅದನ್ನೇ ಮೂಲದಲ್ಲಿ ಇಟ್ಟುಕೊಂಡ ನ್ಯೂಟನ್‌ನ ಗಣಿತದಲ್ಲಿ ಪ್ರಮಾಣವಾಗಿ ಅವನು ಶೋಧಿಸಿದ ತತ್ವಕ್ಕೂ ಗುರುತ್ವಾಕರ್ಷಣೆಯ ವಸ್ತುಸ್ಥಿತಿಗೂ ಸಾಕಷ್ಟು ವ್ಯತ್ಯಾಸ ಕಂಡುಬಂದಿತು.

ನ್ಯೂಟನ್‌ನು ೧೬೬೭ ರಲ್ಲಿ ಕೆಂಬ್ರಿಜಿಗೆ ಮರಳಿದನು. ಟ್ರಿನಿಟಿಯ ಫೆಲೋಶಿಪ್ ಆತನಿಗೆ ದೊರೆಯಿತು. ಮುಂದಿನ ಕೆಲವು ವರ್ಷಗಳನ್ನು ಆತನು ಕೇವಲ ಬೆಳಕಿನ ಲೋಕದಲ್ಲಿಯೇ ಕಳೆದನು. ಅಂದರೆ ಬೆಳಕು, ಕಿರಣ, ಬಣ್ಣಗಳ ಮಾಯೆಯ ಇಂಗಿತವನ್ನು ಹುಡುಕಲು ತೊಡಗಿದನು. ಪ್ರಕಾಶದ ಗುಣಧರ್ಮಗಳನ್ನು ಶೋಧಿಸುವದರ ಜತೆಗೆ ದೂರದರ್ಶಕ ಯಂತ್ರಗಳ ರಚನೆಯಲ್ಲಿಯೂ ಪ್ರಯೋಗಗಳನ್ನು ಕೈಗೊಂಡನು. ೧೬೬೮ ರಲ್ಲಿ ಆತನು ಮೊದಲನೆಯ ದೂರದರ್ಶಕ ಯಂತ್ರವನ್ನು ತಯಾರಿಸಿದನು. ಇದರ ವೈಶಿಷ್ಟ್ಯವೆಂದರೆ ಒಳಗೆ ಭಾರವಾದ ಗೋಲ ಗಾಜುಗಳನ್ನು ಇಡುವ ಬದಲು ಪ್ರತಿಬಿಂಬಕ ವಕ್ರಕನ್ನಡಿಗಳನ್ನು ಬಳಸಿದನು. ಈ ದೂರದರ್ಶಕವು ೬ ಇಂಚು ಉದ್ದವಿತ್ತು. ಅದರ ರಂಧ್ರವು ಒಂದು ಇಂಚು ಇತ್ತು. ಈ ಯಂತ್ರದಿಂದ ಆತನು ಗುರುಗ್ರಹದ ಉಪಗ್ರಹಗಳನ್ನು ಕಣ್ಣಿಕ್ಕಿ ನೋಡಲು ಶಕ್ತನಾದದ್ದನ್ನು ಮುಂದೆ ಸರ್ ವಿಲಿಯಮ್ ಹರ್ಶೆಲ ಹಾಗೂ ಲಾರ್ಡ ರಾಸ್ ಮುಂತಾದವರು ಅತ್ಯಂತ ಪೂರ್ಣತೆಗೆ ಒಯ್ದು, ದೂರದರ್ಶಕ ಯಂತ್ರದ ಸ್ವರೂಪವು ನ್ಯೂಟನ್‌ನ ಯಂತ್ರದಿಂದ ವಿಶೇಷ ಬೇರೆ ಇರುವದಿಲ್ಲ.

೬೬೯ ರಲ್ಲಿ ಟ್ರಿನಿಟಿಕಾಲೇಜಿನ ಗಣಿತದ ಪ್ರಾಧ್ಯಾಪಕನು ಕೆಲಸಕ್ಕೆ ರಾಜಿನಾಮೆ ಕೊಟ್ಟನು. ಆಗ ಆ ಅಧಿಕಾರಸ್ಥಾನಕ್ಕೆ ನ್ಯೂಟನ್‌ನ ಆಯ್ಕೆಯಾಯಿತು. ಮುಂದೆ ೬೭೧ ರಲ್ಲಿ ರಾಯಲ್ ಸೊಸೈಯಿಟಿಗೆ ಇವನನ್ನು ಸದಸ್ಯನನ್ನಾಗಿ ಆರಿಸಲಾಯಿತು. ಈ ಮಹಾವಿದ್ವನ್ಮಂಡಳವು ನ್ಯೂಟನ್‌ನ ದೂರದರ್ಶಕಗಳ ಮೂಲಕ ಅವನಲ್ಲಿ ಕೌತುಕಾದರಗಳನ್ನು ತಾಳಿತ್ತು. ಆ ಮಂಡಳದ ಇದಿರು ಆತನು ಓದಿದ ಮೊದಲನೆಯ ಪ್ರಬಂಧವು ಪ್ರಕಾಶತತ್ತ್ವಗಳ ಕುರಿತೇ ಇತ್ತು. ವಿಶೇಷತಃ ಈಗ ಜಗತ್ತಿನಲ್ಲಿ ವಿದ್ಯಾರ್ಥಿ ಜನಗಳಿಗೆಲ್ಲ ಪ್ರಿಯವಾದ ಲೋಲಕವ ಕಿರಣ ತಿರಸ್ಕರಣದ ವಿಷಯವಾಗಿ ಅದು ಇತ್ತು. ೧೬೬೬ ರಲ್ಲಿ ಅವನು ಸ್ಟೌರ್‌ಬ್ರಿಜದ ಜಾತ್ರೆಗೆ ಹೋದಾಗ ಒಂದು ಲೋಲಕವನ್ನು ಆತ ಸೋಜಿಗಕ್ಕಾಗಿ ಕೊಂಡಿದ್ದನು. ಅದನ್ನೇ ಪ್ರಯೋಗಕ್ಕೆ ಹೂಡಿ ಸೂರ್ಯಕಿರಣದ ಸಪ್ತರಶ್ಮಿಗಳನ್ನು ಶೋಧಿಸಿದನು. ಇದೊಂದು ಅದ್ಭುತ ರಹಸ್ಯವೆನಿಸಿತು. ಅವನ ಪ್ರಬಂಧವು ಆ ಕಾಲದ ಮೇಧಾವಿಗಳಲ್ಲಿ ಮಹಾಕೋಲಾಹಲಕ್ಕೆ ಕಾರಣವಾಯಿತು. ಸೂರ್ಯನ ಶುಭ್ರ ಪ್ರಕಾಶವು ಏಳು ಬಣ್ಣಗಳಿಂದ ಕೂಡಿದೆಯೆಂದರೇನು ? ಬಣ್ಣಗಳೆಲ್ಲ ಒಂದಾಗಿ ಬಿಳಿಯಾಗುವ ದೆಂದರೇನು ? 'ಎಲ್ಲ ಬಣ್ಣ ಮಸಿ ನುಂಗಿತೆಂದು' ಜನ ಎಂದೋ ಕಂಡು ಕೊಂಡಿದ್ದರು; ಆದರೆ ಬಿಳಿಯೂ ಅವುಗಳನ್ನು ನುಂಗುವದು–ಅಲ್ಲಿ ಆ ಎಲ್ಲ ಬಣ್ಣಗಳ ಒಂದುಗೂಡುವಿಕೆಯೇ ಬಿಳಿಯೆಂಬ ಬಣ್ಣ. ಇವನ್ನು ನಂಬುವದೆಂತು ? ಹಾಗೆಯೇ ವಸ್ತುಗಳಿಗೆ ಬಣ್ಣಗಳೇ ಇರುವದಿಲ್ಲ. ಎಲ್ಲ ಬಣ್ಣಗಳು ಬೆಳಕಿನ ಬಗೆಗಳು. ಬೆಳಕು ವಸ್ತುಗಳ ಮೇಲೆ ಬಿದ್ದು ಮರಳಿ ಕಣ್ಣಿಗೆ ಬರುವವು. ಎಲೆ ಹಸಿರಲ್ಲ. ಆಕಾಶ ನೀಲಿಯಲ್ಲ. ಹೂ ಕೆಂಪಲ್ಲ–ಹಸರು, ನೀಲಿ, ಕೆಂಪು, ಎಲ್ಲ ಬೆಳಕಿನ ಧರ್ಮ. ಈ ಚೋದ್ಯವನ್ನು ನ್ಯೂಟನ್‌ನು ಮುಂಡಿಸಿದಾಗ ಅಂದಿನ ಜಾಣರೆನಿಸಿಕೊಂಡ ಪರಿಮಿತ ಪ್ರಾಜ್ಞರು ಇದು ಕುಚೋದ್ಯವೆಂದು ಗಲಭೆ ಎಬ್ಬಿಸಿದರೆ ಏನು ಆಶ್ಚರ್ಯ? ನಿಸರ್ಗದ ವಿಸ್ಮಯರಮ್ಯವಾದ ಕಾಮನಬಿಲ್ಲು ಏನೆಂಬುದನ್ನು ನ್ಯೂಟನ್ ಕಂಡು ಸಾರಿದನು. ಅದರ ಸೌಂದರ್ಯವನ್ನು ಕೊಂಡಾಡಿದ ಕವಿಗಳು ಜಗತ್ತಿನ ಆದಿಯಿಂದಲೂ ಬಹಳ ಇದ್ದರು. ಅದರ ಸತ್ಯವನ್ನು ಕಂಡು ಹೇಳಿದ ಪ್ರಾಜ್ಞನು ಇವನೊಬ್ಬನೇ ! ಆದರೆ ಈ ಸತ್ಯವು ಆ ಸೌಂದರ್ಯಕ್ಕಿಂತಲೂ ಆಶ್ಚರ್ಯಕರವಾಗಿತ್ತು !

ಲೋಲಕವಿಂದ ತಿರಸ್ಕೃತವಾದ ವರ್ಣಪಂಕ್ತಿಯು ಉದ್ದಳತೆಯು, ಯಾವುದೇ ದೂರದರ್ಶಕ ದ್ರವ್ಯದ ಅಂಥ ಲೋಲಕಗಳಿಂದ ಜರುಗಿದ ತಿರಸ್ಕರಣಗಳಿಗೂ ಒಂದೇ ತೆರನಾಗಿ ಆಗಿರುತ್ತದೆ. ಆದರೆ ಅವೆಲ್ಲ ಲೋಲಕಗಳ ಮಗ್ಗಲುಗಳ ಕೋನಗಳು ಆದ ತಿರಸ್ಕರಣವು ಒಂದೇ ಕೋನಕ್ಕೆ ಜರುಗುವಂತೆ ಯಾವ ಅಂಶಕ್ಕೆ

ಬಂದಿರುತ್ತವೆ ಎಂಬುದನ್ನು ಅವಲಂಬಿಸಿರುತ್ತವೆ ? ನ್ಯೂಟನ್‌ನ ಈ ಅಭಿಪ್ರಾಯದಲ್ಲಿ ಪ್ರಮಾದವಿತ್ತು. ಆದರೆ ಆ ಪ್ರಮಾದವೇ ಅವನ ಪ್ರಯೋಗ–ಪ್ರಯತ್ನಗಳಿಗೆ ಸ್ಫೂರ್ತಿ ಕೊಟ್ಟಿತು. ಅವನ ಈ ಲೋಲಕ ಸಿದ್ಧಾಂತದ ಮೂಲಕವೇ–ಗೋಲ ಕಾಜುಗಳನ್ನು ಬಿಟ್ಟು ಆತನು ಪ್ರತಿಬಿಂಬಕ ಕನ್ನಡಿಗಳನ್ನು ದೂರದರ್ಶಕಗಳಿಗಾಗಿ ಉಪಯೋಗಿಸುವ ಕಲ್ಪನೆಯನ್ನು ಕಂಡುಕೊಂಡನು. ಗೋಲಕಾಜುಗಳು ಪಡಿಮೂಡಿಸುವ ಬಿಂಬ ಬಣ್ಣ ಬಳಿದಂತಾಗುವದರಿಂದ ಅಂತರ್ಗೋಲ ಪ್ರತಿಬಿಂಬಕ ಪಾತಳಿಗಳನ್ನು ಉಪಯೋಗಿಸುವ ರಹಸ್ಯವನ್ನು ಆತನು ಮನಗಂಡನು.

ಈ ಪ್ರಬಂಧದ ಮೇಲೆ ರಾಯಲ್ ಸೊಸೈಟಿಗೆ ರೊಬರ್ಟ ಹೂಕನು ವರದಿಯನ್ನು ಒಪ್ಪಿಸಿದನು. ಹೂಕನು ನ್ಯೂಟನ್‌ನ ನಿರೀಕ್ಷಣೆಗಳನ್ನು ಒಪ್ಪಿದನು.–ಆದರೆ ನಿರ್ಣಯಗಳನ್ನು ಮನ್ನಿಸಲಿಲ್ಲ. ಆ ಪ್ರಬಂಧದ ಪ್ರಕಾಶನವು ವೈಜ್ಞಾನಿಕ ವಿಚಾರತೆಗೆ ಸಾಕಷ್ಟು ಕಾರಣವಾಯಿತು. ಇಂಗ್ಲಂಡದಲ್ಲಿ ಮಾತ್ರವಲ್ಲ, ಯುರೋಪದಲ್ಲೆಲ್ಲ ಈ ಕುರಿತು ಕುತೂಹಲದ ವಿಮರ್ಶೆ ವಿಚಿಕಿತ್ಸೆಯ ತರಂಗಗಳೆದ್ದವು. ೧೬೭೬ ರ ತನಕವೂ ಅವುಗಳ ಸಿಬ್ಬರ ಅಬ್ಬರಗಳು ಅಡಗಲಿಲ್ಲ. ನ್ಯೂಟನ್‌ನು ಕೊನೆಗೂ ಬೇಸತ್ತನು. ಆಗ ಅವನು ಹೀಗೆ ಬರೆದನು. 'ನನ್ನ ಪ್ರಕಾಶ ಸಿದ್ಧಾಂತದ ಮೂಲಕ ಎದ್ದ ವಿವಾದಗಳಿಂದ ನಾನು ಹಿಂಸೆಗೊಳಗಾಗಿದ್ದೇನೆ. ಶಾಂತ ಏಕಾಂತದ ನನ್ನ ಮಹತ್ವದ ನಿಧಿಯನ್ನು ಕಳಕೊಳ್ಳಲು (ಈ ಶೋಧವೆಂಬ) ನನ್ನ ನೆಳಲಬೆನ್ನು ಹತ್ತಿ ನಾನು ಓಡಲು ಏಕೆ ದುಡುಕಿದೆನೆಂದು ನನ್ನ ಅದೂರದರ್ಶಿತನವನ್ನೇ ನಾನು ಹಳಿದುಕೊಳ್ಳುವಂತಾಗಿದೆ !' ಈ ಉದ್ಗಾರದಲ್ಲಿ ನ್ಯೂಟನ್‌ನ ವಿನಯದೊಂದಿಗೆ ಆತನ ವೈಜ್ಞಾನಿಕ ವಿಭೂತಿಯ ಕಲ್ಪನೆಯೂ ನಮಗೆ ಸಿಗುತ್ತದೆ.

ಆದರೆ ವಿಜ್ಞಾನದ ದೃಷ್ಟಿಯಿಂದ ಆ ವಾದ ವಿವಾದಗಳು ವ್ಯರ್ಥವಾಗಲಿಲ್ಲ.–ವಾದಗಳು ತತ್ವಬೋಧಕ್ಕೆ ತಾಯಿಯಾದವು. ಆ ಮೂಲಕ ಪ್ರಕಾಶ ತತ್ವದ ಪರಿಶೀಲನೆ ಸಂಶೋಧನೆಗಳನ್ನು ನ್ಯೂಟನ್‌ನು ಹೆಚ್ಚಿನ ವಿವರಗಳೊಂದಿಗೆ ನಡಿಸಿದನು. ಆ ಶೋಧದ ದಾರಿಯಲ್ಲಿ ಅವನು ಹೀಗೆ ಅಭಿಪ್ರಾಯಪಟ್ಟದ್ದೂ ಉಂಟು. 'ಪ್ರಕಾಶವು ಆಕಾಶದ ತಿಳಿದ್ರವ್ಯವೂ ಅಲ್ಲ. ಆದರ ಸ್ಪಂದನಗತಿಯೂ ಅಲ್ಲ. ದೀಪ್ತ ವಸ್ತುಗಳಿಂದ ಉಂಟಾಗುವ ಏನೋ ಬೇರೊಂದು ದ್ರವ್ಯವು ಅದು···–ಪ್ರಕಾಶ ಮತ್ತು ಆಕಾಶ ದ್ರವ್ಯ ಇವೆರಡೂ ಪರಸ್ಪರರ ಮೇಲೆ ಕ್ರಿಯೆಯನ್ನುಂಟುಮಾಡುತ್ತವೆ. ಹೀಗೆ ನನಗೆ ಅನಿಸತೊಡಗಿದೆ'.

ಪ್ರಕಾಶದ ಉತ್ಕಿರಣ ಸಿದ್ಧಾಂತದ ಪ್ರತಿಷ್ಠಾಪನೆಗೆ ನ್ಯೂಟನ್‌ನೇ ಆಚಾರ್ಯನು

ಉಜ್ಜ್ವಲವಾದ ವಸ್ತುವಿನಿಂದ ಹೊರಚೆಲ್ಲಲ್ಪಡುವ ಸೂಕ್ಷ್ಮ ಕಣಗಳ ಸಮುದಾಯುವೇ ಬೆಳಕು. ಕಿರಣವೆಂದರೆ ಹರಡುವಿಕೆ; ಹೊರ ಚೆಲ್ಲುವಿಕೆ. ಈ ಕ್ರಾಂತಿಯುಕ್ತವಾದ ಕಣಗಳ ಸಮುದಾಯುವು ಆಕಾಶದ ಶೂನ್ಯ ಅವಕಾಶದಲ್ಲಿ ನಿಮಿಷಕ್ಕೆ ಒಂದು ನೂರು ತೊಂಭತ್ತು ಸಾವಿರ ಮೈಲು ವೇಗದಿಂದ ಚಲಿಸುವದು. ಈ ಸಿದ್ಧಾಂತವು ೧೮೦೧ ನೇ ಇಸವಿಯ ತನಕವೂ ವಿಜ್ಞಾನ ಪ್ರಪಂಚದಲ್ಲಿ ಅಧಿಕಾರವನ್ನು ನಡೆಯಿಸಿತು. ಆ ವರ್ಷ ಥಾಮಸಯಂಗ ಎಂಬ ವಿಜ್ಞಾನಿಯು ಪ್ರಕಾಶದ ತರಂಗ ಚಲನದ ತತ್ವವನ್ನು ಪ್ರತಿಪಾದಿಸಿದನು.

ಇವೆಲ್ಲ ಶೋಧಗಳು ಅವನಿಗೆ ಜಗತ್ತಿನಲ್ಲಿ ಐತಿಹಾಸಿಕ ಮಹತ್ವವನ್ನು ತಂದು ಕೊಟ್ಟರೂ ಐಶ್ವರ್ಯವನ್ನು ಲಭಿಸಿಕೊಡಲಿಲ್ಲ. ಅವನ ಮಾನಧನಕ್ಕೆ ಧನಮಾನದ ಕೊರತೆ ತುಂಬ ಇದ್ದಿರಬೇಕು. ಏಕೆಂದರೆ ರಾಯಲ್ ಸೊಸೈಟಿಗೆ ಸದಸ್ಯತ್ವದ ವರ್ಗಣಿಯು ಪ್ರತಿವಾರಕ್ಕೆ ಒಂದು ಶಿಲಿಂಗು ಆಗಿತ್ತು. ಅದನ್ನು ಆತ ತೆರಲಾರದೆ, ತನಗೆ ವರ್ಗಣಿ 'ಮಾಫಿ' ಮಾಡಬೇಕೆಂದು ಬರೆದು ಕೊಂಡಿದ್ದು ತಿಳಿದುಬರುತ್ತದೆ. ೧೬೭೫ ರಲ್ಲಿ ಆ ಗುಣಜ್ಞ ಮಂಡಳ ಅವನನ್ನು ತಮ್ಮ 'ಫೆಲೋ' ಆಗಿ ಆರಿಸಿಕೊಂಡಿತು.

ನ್ಯೂಟನ್‌ನು ಗುರುತ್ವಾಕರ್ಷಣದ ಕುರಿತುಮಾಡಿದ ಗಣಿತ ಪ್ರಯೋಗಗಳೇ ಅವನನ್ನು ಸದಾ ಕಾಲದ ಕೀರ್ತಿಗೆ ಒಯ್ದವು. ೧೬೮೪ ರಲ್ಲಿ ಅವನ ಮಿತ್ರ ಹ್ಯಾಲಿಯು ಆ ಮಹಾಸಿದ್ಧಾಂತದ ಸಮಗ್ರ ವಿವರಣೆಯೂ ಉದಾಹರಣೆಯು ನ್ಯೂಟನ್‌ನಲ್ಲಿ ಸಿದ್ಧವಾಗಿರುವದೆಂಬುದನ್ನು ಕಂಡು ಅದನ್ನು ವ್ಯವಸ್ಥಿತ ಗ್ರಂಥವಾಗಿ ಬರೆಯಲು ಆತನನ್ನು ಪ್ರೋತ್ಸಾಹಿಸಿದನು. ಆಗ ನ್ಯೂಟನ್‌ನು ಮೊದಲು 'De motu corporum' ಎಂಬ ಹೆಸರಿನಲ್ಲಿ ಒಂದು ಪ್ರಬಂಧವನ್ನು ಬರೆದನು. ಅನಂತರ ಅದನ್ನೇ ವಿಸ್ತರಿಸಿ ತನ್ನ ಶೋಧನಗಳನ್ನೆಲ್ಲ ಒಳಪಡಿಸಿ ಪೂರ್ತಿ ವ್ಯಾಖ್ಯಾನದೊಂದಿಗೆ 'ಫಿಲೊಸೊಫಿಯಾ ನ್ಯಾಚರಲಿಸ್ ಪ್ರಿನ್ಸಿಪಿಯಾ ಮೆಥಮೆಟಿಕಾ' ಅಂದರೆ 'ನಿಸರ್ಗ ತತ್ವಜ್ಞಾನದ ಗಣಿತ ಸಿದ್ಧಾಂತಗಳು' ಎಂಬ ಜಗತ್ಪ್ರಸಿದ್ಧ ಗ್ರಂಥವನ್ನು ಬರೆದನು.

ನ್ಯೂಟನ್‌ನಿಗೆ ವಿಜ್ಞಾನವು ನಿಸರ್ಗದ ತತ್ವಜ್ಞಾನ–ಪ್ರಕೃತಿಯ ದರ್ಶನವೆನಿಸಿತು. ವಿಜ್ಞಾನ ಮತ್ತು ತತ್ವಜ್ಞಾನಗಳಲ್ಲಿ ಅರ್ವಾಚೀನರು ಕಲ್ಪಿಸಿದ ಭೇದ ಅವನಿಗೆ ತತ್ವ ತೋಚಲೇ ಇಲ್ಲ. ಅವನಿಗೆ Science ಎಂಬುದೂ Philcsophy ಯೇ.

ಗುರುತ್ವಾಕರ್ಷಣವೆಂಬ ಸೃಷ್ಟಿಯ ಸಾರ್ವಭೌಮ ನಿಯಮದ ಕುರಿತು ನ್ಯೂಟನ್ ಇಟ್ಟ ಹೆಜ್ಜೆಗಳು ಹೀಗಿವೆ :-

೧೬೬೬ ರಲ್ಲಿ ಈ ಹಿಂದೆಯೇ ಉಲ್ಲೇಖಿಸಿದಂತೆ–ನ್ಯೂಟನ್‌ನಿಗೆ ಈ ತತ್ವದ ಸಾಕ್ಷಾತ್ಕಾರವಾಯಿತು. ಆ ಕುರಿತು ಅವನು ಒರಡು ಲೆಕ್ಕವನ್ನು ಗುಣಿಸಿಯೂ ಆಯಿತು. ಆಗಲೇ ಅವನಿಗೊಂದು ಸಂಗತಿ ಮನದಟ್ಟಾಗಿತ್ತು. ಕೆಪ್ಲರನ ಮೂರನೆಯ ನಿಯಮದಂತೆ, ಸರಳವಾಗಿ ಅನುಮಾನ ಕಟ್ಟಿದರೆ, ಚಂದ್ರಗೋಲವು ಪೃಥ್ವಿಯ ಮಧ್ಯಬಿಂದುವಿಗೆ ಆಕರ್ಷಿತವಾಗುವಂತೆ ಎಳೆಯುವ ಶಕ್ತಿಯು ಅದನ್ನು ಒಂದು ವರ್ತುಲ ಕಕ್ಷೆಯಲ್ಲಿ ತಿರುಗುವಂತೆ ಮಾಡುತ್ತಿದ್ದುದು ನಿಜವಾದರೆ, ಆ ಶಕ್ತಿಯು ಚಂದ್ರ ಮತ್ತು ಪೃಥ್ವಿ ಇವೆರಡರ ನಡುವಿನ ಅಂತರದ ವರ್ಗಃಕ್ಕೆ ವ್ಯಸ್ತ ಪ್ರಮಾಣ ದಲ್ಲಿ ಇರಬೇಕು.

೧೬೭೯ ರಲ್ಲಿ ಹೂಕನೊಂದಿಗೆ ಪತ್ರವ್ಯವಹಾರ ನಡೆಯಿಸುತಿದ್ದಾಗ ನ್ಯೂಟನ ಹೊಸ ಶೋಧವನ್ನೊಂದು ಮಾಡಿದನು. ಆ ಶೋಧವೆಂದರೆ, ಒಂದು ಕೇಂದ್ರೀಯ ಶಕ್ತಿಯ ಪ್ರಭಾವದಲ್ಲಿ ಚಲಿಸುವ ವಸ್ತುವಿನ ಕಕ್ಷೆಯನ್ನು ಚಲನದ ಮಾರ್ಗವನ್ನು–ಗೊತ್ತು ಹಿಡಿದ ಗಣಿತತಂತ್ರ. ಈ ತಂತ್ರದಿಂದ ಆತ ಸಿದ್ಧಮಾಡಿದನೇನೆಂದರೆ ಆ ಶಕ್ತಿಯು ವರ್ಗದ ವ್ಯಸ್ತಪ್ರಮಾಣದಂತೆ ವ್ಯತ್ಯಾಸ ಪಡುತ್ತಿದ್ದರೆ, ಅದರ ಕಕ್ಷೆಯು ಒಂದು ಲಂಬ ವರ್ತುಲವಾಗುವಂತೆ ಅಂಡಾಕೃತಿಯಾಗುವದು–ಮತ್ತು ಆ ಶಕ್ತಿಯ ಕೇಂದ್ರವು ಆ ಅಂಡಾಕೃತಿಯ ಒಂದು ಮಧ್ಯಬಿಂದುವಾಗುವದು. (ಲಂಬ ವರ್ತುಲಕ್ಕೆ ಯಾವಾಗಲೂ ಎರಡು ಮಧ್ಯಬಿಂದುಗಳಿರುತ್ತವೆ.)

ಕೊನೆಗೆ ೧೬೮೫ ರಲ್ಲಿ ಈ ಸಿದ್ಧಾಂತಕ್ಕೆ ಮುಖ್ಯ ತೊಡಕಾಗಿದ್ದ ಸಂಗತಿಯನ್ನು ಆತನು ನಿವಾರಿಸಿದನು. ಈ ತೊಡಕೆಂದರೆ ಸೂರ್ಯ ಚಂದ್ರರ ಆಕಾರವನ್ನು ಅಳೆದು ಲೆಕ್ಕ ಹಾಕುವದು. ಇವೆರಡು ಗೋಲಗಳ ಅಂತರವು ಪೃಥ್ವಿಯಿಂದ ಪ್ರಚಂಡ ದೂರದಲ್ಲಿ ಇದ್ದುದರಿಂದ ಅವುಗಳ ಆಕಾರಮಾನವನ್ನು ಗುಣಿಸುವದು ಅಶಕ್ಯವೆನಿಸಿತ್ತು. ಆಗ ನ್ಯೂಟನ್ ಹೊಸದೊಂದು ರಹಸ್ಯವನ್ನು ಗೊತ್ತು ಮಾಡಿದನು. ಪ್ರತಿಯೊಂದು ಕಣವೂ ಇನ್ನೊಂದು ಕಣವನ್ನು ತಮ್ಮ ನಡುವಿನ ಅಂತರದ ವರ್ಗದ ವ್ಯಸ್ತಪ್ರಮಾಣದಲ್ಲಿ ಆಕರ್ಷಿಸುವದೆಂಬುದೇ ಆ ರಹಸ್ಯ. ಈ ನಿಯಮಕ್ಕೆ ಅನುಸಾರವಾಗಿ ಗೋಲಗಳ ಗಾತ್ರದ ಉಸಾಬರಿಯೇ ಉಳಿಯಲಿಲ್ಲ. ಗೋಲಗಳ ನಡುವಿನ ಆಕರ್ಷಣೆಯು ಅವುಗಳ ಮಧ್ಯಬಿಂದುಗಳ ಆಕರ್ಷಣೆಯಷ್ಟೇ ಎಂದು ಸಿದ್ಧವಾಯಿತು. ಪ್ರತಿಗೋಲವನ್ನೂ ಗಾತ್ರದಲ್ಲಿ ಅದರ ಮಧ್ಯಬಿಂದುವಿಗೆ ಸರಿಯೆಂದು ತಿಳಿದು ಅಂತರದ ಲೆಕ್ಕ ಹಾಕಿದರೆ ಮಿಕ್ಕುದೆಲ್ಲ ಸುಗಮ. ಈ ಸಮೀಕರಣದ ಮೂಲಕ ಗುರುತ್ವಾಕರ್ಷಣೆಯ ಗಣಿತವು ಬರೆ ಸರಾಸರಿ ಸುಮಾರಿನ ಲೆಕ್ಕವಾಗಿ ಉಳಿಯಲಿಲ್ಲ. ನಿಶ್ಚಿತ ಗಣಿತ ಕ್ರಮವಾಯಿತು. ಇದೇ ಸಮಯ

ಪಿಕಾರ್ಡ ಎಂಬ ಭೂಗೋಲ ತಜ್ಞನ ಅಕ್ಷಾಂಶದ ಅಳತೆಯು ಪ್ರಸಿದ್ಧವಾಯಿತು. ಆ ಅಳತೆಯ ಆಧಾರದಿಂದ ನ್ಯೂಟನ್ ತನ್ನ ಈ ಮಹಾಶೋಧದ ಗಣಿತವನ್ನು ಯಶಸ್ವಿಯಾದ ತೀರ್ಮಾನಕ್ಕೆ ತಂದನು.

ಆ ತೀರ್ಮಾನವೆಂತಹದು ? ಬ್ರಹ್ಮಾಂಡವನ್ನೇ ತೂಗುವ ಶಕ್ತಿ ಆತನ ಅಂಗೈಯ ನೆಲ್ಲಿ ಆಯಿತು ! ಸೌರ ಮಂಡಳದ ಗ್ರಹಗೋಲಗಳ–ಜ್ಯೋತಿರ್ಲೋಕದ ಸ್ಥಿತಿ ಗತಿಗಳ–ವಿಶ್ವದ ಅಸ್ತಿತ್ವ ಮತ್ತು ಸಂಚಲನದ ತತ್ವವನ್ನೇ ಅವನು ಕಂಡು ಸಾರಿದ್ದನು.

ಇದನ್ನು ಸಾರಿದ ಆತನ ಗ್ರಂಥ–ಅದಕ್ಕೆ ಪ್ರಿನ್ಸಿಪಿಯಾ ಎಂದು ಸಂಕ್ಷಿಪ್ತ ಹೆಸರು– ಇದು ಜಗತ್ತಿಗೆ ದೊರೆತುದರ ಶ್ರೇಯ ಹ್ಯಾಲ್ಲಿಗೆ ಸಲ್ಲಬೇಕು. ಅವನ ಪ್ರೋತ್ಸಾಹ ದಿಂದ ನ್ಯೂಟನ್ ಆ ಗ್ರಂಥವನ್ನು ಬರೆದನು. ಅದನ್ನು ಸ್ವಂತ ವೆಚ್ಚದಿಂದ ಅಚ್ಚು ಹಾಕಿಸಿದನು. ಈ ನಡುವೆ ಇನ್ನೊಂದು ತೊಡಕು ಎದ್ದಿತು. ನ್ಯೂಟನ್‌ನೊಡನೆ ಪತ್ರವ್ಯವಹಾರವಿಟ್ಟುಕೊಂಡ ರಾಬರ್ಟ ಹೂಕನು ಕೆಲವು ಶೋಧಗಳನ್ನು ತನ್ನವೆಂದು ಹೇಳತೊಡಗಿದನು. ಹಾಗೆ ಹೇಳುವದು ಸುಲಭವಿತ್ತು. ನ್ಯೂಟನ್ ಆತನನ್ನು ಕೆಲಮಟ್ಟಿಗೆ ವಿಶ್ವಾಸದಲ್ಲಿ ತೆಗೆದುಕೊಂಡಿದ್ದನು. ಮಸೆಯುವ ಕಲ್ಲಿನಿಂದ ಕತ್ತಿಯು ಅಲಗು ತೀಕ್ಷ್ಣ ಹರಿತವನ್ನು ತಾಳುತ್ತದೆ. ಅಂದಮಾತ್ರಕೆ ಕತ್ತಿಯ ಬೆಲೆ ಆ ಕಲ್ಲಿಗೆ ಬಂದೀತೆ ? ಆದರೂ ಹೂಕನು ಒಡ್ಡಿದ ಈ ತೊಡಕುಗಳನ್ನು ಹ್ಯಾಲಿಯು ಉಪಾಯವಾಗಿ ನಿವಾರಿಸಿದನು.

ಈ ಗ್ರಂಥವು ಪ್ರಸಿದ್ಧವಾಗುವ ತುಸು ಪೂರ್ವದಲ್ಲಿ ನ್ಯೂಟನ್ ಅಂದಿನ ಬ್ರಿಟಿಶ ಅರಸ ಎರಡನೆ ಜೇಮ್ಸನ ವಿರುದ್ಧ ವಿಶ್ವ ವಿದ್ಯಾಲಯದ ವಿಶೇಷಾಧಿಕಾರಗಳನ್ನು ರಕ್ಷಿಸಲು ಆ ಸಂಸ್ಥೆ ಹೂಡಿದ ಪ್ರತಿಭಟನೆಯಲ್ಲಿ ಭಾಗವಹಿಸಿದ್ದನು. ಅರಸನು ವಿಶ್ವ ವಿದ್ಯಾಲಯದ ನಿಯಮಗಳನ್ನು ಉಲ್ಲಂಘಿಸಿ ಒಬ್ಬ ಧರ್ಮಗುರುವನ್ನು ಯೋಗ್ಯ ಪ್ರತಿಜ್ಞಾವಿಧಿ ಇಲ್ಲದೆ 'Master of Arts' ಪದವಿಗೆ ಅರ್ಹವಾಗಿ ಮಾಡಬೇಕೆಂದು ಹಟ ಹಿಡಿದಿದ್ದನು ! ಆ ಪ್ರಕರಣದಲ್ಲಿ ನ್ಯೂಟನ್ ವಹಿಸಿದ ಸ್ವಾತಂತ್ರ್ಯದ ಪಾತ್ರದಿಂದ ಪಾರ್ಲಿಮೆಂಟಿನಲ್ಲಿ ವಿಶ್ವ ವಿದ್ಯಾಲಯಕ್ಕೆ ಮೀಸಲಿದ್ದ ಪ್ರಾತಿನಿಧ್ಯವು ದೊರೆಯಿತು.

ಪ್ರತಿಭೆ ಮತ್ತು ಹುಚ್ಚು ಇವುಗಳ ನಡುವಿನ ಸೀಮಾರೇಖೆ ಬಹಳ ಸೂಕ್ಷ್ಮವಂತೆ. ಅದು ಹೇಗೂ ಇದ್ದರೂ ನ್ಯೂಟನ್‌ನ ಪ್ರತಿಭೆಗೆ ಹುಚ್ಚಿನ ರಾಹುಗ್ರಹಣ ಒದಗುವ

ಭಯವು ಸಂಭವಿಸಿತು. ಅವನು ಹುಚ್ಚನೇ ಆದನೆಂಬ ವದಂತಿಯೂ ಹಬ್ಬಿತು. ೧೬೯೨ ರಿಂದ ೯೪ ರ ತವಕ ಅವನಿಗೆ ಈ ವ್ಯಾಧಿ ಬಲವಾಗಿ ಪೀಡಿಸಿತು. ನ್ಯೂಟನ್ ಭ್ರಮಿಷ್ಠನಾಗಿದ್ದು ಹುಚ್ಚರ ಆಸ್ಪತ್ರೆಯಲ್ಲಿ ಉಪಚಾರ ಪಡೆಯುತ್ತಿದ್ದಾನೆಂಬ ಅಪಪ್ರಚಾರವೂ ಸಾಕಷ್ಟು ಆಯಿತು.

ಆದರೆ ಅದು ನಿಜವಿದ್ದಿಲ್ಲ. ಈ ನಡುವೆ ಅವನ ಹಿತಚಿಂತಕರು ಅವನಿಗಾಗಿ ಬಹಳ ಶ್ರಮವಹಿಸಿ ಸರಕಾರದಿಂದ ಒಂದು ಯೋಗ್ಯವೇತನದ ಅಧಿಕಾರವನ್ನು ಒದಗಿಸಿ ಕೊಡಲು ಯಶಸ್ವಿ ಆದರು. ೧೬೯೫ರಲ್ಲಿ ಅವನಿಗೆ ಟಂಕಸಾಲೆಯ ರಕ್ಷಕನ ಅಧಿಕಾರ ಕೊಡಿಸಲಾಯಿತು. ೪ ವರ್ಷಗಳಲ್ಲಿ ಆತ ಅಲ್ಲಿಯ ಮುಖ್ಯಾಧಿಕಾರಿ ಆದನು. ಟಂಕ ಸಾಲೆಗೂ ಪ್ರಯೋಗ ಶಾಲೆಗೂ ಯಾವ ದಾರಿ ? ಆದರೂ ಉಪಜೀವಿಕೆಗಾಗಿ ಆ ಕಾರ್ಯಕ್ಕೂ ನ್ಯೂಟನ್ ಹೊಡಿಕೊಂಡನು. ಮುಂದೆ ಫ್ರಾನ್ಸದ ವಿಜ್ಞಾನ ಮಂಡಳದ ಇಬ್ಬರು ವಿದೇಶಿ ಸಹಕಾರಿ ಸದಸ್ಯರಲ್ಲಿ ನ್ಯೂಟನ್‌ನೂ ಒಬ್ಬನಾಗಿ ಆರಿಸಲ್ಪಟ್ಟನು.

೧೭೦೧ ರಲ್ಲಿ ಅವನು ವಿಶ್ವವಿದ್ಯಾಲಯದ ಪರವಾಗಿ ಇನ್ನೊಮ್ಮೆ ಪಾರ್ಲಿಮೆಂಟಿಗೆ ಆರಿಸಲ್ಪಟ್ಟನು. ಈ ಸಲ ಪಾರ್ಲಿಮೆಂಟಿನ ಹಾಗೂ ಇತರ ಸಾರ್ವಜನಿಕ ಕಾರ್ಯ ಕಲಾಪಗಳು ಅವನ ವೇಳೆಯ ಬಹುಭಾಗವನ್ನು ನುಂಗಹತ್ತಿದ್ದವು. ಇವರಿಂದ ವೈಜ್ಞಾನಿಕ ವ್ಯಾಸಂಗಕ್ಕೆ ಅವನಿಗೆ ಬಿಡುವು ಉಳಿಯುತ್ತಿರಲಿಲ್ಲ. ಹೊಸ ಪಾರ್ಲಿಮೆಂಟಿನ ಸದಸ್ಯತ್ವ ಆರಂಭವಾದೊಡನೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕತ್ವವನ್ನೂ 'ಫೆಲೋ' ಪದವಿಯನ್ನೂ ಬಿಟ್ಟುಕೊಟ್ಟನು.

ಟಂಕಶಾಲೆಯ ಆಡಳಿತದಲ್ಲಿಯೂ ಅವನ ವೈಜ್ಞಾನಿಕ ಬುದ್ಧಿಯು ಅದೇ ಸುವ್ಯವಸ್ಥಿತ ಕಾರ್ಯ ಕೌಶಲ್ಯವನ್ನು ಕಾಣಿಸಿತು. ಸಾಯುವ ತನಕವೂ ಅವನು ಆ ಅಧಿಕಾರಕ್ಕೆ ಸುಯೋಗ್ಯನೆಂದು ನೇಮಕವಾಗಿ ಉಳಿದನು. ಆದರೆ ಆತನು ತನ್ನ ಪ್ರತಿಭೆಯ ಮೂಲ ಅಭಿರುಚಿಯನ್ನು ಕೊನೆಯವರೆಗೂ ಕಳಕೊಳ್ಳಲಿಲ್ಲ. ೧೭೦೨ ರಲ್ಲಿ ಆತನು ರಾಯಲ್ ಸೊಸೈಟಿಯ ಅಧ್ಯಕ್ಷನಾದನು. ಮುಂದೆ ೨೫ ವರ್ಷ ಅವನೆ ಆ ಅತ್ಯುಚ್ಚ ಗೌರವಕ್ಕೆ ಆದರದಿಂದ ಆರಿಸಲ್ಪಡುತ್ತಿದ್ದನು. ಅವನ ಅಧ್ಯಕ್ಷತೆ ಯಲ್ಲಿಯೇ ಫ್ಲೆಮಸ್ಟೀಡ ಎಂಬ ಜ್ಯೋತಿರ್ವಿದ್ವಾನನ 'ಗ್ರೀನಿಚದ ನಿರೀಕ್ಷಣೆಗಳು ಎಂಬ ಗ್ರಂಥವು ಪ್ರಕಟವಾಯಿತು. ನ್ಯೂಟನ್‌ನೇ ಆ ಗ್ರಂಥದ ಪ್ರಕಟನೆಗಾಗಿ ವ್ಯಕ್ತಿಶಃ ಗಮನವಿತ್ತನು. ಆದರೂ ಆ ಗ್ರಂಥದ ಕುರಿತು ಆ ವಿದ್ವಾನ್‌ನಿಗೂ ಈ ವಿಜ್ಞಾನಿಗೂ ತುಂಬ ವಿತಂಡವಾದ ಮತ್ತು ತನ್ಮೂಲಕ ಮನಸ್ತಾಪಗಳು ಸಂಭವಿಸಿದವು.

೧೭೦೫ ರಲ್ಲಿ ಅಂದಿನ ಬ್ರಿಟಿಶ ಮಹಾರಾಣಿ ಅನ್ನಳು ಕೇಂಬ್ರಿಜ ವಿಶ್ವ ವಿದ್ಯಾಲಯಕ್ಕೆ ಭೆಟ್ಟಿ ಇತ್ತಳು. ಆ ಸಂದರ್ಭದಲ್ಲಿ ನ್ಯೂಟನ್‌ನಿಗೆ 'ಸರ್' ಪದವಿಯನ್ನು ಸಮರ್ಪಿಸಲಾಯಿತು. ವಿಜ್ಞಾನಿಗೆ ಸಿಕ್ಕ ಲೋಕ ಪ್ರಶಸ್ತಿಗೆ ರಾಜಮುದ್ರೆಯು ಬಿದ್ದಿತು.

ಇದೇ ಸಮಯ ಒಂದು ವಿರಸವು ಉತ್ಪನ್ನವಾಯಿತು. ಕ್ಯಾಲ್‌ಕುಲಸ್ ತತ್ವದ ಶೋಧ ನ್ಯೂಟನ್‌ನು ಮಾಡಿದ್ದರಕ್ಕಿಂತ ಮೊದಲೆ ತಾನು ಮಾಡಿದ್ದೆನೆಂದು ಯುರೋಪದ ಅಂದಿನ ಮಹಾಗಣಿತ ಶಾಸ್ತ್ರಿಯಾದ ಲೆಬ್ನಿಝ್ ಎಂಬುವನು ವಾದ ಹೂಡಿದನು. ನ್ಯೂಟನ್ ತನ್ನ ಗಣಿತ ಸಿದ್ಧಾಂತವನ್ನು ಮೊದಲು ಮಂಡಿಸಿದಾಗಲೇ ಒಂದು ಅನಾಮಿಕ ಟೀಕೆ ಪ್ರಸಿದ್ಧವಾಗಿತ್ತು. ಆ ಟೀಕೆಯಲ್ಲಿ ಅವನ ಶೋಧಗಳೆಲ್ಲ ಲೆಬ್ನಿಝುನಿಂದ ಕದ್ದವೆಂದು ವಾದಿಸಲಾಗಿತ್ತು. ಆ ಟೀಕೆಯ ಲೇಖಕನು ಲೆಬ್ನಿಝುನೇ ಆಗಿದ್ದನು. ಹೀಗೆ ಆರಂಭವಾದ ಈ ವಾದವು ಅನೇಕ ವರ್ಷಗಳ ತನಕ ಸಾಗಿತು. ಲೆಬ್ನಿಝುನ ಮರಣಾನಂತರವೂ ಈ ಉಭಯ ವಿಜ್ಞಾನಿಗಳ ಪಕ್ಷ ಕಟ್ಟಿದ ಅಭಿಮಾನಿಗಳು ಯುರೋಪದಲ್ಲಿ ಪ್ರತಿಯೊಂದು ಶಾಲೆಯಲ್ಲಿಯೂ ಕಂಡು ಬರುತ್ತಿದ್ದರು. ಈಗಲೂ ಈ ವಾದದ ಇತ್ಯರ್ಥ ಮಾಡುವದು ತುಸು ಬಿಗಿಯೇ. ಆದಾಗ್ಯೂ ತಟಸ್ಥವೃತ್ತಿಯ ಇತಿಹಾಸಕಾರರು ಹೀಗೆ ಒಪ್ಪಿಕೊಳ್ಳಲು ಅನುಕೂಲವಾಗುವದು : ವಾದಾಸ್ಪದವಾದ ಗಣಿತ ಪದ್ಧತಿಗಳನ್ನು ನ್ಯೂಟನ್ ಲೆಬ್ನಿಝು ಇಬ್ಬರೂ ಸ್ವತಂತ್ರವಾಗಿ ಪರಿಶೋಧಿಸಿದ್ದರು. ಆದರೆ ಯುರೋಪದ ಆ ಗಣಿತಜ್ಞನಿಗಿಂತ ಮೊದಲು ನ್ಯೂಟನ್ ತನ್ನದನ್ನು ಪ್ರಸಿದ್ಧಿಪಡಿಸಿದನು. ಆದರೂ ಲೆಬ್ನಿಝುನ ಪದ್ಧತಿಯು ಹೆಚ್ಚು ಸುಗಮ ಮತ್ತು ಸಂಪೂರ್ಣವಿತ್ತು.

೧೭೨೭ ರಲ್ಲಿ ನ್ಯೂಟನ್ ಮತ್ತೆ ವಿಪರೀತ ಕಾಯಿಲೆಬಿದ್ದನು. ಅವನ ಆರೋಗ್ಯ ಮೊದಲಿಂದಲೇ ಕೆಡುತ್ತ ಬಂದಿತ್ತು. ಆ ವರ್ಷ ಮಾರ್ಚ ೨೦ ನೇ ದಿನ ಕೆನ್‌ಸಿಂಗ್ಟನ್ ಎಂಬಲ್ಲಿ ಮೂತ್ರಾಶಯದಲ್ಲಿಯ ಹರಳಿನ ವಿಕಾರದಿಂದ ನ್ಯೂಟನ್‌ನ ಅಂತ್ಯವಾಯಿತು. ಬ್ರಿಟನ್‌ದ ಎಲ್ಲ ಮಹಾ ವಿಭೂತಿಗಳ ಕೊನೆಯ ವಿಶ್ರಾಮಧಾಮವಾದ ವೆಸ್ಟಮಿನಿಸ್ಟರ ಆಬೆ, ಎಂಬ ಪ್ರಾರ್ಥನಾಮಂದಿರದಲ್ಲಿ ಅದೇ ತಿಂಗಳ ೨೮ ಕ್ಕೆ ಅವನ ಶವವನ್ನು ಸಮಾಧಿಯಲ್ಲಿಡಲಾಯಿತು. ೧೭೩೧ ರಲ್ಲಿ ಅವನ ಸ್ಮಾರಕವನ್ನು ಕಟ್ಟಲಾಯಿತು.

ನ್ಯೂಟನ್ನನ ಹಲವು ನಿಲುವಿನ ಚಿತ್ರಗಳು ಪ್ರಸಿದ್ಧವಿದೆ. ರಾಯಲ್ ಸೊಸೈಟಿಯಲ್ಲಿ ಅವನ ಮೂರು ಚಿತ್ರಗಳಿರುತ್ತವೆ. ಅವುಗಳಲ್ಲಿ ಒಂದು ಜೆರ್ವಾಸ ಎಂಬ

ಚಿತ್ರಕಾರನು ಬರೆದದ್ದು ನ್ಯೂಟನ್‌ನೇ ಆ ಸಂಸ್ಥೆಗೆ ಕೊಟ್ಟಿದ್ದನು. ಅದು ಆ ಸಂಸ್ಥೆಯ ಅಧ್ಯಕ್ಷ ಪೀಠದ ಮೇಲೆ ಗೋಡೆಗೆ ತೂಗಿಡಲಾಗಿದೆ. ಟ್ರಿನೆಟಿ ಕಾಲೇಜಿನಲ್ಲಿ ಕೆಲವು ಚಿತ್ರಗಳಿವೆ. ರೌಬಿಲ್ಲಿಯಾಕ್ ಎಂಬ ಪ್ರಸಿದ್ಧ ಶಿಲ್ಪಿಯು ಕೆತ್ತಿದ ಭವ್ಯವಾದ ಪ್ರತಿಮೆಯನ್ನು ಕಾಲೇಜಿನ ಪ್ರಿನ್ಸಿಪಾಲ ಡಾ. ಸ್ಮಿಥ್ ಎಂಬವನು ಕಾಲೇಜಿಗೆ ಅರ್ಪಿಸಿದನು. ಅದು ಆ ಕಾಲೇಜಿನ ಪ್ರಾರ್ಥನಾ ಮಂದಿರದಲ್ಲಿ ನಿಲ್ಲಿಸಲಾಗಿದೆ. ಅದನ್ನೇ ಕುರಿತು ಆಂಗ್ಲ ಕವಿ ವರ್ಡ್ಸ್‌ವರ್ಥನು ಈ ಗಂಭೀರ ಪಂಕ್ತಿಗಳನ್ನು ಬರೆದನು.

ಇದು ಅಮೃತ ಶಿಲಾ ಪ್ರತೀಕ
ವಿಚಿತ್ರ ವಿಚಾರ ಸಾಗರಗಳಲ್ಲಿ
ಏಕಾಕಿ ಅನವರತ ಪಯಣದಲ್ಲಿ
ಸಂಚರಿಪ ಮನಸ್ಸಿನ ದ್ಯೋತಕ

ಆದರೆ ಈ ವಿಶ್ವವಿಖ್ಯಾತ ಅದ್ವಿತೀಯ ನಿಸರ್ಗ ದರ್ಶನದ ಮಹಾಜ್ಞಾನಿಯ ಪ್ರತಿಭೆಗೆ ಅತ್ಯುತ್ತಮ ಪ್ರಶಸ್ತಿಯೆಂದರೆ ಪೋಪ ಕವಿಯು ಬರೆದ ಅಮರ ದ್ವಿಪದಿಯು. ಈ ದ್ವಿಪದಿಯನ್ನು ನ್ಯೂಟನ್ ಹುಟ್ಟಿದ ಕೋಣೆಯಲ್ಲಿ ಒಂದು ಶಿಲೆಯ ಮೇಲೆ ಕೊರೆದಿಡಲಾಗಿದೆ :

'ಪ್ರಕೃತಿ, ಪ್ರಕೃತಿಯ ನಿಯಮ–
    ಎರಡನು ಕವಿದು ಅಡಗಿಸೆ ಕತ್ತಲು
ದೇವನಂದನು, 'ಬರಲಿ ನ್ಯೂಟನ್ !
    ಬೆಳಕೆ ಬೆಳಗಿತು ಎತ್ತಲು'

# ಲುಯಿ ಪಾಶ್ಚರ್

'ಇಚ್ಛೆ, ಕ್ರಿಯೆ ಮತ್ತು ಯಶಸ್ಸು–ಈ ಮೂರು ಸಂಗತಿಗಳು ನಮ್ಮ ಸಮಗ್ರ ಜೀವನವನ್ನು ವ್ಯಾಪಿಸುತ್ತವೆ. ಇಚ್ಛಾಶಕ್ತಿಯು ಉಜ್ಜ್ವಲವೂ ಸುಖಮಯವೂ ಆದ ಭಾಗ್ಯವೃತ್ತಗಳ ದ್ವಾರವನ್ನು ತೆರೆಯುತ್ತದೆ; ಕ್ರಿಯಾಶಕ್ತಿಯು ಆ ದ್ವಾರದ ಹೊಸ್ತಿಲವನ್ನು ದಾಟುತ್ತದೆ; ಮತ್ತು ಪ್ರವಾಸದ ಕೊನೆಯಲ್ಲಿ ಯಶಸ್ಸು ಬಂದು ನಮ್ಮ ಯತ್ನಗಳಿಗೆ ಮುಕುಟವನ್ನಿಡುತ್ತದೆ.' ... ಈ ಮೂರು ವಾಕ್ಯಗಳು ಯಾವುದೆ ವ್ಯಾಖ್ಯಾನದೊಳಗಿನ ಚಪ್ಪಾಳಿಗಳ ಚಾಟೂಕ್ತಿಗಳಲ್ಲ. ಯಾವುದೇ ಸದ್ಗುರು–ಸತ್ಪುರುಷರ 'ವಚನಾಮೃತ' 'ವಾಕ್ ಸುಧೆ'ಗಳಲ್ಲ. ಅಥವಾ ವಿಶ್ವವಿಜಯಿ ವಿಕ್ರಮಾದಿತ್ಯರ ವೀರೋದ್ಗಾರಗಳೂ ಅಲ್ಲ. ಇವು ಓರ್ವ ಸಾಧಾರಣ ಮಟ್ಟದ ಸರಳ ವೃತ್ತಿಯ 'ಮದ್ದು ಮಾರುವ' ರಸಾಯನಿಕನ ಮಾತುಗಳು. ರಸಾಯನ ಕ್ರಿಯೆಯಲ್ಲಿ ಯುಗಿಲಾದ ಸೋಜಿಗವನ್ನೂ ಸೊಗಸನ್ನೂ ಕಂಡ ಆ ಮಹಾನುಭಾವನು ತನ್ನ ಬಾಳಿನ ಆಳದಿಂದ ಆಯ್ದು ತೆಗೆದ ಆಣಿಮುತ್ತುಗಳಿವು. ಅವನ ಬಾಳನ್ನು ಪ್ರತಿಭಾಮಯವಾಗಿ ಬೆಳಗಿದ ಅವನ ಅನೇಕ ಅನುಭವದ ನುಡಿಗಳಲ್ಲಿ ಇವೂ ಸೇರಿವೆ. ಆದರೆ ಇವೇ ಮೂರು ಮಾತುಗಳು ಅವನ ಜೀವನದ ಧನ್ಯಶಿಲ್ಪನವನ್ನು ರೇಖಿಸಿದ ಮೂಲ ಸೂತ್ರಗಳಂತಿವೆ.

ಆ ಮದ್ದು ಮಾರುವ ಮಹಾನುಭಾವನು ಲುಯಿ ಪಾಶ್ಚರ್. ನಾಗರಿಕ ಪ್ರಪಂಚದಲ್ಲಿ ಲುಯಿ ಪಾಶ್ಚರನ ಹೆಸರು ಮನೆಮಾತಾಗಿದೆ. ಅತ್ಯಂತ 'ಸಾಮಾನ್ಯ ಮನುಷ್ಯ'ನಾಗಿ ಬಾಳಿಯೂ ಅಷ್ಟೇ ಅಸಾಮಾನ್ಯ, ಜಗನ್ಮಾನ್ಯ ಪ್ರತಿಭೆಯನ್ನು ಬೆಳಗಿಸಿದ ಮಹಾಪುರುಷ, ಇವನು. ಯುದ್ಧದಲ್ಲಿ ಗೆಲುವುಗಳಾಗುವದುಂಟು ಆ ಗೆಲುವುಗಳು ಲೋಕದ ಕಣ್ಣು ಕುಕ್ಕುವಂತಹವಾಗಿ ಮೆರೆಯುವವೂ ಸಹಜ. ಆದರೆ ಶಾಂತತೆಯ ಕಾಲದಲ್ಲಿಯೂ ಸಾಮಾಜಿಕ ವೈಯಕ್ತಿಕ ರಂಗದಲ್ಲಿಯೂ ಸತ್ಯದ ಶೋಧ, ಜ್ಞಾನದ ವಿಜಯ, ಲೋಕ ಕಲ್ಯಾಣದ ಅವಿರತ ಅವಿಶ್ರಾಂತ ಕಾರ್ಯ, ರೋಗ ನಿವಾರಣೆ, ಸ್ವಾಸ್ಥ್ಯ ರಕ್ಷಣೆ, ಜೀವನ ಸಂಸ್ಕಾರ–ಇವೇ ಮುಂತಾದ ನಿತ್ಯ ಸಾಧನೆಯ ಸರ್ವತೋಮುಖ ಸಂಘರ್ಷದಲ್ಲಿ ಗಳಿಸಿದ ಗೆಲುವುಗಳು ದಿಗ್ವಿಜಯ ದಷ್ಟೇ ಸಾಹಸ ರಮ್ಯವಾದವುಗಳು; ಸಾಹಸ ರಮ್ಯರೂ ವೀರ ಚರಿತ ಲುಯಿ ಪಾಶ್ಚರನಂಥ ಸತ್ಯಾರ್ಥಿಗಳು, ಶೋಧ ರಂಗದ ಯೋಧರು ದೊರಕಿಸಿದ ವಿಜಯಗಳು ಪಾಶವಿ ಶಕ್ತಿಯ ಅತ್ಯಾಚಾರಗಳಲ್ಲ. ಶಸ್ತ್ರ ಪ್ರಪಂಚದ ವಿಜಯಗಳು, ಮಾನವತೆಯ ಉದ್ಧಾರ. ನಾಗರಿಕತೆಯ ಆಧಾರ.

ಲುಯಿ ಪಾಶ್ಚರನು ಮಾನವ ಕೋಟಿಗಾಗಿ, ವಿಜ್ಞಾನಕ್ಕಾಗಿ ಮಾಡಿದ ಕಾರ್ಯದ

ಮಹತ್ವದ ಕುರಿತು ಅತಿಶಯೋಕ್ತಿಯೇ ಅಶಕ್ಯ. ಅವನು ಸಾಧಿಸಿದ ಸಮುಜ್ವಲ ಸಂಶೋಧನೆಗಳು ಕಾಲದ ಕೊನೆಯುತನಕವೂ ಅಚ್ಚಳಿಯುವು. ಅವುಗಳಿಗೆ ಕಾರಣ ಆತನ ಅವಿಶ್ರಾಂತ ಪರಿಶ್ರಮ. ಅವನ ಕಾರ್ಯದ ಪ್ರಯೋಜನಗಳು ಅಷ್ಟೇ ಶಾಶ್ವತ ಮತ್ತು ಪ್ರಚಂಡ. ವಿಜ್ಞಾನವು ಇದುವರೆಗೆ ದಯಪಾಲಿಸಿದ ವರಗಳಲ್ಲಿ ಅತಿ ಶ್ರೇಷ್ಠವಾದವುಗಳಲ್ಲಿ ಕೆಲವನ್ನು ಪಾಶ್ಚರನ ಪ್ರಯತ್ನಗಳೇ ಸಲ್ಲಿಸಿದವು. 'ಬೆಕ್ಟೀರಿಯಾ'–ಸೂಕ್ಷ್ಮದೃಶ್ಯ ಕ್ರಿಮಿ ಲೋಕದ ಅದ್ಭುತ ದರ್ಶನದ ಋಷಿಯೇ ಪಾಶ್ಚರನು. ಅನ್ನ ಕೊಳೆತು, ಪದಾರ್ಥಗಳೂ ರಸಾಯನಗಳೂ ಹುಳಿತು, ಉಂಟಾಗುವ ಸೂಕ್ಷ್ಮ ಜಂತುಗಳ ಕುರಿತು, ಹೊಸದೊಂದು ಶಾಸ್ತ್ರವೇ ಇವನಿಂದ ಉಂಟಾಯಿತು. ಈ ಮೂಲಕ ಆತನು ವೈದ್ಯವಿದ್ಯೆಗೆ ಅನೇಕ ವ್ಯಾಧಿ ರೋಗಗಳ ಕಾರಣ, ನಿವಾರಣೆಗಳನ್ನು ಕಂಡುಹಿಡಿಯಲು ಹೊಸದಾರಿಯನ್ನೇ ತೆರೆದನು. ವಾತಾವರಣದೊಳಗೆ ಕ್ರಿಮಿಗಳ ಅಸ್ತಿತ್ವವನ್ನು ಅವನು ಕಂಡು ಹಿಡಿದದ್ದರಿಂದ ಮುಂದೆ ಲಿಸ್ಟರನು ಜಂತುವಿನಾಶಕ ಔಷಧಿಗಳ ಶೋಧ ಮಾಡಲು ಅನುವಾಯಿತು. ಎಂಥ್ರೆಕ್ಸ, ಹಾಯ್ಡ್ರೊಫೋಬಿಯಾ, ರ್‍ಯಾಬಿಸ್ (ಹುಚ್ಚುನಾಯಿಯ ವಿಷಬಾಧೆ) ಇಂಥ ಭೀಕರ ವ್ಯಾಧಿಗಳ ಭಯದ ಕತ್ತನ್ನೇ ಅವನು ಹಿಚುಕಿದನೆನ್ನಬಹುದು. ಅಸಂಖ್ಯ ಮಾನವೀ ಜೀವಗಳು ಪಾಶ್ಚರನ ಪ್ರಸಾದದಿಂದ ಬದುಕಿಕೊಂಡಿವೆ; ಕೋಟ್ಯಾಂತರ ಜನರ ಯಾತನೆಗಳು ಪರಿಹಾರವನ್ನು ಕಂಡಿವೆ.

ಇದೆಲ್ಲ ಚಮತ್ಕಾರಕ್ಕೆ ಕಾರಣವಾದ ಆ ಅಸಾಮಾನ್ಯ ರಾಸಾಯನಿಕ ಪ್ರತಿಭೆಯ ಬೆಲೆಯನ್ನು ಎಷ್ಟು ಹೆಚ್ಚಿಗೆ ಕಟ್ಟಿದರೂ ಅದು ಕಡಿಮೆಯೇ. ಹಾಗೆಯೇ, ಆ ಪ್ರತಿಭೆಯನ್ನು ಒಡಮೂಡಿಸಿದ ಲುಯಿ ಪಾಶ್ಚರನ ಸರಲ, ಸಾಧುಚರಿತ್ರವನ್ನು ಎಷ್ಟು ಕೊಂಡಾಡಿದರೂ ಹೆಚ್ಚಾಗಲಿಕ್ಕಿಲ್ಲ. ಅವನ ಕಾರ್ಯದ ಮಹತ್ವವನ್ನು ಅಳೆಯುವದು ಎಷ್ಟು ಕಠಿಣವೋ, ಅವನ ಶೀಲದ ಮಾಹಾತ್ಮ್ಯವನ್ನು ಅಲ್ಲಗಳೆಯುವದು ಅಷ್ಟೇ ಕಠಿಣವಾದುದು. ಅವನ ಪ್ರತಿಭೆಯ ದೈದೀಪ್ಯಮಾನ ವಿಜಯಗಳ ಮತ್ತೂ ಅಂಥಾ ವಿಜಯಗಳ ದೀಪ್ತಿಯೊಡನೆ ಪ್ರಾಪ್ತವಾದ ಶ್ರೇಷ್ಠ ಸನ್ಮಾನಗಳ ನಡುವೆಯೂ ಅವನ ಸ್ವಭಾವವು ನಿಷ್ಕಲಂಕವಾಗಿ ನಿರಾಯಾಸವಾಗಿ ನಿಂತಿತು. ಪ್ರತಿಕೂಲ ಜಗತ್ತಿನ ತೀವ್ರ ತಿರಸ್ಕಾರದ ದಾಳಿಯನ್ನು ಎದುರಿಸಲು ಬೇಕಾದ ಧೈರ್ಯವು ಎಂದಿಗೂ ಹೆಚ್ಚಿನದು, ನಿಜ. ಆದರೆ ಅನುಕೂಲ ಜಗತ್ತಿನ ಪ್ರೀತಿ ಪುರಸ್ಕಾರಗಳ ಬಿರುಗಾಳಿಯಲ್ಲಿಯೂ ತತ್ವದಿಂದ ತತ್ತರಿಸದೆ ನಿಲ್ಲುವ ಸತ್ವಶೀಲನ ಮನಃಸ್ಥೈರ್ಯವು ಅದಕ್ಕೂ ಹಿರಿದು. ಹಿಂಸೆಗೆ ಬಗ್ಗದವರು ಹೊಗಳಿಕೆಗೆ ಒಲಿಯುವವುಂಟು. ಸೆರೆಮನೆ, ಸಿಡಿಗುಂಡು ಬಲತ್ಕಾರಕ್ಕೆ ಕುಗ್ಗದವರು ಹೂವಿನ ಹಾರಕ್ಕೆ ಜನಪ್ರಿಯತೆಯ ಉಪಹಾರಕ್ಕೆ ಕರಗುವದುಂಟು.

ಆದರೆ ಲುಯಿ ಪಾಶ್ಚರನು ಅಲ್ಲಿಯೂ ಗೆಲುವುಗಾರನೇ.

ಜೂರಾ ಪ್ರಾಂತದಲ್ಲಿ ದೊಲೇ ಎಂಬಲ್ಲಿ ಪಾಶ್ಚರನು ಹುಟ್ಟಿದ್ದು. ೧೮೨೨ನೇ ವರ್ಷ ಕ್ರಿಸ್‌ಮಸ್ ಹಬ್ಬಕ್ಕೆ ಎರಡು ದಿನ ಮುಂಚೆ, ಪಾಶ್ಚರನು ತಾಯಿಯ ಗರ್ಭದಿಂದ ಬಹಿಶ್ಚರನಾದನು. ಪಾಶ್ಚರನ ತಂದೆ ತೊಗಲು ಹದಮಾಡುವ ಕಸಬುಗಾರನಾಗಿದ್ದ. ಆದರೆ ಅದಕ್ಕೂ ಮೊದಲು ಆತ ತುಬಾಕಿಯನ್ನು ಹೆಗಲಿಗೇರಿಸಿ ತೋಫನ್ನು ಎದುರಿಸಿ ಶತ್ರುಗಳ ಚರ್ಮವನ್ನು ಹದಮಾಡುವ ವೀರ ಎದೆಗಾರನಾಗಿಯೂ ದುಡಿದಿದ್ದನು. ದಿಗ್ವಿಜಯಿಯು ನೆಪೋಲಿಯನ್ನನ ದಂಡಿನಲ್ಲಿ ಸೇರಿ ಯುದ್ಧಪರ್ವದಲ್ಲಿ ಪುಟ್ಟ ದಳಪತಿಯಾಗಿ ಆತ ಸೇವೆಯನ್ನು ಸಲ್ಲಿಸಿದ್ದನು. ಮುಂದೆ ಯುದ್ಧ ಮುಗಿದ ಮೇಲೆ ಊರಿಗೆ ಮರಳಿ ಮನೆತನದ ಮಾದಿಗ ವೃತ್ತಿಯನ್ನು ಕೈಗೊಂಡನು. ನೆಪೋಲಿಯನ್ನನ ಸಂಪರ್ಕದಲ್ಲಿ ಬಂದವರಲ್ಲಿ ಸಾಹಸ ಪ್ರಿಯತೆಯೊಂದಿಗೆ ನಿಸರ್ಗ ಪ್ರೇಮವೂ ಒಂದು ಸಾಂಪ್ರದಾಯವಾಗಿ ನಡೆದು ಬಂದಿತ್ತು. ಆ ಸಾಂಪ್ರದಾಯದ ಸಂಸ್ಕಾರವೂ ಬಾಲ ಲುಯಿಯ ಮೇಲೆ ಆಗದೇ ಉಳಿಯಲಿಲ್ಲ.

ಚಿಕ್ಕಂದಿನಲ್ಲಿಯೇ ಲುಯಿಯಲ್ಲಿ ಪ್ರಕೃತಿಸೌಂದರ್ಯದ ಕುರಿತು ಆಸಕ್ತಿಯು ಅತಿಯಾಗಿ ತುಂಬಿಬಂದಿತ್ತು. ತನ್ನ ಸುತ್ತಲಿನ ಬೆಟ್ಟ ಬಯಲುಗಳ ಬೆಡಗುಗಳಿಗೆ ಮಾರೆಗೊಂಡ ಅವನ ಮನಸ್ಸು ಅದನ್ನು ಚಿತ್ರಕಲೆಯಲ್ಲಿ ಮೂಡಿಸಿ ನೋಡುವದರಲ್ಲಿ ಜೀವನ್ನು ಪಡೆಯಿತು. ತರಳ ಲುಯಿಯು ಚಿತ್ರಗಳನ್ನು ಬರೆಯತೊಡಗಿದನು. ತನ್ನ ತಂದೆ ತಾಯಿಗಳ 'ತಸಬೀರು'ಗಳನ್ನು ಆತನು 'ಬಿಡಿಸಿದನು;' ಹಲವು ಹಳ್ಳಿಯ ಗೆಳೆಯರು ತಮ್ಮ ಮೋರೆಗಳನ್ನು ಅವನ ಚಿತ್ರಗಳಲ್ಲಿ ಗುರುತಿಸಿದರು ! ಅವನ ಹದಿನಾರು ವರ್ಷ ವಯಸ್ಸಿನವರೆಗೂ ಈ ಚಿತ್ರಕಲಾಸಕ್ತಿಯು ಪಾಶ್ಚರನಲ್ಲಿ ಪ್ರಬಲವಾಗುತ್ತಲೇ ಹೋಯಿತು. ಆದರೆ ಅದೇಕೋ ಮುಂದೆ ಅವನ ಬಾಳಿನ ಪಲ್ಲವಿ ಬೇರೆ ಶ್ರುತಿಯನ್ನು ಹಿಡಿಯಿತು. ಆಪ್ತೇಷ್ಟರ ಆಕೃತಿಗಳನ್ನು ಅಂದಗೆಡಿಸುವ ಬಣ್ಣಗೇಡಿತನಕ್ಕಿಂತಲೂ ಹಿರಿದಾದ ಮತ್ತು ಒಳಿತಾದ ಕೆಲಸ ತನಗಾಗಿ ಮುಂದೆ ಇದಿದೆಯೆಂಬ ಅರಿವು ಆತನಿಗೆ ಆಗಿರಬೇಕು.

ಲುಯಿಯಲ್ಲಿ ಚಿತ್ರಕಲಾಭಿರುಚಿಗೂ, ಮಿಗಿಲಾದ ಒಂದು ಆಕರ್ಷಕ ಪ್ರವೃತ್ತಿಯು ಕಾಣಿಸಿಕೊಂಡಿತು. ರಮ್ಯವೂ ನಿರಮ್ಯವೂ ಆದ ಸಾಹಸ ಪ್ರಿಯತೆಯೇ ಅದು. ಪರಿಣಾಮ ಲೆಕ್ಕಿಸದೆ, ಪ್ರತಿಫಲದ ಲೆಕ್ಕ ಹಾಕದೆ ಯಾರ ಸಹಾಯಕ್ಕೂ ಧುಡುಕುವ ಚಾಪಲ್ಯವು ಇವನದು. ಈ ಚಾಪಲ್ಯ ಅವನಲ್ಲಿ ತಂದೆಯಿಂದ ಬಂದು ಬಂದ ಚಾಳಿ. ನೆಪೋಲಿಯುನ್ನನ ಪತನದ ನಂತರ, ೧೮ ನೇ ಲುಯಿಯ

ಸೈನ್ಯಾಧಿಕಾರಿಗಳಿಗೆ ಪಾಶ್ಚರನ ತಂದೆಯು ಮಿಕ್ಕ ದಂಡಿನೊಡನೆ ಶರಣುಹೋಗಿ ಶಸ್ತ್ರ ಒಪ್ಪಿಸುವ ಪ್ರಸಂಗ ಬಂದಿತು. ಈ ಪ್ರಸಂಗದಲ್ಲಿ ವಿಧಿಯಂತೆ ಒಪ್ಪಿಸಿದ ತನ್ನ ಖಡ್ಗವನ್ನು ಮೇಲಧಿಕಾರಿಯು ಕೈಯಿಂದ ಪಾಶ್ಚರನ ತಂದೆಯು ವಿಲಕ್ಷಣ ದಿಟ್ಟತನದಿಂದ ಥಕ್ಕನೆ ಮರಳಿ ಸೆಳೆದುಕೊಂಡನು! ದಂಡಿನೊಡನೆ ಶರಣು ಬಂದರೂ, ತಾನು ಸೋತಿಲ್ಲವೆಂಬ ಒಂದು ಪುಂಡತನದ ಮೇರೆ ಮೀರಿದ ಬಿಂಕವೇ ಅವನನ್ನು ಅಂಥ ಈ ಸಾಹಸಕ್ಕೆ ಕೆಣಕಿತು. ಅದೇ ಬಿಂಕವು ತಂದೆಯಿಂದ ಮಗನಲ್ಲಿಯೂ ಬಂದಿತು. ಅವನ ಸಾಹಸದ ಅಹಂಕಾರಕ್ಕೆ ಸಹನೆಯ ಅಲಂಕಾರವು ಒಪ್ಪು ಕೊಟ್ಟಿತು. ತನ್ನ ತಂದೆಯಿಂದ ಫ್ರೆಂಚ ಪ್ರಜಾರಾಜ್ಯದ ಸ್ವಯಂಸೇವಕ ನಿಂದ ಅರಗಿಸಿಕೊಂಡ ಆದರ್ಶಗಳಿಗೆ ಆತನು ಅಚಲವಾಗಿ ಅಂಟಿಕೊಂಡು ನಿಂತನು. ಆದರೆ ಆತನು ಪರಾಕ್ರಮ, ಯುದ್ಧದಲ್ಲಿ ವಿಜಯ ಇಷ್ಟೇ ದೇಶಭಕ್ತಿಯೆಂದು ತಿಳಿದಿದ್ದಿಲ್ಲ, ಫ್ರಾನ್ಸದೇಶಕ್ಕೆ ರಾಜ್ಯಕ್ರಾಂತಿಯ ಪೂರ್ವದಲ್ಲಿ ಯಾವ ಜ್ಞಾನ-ವಿಜ್ಞಾನ ಪ್ರಪಂಚದ ಧುರೀಣತ್ವವು ಅದರ ಸ್ವತ್ತಾಗಿತ್ತೊ ಆ ಗೌರವವನ್ನು ತನ್ನ ಮಾತೃಭೂಮಿಗೆ ಮರಳಿ ದೊರಕಿಸುವದೇ ಅವನ ಜೀವನ ಗುರಿಯಾಗಿದ್ದಿತು. ಇದು ಅವನ ದೇಶಭಕ್ತಿಯ ದಿವ್ಯ ಕಲ್ಪನೆಯು.

ಇದರ ಒಂದು ದ್ಯೋತಕವನ್ನು ಇಲ್ಲಿಯೇ ಉದಾಹರಿಸಿ ಮುಂದುವರಿಯಬಹುದು. ಅವನ ಕಾಲದಲ್ಲಿಯೇ ಫ್ರಾನ್ಸ ಪ್ರುಸಿಯಾಗಳ ನಡುವೆ ಯುದ್ಧಕ್ಕೆ ಮೊದಲಾಯಿತು. ಆ ಸಂದರ್ಭದಲ್ಲಿ ಪಾಶ್ಚರನು ಬೊನ್‌ಶಹರದ ವೈದ್ಯ ಮಹಾಸಭೆಗೆ ಮಾನವೀ ಸಂಹಾರದ ಕಾಡ ಪ್ರವೃತ್ತಿಯ ವಿರುದ್ಧ ತೀವ್ರ ಸಂತಾಪದ ನಿಷೇಧವನ್ನು ಬರೆದು ಕಳಿಸಿದನು. ವಿಜ್ಞಾನದ ವಿದ್ವಾಂಸರು ಇಂಥ ವಿಧ್ವಂಸದ ಸಾಧನೆಯ ಬದಲು, ತಮ್ಮ ದೇಶದ ಶ್ರೇಯೋ ವೈಭವವನ್ನು ವೃದ್ಧಿಗೊಳಿಸುವ ಕಾರ್ಯದಲ್ಲಿ ತೊಡಗ ಬೇಕೆಂದು ಆತನು ನಿರ್ದಾಕ್ಷಿಣ್ಯವಾಗಿ ಅಭಿಪ್ರಾಯ ಪಟ್ಟನು.

ಪಾಶ್ಚರನ ಜನ್ಮವಾದ ಕೆಲವೇ ದಿನಗಳ ನಂತರ ಆತನ ಕುಟುಂಬವು ಆರ್ಬೋಯ್ ಎಂಬಲ್ಲಿಗೆ ಹೋಗಿ ನೆಲೆಸಿತು. ಲುಯಿಯ ಶಾಲಾಭ್ಯಾಸ ಅಲ್ಲಿ ಆರಂಭವಾಯಿತು. ಆದರೆ ೧೮೩೮ ರಲ್ಲಿ-ಆತನ ೧೬ ನೇ ವರ್ಷ ಪ್ರಾಯದಲ್ಲಿ ಆತನನ್ನು ಪ್ಯಾರಿಸ್ ಪಟ್ಟಣದ ಲ್ಯಾಟಿನ್ ವಿಭಾಗದಲ್ಲಿ ಶಾಲೆಗೆ ಹಾಕಲಾಯಿತು. ಅಲ್ಲಿ ಒಂಟಿಬಾಳಿನ ಬೇಸರ (ಮತ್ತು ಮನೆಯ ಹಂಬಲಿನ ಬೇನೆ) ಆತನನ್ನು ಅತಿಯಾಗಿ ಕಾಡಿ ಆರೋಗ್ಯವನ್ನೇ ಕೆಡಿಸಿತು. ನನಗೆ ಔಷಧ, ಉಪಚಾರ ಏನೂ ಬೇಕಿಲ್ಲ. ಮನೆಯ ಮಾದಿಗ ಶಾಲೆಯ 'ಪರಿಮಳ' ವನ್ನು ಮತ್ತೆ ಮೂಸುವಂತೆ ಆದರೆ ಸಾಕು. ನಾನು ನಿಜಕ್ಕೂ ವಾಸಿಯಾಗಬಲ್ಲೆನು.'-ಎಂದು ಲುಯಿಯು ಉದ್ಗರಿಸಿದನು.

ದಕ್ಕಾಗಿ ಆತ ಆರ್ಬೋಯಕ್ಕೆ ತಿರುಗಿ ಬಂದುದೂ ಆಯಿತು. ಆದರೆ ಶೀಘ್ರ ಲ್ಲಿಯೇ ಅವನು ಬೆಸೆಂಕೊನ ಎಂಬಲ್ಲಿ ರಾಯಲ ಕಾಲೇಜ ಸಂಸ್ಥೆಯನ್ನು ೇರಿದನು. ಅಲ್ಲಿ ೧೮೪೦ ನೇ ವರ್ಷ ಆವನು ಸಾಹಿತ್ಯಕ ಪದವೀ ಪರೀಕ್ಷೆಯನ್ನು ಪ್ಯಾಸು' ಮಾಡಿದನು. ಪದವಿಯನ್ನು ಪಡೆದ ಮೇಲೆ ಅದೇ ಕಾಲೇಜಿನಲ್ಲಿ ಾಶ್ಚರನು ಗಣಿತ ಶಿಕ್ಷಕನಾಗಿ ನಿಂತನು; ಮತ್ತು ಎರಡು ವರ್ಷಗಳ ನಂತರ ಜ್ಞಾನ ಶಾಸ್ತ್ರದಲ್ಲಿ ಉಚ್ಚಪದವಿಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದನು. ಆದರೆ ಸೋಜಿಗ ನೋಡಿ ವಿಜ್ಞಾನದಲ್ಲಿ ಪದವೀಧರನಾದರೂ ರಸಾಯನ ಶಾಸ್ತ್ರದ ಷಯದಲ್ಲಿ ಅವನ ತರಗತಿ 'ಸಾಧಾರಣ'ವೆಂದೇ ತೀರ್ಮಾನವಾಗಿತ್ತು. ಪರೀಕ್ಷೆ ಗಳಲ್ಲಿ ಪ್ರ ಕ ಟ ವಾ ಗು ವ ಪ್ರಗತಿ ಪ್ರಾವೀಣ್ಯಗಳಿಗೂ ಪ್ರತಿಭೆಯ ಸ್ವಚ್ಛಂದ ಪ್ರಭಾವಕ್ಕೂ ಯಾವ ದೂರದ ಹಾದಿಯೆಂಬುದು ಇದರಿಂದ ಸಿದ್ಧ !

ಈ ನಂತರ ಸೊರಬೊನ್ ಸಂಸ್ಥೆಯಲ್ಲಿ ಆಗ ಹೆಸರಾದ ಜೆ. ಬಿ. ಡುಮಾ ಎಂಬ ಜ್ಞಾನಿಯಲ್ಲಿ ಪಾಶ್ಚರನು ರಸಾಯನ ಶಾಸ್ತ್ರವನ್ನು ಅಭ್ಯಸಿಸಿದನು; ಮುಂದೆ ೮೪೮ ರಲ್ಲಿ ಅವನನ್ನು ಡಿಜೋನ್ ಸಂಸ್ಥೆಯಲ್ಲಿ ಪದಾರ್ಥ ವಿಜ್ಞಾನದ ಪ್ರಾಧ್ಯಾಪಕ ನ್ನಾಗಿ ನೇಮಿಸಲಾಯಿತು. ಆದರೆ ಅಲ್ಲಿಂದ ಶೀಘ್ರದಲ್ಲಿಯೇ ಅವನು ಸ್ಟ್ರಾನಬರ್ಗ ಲ್ಲಿಯ ವಿದ್ಯಾಪೀಠಕ್ಕೆ ಹೋಗಿ ಸೇರಿದನು. ಅಲ್ಲಿ ಅವನು ರಸಾಯನ ಶಾಸ್ತ್ರವನ್ನೇ ಲಿಸಲು ಆರಂಭಿಸಿದನು. ಸ್ಟ್ರಾಸಬರ್ಗದ ಸಂಸ್ಥೆಯಲ್ಲಿ ಹೀಗೆ ಒಮ್ಮೆಲೇ ಮನ್ನಣೆಯು ಣೆಯೂ ಅವನಿಗೆ ದೊರಕಲು ಕಾರಣ ಅವನು ಪ್ರಥಮತಃ ಬರೆದ ಮೌಲಿಕ ಂಶೋಧನೆಯ ಒಂದು ಪ್ರಬಂಧ. 'ರೆಸೆಮಿಕ್ ಎಸಿಡ್' ಎಂಬ ಆಮ್ಲ ದ್ರವದ ಶಿಷ್ಟ ಗುಣ ಧರ್ಮಗಳ ಕುರಿತು ಈ ಪ್ರಬಂಧ ಬರೆಯಲಾಗಿತ್ತು. ಇದು ಅವನ ಪ್ರ ಥ ಮ ವಿಜಯ. ಈ ಮೂಲಕ ಸೊರ್‌ಬೊನದ ಯುರೋಪದಲ್ಲಿಯೇ ತಿಹಾಸ ಪ್ರಸಿದ್ಧವಾದ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಜೆ. ಬಿ. ಬಿಯೊತ್ ಂಬವನ ಗೆಳೆತನದ ಯೋಗ ಕೂಡಿ ಬಂದಿತು. ಈ ಗೆಳೆತನ, ಮುಂದೆ ೀವಾವಧಿ ಬೆಳೆದು ಉಳಿಯಿತು. ಇದು ಕೇವಲ ವೈಯಕ್ತಿಕ ಒಡನಾಟದ ಳೆತನವಿದ್ದಿಲ್ಲ. ಉಭಯ ವಿಜ್ಞಾನಿಗಳ ಅನ್ಯೋನ್ಯ ಸಾಹಚರ್ಯದ ಸಂಯುಕ್ತ ರ್ಯ ಕ್ಷೇತ್ರದಲ್ಲಿ ಬೆಳೆದ 'ಅಪ್ತತ್ವ'ವಾಗಿತ್ತು. ಪ್ರಾ ಧ್ಯಾ ಪ ಕ ಬಿಯೋತನು ಲಕಾಲದಿಂದಲೂ ಒಂದು ಸಮಸ್ಯೆಯ ಕುರಿತು ತಲೆಹಾಕಿದ್ದನು. ಆ ಸಮಸ್ಯೆ ಂದಿನ ಇತರ ವಿಜ್ಞಾನಿಗಳ ತಲೆಯನ್ನು ತಿನ್ನುತ್ತಿತ್ತು. ಪ್ರಕಾಶದ ಚುಂಬಕ ್ರುವಕೇಂದ್ರೀಕರಣದ ಪ್ರಶ್ನೆಯೇ ಅದು. ಪಾಶ್ಚರನ ಸೂಕ್ಷ್ಮಾವಲೋಕನೆಯು ಪ್ರಶ್ನೆಯನ್ನು ಬಿಡಿಸಿತು. ಬಿಯೊತ್‌ನ ಸಮಸ್ಯೆಯನ್ನು ಬಗೆಹರಿಸಿತು. ತರುಣ ಾಶ್ಚರನ ಈ ಅಲೌಕಿಕ ಸಹಾಯಕ್ಕೆ ವಿ.ಚ್ಚಿ ಆನಂದಚಕಿತನಾದ ಬಿಯೊತ್‌ನು

ಈ ತರಳನ ಕೈ ಕುಲುಕಿ ತೋಳು ತಟ್ಟಿ ಉದ್ಗರಿಸಿದನು. 'ನನ್ನ ಮುದ್ದು ಹುಡುಗನೇ, ನಾನು ಜೀವಮಾನವೆಲ್ಲ ವಿಜ್ಞಾನವನ್ನು ಪ್ರೀತಿಸಿದ್ದು ಅಷ್ಟಿಷ್ಟಲ್ಲ. ಆದಾಗ್ಯೂ ನನ್ನ ಈ ಕಾರ್ಯವು ನನ್ನ ಹೃದಯದಲ್ಲಿ ನವಸ್ಫುರಣವನ್ನು ಚಿಮ್ಮಿಸಿದೆ!'

ಲುಯಿಯು ಬಗೆಹರಿಸಿದ ಸಮಸ್ಯೆ ಸ್ವಲ್ಪದರಲ್ಲಿ ಹೀಗಿದೆ. ತೋರಿಕೆಗೆ ಒಂದೇ ರೂಪವಾಗಿದ್ದ ಎರಡು ಆಮ್ಲದ್ರವಗಳ (ಆ್ಯಸಿಡ್ಡುಗಳ) ಪ್ರತಿಕ್ರಿಯೆಯು ವಿದ್ಯುತ್ ಕೇಂದ್ರೀಕರಣಗೊಳಿಸಿದ ಪ್ರಕಾಶದ ಮೇಲೆ ಏಕರೂಪವಾಗಿ ಆಗುತಿದ್ದಿಲ್ಲ. ಒಂದು ಆಮ್ಲ ದ್ರವ್ಯವು ಆ ಪ್ರಕಾಶದ ಪಾತಳಿಯನ್ನು ಬಲಬದಿಗೆ ತಿರುಗಿಸುತಿತ್ತು. ಆದರೆ ಇನ್ನೊಂದು ಆಮ್ಲವು ಅಂಥ ಯಾವ ತಿರುಗುವ ಪ್ರತಿಕ್ರಿಯೆಯನ್ನು ಉಂಟುಮಾಡುತ್ತಿದ್ದಿಲ್ಲ. ಇದರ ರಹಸ್ಯವನ್ನು ಪಾಶ್ಚರನು ಊಹಿಸಿ ಉದಾ ಹರಿಸಿದನು. ನಿಷ್ಕ್ರಿಯ ಆಮ್ಲ ದ್ರವ್ಯವು ಒಂದೇ ವಿಧದ ರಾಸಾಯನಿಕ ರಚನೆಯ ಎರಡು ದ್ರವ್ಯಗಳ ಸಂಯುಕ್ತ ದ್ರವ್ಯವೆಂದು ಆತನು ಕಾಣಿಸಿದನು. ಇವೆರಡೂ ದ್ರವ್ಯಗಳ ಗುಣ ಧರ್ಮಗಳು ತೀರ ಭಿನ್ನವಿರಬೇಕು. ಅವುಗಳಲ್ಲಿ ಒಂದು ಮೊದಲನೆಯ ಪ್ರತಿಕ್ರಿಯೆಯಲ್ಲಿಯ ಆಮ್ಲದಂತೆಯೇ 'ಬಲಬದಿಗೆ ತಿರುಗುವ' ದ್ರವ್ಯವಿದ್ದು, ಇನ್ನೊಂದು ಹೊಸತೊಂದು ಆಮ್ಲವಾಗಿದ್ದು ಅದರ ಪ್ರತಿಕ್ರಿಯೆ ಅಷ್ಟೇ ತೀವ್ರ 'ಎಡಗಡೆ ತಿರುಗುವ' ಕ್ರಿಯೆ ಆಗಿರಬೇಕು. ಆದ್ದರಿಂದ ಆ ಸಂಯುಕ್ತ ದ್ರವ್ಯದಲ್ಲಿಯ ಇವೆರಡೂ ಆಮ್ಲಗಳ ಪ್ರತಿ ಕ್ರಿಯೆಗಳು 'ಛೇದ ಹೋಗಿ' ಪರಿಣಾಮಕ ಆಗಿ ಪ್ರಕಾಶವು ಯಾವ ಪ್ರತಿಕ್ರಿಯೆಯನ್ನೂ ಕಾಣಿಸಲಿಲ್ಲ–ಎಂದು ಪಾಶ್ಚರನು ಇತ್ಯರ್ಥ ಮಾಡಿದನು.

ಸ್ಟ್ರಾಸಬರ್ಗಕ್ಕೆ ಹೋದಮೇಲೆ ಪಾಶ್ಚರನು ಮೊದಲು ಭೆಟ್ಟಿ ಕೊಟ್ಟ ಕೆಲವು ಸ್ಥಳಗಳಲ್ಲಿ ಆ ವಿದ್ಯಾಪೀಠದ ರೆಕ್ಟರ ಎಂಬ ಅಧಿಕಾರಿಯ ಮನೆಯೂ ಒಂದಿತ್ತು. ಅವನ ಹೆಸರು, ಎಮ್. ಲಾರೆಂಟ. ಪಾಶ್ಚರನ ಯೋಗಕ್ಷೇಮ ಅಲ್ಲಿ ಕೂಡಿ ಬರುವ ಲಕ್ಷಣ ಕಂಡಿತು. ಮೇರಿ ಲಾರೆಂಟಳು ನಮ್ಮ ತರುಣ ವಿಜ್ಞಾನಿಯ ಸೂಕ್ಷ್ಮ ಪರೀಕ್ಷಣೆಯ 'ವಿಷಯ'ವಾದಳು. ಆಕೆಯ ಆಕರ್ಷಣವು ಆತನ ಆಗ್ರಹ ವನ್ನೊಂದು ಕೆಡಿಸಿತು. ಆ ಆಗ್ರಹವೆಂದರೆ, ಇನ್ನೂ ಕೆಲವು ಕಾಲ ಮದುವೆ ಯಾಗಬಾರದೆಂಬುದೇ ಆಗಿತ್ತು. ಆದರೆ ಹದಿನೈದು ದಿನಗಳಲ್ಲಿಯೇ ಅವನ ಮನಸ್ಸು ಬದಲಾಯಿತು. ಸ್ಟ್ರಾಸಬರ್ಗಕ್ಕೆ ಬಂದು ಎರಡುವಾರಗಳಾಗಲಿಲ್ಲ, ಪಾಶ್ಚರನು ಲಾರೆಂಟನಿಗೆ ಪತ್ರ ಬರೆದನು. ತಾನು ಕನ್ಯಾರ್ಥಿಯೆಂದು, ಅಂದಿನ ಸಾಂಪ್ರದಾಯದಂತೆ ತಿಳಿಸುವದೇ ಆ ಪತ್ರದ ಪ್ರಯೋಜನವಿತ್ತು. ಆದರೆ ಮೇರಿಯು ಕೂಡಲೇ ಉತ್ತರವೀಯಲು ಒಪ್ಪಲಿಲ್ಲ. ಅಧೀರನಾದ ಪಾಶ್ಚರನು

ಆಕೆಗೇ ಇನ್ನೊಂದು ಪತ್ರವನ್ನು ಬರೆದು, ತನ್ನನ್ನು ತ್ವರೆಯಿಂದ ತಪ್ಪು ತಿಳಿದು ಕೊಳ್ಳಬಾರದು. ತಾಳ್ಮೆಯಿಂದ ತೀರ್ಪು ಕೊಡಬೇಕು–ಎಂದು ಅರಿಕೆ ಮಾಡಿಕೊಂಡನು. 'ನನ್ನ ಈ ತೆಪ್ಪಗಿನ ನಾಚುಬುರಕ ಹೊರವ್ಯೆಯ ಹಿಂದೆ ನಿನಗಾಗಿ ತುಳುಕಾಡುವ ತುಂಬಿದ ಹೃದಯದ ಪ್ರೀತಿ ಇದೆಯೆಂಬ ಮಾತನ್ನು ಕಾಲವೇ ನಿನಗೆ ಕಾಣಿಸಿಕೊಟ್ಟೀತು' ಎಂದು ಬರೆದಿದ್ದನು. ಆಗ ಆಕೆ ಪಾಶ್ಚರನನ್ನು ವರಿಸಿದಳು. ೧೮೪೯ ರ ಮೇ ೨೯ ನೇ ದಿನ ಅವರ ವಿವಾಹವಾಯಿತು.

ವಿವಾಹದ ದಿನದ ಸೋಜಿಗ ನೋಡಿ. ತರುಣ ಪಾಶ್ಚರನ ಪ್ರಯಣವು ಪರಿಣಯಕ್ಕಾಗಿ ಅಧೀರವಾಗಿದ್ದರೂ ಅವನ ಪ್ರತಿಭೆ ಪ್ರಯೋಗಶಾಲೆಯಲ್ಲಿಯೇ ತೊಡಕಿಬಿದ್ದಿತ್ತು. ಪ್ರಯೋಗ ಶಾಲೆಯಲ್ಲಿ ಪರೀಕ್ಷಾ ನಲಿಕೆಗಳೊಡನೆ ಚಿನ್ನಾಟದಲ್ಲಿ ತೊಡಗಿದ ವರನನ್ನು ಮುಹೂರ್ತಕ್ಕೆ ಪ್ರಯತ್ನದಿಂದ ಹುಡುಕಿ ತರಬೇಕಾಯಿತು. ಆದರೆ ಮುಂದೆ ಮಾತ್ರ ಈ ದಾಂಪತ್ಯ ಜೀವನವು ಆದರ್ಶವೇ ಆಗಿ ಒಡಗಿ ಬಂದಿತು. ಶ್ರೀಮತಿ ಮೇರಿ ಪಾಶ್ಚರಳು ಪತಿಗೆ ಎಲ್ಲ ಪರಿಯಿಂದಲೂ ಸಂಪೂರ್ಣ ಸುಯೋಗ್ಯ ಸಹಚಾರಿಣಿಯಾಗಿ ನಡೆದುಕೊಂಡಳು. ಈ ಸಂಪೂರ್ಣ ಸಾಹಚರ್ಯದ ಒಂದು ಉದಾಹರಣೆಯನ್ನು ಇಲ್ಲಿ ನೋಡಿರಿ. ಫ್ರಾನ್ಸದ ಅಂದಿನ 'ರಾಜಾಧ್ಯಕ್ಷ' ಮೂರನೆ ನೆಪೋಲಿಯನ್ನ ಸ್ಟ್ರಾಸ್‌ಬರ್ಗಕ್ಕೆ ಭೆಟ್ಟಿಕೊಟ್ಟನು. ಆಗ ಈ ಸಮಾರಂಭೋತ್ಸವದಲ್ಲಿ ಪಾಶ್ಚರನ ವಿದ್ಯಾಪೀಠದ ಅಧಿಕಾರಿಗಳೆಲ್ಲ ಉತ್ಸಾಹದಿಂದ ಭಾಗವಹಿಸಿದರು. ಆದರೆ ಪಾಶ್ಚರನು ಪರೀಕ್ಷಾ ನಲಿಕೆಗಳಲ್ಲಿ ಕಣ್ಣಿನ ಪ್ರಯೋಗದಲ್ಲಿ ತೊಡಗಿದ್ದನು. 'ರಾಜಾಧ್ಯಕ್ಷರು' ಬರುವ ಸಮಯದ ಅರಿವೇ ಅವನಿಗೆ ಉಳಿಯಲಿಲ್ಲ. ಪತಿಯು ಪ್ರಯೋಗ ಶಾಲೆಯಿಂದ ಮನೆಗೆ ಬರಲಿಲ್ಲವಾದ್ದರಿಂದ ಸತಿಯೂ ಮನೆಯ ಹೊರಗೆ ಹೋಳಲಿಲ್ಲ. ಸಂಜೆಗೆ ಮನೆಗೆ ಮರಳಿದಾಗ ಪಾಶ್ಚರನು ಮೇರಿಗೆ ಕೇಳಿದನು. 'ಈಗೇನು ಮಾಡೋಣ ? ನನ್ನ ಪ್ರಯೋಗಗಳನ್ನು ಅರ್ಧಕ್ಕೆ ಬಿಡುವದು ಶಕ್ಯವಿದ್ದಿಲ್ಲ !' ಆಕೆಯ ತುಟಿಗಳನ್ನು ನಗೆಮುಗುಳು ಮುಚ್ಚಿತ್ತು, ಅವನ ಜೀವಿತ ಕಾರ್ಯವನ್ನು ತನ್ನದಾಗಿ ಭಾವಿಸಿ ನಡೆಯುತ್ತಿದ್ದಳು. ಉಭಯ ಹೃದಯಗಳ ಏಕರೂಪತೆಯೇ ಪಾಶ್ಚರನ ಪ್ರತಿಭೆಯನ್ನು ಪ್ರಭಾವಶಾಲಿಯನ್ನಾಗಿ ಮಾಡುವ ಅಭಯ ಸ್ಫೂರ್ತಿಯಾಗಿ ಪರಿಣಮಿಸಿತು.

ಮೇರಿ ಗಂಡನ ಕೆಲಸದಲ್ಲಿ ಅಡ್ಡಿ ಮಾಡುತಿದ್ದಿಲ್ಲವೆಂತಲ್ಲ. ಆದರೆ ಅದು ಆತನ ಇನ್ನೊಂದು ಅಷ್ಟೇ ಮಹತ್ವದ ಕೆಲಸದ ಹಂಬಲವನ್ನು ಹುಟ್ಟಿಸುವದಕ್ಕಾಗಿ ! ಆತನ ಚಿತ್ತವಿತ್ತವೆಲ್ಲ ಆತನ ಕಾರ್ಯಕ್ಕೆ ಒತ್ತೆ ಹಾಕಿತ್ತು. ತಕ್ಕ ಸಮಯಗಳಲ್ಲಿ ಶ್ರೀಮತಿ ಪಾಶ್ಚರಳ ಒತ್ತಾಯದ ಎಚ್ಚರಿಕೆ ಇಲ್ಲವಾದರೆ, ಪಾಶ್ಚರನು ತನ್ನ ವಿದ್ಯಾ

ಪೀಠದ ವಿವಿಧ ವಿದ್ವತ್ಪರಿಷತ್ತುಗಳಿಗೂ ಕಾರ್ಯಸಮಿತಿಗಳಿಗೂ ಸಕಾಲದಲ್ಲಿ ಉಪಸ್ಥಿತವಾಗುವದು ಶಕ್ಯವಿದ್ದಿಲ್ಲ. ಆತನಿಗೆ ಪ್ರಯೋಗ ಕಾರ್ಯದಲ್ಲಿ ಸಂಪೂರ್ಣ ಮೌನವು, ನಿಶ್ಯಬ್ದ ಶಾಂತಿಯು ಅತ್ಯವಶ್ಯವಿತ್ತು.

ಪಾಶ್ಚರನಿಗೆ ತನ್ನ ಸಂಶೋಧನ ಕಾರ್ಯದಲ್ಲಿ ತನ್ನ ದೇಹದ ಪರಿವೆ ಇರುತಿದ್ದಿಲ್ಲ- ಊಟ ಉಡಿಗೆ, ವಿಶ್ರಾಂತಿ ವಿಹಾರಗಳ ಎಚ್ಚರವೇ ಉಳಿಯುತಿದ್ದಿಲ್ಲ. ಆಗ ಮಾತ್ರ ಶ್ರೀಮತಿಯು ಆತನನ್ನು ಬಲವಾಗಿ-ಅಷ್ಟೇ ಸವಿಯಾಗಿಯೂ ನಯವಾಗಿಯೂ-ವಿರೋಧಿಸುತಿದ್ದಳು. ಪತಿಯ ಕಾರ್ಯವು ಅವನ ಆರೋಗ್ಯವನ್ನು ಕೆಡಿಸಿದಂತೆ ಆಕೆ ಜಾಗ್ರತೆಯಾಗಿ ಕಾವಲು ಇಡುತಿದ್ದಳು. ಆ ಕುರಿತು ಪಾಶ್ಚರನು ಒಮ್ಮೆ ವಿನೋದವಾಗಿಯೇ ಹೇಳಿದ್ದುಂಟು. 'ಆಕೆಗಾಗಿ 'ಪಾಶ್ಚರ' ಎಂಬ ಹೆಸರನ್ನು ಅಜರಾಮರವಾಗಿ ಮಾಡಿಡಲು ದುಡಿಯುತಿದ್ದೇನೆಂದೂ ಮೇರಿಯನ್ನು ನಾನು ಸಂತೈಸುತ್ತ ಇರುತ್ತೇನೆ. ಆದರೆ ಆಗೆಲ್ಲ ಆಕೆ ನನ್ನನ್ನೇ ಛೀಹಾಕುತ್ತಿರುತ್ತಾಳೆ!' ಹೆಸರು ಅಜರಾಮರವಾಗುವ ಭರದಲ್ಲಿ ಪತಿಯೇ ಜರಾಮರಣಗಳಿಗೆ ಬಲಿಯಾಗಬಹುದೆಂಬ ಬಲವಾದ ಭೀತಿ ಆಕೆಗೆ ಇತ್ತು. ನಿಜವಾಗಿಯು ಮೇರಿಯು ಪತಿಯ ಕಾರ್ಯದ ಗೌರವವನ್ನೂ ಅಗತ್ಯವನ್ನೂ ಅವನ ಶ್ರಮದ ಶ್ರೇಯವನ್ನೂ ಯಾರಿಗೂ ಹೆಚ್ಚಾಗಿ ಬಲ್ಲವಳಾಗಿದ್ದಳು. 'ಆಕೆ ಅಪ್ರತಿಮ ಸಹಚಾರಿಣಿಯು ಮಾತ್ರವಲ್ಲ, ಪತಿಯ ಕಾರ್ಯದಲ್ಲಿ ಉತ್ತಮ ಸಹಕಾರಿಣಿಯೂ ಆಗಿದ್ದಳು' ಎಂದು ಪಾಶ್ಚರನ ನಿಷ್ಠಾವಂತ ಶಿಷ್ಯರಲ್ಲಿ ಒಬ್ಬನು ಉದ್ಗರಿಸಿದ್ದಾನೆ.

೧೮೫೪ ರಲ್ಲಿ ಪಾಶ್ಚರನಿಗೆ ಲಿಲ್ಲೆ ಎಂಬಲ್ಲಿ ಹೊಸ ವಿಜ್ಞಾನ ವಿಭಾಗದಲ್ಲಿ ಪ್ರಾಧ್ಯಾಪಕ ಪದವಿಯು ದೊರೆಯಿತು. ಅಲ್ಲದೇ ಆತನು ಆ ವಿಭಾಗಕ್ಕೆ 'ಡೀನ' (ಮುಖ್ಯ)ನೂ ಆದನು. ಲಿಲ್ಲೆಯಲ್ಲಿ ಮದ್ಯವನ್ನುಂಟುಮಾಡುವ ವ್ಯವಸಾಯ ಕೇಂದ್ರದಲ್ಲಿ ಪಾಶ್ಚರನು ದ್ರವಗಳು ಹುಳಿಯಾಗುವ ಕ್ರಿಯೆಯ ರಹಸ್ಯದ ಕುರಿತು ಗಮನವನ್ನು ಕೊಟ್ಟನು.

ಒಂದು ದಿನ ರಸಾಯನತಜ್ಞ ಪಾಶ್ಚರನು ಒಂದು ಮದ್ಯದ ಭಟ್ಟಿ ಇಳಿಸುವ ಕಾರಖಾನೆಗೆ ಭೆಟ್ಟಿ ಕೊಡಬೇಕಾಗಿ ಬಂದಿತು. ಅಲ್ಲಿ 'ಬೀರ' ಮದ್ಯವನ್ನು ತಯಾರಿಸುತ್ತಿದ್ದರು. ಕೆಲವೊಂದು ಪಾತ್ರೆಗಳಲ್ಲಿಯ 'ಬೀರು' ತೀರ ಕನಿಷ್ಠ ತರಗತಿಯದಾಗುತಿತ್ತು, ಅಥವಾ ಕೆಟ್ಟುಹೋಗುತಿತ್ತು. ಎರಡೂ ಪಾತ್ರೆಗಳನ್ನು ಪಾಶ್ಚರನಿಗೆ ತೋರಿಸಲಾಯಿತು. ಒಂದರಲ್ಲಿ ಬೀರ ಚೆನ್ನಾಗಿತ್ತು; ಇನ್ನೊಂದರಲ್ಲಿ ಕೆಟ್ಟಿತ್ತು. ಪಾಶ್ಚರನು ಆ ಪಾತ್ರೆಗಳಲ್ಲಿಯ ಹುಳಿಗಟ್ಟಿದ ನೊರೆಯನ್ನು ಪರೀಕ್ಷಿಸಿ ಅದನ್ನು ರಾಸಾಯನಿಕ ಪರೀಕ್ಷೆಗಳಿಗೆ ಒಳಪಡಿಸಿ ನೋಡಿದನು.

ಅಕಸ್ಮಾತ್ ಅವನಿಗೆ ಒಂದು ಸಂಗತಿ ಹೊಳೆಯಿತು. ಆ ಘಟನೆಯು ಆ ನೋಡಲು ಅವನಿಗಾಗಲಿ ಇನ್ನಾರಿಗಾಗಲಿ ಹೊಳೆದೇ ಇದ್ದಿಲ್ಲ. ಅಂಥ ಸೋಜಿಗದ ಘಟನೆಯೆಂದರೆ, ಒಳ್ಳೇ ಬೀರಿನ ಪಾತ್ರೆಯೊಳಗಿನ ಹುಳಿ ನೊರೆಯ ಕಣಗಳು ದುಂಡುಗೋಲಕಗಳಾಗಿದ್ದವು. ಆದರೆ ಕೆಟ್ಟ ಬೀರಿನ ನೊರೆ ಲಂಬ ಗೋಲಕ ಗಳಾಗಿದ್ದವು. ಗೋಲಕಗಳ ಗೋಲಾಕಾರದ ಈ ವ್ಯತ್ಯಾಸವು ನಮಗೆ ತಿಳಿಯುವ ದೆಂತು ? ಈ ಸೋಜಿಗವು ನಿರೀಕ್ಷಕನ ಜ್ಞಾನದ ಸೂಕ್ಷ್ಮತೆಯನ್ನೇ ಹೊಂದಿ ಕೊಂಡಿರುತ್ತದೆ. ವಿಜ್ಞಾನಿಯ 'ಕ್ರಾಂತದರ್ಶನ'ಕ್ಕೆ ಅಣುರೇಣುಗಳಲ್ಲಿಯೂ ಅದ್ಭುತ ರಸ ತುಳುಕಾಡುತ್ತದೆ. ಪಾಶ್ಚರನ ಜ್ಞಾನ ದೃಷ್ಟಿಗೆ ಹೆಂಡದ ಬುರುಗಿ ನಲ್ಲಿಯೂ ಹೊಸ ಸತ್ಯದ ಬೆರಗು ಸಾಕ್ಷಾತ್ಕರಿಸಿತು. ಬುರುಗಿನ ಗೋಲಕಗಳು ಲಂಬವಾಗಿರುವಂಥ ಈ ವ್ಯತ್ಯಾಸಕ್ಕೆ ಏನು ಕಾರಣ ? ಹುಡಿಗಟ್ಟುವ ಅಸವ ಕ್ರಿಯೆಯು ನಡೆದಿರುವಾಗಲೆ ಆ ಪಾತ್ರೆಯ ಮದ್ಯರಸಾಯನದಲ್ಲಿ ಬೇರೊಂದು ದ್ರವ್ಯ ಬೆರೆತಿರಬೇಕು. ಆ ದ್ರವ್ಯ ಎಲ್ಲಿಯದು ? ಸಂಶೋಧನವನ್ನು ಮುಂದರಿಸಿದಂತೆ ಈ ಮದ್ಯವನ್ನು ಹದಗೆಡಿಸುವ ದ್ರವ್ಯವು ಪಾತ್ರೆಯೊಳಗಿನಿಂದಲೇ ಬಂದದ್ದಲ್ಲ; ಹೊರಗಿಂದ, ಹವೆಯೊಳಗಿಂದ ಒಳಸೇರಿರಬೇಕು ಎಂಬ ಸಂಗತಿ ಸ್ಪಷ್ಟವಾಯಿತು. ಶೋಧದ ಮುಂದಿನ ಮೆಟ್ಟವೆಂದರೆ, ಅಸವ ಕ್ರಿಯೆಗೆ ಆಮ್ಲೀಭವ ಕಾರಣವಾದ ವಸ್ತುಗಳು ಸೂಕ್ಷ್ಮ ದೇಹಿಗಳಿದ್ದು ಅವು ಅಂತಹವೇ ಆದ ಹವೆಯೊಳಗಿನ ಸೂಕ್ಷ್ಮ ದೇಹಿಗಳಾದ ಜೀವಾಣುಗಳಿಂದ ಬಂದಂಥವು.

ಈ ವಾತಾವರಣಾಂತರ್ಗತ ಸೂಕ್ಷ್ಮ ಜೀವಾಣುಗಳ ಶೋಧವು ಅಂದಿನ ವಿಜ್ಞಾನ ಪ್ರಪಂಚದಲ್ಲಿ ಒಂದು ಸಿಡಿಗುಂಡಿನ ಸ್ಫೋಟವೇ ಎನಿಸಿತು. ಅದುವರೆಗೆ ಮದ್ಯ ಮುಂತಾದ ಹುಳಿಗಟ್ಟುವ ಅಸವ ಕ್ರಿಯೆಯು ಒಂದು ಸ್ವಯಂಭೂತ ರಾಸಾಯನಿಕ ವ್ಯಾಪಾರವೆಂದು ವಿಜ್ಞಾನಿಗಳು ಒಪ್ಪಿಕೊಂಡಿದ್ದರು. ಆ ಸಿದ್ಧಾಂತವು ಬುಡ ಮೇಲಾಯಿತು. ಸ್ವಯಂಭೂತ ಅಸವಕ್ರಿಯೆಯ ಸಿದ್ಧಾಂತದಲ್ಲಿ ಆಮ್ಲೀಭವನ ಎಂಬುವದು, ಹುಳುಗುದಿಯುವಿಕೆಯೆಂಬ ಪಾರ್ಪಾಟವು ಅಗಮ್ಯ ಮಾಯಿಕವಾಗಿ ಡುತ್ತದೆ. ನಿರ್ಜೀವ ಜಡ ರಸಾಯನ ದ್ರವ್ಯದಿಂದ ಹುಳಿ ಬುರುಗಿನ ಜೀವ ಗೋಲಕಗಳು 'ಹೇಗೋ' ಉಂಟಾಗುವವೆಂದು ಆ ಸಿದ್ಧಾಂತ ಒಪ್ಪಿದ ತತ್ವ. ದು ನಿಜವಾಗಿಯೂ ಅಸಂಗತ. ಕಾರ್ಯ-ಕಾರಣ ಸಂಬಂಧದ ನಿಯಮಕ್ಕೆ ಂದು ಅಪವಾದ ಕಾರಣ ಮತ್ತು ಕಾರ್ಯಗಳಲ್ಲಿ ಒಂದು ಸಾಧರ್ಮ್ಯ ಸಜಾತೀಯತೆ ಇರಲೇ ಬೇಕು. ಆದರೆ ಅಂದಿನ ಆಮ್ಲೀಭವನದ ಸಿದ್ಧಾಂತವು ಈ ಸಂಬಂಧವನ್ನೇ ಅಲ್ಲಗಳೆದಂತಿತ್ತು. ಜಡದಿಂದ ಜೀವವು ಹುಟ್ಟುವದೆಂತು ? ಶ್ಚರನು ಶೋಧದ ತಪಶ್ಚರ್ಯೆಯನ್ನು ಮುಂದುವರಿಸಿದನು-ಸತ್ಯದ ಸಾಕ್ಷಾತ್ಕಾರ

ವಾಗುವವರೆಗೆ! ವಿವಿಧ ಪ್ರಯೋಗಗಳನ್ನು ಸಂಗ್ರಹವಾಗಿ ಸೂಕ್ಷ್ಮವಾಗಿ ಸರ್ಪಗ್ರಾಹಿಯಾಗಿ ಆತ ಮುಂದುವರಿಸಿದನು. ಆಲ್ಪ್ಸ ಪರ್ವತದ ಶಿಖರದಿಂದ ಹಿಡಿದು ತಂದ ವಿಶುದ್ಧವಾದ ತಿಳಿಗಾಳಿಯನ್ನೂ ಗಾಳಿಸಿ ನೋಡಿ ಆಯಿತು. ತಾನು ಕಂಡದ್ದೇ ಕಂಡಷ್ಟೇ ಸತ್ಯವೆಂದು ಹಟವನ್ನು ಸಾಧಿಸದೆ ತಾನು ಕಂಡ ಸತ್ಯವನ್ನು ಸರ್ವತೋಮುಖವಾಗಿ ಪರಾಮರ್ಶಿಸಿ ನೋಡಿ ಕೊನೆಗೊಮ್ಮೆ ಪ್ರಯೋಗ ಸಿದ್ಧವೂ ಪ್ರಮಾಣ ಶುದ್ಧವೂ ಆದ ತನ್ನ ಶೋಧವನ್ನು ಪಾಶ್ಚರನು ಪ್ರಕಟಗೊಳಿಸಿದನು.

ಈ ಪ್ರಕಟನೆಯು ಒದಗಿದ್ದು ೧೮೬೪ ರಲ್ಲಿ. ತನ್ನ ಶೋಧದಿಂದ ಲುಯಿಪಾಶ್ಚರನು ತನ್ನ ಕಾಲಮಾನದ ಅತಿ ಶ್ರೇಷ್ಠ ರಸಾಯನ ತಜ್ಞನೆನಿಸಿದನು. ಅವನ ಶೋಧಗಳನ್ನು ಲಾರ್ಡ ಲಿಸ್ಟರನು ಗಾಯಗಳ ಉಪಚಾರದಲ್ಲಿ ವಿಷ ಕ್ರಿಮಿಗಳನ್ನು ದೂರಮಾಡುವದಕ್ಕಾಗಿ ಉಪಯೋಗಿಸಿಕೊಂಡನು. ಅದರ ದಿವ್ಯ ಫಲವೆಂದರೆ ಲಕ್ಷಾಂತರ ಜೀವಗಳು ಗಾಯಗಳಿಂದ ಉದ್ಭವಿಸುವ ವಿಷವಿಕಾರದ ಮರಣಾಂತಿಕ ಬಾಧೆಯಿಂದ ಬದುಕಿ ಉಳಿಯುವಂತಾಯಿತು.

ಫ್ರಾನ್ಸದ ಒಂದು ಹಿರಿಯ ಉದ್ದಿಮೆ, ರೇಶಿಮೆಯ ಹುಟ್ಟುವಳಿ. ಆದರೆ ಒಂದು ಬಗೆಯ ರೋಗವು ಹುಟ್ಟಿ ರೇಶಿಮೆಯ ಹುಳಗಳು ಸಾಯತೊಡಗಿದವು. ದೇಶದ ದೊಡ್ಡ ಹೋರೆಯೇ ಹಾಳಾಗುವ ಕಾಲ ಬಂದಿತು. ಆ ಕುರಿತು ೧೮೬೫ ರಲ್ಲಿ ಫ್ರಾನ್ಸ ಸರಕಾರವು ಪಾಶ್ಚರನ ಸಹಾಯವನ್ನು ಕೋರಿತು. ಅವನ ಶೋಧಕ ಪ್ರತಿಭೆಯು ಅಲ್ಲಿಯೂ ಸಾರ್ಥಕವಾಯಿತು. ಮೂರು ವರ್ಷಗಳಲ್ಲಿಯೇ ಅವನ ಸಂಶೋಧನವು ಸಫಲವಾಯಿತು. ಎರಡು ಪ್ರತ್ಯೇಕ ರೋಗಗಳ ಈ ಕೀಟಾಣು ಗಳನ್ನು ಸೂಕ್ಷ್ಮ ಕ್ರಿಮಿಗಳನ್ನು ಅವನು ಕಂಡುಹಿಡಿದನು. ಅಷ್ಟೇ ಅಲ್ಲ, ಅವು ಗಳಿಂದ ರೇಶಿಮೆ ಹುಳಗಳನ್ನೂ ಕಾಪಾಡುವ ಉಪಾಯಗಳನ್ನು ಹುಡುಕಿಕೊಟ್ಟನು; ಅಲ್ಲದೆ, ಅಂಥ ರೋಗವು ಅಂಟಿಕೊಂಡ ಹುಳಗಳನ್ನು ಗುರುತಿಸಿ, ವಿಂಗಡಿಸುವ ಬಗೆಯನ್ನೂ ಕಂಡನು. ವಿಜ್ಞಾನವು ಅಭ್ಯುದಯಕ್ಕೆ ಪೋಷಕವಾಗುವ ಧನ್ಯ ಮಾರ್ಗವು ಹೀಗಿದೆ!

ಇದೇ ಸಮಯ ಅವನಿಗೆ ಪಕ್ಷವಾತದ ಅಲ್ಪ ಆಘಾತವು ಒದಗಿತು. ಅದರೊಳಗಿಂದ ಹೇಗೋ ಪಾರಾಗಿ ಪ್ಯಾರೀಸಿಗೆ ಬಂದನು. ಆದರೂ ಅವನ ಕಾರ್ಯ ತತ್ಪರತೆ ತಡೆಯಲೇ ಇಲ್ಲ. ೧೮೬೭ ನೇ ವರ್ಷ ಸೊರ್ಬೊನ್‌ದ ಸಂಸ್ಥೆಯಲ್ಲಿ ಅವನಿಗೆ ರಸಾಯನ ಶಾಸ್ತ್ರದ ಪ್ರಾಧ್ಯಾಪಕ ಪದವು ದೊರೆಯಿತು. ಮುಂದೆ ಕೆಲವೇ ಕಾಲದಲ್ಲಿ ಆತನು

ಆಮ್ಲೀಭವನ ಕ್ರಿಯೆಯ ಕುರಿತು ತನ್ನ ಜಗತ್ಪ್ರಸಿದ್ಧ ಪ್ರಬಂಧವನ್ನು ಪ್ರಕಟಿಸಿದನು.

ಈಗ ಅವನು ಕ್ರಿಮಿ ಶಾಸ್ತ್ರದ ಕುರಿತು–'ಬೆಕ್ಟೆರಿಯೊಲೊಜಿ'ಯ ಕಡೆಗೆ–ತನ್ನ ಗಮನವನ್ನು ಹೊರಳಿಸಿದನು. ೧೮೭೭ ರಲ್ಲಿ 'ಎಂಥ್ರೆಕ್ಸ' ರೋಗದ ಕ್ರಿಮಿಯ ಸಂಶೋಧನ ಆರಂಭಿಸಿದನು. (ಎಂಥ್ರೆಕ್ಸ ಇದು ದನಗಳನ್ನು ಪೀಡಿಸುವ ಒಂದು ಕೆಟ್ಟ ಪಿಡುಗು.) ೨ ವರ್ಷಗಳಲ್ಲಿ ಆ ರೋಗದ ಸ್ವಭಾವವೇತಿಹಾಸವನ್ನೆಲ್ಲ ಆತನು ಸ್ಫುಟವಾಗಿ ನಿದರ್ಶಿಸಿದನು. ೧೮೮೦ ರಲ್ಲಿ 'ಚಿಕೆನ್ ಕೊಲೆರಾ' ಎಂಬ ಭೇದಿ ರೋಗದ ಒಂದು ಪ್ರಕಾರವನ್ನು ಸಂಶೋಧಿಸಲು ಆತನಿಗೆ ಕೇಳಿಕೊಳ್ಳಲಾಯಿತು. ಅವನ ಈ ಸಂಶೋಧನದ ಹೆಜ್ಜೆಗಳಲ್ಲಿ ಒಂದು ಕ್ರಮವು ವ್ಯಕ್ತವಾಗುತ್ತದೆ. ಆ ಕ್ರಮವು ಯುಕ್ತಿಯುಕ್ತವೂ ಸುಸಂಗತವೂ ಆಗಿದೆ. 'ಬೀರ' ಮದ್ಯದ ಆಮ್ಲೀಭವನದ ಪ್ರಮೇಯವನ್ನು ಬಿಡಿಸುತ್ತ, ಆತನು ವಾತಾವರಣದೊಳಗಿನ ಸೂಕ್ಷ್ಮ ದೇಹಿ ಜೀವಾಣುಗಳ ಅಸ್ತಿತ್ವವನ್ನು ಕಂಡುಕೊಂಡನು. ಕೋಳಿಯ ಮರಿಗಳಿಗೆ ಬಾಧಿಸುವ ಕಾಲೆರಾ ರೋಗದ ಸಂಶೋಧನದಿಂದ ಅವನು ಕಂಡು ಹಿಡಿದ ಸೂಕ್ಷ್ಮ ಕೀಟಾಣುವು ಅವನಿಗೆ ಮುಂದೆ ಎಂಥ್ರೆಕ್ಸ ರೋಗದ ಕಾರಣವನ್ನು ಹುಡುಕಿಕೊಳ್ಳಲು ಸಾಧನವಾಯಿತು. ಈ ರೋಗವು ದನಗಳ ಸಂಹಾರವನ್ನು ಭಯಂಕರ ಪ್ರಮಾಣದಲ್ಲಿ ಮಾಡುತ್ತಿತ್ತು. ದನಗಳನ್ನು ಉಳಿಸಿಕೊಳ್ಳುವ ಸಾಧನವು ಮುಂದೆ ಜನರನ್ನು ಬದುಕಿಸಿಕೊಳ್ಳುವ ಸಾಧನೆಯೂ ಆಯಿತು. ಅಲ್ಲದೆ, ಆ ರೋಗದ ಕ್ರಿಮಿಯನ್ನು ಕಂಡು ಹಿಡಿದ ಮೂಲಕ ಪಾಶ್ಚರನು 'ರ್‍ಯಾಬಿಸ್' ಎಂಬ ರೋಗದ ನಿದಾನವನ್ನೂ ಮತ್ತು ನಿವಾರಣೋಪಾಯವನ್ನೂ ಶೋಧಿಸಲು ಸಮರ್ಥನಾದನು. ರ್‍ಯಾಬಿಸ್ ಎಂದರೆ, ಹುಚ್ಚು ನಾಯಿ ಕಚ್ಚಿದ್ದರಿಂದ ಉಂಟಾಗುವ ಉಲ್ಬಣ ವಿಕಾರ. ಈ ರಾಕ್ಷಸ ರೋಗದ ಇನ್ನೊಂದು ಹೆಸರು 'ಹೈಡ್ರೊಫೋಬಿಯಾ'–ಅಂದರೆ ನೀರಿನ ಭಯ. ನೀರು ಕಂಡರೆ ದೆವ್ವ ಬಡಿದಂತೆ ಆಗುವ ಅಪಸ್ಮಾರ.

ಪಾಶ್ಚರನು ಕೋಳಿಗಳ ರೋಗ ನಿವಾರಣೆಯ ಉಪಾಯಗಳನ್ನು ಕಂಡುಹಿಡಿದು ಫ್ರಾನ್ಸಿಗೆ ಅಪಾರ ಲಾಭವನ್ನು ಮಾಡಿಕೊಟ್ಟನು. ಕೋಳಿ ಸಾಕುವವರಿಗೆ ರೇಶಿಮೆಯ ಉದ್ದಿಮೆದಾರರಿಗಾದಂತೆಯೇ ನಷ್ಟವಾಗುತ್ತಿತ್ತು. ಪಾಶ್ಚರನು ಆ ಕುಕ್ಕುಟ ವ್ಯಾಧಿ ನಿವಾರಣೆಗಾಗಿ ಟೊಂಕಕಟ್ಟಿದನು. ಅತಿ ಶೀಘ್ರದಲ್ಲಿ ಆತನು ಆ ರೋಗ ಜಂತುವನ್ನು ಕಂಡು ಹಿಂಗಡಿಸಿದನು. ಅದನ್ನು ದುರ್ಬಲ ಸ್ವರೂಪದಲ್ಲಿ ಬೇರೆಯಾಗಿ ಬೆಳಿಸಿ 'ವೈರಸ್'ದ ರೂಪದಲ್ಲಿ ಕೋಳಿಗಳಿಗೆ ಚುಚ್ಚಿದನು. ಆ ಮೂಲಕ 'ಕೋಳಿಗಳ ಕೊಲೆರಾ'ದ ಕಾಟ ಕೇಳಿಸದಂತಾಯಿತು. ಇದರಿಂದ ರಾಷ್ಟ್ರೀಯ ಸಂಪತ್ತಿನ ವೃದ್ಧಿಗೆ ಕಾರಣವಾಯಿತು.

ಈ ಕೋಳಿಗಳ ಕುರಿತು ಪ್ರಯೋಗಿಸಿ ಪ್ರಭಾವಿಯಾದ ಪದ್ಧತಿಗಳನ್ನೆ ಆತನು ದನಗಳ ವ್ಯಾಧಿಯಾದ 'ಎಂಥ್ರೆಕ್ಸ'ದ ಸಂಶೋಧನದಲ್ಲಿ ಅನುಸರಿಸಿದನು. ಇಲ್ಲಿಯೂ ಅಲ್ಲಿಯಂತಹದೇ ಶ್ರೇಯಸ್ಸು ಆತನಿಗೆ ಲಭಿಸಿತು.

ಹೀಗೆ ಕೋಳಿಗಳ ಕಾಲರಾ, ಎಂಥ್ರೆಕ್ಸ್, ಅನಂತರ ನಾಯಿವಿಷದ ಬಾಧೆ ಇವುಗಳ ಕುರಿತು ಯಶಸ್ವಿಯಾದ ಸಂಶೋಧನಗಳಿಂದಲೇ 'ಇನೊಕ್ಯುಲೇಶನ್' ತಂತ್ರದ ಚುಚ್ಚುಮದ್ದಿನ ಚಿಕಿತ್ಸೆಯು ರೂಢಿಯಲ್ಲಿ ಬಂದಿತು. ಈ ಚುಚ್ಚುಮದ್ದಿನ, ರೋಗ ಮೂಲವಾದ ವಿಷ ಇಲ್ಲವೇ ಕ್ರಿಮಿಗಳನ್ನೇ ಸೌಮ್ಯರೂಪದಲ್ಲಿ ದ್ರವದಲ್ಲಿ ಬೆಳಸಿ ರೋಗಿಗಳಿಗೆ ಚುಚ್ಚಿ ರೋಗವನ್ನು ಪ್ರತೀಕರಿಸುವ ಈ 'ಇನೊಕ್ಯುಲೇಶನ್' ಎಂಬ ಸೂಚಿಕ್ರಿಯೆಯ ವಿಧಾನವು ಪಾಶ್ಚರನ ಅಭಿಧಾನದೊಡನೆ ಚಿರಕಾಲ ಹೊಂದಿನಿಂತಿದೆ.

ವಿಶೇಷತಃ ನಾಯಿ ವಿಷದ ವಿಕಾರದ ವಿರುದ್ಧ ಪಾಶ್ಚರನು ಪ್ರಚುರಗೊಳಿಸಿದ ಚಿಕಿತ್ಸೆಯು ಪ್ರಚಂಡ ಯಶಸ್ಸನ್ನು ಪಡೆಯಿತು. ಆ ಯಶಸ್ಸಿನೊಳಗಿಂದಲೇ ವಿಶ್ವವಿಖ್ಯಾತವಾದ ಪಾಶ್ಚರ ಇನ್‌ಸ್ಟಿಟ್ಯೂಟ ಎಂಬ ಸಂಶೋಧನ ಸಂಸ್ಥೆಯು ೧೮೮೮ ರಲ್ಲಿ ಹೊರಟಿತು.

ಮೇಲೆ ಹೇಳಿದ ವ್ಯಾಧಿಗಳ ಭೀಕರತೆಯು ಆಧುನಿಕ ಯುರೋಪದಲ್ಲಿ ಒಂದು ಹಳೆಕತೆಯಾಗಿದೆ. ಏಕೆಂದರೆ, ಪಾಶ್ಚರನ ಶೋಧಗಳ ಫಲವಾಗಿ ಆ ವ್ಯಾಧಿಗಳಿಂದ ಅಲ್ಲಿಯ ಜನ, ದನಗಳು ಮುಕ್ತವಾಗಿವೆ. ನಮ್ಮ ಜನ ನಾಯಿ ವಿಷದ ಬಾಧೆಗೆ ಅಸಂಖ್ಯಾತವಾಗಿ ಬಲಿಯಾಗುತ್ತಿದೆ. ಪಾಶ್ಚರನ ಅಭಯ-ದಾನದ ವಿನಿಯೋಗವು ನಮ್ಮ ದೇಶದಲ್ಲಿ ಇನ್ನೂ ಸಾಕಷ್ಟು-ಬೇಕಷ್ಟು ಕೂಡ- ಆಗಿಲ್ಲ. ಎಂಥ್ರೆಕ್ಸ ರೋಗವೂ ಅಷ್ಟೇ ಭೀಕರವಿತ್ತು. ಮುಖ್ಯವಾಗಿ ಜನಗಳಿಗೂ ಕುದುರೆಗಳಿಗೂ ಅದು ಅಂಟುವ ರೋಗ. ಆದರೆ ಅದು ವಿಪರೀತ ಸಾಂಸರ್ಗಿಕ. ರೋಗಿದನದ ಬಾಲವು ಬಾಲದ ಕೂದಲು-ತಗಲಿದರೂ ಸಾಕು. ಆ ರೋಗದ ಲಕ್ಷಣಗಳು ಮಾನವ ರಲ್ಲಿಯೂ ತತ್‌ಕ್ಷಣ ಉಂಟಾಗುವವು. ರೋಗ ಉಂಟಾದರೆ ಅದು ಮರಣಾಂತಿಕವೇ.

ಈ ರೋಗದ ನಿವಾರಣೆ ಪ್ರತಿಕಾರಕ್ಕಾಗಿ ಪಾಶ್ಚರನು ಕಂಡು ಹಿಡಿದ 'ಲಸ'ವು ಮಾನವಕೋಟಿಗೆ, ಅದೂ ಹೆಚ್ಚಾಗಿ ಬೇಸಾಯ-ವ್ಯವಸಾಯಗಳಲ್ಲಿ ದುಡಿಯುವ ಜನಕ್ಕೆ, ಅವರ್ಣನೀಯ ವರದಾನವೆನಿಸಿದೆ. ಈ ರೋಗದಿಂದ ವಿಗಿಲಾಗಿ ಮೃತ್ಯು ಸಂಖ್ಯೆ ಉಣ್ಣೆಯ ಕೆಲಸಗಾರರಲ್ಲಿ ಇತ್ತು. ಅದು ಈಗ ಪಾಶ್ಚರನ ಮೂಲಕ

ಕಡಿಮೆ ಆಗಿದೆ. ಈ ರೋಗವು ಅತಿ ಪ್ರಾಚೀನವೆಂದೆಣಿಸಲ್ಪಟ್ಟಿದೆ. ಮಿಸ್ರದೇಶದ (ಇಜಿಪ್ತ) ಪುರಾತನ ಇತಿಹಾಸದಲ್ಲಿ ಉಲ್ಲೇಖಪಟ್ಟ ಮಹಾ ಮಾರಿಕೆಗಳಲ್ಲಿ ಈ ಪಶುರೋಗವು ಒಂದಾಗಿತ್ತು. ಪಾಶ್ಚರನ ಶೋಧ ಪ್ರತಿಭೆಯಿಂದ ದನ, ಕುರಿಗಳನ್ನು ಸತ್ವ ಸಂಪನ್ನವಾಗಿ ಸಾಕಿ ಜೀವನ ಮಾಡುವ ಜಗತ್ತಿನ ಎಲ್ಲ ಪಶುಪಾಲಕ ಕೃಷೀವಲರಿಗೆ ಒಂದು ಶಾಪವಿಮೋಚನೆಯೇ ಒದಗಿ ಬಂತು.

ಎಂಥ್ರೆಕ್ಸ ಪಶುರೋಗಕ್ಕೂ ಮೀರಿದ ಭೀಕರ ವ್ಯಾಧಿ 'ರ್‍ಯಾಬಿಸ್.' ಅದು ಭೀಕರ ವಿದ್ದಷ್ಟೇ ಘಾತಕ. ಎಂಥ್ರೆಕ್ಸ ಬಾಧೆಯಲ್ಲಿ ವಿಷಯುಕ್ತವಾದ ವ್ರಣವು ಕೂಡಲೇ ಪ್ರಕಟವಾಗುತ್ತದೆ. ಹುಚ್ಚುನಾಯಿ ಕಡಿದ ಮನುಷ್ಯನ ಕಡಿತದ ಗಾಯವು ಕೂಡಲೆ ವಿಷಯುಕ್ತವಾಗಿ ಪರಿಣಮಿಸುವದಿಲ್ಲ. ಇಷ್ಟೇ ಅಲ್ಲ. ಅನೇಕ ಉದಾಹರಣೆಗಳಲ್ಲಿ, ಬಾಹ್ಯೋಪಚಾರಗಳಿಂದ ನಾಯಿ ಕಡಿತ ಗಾಯುಗಳು ಪೂರ್ತಿ ಮಾಯುವಾದಂತೆಯೂ ಕಂಡು ಬರುತ್ತವೆ. ಆದರೆ ಕೆಲವು ವಾರಗಳು ಕಳೆದ ಮೇಲೆ ದೇಹದೊಳಗೆ ಬೆಳೆದು ವಿಕಾರಗೆಟ್ಟ ನಾಯಿಯ ನಂಜು ಒಮ್ಮೆಲೆ ಉಲ್ಬಣಗೊಂಡು ಹೊರ ಬೀಳುತ್ತದೆ. ಕೊನೆಗೆ ಮರಣವನ್ನು ತರುತ್ತದೆ.

ಆದರೆ ಇದೆಲ್ಲ ದಾರುಣ ದುರಂತವು ಪಾಶ್ಚರನ ಪೂರ್ವಯುಗದ್ದು. ಶೋಧಿಸಿ ಸ್ಥಿರಗೊಳಿಸಿದ ನಿವಾರಕ ಅಥವಾ ಪ್ರತಿಕಾರಕ ಔಷಧಿಯು ಹುಚ್ಚುನಾಯಿಯ ವಿಷದ ಭಯವನ್ನು ಇಲ್ಲವಾಗಿಸಿಬಿಟ್ಟಿದೆ. ಆದರೆ ಈ ಅಭಯ ಸಿದ್ಧಿಗಾಗಿ ಅವನು ತಾನೆ, ಬಹಳ ಜೀವಾಪಾಯದ ಭಯಕ್ಕೆ ಒಳಗಾಗುವಂತಾಯಿತು. ತನ್ನ ಶೋಧ-ಪ್ರಯೋಗಗಳಿಗೋಸ್ಕರ ಆತನು ಹುಚ್ಚು ನಾಯಿಗಳ ಒಂದು ಇಡಿಯ ಹಿಂಡೇ ಸಾಕಬೇಕಾಯಿತು. ಅವುಗಳಲ್ಲಿ ನುಗ್ಗಿ ಅವುಗಳನ್ನು ನಿರ್ಭಯವಾಗಿ ಅವನು ಹಿಡಿ ದಾಡುತ್ತಿದ್ದನು. ನಾಯಿಹುಚ್ಚಿನ ವಿಷ ಜಂತುವಿನ ಹಲವು ಮಾದರಿಗಳನ್ನು ಸಂಗ್ರಹಿಸುವ ವಿಪರೀತ ಆತುರದಲ್ಲಿ ಆತನು ಒಮ್ಮೆ ಒಂದು ಹುಚ್ಚುನಾಯಿಯ ಜೊಲ್ಲನ್ನು ಅದರ ಬಾಯಿಗೆ ನಲಿಕೆ ಹಾಕಿ ತನ್ನ ಬಾಯಿಯಿಂದ ಹೀರಿಕೊಂಡನು. ಹುಚ್ಚು ನಾಯಿಗಳು ತಮ್ಮ ವಿಷವನ್ನು ಪಸರಿಸುವದೇ ಜೊಲ್ಲಿನೊಳಗಿನಿಂದ. ಅವು ಕಡಿದ ಗಾಯದಲ್ಲಿ ಆ ಜೊಲ್ಲು ಬಿದ್ದಾಗ ಅದರ ವಿಷವು ನಮ್ಮ ಮೈಯನ್ನು ಸೇರುತ್ತದೆ. ಈ ಸಂಗತಿಯನ್ನು ಗಮನಿಸಿದಾಗ ಅವನ ಆ ಹೀರುವಿಕೆಯ ಕೃತ್ಯವು ಎಷ್ಟು ಶ್ರೇಷ್ಠವಾದ ಧೀರಚರಿತವೆಂಬುವದು ವ್ಯಕ್ತವಾಗುತ್ತದೆ. ಇಂಥ ಪ್ರಾಣಾಪಾಯ ಕಾರಿಯಾದ ಅನೇಕ ಪ್ರಯೋಗಗಳ ಕೊನೆಗೆ ಆವನು ಒಂದು 'ಲಸ್'ವನ್ನು ಕಂಡುಹಿಡಿದನು. ಆ 'ಲಸ್'ವನ್ನು ಅದೇ ತಾನೇ ಹುಚ್ಚುನಾಯಿ ಕಡಿದ ಇನ್ನೊಂದು ನಾಯಿಗೆ ಚುಚ್ಚಿದಾಗ ಆ ನಾಯಿಗೆ ವಿಷವಿಕಾರವಾಗಲಿಲ್ಲ.

ಆದರೆ ನಾಯಿಯ 'ಲಸ್' ನಾಯಿಗೆ ಮದ್ದಾಯಿತು. ಅದೇ ಮದ್ದು ಮನುಷ್ಯನನ್ನು ಉಳಿಸಬಲ್ಲದೇ ? ಹುಚ್ಚುನಾಯಿ ಕಡಿದ ಮನುಷ್ಯನಿಗೆ ಈ 'ಲಸ್' ಚುಚ್ಚಿದರೆ ವಿಷವು ಇನ್ನಿಷ್ಟು ವಿಕಾಳಿಸಬಹುದೇ ? ಅಥವಾ ಪೂರ್ತಿ ವಾಸಿಯಾಗಬಹುದೇ ? ಇದೊಂದು ಮಹತ್ವದ-ಅಷ್ಟೇ ಅಗತ್ಯದ-ಸಮಸ್ಯೆ ಆಯಿತು. ಹುಚ್ಚುನಾಯಿಯ ವಿಷವು ಅಂದು ಫ್ರಾನ್ಸಕ್ಕೆ ಮಹಾಮಾರಿಯಂತೆ ಕಾಡಿತ್ತು. ಎಲ್ಲ ವೈದ್ಯರೂ ಅದಕ್ಕೆ ಉಪಾಯಗಾಣದೆ ಸೋತಿದ್ದರು. ಮನುಷ್ಯನಿಗೆ ವಿಷಕಾರಿಯಾಗದೆ ಗುಣಕಾರಿಯಾಗ ಬಲ್ಲ ನಿಶ್ಚಿತ ಪ್ರಮಾಣದ 'ಲಸ್'ವನ್ನು ಗೊತ್ತುಹಿಡಿಯುವದೇ ಮುಖ್ಯವೂ ಮಹಾ ಕಠಿಣವೂ ಆದ ಸಮಸ್ಯೆ ಆಗಿತ್ತು. ಆ ಪ್ರಮಾಣವನ್ನು ನಿಶ್ಚಿತಗೊಳಿಸುವದರಲ್ಲಿ ಪಾಶ್ಚರನು ಹಲವು ತಿಂಗಳುಗಳನ್ನು ತೀವ್ರ ಮನೋಯಾತನೆಗಳಲ್ಲಿ ಕಳೆದನು. 'ಲಸ್'ದ ಪ್ರಮಾಣವನ್ನು ನಿರ್ಧರಿಸುವದು ಹೇಗೆ ? ಅಂಥ ರೋಗಿಗಳಿಗೆ ಚುಚ್ಚಿ ನೋಡಿಯೇ. 'ಲಸ್'ವನ್ನು ಚುಚ್ಚುವದಾದರೂ ಎಷ್ಟು ? ಅದನ್ನೇ ಮೊದಲು ಗೊತ್ತುಪಡಿಸಿಲ್ಲ. ಹೆಚ್ಚು ಕಡಿಮೆ ಚುಚ್ಚಿ ನೋಡಿಯೇ ಎಷ್ಟು ಚುಚ್ಚಬೇಕೆಂಬುದನ್ನು ಗೊತ್ತುಹಚ್ಚಬೇಕು. ಅದಕ್ಕಾಗಿ ಯಾರು ಸಾಯಬೇಕು ?

ಅಂಥ ಒಂದು ಯೋಗ್ಯ ಸಂದರ್ಭವು ಕೂಡಿಬಂದಿತು. ಒಬ್ಬ ಚಿಕ್ಕ ಹುಡುಗನು-ಜೊಸೆಫ ಮೇಸ್ತ್ರ ಎಂದು ಅವನ ಹೆಸರು-ಒಂದು ವಿಶೇಷ ಹುಚ್ಚೆದ್ದು ಕೆರಳಿದ ನಾಯಿಯ ದಂಶಕ್ಕೆ ಗುರಿ ಆದನು. ಅವನಿಗೆ ದಂಶವೂ ಉಗ್ರವಾಯಿತು. ಅವನನ್ನು ಆಸ್ಪತ್ರೆಗೆ ಎತ್ತಿ ತರಲಾಯಿತು. ಅವನ ಬದುಕಿನ ಆಸೆಯನ್ನು ಎಲ್ಲರೂ ಬಿಟ್ಟಿದ್ದರು. ಆಶೆಗೂ ಆಚೆಯ ಅವಸ್ಥೆಯಲ್ಲಿ ಆ ಪುಟ್ಟ ಬೇನಿಗನು ಇದ್ದುದರಿಂದ ಪಾಶ್ಚರನು, ಅವನ ಮೇಲೆಯೇ 'ಲಸ್'ದ ಪ್ರಮಾಣವನ್ನು ಗೊತ್ತುಪಡಿಸುವ ಪ್ರಯೋಗವನ್ನು ಮಾಡಲು ನಿರ್ಧರಿಸಿದನು. ಅಪರಿಹಾರ್ಯವಾಗಿ ಕೈಕೊಳ್ಳ ಬೇಕಾದ ಈ ಪ್ರಯೋಗದ ಕುರಿತು ಪಾಶ್ಚರನ ಹೃದಯಕ್ಕೆ ಆಳವೂ ಉಗ್ರವೂ ಆದ ಚಿಂತೆಯ ಕಳವಳವು ಕಿಚ್ಚುಹಚ್ಚದೆ ಉಳಿಯಲಿಲ್ಲ. ವಿಜ್ಞಾನದ ಸತ್ಯಕ್ಕಾಗಿ ವಜ್ರ ಕಠೋರವಾಗುವ ಆತನ ಸಂಶೋಧಕ ಬುದ್ಧಿಗೆ ಒಳಮೈಯಾಗಿ ನಿಂತ ಕುಸುಮ ಕೋಮಲ ಮಾನವ ಭಾವನೆಯು ಬಂಗಾರದ ಬಿರುಸಿಗೆ ಹೊಂಬಣ್ಣದ ಹೊಳಪು-ನುಣುಪುಗಳಂತೆ ಪುಟ ಕೊಟ್ಟಿತ್ತು. ಅದೊಂದು ಕಠೋರ ಕರುಣೆ.

ಒಂಭತ್ತು ದಿನಗಳ ತನಕವೂ ಆ ಮಹಾ ವಿಜ್ಞಾನಿಯು ಜೀವದಾಸೆ ಇಲ್ಲದೆ ಬಳಲುತ್ತಿದ್ದ ಆ ತರಳನ ಮೇಲೆ ಬೇರೆ ಬೇರೆ ಬಲಪ್ರಮಾಣದ 'ಲಸ್'ವನ್ನು ಚುಚ್ಚುವ ಪ್ರಯೋಗ ಪ್ರಾರಂಭಿಸಿದನು. ಮೂರು ವಾರಗಳ ನಂತರ, ಆ ಹುಡುಗನು ಖಚಿತ ವಾಗಿ ಬದುಕುವನೆಂದು ನಿರ್ಧಾರದಿಂದ ಹೇಳುವ ಧೈರ್ಯ ಪಾಶ್ಚರನಿಗೆ ಬಂದಿತು.

ಪ್ರಯೋಗ ಬಲದಿಂದ, ಪ್ರಯತ್ನ ಸಿದ್ಧಿಯಿಂದ ನಾಯಿ ಕಚ್ಚಿದ ಮೂರು ತಿಂಗಳು ಮೂರು ವಾರಗಳ ನಂತರ ಜೊಸೆಫ ಮೇಸ್ಟ್ರನು ಸಂಪೂರ್ಣ ಗುಣವಾಗಿ ಆಸ್ಪತ್ರೆಯಿಂದ ಹೊರಗೆ ಬಂದನು. ಅವನನ್ನು ಬದುಕಿಸಿದ ಅಸಮ ಸಾಹಸಿಯಾದ ಪಾಶ್ಚರನಿಗೆ ಮಾತ್ರ ಅವಧಿಯು ಅತ್ಯಂತ ಮನೋಯಾತನೆಯದಾಯಿತು. ಏಕೆಂದರೆ ಅವನಿಗೆ ಗೊತ್ತು, ಪ್ರಾಣಿಗಳ ಮೇಲೆ ಮಾಡಿದ ಪ್ರಯೋಗಗಳೆಲ್ಲ ಯಶಸ್ವಿಯಾಗಿದ್ದವು. ಇತರ ಪಶುಗಳಲ್ಲಿ ಪ್ರಕಟವಾಗುವ ಲಕ್ಷಣಗಳಿಂದ ಮನುಷ್ಯನಲ್ಲಿ ತೋರುವ ಲಕ್ಷಣಗಳು ತುಸು ಬೇರೆ, ಆದರೂ ಮೂಲದ ವಿಷ ವಿಕಾರವು ಒಂದೆ ಸ್ವರೂಪದ್ದು. ಆದಾಗ್ಯೂ ಇನ್ನೊಂದು ರಹಸ್ಯವೂ ಆ ವಿಜ್ಞಾನಿಗೆ ಗೊತ್ತು; ಅದೇನೆಂದರೆ, ವಿಜ್ಞಾನವೆಲ್ಲ ತರ್ಕಸಂಗತ ಯುಕ್ತಿಯುಕ್ತವಾದ ನಿಯಮ ಬದ್ಧ ಪ್ರಕ್ರಿಯೆ ನಿಜ. ಆದರೂ ಆ ನಡುವೆ ಏನಾದರೊಂದು ಅವ್ಯಕ್ತ ಅಜ್ಞಾತ ನಿಯಮವು ತನ್ನ ಕಾರ್ಯ ನಡೆಯಿಸಿ, ಮಾನವನ ಕೈಗಳಿಂದ ಆ ಶೋಧದ ವಿಷಯವನ್ನೇ ಎತ್ತಿಕೊಂಡು ತನ್ನ ನಿಟ್ಟಿನಲ್ಲಿಯೇ ನಡೆದುಬಿಡುವದುಂಟು. ಇದರಿಂದ ವಿಜ್ಞಾನಿಯ ಲೆಕ್ಕವೆಲ್ಲ ತಪ್ಪಿ, ತೂಕ ತಲೆಕೆಳಗಾಗಿ ಎಲ್ಲಿಯೋ ಏನೋ ತಪ್ಪಿ ಹೋಗುವದುಂಟು! ಆದ್ದರಿಂದ ಜೊಸೆಫನ ಜೀವದ ಮೇಲೆ ಮಾಡಿದ ಪ್ರಯೋಗವು ಯಶಸ್ವಿಯಾಗುವ ತನಕವೂ ಪಾಶ್ಚರನ ಜೀವಕ್ಕೆ ಸಮಾಧಾನ ಎಂದಿಗೆ! ನಾಯಿ ವಿಷದ ಪೂರ್ತಿ ಪ್ರತಿಕಾರವಾಗಿ ಆ ಹುಡುಗ ಎದ್ದು ಹೊರಟಾಗ ಪಾಶ್ಚರನಿಗೆ ತನ್ನ ಸಾಹಸಿ ಹೃದಯವು ಮಾಡಿದ ಎಲ್ಲ ಕ್ರಮಕ್ಕೆ ಅತ್ಯಂತ ಹಿರಿದಾದ ಸಾಫಲ್ಯವು ದೊರೆತಂತೆ ಅನಿಸಿತು.

ಆದರೆ ಅದೊಂದೇ ಸಾಫಲ್ಯವೇಕೆ! ಇತರ ಶ್ರೇಯಸ್ಸೂ ಧನ್ಯತೆಯೂ ಅವನಿಗೆ ಲಭಿಸಿತು. ಫ್ರೆಂಚ ಎಕೆಡಮಿ ಸಂಸ್ಥೆಯಲ್ಲಿಯ ವಿಜ್ಞಾನ ಪೀಠಕ್ಕೆ ಅವನನ್ನು ಆರಿಸಲಾಯಿತು. ಆ ಗೌರವ ಪದವಿಯಿಂದ ಆತನು ಆ ಸಂಸ್ಥೆಯ ಇತರ ಸನ್ಮಾನ್ಯ ಸದಸ್ಯರಿಗೆ ಭೆಟ್ಟಿಕೊಡಲು ಹೋದಾಗ ಎಲ್ಲೆಡೆಯಲ್ಲಿಯೂ ಅವನಿಗೆ ಮುಕ್ತ ಹೃದಯದ ಸ್ವಾಗತವು ದೊರೆಯಿತು. ಅಂದಿನ ಫ್ರೆಂಚ ಸಾಹಿತ್ಯದ ಕಥಾಲೇಖನ ಚಕ್ರವರ್ತಿ ಎನಿಸಿದ ಅಲೆಕ್ಝಾಂಡರ ದೂಮಾನು ಮಾತ್ರ ಪಾಶ್ಚರನು ಸ್ವತಃ ತಾನಿದ್ದಲ್ಲಿ ಭೆಟ್ಟಿಗೆ ಬರುವದು ಅವನಿಗೆ ಉಚಿತವಲ್ಲವೆಂದು ಮನವಾರೆ ಭಾವಿಸಿ ಅಂದನು. ತಾನೂ ನಮ್ಮಲ್ಲಿ 'ಒಬ್ಬನಾಗಲು ಇಷ್ಟೊಂದು ಅನುಗ್ರಹದಿಂದ ಆತ ಒಪ್ಪಿದಕ್ಕಾಗಿ ನಾನೇ ಆತನಿದ್ದಲ್ಲಿಗೆ ಹೋಗಿ ನನ್ನ ಕೃತಜ್ಞತೆಯನ್ನು ಸಲ್ಲಿಸುವೆನು!'

ಆದರೆ ತನ್ನ ವಿಜ್ಞಾನ ಸಿದ್ಧಿಯ ಎಲ್ಲ ಶ್ರೇಯಸ್ಸಿಗಾಗಿ ಪಾಶ್ಚರನು ದೇವರಲ್ಲಿ ಕೃತಜ್ಞತೆಯನ್ನು ಸಲ್ಲಿಸಿದ್ದನು. ಆತನ ವಿಜ್ಞಾನ ಬುದ್ಧಿಯು ಧಾರ್ಮಿಕ

ಶ್ರದ್ಧೆಯನ್ನು ಭಂಗಪಡಿಸಲಿಲ್ಲ. ವಿದ್ವಜ್ಜನರ ಪರಿಷತ್ತಿನ ಮುಂದೆ ಅಧ್ಯಕ್ಷನಾದ ಫ್ರಾನ್ಸದ ವಿಖ್ಯಾತ ವಿಚಾರ ಸ್ವಾತಂತ್ರ್ಯದ ಪುರಸ್ಕರ್ತನಾದ ರೆನಾಂನ ಮುಂದೆ ಪಾಶ್ಚರನು ತನ್ನ ಪಾರಲೌಕಿಕ ಶ್ರದ್ಧೆಯನ್ನು ಮುಕ್ತ ಕಂಠದಿಂದ ಸಾರಿದನು. 'ಪ್ರಪಂಚದಲ್ಲಿ ಪ್ರತಿಯೊಂದು ಕಡೆಗೆ ನಾನು ಅನಂತ ತತ್ವದ ಅಭಿವ್ಯಕ್ತಿಯನ್ನೇ ಕಾಣುತ್ತೇನೆ. ಆ ಮೂಲಕವೇ ಅಲೌಕಿಕ ಪಾರಲೌಕಿಕವಲ್ಲಿಯ ಶ್ರದ್ಧೆಯು ಪ್ರತಿ ಹೃದಯದಲ್ಲಿ ಅಂತರಾಳದಲ್ಲಿ ಕಂಡುಬರುತ್ತದೆ. ವಿಜ್ಞಾನ–ಜಿಜ್ಞಾಸೆಯ ಲಾಲನೆ ಇವೆಲ್ಲ, ವಿಶ್ವದ ನಿಗೂಢ ರಹಸ್ಯವು ನಮ್ಮ ಆತ್ಮಗಳಿಗೆ ಹಚ್ಚಿದ ಅಂಕುಶ ಪ್ರಚೋದನೆಗಳಲ್ಲದೆ ಮತ್ತೇನು ?'

ಫ್ರೆಂಚ ಎಕೆಡೆಮಿ ಎಂಬ ವಿದ್ವತ್ಪರಿಷತ್ತಿನ ಇದುರಿಗೆ ಪಾಶ್ಚರನು ಮೇಲೆ ಹೇಳಿದಂತೆ ತನ್ನ ನಿಷ್ಠೆಯನ್ನು ನಿರ್ದಾಕ್ಷಿಣ್ಯವಾಗಿ ಸಾರಿದಾಗ ಅಧ್ಯಕ್ಷ ರೆನಾಂ ತನ್ನ ಸ್ವತಂತ್ರವಿಚಾರಕ್ಕೆ ಅನುಗುಣವಾಗಿ ಆ ವಿಜ್ಞಾನಿಯ ಈಶ್ವರೀ ಶ್ರದ್ಧೆಯ ಘೋಷಣೆಯನ್ನು ವ್ಯಕ್ತಿಶಃ ಏನೂ ಒಪ್ಪಲಿಲ್ಲ. ಆದಾಗ್ಯೂ ವಿಚಾರಸ್ವಾತಂತ್ರ್ಯದ ಮಹತ್ವಕ್ಕೆ ಪಕ್ಷಪಾತಿಯಾದ ಆ ಮಹಾನುಭಾವನು ಅಪ್ರತಿಮವಾಗ್ಮಿತೆಯಿಂದ ಪಾಶ್ಚರನನ್ನು ಹಾರ್ದಿಕವಾಗಿ ಸ್ವಾಗತಿಸುತ್ತ ಮುಗಿತಾಯದಲ್ಲಿ ಹೀಗೆ ಉದ್ಗರಿಸಿದನು.– 'ಎಲ್ಲಕ್ಕೂ ಮಿಗಿಲಾಗಿ, ನೀವು ನಮಗೆ ನಿಮ್ಮ ಯಶೋಗೌರವವನ್ನೂ ನಿಮ್ಮ ಪ್ರತಿಭೆಯನ್ನೂ ನಿಮ್ಮ ಶೋಧಗಳ ಮಹತ್ಕೀರ್ತಿಯನ್ನೂ ತರುವಿರಿ. ಆದ್ದರಿಂದ ಸ್ವಾಮಿ, ನಿಮಗೆ ನಮ್ಮ ಸ್ವಾಗತವು !'

ಇದೇ ಸ್ವಾಗತವು ಪಾಶ್ಚರನಿಗೆ ಸ್ಕಾಟ್ಲಂಡದ ಎಡಿನ್‌ಬರೋ ವಿಶ್ವವಿದ್ಯಾಲಯದಲ್ಲಿಯೂ ದೊರೆಯಿತು. ಅವನ ಸಮಕಾಲೀನ ಸಂಶೋಧಕನಾದ ಲಿಸ್ಟರನು ತಾನು ಕೈಕೊಂಡ ಶಸ್ತ್ರಕ್ರಿಯೆಯ ಕ್ಷೇತ್ರದಲ್ಲಿಯ ವಿಷಜಂತು ವಿನಾಶಕ ದ್ರವ್ಯಗಳ ಮಿಗಿಲಾದ ಶೋಧಗಳ ಕಾರ್ಯದಲ್ಲಿ ಪಾಶ್ಚರನ ಋಣವನ್ನು ಮನ್ನಿಸಿದನು. ಲಿಸ್ಟರನು ಎಡಿನ್‌ಬರೋ ವಿಶ್ವವಿದ್ಯಾಲಯದಲ್ಲಿಯೇ ಕೆಲಸ ಮಾಡುತ್ತಿದ್ದನು.

೧೮೯೨ ರಲ್ಲಿ ಜಗತ್ತಿನ ಅಂದಿನ ವಿದ್ವತ್ಪರಿಷತ್ತುಗಳೆಲ್ಲ ಪ್ಯಾರಿಸಿನಲ್ಲಿ ತಮ್ಮ ಪ್ರತಿನಿಧಿಗಳ ಮುಖಾಂತರ ಕಲೆತಿದ್ದವು. ಯಾತಕ್ಕಾಗಿ ? ಲುಯಿ ಪಾಶ್ಚರನ ಜ್ಯುಬಿಲೀ ಸತ್ಕಾರೋತ್ಸವಕ್ಕಾಗಿ ! ಆಗ ಪಾಶ್ಚರನ ಕಾರ್ಯಕ್ಕೆ ಲಿಸ್ಟರನು ಹೀಗೆ ವಂದನೆಯನ್ನು ಸಲ್ಲಿಸಿದನು. 'ನಿಮ್ಮ ಸಂಶೋಧನಗಳು ಬೀರಿದ ಪ್ರಚಂಡವಾದ ಬೆಳಕು' ಶಸ್ತ್ರಕ್ರಿಯೆಯ ವಿದ್ಯೆಯಲ್ಲಿ ಅನೇಕ ಕತ್ತಲೆಯ ಸ್ಥಳಗಳನ್ನು ಬೆಳಗಿದೆ !

ಗಾಯುಗಳ ಉಪಚಾರವು ಈ ಮೊದಲು ಅನಿಶ್ಚಿತವೂ ಅಪಾಯುಕರವೂ ಆದ ವ್ಯವಹಾರವಾಗಿತ್ತು; ಅದು ಈಗ ಶಾಸ್ತ್ರ ಶುದ್ಧ ಕಲ್ಯಾಣಕರವಾದ ಕಲೆಯಾಗಿ ಬಿಟ್ಟಿದೆ.' ಅಲ್ಪವಿದ್ಯೆಯೆಂದೇ ಅಲ್ಲ, ವೈದ್ಯಕ ಶಾಸ್ತ್ರವೂ ಪಾಶ್ಚರನ ಹೆಸರಿಗೆ ತಾನು ಹೊತ್ತ ಋಣವನ್ನು ಸದಾಕಾಲವೂ ಸಾರುವದೆಂದು ಲಿಸ್ಟರನು ಮುಂದು ವರಿಯುತ್ತ ಅಂದನು. ಅನಂತರ ಈ ಉಜ್ವಲ ಪ್ರತಿಭೆಯು ವಿನಮ್ರ ಬುದ್ಧಿಯ ಫ್ರೆಂಚ ಮೇಧಾವಿಯ ಕೆಲಸದಿಂದ ತಾನು ಪಡೆದ ಜ್ಞಾನಕ್ಕಾಗಿ ಲಿಸ್ಟರನು ವೈಯಕ್ತಿಕ ಆಭಾರವನ್ನು ಭಾರವಾದ ಮನಸ್ಸಿನಿಂದ ಸಾರಿದನು. ಆಮೇಲೆ ಭಾಷಣದ ಕೊನೆಯ ಪ್ರಚಂಡ ಹರ್ಷಧ್ವನಿಯ ಸಂಭ್ರಮದಲ್ಲಿ ಲಿಸ್ಟರನು ವ್ಯಾಸ ಪೀಠವನ್ನು ಏರಿ ಹೋಗಿ ಪಾಶ್ಚರನನ್ನು ಎದೆಗೆ ತಬ್ಬಿಕೊಂಡಾಗ ಆ ಮಹಾ ಸಭೆಯು ಆ ಉಭಯ ವಿಜ್ಞಾನಿಗಳ ಬೌದ್ಧಿಕ ಮತ್ತು ವೈಜ್ಞಾನಿಕ ಮೈತ್ರಿಯ ಆಜೀವ ಬಂಧನದ ಭಾವ ಪಾರವಶ್ಯಕ್ಕೆ ತಬ್ಬಿಬ್ಬಾಯಿತು !

ಇಷ್ಟೆಲ್ಲ ಗೌರವದ ಸಿರಿ ಬಂದು ಹೊದ್ದಿದರೂ ಪಾಶ್ಚರನು ಲಿಸ್ಟರನು ಅಂದಂತೆ ವಿನಮ್ರ ಮನಸ್ಸಿನ ಸರಳ ಹೃದಯಿಯಾಗಿಯೇ ಉಳಿದನು. ತನ್ನ ಹಿರಿಮೆಯ ಅರಿವೇ ಅವನಿಗೆ ಇದ್ದಿಲ್ಲ. ತನ್ನ ಕಾರ್ಯದೊಂದಿಗೆ ಅಂಥ ತಾದಾತ್ಮ್ಯವನ್ನು ಅವನು ಸಾಧಿಸಿದ್ದನು. ಅ ವ ನ ಚಿಕ್ಕಂದಿನ ಕಲ್ಪನಾ ವಿಲಾಸವು, ಹುಟ್ಟಿದ ಊರಿನ ಪರಿಚಿತ ವಸ್ತು ಚರ್ಯೆಗಳನ್ನು ವರ್ಣಭಂಗಿಯಲ್ಲಿ ಚಿತ್ರಿಸುವ ಆ ಹುಡು ಗಾಟಿಕೆಯ ಕಲಾಸಕ್ತಿಯು, ಅವನನ್ನು ಪೂರ್ತಿ ಬಿಟ್ಟು ಹೋಗಿದ್ದಿಲ್ಲವೇನೊ ! ಹಿರಿಯ ಕಲೆಗಾರನಾಗಬೇಕೆಂಬ ಆತನ ಹೆಬ್ಬಾಸೆ ವಿಜ್ಞಾನದ ಹೆದ್ದಾರಿಯಲ್ಲಿಯೂ ಅವನ ಕಂಕುಳ ಬುತ್ತಿಯಾಗಿ ಬಂದಿರಬೇಕು. ಏಕೆಂದರೆ ನಿಜವಾಗಿಯೂ ಅವನು ಹಿರಿಯ ಕಲಾಕಾರನೇ ಆದನು. ಹದಿನಾರನೆಯ ವರ್ಷಕ್ಕೇ ಅವನು ಬಣ್ಣ ಕುಂಚಗಳನ್ನು ಬಿಸುಟಿದ್ದರೂ ಕಲಾತ್ಮಕತೆಯು ಅವನ ಕೈ ಬಿಡಲಿಲ್ಲ. ಪ್ರತಿ ಪ್ರಯೋಗದಲ್ಲಿ ಪ್ರತಿಯೊಂದು ಶೋಧದಲ್ಲಿ ಪಾಶ್ಚರನು ಕಲಾ ತಪಶ್ಚರ್ಯದ ತಾದಾತ್ಮ್ಯವನ್ನು ಸಹೃದಯತೆಯ ತದೇಕತಾನವನ್ನು ಎರಕ ಹೊಯ್ಯುತ್ತಿದ್ದನು. ಸಂಶೋಧನೆಯ ಸಾಧನೆಯಲ್ಲಿಯೇ ಆತ ಸವೆದು ಸಣ್ಣಾದನು. ಅವನ ದೃಷ್ಟಿಗೆ ಪ್ರತಿಯೊಬ್ಬ ರೋಗಿಯು—ಕೋಳಿಯಿರಲಿ, ಕುರಿಯಿರಲಿ, ಹುಚ್ಚುನಾಯಿ ಕಡಿದ ಕೂಲಿಯಾಳಿರಲಿ—ಕೇವಲ ಒಂದು ಉಪಚಾರ ಪಡೆಯಬೇಕಾದ ಗುಣವಾಗಲು ಬಂದ 'ಕೇಸು' ಆಗಿರಲಿಲ್ಲ. ನಾಯಿ ವಿಷದ ವಿರುದ್ಧ ಅವನು ಹೂಡಿದ ಹೋರಾಟವು ಅವನಿಗೆ ಒಂದು ಮಹಾಯುದ್ಧವೆನಿಸಿತು. ಮೃತ್ಯುರಂಗದಲ್ಲಿ ರಾಷ್ಟ್ರ ರಕ್ಷಣೆಗಾಗಿ ಅವನು ಶೋಧದ ಶಸ್ತ್ರವೆತ್ತಿದನು. ಪ್ರಯೋಗಗಳ ವ್ಯೂಹ ಕಟ್ಟಿದನು. ಜೀವನದ ಶತ್ರುಗಳನ್ನು ಸಂಹಾರ ಮಾಡಿಯೇ ತೀರುವೆನೆಂಬ ಧುರವೀಳ್ಯವನ್ನು ಎತ್ತಿದನು.

ಅವನ ಸಂಶೋಧನವು ಒಂದು ಶುಷ್ಕ ಬುದ್ಧಿಯ ಶೂನ್ಯ ಸಂಪಾದನೆ ಇದ್ದಿಲ್ಲ. ಸಹಾನುಭೂತಿಯ, ದಯಾರ್ದ್ರ ವೃತ್ತಿಯ ಪವಿತ್ರ ಕಾರ್ಯವಾಗಿತ್ತು. ತನ್ನ ರೋಗಿಗಳೊಂದಿಗೆ ತಾನೂ ಕಳವಳಗೊಳ್ಳುತ್ತಿದ್ದನು. ಆ ಕಳವಳದಿಂದಲೇ ಅವನು ಹೆಣಗಿ ಹಣ್ಣಾದನು. ಅವನಿಗೆ ಶೋಧಗಳಿಗಾಗಿ ಜಾಗತಿಕ ಖ್ಯಾತಿಯನ್ನು ಪಡೆದೆನೆಂಬ ಸುಖಕ್ಕಿಂತ ಶಾರೀರಿಕ ಅಶಕ್ತತೆಯು ವಿಪರೀತವಾಗಿ ತನ್ನ ಪ್ರತ್ಯಕ್ಷ ಕಾರ್ಯವನ್ನು ಬಿಡಬೇಕಾಗಿ ಬಂತೆಂಬುದರ ದುಃಖವೇ ಅತಿ ಆಯಿತು. ಅವನು ಬಾಳಿನ ಕೊನೆಯ ದಿನಗಳನ್ನು ತನ್ನ ಆಸ್ತಿಯಿದ್ದಲ್ಲಿ 'ಎವೆನ್ಯೂ ಲತಾಂಗ' ಎಂಬಲ್ಲಿ ವಿಶ್ರಾಂತಿಯಲ್ಲಿ ಕಳೆದನು. ಅಲ್ಲಿ ಅವನ ಶೇಷಾಯುಷ್ಯವೆಲ್ಲ ಬೈಬಲ್ಲಿನಲ್ಲಿ ಬಣ್ಣಿಸಿದ ಸದ್ಗುಣಗಳ ಆಚರಣೆಯಲ್ಲಿ ಕಳೆಯಿತು. ಬಾಳಿನ ಇಳುಕಲಿನಲ್ಲಿ ನಾಡು ದೂರವಾಗಿ ಕಾಡಿನ ನೆಳಲು ಹೆಚ್ಚು ಹೆಚ್ಚು ಚಾಚಿದಂತೆ ಅವನ ಧರ್ಮ ಶ್ರದ್ಧೆಯು ಬೆಳೆಯುತ್ತ ನಡೆಯಿತು. ಧರ್ಮ ಶ್ರದ್ಧೆಯ ಕುರಿತು ಈ ವಿಜ್ಞಾನಿಯ ಅಭಿಪ್ರಾಯವು ಅವನ ಒಂದು ಪ್ರಸಿದ್ಧ ಮಾತಿನಲ್ಲಿ ಸ್ಪಷ್ಟವಾಗಿದೆ. 'ನಿಸರ್ಗದ ರಹಸ್ಯಗಳನ್ನು ಹೆಚ್ಚು ಹೆಚ್ಚು ಚಿಂತಿಸಿದಂತೆ, ಶ್ರದ್ಧೆಯಲ್ಲಿ ನಾನು ಹೆಚ್ಚು ಹೆಚ್ಚು ಬ್ರಿಟನ್ನಿನ ರೈತನಂತೆ ಆಗುತ್ತಿರುವೆನು. ಯಾರಿಗೆ ಗೊತ್ತು ?-ಇನ್ನೂ ಹೆಚ್ಚು ಅಭ್ಯಾಸಮಾಡಿದರೆ ನನ್ನ ಶ್ರದ್ಧೆಯು ಆ ರೈತನ ಹೆಂಡತಿಯ ಭಾವಿಕ ತನವನ್ನು ಹೋಲಬಹುದು.'

ಅಂದಿನ ನವವಿಚಾರದ ಕ್ರಾಂತಿ ಯುಗದಲ್ಲಿ ತನ್ನ ಸಂಗಡಿಗರಾದ ವಿಜ್ಞಾನಿಗಳು ಹೆಚ್ಚಾಗಿ ಜಡವಾದಿಗಳೂ ನಾಸ್ತಿಕರೂ ಆದ ತರುಣರಲ್ಲಿ ಪಾಶ್ಚರನ ಧಾರ್ಮಿಕತೆಯೂ ಈಶ್ವರೀ ಶ್ರದ್ಧೆಯೂ ನಂದಾದೀಪದ ಅಖಂಡ ಜ್ಯೋತಿಯಂತೆ ನಿಶ್ಚಲ ಕಾಂತಿಯಿಂದ ಉಜ್ಜ್ವಲ ಶಾಂತಿಯಲ್ಲಿ ಬೆಳಗುತ್ತಿದ್ದುದು ಒಂದು ಸೋಜಿಗವೇ ಸರಿ.

ಅವನ ಆ ವಿಶ್ರಾಂತಿಯ ವಾನಪ್ರಸ್ಥದಲ್ಲಿಯೂ ಒಂದು ಸಂಗತಿಯು ಅವನನ್ನು ತಣ್ಣಗೆ ಕೂಡ್ರಲು ಬಿಡುತ್ತಿದ್ದಿಲ್ಲ. ಅದು ಆತನ ಹಳೆಯ ಶಿಷ್ಯರ ಸಂಗತಿ–ಹಿಂದಿನ ವಿದ್ಯಾರ್ಥಿಗಳ ಸಹವಾಸ. ಅವರೊಡನೆ ಕೂತು ಹರಟುವಾಗ ಆತನು ಆಗಾಗ ಹೇಳುವ ಮಾತು ಒಂದೇ :– 'ಕೆಲಸ,–ಕೆಲಸ ಮಾಡುವದನ್ನು ಎಂದೂ ಬಿಡಬೇಡಿರಿ' ಸತತವಾದ, ನಿಯತವಾದ ಕಾರ್ಯ–ಇದೇ ಪಾಶ್ಚರನ ಜೀವನದ ಸೂತ್ರವಾಗಿತ್ತು. ನಿರಂತರ ಕಾರ್ಯಾಸಕ್ತಿಯಿಂದಲೇ ಅವನ ಜೀವನ ಕೊನೆಗೆ ಸವಕಳಿಯಲ್ಲಿ ಸಮಾಪ್ತಿಗೊಂಡಿತು.

೧೮೯೫ ನೇ ವರ್ಷ ಸಪ್ಟಂಬರ ತಿಂಗಳ ೨೭ ನೇ ದಿನ. ಮನೆಯವರೊಬ್ಬರು

ಂದು ಲೋಟ ಹಾಲು ತಂದು, ಪಾಶ್ಚರನ ಹಾಸಿಗೆಯಮೇಲೆ ಬಗ್ಗಿ ಮೆಲ್ಲಗೆ ಆತನಿಗೆ ಕುಡಿಯಲು ಕೇಳಿದರು. 'ನಾನೊಲ್ಲೆ' ಅಂದನು ಆ ವಯೋವೃದ್ಧ ಶ್ರಮಜರ್ಜರ ವಿಜ್ಞಾನಿ; ಮತ್ತು ತುಂಬ ಮನಃಶಾಂತಿಯ ಹಾಗೂ ಉಪರತಿಯ ಕರ್ಯಿಯಿಂದ ನಿದ್ದೆ ಹೋದಂತೆ ಕಂಡನು. ಆ ನಿದ್ದೆಯಿಂದ ಆತ ಮತ್ತೆ ಕಣ್ಣು ತೆರೆಯಲೇ ಇಲ್ಲ. ತಾನು ಅಷ್ಟೊಂದು ಗುಣ ಮಾಡಲು ಮತ್ತು ಗೆಲ್ಲಲು ಹೆಣಗಿದ ಏನೆ ಬೇಸರ ಬಳಲಿಕೆಗಳಿಂದ ತುಂಬಿದ ಜಗತ್ತನ್ನು ಆತ ಮತ್ತೆ ಎಚ್ಚತ್ತು ನೋಡಲಿಲ್ಲ. ಸಾವಿನ ಗಳಿಗೆಗೆ ಆತನ ೭೩ ನೇ ಹುಟ್ಟುಹಬ್ಬವು ಬರೆ ಮೂರು ದಿನಕ್ಕೆ ಹತ್ತಿರವಿತ್ತು.

ಜಗತ್ತಿನ ಜೀವಿಗಳನ್ನು ಅಸಾಧ್ಯ ವಿಷ ವಿಕಾರದ ಹಿಡುಗುಗಳಿಂದ ಮುಕ್ತಗೊಳಿಸಲು ಜೀವಮಾನವೆಲ್ಲ ಜೀತದಾಳಿನಂತೆ ದುಡಿದ ಜಯದ ಜಟ್ಟಿಯಂತೆ ಕಾದಾಡಿದ ಕಲಿಯು ನೆನೆಯು, ಪೂರ್ಣವಿರಾಮದಲ್ಲಿ ಮುಗಿಯಿತು-ನಿರಾಯಾಸವಾಗಿ ನಿ ರಾ ಗ ಸ ಬಾಲಕನಂತೆ ಆತ, ತಾಯ ಮಡಿಲನ್ನು ಸೇರಿದನು. ಫ್ರಾನ್ಸದ ಕೃತಜ್ಞವೂ ಮರ್ಮಜ್ಞವೂ ಆದ ಜನತೆ, ಪಾಶ್ಚರ ಮಹತ್ವಮಾಪನವನ್ನು ಮತಗಣನೆಯಿಂದ ಮಾಡಿತು. ರಾಷ್ಟ್ರದ ಸರ್ವಾನುಮತದಿಂದ ಲುಯಿ ಪಾಶ್ಚರನು ಫ್ರಾನ್ಸದ ಸರ್ವಶ್ರೇಷ್ಠ ಮಹಾ ಪುರುಷನೆಂದು ನಿರ್ಣಯವಾಯಿತು. ವಿಶ್ವವಿಜಯಿಯೂ ಫ್ರಾನ್ಸದ ಮುದ್ದು ಕಡುಗಲಿಯೂ ಆದ ನೆಪೋಲಿಯನ್ ಬೋನಾಪಾರ್ಟನಿಗೆ ಮತಗಣನೆಯಲ್ಲಿ ಐದನೆಯ ಸ್ಥಾನ ದೊರೆಯಿತು ! ಕ್ಷಾತ್ರಕ್ಕಿಂತ ಬ್ರಹ್ಮತೇಜವೇ ಬಲವೆಂಬುದಕ್ಕೆ ಇದಕ್ಕೂ ಹೆಚ್ಚಿನ ಸಾಕ್ಷಿ ಇನ್ನಾವುದು ?

ಬಾದಿಗನ ಮಗ, ವಿಜ್ಞಾನದ ವೀರ, ಶಾಂತಿಯ ಸಾಧಕ, ಮಾನವ ಕೋಟಿಯ ಕಲ್ಯಾಣಕಾರ್ಯದ ಧೀರ ಧುರಂಧರ-ಇಂಥ ಸಾಧು ಪುರುಷನಿಗೆ ಇದಕ್ಕೂ ಹೆಚ್ಚಿನ ಹಿರಿಮೆ ಏನು ಸಿಗಬೇಕು ?

# ಥೊಮಸ್ ಎಡಿಸನ್

ವಿದ್ಯುತ್‌ದೀಪದ ಸ್ವಿಚ್ ಗುಂಡಿಯನ್ನು ಒತ್ತಿದಾಗ, ಒಂದು ಟೆಲಿಫೋನನ್ನು ಎತ್ತಿದಾಗ, ಫೋನೋ ರಿಕಾರ್ಡನ್ನು ಹಚ್ಚುವಾಗ ಅಥವಾ ಕತ್ತಲೆಯಲ್ಲಿ ಫಿಲ್ಮ ಆರಂಭವಾದಾಗ ನೀವು ಏನು ಮಾಡುತ್ತೀರಿ ಬಲ್ಲಿರಾ ? ಅಪ್ರತ್ಯಕ್ಷವಾಗಿ ಥೊಮಸ್ ಎಡಿಸನ್‌ನಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತೀರಿ. ಕಳೆದ ಶತಮಾನದಲ್ಲಿ ಪಾಶ್ಚಾತ್ಯ ಜಗತ್ತು ನಾಗರಿಕತೆಯ ಯಂತ್ರಯುಗಕ್ಕೆ ದಾರಿಮಾಡಿ ಕೊಟ್ಟಿತ್ತು. ಎಡಿಸನ್‌ನು ಆ ನಾಗರಿಕತೆಯ ಯುಗ ಪುರುಷನು; ಯಂತ್ರ ಯುಗದ ಜನಕನು. ಸ್ಫೂರ್ತಿ ಯುಕ್ತವಾದ ಪ್ರಯತ್ನ, ಅಪ್ರತಿಹತವಾದ ಸಂಶೋಧನೆ, ಅಪರಿಮಿತವಾದ ಸಹನೆ ಮತ್ತು ಈ ಮೂರೂ ಶಕ್ತಿಗಳನ್ನು ಶೋಭೆಗೊಳಿಸುವ ತನ್ನದೇ ಆದ ಪ್ರತಿಭಾ ವಿಶೇಷ–ಇವುಗಳಿಂದ ಎಡಿಸನ್‌ನು ಆ ಯುಗದ ವಿಜ್ಞಾನ ಕ್ಷೇತ್ರದ ಕರ್ಮವೀರನಾಗಿ ಮೆರೆದನು. ಅವನಷ್ಟು ಯಶಸ್ವಿಯಾದ ಕಲ್ಪಕನನ್ನು ಜಗತ್ತು ಇನ್ನೂ ಪಡೆದಿಲ್ಲ. ತನ್ನ ಸಂಶೋಧನ ಕಾರ್ಯದ ದೀರ್ಘಕಾಲಿಕ ಅನುಭವದಿಂದ, ಪ್ರಯೋಗ ಮತ್ತು ಕಲ್ಪಕತೆಯಿಂದ ಅಲ್ಲದೆ ಇತರ ವಿಜ್ಞಾನಿಗಳ ಶೋಧಗಳ ವ್ಯಾವಹಾರಿಕ ವಿನಿಯೋಗಗಳನ್ನು ಒದಗಿಸಿಕೊಟ್ಟದ್ದರಿಂದ ಎಡಿಸನ್ನನು ಆಧುನಿಕ ಯಂತ್ರಪ್ರಸ್ಥ ನಾಗರಿಕತೆಗೆ ಬೇರೆ ಯಾವ ವಿಜ್ಞಾನಿಗಿಂತಲೂ ಮಿಗಿಲಾಗಿ ಸೇವೆ ಯನ್ನು ಸಲ್ಲಿಸಿದನು.

ಎಡಿಸನ್‌ನು ಶೋಧ ವೃತ್ತಿಯನ್ನು ಕೈಗೊಂಡಾಗ ಅಮೇರಿಕೆಯ ಯಾದವೀ ಕಲಹವು ಮುಗಿದಿತ್ತು. ದೇಶದ ಶಕ್ತಿ ಸಾಮರ್ಥ್ಯಗಳು ವ್ಯಾಪಾರಬುದ್ಧಿಮೆಯ ಹೊಸ ಹೊಂಚುಗಳಿಗಾಗಿ, ಹಸಾಹಸದ ಯೋಜನೆಗಳಿಗಾಗಿ ಮತ್ತು ಸಾರ್ವತ್ರಿಕ ಭೌತಿಕ ಪ್ರಗತಿಗಾಗಿ ಬಿಡುಗಡೆ ಹೊಂದಿದ್ದವು. ವಸ್ತುಗಳಿಂದ ಕೆಲಸ ತೆಗೆದು ಕೊಳ್ಳುವ, ಹೊಸ ಹೊಸ ಉಪಕರಣ ಸಲಕರಣೆಗಳನ್ನು ಕಂಡು ಹಿಡಿದು ಕೆಲಸಕ್ಕೆ ಹೂಡುವ ಕಾಯಕವು ಎಡಿಸನ್‌ನ ವಿಶೇಷ ಶಕ್ತಿಯಾಗಿತ್ತು. ಬಂಡುವಾಳ ಗಾರರಿಗೆ ಲಾಭಕರವಾದ ಹೊಸ ವಿನಿಯೋಗಗಳ ದಾರಿ ಮತ್ತೂ ಜನಸಾಮಾನ್ಯರಿಗೆ, ಅವರ ದೈನಂದಿನ ಬದುಕಿಗೆ ಬೇಕಾಗುವ ಸಂಗತಿಗಳನ್ನೇ ಬಳಸಿ ಶೋಧಿಸಿದ್ದಕ್ಕಾಗಿ ಅಂದಿನ ಬಂಡುವಾಳದಾರರಿಗೂ ಜನಸಾಮಾನ್ಯರಿಗೂ ಅವನ ಬುದ್ಧಿ ಪ್ರಭಾವವೂ ಎದೆಗಾರಿಕೆಯೂ ತುಂಬ ಮೆಚ್ಚಿಗೆ ಆದವು.– ಅಲೆಕ್ಝಾಂಡರ ಬೆಲ್ಲನು ಟೆಲಿಫೋನ ಯಂತ್ರವನ್ನು ಈ ಮೊದಲೆ ಕಲ್ಪಿಸಿದ್ದನು. ಎಡಿಸನ್‌ನು ಅದಕ್ಕೆ ಒಂದು ಧ್ವನಿಕ್ಷೇಪಕವನ್ನು ಒದಗಿಸಿ ಆ ಯಂತ್ರವು 'ಮುಕ್ತ ಕಂಠ'ದಿಂದ ಮಾತನಾಡುವಂತೆ ಮಾಡಿದನು. ವಿದ್ಯುಚ್ಚಾಲಕ ಯಂತ್ರವನ್ನೊಂದು

(ಇಲೆಕ್ಟ್ರೊ ಫೋಟೊಗ್ರಾಫ) ಕಲ್ಪಿಸಿ, ಆತನು ಮೋರ್ಸನ ತಾರಾ ಯಂತ್ರಕ್ಕೆ ಬಹಳ ಅನುಕೂಲ ಮಾಡಿಕೊಟ್ಟನು. ಹಾಗೆಯೇ ದೂರ ಧ್ವನಿಕ್ಷೇಪಕ ಯಂತ್ರಕ್ಕೆ ಧ್ವನಿಗ್ರಾಹಕ ಉಪಕರಣವನ್ನು ಶೋಧಿಸಿ ಕೊಟ್ಟನು. ಅವನ ಈ ಕಲ್ಪಕತೆಯಿಂದ ಉದ್ದಿಮೆದಾರರಿಗೆ ಅವನು ಅಮೂಲ್ಯ ಸಹಾಯಕನಾದನು. ಬೆಲ್‌ನ ಅಥವಾ ಇನ್ನೊಬ್ಬ 'ಸರ್ವಾಧಿಕಾರ'ದ ಬಾಧ್ಯಸ್ಥಿಕೆಯ ಬೆದರಿಕೆ ಇಲ್ಲದೆ ಬೇರೆ ಕಲ್ಪಕ ಶೋಧಕರ ಪ್ರಚಲಿತ ಯಂತ್ರೋಪಕರಣಗಳಿಗಿಂತಲೂ ಲಾಭಕರವಾದ ಸುಲಭವಾದ ಯಂತ್ರಗಳನ್ನೂ ಉಪಕರಣಗಳನ್ನೂ ಎಡಿಸನ್‌ನ ಸಹಾಯದಿಂದ ಉಂಟು ಮಾಡಿಕೊಳ್ಳುವಂತಾಯಿತು. ಅಲ್ಲದೆ ಲೋಕೋಪಯೋಗಿಯಾಗಲೇಬೇಕಾದ ಹಲವು ಹೊಸ ಸಲಕರಣೆಗಳ ಉತ್ಪಾದನೆಯ ಯೋಜನೆಗಳಲ್ಲಿ ಯೋಚನೆ ಇಲ್ಲದೆ ಬಂಡು ವಾಳವನ್ನು ತೊಡಗಿಸುವ ಧೈರ್ಯ ಬಂದಿತು. ಜನಸಾಮಾನ್ಯರ ಸುಲಿಗೆಯ ಮೇಲೆ ಅವನು 'ಗಾರುಡಿಗ', 'ಮಾಯಾ ತಾಂತ್ರಿಕ'ನೆಂದು ನಲಿದಾಡಿದನು. ಅಂದಿನ ವೃತ್ತಪತ್ರಿಕೆಗಳು ಅವನನ್ನು ಹಾಗೆಯೇ ಕರೆದವು.

ಇದಕ್ಕೂ ಮೊದಲು ಎಡಿಸನ್‌ನು ಫೋಟೋಗ್ರಾಫವನ್ನು ನಿರ್ಮಿಸಿದನು. ಮಾನವನ ಕಂಠವನ್ನು ಮಾತು-ಹಾಡುಗಳನ್ನು ಯಾಂತ್ರಿಕವಾಗಿ ಮೂಡಿಸಿದ ಯಾಂತ್ರಿಕನು ಅವನೇ. ದೇವರ ಕೃಪೆ ಮೂಕನನ್ನು ಮಾತಾಡಿಸಬಹುದು, ಕೊರಡನ್ನು ಕೊನರಿಸಬಹುದು. ಆದರೆ ಉಕ್ಕಿನ ಉಪಕರಣಗಳಿಂದ ಮಾನವ ಧ್ವನಿಯನ್ನು ಉಕ್ಕಿಸಿದ ಮಾಯಾವಿದನು ಎಡಿಸನ್‌ನೇ ಸರಿ. ಫೋಟೋ ಯಂತ್ರದ ತತ್ವವನ್ನೇ ಬಳಸಿಕೊಂಡು ಅನೇಕ ಇತರ ವಿನಿಯೋಗಗಳು ಮುಂದಾದವು. ಆದರೆ ಅವುಗಳಿಗೆ ಮೊದಲು ಎಡಿಸನ್‌ನೇ ಇನ್ನೊಂದು ಕಾಯಕವನ್ನು ಕೈಗೂಡಿಸ ಬೇಕಾಯಿತು. ವಿದ್ಯುತ್‌ಪ್ರವಾಹದ ವಿಭಜನೆಯೇ ಆ ಕಾಯಕ. ಅಂದಿನವರೆಗೆ ಆ ಕಾರ್ಯ ಅಶಕ್ಯವೆನಿಸಿತ್ತು. ಮುಂದೆ ಅವನ ಕಲ್ಪಕ ಕಾರಖಾನೆಯಿಂದ ಉರಿಯುವ ವಿದ್ಯುದ್ದೀಪಗಳು ಬಂದವು; ಆ ದೀಪಗಳಿಗೆ ಅವಶ್ಯವಿರುವ ವಿದ್ಯುಜ್ಜನಕ ಯಂತ್ರಗಳು (ಡೈನೆಮೊ) ಬಂದವು. ಅವುಗಳ ಬೆನ್ನಿಗೆ ಅನೇಕ ಪೂರಕ ಉಪಕರಣಗಳು ಚಿಕ್ಕ ದೊಡ್ಡ ಯಂತ್ರಗಳು ಬಂದವು. ಅವೆಲ್ಲವುಗಳಿಂದ ಆಧುನಿಕ ವಿದ್ಯುದ್ದೀಪದ ನಾಗರಿಕ ಸಂಘಟನೆಯೂ ಕೇಂದ್ರ ಸ್ಟೇಶನ್ನುಗಳ ಯೋಜನೆಯೂ ಶಕ್ಯವಾದವು. ವ್ಯವಸಾಯ ವ್ಯಾಪಾರಗಳ ದೃಷ್ಟಿಯಿಂದ ಸಾಫಲ್ಯಪೂರ್ಣವಾದವು. ವಿದ್ಯುತ್‌ಪೂರೈಕೆ ಪ್ರಕಾಶನಗಳದೊಂದು ಹೊಸ ಉದ್ದಿಮೆಯೂ ಆ ಮೂಲಕ ತಲೆ ಎತ್ತಿತು. ಆ ಉದ್ದಿಮೆಯಿಂದ ವಿದ್ಯುತ್ ಯಂತ್ರವಿದ್ಯೆ (ಇಲೆಕ್ಟ್ರಿಕಲ್ ಇಂಜನಿಯರಿಂಗ) ಎಂಬ ಹೊಸ ವ್ಯವಸಾಯವೇ ಹುಟ್ಟಿತು. ಇವೆಲ್ಲ 'ವಿದ್ಯುನ್ಮತಿಯ ಕಲ್ಯಾಣ'ಕ್ಕೆ ಮೂಲ ನಾಯಕ ಎಡಿಸನ್ !

ಥೊಮಸ್ ಅಲ್ವಾ ಎಡಿಸನ್ ಅಮೇರಿಕೆಯ ಮಿಲಾನ ಪಟ್ಟಣದಲ್ಲಿ ೧೮೪೭ ರಲ್ಲಿ ಫೆಬ್ರುವರಿ ೧೧ ಕ್ಕೆ ಜಗತ್ತಿನಲ್ಲಿ ಕಣ್ಣು ತೆರೆದನು. ಅವನ ತಾಯಿ ಸ್ಕಾಟ್ಲಂಡದ ಒಂದು ಕುಲದವಳು. ತಂದೆ ಡಚ್ಚನು. ಮಿಶ್ರ ಸಂತತಿಯು ಗುಣೋತ್ಕರ್ಷಕ್ಕೆ ಸಾಧನವಾದದ್ದು ಇತಿಹಾಸದಲ್ಲಿ ಕಂಡುಬರುತ್ತದೆ. ಎಡಿಸನ್‌ನ ಪ್ರತಿಭೆಗೂ ಇದೇ ವಂಶ ಮಿಶ್ರಣವು ಕಾರಣವಿರಬೇಕು.

ಎಡಿಸನ್‌ನು ಏಳು ವರ್ಷದವನಿದ್ದಾಗ ಅವನ ಪರಿವಾರವು ಪೋರ್ಟಹುರೊನ್ ಎಂಬಲ್ಲಿಗೆ (ಮಿಚಿಗನ್ ಪ್ರಾಂತದಲ್ಲಿ) ಹೋಗಿ ನೆಲೆಸಿತು. ಅಲ್ಲಿ ತರಳ ಎಡಿಸನ್‌ನು ಶಾಲೆಗೆ ಹೋದನು. ಆ ಮೂರು ತಿಂಗಳಲ್ಲಿಯೂ ಆತನು ವರ್ಗದ ತಳದಲ್ಲಿಯೇ ಉಳಿದನು. ಶಿಕ್ಷಕರು ಅವನನ್ನು 'ಕೊಳೆತ ತತ್ತಿ' ಎಂದು ಕರೆದರು ! ಅದೇ ತತ್ತಿ ಮುಂದೆ ವಿಶ್ವವನ್ನೇ ಅಚ್ಚರಿಗೊಳಿಸುವ ಮಾಯಾಪಕ್ಷಿಯಾಗಿ ಮಾರ್ಪಡುವದೆಂದು ಆ ಬಡ 'ವರ್ಣ ಮಾತ್ರ'ಕ ಗುರುವಿಗೇನು ಗೊತ್ತು ?

ಆಗ ಥಾಮಸನು ಶಾಲೆಯನ್ನು ಬಿಟ್ಟನು. 'ಮಕ್ಕಳ ಶಾಲೆ ಮನೆಯಲ್ಲೇ' ಎಂಬ ಕೈಲಾಸಂ ಸೂತ್ರವನ್ನು ಅವನು ಅವಲಂಬಿಸಿದನು. ಅವನು ಮುಂದಿನ ಶಿಕ್ಷಣವೆಲ್ಲ ತನ್ನ ತಾಯಿಯಿಂದಲೆ ಪಡೆದನು. ಉಳಿದದ್ದನ್ನು ತನ್ನ ಪ್ರಯೋಗ ನಿರೀಕ್ಷಣೆಗಳಿಂದ ಕಲಿತನು. ಪ್ರಯೋಗ–ಪ್ರಿಯತೆಯು ಆತನ ಹುಟ್ಟುಗುಣವಾಗಿತ್ತು. ಪ್ರಯೋಗ ಮಾಡಿ ನೋಡುವ ಈ ಕುತೂಹಲವು ಚಿಕ್ಕಂದಿನಲ್ಲಿಯೇ ಒಮ್ಮೆ ಹಾಸ್ಯಾಸ್ಪದ ಹವ್ಯಾಸಕ್ಕೆ ಅವನನ್ನು ಒಡ್ಡಿತ್ತು. ಮನೆಯ ಅಂಗಳದಲ್ಲಿ ಹೇಂಟೆಯೊಂದು(ಕೋಳಿ) ತತ್ತಿಗಳಿಗೆ ಕಾವು ಕೊಡುವದನ್ನು ಈ ಬಾಲ ವಿಜ್ಞಾನಿಯು ನೋಡಿದನು. ಅಂದಿನಿಂದ ಅವನು ಹೇಂಟೆ ಇಟ್ಟ ತತ್ತಿಗಳ ಮೇಲೆ ತಾನೇ ಕೂತು, ಅವು ಒಡೆದು ಮರಿ ಕೊಡುತ್ತವೋ ಎಂಬುದನ್ನು ನೋಡಲು ಆರಂಭಿಸಿದನು.–ತಾನು ಹೇಂಟೆಯಲ್ಲವೆಂದು ಅವನು ಬಲ್ಲ ! ಆದರೆ ತನ್ನ ಕಾವಿಗೆ ಆ ತತ್ತಿಗಳು ಬೆಳೆಯ ಬಾರದೇಕೆ ಎಂದು ಆತನ ವಿಚಿಕಿತ್ಸೆ ! ತತ್ತಿಗೆ ಕಾವು ಕೊಡುವ ಈಗಿನ 'ಇನ್‌ಕ್ಯುಬೇಟರ' ಯಂತ್ರದ ಮೂಲದಲ್ಲಿ ಇದೇ ವಿಚಿಕಿತ್ಸೆ ಇದೆಯಲ್ಲವೇ ? ಹಾಗೆಯೇ ಇನ್ನೊಮ್ಮೆ ಇವನ ಪ್ರಯೋಗದ ಹುಚ್ಚಿನಿಂದ ಇವನ ಮನೆಗೆಲಸದ ಆಳಿನ ಹೊಟ್ಟೆಯಲ್ಲಿ ಪ್ರಳಯವೇಳುವ ಪ್ರಸಂಗವು ಬಂದಿತು. ಆ ಆಳಿಗೆ ತರಳ ಎಡಿಸನ್‌ನು ಸಿಡ್ಲಿಜ ಪೌಡರ ಎಂಬ ರೇಚಕ ಮದ್ದಿನ ಪೊಟ್ಟಣಗಳನ್ನು ಧಾರಾಳವಾಗಿ ನುಂಗಿಸಿಬಿಟ್ಟನು. ಆ ಬಡಪಾಯಿಯ ಅಜ್ಞಾನವನ್ನೋ ಅಜ್ಞಾಧಾರಕತೆಯನ್ನೋ ನಂಬಿಕೊಂಡು ಆತನು ವಿಮಾನ ವಿದ್ಯೆಯ ರಹಸ್ಯವನ್ನು ಕಂಡುಹಿಡಿಯಲು ಈ 'ಭೇದೀತಂತ್ರ'ವನ್ನು ಹೂಡಿದ್ದನು. ಆ ಮದ್ದು ಸಾಕಷ್ಟು ನುಂಗಿದರೆ ಹೊಟ್ಟೆ

ಗೆ ತುಂಬ ವಾಯು ಉಂಟಾಗಿ ಅದರಿಂದ ಆಳುಮಗನು ತೂಕದಲ್ಲಿ ುರಾಗಿ ಹವೆಯಲ್ಲಿ ಹಾಯಾಗಿ ಹಾರಾಡಲು ಹೊರಡಬಹುದೆಂದು ಅಪ್ರಬುದ್ಧ ಸನ್‌ನ ಊಹೆ ! ಸಿಡ್ಲಿಜ ಪುಡಿಯನ್ನು ನೀರಿನಲ್ಲಿ ಕರಗಿಸುವಾಗ ಬುರುಬುರು ರೆ ಎದ್ದು ವಾಯು ಉಂಟಾಗುವದನ್ನು ಅವನು ನೋಡಿದ್ದನು. ಮನೆಯಲ್ಲಿ ನೆ ತಂದಿಟ್ಟದ್ದ ಈ ಮದ್ದಿನ ಪುಡಿಯನ್ನೇ ಉಪಯೋಗಿಸಿ ತನ್ನ ಮಹಾ ಯೋಗವನ್ನು ಆತ ಮುಂದರಿಸಿದನು. ಬಾಲ ವಿಜ್ಞಾನಿಯ ಊಹೆಯು ದಾರಿ ್ರತು, ಆದರೆ ಗುರಿ ಸರಿ ಇತ್ತು.

ರೆ ಈ ಪ್ರಯೋಗದಿಂದ ಎಡಿಸನ್‌ನ ಹಾರಾಟಕ್ಕೆ ಪೆಟ್ಟು ಬಿದ್ದಿತು. ಅವನಿಗೆ ಯರಿಂದ ದಂಡನೆ ದೊರೆಯಿತು. ಆದಾಗ್ಯೂ ಎಡಿಸನ್‌ನ ಪ್ರಯತ್ನ ಯಲಿಲ್ಲ; ಪ್ರಕಟವಾದ ಚಟುವಟಿಕೆ ಈಗ 'ಭೂಮಿಗತ'ವಾಯಿತು. ಮನೆಯ ಮಾಳಿಗೆಯಲ್ಲಿ ಎಡಿಸನ್ ತನ್ನದೊಂದು ಪುಟ್ಟ ಪ್ರಯೋಗಶಾಲೆಯನ್ನು ಮಾಡಿ ಂಡನು. ಆದರೆ ಪ್ರಯೋಗಗಳಿಗೆ ಕೆಲವು ರಸಾಯನಗಳು ಬೇಕಲ್ಲ ! ಅವು ಗೆ ಮತ್ತೆ ಬಹಳ ಹಣ ಬೇಕು ! ಹಣಕ್ಕಾಗಿ ಏನು ಮಾಡಬೇಕು ? ಎಡಿಸನ್ ತ್ತಪತ್ರಿಕೆಗಳನ್ನು ಮಾರುವ ಮಾಣಿಯಾದನು. ಈ ಮಾರಾಟದ ಮಾರ್ಕೆಟ್ ಾವದು ? ಪೋರ್ಟ ಹ್ಯುರೊನ್‌ದಿಂದ ಡೀಟ್ರೊಯಿಟತನಕ ಓಡಾಡುವ ಿನಲ್ಲಿ ಹತ್ತಿ ಬಂಡಿಗಳಲ್ಲಿ ವೃತ್ತಪತ್ರಿಕೆಗಳನ್ನು ಮಾರುವದು ಅವನ ಕೆಲಸ. ಕೆಲಸದಲ್ಲಿಯೂ ಅವನ ದೃಷ್ಟಿಗೆ ಪ್ರಯೋಗ ಹೊಳೆಯಿತು. ಪತ್ರಿಕೆಗಳು ಬಿಸಿ ಟ್ಟಿಗಳಂತೆ ಮಾರಿಹೋಗುವದನ್ನು ಆತ ನೋಡಿದನು. ಸುದ್ದಿಯ ಬೆಲೆಯಿಂದ ಬ ಸಂಪಾದನೆಯೆಂದು ಆತ ತಿಳಿದನು. ಕೂಡಲೆ ಹೇಗೋ ಹಣ ಒಟ್ಟು ಕಿ, ತನ್ನದೇ ಒಂದು ಮುದ್ರಣ ಯಂತ್ರವನ್ನು ಸ್ಥಾಪಿಸಿ, ತನ್ನದೇ ಒಂದು ್ರಕೆಯನ್ನು ಆರಂಭಿಸಿದನು. ಆಗಲೂ, ಆತ ಉಗಿಬಂಡಿಯ ಲಗೇಜ ಡಬ್ಬಿ ಲ್ಲಿಯೇ ತನ್ನ ಪುಟ್ಟ ಪ್ರಯೋಗಶಾಲೆಯನ್ನು ತೆರೆದನು. ಅಲ್ಲಿ ಬಿಡುವಿನ ಳೆಯಲ್ಲಿ ಎಡಿಸನ್‌ನು ತಾರಾ ಯಂತ್ರದ ಕುರಿತು ಪ್ರಯೋಗಗಳನ್ನು ಮಾಡ ಡಗಿದನು.

ಸಂಚಾರೀ ಪ್ರಯೋಗಶಾಲೆಯು ಗಂಡಾಂತರವನ್ನು ತಂದಿತು ! ಒಂದು ದಿನ ಬಂಡಿಯು ಒಮ್ಮೆಲೆ ಮುಗ್ಗರಿಸಿದಂತಾಯಿತು. ಆಗ ಫಾಸ್ಫರಸದ ಒಂದು ುಕು ನೆಲಕ್ಕೆ ತೂರಿಬಿದ್ದು ಭುಗ್ಗನೆ ಉರಿದು ಡಬ್ಬಿಗೆ ಬೆಂಕಿಹತ್ತಿತು. ಆಯಿತು. ಗೆದ್ದ ಕಂಡಕ್ಟರನು ಎಡಿಸನ್‌ನ ಪ್ರಯೋಗಶಾಲೆಯನ್ನೂ ಮುದ್ರಣ ಯಂತ್ರ ್ನ ನೇರವಾಗಿ ಎತ್ತಿ, ಬಂಡಿಯಿಂದ ಮುಂದಿನ ನಿಲ್ದಾಣದಲ್ಲಿ ಹೊರಗೆ

ಒಗೆದುಬಿಟ್ಟನು. ಜತೆಗೆ ಎಡಿಸನ್‌ನ ಕಿವಿಗಳನ್ನು ಚನ್ನಾಗಿ ಹಿಂಡಿದನು. ಅಂದು ಹಿಂಡಿದ ಕಿವಿಯ ನೋವನ್ನು ಎಡಿಸನ್ ಸಾಯುವತನಕವೂ ಮರೆಯಲಿಲ್ಲ. ಏಕೆಂದರೆ ಕಂಡಕ್ಟರನ ಕೈಗುಣದ ಪುಣ್ಯದಿಂದ ಅವನ ಕಿವಿನೋವು ಕಿವುಡಿನ ವಿಕಾರ ವಾಗಿ ನಿಂತಿತು. ಈ ಕಿವುಡು ಜೀವಮಾನವೆಲ್ಲ ಅವನನ್ನು ಕಾಡಿತು.

ಒಮ್ಮೆ, ಅದೇ ರೇಲ್ವೆ ನಿಲ್ದಾಣದಲ್ಲಿ ಎಡಿಸನ್‌ನು ನಿಂತಿದ್ದನು. ೧೮೬೨ ನೇ ವರ್ಷ ದಲ್ಲಿ ಒಂದು ಮುಂಜಾವು ಅದು. ಅವನು ನಿಂತು ನೋಡುತ್ತಿದ್ದಂತೆಯೇ ಒಂದು ಕೂಸು ರೈಲು ಹಳಿಗಳ ಮೇಲೆ ಆಡುತ್ತ ಓಡಿತು. ಅದರ ದಿಶೆಯಲ್ಲಿಯೇ ಒಂದು ಟ್ರೇನು ಧಾವಿಸಿ ಬರುತ್ತಿತ್ತು.–ಅದೂ ಸರಕು ತುಂಬಿದ ಗೂಡ್ಸ ಟ್ರೇನು. ಎಡಿಸನ್ ಕೈಯೊಳಗಿನ ಪತ್ರಿಕೆಗಳ ಕಟ್ಟನ್ನು ಅಲ್ಲಿಯೇ ಬಿಸುಟು ಪ್ಲಾಟಫಾರ್ಮಿನಿಂದ ಜಿಗಿದು ಮುನ್ನುಗ್ಗಿ ಆ ಚಿಕ್ಕ ಹುಡುಗನನ್ನು ಟ್ರೇನಿನ ತೀರ ಹತ್ತಿರದಿಂದ ಜಗ್ಗಿ ದೂರ ಎಳೆದುಕೊಂಡನು. ಸತ್ಯಶೋಧಕನು ಕಲ್ಪಕ ಬುದ್ಧಿಯವನಿದ್ದಷ್ಟೇ ಕೋಮಲ ಭಾವನೆಯವನೂ ಕರುಣಾನಿಧಿಯೂ ಆಗಿದ್ದನು. ಕೂಸಿನ ಜೀವ ಉಳಿಸಿದ್ದಕ್ಕಾಗಿ ಅದರ ತಂದೆ–ಅಲ್ಲಿಯ ಸ್ಟೇಶನ್ ಮಾಸ್ತರ–ಮೆಕೇಂಝಿ ಎಂಬಾತನು ಸಂತೋಷ ದಿಂದ ಎಡಿಸನ್‌ನಿಗೆ ರೈಲು ತಾರಾಯಂತ್ರದ ತಂತ್ರವನ್ನೆಲ್ಲ ಕಲಿಸಿಕೊಟ್ಟನು. ಕುಶಾಗ್ರ ಎಡಿಸನ್‌ನು ಆ ತಂತ್ರವನ್ನೆಲ್ಲ ಶೀಘ್ರದಲ್ಲಿಯೇ ಅರಗಿಸಿಕೊಂಡು ಅದೇ ಕೆಲಸಕ್ಕೆ ನೇಮಕನಾದನು. ರೇಲ್ವೆ ಖಾತೆಯಲ್ಲಿಯೇ ತಾರಾಯಂತ್ರದ ವಾಹಕನಾಗಿ ಒಳ್ಳೆಕೆಲಸಗಾರನೆನಿಸಿಕೊಂಡನು.

ಆ ಕೆಲಸವಲ್ಲಿಯೂ ತನ್ನ ಕಲ್ಪಕತೆಯ ಮುದ್ರೆಯನ್ನು ಒತ್ತದೇ ಬಿಡಲಿಲ್ಲ. ಆಗ ಅವನು ಒಂಟಾರಿಯೋ ಪ್ರಾಂತದಲ್ಲಿ ಸ್ಟ್ರಾಟ್‌ಪೋರ್ಡ ಜಂಕ್ಶನ್‌ದಲ್ಲಿ ನೇಮಕ ವಾಗಿದ್ದನು–ಅದೂ ರಾತ್ರಿಯ 'ಪಾಳಿ'ಗೆ. ತಾಸಿಗೆ ಒಮ್ಮೆ ಅವನು ರೈಲಿನ ಒಬ್ಬ ಅಧಿಕಾರಿಗೆ ತಂತಿಯಿಂದ ತಿಳಿಸುವದಿತ್ತು. ಆದರೆ ಹಗಲೆಲ್ಲ ಶೋಧ ಪ್ರಯೋಗ ಗಳಲ್ಲಿ ಕಳೆದ ಎಡಿಸನ್‌ನಿಗೆ ರಾತ್ರೆಗೆ ನಿದ್ದೆ ಬೇಕಿತ್ತು. ಈ ನಿದ್ದೆಯ ಅವಶ್ಯ ಕತೆಯು ಅವನ ಕಲ್ಪಕತೆಗೆ ಆವ್ಹಾನ ಕೊಟ್ಟಿತು. ಗಡಿಯಾಳದಲ್ಲಿ ಯಂತ್ರದಂಥ ಒಂದು ಉಪಕರಣವನ್ನು ಸಿದ್ಧಮಾಡಿ ಅದಕ್ಕೆ ತಾರಾಯಂತ್ರವನ್ನು ಹೂಡಿ ಸಕಾಲಕ್ಕೆ ಪ್ರತಿ ತಾಸಿಗೆ ತನ್ನಾರೆ ತಂತಿಯ 'ಸಿಗ್ನಲ್' ಹೋಗುವಂತೆ ಮಾಡಿದನು! ಬುದ್ಧಿ ಜಾಗ್ರತವಾಗಿದ್ದರೆ ಸರಿ. ನಿದ್ದೆಗೆ ಹೇಗೂ ಆಸರ ಮಾಡಿಕೊಡಲು ಬರುತ್ತದೆ. ಹಾಗೆಯೇ ಅವನಿಗೆ ಒಮ್ಮೆ ಸಿನ್‌ಸಿನಾಟಿಗೆ ವರ್ಗವಾಯಿತು. ಅಲ್ಲಿಯ ತಂತಿ ಕಟ್ಟೆಯಲ್ಲಿ ಹೆಗ್ಗಣಗಳ ಉಪಟಳ ವಿಪರೀತ. ಎಡಿಸನ್‌ನು ಹೆಗ್ಗಣಗಳನ್ನು ವಿದ್ಯುತ್ ಶಕ್ತಿಯಿಂದ ಪಟಪಟನೆ ಕೊಲ್ಲುವ ಪಂಜರವನ್ನೊಂದು ತಯಾರಿಸಿದನು. ಹಾಗೆಯೇ ಇಂಡಿಯಾನಾಫೆಲಿಸ್ ಎಂಬಲ್ಲಿ ಇದ್ದಾಗ ಆತನು 'ಮೋರ್ಸ' ಪದ್ಧತಿಯ ತಂತಿ

ಸುದ್ದಿಗಳನ್ನು ಬರೆದಿಡಲಿಕ್ಕೆ 'ಸ್ವಯಂ ಸಂಗ್ರಾಹಕ'ವನ್ನೊಂದು ಕಲ್ಪಿಸಿದನು. ಇದೇ ಉಪಕರಣವು ಮುಂದೆ ಆತನಿಗೆ ಫೋನೋ ಯಂತ್ರವನ್ನು ಶೋಧಿಸಲು ಪ್ರೇರಣೆ ಕೊಟ್ಟಿತು.

೧೮೬೮ ರಲ್ಲಿ ಎಡಿಸನ್‌ನು ಬೊಸ್ಟನದಲ್ಲಿ ನೇಮಕವಾಗಿದ್ದನು. ಆಗಲೆ ಅವನು ತನ್ನ ಮೊದಲನೆಯ 'ಪೇಟಂಟಿ'ಗಾಗಿ ಸರಕಾರಕ್ಕೆ ಅರ್ಜಿ ಮಾಡಿದನು. ('ಪೇಟಂಟಿ' ಅಂದರೆ ತನ್ನದೆ ಆದ ಶೋಧ, ಔಷಧ, ಕೈಗಾರಿಕೆ ಮುಂತಾದವುಗಳ ಸ್ವಾಮಿತ್ವದ ಸರ್ವಾಧಿಕಾರಿಗಳನ್ನು ಕಾದಿಡುವದಕ್ಕಾಗಿ ಸರಕಾರದಲ್ಲಿ ಮಾಡುವ ರಜಿಸ್ಟ್ರೇಶನ್.) ಅವನ ಮೊದಲನೆಯ ಪೇಟಂಟಿನ ಶೋಧವೂ ಅಷ್ಟೇ ಸ್ವಾರಸ್ಯವಾಗಿತ್ತು. ಮತ ದಾರರ ಮತಗಳನ್ನು ತನ್ನಾರೆ ಸಂಗ್ರಹಿಸಿ ಗುರುತು ಹಾಕಿಡುವ ಯಂತ್ರವನ್ನು ಅವನು ಸಿದ್ಧಗೊಳಿಸಿದನು. ಆದರೆ ಅಮೇರಿಕೆಯ ರಾಜಕಾರಣಿಗಳಿಗೆ ಇದಕ್ಕೂ ಹೆಚ್ಚಿನ ಅಸಹ್ಯವು ಇನ್ನಾವದು ? ಮತಗಳ ಸ್ವಯಂಸಂಗ್ರಾಹಕಗಳು ಉಂಟಾದರೆ ಮುಂದೆ ಮತಗಟ್ಟೆಗಳಲ್ಲಿ ಮತದಾನದ ಹೊತ್ತಿಗೆ ಮತಗಳನ್ನು ಲಾಭ ಲೋಭಿಗಳ ಭೇದೋಪಾಯಗಳಿಂದ ಒಳಗೆ ಹಾಕಿಸಿಕೊಳ್ಳುವ ಅನಾಚಾರಕ್ಕೆ ಅಥವಾ ಮತ ದಾನದ ನಂತರ ಮತ ಪೆಟ್ಟಿಗೆಗಳನ್ನು ತಡೆದು ಒಡೆದುಕೊಳ್ಳುವ ಅತ್ಯಾಚಾರಕ್ಕೆ ಎಡೆ ಎಲ್ಲಿ ?

ಆಗ ಎಡಿಸನ್‌ನು ಸಾರ್ವಜನಿಕರಿಗೆ ಹೆಚ್ಚು ಉಪಯುಕ್ತವಾದ ತಂತಿಯಿಂದ ಸುದ್ದಿ ಸಮಾಚಾರಗಳನ್ನು ತಿಳಿಸುವ ಒಂದು ಯಂತ್ರವನ್ನು ಸಿದ್ಧಪಡಿಸಿದನು. ಇಂಥ ಕರ್ಯ ಅಮೇರಿಕೆಯಲ್ಲಿ ಈ ಮೊದಲೆ ಬೇರೊಬ್ಬ ಶೋಧಕನು ಪ್ರಚಾರಗೊಳಿಸಿದ್ದನು.

ನ್ಯೂಯಾರ್ಕಕ್ಕೆ ಬಂದಾಗ ಎಡಿಸನ್‌ನು ಕೈಯಲ್ಲಿ ಕಾಸಿಲ್ಲದ, ಹೊಟ್ಟೆಯಲ್ಲಿ ಕೂಳಿಲ್ಲದ ಕಂಗಾಲ ಸ್ಥಿತಿಯಲ್ಲಿದ್ದನು. ಎರಡು ರಾತ್ರಿ ಗೋಲ್ಡ ಇಂಡಿಕೇಟರ ಕಂಪನಿಯ ಬ್ಯಾಟರಿ ಕೋಣೆಯಲ್ಲಿ ಮಲಗಿ ಕಳೆದನು. ಮೂರನೆಯ ದಿನ ಅವನು ಆ ಕಂಪನಿಯ ಕಚೇರಿಯಲ್ಲಿ ಕೂತಿದ್ದನು. ಆಗ ತಂತಿ ಕಳಿಸುವ ಯಂತ್ರವು ಕೆಟ್ಟಿತು. ಕಚೇರಿಯ ಮೇಲಧಿಕಾರಿಯು ಚಿಂತಿಸ ಹತ್ತಿದನು. ಎಡಿಸನ್ ಸ್ವಸ್ಥ ಚಿತ್ತದಿಂದ ಎದ್ದು ಹೋಗಿ ಯಂತ್ರವನ್ನು ನೋಡಿ ನಿರಾಯಾಸವಾಗಿ ಅದನ್ನು ಸರಿಪಡಿಸಿದನು.- ಜೊತೆಗೆ ತನ್ನ ಭಾಗ್ಯ ರೇಖೆಯನ್ನೂ ಸರಿಪಡಿಸಿದನು. ಕಂಪನಿಯ ಮೇಲಧಿಕಾರಿ ಯು ಅವನನ್ನೇ ತಮ್ಮ ವಿದ್ಯುತ್ ಕೇಂದ್ರದ ವ್ಯವಸ್ಥಾಪಕನಾಗಿ ಮಾಡಿದರು.

೧೮೬೯ ರಲ್ಲಿ ಪೋಪನೆಂಬ ಒಬ್ಬ ಟೆಲಿಗ್ರಾಫ ಎಂಜಿನಿಯರನು ಎಡಿಸನ್‌ನಿಗೆ ಗಂಟು

ಬಿದ್ದನು. ಇಬ್ಬರೂ ಪಾಲುಗಾರಿಕೆಯಲ್ಲಿ ಸೇರಿದರು. ಅವರು 'ಗೋಲ್ಡ ಪ್ರಿಂಟರ' ಎಂಬ ಯಂತ್ರವನ್ನು ಶೋಧಿಸಿದರು. ಕೂಡಿಯೇ ಖಾಸಗಿ ಉಪಯೋಗದ ಸಲುವಾಗಿ ತಂತಿ ಟಪಾಲಿನ ವ್ಯವಸ್ಥೆಯನ್ನು ನಡಿಸಿದರು. ಅವರ ಈ ವ್ಯವಸಾಯವು ಮುಂದೆ ವೆಸ್ಟರ್ನ ಯುೂನಿಯನ್ ಎಂಬ ಸಂಸ್ಥೆಯಲ್ಲಿ ಸಮಾವೇಶವಾಯಿತು. ಆ ಸಂಸ್ಥೆಯ ಅಧ್ಯಕ್ಷನು ಎಡಿಸನ್‌ನಿಗೆ ತಮ್ಮ ವಿದ್ಯುದ್‌ಮುದ್ರಣ ಯಂತ್ರವನ್ನು ಸುಧಾರಿಸಲು ಹೇಳಿದನು. ಅವನು ಸುಧಾರಿಸಿದ ಯಂತ್ರವು ಮುಂದೆ ಅವನ ಹೆಸರಿನಿಂದಲೇ ಪ್ರಸಿದ್ಧವಾಯಿತು. ಎಡಿಸನ್‌ನು ತನ್ನ ಶೋಧಗಳ ಬೆಲೆಯನ್ನು ಐದು ಸಾವಿರ ಡಾಲರುಗಳೆಂದು ಕಟ್ಟಿದ್ದನು. ಆದರೆ ಮೂರು ಸಾವಿರವಾದರೂ ಹೇಗೆ ಬಾಯಿಬಿಚ್ಚಿ ಬೇಡಲಿ-ಎಂದು ಬೆದರಿದನು. ಆದರೆ ಅವನ ಎಲ್ಲ ಶೋಧಕ್ಲೃಪ್ತಿಗಳನ್ನು ಕೊಂಡುಕೊಳ್ಳಲು ಆ ಕಂಪನಿಯ ಅಧ್ಯಕ್ಷನು ಮುಂದೆ ಬಂದು ೪೦ ಸಾವಿರ ಡಾಲರು ಕೊಡುವದಾಗಿ ಹೇಳಿದನು ! ಎಡಿಸನ್ ಸ್ವಭಾವದಿಂದಲೂ ಬಲು ಧೀರ-ದಳ್ಳೆದೆಯುವನಲ್ಲ. ಆದರೂ ಆ ಕೊಡುಗೆಯನ್ನು ಕೇಳಿ ತಲೆ ತಿರುಗಿ ಬೀಳುವಂತಾದನು !

ಅನಂತರ ಎಡಿಸನ್‌ನು ನ್ಯೂ ಜೆರ್ಸಿ ಪ್ರಾಂತದಲ್ಲಿ ನಿವಾರ್ಕ ಎಂಬಲ್ಲಿ ತನ್ನ ಕರ್ಮಶಾಲೆಯನ್ನು-ಯಂತ್ರೋಪಕರಣಗಳ ಅಂಗಡಿ-ತೆರೆದನು. ಅಲ್ಲಿ ವಿದ್ಯುದ್ ಮುದ್ರಣ ಯಂತ್ರಗಳೂ ಅವುಗಳ ಭಾಗಾಂಗಗಳೂ ಸಿದ್ಧವಾಗಹತ್ತಿದವು. ಆಗಲೇ ಅವನು ತನ್ನ ಸುತ್ತಲು ಉತ್ತಮ ಉತ್ಸಾಹಿ ಕೆಲಸಗಾರರನ್ನು ಕಲೆಹಾಕಿದನು. ಅವನು ಯಂತ್ರೋಪಕರಣಗಳ ಕಾರಖಾನೆಯನ್ನು ಒಂದು ಔದ್ಯೋಗಿಕ ಶಾಲೆಯಂತೆಯೇ ನಡಿಸುತ್ತಿದ್ದನು. ತಾನು ಆಯ್ದ ಒಳ್ಳೆಯ ಜನವನ್ನು ತನ್ನಂತೆಯೇ ನಿರಾಲಸ್ಯವಾಗಿ, ನಿರಂತರವಾಗಿ ದುಡಿಸಿಕೊಳ್ಳುತ್ತಿದ್ದನು.

ಅವನ ಪ್ರತಿಭೆಯು ನವನವೋನ್ಮೇಷವಾಗಿ ಹರಿಯುತ್ತಲೇ ಇತ್ತು. ಶೋಧಪ್ರಪಂಚವು ನಿತ್ಯ ವಿಸ್ತರಿಸುತ್ತ ಹೋಗುವ ಕ್ಷಿತಿಜ. ತಾರಾಯಂತ್ರಗಳ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಅವನ ಕುಶಲ ಕಲ್ಪತೆಗೆ ಒಂದು ಪ್ರಶ್ನೆ ಹೊಳೆಯಿತು. ಒಂದು ವಿದ್ಯುತ್ ತಂತಿಯಲ್ಲಿ ಒಂದೇ ಸಮಯಕ್ಕೆ ಒಂದೇ ಸುದ್ದಿಯನ್ನು ಕಳಿಸುವದರ ಬದಲು, ಒಂದೇ ನಿಟ್ಟಿಗೆ ಒಂದೇ ವೇಳೆಗೆ ಎರಡು ಸುದ್ದಿಗಳನ್ನು ಒಟ್ಟಿಗೆ ಕಳಿಸಲು ಏಕೆ ಬರಬಾರದು ? ಈ ಪ್ರಶ್ನೆಯ ಉತ್ತರವನ್ನು ಅವನು ಕಂಡುಹಿಡಿದನು. ಅವನ ಪ್ರತಿಭೆಯು ವೈಖರಿಯೇ ಅಂತಹದಿತ್ತು. ಅದ್ಭುತವನ್ನು ಅಂಗೈಯ ಆಟಿಗೆಯಾಗಿ ಮಾಡುವ ಅಸಾಧ್ಯ ಸಿದ್ಧಿಯು ಅವನಲ್ಲಿ ಇತ್ತು. ವಿದ್ಯುತ್ ಪ್ರವಾಹದಲ್ಲಿ ವ್ಯತ್ಯಾಸವನ್ನೂ ದಿಶಾ ಭೇದವನ್ನೂ ಸಾಧಿಸಿ, ಅವನು ಎರಡಲ್ಲ ನಾಲ್ಕು ಸುದ್ದಿಗಳನ್ನು ಏಕಸಮಯಾವಚ್ಛೇದವಾಗಿ ತಂತಿಯಿಂದ ಒಂದೇ ದಿಶೆಯಲ್ಲಿ

ಕಳಿಸುವ ಯೋಜನೆಯನ್ನು ಶೋಧಿಸಿದನು! ಈ ಶೋಧವು ವ್ಯಾವಹಾರಿಕ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಯಿತು. ಸುದ್ದಿಯ ತಂತಿ ಸಾರಿಗೆಯಲ್ಲಿ ಇದರಿಂದ ಲಕ್ಷಾಂತರ ಡಾಲರುಗಳ ವೆಚ್ಚವು ಉಳಿಯಿತು. ಅಲ್ಲದೆ ಇದರ ಸಾಮಾಜಿಕ ಸೌಕರ್ಯ ಹೇಳತೀರದು.

ಈ ಶೋಧ ನಡೆಯುತ್ತಿರುವಾಗಲೇ, ಎಡಿಸನ್‌ನ ಅಷ್ಟಾವಧಾನಿಯಾದ ಪ್ರತಿಭೆಯು ಇನ್ನೂ ಕೆಲವು ಶೋಧಗಳಲ್ಲಿ ತೊಡಗಿತ್ತು–ತೊಡಕಿಲ್ಲದೇ ಶೋಧಗಳನ್ನು ಮಾಡಿತ್ತು. ಜಿಲ್ಹೆಯ ದೂರದ ಟೆಲಿಫೋನುಗಳಿಗಾಗಿ ವಿಶಿಷ್ಟ ಮಾದರಿಯ ಧ್ವನಿಕ್ಷೇಪಕ ಕಟ್ಟೆಗಳ ಯೋಜನೆಯನ್ನೊಂದು ಮಾಡಿ ಅವುಗಳ ಸಂಘಟನೆಗಾಗಿ ಬೇರೊಂದು ಕಂಪನಿಯನ್ನೇ ಆತನು ನಿರ್ಮಿಸಿದನು. ಹಾಗೆಯೇ ಶೋಲ್ಸ ಎಂಬಾತನು ಸಿದ್ಧಮಾಡಿದ ಟಂಕ ಮುದ್ರಕ (ಟೈಪರೈಟರ)ದಲ್ಲಿ ಕೆಲವೊಂದು ಸುಧಾರಣೆಗಳನ್ನು ಮಾಡಿದನು. (ಅವನ್ನೇ ಮುಂದೆ ಜನಪ್ರಿಯವಾದ ರೆಮಿಂಗ್ಟನ್ ಕಂಪನಿಯು ಕೊಂಡು ಕೊಂಡಿತು.) ಅಲ್ಲದೆ 'ಮಿಮಿಯೊಗ್ರಾಫ' ಎಂಬ ಉಪಕರಣವನ್ನು ಆತನು ಕಲ್ಪಿಸಿದನು. (ವಿದ್ಯಾರ್ಥಿಗಳು ಪದಾರ್ಥ ವಿಜ್ಞಾನದ ಪರೀಕ್ಷಾ ಪೇಪರುಗಳನ್ನು ಬಿಡಿಸುವಾಗ ಉಪಕರಣಗಳ ಚಿತ್ರಗಳನ್ನು ಕೊರೆದು ತೆಗೆದ ತಗಡಿನ ಅಚ್ಚುಗಳನ್ನು ಉಪಯೋಗಿಸುವರಷ್ಟೇ. ಆ ಅಚ್ಚುಗಳನ್ನು–ಅವುಗಳಿಗೆ ಸ್ಟೆನ್ಸಿಲ್ ಎಂದು ಹೆಸರು–ತಯಾರಿಸಲು ಈ ಮಿಮಿಯೊಗ್ರಾಫ ಉಪಯೋಗ.)

೧೮೭೬ ರಲ್ಲಿ ಎಡಿಸನ್‌ನು ನೆವಾರ್ಕದಿಂದ ಹೊರಟು ಮೆನ್ಲೋಪಾರ್ಕ ಎಂಬಲ್ಲಿ ತನ್ನ ಸುವಿಖ್ಯಾತ ಪ್ರಯೋಗಶಾಲೆಯನ್ನು ಸ್ಥಾಪಿಸಿದನು. ನೆವಾರ್ಕದಲ್ಲಿ ಆತ ಮದುವೆಯಾಗಿದ್ದನು. ಮೇರಿ ಸ್ಟಿಲ್‌ವೆಲ್ ಎಂಬಾಕೆ ಆತನ ಪ್ರೇಯಸಿ–ಪತ್ನಿ. ಆಕೆಯಲ್ಲಿ ಅವನಿಗೆ ಮೂವರು ಮಕ್ಕಳು. ಆದರೆ ೧೮೮೪ ರಲ್ಲಿ ಆಕೆ ತೀರಿಕೊಂಡಳು. ಎರಡು ವರ್ಷಗಳನಂತರ ಆತನು ಮಿನಾ ಮಿಲ್ಲರ್ ಎಂಬವಳನ್ನು ಮದುವೆಯಾದನು. ಅಂದಿನಿಂದ ಮುಂದೆ ೧೯೩೧ ರ ತನಕವೂ ಎಡಿಸನ್‌ನ ವ್ಯಕ್ತಿತ್ವವೂ ವೈಯಕ್ತಿಕ ಜೀವನವೂ ಆತನ ಕಾರ್ಯ ಚಮತ್ಕಾರದ ಥಳಕಿನಲ್ಲಿ ಮುದುಗಿ ಹೋಗಿದ್ದು ನಾವು ನೋಡುತ್ತವೆ.

ಮೆನ್ಲೋಪಾರ್ಕದಲ್ಲಿಯ ಆತನ ಮೊದಲನೆಯ ಮಹಾತ್ಕಾರ್ಯ ಬೆಲ್ಲನ ಟೆಲಿಫೋನ ಯಂತ್ರದ ಸುಧಾರಣೆ. ವೆಸ್ಟರ್ನ ಯೂನಿಯನದವರು ಈ ಬೆಲ್ಲನ ಯಂತ್ರದ ದೋಷಗಳನ್ನು ಸರಿಪಡಿಸಿ ಅದನ್ನು ಪೂರ್ತಿ ವ್ಯವಹಾರಕ್ಕೆ ಉಪಯೋಗಿಯಾಗಿ ಮಾರ್ಪಡಿಸುವಂತೆ ಅವನಿಗೆ ಕೇಳಿಕೊಂಡರು. ಇದನ್ನು ಅವನು ಸಾಧಿಸಿಯೇ ಬಿಟ್ಟನು. ಕಾರ್ಬನ್ನಿನ (ಅಂಗಾರದ) ಧ್ವನಿಕ್ಷೇಪಕವನ್ನು ನಿರ್ಮಿಸಿ ಆಡಿದ ಮಾತು

ಚೆನ್ನಾಗಿ ಶುಚಿಯಾಗಿ ಒಡಮೂಡುವಂತೆ ಮಾಡಿದನು. ಟೆಲಿಫೋನ ಟ್ರಾನ್ಸಮಿಟರದ ನಂತರದ ಅವನ ಶೊಧ-ಕ್ಲಪ್ತಿ ಇಲೆಕ್ಟ್ರೋಮೋಟೊಗ್ರಾಫ. ಅದರಿಂದ ಅವನು ಸಿದ್ಧಮಾಡಿದ್ದು ದೊಡ್ಡ ದನಿಯಲ್ಲಿ ಮಾತನಾಡಬಲ್ಲ ಟೆಲಿಫೋನ. ಈ ಯಂತ್ರದ ಕುರಿತು ಮಾತಿನಮಲ್ಲ ಬರ್ನಾರ್ಡಶಾ (ಮುಂದೆ ವಿಶ್ವವಿಖ್ಯಾತನಾದ ನಾಟಕಕಾರ) ತೀವ್ರ ನಿಷೇಧದ ಉದ್ಗಾರಗಳನ್ನು ತೆಗೆದನು. ಆಗ ಆತ ಇನ್ನೂ ಅಲ್ಪ ವಯಸ್ಕ. ಇಂಗ್ಲಂಡದಲ್ಲಿ ಎಡಿಸನ್ ಟೆಲಿಫೋನ ಕಂಪನಿಯ ಪ್ರಚಾರಕನಾಗಿ ಕೆಲಸ ಮಾಡುತ್ತಿದ್ದ. 'ಈ ಹೊಸ ದೊಡ್ಡ ದನಿಯ ಟೆಲಿಫೋನು ತೀರ ಚಾಣಾಕ್ಷತನದ ಶೋಧ. ಅದು ತನ್ನ ತೀರ ಪರಿಣಾಮಕಾರಿಯಾದ ಘಂಟಾಘೋಷದ ಕಂಠದಿಂದ ಮನೆಯ ಮೂಲೆಮೂಲೆಗೆಲ್ಲ ನಮ್ಮ ಏಕಾಂತದ ಕಿವಿಮಾತುಗಳನ್ನು ಕೂಗಿ ಸಾರುವದೆ ಹೊರತು ಸ್ವಲ್ಪವಾದರೂ ವಿವೇಕದಿಂದ ಪಿಸುಗುಡುವದೆಂಬುದೇ ಗೊತ್ತಿಲ್ಲ! ಅದು ಕೇವಲ ಸಾಹಿತ್ಯ ಇತಿಹಾಸದಲ್ಲಿ ತನಗೂ, ಜತೆಗೆ ನಿರುದ್ದೇಶ ವಾಗಿ ಉಪಜೀವಿಕೆಯ ಕ್ಷೇತ್ರದಲ್ಲಿ ನನಗೂ, ಸ್ಥಾನವನ್ನು ಕಲ್ಪಿಸಿ ಕೊಟ್ಟಿತಲ್ಲದೆ ಇನ್ನೇನನ್ನೂ ಸಾಧಿಸಲಿಲ್ಲ.' ಬ್ರಿಟಿಶ ಹಣಪೇಟೆಯ ದಲ್ಲಾಲಿಗಳಿಗೆ ಇದು ಬೇಡ. ಆದ್ದರಿಂದ ಆ ಕಂಪನಿಯನ್ನು ನೆಶನಲ್ ಟೆಲಿಫೋನ ಕಂಪನಿಯೊಂದಿಗೆ ಸಮಾವೇಶ ಮಾಡಲಾಯಿತು.

೧೮೭೭ ರಲ್ಲಿ ಎಡಿಸನ್ ಒಂದು ಚಮತ್ಕಾರವನ್ನು ಮಾಡಿದನು. ತನ್ನ ಒಬ್ಬ ಸಹಾಯಕ ಕೆಲಸಗಾರನಿಗೆ ೧೮ ಡಾಲರುಗಳಿಗೆ ಒಂದು ಚಿಕ್ಕ ಯಂತ್ರ ಕಚೇರಿಯ ಮಾದರಿಯನ್ನು ತಯಾರಿಸಲು ಅದರ ಚಿತ್ರವನ್ನು ಬರೆದುಕೊಟ್ಟನು. ಆ ವಿಚಿತ್ರ ಚಿತ್ರದ ಉದ್ದೇಶವನ್ನು ಆ ಕೆಲಸಗಾರನಿಗೆ ಆತನು ತಾಳ್ಮೆಯಿಂದ ತಿಳಿಸಿಹೇಳಿದನು. ಆದರೆ ಆ ಕೆಲಸಗಾರ ಖೇದದಿಂದ ತಲೆದೂಗಿದನು. ಈ ಹಳೆ ಮುದುಕನಿಗೆ ಹುಚ್ಚು ಹಿಡಿದಿರಬೇಕೆಂದು ಅನುಮಾನಿಸಿದನು. ಅವನ ಯಂತ್ರ ವಿಭಾಗದ ಮುಖ್ಯ ಮೇಸ್ತ್ರಿಯು ಆ ಚಿತ್ರದ ಕಲ್ಪನೆ ಕೆಲಸಕ್ಕೆ ಬಂದರೆ ಒಂದು ಸಿಗಾರ ಪೆಟ್ಟಿಗೆಯನ್ನು ಕೊಡುವೆನೆಂದು ಒಡ್ಡವನ್ನೂ ಕಟ್ಟಿದನು. ಆದರೆ ಅದು ಕೆಲಸಕ್ಕೆ ಬಂದಿತು. ಸಿಗಾರ ಪೆಟ್ಟಿಗೆಯನ್ನು ಮೇಸ್ತ್ರಿಯು ಕಳೆದುಕೊಳ್ಳಬೇಕಾಗಿ ಬಂದಿತು. ಆ ಹೊಸ ಕಲ್ಪನೆ ಯಂತ್ರದ ರೂಪವನ್ನು ತಾಳಿತು. ಆ ಯಂತ್ರಕ್ಕೆ ಒಂದು ಢೋಲಿನಂತಹ ರಚನೆ ಇತ್ತು. ಅದರ ಸುತ್ತಲೂ ಎಡಿಸನ್ ಒಂದು ತವರಿನ ಹಾಳೆಯನ್ನು ಹಾಕಿದನು. ಅದರ ಅಚ್ಚಿನ ಹಿಡಿಕೆಯನ್ನು ತಿರುಗಿಸಿದನು. ಇತ್ತ ಒಂದು ಕೊಳವೆ ಯಲ್ಲಿ 'ಮೇರಿ ಒಂದು ಪುಟ್ಟ ಕುರಿಯ ಸಾಕಿದ್ದಳು.' ಎಂಬ ಪ್ರಸಿದ್ಧ ಶಿಶು ಗೀತವನ್ನು ಆತನು ಕೂಗಿ ನುಡಿದನು. ಅನಂತರ ಆ ಯಂತ್ರಕ್ಕೆ ಕೆಲವೊಂದು ಜೋಡಣೆಗಳನ್ನು ಮಾಡಿ ಅವನು ಮತ್ತೆ ಹಿಡಿಕೆಯನ್ನು ತಿರುಗಿಸಿದನು. ಆಗ

ಏನು ಚಮತ್ಕಾರ! ಆ ಯಂತ್ರದೊಳಗಿಂದ ಮೂಡಿ ಬಂದಿತು–ಎಡಿಸನ್‌ನ ಕೂಗು ಮತ್ತು ಮೇರಿ–ಕುರಿ ಸಾಕಿದ ಸುದ್ದಿಯು ಸೊಲ್ಲು! ಆಗಲೇ ಎಡಿಸನ್‌ನು ಫೋನೋಗ್ರಾಫ ಯಂತ್ರವನ್ನು ಸೃಷ್ಟಿಸಿದನು!

ಫೋನೋಗ್ರಾಫ ಜಗತ್ತನ್ನೇ ತಬ್ಬಿಬ್ಬಾಗಿ ಮಾಡಿತು. ಎಡಿಸನ್‌ನಿಗೆ 'ಮೇನ್ಲೋಪಾರ್ಕದ ಮಾಂತ್ರಿಕ'–ಎಂಬ ಹೆಸರು ಬಂದಿತು. ಫೋನೋಗ್ರಾಫ ಆತನ ಅಚ್ಚು ಮೆಚ್ಚಿನದೂ, ಅತ್ಯಂತ ಅಚ್ಚರಿಯದೂ ಆದ ಹೊಚ್ಚಹೊಸ ಶೋಧವು! ಆದರೆ ಇತರ ಕೆಲಸವು ಅದನ್ನು ೧೮೮೭ ರ ತನಕ ಬದಿಗೆ ಒತ್ತಿಡುವಂತಾಯಿತು. ೨ ವರ್ಷ ಮೂಲ ಶೋಧದ ೧೦ ವರ್ಷಗಳ ನಂತರ ಎಡಿಸನ್‌ನಿಗೆ ಈ ಫೋನೋಯಂತ್ರವನ್ನು ತಿದ್ದಿ ಆಧುನಿಕ ಕಾರ್ಯಕ್ಷಮತೆಗೆ ತರಲು ತೆರವು ದೊರೆಯಿತು. ಜತೆಗೆ ಎಡಿಫೊನಿಂಥ ಮರಿ ಯಂತ್ರಗಳನ್ನೂ ಉಂಟುಮಾಡುವದು ಕೊಳೆಯಿತು.

ನಂತರ ಈ ಮಾಯಾವಿದನು ವಿದ್ಯುತ್‌ದೀಪಗಳ ತಂತ್ರಕ್ಕೆ ಕೈ ಹಾಕಿದನು. ವನ ಅಂದಿನ ಶೋಧ ಪ್ರಯೋಗಗಳ ಪರಿಣಾಮವು ಇಂದು ಜಗತ್ತನ್ನೇ ಬೆಳಗಿದೆ. ಂದು ಮಾದರಿಯ ವಿದ್ಯುತ್‌ದೀಪಗಳು ಆ ಮೊದಲೇ ಬಳಿಕೆಯಲ್ಲಿ ಇದ್ದವು. ದರೆ ಅವು ಯಾವವೂ ಸಮಾಧಾನಕರವಾಗಿದ್ದಿಲ್ಲ. ಎಡಿಸನ್‌ನು ಒಂದು ತಂತಿಯಲ್ಲಿ ಡುವ ವಿದ್ಯುತ್ ಪ್ರವಾಹವನ್ನು ಉಪವಿಭಾಗಗಳಲ್ಲಿ ವಿಂಗಡಿಸಲು ನೋಡಿದನು.- ಂದರೆ ಒಂದೇ ಪ್ರವಾಹದಿಂದ ಹಲವು ಚಿಕ್ಕ ದೀಪಗಳನ್ನು ಉರಿಸಲು ಹವಣಿ ಸನು. ಹೀಗೆ ಒಂದೇ 'ಅರ್ಕ' ದೀಪಕ್ಕೆ ಎಲ್ಲ ಪ್ರವಾಹ ಬಳಿಸಲಾಗುತ್ತಿತ್ತು. ಡಿಸನ್‌ನ ಪ್ರಯತ್ನವು ಅಶಕ್ಯವೆಂದು ಹಲವು ವಿಜ್ಞಾನಿಗಳು ಅಂದರು.–ಮತ್ತು ಮಟ್ಟಿಗೆ ತಾವೇ ಅಜ್ಞಾನಿಗಳೆಂದು ಕಂಡರು.

ಡಿಸನ್‌ನು ಸುಮಾರು ೫೦ ಸಹಾಯಕರೊಡನೆ ಕೆಲಸವನ್ನು ಆರಂಭಿಸಿದನು. ತನ ಮುಂದೆ ಇದ್ದ ಸಮಸ್ಯೆ–ವಿದ್ಯುತ್‌ಶಕ್ತಿಯನ್ನು ಬಲವಾಗಿ ಪ್ರತಿರೋಧಿಸಬಲ್ಲ ಗೆ ಬೆಳ್ಳಗೆ ಬೆಳಗಬಲ್ಲ ಗಾತ್ರವೂ ಕಡಿಮೆಯುಳ್ಳ ಅಂದರೆ ಗಾತ್ರದಲ್ಲಿ ಸೂಕ್ಷ್ಮ ರೂ ವಿದ್ಯುತ್ ವಿರೋಧನದಲ್ಲಿ ತೀಕ್ಷ್ಣವಿರುವ ಒಂದು ಜ್ಯೋತಿಯಾಗಬಲ್ಲ ರ್ಥವನ್ನು ಶೋಧಿಸುವದಿತ್ತು. ಇದಕ್ಕಾಗಿ ಆತನು ೧೬೦೦ ಪ್ರಯೋಗಗಳನ್ನು ಡಿದನು–ವಿವಿಧ ಖನಿಜ ದ್ರವ್ಯಗಳ ಮೇಲೆ 'ನಾನು ಅತಿಶಯೋಕ್ತಿ ಇಲ್ಲದೆ ಟ್ಟೆಂದು ಹೇಳಬಲ್ಲೆ, ವಿದ್ಯುತ್ ಪ್ರಕಾಶದ ಕುರಿತು ನಾನು ಮೂರು ಸಾವಿರ ಭಿನ್ನ ಸಿದ್ಧಾಂತಗಳನ್ನು ರಚಿಸಿದ್ದೇನೆ–ಅವುಗಳಲ್ಲಿ ಪ್ರತಿಯೊಂದೂ ಸಮಂಜಸವೂ

ಸತ್ಯವಾಗಿ ನಿಲ್ಲುವಂತೆ ತೋರುವಂತಹದೂ ಆಗಿದೆ. ಆದರೆ ಅವುಗಳಲ್ಲಿ ಕೇವಲ ಎರಡೇ ಉದಾಹರಣೆಗಳಲ್ಲಿ ನನ್ನ ಸಿದ್ಧಾಂತದ ಸತ್ಯವು ಪ್ರಯೋಗಗಳಿಗೆ ಸಾಧ್ಯವಾಯಿತು. ನನ್ನ ಮುಖ್ಯ ತೊಡಕು ಅಂಗಾರದ (ಕಾರ್ಬನ್ನಿನ) ಪಟಲವನ್ನು ತಯಾರಿಸುವದಾಗಿತ್ತು. ಆ ಪಟಲವು ಬೆಳ್ಳಗೆ ಬೆಳಗುವಂತೆ ಕಾಯುವದೇ ಪ್ರಕಾಶದ ಉಗಮವು.'–ಇದು ಎಡಿಸನ್‌ನ ಮಾತು. ಮಾತಿನಲ್ಲಿ ಆತನ ನಿರತವೂ ನಿಶ್ಚಿತವೂ ಆದ ಬುದ್ಧಿಯು ಖಚಿತವಾಗಿ ಹೊಳೆಯುತ್ತದೆ.

ಕೊನೆಗೆ ಆತನು ಹೊಲಿಗೆಯ ನೂಲಿಗೆ ಅಂಗಾರದ ಪುಟ ಕೊಟ್ಟು ನೋಡಿದನು. ನೂಲಿನ ಒಂದು ಸುತ್ತನ್ನು ನಿಕೆಲ್ ಕುಪ್ಪಿಯಲ್ಲಿ ಇಟ್ಟು ಭಟ್ಟಿಯೊಳಗೆ ಐದು ತಾಸು ಕಾಯಿಸಲಾಯಿತು. ಅನಂತರ ಆ ಕುಪ್ಪಿಯನ್ನು ತಂಪಾಗಲು ಬಿಡಲಾಯಿತು. ಅನಂತರ ಆ ಅಂಗಾರ ರೂಪಕ್ಕೆ ಬಂದ ನೂಲಿನ ಸುತ್ತನ್ನು ನಾಜೂಕಾಗಿ ಎತ್ತಿ ಕಾಜಿನ ಗುಳ್ಳೆಯಲ್ಲಿ ಇಟ್ಟು ಭದ್ರವಾಗಿ ಗುಳ್ಳೆಯನ್ನು 'ಸೀಲು' ಮಾಡಬೇಕಿತ್ತು. ಇದಕ್ಕಾಗಿ ಎಡಿಸನ್ ತನ್ನ ಸಹಾಯಕ ಬೆಚ್ಚಲರ ಎಂಬವನೊಡನೆ ಎರಡು ರಾತ್ರಿ ಮತ್ತು ಒಂದು ಹಗಲು ಪರಿಶ್ರಮಿಸಬೇಕಾಯಿತು. ಇಡಿಯ ಒಂದು ಉಂಡೇ ನೂಲುಸುಡಬೇಕಾಯಿತು. 'ಕತ್ತರಿಸಿದರೂ ಅದರ ಹುರಿ ಹೋಗುವದಿಲ್ಲ'ವೆಂದು ಮರಾಠಿಯಲ್ಲಿ ಒಂದು ಗಾದೆ ಇದೆ. ಆದರೆ ಉರಿದಮೇಲೆ ಹುರಿಯೂ ಹುಸಿಯಾಗಿ ಹೋಗುತ್ತದೆಂಬುದು ವಸ್ತುಸ್ಥಿತಿ. ಇದನ್ನೂ ಎಡಿಸನ್ ಸಿದ್ಧ ಮಾಡಿದಂತೆ ಆಯಿತು ! ಎಡಿಸನ್‌ನೇ ಈ ಕತೆಯನ್ನು ಹೇಳಬೇಕು :–

'ಅದನ್ನು ಕಾಜಿನ ಗುಳ್ಳೆ ಊದುವ ಮನೆಗೆ ಒಯ್ಯುವದು ಅಗತ್ಯವಿತ್ತು. ಅತ್ಯಂತ ಮುಂಜಾಗ್ರತೆಯಿಂದ ಬೆಚ್ಚಲರನು ಆ ಅಮೂಲ್ಯ ಹುರಿ ಬೂದಿಯನ್ನು ಎತ್ತಿಕೊಂಡನು. ನಾನೂ ಅವನ ಬೆಂಗಾವಲಿಗೆ ಹೊರಟೆನು–ಈ ಮಹಾನಿಧಿಯನ್ನೊಂದು ರಕ್ಷಿಸಿಕೊಂಡು ಕೂಚು ಮಾಡುವಂತೆ. ಆದರೆ ನಾವು ಗಾಬರಿಯಿಂದ ಹೌಹಾರುವಂತೆ, ಕಾಜ ಗುಳ್ಳೆಯೂದುವವನ ಬೆಂಚಿನ ಬಳಿಗೆ ಹೋಗುವಷ್ಟರಲ್ಲಿ ಆ ಅರಿಷ್ಟ ಹುರಿಯು ಹರಿಯಿತು. ನಾವು ಮತ್ತೆ ಪ್ರಯೋಗಶಾಲೆಗೆ ಹೊರಳಿದೆವು; ಮತ್ತೆ ಕಾರ್ಯವನ್ನು ಆರಂಭಿಸಿದೆವು. ಇನ್ನೊಂದು ನೂಲು ಭಟ್ಟಿಯಲ್ಲಿ ಸುಟ್ಟು ಹುರಿ ಬೂದಿಯನ್ನು (ಕಾರ್ಬನ್ನು) ಉಂಟು ಮಾಡುವತನಕ ಹೊತ್ತು ಮೀರಿ ಸಂಜೆ ಆಯಿತು. ಅದು ಮತ್ತೆ ಹರಿಯಿತು–ಸ್ಕ್ರೂ ತಿರುಗಿಸುವ ಉಪಕರಣವು ಆಕಸ್ಮಾತ್ತಾಗಿ ಬಡಿದು. ಆದರೆ ನಾವು ಮತ್ತೆ ಮರಳಿದೆವು. ಮತ್ತೆ ರಾತ್ರಿ ಹರಿಯುವದರೊಳಗೆ ಕಾರ್ಬನು ಸಿದ್ಧ ಮಾಡಿ ಈ ಸಲ ಕಾಜಿನ ಗುಳ್ಳೆಯಲ್ಲಿ ಅದನ್ನು ಹರಿಯದೆ ಸುರಕ್ಷಿತವಾಗಿ ಇಡಲಾಯಿತು. ಗುಳ್ಳೆಯೊಳಗಿನ ಹವೆಯನ್ನೆಲ್ಲ

...ೂರಗೆ ಹೀರಿಕೊಂಡು 'ಸೀಲು' ಮಾಡಲಾಯಿತು.–' ಈ ನಿವೇದನೆಯಲ್ಲಿ, ...ಡಿಸನ್‌ನ ಪ್ರತಿಭೆಯ ಮುಖ್ಯ ಲಕ್ಷಣ ಒಡಮೂಡಿದೆ. ಕಾರ್ಲಾಯಲ್ ...ಹಾಶಯನು 'ಪ್ರತಿಭೆಯೆಂದರೆ ಪರಿಶ್ರಮ ವಹಿಸುವ ಅನಂತ ಸಾಮರ್ಥ್ಯ'ವೆಂದು ...ಖ್ಯೆ ಮಾಡಿರುವನು. ಆ ಸಾಮರ್ಥ್ಯ–ಧೃತಿಗೆಡದ ಕೃತಿಬಿಡದ ತಾಳ್ಮೆ– ...ಡಿಸನ್‌ನಲ್ಲಿ ತುಂಬ ಇತ್ತು.

...ಕಾಜಿನ ಗುಳ್ಳೆಯಲ್ಲಿ ಜಗತ್ತಿನ ಮೊದಲನೆಯ ವಿದ್ಯುತ್ ದೀಪ ಪ್ರಜ್ವಲಿಸಿತು. ...ದು ಒಟ್ಟು ೪೦ ತಾಸು ಉರಿಯಿತು. ಎಷ್ಟು ಹೊತ್ತು ಉರಿಯಬಲ್ಲದೆಂದು ...ಡಿಸನ್ ಮತ್ತು ಆತನ ಸಹಕಾರಿಗಳು ಆಗಾಗ್ಗೆ ಒಡ್ಡ ಕಟ್ಟಹತ್ತಿದರು. ಅಂದು ...೮೭೯ ನೇ ವರ್ಷದ ಅಕ್ಟೋಬರ ೨೧ ನೇ ದಿನ. ವಿದ್ಯುತ್‌ದೀಪದ ಜನ್ಮದಿನವದು. ...ಡಿಸನ್‌ನ ಪ್ರಯತ್ನ ಇಲ್ಲಿಗೆ ಮುಗಿಯಿತೇ ? ಛೇ ಅವನು ಈ ದೀಪೋತ್ಪತ್ತಿ ...ಯನ್ನು ವ್ಯವಸ್ಥಿತಗೊಳಿಸಲೂ ಆ ದೀಪ ಪದ್ಧತಿಯನ್ನು ಸುಧಾರಿಸಲು ಯತ್ನವನ್ನು ...ುಂದುವರಿಸಿದನು.

...ೊದಲು ಬೇರೆಬೇರೆ ಎಳೆಗಳ ಮೇಲೆ ನೂರುಗಟ್ಟಲೆ ಪ್ರಯೋಗಗಳಾದವು. ...ನಂತರ ವಿದ್ಯುತ್ ಪ್ರಕಾಶವನ್ನು ದೊಡ್ಡ ಪ್ರಮಾಣದಲ್ಲಿ ಪೂರೈಸುವ ಹೊಸ ...ೋಜನೆಯನ್ನೇ ಏರ್ಪಡಿಸಲು ಆತನು ಪ್ರಯತ್ನಿಸಿದನು. ವಿದ್ಯುತ್‌ಶಕ್ತಿ ಕೇಂದ್ರ ...ು ಬೇಕಾದವು. ಎಡಿಸನ್‌ನು ಹೊಸ ಮಾದರಿಯ ಡೈನೆಮೊ ಯಂತ್ರವನ್ನು ...ೃಷ್ಟಿಸಿದನು. ಅಳತೆಯ ಉಪಕರಣಗಳೂ ಬೇಕಿದ್ದವು. ಎಡಿಸನ್ ಅವುಗಳನ್ನೂ ...ೃಷ್ಟಿಸಿದನು. ಹೀಗೆ, ಅವನು ಶೋಧಮಾಡಿ ಶ್ರಮಪಟ್ಟು ಡೈನೆಮೊದಿಂದ ...ೊಡಲಾಗಿ ದೀಪದ ಬಲ್ಬಿನತನಕವೂ ವಿದ್ಯುತ್ ಪ್ರಕಾಶನದ ಸಮಗ್ರ ವ್ಯವಸ್ಥೆ ...ಯನ್ನು ಆತನೇ ಸಕಲ ಸಲಕರಣೆಗಳೊಡನೆ ಸಿದ್ಧಪಡಿಸಿದನು. ನ್ಯೂಯಾರ್ಕದಲ್ಲಿ ...ೊದಲನೆಯ ವಿದ್ಯುತ್ ಕೇಂದ್ರವನ್ನು ನಿಲ್ಲಿಸಿದಾಗ ಎಡಿಸನ್‌ನೇ ಅದರ ...ೇಲ್ವಿಚಾರಕ, ಮೇಸ್ತ್ರಿಗಳ ಮುಖ್ಯಸ್ಥ, ಹಾಗೂ ಆಳುಗಳ ತಂಡದ ಹಿರಿಯ !

...ದ್ಯುತ್ ದೀಪದ ಶೋಧದಲ್ಲಿ ಕಾರ್ಯ ಮಾಡುತ್ತಿರುವಾಗ ಅವನು 'ಎಡಿಸನ್ ...ಫೆಕ್ಟ' ಎಂದು ಮುಂದೆ ಹೆಸರಾದ ಪರಿಣಾಮವನ್ನು ಕಂಡುಕೊಂಡನು. ಅದು ...ದ್ಯುತ್. ಸ್ಫುಲಿಂಗವು ಉರಿಯುವಾಗ ಹೊರಡುವ ವಿದ್ಯುತ್ ಅಣು (ಇಲೆಕ್ಟ್ರಾನ್) ...ಗೆ ಸಂಬಂಧಪಟ್ಟದ್ದು. ಇದನ್ನೇ ಮುಂದಿಟ್ಟುಕೊಂಡು ಫ್ಲೆಮಿಂಗ ಎಂಬ ...ಜ್ಞಾನಿಯು ಮುಂದೆ ತಂತಿ ಇಲ್ಲದ ವಿದ್ಯುತ್-ವಾರ್ತಾವಾಹಕದ ಪಟಲವನ್ನು ...ೋಧಿಸಿದನು.

...೮೭ ರಲ್ಲಿ ಎಡಿಸನ್‌ನು ಮೆನ್ಲೋಪಾರ್ಕದಿಂದ ವೆಸ್ಟ ಆರೇಂಜ ಎಂಬಲ್ಲಿಗೆ

ಸ್ಥಳಾಂತರಿಸಿದನು. ಆಗಲೇ ಅವನ ಪ್ರತಿಭಾ ದೃಷ್ಟಿ ಹೊಸದೊಂದು ನಿಟ್ಟಿನಲ್ಲಿ ದಿಟ್ಟಿಸುತ್ತಿತ್ತು. ಫೋನೋ ಯಂತ್ರವು ಕಿವಿಗಾಗಿ ಮಾಡಿದ ಕಾರ್ಯವನ್ನೇ ಕಣ್ಣಿಗಾಗಿ ಮಾಡುವ ಹೊಸದೊಂದು ಯಂತ್ರವನ್ನು ಶೋಧಿಸುವದರಲ್ಲಿ ಆತನು ತೊಡಗಿದನು. ಎರಡು ವರ್ಷಗಳಲ್ಲಿ ಆತನು ಆ ಯಂತ್ರವನ್ನು ನಿರ್ಮಿಸಿಯೇ ಬಿಟ್ಟನು. ಅದಕ್ಕೆ 'ಕೈನೆಟೊ ಗ್ರಾಫ' ಎಂದು ಹೆಸರು ಇಟ್ಟನು. ಅದು ಇಂದಿನ ಚಲಚ್ಚಿತ್ರದ ಕ್ಯಾಮರದ ಅಜ್ಜಿ. ಅನಂತರ 'ಕೈನೆಟೊ ಸ್ಕೋಪ' ಬಂದಿತು. ಅದು ಇಂದಿನ ಸಿನೇಮಾದ ಅಜ್ಜ. ಇವೆರಡರ ಸ್ವಾಮಿತ್ವದ ಅಧಿಕಾರ ಪತ್ರವನ್ನು ಆತ ರಜಿಸ್ಟರ ಮಾಡಿಕೊಂಡನು. ಮುಂದೆ ಅಮೇರಿಕೆಯಲ್ಲಿ ಚಲಚ್ಚಿತ್ರ ವ್ಯವಸಾಯದ ವಿಸ್ತಾರಾಭಿವೃದ್ಧಿಯು ಆರಂಭವಾದಾಗ ಎಡಿಸನ್‌ನು ಸಿದ್ಧಮಾಡಿದ ಯಂತ್ರ-ತಂತ್ರಗಳೇ ಮುಖ್ಯವಾಗಿ ಬಳಕೆಗೆ ಬಂದವು.'

೧೯೧೨ ರಲ್ಲಿ ಆತನು ಕಣ್ಣು ಕಿವಿಗಳ ಪ್ರಪಂಚವನ್ನು ಒಂದಾಗಿಸಿದನು. 'ಕೈನೆಟೋಫೋನ' ಎಂಬ ಯಂತ್ರವನ್ನು ಸಂಶೋಧಿಸಿದನು. ಫಿಲ್ಮ-ಕ್ಯಾಮರಾ ಮತ್ತು ಫೋನೋಗ್ರಾಫ ಇವೆರಡರ ಶೋಧಗಳನ್ನು ಜೋಡಿಸಿ ಮಾಡಿದ ಯಂತ್ರವದು. ಇಂದಿನ 'ಟಾಕಿ' ಯಂತ್ರದ ತಾಯಿ ಅದು.

'ಎಡಿಸನ್ ಇಫೆಕ್ಟ' ಎಂಬ ವಿದ್ಯುದಣುಗಳ ಶೋಧವು ರೇಡಿಯೋ ಪ್ರಪಂಚಕ್ಕೆ ಮೂಲವಾಯಿತು. ಆದರೆ, ಎಡಿಸನ್‌ನು ತಾನೇ ತಂತಿ ಇಲ್ಲದ ವಾರ್ತಾವಾಹಕ ಯಂತ್ರವನ್ನು ಸ್ವತಂತ್ರವಾಗಿ ನಿರ್ಮಿಸಿದನು. ಅದು ಬಳಕೆಯಲ್ಲಿಯೂ ಬಂದಿತು. ರೈಲು ಗಾಡಿಗಳು ಓಡಾಡುತ್ತಿರುವಾಗ ಅವುಗಳಿಗೆ ಸಂದೇಶಗಳನ್ನು ಕಳಿಸಲು ಅದನ್ನು ಉಪಯೋಗಿಸುತ್ತಿದ್ದರು.

ರೊಂಟೆನ್ ಎಂಬ ವಿಜ್ಞಾನಿಯು 'ಕ್ಷ' ಕಿರಣಗಳ ಶೋಧಮಾಡಿದೊಡನೆ, ಎಡಿಸನ್‌ನು ಆ ಕಿರಣಗಳ ಕ್ರಿಯೆಯನ್ನು ಕಂಡುಕೊಳ್ಳಲು ಅನುವಾಗುವಂತೆ ಒಂದು ಯಂತ್ರವನ್ನು ಸಿದ್ಧಪಡಿಸಿದನು. ಅದನ್ನು ಶಸ್ತ್ರಕ್ರಿಯೆಯಲ್ಲಿ ಯಶಸ್ವಿಯಾಗಿ ಉಪಯೋಗಿಸತೊಡಗಿದರು.

ಇಷ್ಟು ಹೊತ್ತಿಗೆ ಮೊದಲನೆಯ ಮಹಾಯುದ್ಧವು ಆರಂಭವಾಯಿತು. ಅಮೇರಿಕೆಯು ಸರಕಾರವು ಈ ಮುದಿ 'ಮಾಯಾ-ಮಾಂತ್ರಿಕ'ನನ್ನು ತಮ್ಮ ರಾಷ್ಟ್ರದ ಕಾರ್ಯಕ್ಕೆ ನೇಮಿಸಿತು. ಹಡಗುಪಡೆಯ ಸಲಹಗಾರ ಮಂಡಳಕ್ಕೆ ಆತನನ್ನು ಮುಖ್ಯನನ್ನಾಗಿ ಮಾಡಿತು. ಆಗಲೂ ಅವನ ಪ್ರತಿಭೆ ಅಕ್ಷಯ

ಬತ್ತಳಿಕೆ. ಹಡಗುಪಡೆಯ ಯುದ್ಧ ಕಾರ್ಯಕ್ಕೆ ಆತನು ಸುಮಾರು ೪೦ ಹೊಸ ಸಲಕರಣೆಗಳನ್ನು ಶೋಧಿಸಿಕೊಟ್ಟನು.

ಅವನ ಶೋಧಗಳ ಯಂತ್ರೋಪಕರಣಗಳ ಪರಿವಿಡಿಯು ಕೊನೆಇಲ್ಲದ್ದು. ಅವನ ಅವನ ಮೊದಲನೇ 'ಪೇಟಂಟು' ೧೮೬೯ ರಲ್ಲಿ 'ರಜಿಸ್ಟರ' ಆಯಿತು. ೧೯೧೦ ರ ತನಕ ಅವನ ಒಟ್ಟು 'ರಜಿಸ್ಟರ' ಆದ 'ಪೇಟಂಟು'ಗಳ ಸಂಖ್ಯೆ ೧,೩೦೦ ! ಈ ವಿಜ್ಞಾನದ ವಿಶ್ವಕರ್ಮನು ಬಿಟ್ಟ ಕ್ಷೇತ್ರ ಒಂದೂ ಇಲ್ಲ; ಅವನ ಊಹಾಶಕ್ತಿಗೆ ಎಟುಕದ ಎಡೆಯು ಯಾವದೂ ಇಲ್ಲ. ಅವನ ಪ್ರತಿಭೆಯು ಪ್ರವೇಶಿಸದ ಪ್ರಯೋಗ ಶಕ್ತಿಯ ಪ್ರಭಾವಿಯಾಗದ ಯಾಂತ್ರಿಕ ಹಾಗೂ ವಿದ್ಯುತ್ ಪ್ರಪಂಚದ ಯಾವ ವಿಭಾಗವೂ ಇಲ್ಲ. ಅವನು ತನ್ನ ಜೀವನವನ್ನೆಲ್ಲ ಸಂಶೋಧನದ ಕಾರ್ಯಕ್ಕೆ ತಡೆಬಿಡುವಿಲ್ಲದೆ ವ್ಯಯ ಮಾಡಿದನು. ಹೇರಳ ಹಣ ಸಂಪಾದನೆ ಮಾಡಿದನು. ಆದರೂ ಸಂಪತ್ತು ಅವನ ಗುರಿ ಇದ್ದಿಲ್ಲ. ತನ್ನ ಕಾರ್ಯದಲ್ಲಿ ಕಲ್ಪನೆಗಳಲ್ಲಿ ಪೂರ್ಣತೆಯನ್ನು ಸಾಧಿಸುವದೇ ಆತನ ಆದರ್ಶವಾಗಿತ್ತು. ಕಲೆಗಾಗಿ ಕಲೆ ಎಂಬ ತತ್ವ ಎಲ್ಲ ಕಾರ್ಯ ಕೌಶಲ್ಯಕ್ಕೂ ಅನ್ವಯಿಸುತ್ತದೆ. ಹಣ ಬಂದರೆ ಹೆಗ್ಗಳಿಕೆ, ಸಂದರೆ ಅದು ಕಲಾವಿದನಿಗೆ ಕರ್ಮವೀರನಿಗೆ ಬೇಡವೆಂದಿಲ್ಲ. ಅವುಗಳಿಂದ ಉಚಿತ ಹೆಮ್ಮೆ ನೆಮ್ಮದಿಗಳನ್ನು ಆತ ಪಡೆಯುದೇ ಇಲ್ಲ. ಆದರೂ ಕರ್ಮಯೋಗಿಯು ಕಲಾವಿದನಂತೆ ಮುಖ್ಯವಾಗಿ ಗಮನಿಸುವದು ತನ್ನ ಕೃತಿಯ ಪರಿಣಾಮಕಾರಿತ್ವ, ಪರಿಪೂರ್ಣತ್ವ. ಅವನ ಯಂತ್ರೋಪಕರಣಗಳನ್ನು ಮಾರುವ ಸಂಸ್ಥೆಗಳಲ್ಲಿಯೂ ಅವನ ಈ ಕಾರ್ಯ ಪರಿಷ್ಕಾರದ ಕುರಿತು ತುಂಬ ಗೊಣಗುವವರಿದ್ದರು; 'ಮುದುಕ'ನು ಅನವಶ್ಯಕವಾಗಿ ತನ್ನ ಸರಕುಗಳನ್ನು ತಿದ್ದಿ ತಿದ್ದಿ ಒಳಿತು ಮಾಡುವದರಲ್ಲಿಯೆ ಕಾಲ ಹಾಗು ಹಣ ಹಾಳು ಮಾಡುತ್ತಾನೆಂದು ಅವನನ್ನು ದೂರುವವರು ಅನೇಕರಿದ್ದರು.

ಸಾಯುವತನಕವೂ ಆತ ಸಂಶೋಧನೆಯಲ್ಲಿಯೇ ನಿರತನಾಗಿದ್ದನು. ಒಂದರ ಹಿಂದೊಂದು ಹೊಸ ಹೊಸ ಪ್ರಮೇಯಗಳಿಗೆ ಪ್ರಶ್ನೆಗಳಿಗೆ ಬಗೆಹರಿಕೆಗಳನ್ನು ಹುಡುಕಿದ ಹೊರತು ಆತನಿಗೆ ಸಮಾಧಾನವಿದ್ದಿಲ್ಲ. ಅವನು ೧೯೩೧ ರ ತನಕವೂ ಜೀವಿಸಿದನು. ಆ ವರ್ಷ ಅಕ್ಟೋಬರ ೧೮ಕ್ಕೆ ಎಡಿಸನ್‌ನ ಅವತಾರ ಸಮಾಪ್ತಿ ಆಯಿತು. ಜಗದ್ವಿಖ್ಯಾತನಾದ ಇನ್ನೊಬ್ಬ ಸಮರ್ಥ ವ್ಯಕ್ತಿ. ಆದರ್ಶ ಕರ್ಮವೀರ- ಆತನೂ ಅಮೇರಿಕೆಯವನೇ-ಹೇನ್ರಿಫೋರ್ಡನು ಎಡಿಸನ್‌ನ ವಿಷಯವಾಗಿ ಹೀಗೆ ಧನ್ಯೋದ್ಗಾರಗಳನ್ನು ತೆಗೆದಿರುವನು.

ಕಲ್ಪಕನು ತನ್ನ ವೇಳೆಯನ್ನೂ ಹಣವನ್ನೂ ತನ್ನ ಕಲ್ಪನೆಗಳನ್ನು ಕೆಲಸಕ್ಕೆ ಬಾರದ

ವಿನಿಯೋಗಗಳಿಗೆ ಅನ್ವಯಿಸಲು ಹೋಗಿ ಹಾಳುಮಾಡುವದುಂಟು. ಎಡಿಸನ್ ಎಂದಿಗೂ ಹಾಗೆ ಮಾಡಲಿಲ್ಲ. ಅವನು ಕೇವಲ 'ಲಹರಿ'ಯ ಹಾರುಗುದುರೆಯನ್ನು ಏರಿ ಸವಾರಿಗೆ ಹೊರಟವನಲ್ಲ. ತನ್ನೆದುರಿಗೆ ಬರುವ ಪ್ರತಿಯೊಂದು ಸಮಸ್ಯೆಯನ್ನು ಆತನು ಸ್ವತಂತ್ರವಾಗಿ ನೋಡಿ ಅವಕ್ಕೆ ತಕ್ಕುದಾದ ಸಮರ್ಪಕವಾದ ಒಂದೇ ಒಂದು ಬಗೆಹರಿಕೆಯ ರೀತಿಯನ್ನು ಕಂಡುಕೊಳ್ಳುವನು. ಅವನ ಜ್ಞಾನವು ಇಷ್ಟು ವಿಶಾಲ ವಿಶ್ವತೋಮುಖ, -ಅವನನ್ನು ಬರೇ ರಸಾಯನ ತಜ್ಞ ಇಲ್ಲವೇ ವಿದ್ಯುತ್ ವಿಶಾರದನೆಂದು ಎಣಿಸುವದು ಅಶಕ್ಯ. ನಿಜವಾಗಿಯೂ, ಎಡಿಸನ್ ಅದ್ವಿತೀಯ-ಅವನನ್ನು ವರ್ಗೀಕರಿಸುವದು ಶಕ್ಯವಿಲ್ಲ. ನಾನು ಅವನನ್ನು ನೋಡಿದಷ್ಟು ಸಲ ಅವನು ಎಂದಿಗಿಂತಲೂ ಹಿರಿದಾಗಿಯೇ ತೋರಿದ್ದಾನೆ. ಈ ಹಿರಿಮೆ ಮಾನವನ ಸೇವೆಯಲ್ಲಿಯೂ ಅಹುದು, ಸ್ವತಃ ಮಾನವನಾಗಿಯೂ ಅಹುದು.'

ಅವನ ಕಾರ್ಯವೇ ಅವನ ಕೀರ್ತಿ. ಚಿರಸ್ಮಾರಕ ಮೂರ್ತಿ.

# ಸಾಹಸ ಪ್ರತಿಭೆ

* ಕ್ಯಾಪ್ಟನ್ ಕುಕ್
* ಕ್ಯಾಪ್ಟನ್ ಸ್ಕಾಟ್
* ಲಿವ್ವಿಂಗಸ್ಟನ್

# ಕ್ಯಾಪ್ಟನ್ ಕುಕ್

ಪಾತಾಳಕ್ಕೆ ಹೋಗಿದ್ದು ಇರಬಹುದೋ ಇಲ್ಲವೋ ಗೊತ್ತಿಲ್ಲ. ಆದರೆ ನಮ್ಮ ಭೂಮಿಗೋಲದ ಮಟ್ಟಿಗೆ ಅದರ ಅಧೋಲೋಕವನ್ನು ಭೂಪಟದ ಕಕ್ಷೆಯಲ್ಲಿ ಮಾನವನ ವಾಸ ವಿಸ್ತಾರದ ತೆಕ್ಕೆಯಲ್ಲಿ ತಂದವನು ಕ್ಯಾಪ್ಟನ್ ಕುಕ್‌ನು. ಅವನು ಬ್ರಿಟಿಶ ಸಾಮ್ರಾಜ್ಯವನ್ನು ಒಮ್ಮೆಲೇ ವಿಸ್ತಾರಗೊಳಿಸಿ ಅದರ ವೈಭವವೈಶಾಲ್ಯಕ್ಕೆ ಸೂರ್ಯನೇ ಅಸ್ತಮಿಸಲು ಭಯಪಡುವಂತೆ ಮಾಡಿದನು; ೧೮ ನೇ ಶತಮಾನದಲ್ಲಿಯೇ ಈ ಮಹಾ ಪುರುಷನು ಆ ವರೆಗೆ ಅಜ್ಞಾತವಾಗಿದ್ದ ಬ್ರಿಟಿಶ ಚಕ್ರವರ್ತಿಯ 'ಶ್ವೇತ' ಛತ್ರದ ನೆರಳಿನಲ್ಲಿ ಆಸ್ಟ್ರೇಲಿಯಾ ಮತ್ತು ನ್ಯೂಝಿಲಂಡ ಇವೆರಡನ್ನು ತಂದು ನಿಲ್ಲಿಸಿದವನು. ಪ್ಯಾಸಿಫಿಕ್ ಮಹಾಸಾಗರವನ್ನು ಅದರ ಅಪಾರ ಜಲ ವಿಸ್ತಾರವನ್ನು ಸರಿಯಾಗಿ ಅಳೆದು ಅಕ್ಷಾಂಶ-ರೇಖಾಂಶಗಳ ಬಲೆಯಲ್ಲಿ ಸೆರೆ ಹಿಡಿದು ನಕಾಶೆಯ ಚೌಕಟ್ಟಿನಲ್ಲಿ, ಕೂಡಿಸಿದವನು ಕುಕ್‌ನೇ ಸರಿ. ಅವನು ನಾವಿಕರಲ್ಲಿ ಶ್ರೇಷ್ಠನಿದ್ದನು; ನಕಾಶೆ ತಯಾರಿಸುವದರಲ್ಲಿ ಅಗ್ರಗಣ್ಯನಿದ್ದನು; ನಾಯಕತ್ವದಲ್ಲಿಯೂ ಅವನು ಅಲೌಕಿಕನಿದ್ದನು; ದೀರ್ಘವಾದ ಜಲಪರ್ಯಟನಗಳಲ್ಲಿ, ಚಿಕ್ಕ ನಾವೆಗಳಲ್ಲಿ, ಅವನು ತನ್ನ ನಾವಿಕ ದಲವನ್ನು ಕಾರ್ಯದಕ್ಷವಾಗಿಯೂ ಆರೋಗ್ಯವುಳ್ಳದ್ದಾಗಿಯೂ ಕಾಯ್ದುಕೊಂಡು ಸಾಗಬಲ್ಲವನಿದ್ದನು. ಕಡಲು ಪಯಣಿಗರಿಗೆ ಸದಾಕಾಲದ ಸಂಕಟವಾಗಿದ್ದ 'ಸ್ಕರ್ವಿ' ಎಂಬ ಚರ್ಮರೋಗವನ್ನು ಅವನು ಗೆದ್ದಿದ್ದನು.

ಕ್ಯಾಪ್ಟನ್ ಕುಕ್‌ನ ಧೈರ್ಯವನ್ನು ಅವನ ಕಾರ್ಯದಿಂದಲೇ ಸರಿಯಾಗಿ ಅಳೆಯಬೇಕು. ಸೈನಿಕನ ಶೌರ್ಯಕ್ಕಿಂತ ನಾವಿಕನ ಶೌರ್ಯವು ಹಿರಿಯದು. ಆ ಶೌರ್ಯದ ಕೆಚ್ಚು ಕ್ರೌರ್ಯದಲ್ಲಿ ಇದೆ; ಈ ಶೌರ್ಯದ ಸತ್ವ ಸ್ಥೈರ್ಯದಲ್ಲಿ ಇರುತ್ತದೆ. ದೇಶಭಕ್ತಿಯ ಆವೇಶ, ಯುದ್ಧದ ಉನ್ಮಾದ ಸಾವಿರಗಟ್ಟಲೆ ಯೋಧರ ಸಹವಾಸ. ಪದವಿ, ಪದಕಗಳ ಪ್ರಲೋಭನೆ ಎದುರಾಳಿಗಳ ಕಡಿತ ತಿವಿತಕ್ಕೆ ಕೆರಳಿದ ಪಶುವೃತ್ತಿ ಇವೆಲ್ಲವೂ ಸೈನಿಕನ ಪರಾಕ್ರಮಕ್ಕೆ ಸ್ಫೂರ್ತಿ ನೀಡುತ್ತವೆ. ಆದರೆ ನಾವಿಕನ ಧೈರ್ಯಕ್ಕೆ ಹಿಂದೆ ಮುಂದೆ ಬರೇ ನೀರು-ಅಂತಪಾರವಿಲ್ಲದ ಕಡಲು, ಗಾಳಿ, ಚಳಿ, ಸುಳಿ, ಗುಡ್ಡದಂಥ ತೆರೆಗಳ ಹುಚ್ಚು ಹಾವಳಿ. ನಾವಿಕನದು ಒಂಟಿಯಾಗಿ ಹೋರಾಡುವ ತುಂಟತನವಿಲ್ಲದ ಬಂಟತನವು. ಕಂದಕಗಳ ಆಶ್ರಯವಿಲ್ಲ; ಬಂದೂಕುಗಳ ಬೆಂಬಲವಿಲ್ಲ; ಹಿಂದಿರುಗಲು ಶಿಬಿರದ ತಳವಿಲ್ಲ; ಮುಂದೆ ನುಗ್ಗಲು ನಿಶ್ಚಿತವಾದ ದಾಳಿಯ ಗುರಿ ಇಲ್ಲ. ನಿಸರ್ಗದ ಅಂದವಾದ ಅಂಧಕಾರಮಯವಾದ ಪ್ರಚಂಡ ಶಕ್ತಿಗಳ ಪ್ರಳಯ ತಾಂಡವದ ನಡುವೆ ದಾರಿಯನ್ನು

ೂಡಿಕೊಂಡು ತನ್ನನ್ನೂ ತನ್ನ ನಾವೆಯನ್ನೂ ಕಡೆ ಇಲ್ಲದ ಕಡಲೊಳಗಿಂದ ಾಣದ ದಂಡೆಗೆ ಕಂಗೆಡದೆ ದಾಟಿಸುವ ನಾವಿಕನ ಧೈರ್ಯದ ದೃಢತೆ ಏನು ? ೌರ್ಯದ ಸ್ಥಿರತೆ ಎಂತಹದು ? ಅಜ್ಞಾತ ಸಮುದ್ರಗಳಲ್ಲಿ ಅಜ್ಞಾತ ದ್ವೀಪ ಳನ್ನೂ ಖಂಡಗಳನ್ನೂ ಕಂಡುಹಿಡಿಯುವದರಲ್ಲಿ ಅಂಥ ಅಪೂರ್ವ ಭೂಮಿಗಳಲ್ಲಿಯ ದಿವಾಸಿಗಳಾದ ಅಮಾನುಷ ನರ ಜಾತಿಗಳೊಡನೆ ಹೋರಾಡುವದರಲ್ಲಿ ಅವನ ಯುಷ್ಯವು ಕಳೆಯಿತು. ೫೦೦ ಟನ್ನುಗಳಿಗೂ ಕಡಿಮೆ ಭಾರದ ಹಡಗದಲ್ಲಿ ವನು ಪ್ಯಾಸಿಫಿಕ್ ಮಹಾಸಾಗರದ ಉದ್ದ-ಅಗಲವೆಲ್ಲ ಸುತ್ತಾಡಿದನು.-ದಕ್ಷಿಣ ಸ್ಟ್ರೇಲಿಯಾದಿಂದ ತೆರ್‍ರಾದೆಲ್ ಫ್ಯೂಗೋತನಕ ಮತ್ತು ದಕ್ಷಿಣ ಧ್ರುವ ್ರದೇಶದಿಂದ ಬೆರಿಂಗ ಸಾಮುದ್ರಧುನಿಯತನಕ.

ುತ್ತು ಇವೆಲ್ಲ ಸಾಹಸ ಏತಕ್ಕಾಗಿ ? ಕೇವಲ ಸಾಹಸಕ್ಕಾಗಿ ! ಬದುಕು ನಮ್ಮ ತ್ವವನ್ನು ಪರೀಕ್ಷಿಸುವ ಒಂದು ದ್ರವ್ಯ-ಎಂಬ ನಿರ್ಧಾರ ಕುಕ್‌ನದು. ಅವನು ನ್ನ ಹಡಗಕ್ಕೆ ಮಾತ್ರವಲ್ಲ ತನ್ನಹೃದಯಕ್ಕೂ ಕಪ್ತಾನನಾಗಿದ್ದನು; ತನ್ನ ದೈವದ ್ರಭುವಾತನು. ಅವನ ಮಾತನ್ನು ಕೇಳಿ, 'ಈ ಮೊದಲು ಯಾವ ಮನುಷ್ಯನೂ ಲ್ಪದಕ್ಕಿಂತ ದೂರ ಹೋಗಬೇಕೆಂದು ಮಾತ್ರವಲ್ಲ, ಮನುಷ್ಯನಿಗೆ ತಲ್ಪಲು ಧ್ಯವಾಗುವಷ್ಟು ದೂರವೂ ನಾನು ಹೋಗಬೇಕೆಂಬ ಮಹದಾಕಾಂಕ್ಷೆ ನನ್ನದಿತ್ತು.' ಮಹದಾಕಾಂಕ್ಷೆಯು ಆಸ್ಟ್ರೇಲಿಯಾ ಮತ್ತು ನ್ಯೂಝಿಲಂಡಗಳ ಶೋಧದಲ್ಲಿ ಫಲವಾಯಿತು.

ಟಿಶ ಜನಾಂಗಕ್ಕೆ ವಿಕಾಸಗೊಳ್ಳಲು ಇಷ್ಟೊಂದು ವಿಶಾಲವಾದ ಹೊಸ ಅವಕಾಶ ನ್ನು ಹುಡುಕಿಕೊಟ್ಟ, ದಕ್ಷಿಣ ಧ್ರುವ ಪ್ರದೇಶದ ಪರಿಶೋಧ ಕಾರ್ಯದ ಾಮಹನೆನಿಸಿಕೊಂಡ ಈ ಕಲಿಯು ಕ್ಲೀವಲಂಡದ ಮಾರ್ಟನ್ ಹಳ್ಳಿಯಲ್ಲಿ ಟ್ಟಿದನು. ಅವನು ಹುಟ್ಟಿದ್ದು ೧೭೨೮ ನೇ ವರ್ಷ ಅಕ್ಟೋಬರ ೨೮ ನೇ ದಿನ.

ನ್ನೆರಡು ವರ್ಷದವನಾದ ಈ ಜೇಮ್ಸ ಕುಕ್‌ನು ವ್ಹಿಟಬಿಯ ಹತ್ತಿರದ ಸ್ಟೈಥ್ಸ ಳ್ಳಿಯ ಒಬ್ಬ ಸಿಂಪಿಗನಲ್ಲಿ 'ಉಮೇದವಾರ'ನಾಗಿ ಕೆಲಸಕ್ಕೆ ನಿಂತನು. ಕ್‌ಸಂಥ ಹೊಸ ಹುರುಪಿನ ಹುಡುಗನಿಗೆ ಈ ಕೆಲಸ ಸುಖವೆನಿಸುವದು ಹೇಗೆ ? ುಣ ಜೇಮ್ಸನು ಮುಂಜಾನೆ ಸಂಜೆ ಅಂಗಡಿಯ ಕದಗಳನ್ನು ತೆರೆದಿಕ್ಕುವದು, ಿಯನಿಗಾಗಿ ಅಲ್ಲಲ್ಲಿ ಅತ್ತಿಂದಿತ್ತ ನಿರೂಪಗಳನ್ನು ತರವಯ್ಯುವದು, ಕೋಣೆಗಳ ಉಡುಗುವದು, ವಿಶೇಷ ಸಾಹಸವೆಂದರೆ ಜಲಿ-ಜೇಡುಗಳನ್ನು ಬೆನ್ನಟ್ಟಿ ದು ಹೊಡೆಯುವದು-ಇಂಥ ದಿನಚರಿಯಲ್ಲಿಯೆ ದುಡಿಯುತ್ತಿದ್ದನು. ಇದು

ಹೊತ್ತು ಹೋಗದ ಹೋರೆಯೇ ಅನಿಸಿತು. ಈ ಬೇಸರ ಕಳೆಯುವ ಒಂದೇ ಒಂದು ಉಪಾಯವು ಅವನಿಗೆ ತೆರೆದಿತ್ತು. ಅಂಗಡಿಯು ಬಿಡುವಿನಲ್ಲಿ ಸಿಂಪಿಗನ ಹಾಗು ಸಂಗಡಿಗರ ಕಣ್ಣು ತಪ್ಪಿಸಿ ಜೇಮ್ಸನು ಆ ಊರಿನ ನೀರತೀರಕ್ಕೆ ಓಡುವನು. ಆ ಊರು ಒಂದು ಪುಟ್ಟ ಬಂದರ ಸ್ಥಳವಾಗಿತ್ತು. ನೀರದಂಡೆಗೆ ಹಲವು ನಾವಿಕರು ಬಂದು ಹೋಗಿ ತಂಗುತ್ತಿದ್ದರು ಅವರಲ್ಲಿ ಕೂಡಿ ಕಲೆತು ಅವರ ಕಡಲ ಪಯಣದ ಕತೆಗಳನ್ನು ಕೇಳುವದು ಅವನ ಕಾಲಹರಣದ ದಿವ್ಯ ಸಾಧನವಾಗಿತ್ತು! ಹಡಗುಗಳ್ಳರ ದೂರದ ನಗರ ಪಟ್ಟಣಗಳ ವಿಚಿತ್ರ ಜನ ಜನಾಂಗಗಳ ಅದ್ಭುತ ರಮ್ಯ ಕತೆಗಳನ್ನು ಕೇಳುತ್ತ, ಬೇರೊಂದು ಲೋಕವನ್ನೇ ಕಲ್ಪಿಸುತ್ತಿದ್ದನು. ತಾನೂ ಕಡಲಿಗೆ ಹೋಗಬೇಕು; ದೂರದ ದಿವ್ಯ ದೇಶಗಳನ್ನು ನೋಡಬೇಕು ಎಂದು ಜೇಮ್ಸನು ನಿರ್ಧರಿಸಿದನು.

ನಿರ್ಧಾರ ಮಾಡಿದಂತೆ ನಡೆದೂ ಆಯಿತು. ಒಂದು ದಿನ ಅಂಗಡಿಯು 'ಪೇಥಿ'ಯೊಳಗಿಂದ ಒಂದು ಶಿಲಿಂಗನ್ನು ಕದ್ದುಕೊಂಡು ಆ ದಿಟ್ಟ ಹುಡುಗನು ನೇರವಾಗಿ ವ್ಹಿಟಬಿಗೆ ಓಡಿಹೋದನು; ಅಲ್ಲಿ ಒಂದು ಕಲ್ಲಿದ್ದಲಿ ಒಯ್ಯುವ ಹಡಗದ ಕಪ್ತಾನನಾದ ವಾಕರ ಎಂಬವನ ಬಳಿಗೆ 'ಉಮೇದುವಾರ'ನಾಗಿ ನಿಂತನು. ಮುಂದೆ ೧೫ ವರ್ಷ ಜೇಮ್ಸನು ನಾರ್ವೇ ಮತ್ತು ಬಾಲ್ಟಿಕ ದಂಡೆಯು ಬಂದರಗಳಿಗೆ ಹೋಗುವ ಹಡಗಗಳ ಮೇಲೆ ದುಡಿದನು. ಈ ದುಡಿತವು ಒಂದು ದಾರುಣ ದುರಿತವೇ ಇತ್ತು. ಆ ಕಾಟಕಷ್ಟಗಳ ಕಾಲಕೂಟಕವನ್ನೆಲ್ಲ ಉಂಡು ಕುಕ್‌ನು ಕಸುವುಳ್ಳ ಕಡಲ-ಕಲಿಯಾದನು.

೨೭ ನೇ ವರ್ಷ ವಯಸ್ಸಿಗೆ ಹಡಗದ ಚಾಕರಿಯಲ್ಲಿ ಜೇಮ್ಸ ಕುಕ್‌ನು ಕಪ್ತಾನನ ಕೆಳಗಿನ ಅಧಿಕಾರ ಪಟ್ಟಕ್ಕೆ 'ಫರ್ಸ್ಟ್‌ಮೇಟ' ಎಂಬ ಪದವಿಗೆ ಏರಿದನು. ಈ ನಡುವೆ ಫ್ರಾನ್ಸದೊಡನೆ ಯುದ್ಧ ಆರಂಭವಾಗಿತ್ತು. ಆಗ ಅವನು ಸರಕಾರೀ ಹಡಗುಪಡೆಗೆ ಸ್ವಯಂಸೇವಕನಾಗಿ ಸೇರಿದನು. ಅವನು ಸಲ್ಲಿಸಿದ ಪ್ರಥಮ ಸೇವೆಯು ಕಾನಡಾ ದೇಶದಲ್ಲಿ. ಅಲ್ಲಿ ಅವನನ್ನು ಸೆಂಟಲಾರೆನ್ಸ ನದಿಯು ಉದ್ದ ಅಗಲಗಳ ಅಳತೆಮಾಡುವ ದುಷ್ಕರವೂ ದುರ್ಧರವೂ ಆದ ಕೆಲಸಕ್ಕೆ ನೇಮಿಸಲಾಯಿತು. ಕೆಂದು ಇಂಡಿಯನ್ನರೂ ಫ್ರೆಂಚರೂ ಅವನ ಹಡಗದ ಮೇಲೆ ಯಾವ ನಿಟ್ಟಿನಿಂದಲೂ ಯಾವ ಹೊತ್ತಿನಲ್ಲಿಯೂ ದಾಳಿಮಾಡುತ್ತಿದ್ದರು. ಆದಾಗ್ಯೂ ಅವನು ಕ್ಯೂಬೆಕ್‌ದಿಂದ ಮುಖದವರೆಗೂ ಆ ನದಿಯು ಪಾತ್ರಪರ್ಯವೇಕ್ಷಣೆಯನ್ನು ಮಾಡಿ ಅದರ ನಕಾಶವನ್ನು ರಚಿಸಿದನು. ಆ ಯುದ್ಧದಲ್ಲಿ ಸೇನಾಪತಿ ವೂಲ್ಫನು ಕ್ಯೂಬೆಕ್ ಕೋಟೆಯನ್ನು ಫ್ರೆಂಚರಿಂದ ಕಿತ್ತುಕೊಳ್ಳುವತನಕವೂ, ಜೇಮ್ಸ ಕುಕ್‌ನು ತಯಾರಿಸಿದ ಈ ಪಟವೇ ಬ್ರಿಟಿಶ ಹಡಗುಪಡೆಗೆ ಮಾರ್ಗದರ್ಶಕವಾಯಿತು!

೭೬೨ ರಲ್ಲಿ ನ್ಯೂಫೌಂಡ್ಲಂಡದ ಪುನರ್ವಿಜಯದ ಸಮಯ. ಕುಕ್‌ನೂ ಆ ಡಗುಪಡೆಯಲ್ಲಿ ಇದ್ದನು. ಆ ವಿಜಯದ ನಂತರ, ಆ ದೊಡ್ಡ ದ್ವೀಪದ ದಂಡೆಯ ೂಪಟವನ್ನು ಅವನೇ ಸಿದ್ಧಪಡಿಸಿದನು. ಆ ಸಮಯಕ್ಕೆ ಅವನು ಭೂಪಟ ಚನೆಯಲ್ಲಿ–ಕ್ಷೇತ್ರ ನಿರೀಕ್ಷಣೆಯನ್ನು ಮಾಡಿ ನಕಾಶೆಯನ್ನು ಬರೆಯುವವರಲ್ಲಿ– ಪುಣನೆಂದು ಸಾಕಷ್ಟು ಪ್ರಸಿದ್ಧಿಗೆ ಬಂದಿದ್ದನು. ಈ ಅನುಭವದಲ್ಲಿ ಅವನು ಣಿತಶಾಸ್ತ್ರದ ಮಹತ್ವವನ್ನು–ಮನಗಂಡನು. ಈ ಶಾಸ್ತ್ರೀಯ ದೃಷ್ಟಿಯು ಅವನ ಾಗ್ಯವನ್ನೇ ಪಲ್ಲಟಿಸಿತು. ಅವನು ಆ ಸಮಯದಲ್ಲಿ (ಅಂದರೆ ೧೭೬೬ ನೇ ವರ್ಷ ಗಷ್ಟ ೫ ಕ್ಕೆ) ಒದಗಿದ ಸೂರ್ಯಗ್ರಹಣವನ್ನು ನಿರೀಕ್ಷಿಸಿ ಆ ಕುರಿತು ್ಯೋತಿರ್ಗಣಿತದ ತನ್ನ ಅನುಮಾನಗಳನ್ನು ಪ್ರಕಟಿಸಿದನು. ಇದು ಅವನ ಮಟ್ಟಿಗೆ ೋಜಿಗವೇನೂ ಇದ್ದಿಲ್ಲ. ಆದರೆ ಒಬ್ಬ ನಾವಿಕನು ಜ್ಯೋತಿರ್ಗಣಿತದ ಪ್ರಯೋಗ ಳನ್ನು ಮಂಡಿಸುವದು ಬ್ರಿಟಿಶರ ಪ್ರಾಜ್ಞ ಪ್ರಪಂಚಕ್ಕೆ ಆಶ್ಚರ್ಯವೇ ಅನಿಸಿತು. ಗರ ಸೇನಾವಿಭಾಗದ ಕೇಂದ್ರ ಖಾತೆಗೂ ರಾಯಲ ಸೊಸಾಯಿಟಿ ಎಂಬ ರಮೋಚ್ಚ ವಿದ್ವತ್ಪರಿಷತ್ತಿಗೂ ಅವನ ಕಡೆಗೆ ಗಮನವನ್ನು ಕೊಡಬೇಕಾಯಿತು. ದರಿಂದ ಜೇಮ್ಸ ಕುಕ್‌ನ ಬಾಳಿನ ಸೆಳವು ಹೊಸನಿಟ್ಟಿನಲ್ಲಿ ಹರಿಯಲು ರಣವಾಯಿತು.

ವನ ಸಮಕಾಲೀನನೊಬ್ಬನು ಅವನನ್ನು ಬಣ್ಣಿಸಿದ್ದುಂಟು. 'ಅವನು ವಿನಯಶೀಲ ಶೇಷ ಲಜ್ಜಾವಂತನೇ ಎನ್ನಬಹುದು. ಸರಸವಾದ ಸಂಭಾಷಣದಲ್ಲಿ ಚತುರ. ಕ್ಕೇ ವಿವೇಕ ಮತ್ತು ಬುದ್ಧಿಶಾಲಿ. ವೃತ್ತಿಯಲ್ಲಿ ಕೆಲಮಟ್ಟಿಗೆ ಶೀಘ್ರ ಕೋಪಿ. ದರೂ ವರ್ತನದಲ್ಲಿ ಅತ್ಯಂತ ಸ್ನೇಹಮಯ ಹಿತಕಾರಿ ಮತ್ತು ಮರುಕದವನು. ುವಿಕೆಯಲ್ಲಿ ಸುಮಾರು ೬ ಫೂಟು ಎತ್ತರ. ನೋಡಲು ಸರೂಪಿಯು. ಅವನು ಬೋಧನೆಗೂ ಸಂದರ್ಶನಕ್ಕೂ ತೀರ ಸರಳ ರೀತಿಯವನು. ಅವನ ತಲೆಯು ಕ್ಕದಿತ್ತು; ಅವನ ಕೂದಲು ದಟ್ಟ ಕಂದೀ ಬಣ್ಣದು, ಅವನ ಮುಖದಲ್ಲಿ ಾವಾಗಲೂ ಭಾವ ವ್ಯಂಜನೆಯು ಒಡೆದೆದ್ದು ಕಾಣುತ್ತಿತ್ತು. ಅವನ ಮೂಗು ಹಳೇ ಮಾಟವಾಗಿತ್ತು. ಅವನ ಕಣ್ಣುಗಳು ಚಿಕ್ಕವು. ಕಂದೀಬಣ್ಣದ ಿಯುಳ್ಳವು. ಚಪಲ ಮತ್ತು ಭೇದಕ ದೃಷ್ಟಿಯವು. ಅವನ ಹುಬ್ಬುಗಳು ಎದ್ದು ಣುವಂಥವಿದ್ದು ಆ ಮೂಲಕ ಅವನ ಮುಖಚರ್ಯೆಗೆ ಒಂದು ಗಾಂಭೀರ್ಯದ ಯು ತುಂಬಿತ್ತು.' ಗ್ರಿನ್ವಿಚ ಶಹರದಲ್ಲಿ ಪೇಂಟೆಡ್‌ಹಾಲ ಎಂಬ ಸಭಾಗೃಹದಲ್ಲಿ ಗ ತೂಗುತ್ತಿದ್ದ ಅವನ ಪೂರ್ಣ ಚಿತ್ರವು ಈ ವರ್ಣನೆಯನ್ನು ಎಲ್ಲ ವಿವರ ಲ್ಲಿಯೂ ಹೋಲುತ್ತದೆ.

್ಯೂಫೌಂಡ್ಲಂಡದ ದಂಡೆಯನ್ನು ಸುತ್ತಿ ಅಳೆದು ನೋಡಿ ಬಂದರೂ ಜೆ ಕುಕ್‌ನಿಗೆ

ಇನ್ನೂ ಶೋಧಸಂಚಾರಿಯೆಂದು ಖ್ಯಾತಿ ಬಂದಿದ್ದಿಲ್ಲ. ಒಬ್ಬ ಸಮರ್ಥ ನಾವಿಕ, ಸಮುದ್ರ ಪರ್ಯಟನದಲ್ಲಿ ಕುಶಲ, ಬಿಡುವಿನ ವೇಳೆಯ ವ್ಯಾಸಂಗದ ವ್ಯಸನವೆಂದು ವೈಜ್ಞಾನಿಕ ಸಂಗತಿಗಳನ್ನು ಅಭ್ಯಾಸಿಸುವ ಜಿಜ್ಞಾಸು, ಅಲ್ಲದೆ ಭೂಪಟ ರಚನೆಯಲ್ಲಿಯೂ ಕ್ಷೇತ್ರಪರ್ಯವೇಕ್ಷಣೆಯಲ್ಲಿಯೂ ಸಾಕಷ್ಟು ಶಕ್ತಿಯುಳ್ಳವನಿದ್ದು, ಗಣಿತದಲ್ಲಿಯೂ ತಕ್ಕಮಟ್ಟಿಗೆ ಗತಿ ಇದ್ದ ಮೇಧಾವಿ-ಬರೇ ವಿಲಾಸಿಯಾದ 'ಖಲಾಸಿ'ಯಲ್ಲ.-ಎಂದಿಷ್ಟೇ ಅವನ ಕುರಿತು ಸಾಮಾನ್ಯ ಪರಿಚಯವಿತ್ತು. ಅವನ ಇವೆಲ್ಲ ಶಕ್ತಿ ಯೋಗ್ಯತೆಗಳನ್ನು ಸಮುದ್ರ ಸೇನಾವಿಭಾಗದ ಪ್ರಭುಗಳು ರಾಷ್ಟ್ರಕ್ಕಾಗಿ ವಿನಿಯೋಗಿಸುವ ಸಂಕಲ್ಪವನ್ನು ಮಾಡಿದರು. ದಕ್ಷಿಣ ಸಮುದ್ರಗಳಲ್ಲಿ ಶೋಧ ಸಂಚಾರಕ್ಕಾಗಿ ಒಂದು ನೌಕಾದಲವು ಹೋಗಬೇಕೆಂದು ಗೊತ್ತಾಯಿತು. ಆ ಸಂಚಾರದ ಪ್ರಕಟವಾದ ಉದ್ದೇಶವು ಮಂಗಲ ಗ್ರಹದ ಗತ್ಯಂತರವನ್ನು ಅಭ್ಯಸಿಸುವದೆಂದು ಇತ್ತು. ಆದರೂ ಸಾಧ್ಯವಿದ್ದರೆ ದಕ್ಷಿಣ ಧ್ರುವದ ಸುತ್ತಲಿನ ಮಹಾ ಭೂಖಂಡವನ್ನೆಲ್ಲ ಬ್ರಿಟಿಶ ಧ್ವಜದಡಿಗೆ ತರುವ ಯೋಜನೆಯೂ ಇತ್ತೆಂದರೂ ತಪ್ಪಾಗಲಿಕ್ಕಿಲ್ಲ. ೧೭ ನೇ-೧೮ ನೇ ಶತಮಾನಗಳ ನಡುವೆಲ್ಲ ಅನೇಕ ನಾವಿಕರ ಅನ್ವೇಷಣೆಗೆ ಈ ಪ್ರದೇಶವು ವಿಷಯವಾಗಿತ್ತು. ಟೆರ್ರಾ ಆಸ್ಟ್ರೇಲಿಜ ಎಂಬುದೊಂದು ಕಲ್ಪನಾರಮ್ಯ ದಕ್ಷಿಣಲೋಕವಿದೆಯೆಂದು ಅಂದಿನ ಹಲವು ಊಹಾಪಟುಗಳಾದ ಭೂಚರಿತ್ರಕಾರರು ಬಣ್ಣಿಸಿದ್ದರು. ಆ ಲೋಕಕ್ಕಾಗಿ ಲೋಲುಪರಾದವರಲ್ಲಿ ಕೇವಲ ನಾವಿಕರೇ ಇದ್ದಿಲ್ಲ; ಶಾಸನಕರ್ತರಲ್ಲಿಯೂ ಕೆಲವರು ಇದ್ದರು. ಜೇಮ್ಸ ಕುಕ್‌ನಿಗೆ ಬಿಡಿಸಲು ಕೊಟ್ಟ ಕೂಟಪ್ರಶ್ನೆಯು ಇದೇ ಆಗಿತ್ತು. ಅಂಥ ಒಂದು ಭೂಖಂಡ, ದೂರದ ದಕ್ಷಿಣದಲ್ಲಿ ಇದೆಯೇ ? ಇದ್ದುದಾದರೆ, ಅದರ ಸ್ವರೂಪ ವ್ಯಾಪ್ತಿ ವಿಶೇಷಗಳು ಏನು ?

ಕುಕ್‌ನಿಗೆ ಈ ದೂರದ ದಿಗಂತಕ್ಕೆ ಸರಿಯಾಗಿ ದಾರಿ ತೋರಿಸಬಲ್ಲ ಯಾವ ಕೈಪಿಡಿಯೂ ಇದ್ದಿಲ್ಲ. ವಿಪುಲವಾದ ಚಿನ್ನ-ಬೆಳ್ಳಿಯ ಹೆದ್ದಾಸೆಯ ಬಿಸಿಲು ಗುದುರೆಯನ್ನೇರಿ ಆವನ ಪೂರ್ವಿಕರು ಈ ದಕ್ಷಿಣದ ಸಮುದ್ರಗಳಲ್ಲಿ ಸಂಕಟವನ್ನಪ್ಪಿಕೊಂಡಿದ್ದರೆಂದು ಅವನಿಗೆ ಗೊತ್ತಿತ್ತು. ಸ್ಪೇನ ಪೋರ್ಟುಗಾಲ ಮತ್ತು ಹಾಲಂಡದ ಅನೇಕ ನಾವಿಕರು ಪ್ಯಾಸಿಫಿಕದ ಮಧ್ಯದಲ್ಲಿ ವಿಸ್ತೀರ್ಣವಾದ ಕಲ್ಲು ಬಂಡೆಗಳ ದಂಡೆಯನ್ನು ಥಕ್ಕನೆ ತಲ್ಪಿದ್ದರು. ಅಂಥವರು ನೂತು ನೆಯ್ದ ಕತೆಗಳ ಆಧಾರದಿಂದ ಭೂಪಟಕಾರರು ಅದನ್ನು ಆ ದೂರ ದಕ್ಷಿಣದ ಅಜ್ಞಾತ ಭೂಖಂಡದ ಕರಾವಳಿಯ ಭಾಗವೆಂದೇ ಭಾವಿಸುತ್ತ ಬಂದರು.

೧೬೦೫ ರಲ್ಲಿ ಡಿ ಟೊರ್ರೆಸ ಎಂಬ ಸ್ಪೆನಿಶ್ ನಾವಿಕನು ನ್ಯೂಗ್ಯಿನಿವು ಒಂದು

ಭೂಖಂಡದ ಭಾಗವಲ್ಲವೆಂದು ಕಂಡುಹಿಡಿದಿದ್ದನು. ಅವನ ಈ ಶೋಧವು ಒಂದು ಶತಮಾನದನಕವೂ ಅಜ್ಞಾತವಾಗಿಯೇ ಉಳಿಯಿತು. ಬ್ರಿಟಿಶ ಸರಕಾರವು ಈ ಡಾಂಪೀರನನ್ನು ಅದೇ ಕನಸಿನ ಖಂಡವನ್ನು ಕಂಡು ಹಿಡಿಯಲು ಅಧಿಕೃತವಾಗಿ ಕಳುಹಿಸಿತ್ತು. ಈ ಸಾಹಸಿಗನು ಈಗ ಪಶ್ಚಿಮ ಆಸ್ಟ್ರೇಲಿಯಾ ಎಂದು ಹೆಸರಾದ ಪ್ರದೇಶದ ಕರಾವಳಿಗುಂಟು ಹಾಯ್ದು ಬಂದನು. ಆದರೆ ಅವರ ಬಗೆಗೆ ಪ್ರತಿಕೂಲ ಅಭಿಪ್ರಾಯಪಟ್ಟನು. ಆದರೆ ಒಟ್ಟಾರೆ ಡಾಂಪೀರನು ಆ ಸಮಸ್ಯೆಯ ಬಗ್ಗೆ ಯಾವ ಅಂಶದಲ್ಲಿಯೂ ನೆರವಾಗಲಿಲ್ಲ.

ಆದರೆ ೧೬೪೨ ರಲ್ಲಿ ತಾಸ್ಮನ್ ಎಂಬ ಒಬ್ಬ ಡಚ್ಚ ನಾವಿಕನು ಈ ಭೂಖಂಡದ ಸೀಮಾರೇಖೆಗಳನ್ನು ಸಂಕುಚಿತವಾಗಿ ಮಾಡಿಬಿಟ್ಟನು. ಅವನು ಬ್ಯಾಟೆವ್ಹಿಯಾದಿಂದ ಆಗ್ನೇಯಕ್ಕೆ ಅಭಿಮುಖವಾಗಿ ಹಾಯ್ದು ಬಿಟ್ಟು ಹೊರಟನು. ಅವನು ಮುಂದೆ ಪ್ರಸಿದ್ಧಗೊಳಿಸಿದ ತಾಸ್ಮನಿಯಾ ದ್ವೀಪವನ್ನು ಕಂಡುಹಿಡಿದು ಬಂದನು. ನ್ಯೂಗ್ಯಿನಾದ ಉತ್ತರ ಕರಾವಳಿಯು ಒಂದು ಖಂಡದ ಭೂಶಿರದಂಥ ಭಾಗವಲ್ಲ ನೆಂದು ಸಿದ್ಧಮಾಡಿದನು. ಒಂದು ಘನವಾದ ಗೌರವದ ನಿಧಿಯನ್ನು ಹತ್ತಿರ ದಿಂದಲೇ ಸುತ್ತುಹಾಕಿ ಅವನು ಬರಿಗೈಯಿಂದ ಹಿಂದಿರುಗಿದಂತೆ ಆಯಿತು! ಏಕೆಂದರೆ, ಅವನು ನಿಜವಾಗಿಯೂ ಆಸ್ಟ್ರೇಲಿಯಾ ಖಂಡದ ಪ್ರದಕ್ಷಿಣೆಯನ್ನು ಮಾಡಿ ಬಂದಿದ್ದನು.

ಆದ್ದರಿಂದ ೧೭೬೮ ನೇ ವರ್ಷ ಅಗಷ್ಟ ೨೫ ನೇ ದಿನ ಲೆಫ್ಟನೆಂಟ ಕುಕ್‌ನು ೮೨ ಜನರ ಒಂದು ಮಂಡಳಿಯೊಡನೆ ಹೊರಟಾಗ, ಭೂಗೋಲದ ಒಂದು ವಿಶಾಲ ಕ್ಷೇತ್ರವನ್ನು ನಕ್ಷೆಯ ಕಕ್ಷೆಯಲ್ಲಿ ತರುವ ಅಪೂರ್ವ ಯೋಗವು ಅವನಿಗಾಗಿಯೇ ಕಾದಿತ್ತು. ಅವನು ೨೭೦ ಟನ್ನಿನ ಒಂದು ಹಡಗದಲ್ಲಿ 'ಆ ಜಲಧಿಯನು ಜಗಿವ' ಕಾರ್ಯಕ್ಕೆ ಹೊರಟನು. ಅವನ ಜತೆಯ ಮಂಡಳಿಯಲ್ಲಿ ಬರೇ ನವಕರರಿದ್ದಿಲ್ಲ. ಅಂದಿನ ವಿಖ್ಯಾತ ಬ್ರಿಟಿಶ್ ವೈಜ್ಞಾನಿಕನಾದ ಸರ ಜೊಸೆಫ ಬ್ಯಾಂಕ್ಸನನ್ನೇ ಮೊದಲುಗೊಂಡು ಹಲವು ಶಾಸ್ತ್ರಜ್ಞರೂ ಆ ಶೋಧಸಂಚಾರದಲ್ಲಿಯ ''ಸಂಗಾಡಿ' ಗಳಾಗಿದ್ದರು. ಅವರ ಪರ್ಯಟನಕ್ಕೆ ಮೂರುವರ್ಷಗಳು ಹಿಡಿದಾವು-ಎಂದು ಅವರ ಸಂಕಲ್ಪವಿತ್ತು.

೧೭೬೯ ನೇ ವಸಂತಋತುವಿನಲ್ಲಿ ಅವರು ತಾಹಿಲೆ ದ್ವೀಪವನ್ನು ತಲ್ಪಿದರು. ಅಲ್ಲಿಂದ ಜೂನ ೨ ಕ್ಕೆ ಮಂಗಲನ ಗತ್ಯಂತರವನ್ನು ಅವರು ನಿರೀಕ್ಷಿಸಿದರು. ಅತ್ತ ಶಾಸ್ತ್ರಜ್ಞ ಮಂಡಳಿಯು ಮಂಗಲ ಗ್ರಹದ ಅವಲೋಕನೆಯಲ್ಲಿ ಮಗ್ನವಾಗಿದ್ದಾಗ

ಅತ್ತ ಚಿಕ್ಕದೊಂದು ಅಮಂಗಲ 'ಗ್ರಹಣ'ವು ನಡೆಯಿತು. ಕೆಲವು ನಾವಾಡಿಗಳು ಮುಂದಾಳುಗಳ ಕಣ್ಣು ತಪ್ಪಿಸಿ 'ಉಗ್ರಾಣ'ವನ್ನು ಹೊಕ್ಕರು ಮತ್ತು ದೊಡ್ಡ ಮೊಳೆಗಳನ್ನು ಹಿಡಿ ಹಿಡಿಯಾಗಿ ಕದ್ದುಕೊಂಡರು! ಉಗ್ರಾಣದ ಈ ಕಬ್ಬಿಣದ ಮೊಳೆಗಳನ್ನು ಅವರು ಕದ್ದದ್ದು ಏಕೆ? ತಾಹಿಲೆಯ ಆದಿವಾಸಿಗಳು ಈ ಮೊಳೆಗಳನ್ನೇ ನಾಣ್ಯಗಳಂತೆ ಕೊಳ್ಳಲು ಸಿದ್ಧರಿದ್ದ ಜಾಣರೆಂದು ಆ ನಾವಿಕರು ಕಂಡು ಕೊಂಡಿದ್ದರು. ಆದರೆ ಈ 'ಕಳ್ಳಪೇಟೆ'ಯ ಹೊಂಚು-ಸಂಚು ಬಯಲಿಗೆ ಬಂದಿತು. ಒಬ್ಬ ನಾವಾಡಿಯಲ್ಲಿ ೭ ಮೊಳೆಗಳು ದೊರೆತವು. ಕುಕ್‌ನು ನಿಷ್ಠುರ ನ್ಯಾಯವಂತನಿದ್ದನು. ಅವನು ಆ ಏಳುಮೊಳೆಯ ಮೂಳನಿಗೆ ೨೪ ಚಾಟಿಯ ಏಟುಗಳ ದಂಡನೆಯನ್ನು ವಿಧಿಸಿಬಿಟ್ಟನು.

ತಾಹಿಲೆಯಿಂದ ಕುಕ್‌ನು ದಕ್ಷಿಣಾಭಿಮುಖವಾಗಿ ಹೊರಟನು-ಅಜ್ಞಾತ ಖಂಡವನ್ನು ಹುಡುಕುತ್ತ. ಕೊನೆಗೆ ಅವನು ನ್ಯೂಝಿಲಂಡವನ್ನು ತಲ್ಪಿದನು. ಆರು ವಾರಗಳಷ್ಟು ಕಾಲ ಹಡಗದಲ್ಲಿಯೇ ಕಟ್ಟಿ ಬಿದ್ದದ್ದರಿಂದ ದಂಡೆಗೆ ಇಳಿದು ಕಾಲಾಡಿಸಲು ಅನುವಾಯಿತೆಂದು ಆನಂದಪಡುತ್ತಿರುವಾಗಲೇ, ಮೈ ಎಲ್ಲ ಚಿತ್ರವಿಚಿತ್ರವಾಗಿ ಚುಚ್ಚಿಸಿಕೊಂಡ ಅಲ್ಲಿಯ ಆದಿವಾಸಿಗಳ ಉಗ್ರರೂಪಗಳೇ ಸಾಲುಗಟ್ಟಿ ಮುನ್ನುಗ್ಗಿ ಬಂದು ಇದಿರಾದಾಗ ಇವರ ಅರ್ಧ ಉತ್ಸಾಹ ಕುಗ್ಗಿಹೋಯಿತು! ಈ ಆದಿವಾಸಿಗಳು ಮಾವರಿ ಜನ. ಕುಕ್‌ನು ಸಾಮೋಪಾಯದಿಂದ ಅವರನ್ನು ಈಲು ಮಾಡಿಕೊಳ್ಳಲು ಹವಣಿಸಿದನು. ಅವರ ಭಲ್ಲೆ ಬರ್ಚಿಗಳನ್ನು ಬದಿಗಿಡಲು ಗೆಳೆತನದ ಕೈಸನ್ನೆಗಳಿಂದಲೇ ಬಿನ್ನವಿಸಿಕೊಂಡನು. ಆ ಬಿನ್ನಹದಂತೆ ಅವರು ಆಗೇನೋ ನಡೆದುಕೊಂಡರು. ಆದರೆ ಅದೊಂದು ಗುಂಪು ಸುಮ್ಮನೆ ಮಾತು ಕೇಳಿತೆಂದು ಮಿಕ್ಕ ಮಾವರಿ ಮಂದಿ ಅಷ್ಟೊಂದು ಮಿದುವಿದ್ದಿಲ್ಲ. ಬ್ರಿಟಿಶ ಚಕ್ರವರ್ತಿಯ ನೌಕಾಪಡೆಯ ಆ ಗಣವೇಷಕ್ಕೆ ಯೋಗ್ಯ ಮನ್ನಣೆಯನ್ನು ಸಲ್ಲಿಸಲು ಹಲವುಸಲ ಆ ಮಾವರಿ ಜನರಿಗೆ ತುಬಾಕಿಯ ತುದಿಯಿಂದಲೇ ಕಲಿಸಬೇಕಾಗುತ್ತಿತ್ತು. ಗುಂಡು ತಿಂದು ಒಬ್ಬನು ಸತ್ತಾಗಲೇ ಇನ್ನೊಬ್ಬನಿಗೆ ಬುದ್ಧಿ ಬರುತ್ತಿತ್ತು. ಆದರೂ ಸಾಮಾನ್ಯವಾಗಿ ಆ ಕರಾವಳಿಯ ಮಾವರಿ ಜನರ ಪ್ರತಿಭಟನೆ ಕರಾಳವಾಗಿಯೇ ನಡೆಯಿತು. ಆದ್ದರಿಂದ ಕುಕ್‌ನಿಗೆ ಒಳನಾಡನ್ನು ಹೊಕ್ಕು ಪರಿಶೋಧಿಸಲು ಸಾಧ್ಯವಾಗಲಿಲ್ಲ.

ನ್ಯೂಝಿಲಂಡವನ್ನು ತಾಸ್ಮನ್‌ನು ನೋಡಿದ್ದಿರಬಹುದು. ಆದರೆ ಅದರ ನಿಜವಾದ ಸ್ವರೂಪ ಪರಿಚಯವನ್ನು ತಿಳಿಮ ತಿಳಿಸುವಂತೆ ಕಾರ್ಯ ಮಾಡಿದ ಸಾಹಸಿಯು ಜೇಮ್ಸ ಕುಕ್‌ನೇ ಸರಿ. ಅವನು ಉತ್ತರ, ದಕ್ಷಿಣ ದ್ವೀಪಗಳ ಕರಾವಳಿಗಳನ್ನು

ರುಥಾರ್ಥವಾಗಿ ಕ್ಷೇತ್ರಪರ್ಯವೇಕ್ಷಣೆಗೆ ಗುರಿಮಾಡಿದನು.–ಉದ್ದ–ಅಗಲ ಒಳ ಹೊರಗಿನ ಅಂಕು ಡೊಂಕುಗಳನ್ನು ಸರಿಯಾಗಿ ಅಳೆದು ಬರೆದು ಇಟ್ಟನು. ಎರಡೂ ದ್ವೀಪಗಳನ್ನು ವಿಂಗಡಿಸುವ ನೀರಿನ ಪಟ್ಟಿಯ ನಕಾಶೆಯನ್ನು ಸಮಪೂರ್ವಕವಾಗಿ ತಯಾರಿಸಿದನು. ಆ ಕಡಲಪಟ್ಟಿಗೆ ಈಗ ಅವನದೇ ಹೆಸರು ಬಿದ್ದಿದೆ–ಕುಕ್ಸ ಸ್ಟ್ರೇಟ್ಸ ಎಂದು, ಈಗ ಕ್ವೀನ ಶಾರ್ಲಟ್ಸ ಸೌಂಡ ಎಂಬಲ್ಲಿ ಅವನ 'ಅಶ್ವಮೇಧದ ಕುದುರೆ'ಯು ನಿಂತಿತು. ಅಡವಿ ವಿರಳವಿದ್ದ ಒಂದು ರಮ್ಯಸ್ಥಾನದಲ್ಲಿ ಕುಕ್‌ನು ತಾನು ಸಮುದ್ರದಾಟಿಬಂದ ಮುಖ್ಯ ದಿಗ್ವಿಜಯದ ಗಂಭೀರ ವಿಧಿಯನ್ನು ಅಲ್ಲಿ ಆಚರಿಸಿದನು. ಒಂದು ಪಟಸ್ತಂಭವನ್ನು ಅಲ್ಲಿ ನಿಲ್ಲಿಸಲಾಯಿತು. ಅನಂತರ ಅವನೊಡನೆ ಬಂದ ಮಂಡಳಿಯ ಜಯಘೋಷಗಳ ಧ್ವನಿಯಲ್ಲಿ 'ಯೂನಿಯನ್ ಜ್ಯಾಕ್' ಏರಿಸಲಾಯಿತು. ಕುಕ್‌ನು ಚಿಕ್ಕದೊಂದು ಭಾಷಣವನ್ನು ಮಾಡಿ, ಈವೆರಡೂ ದ್ವೀಪಗಳನ್ನು ಬ್ರಿಟಿಶ ಚಕ್ರವರ್ತಿ ಮೂರನೆಯ ಜಾರ್ಜ ಅರಸರ ಪರವಾಗಿ ತಾನು ವಶಪಡಿಸಿ ಕೊಂಡಿರುವೆನೆಂದು ಅವನು ಸುತ್ತಲೂ ನಿಂತ ತನ್ನ ಜನಕ್ಕೂ ಅವರ ಹಿಂದೆ ದಿಗಂತದ ತನಕ ಹಬ್ಬಿ ನಿಂತ ಬೆಟ್ಟ, ಗುಡ, ಕಡಲು, ಬಾನುಗಳ ನಿರ್ಮಾನುಷ ಮೌನಸನ್ನಿಧಿಗೂ ಸಾರಿ ಹೇಳಿದನು. 'ದಕ್ಷಿಣಗೋಲಾರ್ಧದ ಬ್ರಿಟಿಶ ನಡುಗಡ್ಡೆಗಳು' ಮೂರನೆ ಜಾರ್ಜ ಬಾದಶಹನ ವಶವಾದವು!

ನ್ಯೂಝಿಲಂಡವನ್ನು ಬಿಟ್ಟು ಅವರ 'ಎಂಡೆವ್ಹರ' ಹಡಗವು ಮತ್ತೆ ೧೯ ದಿನ ಮುಂದೆ ಸಾಗಿತು. ಎಲ್ಲಿಯೂ ದೂರದಲ್ಲಿ ನೆಲವನ್ನು ಕಾಣದೆ ಕಡಲ ನೀಲಿಯನ್ನು ಡೆಯುತ್ತ ಕದಡುತ್ತ ಮುಂದರಿಯಿತು. ಕಟ್ಟಕಡೆಗೆ ಪಟಸ್ತಂಭದ ಮೇಲೆ ಅಟ್ಟ ಟ್ಟಿ ಕೂತು ದೂರದ ನಿಟ್ಟನ್ನು ದಿಟ್ಟಿಸುವ ನಿರೀಕ್ಷಕನು ಕರ್ಕಶವಾಗಿ ಕೂಗಿದನು. ದು ನೆಲವನ್ನು ಕಂಡ ಹರ್ಷದ ಕೂಗಾಗಿತ್ತು! ಕುಕ್‌ನು ತಳ ಕೊಠಡಿಯಿಂದ ಮೇಲೇರಿಬಂದು ಚುಕ್ಕಾಣಿಯ ಹತ್ತಿರ ನಿಂತು ದೂರದಲ್ಲಿ ಇಣಿಕಿ ನೋಡಿದನು– ಸ್ಟ್ರೇಲಿಯಾ ಖಂಡದ ಪ್ರಚಂಡ ದ್ವಿಪದ ದಂಡೆ ಕ್ಷಿತಿಜವನ್ನು ಆಕ್ರಮಿಸಿ ನಿಂತಿತ್ತು. ದು ಆ ಖಂಡದ ಪೂರ್ವದ ದಂಡೆ. ಅದನ್ನೂ ಕುಕ್‌ನು ತನ್ನ ಎಂದಿನ ಚ್ಚುಕಟ್ಟಾದ ದಕ್ಷತೆಯಿಂದ ನಕಾಶೆಗಿಳಿಸಿದನು.

ಕ್‌ನು ಆಸ್ಟ್ರೇಲಿಯಾದ ದಂಡೆಗೆ ಹಡಗವನ್ನು ಹತ್ತಿಸಿದ ಕೂಡಲೆ, ಕೆಳಗೆ ಇಳಿದ ತೂಹಲಗಳಲ್ಲಿ ಸರ್ ಜೊಸೆಫ ಬ್ಯಾಂಕ್ಸನೇ ಮೊದಲಿಗನಿದ್ದನು. ಅವನು ಇಳಿ ವನೇ ಹಲವುದಿನಗಳ ತನಕ ವನಸ್ಪತಿ ಶಾಸ್ತ್ರಕ್ಕೆ ತೀರ ಅಪರಿಚಿತವಿದ್ದ ಅಲ್ಲಿಯ ಪುಲ ವಿವಿಧ ಹೂವುಗಳನ್ನೂ ಗಿಡಗಳನ್ನೂ ಕಂಡು ಕಲೆಹಾಕುತ್ತ ನಡೆದನು. ಈ ನಸ್ಪತಿ ಮಾದರಿಗಳ ವೈಪುಲ್ಯ ವೈವಿಧ್ಯವು ಅಪೂರ್ವವಿದ್ದಷ್ಟೇ ಅಪರಿಮಿತವಿತ್ತು.

ಅದನ್ನೆಲ್ಲ ಕಂಡ ಹಿರಿ ಹಿಗ್ಗಿನ ಹುರುಪಿನಲ್ಲಿ ಬ್ಯಾಂಕ್ಸನು, ಅವರ ಹಡಗವು ಲಂಗರು ಬಿಟ್ಟ ಆ ಕೋಡಿಗೆ 'ಬೊಟೆನಿಬೇ' ('ಸಸ್ಯಶಾಸ್ತ್ರದ ಉಪಸಾಗರ'ವೆಂದರ್ಥ.) ಎಂಬ ಹೆಸರನ್ನಿಡಲು ಕಪ್ತಾನ ಕುಕ್‌ನಿಗೆ ಮನಒಲಿಸಿದನು. ಸರ್ ಬ್ಯಾಂಕ್ಸನು, ಸುತ್ತಲಿನ ಪ್ರದೇಶವನ್ನೆಲ್ಲ ಸರಿಯಾಗಿ ನಿರೀಕ್ಷಿಸಿ ನಿವೇದಿಸುವ ಬದಲು, ತನ್ನ ಸಸ್ಯ-ಸಿದ್ಧರಸ್ಯದ ಹರ್ಷದಲ್ಲಿ ಆತನು ಆ ಪ್ರದೇಶದ ಅತಿ ರಂಜಿತ ವರ್ಣನೆಗಳನ್ನು ಪ್ರಕಟಿಸಿದನು. ಇದರ ಫಲವಾಗಿ ಮುಂದೆ ಬ್ರಿಟಿಶ ಸರಕಾರವು ೧೯ ವರ್ಷಗಳ ನಂತರ, ತಮ್ಮ ಕರೇನೀರ ಶಿಕ್ಷೆ ವಿಧಿಸಲಾದ ೭೭೦ ಅಪರಾಧಿಗಳನ್ನು ಅಲ್ಲಿಗೆ ವಸಾಹತು ಮಾಡಿಸಲೆಂದು ಕಳುಹಿಸಿಬಿಟ್ಟಿತು. ಆ ದುರ್ದೈವಿಗಳಿಗೆ ಅಲ್ಲಿ ಬ್ಯಾಂಕ್ಸನು ಬಣ್ಣಿಸಿದ ಬನಸಿರಿಯ ಹುಲ್ಲುಗಾವಲುಗಳ ಬದಲು ಬರೀ ಬಂಜೆಬಿದ್ದ ಜವಳು ಭೂಮಿಯ ಕೆಸರಿನಲ್ಲಿ ಸಿಲುಕಿ ಬೀಳಬೇಕಾಗಿಬಂತು ! ಇರಲಿ.

ಕುಕ್‌ನು ಹಾಗೆಯೇ ಪೂರ್ವ ಕರಾವಳಿಯಗುಂಟ ಮುಂದೆ ಸಾಗಿದನು. ಈ ಕರಾವಳಿಯ ಪ್ರದೇಶವನ್ನು ಅವನು ನ್ಯೂಸೌಥವೇಲ್ಸ ಎಂದು ಕರೆದನು. ಹಾಗೆಯೇ ಮುಂದುವರಿಯುತ್ತ ಅವನು 'ಟ್ರಿಬ್ಯುಲೇಶನ್' (ಉಭಯ ಸಂಕಟ)ವೆಂದು ಹೆಸರಿಟ್ಟ ಭೂಶಿರಕ್ಕೆ ಬಂದನು. ಅಲ್ಲಿ ಅವನು ದುರ್ಧರವಾದ ವಿಪತ್ತಿನಲ್ಲಿ ಅವನ 'ಎಂಡೆವ್ಹರ' ಹಡಗವು ದಂಡೆಯಿಂದ ೨೫ ಮೈಲು ದೂರ, ನೀರಡಿಯ ಹವಳದ ಹಾಳೆಗಳಲ್ಲಿ ಸಿಲುಕಿ ಮಳಲನ್ನು ಕಚ್ಚಿನಿಂತಿತು. ಆಗ ಹಡಗದಲ್ಲಿಯ ಅನವಶ್ಯಕ ವೆನಿಸಬಹುದಾದ ಎಲ್ಲ ಸರಕುಗಳನ್ನು ನೀರಿಗೆ ಒಗೆಯಬೇಕಾಯಿತು. ಆ ಮೇಲೂ, ಅವನ ನಾವಿಕದಲದ ಅಸಮ ಸಾಹಸದಿಂದಲೇ ಆ ಹಡಗವು ತಳಕಿತ್ತಿ ಮತ್ತೆ ನೀರಿಗೆ ತೇಲುವಂತಾಯಿತು. ಅವನು ಅದನ್ನು ಒಂದು ಹೊಳೆಯ ಸೆಳವಿಲ್ಲದ ನೀರಿನಲ್ಲಿ ನುಗ್ಗಿಸಿದನು.

ತನ್ನ ಶೋಧ ಸಂಚಾರದ ಉದ್ದೇಶಗಳನ್ನು ಹೀಗೆ ಬರೆದಿದ್ದಾನೆ. 'ಇಂತಹ ಸೇವೆಯಲ್ಲಿ ಅಜ್ಞಾತ ಸ್ಥಾನಗಳ ಸಂಚಾರದಲ್ಲಿ ಇಂಥ ವಿಷಮ ಸ್ಥಿತ್ಯಂತರಗಳು ಬರತಕ್ಕವೆ. ಮೊತ್ತ ಮೊದಲಿನ ಸಂಶೋಧಕನೆಂಬ ಆನಂದವಿಲ್ಲದಿದ್ದರೆ, ಇಂತಹ ಸಂಕಟಗಳನ್ನೂ ಜೀವನಾವಶ್ಯಕ ಕೊರತೆಯನ್ನೂ ಯಾರೂ ಸಹನ ಮಾಡುವದು ಶಕ್ಯವಿಲ್ಲ.'

ಅಲ್ಲಿಂದ ಮುಂದೆ ಕುಕ್‌ನು ನ್ಯೂಗ್ಯಿನಾಕ್ಕೆ ಸಾಗಿದನು. ಹಿಂದೆ ಡಾಂಪೀರನು ಕಂಡ ಸಮುದ್ರಧುನಿಯೊಳಗಿಂದಲೇ ಹಾಯ್ದು ಹೋಗಿ ಕುಕ್‌ನು ನ್ಯೂಗೀನಾ 'ನ್ಯೂ ಹಾಲಂಡ'ದ ಭಾಗವಲ್ಲವೆಂದು ಕಟ್ಟುನಿಟ್ಟಾಗಿ ಸಿದ್ಧ ಮಾಡಿದನು. ಮನೆಯ

ಾರಿಯಲ್ಲಿ ಮರಳುವಾಗ ಆ ಕಡಲಿನಲ್ಲಿಯು ಕೊನೆಯ ನಿಲ್ದಾಣವು ಕೇಪ ಆಫಗುಡ್
ಹೋಪ (ಶುಭಾಶಾಭೂಶಿರ) ಆಯಿತು. ಆದರೆ ಒಂದು ಮಾತು ನಿಜ. ಈ
ಪ್ರಥಮ ಪರ್ಯಟನದಿಂದ ಕುಕ್‌ನು ದಕ್ಷಿಣದ ಮಹಾಖಂಡದ ಪ್ರಮೇಯವನ್ನು
ಪೂರ್ತಿಯಾಗಿ ಬಿಡಿಸಿದಂತೆ ಆಗಲಿಲ್ಲ. ಆದಾಗ್ಯೂ ಆ ಮಹಾಖಂಡವೆಂಬುದು
ಎಷ್ಟೊಂದು ಪರಿಸೀಮೆಯಲ್ಲಿ ಕಂಡುಬರಬಹುದೆಂಬುದರ ಕ್ಷೇತ್ರವನ್ನು ಅವನ
ಸಾಕಷ್ಟು ಸಂಕುಚಿತವಾಗಿ ಮಾಡಿಕೊಟ್ಟಂತಾಯಿತು.

ುರಳಿ ಬಂದೊಡನೆ ಕುಕ್‌ನು ಲೆಫ್ಟನೆಂಟ ಸ್ಥಾನದಿಂದ ಕಮಾಂಡರನ ಪದವಿಗೆ
ೇರಿಸಲ್ಪಟ್ಟನು. ಶೀಘ್ರದಲ್ಲಿಯೇ-೧೭೭೨ ನೇ ವರ್ಷದ ಜುಲೈ ೧೩ ಕ್ಕೆ ಅವನು
ುತ್ತೆ ಪ್ಲಾಯುಮೌಥದಿಂದ ಕಡಲ ಪಯಣಕ್ಕಾಗಿ ಲಂಗರುಕಿತ್ತಿದನು. ಈಸಲ
ಅವನ ಅಧಿಕಾರದಲ್ಲಿ ಎರಡು ಹಡಗಗಳು ಇದ್ದವು. ಒಂದು ರಿಸೊಲ್ಯೂಶನ್
ಎಂಬುದು, ೪೬೭ ಟನ್ನಿನದೂ, ಇನ್ನೊಂದು ಎಡ್ವೆಂಚರ್ ಎಂಬುವದು, ೩೩
ನ್ನಿನದು. (ಈ ಹಡಗಗಳ ಹೆಸರುಗಳಲ್ಲಿಯೂ ತುಂಬ ಹುರುಳು ತೋರಿಬರುತ್ತದೆ.
ೊದಲು ಪಯಣದ ಹಡಗ ಎಂಡೆವ್ವರ-ಅಂದರೆ ಪ್ರಯತ್ನ; ಈ ಸಲದ
ಯಣದ ಬಲ ರಿಸೊಲ್ಯೂಶನ್ ಅಂದರೆ ನಿರ್ಧಾರ ಮತ್ತು ಎಡ್ವೆಂಚರ್-
ರ್ಥಾತ್ ಸಾಹಸ ಪರಾಕ್ರಮಿಗೆ ಯಶಸ್ಸಿನಿಂದ ಶ್ರೇಯಸ್ಸಿಗೆ ಒಯ್ಯುವ
ೋಪಾನಕ್ಕೆ ಇವೇ ಮೂರು ಮೆಟ್ಟಲುಗಳು-ಪ್ರಯತ್ನ, ನಿರ್ಧಾರ ಮತ್ತು
ಾಹಸ!) ಈ ಸಲ ಅವನು ಒಯ್ದ ನಾವಿಕರ ಸಂಖ್ಯೆ ೧೯೩. ಈಗ ಕುಕ್‌ನು
ೇರವಾಗಿ ಆಫ್ರಿಕೆಯ ದಕ್ಷಿಣ ತುದಿಯ ಕೇಪ ಆಫ್ ಗುಡ್ ಹೋಪಕ್ಕೆ ಹಡಗ
ನ್ನು ಸಾಗಿಸಿದನು. ಅಲ್ಲಿಂದ ಅವನ 'ಮಹಾಯಾನ'ಕ್ಕೆ ಮೊದಲಾಯಿತು.
ಮಹಾಯಾನದ ಉದ್ದೇಶವು ದಕ್ಷಿಣಧ್ರುವ ಪ್ರದೇಶವನ್ನು ತಲುಪುವದಿತ್ತು.
ದಕ್ಕಾಗಿ ಆತನು ಆಗ್ನೇಯ ದಿಕ್ಕಿನಲ್ಲಿ ನಡೆದನು, ಯಾವ ಕ್ಷಣಕ್ಕೂ ತೇಲಿಬರುವ
ರ್ಫದ ಬಂಡೆಗಳಿಗೆ ಅವನ 'ನಿರ್ಧಾರ' 'ಸಾಹಸ'ಗಳು ಅಪ್ಪಳಿಸಿ ಕುಸಿಯು
ಹುದಿತ್ತು. ಆದಾಗ್ಯೂ, ಅವನು ತನ್ನ ಸಾಹಸದ ನಿರ್ಧಾರವನ್ನು
ುಸಿಯಾಗಗೊಡಲಿಲ್ಲ.

್ಪನೆ ಮಾಡಿರಿ. ಅಂತಪಾರವಿಲ್ಲದ ಶೂನ್ಯ ದಿಗಂತದಲ್ಲಿ ಎರಡು ಹಡಗುಗಳು
ಜ್ಞಾತ ಜಲರಾಶಿಯಲ್ಲಿ ನುಗ್ಗಿ ನಡೆದಿವೆ. ಹವಳ ಚಿಪ್ಪುಗಳು ಹುದುಗಿ ಹರಡಿದ
ಲುಗುಂಡ್ಡಗಳನ್ನು ಅತ್ತಿತ್ತ ತಪ್ಪಿಸಿಕೊಳ್ಳುತ್ತ ಬರ್ಫದ ಬಿಳಿಯ ಬಂಡೆಗಳಿಂದ
ಪ್ಪಿಸಿಕೊಳ್ಳುತ್ತ ಅವು ಒಂದರಿಂದೊಂದು ದೂರ ಬೀಳದಂತೆ ಸಾವಕಾಶ ಸಾಗಿವೆ.
ಲಿ. ೪೦೦೦ ಹರದಾರಿ ಕುಕ್‌ನು ದಂಡೆಯು ಆಸೆಯೂ ತೋರದೆ ಹಡಗು

ಸಾಗಿಸುವನು. ಕೊನೆಗೆ ಹೇಗೋ ನ್ಯೂಝಿಲಂಡದ ಒಂದು ಒತ್ತಿನಲ್ಲಿ ಹಡಗವನ್ನು ನಿಲ್ಲಿಸಿ ಅದನ್ನು ಸರಿಪಡಿಸಿ ಸಜ್ಜುಗೊಳಿಸಿ ಹೊರಡುತ್ತಾನೆ. ಏತಕ್ಕಾಗಿ? ಒಂದೆಬಿದ್ದ ಹಡಗವನ್ನು ಹುಡುಕಿಕೊಂಡು ತರಲಿಕ್ಕೆ. ಸುದೈವದಿಂದ ಆ ಹಡಗವೂ ಆಶ್ರಯಕ್ಕಾಗಿ 'ಕ್ವೀನ್ ಶಾರ್ಲೊರ್ಟ್' ಸೌಂಡ್‌ಎಂಬ ಇನ್ನೊಂದು ಒತ್ತಿನಲ್ಲಿ ನಿಂತಿದ್ದನ್ನು ಕಂಡು ಅದನ್ನು ಅವನು ಕೂಡುತ್ತಾನೆ. ಮತ್ತೆ ಮುಂದಿನ ನಡೆಯು ಆರಂಭವಾಗುತ್ತಿದೆ! ಒಮ್ಮೆ ಅವನು, ಆಕಾಶ ಪಾತಾಳಗಳನ್ನು ಕೂಡಿಸಿ ಕಡಲು ಮುಗಿಲುಗಳನ್ನೇ ಏಕಾಕಾರವಾಗಿ ಕಲ್ಲೋಲಗೊಳಿಸುವ ತುಫಾನಿನ ಜಲಸ್ತಂಭಗಳೊಳಗಿಂದ ದಕ್ಷತೆಯಿಂದ ಹಡಗಗಳನ್ನು ಹಾಯಿಸುತ್ತ ಸಾಗರ ಪೃಷ್ಠವನ್ನು ಸೀಳಿ ಸಾಗಿದ್ದಾನೆ. ದೂರದಲ್ಲಿ ಅದೆ ಮುಳುಗಿ ತಗ್ಗಾಗಿ ತೋರುವ ನಡುಗಡ್ಡೆಗಳ ಪುಂಜವು ಸಡಗರದ ತಾಲವೃಕ್ಷಗಳ ಮುಕುಟವನ್ನು ಧರಿಸಿ ಹಸಿರು ಅರಿಸಿಣಗಳಿಂದ ತುಂಬಿ ಅಲಂಕೃತವಾಗಿ ಕಾಣುತ್ತ ಅವನ ಕುತೂಹಲವನ್ನು ಕೆರಳಿಸುತ್ತದೆ. ಹೀಗೆ ಇತ್ತ ದಕ್ಷಿಣ ಗೋಲಾರ್ಧದಲ್ಲಿಯ ಅಜ್ಞಾತ ಅದ್ಭುತಗಳೊಳಗಿಂದ ಕುಕ್‌ನು ಶಾಂತ ಚಿತ್ತದಿಂದ ಮಾರ್ಗಕ್ರಮಣ ಮಾಡುತ್ತಾನೆ.

ಮುಂದೆ ಉತ್ತರಕ್ಕೆ ತಿರುಗಿ ಕುಕ್‌ನು ಈಗ ಫ್ರೆಂಡ್ಲಿ ದ್ವೀಪಗಳೆಂದು ಕರೆಯುವ ಪ್ರದೇಶವನ್ನು ವಶಪಡಿಸಿಕೊಂಡನು. ಹೊಸ ಹೆಬ್ರಾಯಿಡ್ಸ ಗುಂಪನ್ನು ಅವನು ಕಂಡುಹಿಡಿದನು. ಅನಂತರ ನ್ಯೂಕೆಲೆಡೋನಿಯಾ, ನೊರಫೋಕ ಆಯಿಲಂಡ, ಐಲ ಆಫ್ ಪಾಯಿನ್ಸ ಎಂದು ಹೆಸರುಳ್ಳ ದ್ವೀಪಗಳನ್ನು ಅವನೇ ಹೊಚ್ಚ ಹೊಸತಾಗಿ ಶೋಧ ಮಾಡಿದನು. ಅಲ್ಲಿಂದ ಮತ್ತೆ ನ್ಯೂಝಿಲಂಡಕ್ಕೆ ಹಿಂತಿರುಗಿದನು. ಮತ್ತೆ ದಕ್ಷಿಣ ಪ್ಯಾಸಿಫಿಕ್ ವಿಭಾಗವನ್ನೆಲ್ಲ ಸುತ್ತಿ ಸಂಚರಿಸಿದನು. ಅನಂತರ ಅವನು ಮನೆಗೆ (ಇಂಗ್ಲಂಡಕ್ಕೆ) ಮರಳಲು ಹೊರಟನು. ಸೌಥ ಜೊರ್ಜಿಯಾ ದ್ವೀಪವನ್ನು ಮತ್ತೆ ಕಂಡುಹಿಡಿದನು. ಅಲ್ಲಿಂದ ದಕ್ಷಿಣ ಅಟ್ಲಾಂಟಿಕದೊಳಗಿಂದ ಸಾಗಿ ಕೇಪ ಆಫ್ ಗುಡ್ ಹೋಪಿಗೆ ಬಂದನು. ಅಲ್ಲಿಂದ ನೇರವಾಗಿ ತಾನು ಹೊರಟ ಸ್ಥಳವಾದ ಪ್ಲಾಯಿಮೌಥಕ್ಕೆ ಹೋಗಿ ತಲ್ಪಿದನು. ಆ ದಿನ ಜುಲೈ ೨೯, ೧೭೭೫ ನೇ ವರ್ಷ.

ಹೀಗೆ ಮೂರುವರ್ಷಗಳಲ್ಲಿ ಕುಕ್‌ನು ೬೦,೦೦೦ ಮೈಲು ಸಂಚಾರ ಮಾಡಿದನು. ಇಷ್ಟೆಲ್ಲ ದೀರ್ಘ ಪರ್ಯಟನದಲ್ಲಿಯೂ, ಅಂದಿನ ಕಾಲದ ಹಿಂದುಳಿದ ಪಡ ವ್ಯವಸ್ಥೆ, ಆರೈಕೆ ಪೂರೈಕೆಯ ಯೋಜನೆಗಳಲ್ಲಿಯೂ ಅವನೊಡನೆ ಹೋದ ನಾವಿಕ ತಂಡದಲ್ಲಿ ಕೇವಲ ಒಬ್ಬನೇ ಬೇನೆಬಿದ್ದು ಮಡಿದನು. ಇದು ಹೊಸ ಖಂಡವನ್ನು ಶೋಧಿಸಿದಷ್ಟೇ ಅಲೌಕಿಕವಾದ ವಿಜಯವು. ಆ ಕಾಲದಲ್ಲಿ 'ಸ್ಕರ್ವಿ' ಕಜ್ಜಿಯು

ಾವಿಕರಲ್ಲಿ ಮರಣ ಸಂಖ್ಯೆ ವಿಪರೀತವಿರುತ್ತಿತ್ತು. ಹಿಂದೆ ಕುಕ್‌ನು ಸೆಂಟ ಲಾರೆನ್ಸ ದಿಯ ಪರ್ಯವೇಕ್ಷಣೆಯ ಪರ್ಯಟನಕ್ಕೆ ಕಳಿಸಲ್ಪಟ್ಟಾಗ ಅಟ್ಲಾಂಟಿಕವನ್ನು ಾಟುವಷ್ಟರಲ್ಲಿಯೇ ಅರ್ಧದಷ್ಟು ಜನ 'ಸ್ಕರ್ವ್ಹಿ' ಕಜ್ಜಿಯಿಂದ ಕಾಯಿಲೆ ಬಿದ್ದರು. ದನ್ನು ಕುಕ್‌ನು ನೋಡಿದ್ದನು. ನೋಡಿದುದರ ಕಾರಣ ಅದರ ನಿವಾರಣೆಗಳನ್ನು ಳಿದಿದ್ದನು. ಉಪ್ಪಿನಲ್ಲಿಟ್ಟ-ಉಪ್ಪುನೀರು ಸೇರಿದ ಹಂದಿಮಾಂಸವೂ ಉಪ್ಪು ಸ್ಕೀಟುಗಳೂ ಈ ಕಜ್ಜಿಗೆ ಕಾರಣವಾಗಿದ್ದವು ಮತ್ತು ಹಸಿರು ಕಾಯಿಪಲ್ಲೆ ಮತ್ತು ಣ್ಣುಗಳು-ಇವು ಕಡಲಲ್ಲಿ ಇರುವ ತನಕ ಸಿಗಲಾರದ ಸಂಗತಿಗಳು !-ಈ ಕಜ್ಜಿಗೆ ವಾರಣೆಯ 'ರಾಮಬಾಣ'ವೆಂದು, ಕುಕ್‌ನು ತರಕಾರಿಯ ಸತ್ವಗಳನ್ನು ಸೇರಿಸಿದ ಂಬೆ ಮತ್ತು ಸಕ್ಕರೆಯ ಪಾಕದ ಒಂದು ರಸಾಯನವನ್ನು ತಯಾರಿಸಿದನು. ದರ ಜತೆಗೆ, ನಾವಿಕರ ಬಟ್ಟೆ ಬರೆಗಳ ಬಗ್ಗೆ ಅವರ ದೇಹದ ಸ್ವಚ್ಛತೆಯ ಗ್ಗೆಯೂ ಲಕ್ಷವಿತ್ತನು. ಇವೆಲ್ಲ ಸಾಧಾರಣ ಸ್ವಚ್ಛತೆಯ ತತ್ವಗಳು. ಆದರೆ ಆ ುರಿತು ಅವನು ರಾಯಲ ಸೊಸಾಯಿಟಿಯ ಇದುರಿಗೆ ತನ್ನ ಅನುಭವ ಉಪಾಯ ಗಳನ್ನೊಳಗೊಂಡ ಒಂದು ಪ್ರಬಂಧವನ್ನು ಒಪ್ಪಿಸಿದಾಗ ಆ ಸಮಿತಿಗೆ ಅದೊಂದು ಶ್ಚರ್ಯವೇ ಅನಿಸಿತು. ಹೀಗೆ 'ಸ್ಕರ್ವ್ಹಿ' ಕಜ್ಜಿಯನ್ನು ಗೆದ್ದುದಕ್ಕಾಗಿ ಅವನಿಗೆ ಸಂಸ್ಥೆಯು ಕೊಪ್ಲೀ ಮೆಡಲ್ ಎಂಬ ಪದಕವನ್ನು ಅರ್ಪಿಸಿತು !

ುಕ್‌ನ ಎರಡನೆಯ ಜಲಪರ್ಯಟನದ ಫಲವಾಗಿ ಪ್ಯಾಸಿಫಿಕ್ ಮಹಾಸಾಗರದ ೂಪರೇಖೆಗಳು ನಾವು ಇಂದಿಗೆ ತಿಳಿದ ಮಟ್ಟಿಗೆ ನಿಶ್ಚಿತವಾದವು. ಅಲ್ಲದೇ ಅಜ್ಞಾತ ುಹಾ ಭೂಖಂಡವೆಂಬುದು ಕೇವಲ ಅಜ್ಞಾನದ 'ಸುಂದರಕಾಂಡ'ವೆಂಬುದೂ ಂಡಿತವಾಯಿತು. ಅವನು ಅಂದು ಬರೆದ ನಕಾಶೆಗಳು ಇಂದಿಗೂ ಪ್ರಮಾಣ ಾಗಿವೆ-ಮುಖ್ಯಾಂಶಗಳಲ್ಲಿ ಇಂದಿಗೂ ಯಥಾರ್ಥವಾಗಿವೆ. ಹಲ ಕೆಲವು ವಿವರ ಳನ್ನಷ್ಟೇ ನಂತರದ ಶೋಧ ಸಂಚಾರಿಗಳು ಅವುಗಳಲ್ಲಿ ತುಂಬಿರುತ್ತಾರೆ. ಕ್ಷಿಣಧ್ರುವ ಪ್ರದೇಶದಲ್ಲಿ ಮಾಡಿದ ಸಂಚಾರದ ಕುರಿತು ಅವನು ಬರೆದಿದ್ದ ಪ್ಪಣಿಗಳು ಮುಂದೆ ಅನೇಕ ಧ್ರುವಶೋಧಕರ ಸ್ಫೂರ್ತಿಗೆ ಕಾರಣವಾದವು. ಅವನ ೋಧ ಸಂಚಾರಕ್ಕಾಗಿ ಅವನಿಗೆ ದೊರೆತ ಸಂಭಾವನೆಯು ಶೀಘ್ರವಿದ್ದಷ್ಟೇ ಲ್ಪವಿತ್ತು. ಅವನು ಕ್ಯಾಪ್ಟನ್ ಪದವಿಗೆ ಏರಿಸಲ್ಪಟ್ಟನು. ರಾಯಲ್ ೊಸಾಯಿಟಿಯ ಸದಸ್ಯನಾಗಿಯೂ ಮಾಡಲ್ಪಟ್ಟನು.

ುಕ್‌ನ ಮೂರನೆಯ ಜಲಪರ್ಯಟನವು (ಅದೇ ಕೊನೆಯದು) ಅಟ್ಲಾಂಟಿಕದಿಂದ ್ಯಾಸಿಫಿಕ ಮಹಾಸಾಗರಕ್ಕೆ ವಾಯುವ್ಯ ದಿಕ್ಕಿನಲ್ಲಿ ನಡೆದು ಜಗತ್ತಿನ ತಲೆಯ ೇಲಿಂದ ಹೋಗಲು ಜಲಮಾರ್ಗವಿದೆಯೇ ಎಂಬುದನ್ನು ಕಂಡುಹಿಡಿಯಲು

ಕೈಗೊಳ್ಳಲಾಯಿತು. ಈ ಜಲಮಾರ್ಗದ ಶೋಧವು ಸಾಹಸಿಗರಾದ ನಾವಿಕರಿಗೆ ಒಂದು ಮಹಾ ಮೋಹವಾಗಿತ್ತು. ಮಿಕ್ಕ ನಾವಿಕರು ತಾವಾಗಿ ಈ ಸಾಹಸಕ್ಕೆ ದುಡುಕಿದ್ದರು. ಕುಕ್‌ನು ಸರಕಾರದ ಅಪ್ಪಣೆಯಂತೆ ಹೊರಟನು; ಪಶ್ಚಿಮದಿಂದ ಪ್ಯಾಸಿಫಿಕದಲ್ಲಿ ಬ್ಯಾರಿಂಗಸ್ಟ್ರೇಟ್ಸ ಸಾಮುದ್ರಧುನಿಯೊಳಗಿಂದ ಹೋಗಿ ಹಡ್ಸನ್‌ಸ್ಟ್ರೇಟ್ಸದೊಳಗಿಂದ ಹಾಯ್ದು ಉತ್ತರ ಅಟ್ಲಾಂಟಿಕ್‌ವನ್ನು ಸೇರುವ ಯೋಜನೆಯಿಂದ ಸಾಗಿದನು. ಈ ಶೋಧಸಂಚಾರದಲ್ಲಿಯೂ ಸಾಮ್ರಾಜ್ಯವಾದವು ಅಡಕವಾಗಿಯೇ ಇತ್ತು.

೧೭೭೬ ನೇ ಜೂನ ೨೫ ಕ್ಕೆ ಕುಕ್‌ನು ತನ್ನ ಹಳೆಯ 'ರಿಝೊಲ್ಯೂಶನ್' ಮತ್ತು ಹೊಸದೊಂದು 'ಡಿಸ್ಕವರಿ' ಎಂಬ ಎರಡು ಹಡಗುಗಳೊಡನೆ ಹೊರಟನು. ಅಂದಿನಂತೆಯೇ 'ಶುಭಾಶಾಭೂಶಿರ'ವನ್ನು ಮುಟ್ಟಿ ಪ್ಯಾಸಿಫಿಕ್ ಸಾಗರಕ್ಕೆ ಸಾಗಿದನು. ತಾಹಿತಿ ಮತ್ತು ತೊಂಗಾ ದ್ವೀಪಗಳನ್ನು ಕಂಡನು. ೧೭೭೭ ರಲ್ಲಿ ಹೊಸದೊಂದು ದ್ವೀಪಾವಲಿಯನ್ನು ನೋಡಿದನು. ಅದಕ್ಕೆ ಕುಕ್ ದ್ವೀಪಾವಲಿ ಯೆಂದು ಮುಂದೆ ಹೆಸರು ಬಂದಿತು. ಈ ಪರ್ಯಟನದಲ್ಲಿ ಅವನು ಒಂದು ಮಹತ್ವದ ಶೋಧವನ್ನು ಮಾಡಿದನು-ಪ್ಯಾಸಿಫಿಕದಲ್ಲಿಯ ಅತಿ ದೊಡ್ಡ ದ್ವೀಪ ಸಮೂಹವಾದ ಹವಾಯಿ ದ್ವೀಪಾವಲಿಯನ್ನು ಕಂಡುಕೊಂಡನು. ಹಿಂದೆ ೧೫೫೫ ರಲ್ಲಿ ಒಬ್ಬ ಸ್ಪಾನಿಶ್ ನಾವಿಕನು ಅವುಗಳನ್ನು ಹುಡುಕಿತೆಗೆದಿದ್ದನು. ಆದರೆ ಸ್ಪೇನದ ಸರಕಾರವು ಆ ರಹಸ್ಯವನ್ನು ಅತಿ ಭದ್ರವಾಗಿ ಬಚ್ಚಿಟ್ಟ ಮೂಲಕ ಅದು ಶೀಘ್ರದಲ್ಲಿಯೇ ಮರೆತುಹೋಗಿತ್ತು. ಕುಕ್‌ನು ಆ ದೀಪಗಳಿಗೆ ಸ್ಯಾಂಡ್ವಿಚ್ ದ್ವೀಪಗಳೆಂದು ಹೆಸರಿಟ್ಟನು. ಲಾರ್ಡ ಸ್ಯಾಂಡ್ವಿಚ್ ಎಂಬವನು ಅಂದು ಬ್ರಿಟಿಶ ನೌಕಾ ವಿಭಾಗದ ಮುಖ್ಯನಾಗಿದ್ದನು. ಕುಕ್‌ನ ಗೆಳೆಯನೂ ಆಗಿದ್ದನು.

ಮುಂದೆ ಕುಕ್‌ನು ಅಮೇರಿಕೆಯ ಪಶ್ಚಿಮ ದಂಡೆಗುಂಟ ಪಯಣ ಬೆಳೆಸಿದನು. ಹಾಗೆಯೇ ಉತ್ತರಕ್ಕೆ ನಡೆದನು. ತಾನೇ ಹುಡುಕಿ ನೋಡಿ ನಕಾಶಗೊಳಿಸಿದ ಪ್ಯಾಸಿಫಿಕ್ ಕಡಲೊಳಗಿಂದ ಅಜ್ಞಾತವೂ ಹಿಮಮಯವೂ ಆದ ಉತ್ತರಕ್ಕೆ ಮುಂದೆ ಮುಂದೆ ನುಗ್ಗಿದನು. ದಾರಿಯುದ್ದಕ್ಕೂ ಅವನು ಪ್ಯಾಸಿಫಿಕ್‌ದ ಪೂರ್ವ ದಂಡೆಯನ್ನು ಪರಿಶೋಧಿಸಿದನು-ಕ್ಷೇತ್ರ ಮಾಪನೆಯನ್ನು ಮಾಡಿದನು. ಹಾಗೆಯೇ ಬ್ಯಾರಿಂಗಸ್ಟ್ರೇಟ್ಸಗಳೊಳಗಿಂದ ಹಾದು ಮುನ್ನುಗ್ಗಿದನು. ೭೦ ನೇ ಅಂಕ್ಷಾಂಶವನ್ನು ದಾಟಿ ಹೋದನು. ಮುಂದೆ ಮಾತ್ರ ಮಾರ್ಗವು ಕಟ್ಟಾಯಿತು. ನೀರಿನ ಪಾತಳಿಯ ಮೇಲೆ ಕಡಿದಾಗಿ ನಿಂತ ೧೨ ಫೂಟು ಎತ್ತರದ ಬರ್ಫದ ಘನವಾದ ಗೋಡೆಯು ಅವನನ್ನು ಅಡ್ಡಗಟ್ಟಿತು. ಆದ್ದರಿಂದ ಅವನು ಹಿಂದಿರುಗಿದನು. ತಾನು ತಲ್ಪಿದ ಆ

ಕೊನೆಯ ಮಟ್ಟಕ್ಕೆ ಅವನು ಐಸಕೇಪ ಎಂದು ಹೆಸರಿಟ್ಟನು. ತಿರುಗಿ ಬರುವಾಗಲೂ ಅವನು ತನ್ನ ಶೋಧ ಬುದ್ಧಿಯನ್ನು ಬಿಡಲಿಲ್ಲ. ಬರುವಾಗ ಪ್ಯಾಸಿಫಿಕ್‌ವನ್ನು ಅಡ್ಡ ಹಾಯ್ದು ಸೈಬೇರಿಯಾದ ಈಶಾನ್ಯ ದಂಡೆಗುಂಟ ಬಂದನು. 'ಕಾಮಚಾಟಕಾ'ಕ್ಕೆ ತಲ್ಪಿ ಅಲ್ಲಿಂದ ಅಲ್ಯೂಶಿಯನ್ ದ್ವೀಪದೊಳಗಿಂದ ಹಾಯ್ದು ಹವಾಯಿ ದ್ವೀಪಗಳಿಗೆ ಬಂದು ಕೊನೆಗೆ ಮುಟ್ಟಿದನು. ದಾರಿ ಉದ್ದಕ್ಕೂ ಅವಲೋಕಿಸುತ್ತ ಅಭ್ಯಾಸಿಸುತ್ತ ಅಳತೆಗಳನ್ನು ತೆಗೆದುಕೊಳ್ಳುತ್ತ ಎಲ್ಲವನ್ನು ಬರೆದಿಡುತ್ತ ಆ ಕಡಲ ಕಲಿಯು ಬಂದನು.

೧೭೭೯ ಕ್ಕೆ ಜನೇವರಿಯಲ್ಲಿ ಅವನ ಎರಡೂ ಹಡಗಗಳು ಕೀಲಾಕೆಕುವಾ ಎಂಬಲ್ಲಿ ತಳವೂರಿದವು. ನಾವಿಕರೆಲ್ಲ ದಂಡೆಗೆ ಇಳಿದರು. ಇಳಿದಾಗ ಅವರಿಗೆ ಅಲ್ಲಿಯ ಜನ ಚೆನ್ನಾಗಿಯೇ ಸ್ವಾಗತವನ್ನು ಮಾಡಿತು. ಅಲ್ಲಿ ೧೫ ದಿನ ತಂಗಿ, ಅವರು ಮತ್ತೆ ಕಡಲಿಗೆ ಇಳಿದರು. ಆದರೆ ಹವಾಮಾನವು ಪ್ರತಿಕೂಲವಿತ್ತು. ಆದ್ದರಿಂದ ಅವರು ಮತ್ತೆ ತಮ್ಮ ಆ ತಳಕ್ಕೆ ಹಿಂದಿರುಗಬೇಕಾಯಿತು. ಆದರೆ ಈ ಪುನರಾಗಮನದ ಸಮಯ ಅಲ್ಲಿಯ ಆದಿವಾಸಿಗಳ ನಡತೆಯು ವಿಪರೀತವಾಗಿ ಕಂಡಿತು. ತುಡುಗು ಅವರ ವಾಡಿಕೆಯ ಉಪಟಳವಾಗಿತ್ತು. ಆದರೆ ಈ ಸಲ ಅವರ ದರೋಡೆಗಳು ಆಗಾಗ್ಗೆ ಆಗಹತ್ತಿದವು. ಅವರ ಆವಿರ್ಭಾವವೂ ಬಲು ಉಗ್ರವಾಗಿ ತೋರಿತು. ಹಡಗದ ಶಸ್ತ್ರಾಗಾರ ರಕ್ಷಕನ ಉಪಕರಣಗಳನ್ನೂ ಕದ್ದುದಕ್ಕಾಗಿ ಒಬ್ಬ ಆದಿವಾಸಿಯನ್ನು ಥಳಿಸಬೇಕಾಯಿತು. ಆ ರಾತ್ರೆ ಮತ್ತೆ ಅವೇ ಉಪಕರಣಗಳ ಕಳುವು ಆಯಿತು. 'ಡಿಸ್ಕವರಿ' ಹಡಗದ ಒಂದು ಚಿಕ್ಕ ದೋಣಿಯೂ ಜತೆಗೆ ಮಾಯವಾಯಿತು. ಆಗ ಕುಕ್‌ನು ಸ್ವತಃ ದಂಡೆಗೆ ಇಳಿದು ಹೋದನು—ಆ ಆದಿವಾಸಿ ಗಣದ ನಾಯಕನಿಂದ ಇಂಥ ತುಡುಗಿನ ಪಿಡುಗು ಮತ್ತೆ ಬಾರದಂತೆ ಒಬ್ಬನನ್ನು ಜಾಮೀನು ಕೇಳಲಿಕ್ಕೆ. ಆ ಮಾತಿನಕೊನೆಯ ಕಾಲಕ್ಕೆ ಆದಿವಾಸಿಗಳ ನೆರವಿಯು ಕ್ಷುಬ್ಧವಾಗಿ ಕೋಲಾಹಲವೆಬ್ಬಿಸಿತು. ಕುಕ್‌ನೊಡನೆ ಹೋದ ನಾವಿಕರು ಕುಕ್‌ನ ಅಪ್ಪಣೆಯನ್ನು ಲೆಕ್ಕಿಸದೇ ಒಮ್ಮೆಲೇ ಆ ನೆರವಿಯ ಮೇಲೆ ಗುಂಡು ಹಾರಿಸತೊಡಗಿದರು. ಕೂಡಲೇ ಆದಿವಾಸಿಗಳು ತಂಡಗಟ್ಟಿಕೊಂಡು ಈ ನಾವಿಕ ಗುಂಪಿನ ಮೇಲೆ ದಾಳಿ ಇಟ್ಟರು. ಆ ಇಕ್ಕಟ್ಟಿನಲ್ಲಿ ನಾವಿಕರೆಲ್ಲ ಕುಕ್‌ನನ್ನು ಅರಕ್ಷಿತನಾಗಿ ಬಿಟ್ಟು ದೋಣಿಗಳಿಗೆ ಕಾಲು ಕಿತ್ತಿದರು. ಏಕಾಕಿಯಾಗಿ ನಡೆದ ಕುಕ್‌ನು ಕೆರಳಿ ಉಚ್ಚೆದ್ದ ಕಾಡು ಜನರ ಕೈಗೆ ಸಿಕ್ಕನು. ಅವರು ಅವನನ್ನು ಮುತ್ತಿದರು. ಒಬ್ಬನು ಅವನನ್ನು ಹೊಡೆದು ಕೆಡುಹಿದನು; ಇನ್ನೊಬ್ಬನು ಅವನನ್ನು ಈಟಿಯಿಂದ ತಿರಿದನು; ಮೂರನೆಯವನು ಅವನ ತಲೆಯನ್ನು ನೀರಿನಲ್ಲಿ ಮುಳುಗಿಸಿ ಒತ್ತಿ ಹಿಡಿದನು. ಒಬ್ಬರಿಂದೊಬ್ಬರು ಈಟಿಗಳನ್ನು ಸೆಳಕೊಂಡು ಅವನನ್ನು ತಿವಿದು

ತಿವಿದು ತುಂಡರಿಸಿದರು. ದೋಣಿಗಳು ನುಗ್ಗಿಬಂದವು. ಆದರೆ ಅವುಗಳ ಗಲಾಟೆಯಲ್ಲಿ, ಹಡಗದ ಅಧಿಕಾರಿಯು ತಾಳ್ಮೆಗೆಟ್ಟ ರುದ್ರಾವತಾರದ ರಭಸದಲ್ಲಿ ಕುಕ್‌ನ ಶವವೂ ಕೂಡ ಸಿಗದಂತೆ ಆಯಿತು. ಆದನ್ನು ಆದಿವಾಸಿಗಳು ಒಳ್ಳೆ ಉತ್ಸವದಿಂದ-ವೈರಿಯನ್ನು ಕೊಂದೆವೆಂಬ ವಿಜೃಂಭಣೆಯಲ್ಲಿ ಸುಟ್ಟರು. ಕೆಲವು ದಿನಗಳ ನಂತರ ಅವನ ಎಲುಬುಗಳು ಮಾತ್ರ ಸಿಕ್ಕವು. ಅವುಗಳನ್ನು ಅಲ್ಲಿಯೇ ಹೂಳಲಾಯಿತು. ಅನೇಕ ಹೊಸ ದ್ವೀಪಖಂಡಗಳನ್ನು ಆಕ್ರಮಿಸಿದ ಈ ಸಮುದ್ರಗುಪ್ತನು ಕೊನೆಗೆ ಒಂದು ಹೇಳಹೆಸರಿಲ್ಲದ ನಡುಗಡ್ಡೆಯ ಕಾಡು ಕುಗ್ರಾಮದ ಬಳಿಗೆ ತನ್ನವರ ಕಣ್ಣೆದುರಿಗೆ ಕರುಣದಾರುಣವಾದ ದುರ್ಮರಣವು ಬಂದು ಅವನು ತಾನು ಅಳೆದು ಆಳಿ ಅಂಕೆ ನಡಿಸಿದ ಸಮುದ್ರದಲ್ಲಿಯೇ ಗುಪ್ತನಾಗಬೇಕಾಗಿ ಬಂತು ! ಯಾವ ಬಾಳಿಗೆ ಎಂಥ ಕೊನೆ ! ಇಂದಿಗೆ ಅವನ ಎ ಲ ಬು ಗ ಳು ಮಣ್ಣು ತಿಂದಲ್ಲಿ ಒಂದು ಕೋನಾಕೃತಿಯ ಮೊಂಡ ಕಲ್ಲುಗಂಬವು ಕುರುಹಿಗಾಗಿ ನಿಂತಿದೆ. ಆದರೆ ಪ್ಯಾಸಿಫಿಕ್‌ದ ನಕಾಶೆಯೇ ಅವನಿಗೆ ಯೋಗ್ಯವಾದ ಭವ್ಯ ಸ್ಮಾರಕ ! ●

# ಕ್ಯಾಪ್ಟನ್ ಸ್ಕಾಟ್

ಚಿನ್ನದ ಹೆಸರನ್ನು ನಾಗರಿಕತೆಯು ಗೊತ್ತಿದ್ದ ಗಡಿಗಳ ಆಚೆಗೆ ಅಜ್ಞಾತ ಶೂನ್ಯ ನಗಳಲ್ಲೆಲ್ಲ ಒಯ್ದು ನೆಲೆಸುವಂತೆ ಮಾಡಿದ ವಿಶ್ವ-ವಿಜಯಿಗಳಾದ ವೀರರಲ್ಲಿ ಗ್ರಗಣ್ಯನು ಯಾರು ? ರಾಬರ್ಟ ಫಾಕನ್ ಸ್ಕಾಟ. ಬ್ರಿಟಿಶ ಸಾಮ್ರಾಜ್ಯದ ಮೇಲೆ ಸೂರ್ಯನು ಅಸ್ತಮಿಸುವದೇ ಇಲ್ಲವೆಂಬ ಬಿಂಕದ ಮಾತಿದ್ದಿತು. ಆದರೆ 'ಮರೆತುಹೋದ ಸಾಮ್ರಾಜ್ಯ' ವಿಸ್ತಾರದ ಹಿಂದೆ ಯಾವ ಶಕ್ತಿ ಯಾವ ಸ್ಫೂರ್ತಿ ನಿಂತಿತ್ತು ? ನಮ್ಮ ಮುಂಬಯಿ ರಾಜ್ಯದಷ್ಟು ದೊಡ್ಡದಿದ್ದ ಒಂದು ದ್ವೀಪವನ್ನು ಜಾಗತಿಕ ಪ್ರಭುರಾಷ್ಟ್ರವನ್ನಾಗಿ ಮಾಡಿಸಿದ ಆ ಬ್ರಿಟಿಶ ಸಂಶೋಧಕರು, ಶೋಧ ಸಂಚಾರಿಗಳು ಆ ದೇಶದ ಇತಿಹಾಸದ ಸಮುಜ್ಜ್ವಲ ನಿದರ್ಶನಗಳಾಗಿದ್ದಾರೆ. ದಿವ್ಯ ಪುರುಷರಲ್ಲಿ ರಾಬರ್ಟ-ಸ್ಕಾಟನನ್ನು ಕೀರ್ತಿಯಲ್ಲಿಯೂ ಧೈರ್ಯದಲ್ಲಿಯೂ ಮೀರಿಸುವಂಥ ಕಡುಗಲಿಯು ಇನ್ನೊಬ್ಬನಿಲ್ಲ. ಸ್ಕಾಟನ ಜೀವನ ಕಥೆಯು ಹಿಮದಲ್ಲಿ ಬರೆದ ಮಹಿಮಾಮಯ ಮಹಾಕಾವ್ಯವು.

ಇಗ್ಲಂಡವನ್ನು ಸ್ಕಾಟ್ಲಂಡದಿಂದ ವಿಂಗಡಿಸುವ ಗುಡ್ಡಗಾಡಿನ ಸೀಮೆಯು ದಿನಿಂದಲೂ ತೋಳಗಳಂತೆ ಹೋರಾಡಿ ತೋಳತೆಕ್ಕೆಯಲ್ಲಿ ದೇಶದ ದೈವವನ್ನೇ ಡುಗುವ ಬಂಟರ ತೊಟ್ಟಿಲು.-ಪೂರ್ವ ಶತಮಾನಗಳಲ್ಲಿ ಅಲ್ಲಿಯ 'ಕಾರಹೆಗ್ಗಡೆ' ಲ್ಲೆಲ್ಲರೂ ಅರಹೊಟ್ಟೆ ಉಂಡರೂ, ಬಡಕ ಕುದುರೆಗಳನ್ನು ಏರಿ, ಬೇಟೆಯ ಯಿಗಳಿಂದ ಹಿಂಬಾಲಿಸಿಕೊಳ್ಳುತ್ತ, ನೂರು ರೈತರಿಂದ ನೂರು ವಿಧವಾಗಿ, ರುಪೌಂಡುಗಳನ್ನು ಎತ್ತುವಳಿ ಮಾಡಲು ನೂರು ಕಷ್ಟಗಳನ್ನು ಪಡುತ್ತ, ತಿಗೊಂದು ಜಗಳ ತೆಗೆದು, ಪ್ರತಿಜಗಳಕ್ಕೂ ಕತ್ತಿಗಳನ್ನೆಳೆದು, ತಲೆತಲಾಂತರ ಹೋರಾಡುವ ಹಟಮಾರಿಗಳಿದ್ದರು.

ಪ್ಟನ್ ಸ್ಕಾಟನ ಪೂರ್ವಜರು ಇದೇ ಗಡಿನಾಡಿನ ಬಣದವರು. ಅಂದಿನ ಕ್ರಾಂತಿಪರ್ವವು ಮುಗಿದು ಕ್ರಮೇಣ ಸುಧಾರಣೆಯ ಸಭ್ಯ ಲೋಕ ಮಯುಗವು ಬಂದಾಗ ಈ ಹುರುಪಿನ ಜನರ ವಂಶಜರು ತೆಪ್ಪಗೆ ಕೂಡುವದು ಸ್ಯವಾಯಿತು. ನಡೆದಷ್ಟುಕಾಲ ಬ್ರಿಟಿಶರ ಪ್ರಭುತ್ವದ ವಿರುದ್ಧ ತಮ್ಮ ವರ್ಗಗಳ ರಕ್ಷಣೆಗಾಗಿ ಕಾದಾಡಿದ ಈ ಬಂಟರು ಮುಂದೆ ಹೊಸ ಯುಗದಲ್ಲಿ ಶರ, ಪ್ರಭುತ್ವವನ್ನು ಕಾದಿಡಲು ಖಡ್ಗವೆತ್ತಿ ಸರಕಾರದ ಸೈನ್ಯವನ್ನು ದರು. ನಮ್ಮಲ್ಲಿಯ ಸೀಖ, ಗುರ್ಖಾ ವೀರರಂತೆ, ಬ್ರಿಟಿಶ ಸಾಮ್ರಾಜ್ಯವನ್ನು

ವಿಸ್ತರಿಸಲು ಬ್ರಿಟಿಶರಿಗಿಂತ ಸ್ಕಾಟಿಶ ಜನರೇ ಹೆಚ್ಚು ಕಾರಣರು. ಆ ಪರಿಪಾಟಿ ಒಂದೇ ಒಂದು ಅಪವಾದವಿತ್ತು.

ಆ ಅಪವಾದವು ಜಾನ ಎಡ್ವರ್ಡ ಸ್ಕಾಟನದು. ಜಾನನ ಪ್ರಕೃತಿಯು ಕೋಮಲ ವಿದ್ದುದರಿಂದ ಮನೆತನದ ಉದ್ಯೋಗವನ್ನೇ ಮುಂದುವರಿಸಲು ಹಿಂದೆ ಉಳಿದನು. ಪ್ಲೀಮೌಥದಲ್ಲಿ ಅವರ ಮನೆತನವು ಮದ್ಯವನ್ನು ಭಟ್ಟಿ ಇಳಿಸುತ್ತಿತ್ತು. ಅದೇ ವ್ಯವಸಾಯವನ್ನು ಜಾನನು ಸಾಗಿಸಹತ್ತಿದನು.

ಈ ಸ್ಕಾಟನಿಗೆ ೬ ಮಕ್ಕಳಾದರು. ಅವರಲ್ಲಿ ಹೆಣ್ಣು ಮಕ್ಕಳೇ ನಾಲ್ಕು. ಉಳಿದ ಇಬ್ಬರಲ್ಲಿ ರಾಬರ್ಟ ಫಾಕನ್ ಸ್ಕಾಟನು ಹಿರಿಯವನು. ಅವನಿಗೂ ೨ ವರ್ಷದಿಂದ ಕಿರಿಯು ಅರ್ಚಿಬಾಲ್ಡನು. ಇವರಿಬ್ಬರೂ ತಮ್ಮ ಕುಲದ ಪರಾಕ್ರಮ ಪರಂಪರೆಯನ್ನು ಮತ್ತೆ ಮುಂದರಿಸಿದರು. ರಾಬರ್ಟನು ಹಡಗುಪಡೆಯನ್ನು, ಅರ್ಚಿಬಾಲ್ಡನು ಸೈನ್ಯವನ್ನು ಸೇರಿ ಶಸ್ತ್ರೋಪಜೀವಿಗಳಾದರು.

ರಾಬರ್ಟನು ೧೮೬೮ನೇ ವರ್ಷ ಜೂನ ೬ ನೇ ದಿನ ಡೆವ್ಹೊನಪೋರ್ಟ ಎಂಬಲ್ಲಿ ಹುಟ್ಟಿದನು. ಅವನು ೮ ವರ್ಷದವನಾಗುವವರೆಗೂ ಒಬ್ಬ ಗವ್ಹರ್ನೆಸ (ಗೃಹ ಶಿಕ್ಷಣದ ಪರಿಚಾರಿಕೆ) ಮನೆಯಲ್ಲಿಯೇ ಓದು ಬರಹವನ್ನು ಕಲಿಸಿದಳು. ಅನಂತರ ಸ್ಟೋಕಡಿಮೆರಲ ಎಂಬಲ್ಲಿ ಶಾಲೆಗೆ ಹೋಗಲಾರಂಭಿಸಿದನು. ಮುಂದೆ ಅವನು ಫಾರಹ್ಯಾಮ ಎಂಬಲ್ಲಿ ಸ್ಟುಟಿಂಗಟನಹೌಸ ಎಂಬ ವಿದ್ಯಾಲಯವನ್ನು ಸೇರಿದನು. ಮುಂದೆ ೧೩ ವರ್ಷ ಪ್ರಾಯಕ್ಕೆ ನಾವಿಕ ವಿದ್ಯಾರ್ಥಿಯಾಗಿ ಬ್ರಿಟಾನಿಯಾ ಹಡಗದಲ್ಲಿ ಪ್ರವೇಶವನ್ನು ಪಡೆದನು. ೧೮೮೩ ರಲ್ಲಿ ಆ ಹಡಗದಿಂದ ಬೊಅಡಿಸಿಯಾ ಎಂಬ ಹಡಗಕ್ಕೆ ಮಿಡ್‌ಶಿಪ್‌ಮನ್ ಎಂಬ ಅಧಿಕಾರಕ್ಕೆ ವರ್ಗವಾಯಿತು. ಅಲ್ಲಿ ೨ ವರ್ಷ ಇದ್ದು ಅವನು ಮೊನಾರ್ಕ ಎಂಬ ಹಡಗದಲ್ಲಿ ೩ ತಿಂಗಳು ದುಡಿದನು. ಅನಂತರ ರೋವ್ಹರ ಎಂಬ ಹಡಗಕ್ಕೆ ವರ್ಗಾಯಿಸಲ್ಪಟ್ಟನು. ಈ ಹಡಗವೂ ಇತರ ಕೆಲವೂ ನಾವಿಕ ವಿದ್ಯೆಯ ತರಬೇತಿಯು ಪಡೆಯುವೂ ಇದ್ದವು. ಆ ಪಡೆಯ ಸರ್ವಾಧಿಕಾರಿ ಕೊಮೋಡರ ಸರ್ ಅಲ್ಬರ್ಟ ಹೇಸ್ಟಿಂಗ್ಸ ಮಾರ್ಕ್ಯಾಮ. ಇವನು ಧ್ರುವ ಪ್ರದೇಶದ ಪರಿಶೋಧಕ ಜಲಪರ್ಯಟಕನಿದ್ದನು. ಇವನ ಆಪ್ತ ಸರ್ ಕ್ಲಿಮೆಂಟ್ಸ ಮಾರ್ಕ್ಯಾಮನು ಆಗ ಜಿಯೊಗ್ರಾಫಿಕಲ ಸೊಸಾಯಿಟಿಯ ಅಧ್ಯಕ್ಷನಾಗಿದ್ದನು. ಅವನು ಹೆಸರಾದ ಭೂಚರಿತ್ರಕಾರನೂ ಇತಿಹಾಸಕಾರನೂ ಆಗಿದ್ದನು. ನಮಗೆ ಇವನ ಉಲ್ಲೇಖದ ಮಹತ್ವವೇನೆಂದರೆ ಮುಂದೆ ಸ್ಕಾಟನ 'ಡಿಸ್ಕವರಿ' ಹಡಗದ ಶೋಧಯಾತ್ರೆಯ ಯೋಜನೆಗೆ ಇವನೇ ಕಾರಣವಾದನು.

ಮ್ಮೆ ಸರ್‌ಕ್ಲಿಮೆಂಟ್ಸನು ಈ ತರಬೇತಿ ಪಡೆಗೆ ಭೆಟ್ಟಿ ಇತ್ತನು. ಆಗ ಅವನು ನನ ಸ್ಕಾಟನನ್ನು ಕಂಡು ಮೆಚ್ಚಿದನು. ದಕ್ಷಿಣಧ್ರುವ ಪ್ರದೇಶದ ಪರಿಶೋಧನೆಗಾಗಿ ೊಡುವ ಕಾರ್ಯ ಯೋಜನೆಗೆ ಯೋಗ್ಯ ಅಧಿನಾಯಕನನ್ನು ಆರಿಸಲಿಕ್ಕೆಂದೇ ಮೆಂಟ್ಸ ಸ್ಕಾಟನಿದ್ದ ಪಡೆಗೆ ಬಂದಿದ್ದನು. ಆದರೆ ಇದು ಸ್ಕಾಟನಿಗೆ ಗೊತ್ತಿದ್ದಿಲ್ಲ. ಭೆಟ್ಟಿಯಲ್ಲಿಯೇ ಕ್ಲಿಮೆಂಟ್ಸನ ಆಯ್ಕೆಯು ಸ್ಕಾಟನ ದೈವವೂ ನಿರ್ಧಾರವಾಯಿತು. ರ್‌ಕ್ಲಿಮೆಂಟ್ಸನು 'ಮೌನದ ನಾಡು' ಎಂಬ ಒಂದು ಪುಸ್ತಕವನ್ನು ಬರೆದಿದ್ದಾನೆ. ದರಲ್ಲಿ ಹೀಗೆ 'ನನ್ನ ಆಪ್ತ ಕೊಮೋಡರ ಸರ್ ಮಾರ್ಕ್ಹಾಮನ ಅತಿಥಿಯಾಗಿ ನು ಹೋದಾಗಲೇ ಅಂದು ೧೮೮೭ ರಲ್ಲಿ ನನಗೆ ತಕ್ಕವನಾದ ಅತಿ ಯೋಗ್ಯ ಕಾ ನಾಯಕನನ್ನು ಮನಸ್ಸಿನಲ್ಲಿಯೇ ಆರಿಸಿಕೊಂಡಿದ್ದೆನು......೫ನೇ ದಿನ ಅವನು ಸ್ಕಾಟನು) ನಮ್ಮೊಡನೆ ಭೋಜನವನ್ನು ಮಾಡಿದನು. ಆಗ ಅವನು ಬರೆ ೧೮ ರ್ಷದ ತರಳ. ಆದಾಗ್ಯೂ ಅವನ ಬುದ್ಧಿಮತ್ತೆ, ಬಹುಶ್ರುತ ಪರಿಜ್ಞಾನ ಮತ್ತು ಡೆ-ನುಡಿಯ ಸಭ್ಯವೃತ್ತಿಯ ಮೋಹಕತನ ಇವುಗಳಿಂದ ನಾನು ಬಹಳ ಪ್ರಭಾವಿತ ದೆನು. ಆ ಸಂಕಲ್ಪಿತ ಯೋಜನೆಯ ನಾಯಕತ್ವವನ್ನು ನಿರ್ವಹಿಸುವಂಥವನು ಕಟನೇ ಎಂದು. ಮುಂದೆ ವ್ಹಿಗೊ ಎಂಬಲ್ಲಿ ನಾವಿಬ್ಬರೂ ಮತ್ತೆ ಒಟ್ಟಿಗೆ ಬಂದೆವು. ಗ ಈ ತರುಣ ಮಿತ್ರನು ಎಂಪ್ರೆಸ್ ಆಫ್ ಇಂಡಿಯಾ ಎಂಬ ಹಡಗದ ಜಲಸುರಂಗ ಾತೆಯ ಲೆಫ್ಟನಂಟನಿದ್ದನು. ಅವನ ಅಂಥ ನಾಯಕತ್ವದ ಸ್ಪಷ್ಟವಾದ ಪಾತ್ರತೆ ನ್ನು ಕಂಡು ನಾನು ಇನ್ನಿಷ್ಟು ಪ್ರಭಾವಿತನಾದೆನು.'

೮೮ ರಲ್ಲಿ ಬ್ರಿಟಿಶ ಕೋಲಂಬಿಯಾದಲ್ಲಿ ನಿಲ್ಲಿಸಿದ ಎಂಫಿಯನ್ ಯುದ್ಧ ಡಗಕ್ಕೆ ಸ್ಕಾಟನು ವರ್ಗಾಯಿಸಲ್ಪಟ್ಟನು. ಈ ಸಂದರ್ಭದಲ್ಲಿ ತನ್ನ ಯೋಗ್ಯತೆ ನ್ನು ತೀರ್ಮಾನಿಸಬಲ್ಲ ತಜ್ಞರ ತಿಳುವಳಿಕೆಗೆ ತಂದು ಕೊಡುವಂತೆ ಆಯಿತು. ಹಿಮ ಷ್ಟಿಯ ಮೂಲಕ ರೇಲು ಕಟ್ಟಾದ್ದರಿಂದ ಸಾನ್‌ಫ್ರಾನ್ಸಿಸ್ಕೊದಿಂದ ಅಲಾಸ್ಕಾಕ್ಕೆ ನು ಒಂದು ಪ್ಯಾಸೆಂಜರ ಹಡಗವನ್ನೇರಿ ಹೋಗಬೇಕಾಗಿ ಬಂದಿತು. ಆ ಹಡಗವು ಪಯಣಿಗರಿಂದ ಕಿಕ್ಕಿರಿದು ತುಂಬಿತ್ತು. ಹೋಗುವಾಗ ಅದು ಬಿರು ಳಿಗೆ ಒಳಪಟ್ಟಿತು. ಆಗ ಹಡಗದಲ್ಲಿ ಕೋಲಾಹಲವು ಹೇಳತೀರದು. ಪ್ರತಿ ಬ್ಬನಿಗೂ 'ಕಡಲಬೇನೆ' (ಓಕರಿಕೆ ಕಾರಾಟ) ಪೀಡಿಸಿತು. ಅದಕ್ಕೆ ಸ್ಕಾಟನೂ ರಲಿಕ್ಕಿಲ್ಲ. ಹಡಗದಲ್ಲಿ ಅವ್ಯವಸ್ಥೆಯ ಅರಾಜಕತೆ ಹಬ್ಬಿತು. ಪರಿಚಾರಕರಿಗೆ ಟ ಹಂಚಲು ಸಾಧ್ಯವಾಗಲಿಲ್ಲ. ಹೆಂಗಸರು ಮಕ್ಕಳು ಅಲ್ಲಲ್ಲಿ ಕೆಳಹಲಗೆಗಳ ಲೆ ಕೈಕಾಲು ಚಾಚಿ ಬಿದ್ದು ಉರುಳುತ್ತಿದ್ದರು. ಆಗ ಸ್ಕಾಟನು ಮುಂದೆ ದನು. ಆಗ ಅವನ ವಯಸ್ಸು ೨೦. ಆ ಹಡಗದಲ್ಲಿ ಅವನಿಗೆ ಯಾವ ಕಾರವೂ ಇದ್ದಿಲ್ಲ. ಆದರೆ ಸತ್ವದ ಸತ್ತೆಯು ಎಲ್ಲೂ ನಡೆಯುತ್ತದೆ. ಹಡಗದಲ್ಲಿ

ಕ್ಯಾಲಿಫೋರ್ನಿಯಾದ ಕಣಿಗೆಲಸದವರು ಅನೇಕರು ಇದ್ದರು. ಅವರ ಶುಶ್ರೂಷಾ ಪಥಕಗಳನ್ನು ಸ್ಕಾಟನು ಕಟ್ಟಿದನು. ಕಾರಾಟ ಚೀರಾಟವಲ್ಲಿ ನರಳುವ ಹೆಂಗಸು ಮಕ್ಕಳನ್ನೆಲ್ಲ ಕ್ರಮವಾಗಿ ನಿಯಮಿತವಾಗಿ ಉಪಚರಿಸುವ ಕಾರ್ಯವನ್ನು ಅವನು ಕೈಗೊಂಡನು. ಕಾವಲು ಇಡಲು, ಮೈತೊಳೆಯಲು, ಉಡಿಗೆ ತೊಡಿಸಲು, ಆಹಾರ ಪೂರೈಸಲು ಹೀಗೆ ಬೇರೆ ಬೇರೆ ದಲಗಳನ್ನು ಮಾಡಿ ಪರಿಚರ್ಯೆಯ ಪಾರುಪತ್ಯವನ್ನು ನಡೆಯಿಸಿದನು. ಅಂದು ಆ ಪುಟ್ಟ ಹಡಗದಲ್ಲಿ ಕಂಡುಬಂದ ಗುಣಗಳೇ ಮುಂದೆ ಪೂರ್ಣ ಕಲೆಯಿಂದ ವಿಶ್ವವನ್ನೇ ವಿಸ್ಮಯಗೊಳಿಸುವಂತೆ ಸ್ಕಾಟನ ಯಶಸ್ ಚಂದ್ರಿಕೆಯಾಗಿ ಬೆಳಗಿದವು.

ಎಂಫಿಯನ್ ಹಡಗದ ಚಾಕರಿ ಮುಗಿಸಿ, ಬ್ರಿಟಿಶ ಕೋಲಂಬಿಯಾದ ಎಸ್ಕ್ವಿಮೊಲ್ಟ ದಿಂದ ಮರಳಿದಾಗ (೧೮೯೧ ರಲ್ಲಿ) ಅವನು ಪೂರ್ತಿ ಲೆಫ್ಟನಂಟ ಪದವಿಗೆ ಏರಿದ್ದನು. ಅವನ ಹೊಸ ಅಧಿಕಾರ ವ್ಹರ್ನೊನ್ ಯುದ್ಧ ನೌಕೆಯಮೇಲೆ ಆಯಿತು. ಪೋರ್ಟ್ಸ್‌ಮೌಥದಲ್ಲಿ ಜಲಸುರಂಗ ವಿದ್ಯೆಯ ಶಿಕ್ಷಣಕೇಂದ್ರದಲ್ಲಿ ಅವನನ್ನು ನೇಮಿಸಲಾಯಿತು. ಜಲಸುರಂಗ ಪ್ರಯೋಗದಲ್ಲಿಯೇ ಸ್ಕಾಟನು ವಿಶೇಷ ತಜ್ಞತೆಯನ್ನು ಪಡೆಯುವವನಿದ್ದನು. ಮುಂದೆ ಜಲಸುರಂಗ ದಲಪತಿಯ ಅಧಿಕಾರಗಳು ಅವನ ಪಾಲಿಗೆ ಬಂದವು.

೧೮೯೯ ರ ಜೂನ ತಿಂಗಳಲ್ಲಿ ಸ್ಕಾಟನು ರಜೆಯನ್ನು ಪಡೆದು ಲಂಡನ್ನಿಗೆ ಬಂದಿದ್ದನು. ಆಗ ಮತ್ತೆ ಸರ್ ಕ್ಲಿಮೆಂಟ್ಸ ಮಾರ್ಕ್ಯಾಮನನ ಭೆಟ್ಟಿಯಾಯಿತು. 'ಡಿಸ್ಕವರಿ ಹಡಗದ ಕಡಲು ಪಯಣ'ವೆಂಬ ತನ್ನ ಪುಸ್ತಕದಲ್ಲಿ ಸ್ಕಾಟನೇ ಈ ಭೆಟ್ಟಿಯನ್ನು ಪ್ರಸ್ತಾವನೆಯಲ್ಲಿ ಬಣ್ಣಿಸಿದ್ದಾನೆ 'ಬಕಿಂಗಹ್ಯಾಮ ಅರಮನೆಯ ಹಾದಿಯಗುಂಟ ಬರುತ್ತಿರುವಾಗ ಸರ್ ಕ್ಲಿಮೆಂಟ್ಸನು ಹೋಗುತ್ತಿರುವದನ್ನು ನೋಡಿದೆನು. ಕೂಡಲೇ ಸಹಜವಾಗಿ ಅವನನ್ನು ಹೋಗಿ ಸೇರಿಕೊಂಡು ಅವನೊಡನೆ ಅವನ ಮನೆಗೆ ಮರಳಿದೆನು. ಆ ದಿನ ಸಂಜೆಗೆ ನನಗೆ ಮೊತ್ತಮೊದಲು ಗೊತ್ತಾಯಿತೇನೆಂದರೆ, ದಕ್ಷಿಣ ಧ್ರುವ ಪರಿಶೋಧನೆಯ ಪರ್ಯಟನ ಎಂಬುವ ದೊಂದು ಯೋಜನೆಯು ಉಂಟು. ಎರಡು ದಿನಗಳನಂತರ ಆ ಪರ್ಯಟನದ ಪಡೆಗೆ ಕಮಾಂಡರನಾಗಿ ನನ್ನನ್ನು ನೇಮಿಸಬೇಕೆಂದು ನಾನು ವಿಜ್ಞಾಪನೆಯನ್ನು ಅವನ ಹೇಳಿಕೆಯಂತೆ ಬರೆದು ಕಳುಹಿಸಿದೆನು.'

ಒಂದು ವರ್ಷದನಂತರ ೧೯೦೦ ರ ಜೂನ ತಿಂಗಳಲ್ಲಿ ಅವನು ಕಮಾಂಡರನೆಂದು ಸಾರಲಾಯಿತು. ಆ ಪರ್ಯಟನೆಯ ಯೋಜನೆಯು ಕಾರ್ಯರೂಪಕ್ಕೆ ಬರುವದು ನಿಶ್ಚಿತವಾಗಿದ್ದರಿಂದಲೇ ಅಂಥ ಸೂಚನೆಯನ್ನು ಕ್ಲಿಮೆಂಟ್ಸನು ಮಾಡಿದನು. ಈ

ಶೋಧ ಸಂಚಾರಕ್ಕಾಗಿ ಸಾಕಷ್ಟು ನಿಧಿಯು ಕೂಡಿತ್ತು. ಲೆಪ್ಲಿನ್ ಲಾಂಗಸ್ಟಾಫ ಎಂಬ ಧನಿಕನು ೨೫೦೦೦ ಪೌಂಡು ದಾನ ಮಾಡಿದ್ದನು. ಬ್ರಿಟಿಶ ಅರ್ಥ ಮಂತ್ರಿಯಾದ ಬಾಲ್ಫೊರನು, ಈ ಯೋಜನೆಗಾಗಿ ಸಾರ್ವಜನಿಕರು ಕೂಡಿಸುವ ಪ್ರತಿ ಪೌಂಡಿಗೆ ಸರಕಾರವು ಪ್ರತಿಯಾಗಿ ಒಂದು ಪೌಂಡನ್ನು ಕೂಡಿಸಿ ಕೊಡುವದೆಂದು ಘೋಷಣೆ ಮಾಡಿದನು; ಹೀಗೆ ಒಟ್ಟು ೯೨೦೦೦ ಪೌಂಡು ನಿಧಿಯು ಕೂಡಿತು ಮತ್ತು 'ಡಿಸ್ಕವರಿ' ಎಂಬ ಹಡಗವನ್ನು ಪ್ರತ್ಯೇಕವಾಗಿ ಕಟ್ಟಲಾಯಿತು.

ಸಂಚಾರಕ್ಕೆ ಹೊರಡುವ ಮುನ್ನ ಮಾಡಬೇಕಾದ ಕೆಲಸವು ವಿಪರೀತವಿತ್ತು. ಅದಕ್ಕಾಗಿ ಸ್ಕಾಟನನ್ನು ಈ ಕಾರ್ಯ ಯೋಜನೆಯ ಮೇಲ್ವಿಚಾರಣೆಗಾಗಿ ನಿತ್ಯದ ಚಾಕರಿಯಿಂದ ಬಿಡುಗಡೆಮಾಡಿದರು. ಅವನ ಆಗ್ರಹದಿಂದ ಎಲ್ಲ ಚಿಕ್ಕ ದೊಡ್ಡ ನಾವಿಕ ಅಧಿಕಾರಿವರ್ಗವು ಹಡಗುಪಡೆಯ ಚಾಕರರೊಳಗಿಂದಲೇ ಆಯ್ದುಕೊಳ್ಳಲಾಯಿತು. ಅನಂತರ ಸ್ಕಾಟನು ನಾರ್ವೆಗೆ ಹೋಗಿ ಡಾ. ಫ್ರಿಡರ್ಶೋಫ ನಾನ್‌ಸೆನ್ ಎಂಬ ಧ್ರುವ ಸಂಚಾರದ ತಜ್ಞನ ಲಾಭವನ್ನು ಪಡೆದು ಬಂದನು.

೧೯೦೧ ರಲ್ಲಿ 'ಡಿಸ್ಕವರಿ' ಹಡಗವು ಸಜ್ಜಾಗಿ ಹೊರಟಿತು. ದಕ್ಷಿಣ ಧ್ರುವ ಪ್ರದೇಶದ ಒಳಭಾಗವನ್ನೆಲ್ಲ ಸುತ್ತಿ 'ದಕ್ಷಿಣ ವಿಕ್ಟೋರಿಯಾ ಲ್ಯಾಂಡ' ಎಂಬ ಭೂಭಾಗದ ಕ್ಷೇತ್ರ ಪರ್ಯವೇಕ್ಷಣೆಯನ್ನು (ಸರ್ವೆ ಮಾಡಿ ಕಿಂಗ ಎಡ್ವರ್ಡ ಸೆವೆಂಥ ಎಂದು ಹೆಸರಿಡಲಾದ ಭೂಮಿಯನ್ನು ಕಂಡು ಹಿಡಿದು. ರೊಸ್ಸ ಸಮುದ್ರದ ಆಳವನ್ನು ಅಳೆದು, ಬರ್ಫದ ಒಡ್ಡು ಹಾಳೆಯ ನಿರೀಕ್ಷಣೆಯನ್ನು ಮಾಡಿ, ಈ ಮಹತ್ಪ್ರಯಾಸದ ಮಹಾ ಪ್ರವಾಸವನ್ನು ೨ ವರ್ಷ ೨ ತಿಂಗಳುಗಳಲ್ಲಿ ಯಶಸ್ವಿಯಾಗಿ ಮುಗಿಸಿ ೧೯೦೪ ರಲ್ಲಿ ಡಿಸ್ಕವರಿಯು ಹಿಂದಿರುಗಿ ಬಂತು. ಅವನು ದಂಡೆಗೆ ತಲ್ಪಿದೊಡನೆಯೇ ಅವನನ್ನು ಕ್ಯಾಪ್ಟನ್ ಪದವಿಗೆ ಏರಿಸಲಾಯಿತು. ಅವನ ಮೇಲೆ ಸನ್ಮಾನ ಗೌರವಗಳ ಸುರಿಮಳೆ ಆಯಿತು; ಅರಸರು ಬಾಲ್ಮೊರಲ ಅರಮನೆಗೆ ಆಮಂತ್ರಿಸಿದರು. ಅಲ್ಲಿ ಚಕ್ರವರ್ತಿ ಮುಖ್ಯ ಪ್ರಧಾನರ ಸನ್ಮುಖದಲ್ಲಿ ಸ್ಕಾಟನು ತನ್ನ ಅನುಭವಗಳ ಕುರಿತು ಒಂದು ಭಾಷಣವನ್ನು ಮಾಡಿದನು. ಪರರಾಷ್ಟ್ರಗಳೂ ಅಲ್ಲಿಯ ಭೂಚರಿತ್ರ ಶಾಸ್ತ್ರಜ್ಞರ ಮಂಡಳಗಳೂ ಅವನಿಗೆ ಪದಕಗಳನ್ನು ಮನ್ನಣೆಯ ಬಿನ್ನವತ್ತಳೆಗಳನ್ನು ಅರ್ಪಿಸಿದವು. ಲಂಡನ್ ಟೈಮ್ಸ ಪತ್ರಿಕೆಯು ೧೯೦೪ ರ ಸಪ್ಟೆಂಬರ ೧೦ ರ ಸಂಚಿಕೆಯ ಅಗ್ರಲೇಖದಲ್ಲಿ ಈ ಶೋಧಸಂಚಾರದ ಕುರಿತು ಹೀಗೆ ಬರೆಯಿತು.

ಕಮಾಂಡರ ಸ್ಕಾಟನ ನೇತೃತ್ವದಲ್ಲಿಯ ಈ ಶೋಧಸಂಚಾರವು ಈ ವರೆಗೂ ಉತ್ತರ ಅಥವಾ ದಕ್ಷಿಣ ಧ್ರುವಗಳ ಪ್ರದೇಶಗಳಲ್ಲಿ ಸಾಹಸದಿಂದ ನುಗ್ಗಿದ ಎಲ್ಲ

ಪ್ರಯತ್ನಗಳಲ್ಲಿ ಅತ್ಯಂತ ಯಶಸ್ವಿಯಾಗಿದೆ. ತನಗೆ ಹಾಕಿಕೊಟ್ಟ ಸೂಚನೆಗಳನ್ನೆಲ್ಲ ಪ್ರಾಮಾಣಿಕವಾಗಿ ನೆರವೇರಿಸಿರುವನಷ್ಟೇ ಅಲ್ಲ, ಅದಕ್ಕೂ ಹೆಚ್ಚನ್ನೂ ಸಾಧಿಸಿರುತ್ತಾನೆ. ಜಗತ್ತಿನ ಭೂಪಟಕ್ಕೆ ಅವನು ಇದುವರೆಗೆ ಕೇವಲ ಕಲ್ಪಿತವೆನಿಸಿದ್ದ ದಕ್ಷಿಣ ಧ್ರುವ ಪ್ರದೇಶದ ದೀರ್ಘವೂ ಅವಿಚ್ಛಿನ್ನವೂ ಆದ ಕರಾವಳಿಯನ್ನು ಒಳಪಡಿಸಿರುತ್ತಾನೆ. ಸ್ಲೆಜ್ಜು-ಜಾರುಬಂಡೆಗಳ ಮೇಲೆ ಕೂತು ಅವನು ಅಲ್ಲಿ ದಕ್ಷಿಣ ಪೂರ್ವ ಪಶ್ಚಿಮಗಳಲ್ಲಿ ನಡೆಯಿಸಿದ ಪರಿಶೋಧನೆಯ ಪ್ರವಾಸಗಳು ಆ ಪ್ರದೇಶದ ಒಳಭಾಗದ ಸ್ವರೂಪವನ್ನು ಸಾಕಷ್ಟು ಹೊರಗೆಡವಿದೆ. ಮರಳುವಾಗ ತಂದ ಶಾಸ್ತ್ರೀಯವಾದ ವಸ್ತುಗಳ ಸಂಗ್ರಹವು ಆ ಶೂನ್ಯ ಸ್ಥಾನದ ಇತಿಹಾಸದ ಕೆಲವೊಂದು ಭಾಗವನ್ನಾದರೂ ಓದಲು ನಮಗೆ ಸಮರ್ಥರನ್ನಾಗಿ ಮಾಡಿದೆ. ಅಲ್ಲಿಯ ಕಡಲಾಳದ ಪ್ರಾಣಿ ಜೀವನವನ್ನು, ಪೆಂಗ್ವಿನ ಪಕ್ಷಿಗಳ ಹೊರತು ನೆಲದ ಮೇಲೆ ದೊರೆಯಬಹುದಾದ ತೀರ ವಿರಳವಾದ ಜೀವ ಸೃಷ್ಟಿಯನ್ನೂ ಆಮೂಲಾಗ್ರವಾಗಿ ಅಭ್ಯಾಸಿಸಿ ಸಂಶೋಧಿಸಲಾಗಿದೆ. ಉಲ್ಕಾ ರಚನೆಗಳ ಮತ್ತೂ ಭೂಮಿಯ ಲೋಹಚುಂಬಕತ್ವದ ಕುರಿತು ಮೂರು ವರ್ಷದ ಅವಲೋಕನೆಯ ಫಲಿತಾಂಶಗಳನ್ನು ನಿರ್ಣಯಗಳನ್ನು ಹೊರಡಿಸಲು ಅಷ್ಟೇ ದೀರ್ಘಕಾಲವು ಹಿಡಿದಿತು. ಇದೆಲ್ಲವನ್ನು ಅಧಿಕಾರಿಗಳೂ ನಾವಿಕರೂ ಕಷ್ಟ ಸಂಕಟಗಳನ್ನು ಸೈರಿಸದೇ ಸಾಧಿಸಿದ್ದಲ್ಲ; ಈ ಕಷ್ಟ ಸಂಕಟಗಳು ಅಂಥ ಪರಿಸ್ಥಿತಿಯಲ್ಲಿ ಹೋಗಿ ಬರದಂಥ ಯಾರಿಗೂ ಮನವರಿಕೆಯಾಗಲಾರವು. ಈ ಶೋಧ ಸಂಚಾರಿಗಳಲ್ಲಿ ಒಂದೇ ಮೃತ್ಯುವು ಸಂಭವಿಸಿತು. ಇಷ್ಟು ದೊಡ್ಡ ಸಾಹಸದಲ್ಲಿ ಇಷ್ಟು ಅಲ್ಪ ಹಾನಿಯಾದ ಉದಾಹರಣೆಯು ಇನ್ನೊಂದಿಲ್ಲ. ಮೂರು ವರ್ಷಗಳ ಹಿಂದೆ ಹೊರಟು ಹೋದ 'ಡಿಸ್ಕವರಿ' ಹಡಗದಲ್ಲಿಯ ೫೦ ಜನರ ಈ ಚಿಕ್ಕ ಮಂಡಳಿಯಲ್ಲಿ ಪ್ರತಿಯೊಬ್ಬನೂ- ತನ್ನ ಕೆಲಸವನ್ನು ದಕ್ಷತೆಯಿಂದ ನಿರ್ವಹಿಸಿದ್ದಾನೆ. ಬಂದ ಕಷ್ಟಗಳನ್ನು ಹರ್ಷದಿಂದಲೂ, ಸಾಹಸದಿಂದಲೂ ಸಹಿಸಿದ್ದಾನೆ. ವಿಜ್ಞಾನದ ಸೇವೆಯಲ್ಲಿ ಕಮಾಂಡರ ಸ್ಕಾಟನೂ ಅವನ ಸಂಗಡಿಗರೂ ಕಾಣಿಸಿದ ಆತ್ಮಯಜ್ಞ ಮತ್ತು ದೃಢಧೀರತೆಯ ಉದಾಹರಣೆಯು, ನಮ್ಮಲ್ಲಿ ಚೇತನಾಶಕ್ತಿಯನ್ನು ನಿಸ್ಸಂದೇಹವಾಗಿ ಬದುಕಿ ಉಳಿಯುವಂತೆ ಮಾಡುವದು.'

ಮರಳಿ ಬಂದ ಮಾತ್ರಕ್ಕೆ ಅವನ ಶೋಧ ಸಂಚಾರದ ಕಾರ್ಯವು ಮುಗಿದಂತೆ ಆಗಲಿಲ್ಲ. ಅವನ 'ಸಾಹಸ ಭೀಮ ವಿಜಯ'ದ ಇತಿವೃತ್ತವನ್ನು ಬರೆಯಲಿಕ್ಕೆ ಅವನಿಗೆ ೯ ತಿಂಗಳ ರಜೆಯನ್ನು ಕೊಡಲಾಯಿತು. ಅವನು ಈ ಮೊದಲೇ ನ್ಯೂಝಿಲಂಡದಿಂದ ತನ್ನ ವರದಿಯನ್ನು ನೌಕಾ ಖಾತೆಯ ಕಚೇರಿಗೆ ಕಳುಹಿಸಿದ್ದನು.

ಡಿಸ್ಕವರಿ ಹಡಗದ ಕಡಲ ಪಯಣ' ಎಂಬ ಪುಸ್ತಕವು ೧೯೦೫ ರ ಅಗಸ್ಟ
ಂಗಳಲ್ಲಿ ಬರೆದು ಮುಗಿಯಿತು. ಅದರ ಪ್ರಕಟಣೆಯ ಮೊದಲೇ, ಸ್ಕಾಟನು
ಾವಿಕ ಗುಪ್ತಚಾರರ ವಿಭಾಗಕ್ಕೆ ಸಂಚಾಲಕನಾದನು. ಅನಂತರ 'ವ್ಹಿಕ್ಟೋರಿಯಸ್'
ುತ್ತು 'ಅಲ್ಬಮಾರ್ಲ' ಎಂಬ ಯುದ್ಧ ನೌಕೆಗಳ ಕಮಾಂಡರನಾದನು. ಹಡಗ
ಂದ ನಿವೃತ್ತನಾದಮೇಲೆ ೧೯೦೭ ರಲ್ಲಿ ಲಂಡನ್ನಿನಲ್ಲಿ ಕ್ಯಾಥ್ಲೀನ ಬ್ರೂಸ ಎಂಬ
ರುಣ ಕುಮಾರಿಯನ್ನು ಭೆಟ್ಟಿಯಾದನು. ಆಕೆಯು ಉದಯೋನ್ಮುಖ ಶಿಲ್ಪ
ಲಾವಿದೆ. ಆಕೆಯು ಅವನ ಹೃದಯ ಪೀಠದಲ್ಲಿ ಪ್ರೀತಿಯ ಮೂರ್ತಿಯನ್ನು
ೂಪಿಸಿದಳು. ಮುಂದೆ ೧೯೦೮ ರ ಜನವರಿಯಲ್ಲಿ ಅವನು ಎಸೆಕ್ಸ ಯುದ್ಧ
ಡಗಕ್ಕೆ ಮೇಲಧಿಕಾರಿಯಾಗಿ ಹೋದನು. ಅನಂತರ ೫ ತಿಂಗಳಲ್ಲಿ 'ಬಲ್ವರ್ಕ'
ಡಗಕ್ಕೆ ನೇಮಕವಾಯಿತು. ಅದೇ ವರ್ಷದ ಸಪ್ಟಂಬರ ತಿಂಗಳಲ್ಲಿ ಸ್ಕಾಟನು
ಯಾಥ್ಲೀನಳನ್ನು ಮದುವೆಯಾದನು.

ಡಗುಪಡೆಯಲ್ಲಿಯ ಅವನ ಸಂಗಡಿಗರೆಲ್ಲ ಈ ಮದುವೆಯ ಮೂಲಕ ಒಂದು
ವಿಷ್ಯವನ್ನು ಲೆಕ್ಕಹಾಕಿದರು. ಇನ್ನು ಅವನಿಗೆ ಸಂಸಾರ ಸಾಗರವನ್ನು ದಾಟುವ
ೊಂದೇ ಜಲಪರ್ಯಟನ ಹೊರತು, ಧ್ರುವ ಪ್ರದೇಶದ ಶೋಧಸಂಚಾರದ
ತೆಯು ಅಲ್ಲಿಗೇ ಮುಗಿಯಿತು-ಎಂದು. ಆದರೆ ಮನೆಗೆ ಬಂದ ಲಕ್ಷ್ಮಿಯು
ುರುಷಸಿಂಹನ ಉದ್ಯೋಗಕ್ಕೆ ಅಡ್ಡ ಗಟ್ಟು ಹಾಕಲಿಲ್ಲ. ಅವನು ಮದುವೆಯಾದ
ಂಗಳಲ್ಲಿಯೇ ಹೊಸದೊಂದು ಶೋಧ ಸಂಚಾರದ ಯೋಜನೆಯನ್ನು ಪ್ರಕಟಿಸ
ಾಯಿತು; ಜನರಿಂದ ಉದಾರ ಧನಸಹಾಯವನ್ನು ಪ್ರಾರ್ಥಿಸಲಾಯಿತು. ಈ
ಲ ಬ್ರಿಟಿಶ್, ಆಸ್ಟ್ರೇಲಿಯನ್, ನ್ಯೂಝಿಲಂಡ ಮತ್ತು ದಕ್ಷಿಣ ಆಫ್ರಿಕೆಯ
ರಕಾರಗಳು ಸಹಾಯಧನವನ್ನು ನೀಡಿದರು. ಇದು ಯಾವ ಸರಕಾರದ
ಯಂತ್ರಣದಲ್ಲಿಯೂ ನಡೆಯುವದಿದ್ದಿಲ್ಲ. ಅದು ಕೇವಲ ಸ್ಕಾಟನ ಸ್ವಾಧೀನ
ದುದು. ಅದರ ಯೋಜನೆ, ಸಾಧಿಸಿದ ಶ್ರೇಯವೆಲ್ಲ ಅವನದೇ.

ಸಲದ ಯೋಜನೆಯ ಉದ್ದೇಶಗಳೇನಿದ್ದವು ? (೧) ದಕ್ಷಿಣ ಧ್ರುವವನ್ನೇ
ಲ್ಪುವದು. (೨) ರೊಸ್ಸಸಮುದ್ರ ಕ್ಷೇತ್ರದಲ್ಲಿ ಎಲ್ಲ ವೈಜ್ಞಾನಿಕ ಪರಿಶೋಧನೆಯ
ರ್ಯವನ್ನು ಮುಂದರಿಸುವದು. ಈ ಎರಡನೆಯ ಕಾರ್ಯವೇ ಸ್ಕಾಟನಿಗೆ
ಚ್ಚಿನ ಆಸಕ್ತಿಯದಿತ್ತು. ಅದಕ್ಕಾಗಿ ಅವನು ಬಲಿಷ್ಠವಾದ ವೈಜ್ಞಾನಿಕರ ಒಂದು
ಲವನ್ನು ಈ ಧ್ರುವಕ್ಷೇತ್ರದ ಕಾರ್ಯಕ್ಕಾಗಿ ಒಯ್ದನು. ಹಿಂದೆ ಜತೆಗೆ ಹೋದ
. ವಿಲ್ಸನ್‌ನೂ ಈ ಸಲ ಪ್ರಾಣಿಶಾಸ್ತ್ರಜ್ಞ. ದಲದ ಮುಖ್ಯಾಧಿಕಾರಿಯಾಗಿ
ಗಡ ಬಂದನು. ಡಾ. ಜಿ. ಸಿ. ಸಿಂಪ್ಸನ್ನನೂ ಹವಾಮಾನ ತಜ್ಞನೆಂದು

ಕೋ‍ನು. ಅದಲ್ಲದೆ, ಸಸ್ಯಶಾಸ್ತ್ರಜ್ಞರು, ಭೂಸ್ತರ ತಜ್ಞರು, ಶರೀರ ಶಾಸ್ತ್ರಜ್ಞರು, ನಾವಿಕದಳದ ಸರ್ಜನ್‌ನಾದ ಎಡ್ಕಿನ್‌ಸನ್‌ನು ಜತೆಗೆ ಇದ್ದರು.

೧೯೧೦ ನೇ ಜೂನ ೧ ಕ್ಕೆ ತೆರ್‍ರಾನೊವಾ (ನವ ಭೂಮಿ) ಎಂಬ ಹೆಸರುಳ್ಳ ಹಡಗದಲ್ಲಿ ಈ ಶೋಧಕ ಮಂಡಳಿಯು ಥೇಮ್ಸನದಿಯಿಂದ ಕಡಲಿಗೆ 'ಕಾಲಿಟ್ಟಿತು.' ಹಡಗಕ್ಕೆ ಕಮಾಂಡರನಾಗಿ ಲೆಫ್ಟನೆಂಟ ಇವ್ಹಾನ್ಸ ಎಂಬವನಿದ್ದನು. ಸ್ಕಾಟನು ಟಪಾಲ-ಸಾರಿಗೆಯ ಹಡಗವನ್ನೇರಿ ಮುಂಚಿತವಾಗಿಯೇ ಕೇಪಟೌನಿಗೆ ಹೋಗಿದ್ದನು. ಸಪ್ಟೆಂಬರ ೨ ಕ್ಕೆ ಕೇಪಟೌನಿನಿಂದ ಆ ಶೋಧಸಂಚಾರದ ಮಹಾಮಂಡಳಿಯು ಸ್ಕಾಟನ ನೇತೃತ್ವದಲ್ಲಿಯೇ ಹೊರಟಿತು. ಅಕ್ಟೋಬರ ೧೨ ಕ್ಕೆ ಮೇಲ್ಬೊರ್ನವನ್ನು ಮುಟ್ಟಿತು. ಅಲ್ಲಿ ಹೋದೊಡನೆ ಸ್ಕಾಟನಿಗೆ ಆಘಾತವೆನಿಸುವ ಘಟನೆ ಒದಗಿತು. ನಾರ್ವೆಯ ಎಮುಂಡಸನ್ ಎಂಬ ಒಬ್ಬ ಶೋಧಸಂಚಾರಿಯೂ ಇದೇ ದಕ್ಷಿಣ ಧ್ರುವದ ಶೋಧಕ್ಕಾಗಿ ತಾನೂ ಹೊರಟಿರುವೆನೆಂದು ಅವನಿಗೆ ಕೇಬಲ್ ಸಂದೇಶ ದಿಂದ ತಿಳಿಸಿದನು. ಅಂದಿನಿಂದ ಸ್ಕಾಟನಿಗೆ ಅಂತರಾಳದಲ್ಲಿ ಒಂದೇ ಭಯ- ತನಗಿಂತಲೂ ಮುಂಚೆ ತನಗೆ ಗೊತ್ತಾಗದೆ ಆ ನಾರ್ವೇಜಿಯನ್ ಶೋಧಕನು ಧ್ರುವವನ್ನು ಎಲ್ಲಿ ತಲ್ಪುವನೋ ಎಂದು. ಅವನ ದಿನಚರಿಯಲ್ಲಿ ಈ ಭಯ ಕಾಣಬಹುದು.

೧೯೧೦ ರ ನವ್ಹೆಂಬರ ೨೮ ಕ್ಕೆ ತೆರ್‍ರಾನೊವಾ ಹಡಗವು ಡ್ಯುನೆಡಿನ್‌ದಿಂದ ಕೊನೆಯ ಪರ್ಯಟನಕ್ಕಾಗಿ ಸಾಗಿತು. ಕ್ಯಾಥ್ಲೀನಳು ಹಡಗವು ಬಹುದೂರ ಹೋಗುವತನಕವೂ ಸ್ಕಾಟನೊಡನೆಯೇ ಹಡಗದಲ್ಲಿ ನಿಂತಳು. ಕಡೆಗೆ, ಹೆಡ್ಸ ಎಂಬ ಸ್ಥಳದಿಂದ ಆಕೆಯನ್ನು ಚಿಕ್ಕ ನೌಕೆಯಲ್ಲಿ ಇಳಿಸಿ ದಂಡೆಗೆ ಕಳಿಸಲಾಯಿತು. ಪತಿ ಪತ್ನಿಯರು ಪುನಃ ಒಬ್ಬರನ್ನೊಬ್ಬರು ಎಂದಿಗೂ ಕಾಣಲಿಲ್ಲ.

ಸ್ಕಾಟನ ಉದ್ದೇಶವು ರೊಸ್ಸ ದ್ವೀಪದಲ್ಲಿಯ ಕೇಪ ಕ್ರೂಝಿಯರ ಎಂಬಲ್ಲಿ ತಳ ಹೂರುವದಿತ್ತು. ಆ ಸ್ಥಳವು ಸ್ಕಾಟನಿಗೆ ಪೂರ್ವ ಪರಿಚಿತವಿತ್ತು. ಆದರೆ ಅಲ್ಲಿ ಲಂಗರು ಇಳಿಸಲು ಶಕ್ಯವಾಗಲಿಲ್ಲ. ಕಡಲು ಅಷ್ಟು ಉಕ್ಕೇರಿ ಬಂದಿತ್ತು. ಆದ್ದರಿಂದ ಹರಟಪೊಯಿಂಟ ಎಂಬ ಇನ್ನೊಂದು ಸ್ಥಳವನ್ನು ಸ್ಕಾಟನು ಕಂಡು ಕೊಂಡನು. ಆಹಾರ ಸಾಮುಗ್ರಿ, ಕುದುರೆಗಳು ನಾಯಿಗಳು- ಎಲ್ಲವೂ ಲಗುಬಗೆ ಯಿಂದ ಸಕಾಲಕ್ಕೆ ದಂಡೆಗೆ ಇಳಿಸಲಾದವು. ಕುದುರೆಗಳ ಪಾರುಪತ್ಯವನ್ನು ಕ್ಯಾಪ್ಟನ್ ಓಟ್ಸ ಎಂಬವನಿಗೆ ಕೊಡಲಾಗಿತ್ತು.

ಧ್ರುವ ಪ್ರವಾಸಕ್ಕೆ ಅವಶ್ಯವಿರುವ ಎಲ್ಲ ಸಾಮಾನುಗಳನ್ನು ಒಂದು ತಳದಲ್ಲಿ ಸಂಗ್ರಹಿಸಿ ಆ ಸ್ಥಳಕ್ಕೆ ಭದ್ರತೆಯ ಠಾಣ್ಯವೆಂದು ಹೆಸರಿಡಲಾಯಿತು. ತನ್ನ

ಮುನ್ನಡೆಗಾಗಿ ಅಲ್ಲಲ್ಲಿ ಅನುಕೂಲ ಸ್ಥಾನಗಳನ್ನು ಕಲ್ಪಿಸಿ ಸಲಕರಣೆಗಳ ಉಗ್ರಾಣ ಳನ್ನು ಏರ್ಪಡಿಸುವ ದಕ್ಷತೆಯನ್ನು ತಾನೇ ವಹಿಸಿದನು.

ಧ್ರುವ ಪ್ರದೇಶದ ದೀರ್ಘವಾದ ಮಹಾರಾತ್ರಿಯು ಆರಂಭವಾಗಲಿತ್ತು. ೂರ್ಯನನ್ನು ಕಾಣದ ಅಂಧ ತಮಸ್ಸು ಬರಲಿತ್ತು. ಆ ಪೂರ್ವದಲ್ಲಿಯೇ ರಾನೋವಾ ಹಡಗವು ಹೊರಟು ನ್ಯೂಝಿಲಂಡದ ದಂಡೆಗೆ ಮರಳಿ ಹಾದಿ ಯಬೇಕಿತ್ತು. ಅದಕ್ಕಾಗಿ ಅದು ಹೊರಟಿತು. ಹಡಗ ಹಿಂದಿರುಗುವ ಮೊದಲೇ ್ಕಾಟನಿಗೆ ಇಚ್ಛೆಇಲ್ಲದ ಸುದ್ದಿಯು ತಂತಿಯಿಂದ ಬಂದು ತಲ್ಪಿತು. ಎಮುಂಡಸೆನ್ ಂಬ ಆ ನಾರ್ವೇಜಿಯನ್ ನಾವಿಕನು ಈಗಾಗಲೇ ಬಂದು ಆ ಪ್ರದೇಶದಲ್ಲಿ ನ್ನೊಂದೆಡೆಗೆ ಇಳಿದಿದ್ದಾನೆ, ಅದೂ ಸ್ಕಾಟನಿಗಿಂತ ೬೦ ಮೈಲು ಮುಂದೆ–ಅಂದರೆ ಧ್ರುವಕ್ಕೆ ಅಷ್ಟು ಹತ್ತಿರ! ಸ್ಕಾಟನು ಸಂಗಡಿಗರೊಡನೆ ಧ್ರುವವನ್ನು ಆಕ್ರಮಿಸಲು ೊರಟನು.

ವೆಂಬರ ೧೧ ಕ್ಕೆ ಆ ಯಾತ್ರೆಯ ಆರಂಭ. ಯಾತ್ರೆಯನ್ನು ಮೂರು ಮಟ್ಟ ಳಲ್ಲಿ ವಿಭಾಗಿಸಬಹುದು. ಮೊದಲನೆಯದು ಬರ್ಫದ ಅಡ್ಡ ಮೇರೆಯ ಮದುಂಬಿದ ಬಯಲು; ಎರಡನೆಯದು, ಹಿಮವಾಹಿನಿಯ ಮೇಲೆ ಪ್ರವಾಸ; ೂರನೆಯದು, ಅತಿ ಭೀಷಣವಾದ ಬರೇ ಒಣ ಬರ್ಫದ ಬಂಡೆಗುಡ್ಡಗಳಿಂದ ್ಕಿರಿದ ದುರ್ಗಮಪ್ರದೇಶ. ಪ್ರವಾಸವನ್ನು ಆರಂಭಿಸುವ ಮುಂಚೆ ಅಲ್ಲಲ್ಲಿ ೂಡಿದ ಠಾಣ್ಯಗಳಲ್ಲಿ ತನ್ನ ಜನರನ್ನು ಗುಂಪು ಗುಂಪಾಗಿ ರಾತ್ರಿಯು ಿಯುವಷ್ಟರಲ್ಲಿ ಸುರಕ್ಷಿತವಾಗಿ ನೆಲಿಸುವದಿತ್ತು. ಅದಕ್ಕೇ ಕೆಲ ತಿಂಗಳು ೋದವು. ಮಹಾರಾತ್ರಿಯು ಎಪ್ರಿಲದಿಂದ ಸಪ್ಟೆಂಬರದ ತನಕ ತಾಳುವ ಂಧಕಾರವು.

ೋಜನೆಯಂತೆ, ೪ ಮಂದಿಯು ಮೂರುಗುಂಪುಗಳನ್ನು ಮಾಡಿ ಅವನನ್ನು ಆ ಮವಾಹಿನಿಯ ಮೇಲೆ ಅಲ್ಲಲ್ಲಿ ಕಳಿಸಿದನು. ಈ ಮೂರು ಗುಂಪುಗಳಲ್ಲಿ ಎರಡೂ ುಂದೆ ಸಾಗುವ ಧ್ರುವಶೋಧದ ಮುಖ್ಯ ಗುಂಪಿಗೆ ಬೆಂಗಾವುಲಿನ ಪಡೆಯಂತೆ ಾತ್ತಾಯಿತು.

ೋಜನೆಯ ಮೊದಲನೆಯ ಹಂತವನ್ನು ಯಶಸ್ವಿಯಾಗಿ ಮುಗಿಸಲಾಯಿತು. ್ಲಿಂದ ಮುಂದೆ ಸಾಗಿದ ಎರಡು ಗುಂಪುಗಳಲ್ಲಿ ಒಂದಕ್ಕೆ ಸ್ಕಾಟನೂ ಇನ್ನೊಂದಕ್ಕೆ ್ವಾನ್ಸನೂ ನಾಯಕರಾದರು. ಸ್ಕಾಟನ ಗುಂಪಿನಲ್ಲಿ ಡಾ. ವಿಲ್ಸನ್, ಕ್ಯಾಪ್ಟನ್ ್ಸ್, ಎಡವರ್ಡ ಇವಾನ್ಸ ಎಂಬ ಕಿರಿಯ ಅಧಿಕಾರಿ ಇವರಿದ್ದರು. ಇವಾನ್ಸನ

ಪಡೆಯಲ್ಲಿ ಲೆಫ್ಟನೆಂಟ ಬೊವರ್ಸ ರ‍್ಯಾಪ್ಲೆ ಮತ್ತು ಡೋಮಕ್ರೀನ ಎಂಬ ಇಬ್ಬರು ನಾವಿಕರು ಇಷ್ಟು ಜನ ಇದ್ದರು.

೧೯೧೨ ನೇ ಜನವರಿಯ ತನಕ ಅವರೆಲ್ಲ ೮೭' ೩೪' ! ದಕ್ಷಿಣ ಅಕ್ಷಾಂಶವನ್ನು ತಲ್ಪಿದರು. ಅಲ್ಲಿಂದ ಲೆಫ್ಟನೆಂಟ ಇವ್ಹಾನ್ಸನ ಗುಂಪನ್ನು ಹಿಂದಕ್ಕೆ ಕಳುಹಿಸಲಾಯಿತು.

ಹೀಗೆ ಸ್ಕಾಟನ ಪಡೆಯು ಮುಂದೆ ನಡೆದಾಗ, ಅವರು ದಕ್ಷಿಣ ಧ್ರುವದಿಂದ ೧೫೦ ಮೈಲು ದೂರದಲ್ಲಿ ಇದ್ದರು. ಸ್ವಲ್ಪ ಹಾದಿ ಹೋದೊಡನೆಯೇ ಅವರೆಲ್ಲರಲ್ಲಿ ದಣುವಿನ ಬಳಲಿಕೆಯ ಲಕ್ಷಣಗಳು ಕಂಡವು. ಏಕೆಂದರೆ ಸಮುದ್ರ ಪಾತಳಿಯಿಂದ ೧೦,೦೦೦ ಮೈಲಿಗೂ ಮಿಕ್ಕಿದ ಎತ್ತರದಲ್ಲಿ ಅವರು ಭಾರವಾದ ಬಟ್ಟೆಗಳನ್ನು ಹೊತ್ತು ಸಾಗಿದ್ದರು. ಜನವರಿ ೧೩ ಕ್ಕೆ ಅವರು ಇನ್ನೂ ೬೦ ಮೈಲು ಕ್ರಮಿಸ ಬೇಕಾಗಿತ್ತು. ಮರುದಿನ ಅವರು ೨೦ ಮೈಲು ನಡೆದು ಹೋದರು. ೧೬ ನೇ ದಿನಾಂಕಕ್ಕೆ ಅವರಿಗೆ ಕ್ರೂರವಾದ ಆಘಾತವು ಒದಗಿತು.

ಆದಿನ ನಸುಕಿಗೆ ಅವರು ದಾರಿತುಳಿಯಲು ಹೊರಟರು. ಚಳಿಯಿಂದ ಬಳಲು ತ್ತಿದ್ದರು. ಯಾರ ಉತ್ಸಾಹವೂ ಕುಗ್ಗಿದ್ದಿಲ್ಲ. ಏಕೆಂದರೆ ಮರುದಿನ ಅವರು ಧ್ರುವವನ್ನು ಆಕ್ರಮಿಸಿ ನಿಲ್ಲುವವರಿದ್ದರಷ್ಟೇ ! ಆದರೆ–ಸ್ವಲ್ಪ ಹಾದಿ ನಡೆದದ್ದೇ ತಡ. ದೂರದಲ್ಲಿ ಚಿಕ್ಕದೊಂದು ಕಪ್ಪು ಕಲೆಯು ಎದ್ದು ಕಾಣಿಸಿತು. ಅದು ಕಪ್ಪು ಬಾವುಟ.–ಅಶುಭ ಚಿನ್ಹೆ ! ಸ್ಕಾಟನ ಗುಂಪು ತುಸು ಸಮೀಪಿಸುತ್ತದೆ. ಒಂದು ಠಾಣ್ಯದ ಅವಶೇಷಗಳು ಬಿದ್ದಿವೆ. ಸ್ಲೆಜಗಾಡಿಗಳು ಹಿಮದಲ್ಲಿ ಜಾರಿಹೋದ ಗೆರೆಗಳು ಅಚ್ಚಳಿಯದೇ ಇವೆ. ನಾಯಿಗಳ ಹಲವು ಹೆಜ್ಜೆ ಕುರುಹುಗಳೂ ಕಾಣುತ್ತಿವೆ !

ಎಮುಂಡಸೆನ್ ಧ್ರುವವನ್ನು ಆಕ್ರಮಿಸಿ ಬಿಟ್ಟಿದ್ದನು ! ಅವನು ಅಲ್ಲಿ ಮುಟ್ಟಿ ೧ ತಿಂಗಳು ಮೇಲಾಗಿತ್ತು ! ಧ್ರುವ ಬಿಂದುವಿನ ಮೇಲೆ ನಾರ್ವೆಯ ಧ್ವಜವನ್ನು ನಿಲ್ಲಿಸಿದ್ದನು. ಅದೇ ಈ ಕರೆಯ ಬಾವುಟ ! ಧ್ವಜದ ಅಡಿಗೆ ಪುಟ್ಟ ಡೇರೆಯೊಂದನ್ನು ಏರಿಸಿಟ್ಟಿದ್ದನು. ಆ ಡೇರೆಯಲ್ಲಿ ಎರಡು ಪತ್ರಗಳನ್ನು ಬರೆದಿಟ್ಟಿದ್ದನು.–ಒಂದು ಸ್ಕಾಟನಿಗೆ. ಇನ್ನೊಂದು ತಮ್ಮ ಅರಸ–ಹಾಕೊನ್ನನಿಗೆ, ತಮ್ಮ ಪಡೆಗೆ ಅಪಘಾತ ದಿಂದ ಮರಣವು ಒದಗಿದರೆ, ಆ ಪತ್ರವನ್ನು ಅರಸರಿಗೆ ಮುಟ್ಟಿಸಬೇಕೆಂದು ಸ್ಕಾಟನಿಗೆ ಪತ್ರದಲ್ಲಿ ಸೂಚನೆ ಇತ್ತು.

'ಅಯ್ಯೊ ದೇವರೇ' ಸ್ಕಾಟನು ಉದ್ಗರಿಸಿದನು, 'ಇದು ಭಯಾನಕ ಸ್ಥಾನವು.

ಇಲ್ಲಿ ತಲ್ಪುವ ಪ್ರಥಮಮಾನದ ಸಂಭಾವನೆಯು ದೊರೆಯದಿದ್ದರೂ, ಇಲ್ಲಿ ತಲ್ಪಲು ಘೋರ ಕಷ್ಟಪಟ್ಟು ನಡೆದು ಬಂದದ್ದೇ ಸಾಕಷ್ಟು ಭಯಂಕರ ಸಾಹಸವು!'

ಸ್ಕಾಟನ ಹೃದಯಕ್ಕೆ ನಿರಾಶೆಯು ಜ್ವಾಲೆಯು ಬರೆಕೊಟ್ಟಂತಾಯಿತು; ನಾರ್ವೇಜಿಯನ ಬಾವುಟವು ನಮ್ಮ ಧ್ವಜಕ್ಕೂ ಮುಂಚೆ ಇಲ್ಲಿ ಊರಿನಿಲ್ಲಬಹುದೆಂಬ ದಾರುಣ ಸಂಭವವು'–ಹೀಗೆ ಸತ್ಯವಾಗಿತ್ತು. 'ಮರಳಿ ಹೋಗುವದು ತೀರ ಬೇಸರದ ಕೆಲಸ'–ಎಂದು ಅವನು ದಿನಚರಿಯಲ್ಲಿ ಬರೆದನು.

ಹಾರದ ಪೂರೈಕೆ ಸಾಲದಾಯಿತು. ಕ್ಯಾಪ್ಟನ್ ಓಟ್ಸ, ಕಿರಿಯ ಅಧಿಕಾರಿ ವ್ಹಾನ್ಸ ಇವರಿಬ್ಬರು ಮಂಜಿನ ಕೊರೆತಕ್ಕೆ ಮೊದಲನೆಯ ಬಲಿಯಾದರು. ಲ್ಸನ್‌ನು ಕಾಲಿನ ಸ್ನಾಯುವನ್ನು ಹರಿದುಕೊಂಡನು. ಸ್ಕಾಟನೂ ಬಿದ್ದು ಹೆಗಲಿಗೆ ಯವಾಡಿಕೊಂಡನು.

ಬ್ರುವರಿ ೮ ಕ್ಕೆ ಅವರು ಆ ಭೀಷಣ ತಪ್ಪಲಾ ತುದಿಗೆ ಶರಣು ಹೊಡೆದು ಂದಿರುಗಿ ಹಿಮವಾಹಿನಿಯ ಮಂಜುಗಡ್ಡೆಗಳಲ್ಲಿ ನಿಂತರು. ಎಡ್ಗರ ಇವ್ಹಾನ್ಸನು ೭ನೇ ದಿನ ತೀರಿಕೊಂಡನು. ಉಳಿದ ನಾಲ್ವರು ಮುಂದರಿದರು–ಪಾಂಡವರು ಹಾ ನಿರ್ವಾಣದಲ್ಲಿ ಸತ್ತ ಸೋದರರನ್ನು ಹಿಂದೆ ಬಿಟ್ಟು ಸಾಗಿದಂತೆ! ಕ್ಯಾಪ್ಟನ್ ಟ್ಸನ ಕಾಲುಗಳು ಮಂಜಿನ ಕೊರೆತಕ್ಕೆ ಪೂರ್ತಿ ಸೆಟೆದು ಕಪ್ಪಾಗಿದ್ದವು. ಮಾರ್ಚ ಂಗಳ ಆರಂಭಕ್ಕೆ ಪರಿಸ್ಥಿತಿಯು ತೀರ ಅಸಹಾಯವಾಯಿತು. ಆದರೂ ಯಾರೂ ನನ್ನು ಆಡಿತೋರಿಸಲಾರರು! ೧೦ ನೇ ದಿನ ಓಟ್ಸನಿಗೆ ಅನಿಸಿತು–ತನ್ನಿಂದ ಕ್ಕವರ ಮುನ್ನಡೆಗೆ ತಡೆಯಾಗುತ್ತಿದೆ ಎಂದು. ಉಳಿದ ಮೂವರನ್ನು ಅವನು ಳಿದನು–ತಾನು ಏನುಮಾಡಲೆಂದು. ಅವರು ಏನ್ನಬೇಕು? 'ಹಾಗೆಯೇ ಮುಂದೆ ಗು–ಸಾವಕಾಶ ಶಕ್ಯವಾಗುವತನಕ ಜತೆಗೆ ಸಾಗು' ಎಂದರು. ವಿಲ್ಸನ್‌ನು ತಿಯೊಬ್ಬನಿಗೂ ಸಾಕಷ್ಟು ಅಫೀಮನ್ನು ಹಂಚಿದನು. ಏತಕ್ಕೆ? ನೋವು ನರಳಿಕೆ ಯುದಾದಾಗ, 'ಎಲ್ಲ ಆಸೆ ಮುಡಿದಾಗ ಅವನ್ನು ನುಂಗಿ ಮರಣವನ್ನು' ಡೆಯಲಿಕ್ಕೆ.

ರುವಾರ ೧೫ ನೇ ದಿನಾಂಕ ಕ್ಯಾಪ್ಟನ್ ಓಟ್ಸನು ಕೈಕಾಲು ಬಿಟ್ಟನು. ಇನ್ನು ದು ಹೆಜ್ಜೆಯನ್ನು ಇಡಲಾರೆನೆಂದನು. ರಾತ್ರೆ ಒಳಹೊಕ್ಕ ನಿದ್ದೆ ಹೋದ ಣೆದೊಗಲಿನ ಚೀಲದಲ್ಲಿಯೇ ತನ್ನನ್ನು ಬಿಟ್ಟು ಮಿಕ್ಕವರು ಮುಂದೆ ಸಾಗ ಕೆಂದು ಹಟ ಹಿಡಿದನು. ಆದರೆ ಆ ಗೆಳೆಯರು ಅವನನ್ನು ಹಾಗೆ ಹಿಂದೆ

ಬಿಡುವರೇ ? ಅವರು ಒತ್ತಾಯ ಮಾಡಿ ಅವನನ್ನು ಸಂಜೆಯತನಕವೂ ದಾರಿ ನಡೆಯಿಸಿದರು. ಆ ರಾತ್ರಿ ಅವನು ಚೀಲವನ್ನು ಸೇರಿ ನಿದ್ದೆ ಮಾಡಿದನು. ಮರುದಿನ ಮುಂಜಾವಿಗೆ ಮಂಜಿನ ದಟ್ಟವಾದ ಬಿರುಗಾಳಿ ಬೀಸುತ್ತಿತ್ತು. ಓಟ್ಸನು ನಿದಾನವಾಗಿ ಎದ್ದನು. 'ನಾನು ಹೊರಗೆ ಹೋಗಿ ಬರುತ್ತೇನೆ' ಎಂದು ಸ್ಕಾಟನಿಗೆ ಅವನು ಹೇಳಿದನು, 'ತುಸು ವೇಳೆ ಆದೀತು.'

ಆ ವೇಳೆ ಬರಲೇ ಇಲ್ಲ. ಅವನನ್ನು ಮತ್ತೆ ಆ ಮೂವರು ಕಾಣಲಿಲ್ಲ. ಸ್ಕಾಟನು ದಿನಚರಿಯಲ್ಲಿ ಬರೆದನು, 'ಬಡ ಓಟ್ಸನು ಸಾವಿಗಾಗಿಯೇ ಹೋಗುತ್ತಿದ್ದಾನೆಂದು ನಮಗೆ ಗೊತ್ತಿತ್ತು. ಅವನನ್ನು ಹಿಂದಿರುಗಿಸಲು ನಾವು ಎಷ್ಟೇ ಮನವೊಲಿಸಿದರೂ 'ಅವನ ಆ ಕೃತ್ಯ, ಧೀರನದು.' ಇಂಗ್ಲಿಷ ಸದ್ಗೃಹಸ್ಥನದಾಗಿತ್ತು. ನಾವೆಲ್ಲ ಅದೇ ಕೊನೆಯ ಆಶೆಯನ್ನಿಟ್ಟುಕೊಂಡಿದ್ದೇವೆ. ಆ ಕೊನೆಯು ಇನ್ನು ದೂರವಿಲ್ಲ !'

ಎಂಥ ಮಾತುಗಳಿವು. ತಾನು ಸಂಗಡಿಗರಿಗೆ ಭಾರನಾಗಬಾರದೆಂದು ತನಗಾಗಿ ಅವರು ಸಂಕಟಪಡಬಾರದೆಂದು, ತಾನೇ ಎದ್ದು, ಹೋಗಿ ಸುತ್ತಲೂ ರಾಶಿರಾಶಿಯಾಗಿ ಬೀಳುತ್ತಿರುವ ಬಿರುಗಾಳಿಯ ಮಂಜಿನೊಳಗೆ ಸ್ವೇಚ್ಛಾ ಮರಣದ ಸಜೀವ ಸಮಾಧಿಯನ್ನು ಪಡೆದ ಓಟ್ಸನ ಧೈರ್ಯವನ್ನು ಕೊಂಡಾಡಬೇಕೇ, ಅವನ ಆ ಗೌರವ ದುರಂತವನ್ನು ವೀರ ಸ್ವರ್ಗವೆಂದು ಶ್ಲಾಘಿಸಿ ತಮಗೂ ಆ ಪರ್ವಣಿಯು ಶೀಘ್ರವಾಗಿ ಬರಲೆಂದು ಆಶಿಸುವ ಗಂಡುಗಲಿ ಸ್ಕಾಟನನ್ನು ಹೊಗಳಬೇಕೇ ? ಮಹಿಮೆಯ ಮುಂದೆ ಮೂಕವಾಗಿರುವದೇ ಅದಕ್ಕೆ ತಕ್ಕ ಮನ್ನಣೆ !

ಮರುದಿನ ಸ್ಕಾಟನ ಬಲ ಪಾದವು ಕೆಲಸಕ್ಕೆ ಬಾರದಾಯಿತು. ಅವನ ಕಾಲ್ಬೆರಳುಗಳೆಲ್ಲ ಮಂಜಿಗೆ ಕೊಳೆತು ಹೋಗಿದ್ದವು. ಅದು ಆ ತನಕವೂ ಅವನಿಗೆ ಗೊತ್ತೇ ಇದ್ದಿಲ್ಲ. ೧೯ ನೇ ದಿನಾಂಕಕ್ಕೆ ಅವರು ತಲ್ಪಿದ ಸ್ಥಳವು ಅವರ ಆಹಾರ ಠಾಣ್ಯದಿಂದ ೧೧ ಮೈಲಿಗೆ ಇತ್ತು. ಆದರೆ ಆಗಲೇ ಹಿಮವೃಷ್ಟಿಯೊಡನೆ ಬಿರುಗಾಳಿಯು ಎದ್ದಿತು. ಮುನ್ನಡೆಯು ಕಟ್ಟಾಯಿತು. ೨೧ ನೆಯ ದಿನಾಂಕಕ್ಕೆ, ವಿಲ್ಸನ್, ಬೋವರ್ಸರಿಬ್ಬರೂ ಮುಂದೆ ಸಾಗಬೇಕೆಂದು ಗೊತ್ತುಮಾಡಲಾಯಿತು. ಆದರೆ ಹಿಮಪಾತದ ಆ ಪ್ರಲಯ ಝಂಝಾ ವಾತವು ತಡೆಯಲಿಲ್ಲ, ಹಾಗೆಯೇ ಮುಂವರಿಯಿತು.-ಹನ್ನೊಂದು ದಿನ ಎಡಬಿಡದೆ ಮುಂದರಿಯಿತು !

ಅಷ್ಟು ದಿನ ಹಿಮದ ರಾಶಿಗಳ ನಡುವೆ ಆ ಮೂವರು ದುರ್ದೈವಿಗಳು-ಅಲ್ಲ. ಧ್ರುವ ಪದವನ್ನೇರಿ ಬಂದ ಭಾಗ್ಯಶಾಲಿಗಳಾದ ತ್ರಿಮೂರ್ತಿಗಳು ತ್ರಿಶಂಕುವಿನಂತೆ ಸಿಲುಕಿ ಬಿದ್ದರು. ಆಹಾರವೆಲ್ಲ ಮುಗಿದು ೭ ದಿನಗಳು ಕಳೆದವು. ಆದರೂ

ರ್ಮಾರ್ಚ ೨೯ ನೇ ದಿನಕ್ಕೂ ಅವರು ಬದುಕಿದ್ದರು. ಏಕಂದರೆ ಆ ದಿನವೇ ಸ್ಕಾಟನು ತನ್ನ ದಿನಚರಿಯಲ್ಲಿ ಕೊನೆಯ ಟಿಪ್ಪಣೆಯನ್ನು ಬರೆದಿದ್ದನು. ಅದೆಂಥ ಟಿಪ್ಪಣಿ ? ಸಾವಿನ ತೆಕ್ಕೆಯಲ್ಲಿಯೂ ಅವನ ಹಂಬಲ ತನ್ನ ಸಂಗಡಿಗರ ಕ್ಷೇಮಕ್ಕಾಗಿ, ಇತರರ ಒಳಿತಿಗಾಗಿ. ಆದರ್ಶ ನಾಯಕನ ಮೊತ್ತಮೊದಲಿನ ಪ್ರತಿಜ್ಞೆ, ಕಟ್ಟಕಡೆಯ ಪ್ರತಿಜ್ಞೆ ಒಂದೆ, ತನ್ನನ್ನು ನಂಬಿದವರು ಕೆಡಕೂಡದು. ಅವನು ಅದೇ ಹಂಬಲವನ್ನು ಬರೆದಿದ್ದನು, 'ದೇವರ ದಯವಿರಲಿ. ನಮ್ಮ ಜನರನ್ನು ನೋಡಿಕೊಳ್ಳಿ !'

ಹಿಮ ವೃಷ್ಟಿಯು ಬೀಸಿ ಬಿದ್ದು, ಬರ್ಫದ ಕವಚವನ್ನು ಭೂಮಿಗೆ ಹೊದ್ದಿಸಿ ಹೋಯಿತು. ಆದರೆ ಸ್ಕಾಟ ಮತ್ತು ಅವನ ಇಬ್ಬರು ಸಂಗಡಿಗರ ಶವಗಳು ಸಿಗಲಿಲ್ಲ. ಎಂಟು ತಿಂಗಳಾದರೂ ಸಿಗಲಿಲ್ಲ. ಮನೆಯವರಿಗೆ, ಅಷ್ಟು ಅವಧಿ ಅವರು ಏನಾದರೆಂದು ಕೂಡ ಗೊತ್ತಾಗಲಿಲ್ಲ. ಕೊನೆಗೆ ನವ್ಹೆಂಬರದಲ್ಲಿ ಹುಡುಕಲು ಹೋದವರ ಒಂದು ಗುಂಪು ಅವರನ್ನು ಕಂಡುಹಿಡಿಯಿತು. ಅವರು ಮರಣ ಮುಖದಲ್ಲಿಯೂ ಶಿಸ್ತಿನ ಓರಣವನ್ನು ತಪ್ಪಿದ್ದಿಲ್ಲ.–ಜಾತಿವಂತ ನಾವಿಕ ಸೈನಿಕರವರು ! ಆ ಶವಗಳು ಆಗಾಗಲೇ ಹಡಗದಿಂದ ಇಳಿದು ಬಂದಂತೆ ಕಾಣುತ್ತಿದ್ದವು. ಅವರ ಉಡಿಗೆ ತೊಡಿಗೆ ಅಷ್ಟು ಅಚ್ಚುಕಟ್ಟಾಗಿತ್ತು. ಡಾ, ವಿಲ್ಸನ್ನನು ಶಾಂತ ಮುದ್ರೆಯಿಂದ ಎದೆಯಮೇಲೆ ಕೈಗಳನ್ನು ಮಡಚಿಕೊಂಡು ಬಿದ್ದಿದ್ದನು. ಬೊವರ್ಸನಂತೂ ನಿದ್ದೆ ಹೋಗಿರುವಂತೆಯೇ ತೋರುತ್ತಿದ್ದನು. ಸ್ಕಾಟನು ಅವರಿಬ್ಬರ ನಡುವೆ ಬಿದ್ದಿದ್ದನು. ಅವನ ಎಡತೋಳು ವಿಲ್ಸನ್‌ನ ಮೈಮೇಲೆ ಅಡ್ಡ ಬಿದ್ದಿತ್ತು. ತನ್ನ ಹಳೆಯ ಗೆಳೆಯನನ್ನು ಮರಣಾಲಿಂಗನದಲ್ಲಿಯೂ ತನ್ನವನಾಗಿ ಇಟ್ಟುಕೊಂಡಂತೆ ಕಾಣುತ್ತಿತ್ತು. ಅವನ ದಿನಚರಿಗಳು ತಲೆಯಡಿಗೆ ಒಂದು ಚರ್ಮದ ಚೀಲದಲ್ಲಿದ್ದವು. ಅವನ ಪ್ರಿಯ ಜನರಿಗೆ ಬರೆದ ಕಕುಲಾತಿಯ ಕೊನೆಯ ಪತ್ರಗಳು ಅವನ ಬಳಿಗೇ ಬಿದ್ದಿದ್ದವು.

ಹುಡುಕಲು ಹೋದವರು ಆ ದೇಹಗಳನ್ನು ಸರಿಸಲಿಲ್ಲ, ಕವಲಿಸಲಿಲ್ಲ. ಡಾ. ಅಟ್ಕಿನ್‌ಸನ್ನನು ಔರ್ಧ್ವದೈಹಿಕ ವಿಧಿಯ ಪ್ರಾರ್ಥನೆಯನ್ನು ಓದಿದನು. ಅಲ್ಲಿಯೇ ಅವರನ್ನು ಮಣ್ಮರೆಯಾಗಿ ಮಾಡಿ, ಕಲ್ಲುಗಳನ್ನು ಹೇರಿ ಒಂದು ಸಮಾಧಿಯ ಕಟ್ಟೆಯನ್ನು ನಿಲ್ಲಿಸಲಾಯಿತು. ಆ ಕಟ್ಟೆಯ ಮೇಲೆ ಒಂದು ಸಿಲುಬು ಊರಿಸಲಾಯಿತು.

ಅಲ್ಲಿ ಕೆಡದೆ ಕೊಳೆಯದೆ ಬರ್ಫದ ಸ್ತೂಪದಲ್ಲಿ ಅವರು ಪತಾಕಿಯಾಗಿ ಆ ನಿರಾಕಾರವಾದ ಹಿಮಲೋಕದಲ್ಲಿ ಶಾಶ್ವತ ಸಮಾಧಿಯಲ್ಲಿ ಒರಗಿದ್ದಾರೆ. ಅವರ ಸತ್ಕೃತಿಗಳಿಗೆ ವಿಶ್ವವೇ ಒಂದು ಸ್ಮಾರಕವು.

# ಲಿವ್ಹಿಂಗಸ್ಟನ್

ಡೇವಿಡ್ ಲಿವ್ಹಿಂಗಸ್ಟನ್ನನು ಹುಟ್ಟಿದ್ದು ಗ್ಲಾಸಗೋದ ಹತ್ತಿರ ಬ್ಲಾಂಟಾಯರ್ ಎಂಬಲ್ಲಿ.-೧೮೧೩ನೇ ಮಾರ್ಚ ೧೯ನೇ ದಿನ. ಅವನ ತಂದೆ ನೀಲ ಲಿವ್ಹಿಂಗಸ್ಟನ, ಸ್ಕಾಚ್ ವಂಶದವನು. ಅವನು ವ್ಯವಸಾಯದಿಂದ ಚಹಸೊಪ್ಪಿನ ಕಿರಾಣಿ ಮಾರಾಟಗಾರ. ಆದರೆ ಮನೋವೃತ್ತಿಯಿಂದ ಧರ್ಮಪ್ರಚಾರಕ. ಕೆಲವೊಮ್ಮೆ ಅವನು ಚಹದ ಪೆಟ್ಟಿಗೆಗಳನ್ನು ಹಂಚುವದಕ್ಕಿಂತ ಧಾರ್ಮಿಕ ಪ್ರಬಂಧಗಳನ್ನು ಪ್ರಸಾರಗೊಳಿಸುವದೇ ಹೆಚ್ಚಾಗುತ್ತಿತ್ತು.

ತಂದೆಯ ಈ ಧಾರ್ಮಿಕ ಅಭಿನಿವೇಶವು ಮಗ ಡೇವಿಡನಿಗೆ ಅಸಹ್ಯವೆನಿಸುತ್ತಿತ್ತು. ತಂದೆಯ ಕುರಿತು ತುಂಬ ಪ್ರೀತ್ಯಾದರಗಳು ಇದ್ದರೂ, ಈ ಪ್ರಚಾರದ ಆವೇಶವು ಮಗನಲ್ಲಿ ಬಂಡಾಯದ ಬುದ್ಧಿಯನ್ನು ಕೆರಳಿಸಿತು. ಡೇವಿಡನಿಗೆ ಚಿಕ್ಕಂದಿನಿಂದಲೂ ಪ್ರವಾಸದ ಹಾಗೂ ವಿಜ್ಞಾನದ ಪುಸ್ತಕಗಳನ್ನು ಓದುವದೆಂದರೆ ತುಂಬ ಇಷ್ಟ. ಆದರೆ ಅದೆಲ್ಲ ಪಾಖಂಡ ವಾಙ್ಮಯವನ್ನು ಓದಕೂಡದೆಂದು ತಂದೆಯ ಕಟ್ಟಪ್ಪಣೆ. ಡೇವಿಡನೂ ಗಂಭೀರ ಶ್ರದ್ಧೆಯವನಿದ್ದನು. ಸಾತ್ವಿಕ ಆಸ್ತಿಕ್ಯಭಾವನೆಯವನಿದ್ದನು. ಅವನಿಗೆ ಧರ್ಮವು ಅಂತಃಕರಣದ ಸತ್ವವೆನಿಸುತ್ತಿತ್ತು. ತಂದೆಯು ಕರ್ಮಠನಿದ್ದಷ್ಟೇ ಈ ವಿಷಯದಲ್ಲಿ ಕಠೋರನಿದ್ದನು. ಒಮ್ಮೆ ಅವನು ಮಗನಿಗೆ ವಿಲ್ಬರ ಫೋರ್ಸನ 'ವ್ಯವಹಾರಿಕ ಕ್ರೈಸ್ತತತ್ವ' ಎಂಬ ಗ್ರಂಥವನ್ನು ಓದಲು ಒತ್ತಾಯ ಪಡಿಸಿದನು. ಮಗನು ಒಪ್ಪಲಿಲ್ಲ. ತಂದೆ ಬಡಿಗೆಯಿಂದ ಡೇವಿಡನನ್ನು ಚನ್ನಾಗಿ ಥಳಿಸಿದನು.

ಡೇವಿಡನು ೧೦ ವರ್ಷ ಪ್ರಾಯಕ್ಕೆ ಶ್ರಮಜೀವಿಯಾದನು. ಅದೇ ಊರಲ್ಲಿಯ ಒಂದು ಅರಳೆಯ ಗಿರಣಿಯಲ್ಲಿ ಅವನನ್ನು ಕೆಲಸಕ್ಕೆ ಕಳಿಸಲಾಯಿತು. ಅಲ್ಲಿ ಆ ಬಡಹುಡುಗನಿಗೆ ದಿನಕ್ಕೆ ೧೪ ತಾಸು ದುಡಿತ ಬೀಳುತ್ತಿತ್ತು. ಅಂಥ ದುಡಿತದಲ್ಲಿಯೂ ಅಭ್ಯಾಸದ ಕಡೆಗೇ ಗಮನ ಹೆಚ್ಚು. ತನ್ನ ಯಂತ್ರದ ಮೇಲೆಯೇ [illegible] ಪುಸ್ತಕವನ್ನು ತೆರೆದಿಡುತ್ತಿದ್ದನು, ಬಿಡುವು ದೊರೆತಾಗ ಓದಲಿಕ್ಕೆ. ಆದರೆ ದೊರೆಯುವ ಬಿಡುವೆಷ್ಟು ? ಒಂದು ಮಿನಿಟು ಸಿಕ್ಕರೆ ದೊಡ್ಡದು. ವಿದ್ಯೆಯನ್ನೂ ದ್ರವ್ಯವನ್ನೂ ಕ್ಷಣಶಃ ಕ್ಷಣಶಃ ಸಂಗ್ರಹಿಸಬೇಕಂತೆ. ಇಲ್ಲಿ ಅವೆರಡೂ ಅಕ್ಷರಶಃ [illegible]. ಕ್ಷಣ ಕ್ಷಣಕ್ಕೂ ಅಭ್ಯಾಸ ನಡೆಯುತ್ತಿತ್ತು. ಆ ಫ್ಯಾಕ್ಟರಿಯ ಬೇರೆ ಕೆಲಸಗಾರರೆಲ್ಲ ಅವನನ್ನು ಕೆಲಸಗೇಡಿ ಸಿಡಿಮೋರೆಯ ಪೋರನೆಂದು ತಿಳಿಯುತ್ತಿದ್ದರು. ಅವನ ಅಂತರಾಳದ ಉಕ್ಕಿನ ನಿರ್ಧಾರವನ್ನು ಅವರೇನು ಬಲ್ಲರು ?

ವಾಸ ಮತ್ತು ನಿಸರ್ಗ ಚರಿತ್ರೆಯ ಗ್ರಂಥಗಳನ್ನು ಓದುವದೆಂದರೆ ಡೇವಿಡನಿಗೆ ಬ್ಬದೂಟ. ಒಮ್ಮೆ ಅವನು ಒಬ್ಬ ಜರ್ಮನ ಧರ್ಮ ಪ್ರಸಾರಕನ ಪುಸ್ತಕವನ್ನು ದಿದನು; ಕೂಡಲೆ ತಾನೂ ಧರ್ಮಪ್ರಸಾರಕನಾಗಬೇಕೆಂಬ ನಿರ್ಣಯಕ್ಕೆ ಬಂದನು. ಾ. ಥಾಮಸ ಡಿಕ್ ಎಂಬವನ ಎರಡು ಪುಸ್ತಕಗಳು ಈ ನಿರ್ಣಯಕ್ಕೆ ಟಿ ಕೊಟ್ಟವು. ಧರ್ಮ ಮತ್ತು ವಿಜ್ಞಾನ ವಿರೋಧಿಯಾಗಿಲ್ಲ. ಎರಡೂ ಂದಕ್ಕೊಂದು ಅನುಕೂಲವೇ ಇರುತ್ತವೆ, ಎಂಬ ಶ್ರದ್ಧೆ ಅವನಲ್ಲಿ ದೃಢವಾಯಿತು. ುಡಿದು ಗಳಿಸುವದು, ಹಣವನ್ನು ಬಿಡದೆ ಉಳಿಸುವದು ಈ ರೀತಿ ತನ್ನ ಕ್ಷಣಕ್ಕಾಗಿ ಅನುಕೂಲವನ್ನೂ ಕಲ್ಪಿಸಿಕೊಂಡು ಅವನು ಪ್ರಗತಿಯನ್ನು ಪಡೆಯುತ್ತ ಾಗಿದನು. ೨೩ ನೇ ವರ್ಷ ವಯಸ್ಸಿಗೆ ಅವನ ತಂದೆ ಮತ್ತು ಅಣ್ಣನ ಸಹಾಯ ಂದ ಗ್ಲಾಸಗೋ ವಿಶ್ವ ವಿದ್ಯಾಲಯವನ್ನು ಸೇರಿದನು. ಅಲ್ಲಿ ಪರಿಶ್ರಮಪೂರ್ವಕ ಾಗಿ ಗ್ರೀಕ ಭಾಷೆ, ವೈದ್ಯಕ ಮತ್ತು ಧರ್ಮಶಾಸ್ತ್ರಗಳ ವ್ಯಾಸಂಗಕ್ಕೆ ತೊಡಗಿದನು. ೮೩೭ ರಲ್ಲಿ ಲಂಡನ ಮಿಶನರಿ ಸೊಸಾಯಿಟಿಯು ಅವನನ್ನು ಕೆಲ ಕಾಲದ ಮಟ್ಟಿಗೆ ುಶನರಿಯಾಗಿ ನೇಮಿಸಿಕೊಂಡಿತು.

ದರೆ ಈ ಪ್ರಚಾರ ಕಾರ್ಯಕ್ಕೆ ಅವನು ನಿರುಪಯೋಗಿ ಇದ್ದನು. ಧಾರ್ಮಿಕ ಾರ್ಥನೆ ಪ್ರವಚನಗಳ ಕಾರ್ಯವು ಅವನಿಗೆ ಒಗ್ಗಲಿಲ್ಲ. ಸ್ಟ್ಯಾನ್‌ಫೋರ್ಡ ವ್ಹರ್ಸ ಎಂಬಲ್ಲಿಯ ಧರ್ಮಪೀಠಕ್ಕೆ ಅವನನ್ನು ನೇಮಿಸಲಾಗಿತ್ತು. ಅಲ್ಲಿಯ ರಂಭದ ಉಪನ್ಯಾಸದಲ್ಲಿಯೇ ಅವನು ಸಭಾಕಂಪಕ್ಕೆ ಬಲಿಯಾಗಿ ಆ ಮಂದಿರ ನ್ನೇ ಬಿಟ್ಟು ಓಡಿದನು. ಆದರೆ ಮುಂದೆ ತನ್ನ ಅಗಮ್ಯವಾದ ಸಂಕಲ್ಪ ಶಕ್ತಿ ಂದ ಈ ನರಗುಂದಿನ ಅಂಜಿಕೆಯನ್ನು ಗೆದ್ದನು. ಸಭೆಗಳ ಸನ್ಮುಖದಲ್ಲಿ ಸನ್ಮುಖನಾಗಿ ನಿಲ್ಲುವದನ್ನು ಸಾಧಿಸಿಕೊಂಡನು. ಇತ್ತ ತನ್ನ ವೈದ್ಯಕ ವೃತ್ತಿಯಲ್ಲಿ ನಃಪೂರ್ವಕವಾಗಿ ದುಡಿಯುತ್ತ, ಲಂಡನ್ನಿನ ಆಸ್ಪತ್ರೆಗಳಲ್ಲಿ ಎಲ್ಲೆಡೆಗೂ ಹೋಗಿ ನುಭವವನ್ನು ಗಳಿಸಹತ್ತಿದನು. ಪ್ರತ್ಯಕ್ಷ ಅನುಭವದ ಬಲದಿಂದ ಪರೀಕ್ಷೆಗಳಲ್ಲೆಲ್ಲ ುತ್ತೀರ್ಣನಾದನು. ಈಸ್ಟ ಇಂಡಿಯಾ ಕಂಪನಿಯು ಕಾಳಗ ಹೂಡಿದ್ದರಿಂದ ೇವಿಡನು ಆಫ್ರಿಕೆಗೆ ಧರ್ಮ ಪ್ರಚಾರಕನಾಗಿ ಹೊರಟನು.

ೀರ್ಘ ಜಲಪರ್ಯಟನವನ್ನು ಮುಗಿಸಿ ಅವನು ಆಫ್ರಿಕೆಗೆ ಬಂದು ಅಲ್ಗೋರಿ ಪಸಾಗರದ ತೀರಕ್ಕೆ ಇಳಿದನು. ಜಿಜ್ಞಾಸುವೂ ಅಭ್ಯಾಸುವೂ ಆದ ಲಿವ್ಹಿಂಗಸ್ಟನ್‌ನು ರ್ಯಟನದ ನಿಷ್ಕ್ರಿಯವಾದ ಅವಧಿಯಲ್ಲಿ ಹಡಗದ ಕಪ್ತಾನನಿಂದ ಜ್ಯೋತಿರ್ಗಣಿತ ನ್ನು–ಗ್ರಹತಾರೆಗಳನ್ನು ಗುರುತಿಸಿ ಕಾಲಮಾನವನ್ನು ಅನುಮಾನಿಸುವ ದ್ಯೆಯನ್ನು-ಕಲಿತುಕೊಂಡನು. ಅವನ ಮಿಶನ್ ಸಂಸ್ಥೆಯ ಕೇಂದ್ರವು ಬೆಚುವನ್ ್ಯಂಡದಲ್ಲಿ ಕುರುಮನನ್ ಎಂಬಲ್ಲಿ ಇತ್ತು. ೭೦೦ ಮೈಲು ದೂರದ ಆ

ಊರ್ಿ ಪ್ರವಾಸಮಾಡಲು ಅನುಕೂಲವೆಂದರೆ ಎತ್ತಿನ ಬೆನ್ನೇ. ವೃಷಭವಾಹನನಾಗಿ ಲಿವ್ಹಿಂಗಸ್ಟನ್‌ನು ಆ ದೀರ್ಘಯಾತ್ರೆಯನ್ನು ಮುಗಿಸಿದನು.

ಕುರುಮನನ್ನಕ್ಕೆ ತಲ್ಪಿದ್ದೇ ತಡ, ಅವನು ಒಳನಾಡಿನಲ್ಲಿ ಪ್ರವಾಸಗಳನ್ನು ಆರಂಭಿಸಿದನು. ಒಳನಾಡಿನಲ್ಲಿ ನೆಲಿಸಿದ ಆದಿವಾಸಿ ನಿಗ್ರೋ ಜನಾಂಗವನ್ನು ಧರ್ಮದೀಕ್ಷೆಯಿಂದ ಸುಧಾರಿಸುವದಕ್ಕಾಗಿ ಅವರ ತಳಗಳ ಸಮೀಪದಲ್ಲಿಯೇ ಒಂದು 'ಸನ್ನಿಧಿಕೇಂದ್ರ'ವನ್ನು–ಸ್ಥಾಪಿಸುವದೇ ಅವನ ಉದ್ದೇಶವಿತ್ತು. ಅವನ ಮೊದಲನೆಯ ಪ್ರವಾಸ ೧೮೪೧ ರಲ್ಲಿ ನಡೆಯಿತು. ಪ್ರತಿಯೊಂದು ಪ್ರವಾಸದಲ್ಲಿಯೂ ತನ್ನ ಅನುಭವಾವಲೋಕನೆಯನ್ನೆಲ್ಲ ಅವನು ಬರೆದಿಡುತ್ತಿದ್ದನು. ಭೂಸ್ತರ, ಸಸ್ಯ, ನಿಸರ್ಗ ಚರಿತ್ರ ಮುಂತಾದ ಶಾಸ್ತ್ರಗಳ ದೃಷ್ಟಿಯಿಂದ ಆ ಪ್ರದೇಶಗಳ ನಿರೀಕ್ಷಣೆಯನ್ನು ಮಾಡಿ ಕಂಡು ತಿಳಿದದ್ದನ್ನು ಸಂಗ್ರಹ ಮಾಡಿಡುತ್ತಿದ್ದನು. ಇವು ಅವನ ಮುಂದಿನ ಚರಿತ್ರದ ಪ್ರಥಮಾಧ್ಯಾಯಗಳೆನ್ನಬಹುದು.

ಲಿವ್ಹಿಂಗಸ್ಟನ್ನನು ಕುರುಮನನ್ನದಲ್ಲಿ ತನಗಾಗಿ ತನ್ನದೇ ದುಡಿಮೆಯಿಂದ ಒಂದು ಮನೆಯನ್ನು ಕಟ್ಟಿಕೊಂಡಿದ್ದನು. ಅಲ್ಲಿಂದ ೨೦೦ ಮೈಲು ದೂರ ಮಾಬೋಟ್ಸಾ ಎಂಬಲ್ಲಿ ಡಾ. ರಾಬರ್ಟ್ಸ ಮೋಫಾಟ ಎಂಬವನು ತನ್ನದೊಂದು ಮಿಶನ್‌ಕೇಂದ್ರವನ್ನು ತೆರೆದಿದ್ದನು. ಅವನ ಮಗಳಾದ ಮೇರಿ ಮೋಫಾಟಾಳೊಡನೆ ಲಿವ್ಹಿಂಗಸ್ಟನ್ನನು ೧೮೪೪ ರಲ್ಲಿ ಮದುವೆ ಮಾಡಿಕೊಂಡನು.

'ಆಕೆ ಕಾವ್ಯಮಯ ವೃತ್ತಿಯವಳೇನೂ ಅಲ್ಲ. ಆದರೆ ವ್ಯವಹಾರ ಬುದ್ಧಿಯ ಹೆಣ್ಣು; ಗಿಡ್ಡ, ದಪ್ಪ, ಕಪ್ಪು ಕೂದಲಿನ ಹುಡುಗಿ. ಒಳ್ಳೇ ಗಟ್ಟಿ ಮುಟ್ಟ. ನಾನು ಬಯಸಿದ್ದೆಲ್ಲ ಅಷ್ಟೇ.'–ಎಂದು ತನ್ನ ಈ ವಧುವಿನ ವಿಷಯ ಲಿವ್ಹಿಂಗಸ್ಟನ್ನನು ವರ್ಣನೆ ಮಾಡಿದ್ದಾನೆ. ಆಕೆ ನಿಜವಾಗಿಯೂ ಅವನಿಗೆ ಸಹಧರ್ಮಚಾರಿಣಿ ಆದಳು. ಶೋಧ ಸಂಚಾರಿಯ ಹೆಂಡತಿಯು ಅನಿವಾರ್ಯವಾಗಿ ಅನುಭವಿಸಲೇಬೇಕಾದ ಏಕಾಂತವಾಸದ ದುಃಖ–ಕಷ್ಟಗಳನ್ನು ಆಕೆ ತುಂಬ ಸಹನೆಯಿಂದಲೂ ಧೈರ್ಯದಿಂದಲೂ ತಾಳಿಕೊಂಡಳು.

ಇದೇ ಸಮಯ ಲಿವ್ಹಿಂಗಸ್ಟನ್ನನು ಒಂದು ದುರಂತ ಕುತ್ತಿಗೆ ತುತ್ತಾದನು. ಬೇಟೆಗೆ ಹೋದಾಗ ಅವನು ಒಂದು ಸಿಂಹವನ್ನು ಗುಂಡಿಕ್ಕಿ ಗಾಯಗೊಳಿಸಿದನು. ಕೆರಳಿದ ಕೇಸರಿಯು ಅವನ ಮೇಲೆ ಜಿಗಿದು ಅವನನ್ನು ನೆಲಕ್ಕೆ ಉರುಳಿಸಿತು. ಆ ಹಿಂಸ್ರ ಪಶುವು ಅವನ ಒಂದು ಭುಜದ ಮಾಂಸವನ್ನು ಎಲುವಿನ ತನಕವೂ ಕಚ್ಚಿಕೊಂಡು ತಿಂದುಬಿಟ್ಟಿತು. ಈ ಪ್ರಸಂಗವನ್ನು ಅವನು ಹೀಗೆ ಬರೆದಿಟ್ಟಿದ್ದಾನೆ. 'ನನ್ನ ಕಿವಿಯ

ತ್ತಿರವೇ ಗುರುಗುಟ್ಟುತ್ತ ಆ ಸಿಂಹವು ನನ್ನನ್ನು ಒಂದು ಬೇಟೆಯುನಾಯಿ ಬೆಕ್ಕನ್ನು ಹೇಗೋ ಹಾಗೆ ನುಗ್ಗುನುಗ್ಗಾಗಿ ಮಾಡಿತು!' ಈ ಅಪಘಾತದ ಮೂಲಕ ಅವನ ಡತೋಳು ಮುಂದೆ ಜೀವಮಾನವೆಲ್ಲ ಜರ್ಜರವಾಗಿಯೇ ಉಳಿಯಿತು.

ಈ ಪ್ರಸಂಗದ ನಂತರ ಅವನು ಮಾಬೋಟ್ಸಾ ಬಿಟ್ಟು ಚೋನುವಾನೆ ಎಂಬಲ್ಲಿಗೆ ಹೋಗಿ ವಾಸಿಸಿದನು. ಆದರೆ ಅಲ್ಲಿಂದಲೂ ಅವನು ಬೀಡು ಕೀಳಬೇಕಾಯಿತು– ರಿನ ಅರಬಿನ ಮೂಲಕ. ಅಲ್ಲಿಂದ ಲಿವ್ವಿಂಗಸ್ಟನ್ ದಂಪತಿ ಪಶ್ಚಿಮಕ್ಕೆ ಲೊಬೆಂಗ ಹೊಳೆಯ ಕಡೆಗೆ ಸಾಗಿದರು. ಆದರೆ ಈ ಧಾರ್ಮಿಕ ದಂಪತಿಗಳು ಂಟಿಯಾಗಿ ಅಲ್ಲಿಗೆ ಹೋಗಲಿಲ್ಲ. ಬಕ್ವೇನಾ ಎಂಬ ಆದಿವಾಸಿ ನಿಗ್ರೋ ಬಣವೂ ವರ 'ಗಣಪತಿ'ಯೂ ಅವರೊಡನೆ ನಡೆದರು. ಈ ಹೊಸ ವಸಾಹತಿನಲ್ಲಿ ವ್ವಿಂಗಸ್ಟನ್ನನು ಆ ಕಾಡುಜನಕ್ಕೆ ನೀರಾವರಿಯ ತಂತ್ರವನ್ನು ಕಲಿಸಿದನು. ಕೆಲ ಲದಲ್ಲಿ ಅಲ್ಲಿ ಒಂದು ಬೇಸಾಯಗಾರರ ಬಸತಿಯು ಊರ್ಜಿತ ಸ್ಥಿತಿಗೆ ಬಂದಿತು.

ಗ್ರೋ ಬಣಕ್ಕೆ ಹೊಲಸಾಗುವಳಿಯ ಹಂಚಿಕೆಗಳನ್ನು ಕಲಿಸುತ್ತಿರುವಾಗಲೆಲ್ಲ ವ್ವಿಂಗಸ್ಟನ್ನನಿಗೆ ಒಂದೇ ಕನಸು.–ಉತ್ತರೋತ್ತರವಾಗಿ ಉತ್ತರದ ಪ್ರದೇಶಗಳನ್ನು ರಿಶೋಧಿಸಬೇಕೆಂದು ಮತ್ತು ಹೊಸ ಕಾಡು ಬಣಗಳನ್ನೂ ಕಂಡು ಅವರನ್ನು ಧಾರಿಸುವದೇ ಧರ್ಮಪ್ರಚಾರವೆಂದು ಅವನ ನಂಬಿಗೆ. ಅತ್ತಕಡೆಗೆ ಹೊರಡಲು ವನಿಗೆ ಒಂದು ನಿಮಿತ್ತವೂ ದೊರೆಯಿತು. ಒಳನಾಡಿನ ಕಗ್ಗಾಡಿನಲ್ಲಿ ಒಂದು ಾಮಿ' ಎಂಬ ಸರೋವರವಿದೆಯೆಂದು ಜನ ಜನಿತ ವಾರ್ತೆ ಇತ್ತು. ಅದಕ್ಕಾಗಿ ಲವರು ಹಟತೊಟ್ಟು ಹುಡುಕಲಾರಂಭಿಸಿದ್ದರು. ೧೮೪೯ ರಲ್ಲಿ ಲಿವ್ವಿಂಗಸ್ಟನ್ನನು ಲಿಯಂ ಆಸ್ವೇಲ ಮತ್ತು ಮುಂಗೊ ಮುರೇ ಎಂಬ ಇಬ್ಬರು ಇಂಗ್ಲಿಷ ಾರಿಗಳನ್ನು ಜತೆಗೆ ಕರೆದುಕೊಂಡು ಆ ಅಜ್ಞಾತ ಸರೋವರದ ಶೋಧಕ್ಕೆಂದು ರಟನು.

ರಟ ದಾರಿಯಲ್ಲಿ–ಅಗಸ್ತ್ಯಋಷಿಗೆ ವಿಂಧ್ಯ ಪರ್ವತವು ಅಡ್ಡಗಟ್ಟಿದಂತೆ ಹಾಶ್ರಯಕಾರಿಯಾದ ಕಲಹಾರಿ ಮರುಭೂಮಿಯು ನಡುವೆ ಹಬ್ಬಿ ನಿಂತಿತ್ತು. ುರೋಪದ ಎಡೆಗಾರರಿಗೂ ಅದೊಂದು ಅಲಂಘ್ಯ ಅಡ್ಡ ಸಂಕಟವಾಗಿತ್ತು. ದರೆ ಈ ಮೂರು ಮಂದಿ ದಾರಿಕಾರರು ಆ ಮರುಭೂಮಿಯನ್ನು ದಾಟಿ ುಂದರಿದರು. ಹಾಗೆಯೇ ವಾಯವ್ಯ ದಿಕ್ಕಿನಲ್ಲಿ ಘೋರ ಗಿರಿ, ಕಂದರ ಳಗಿಂದ ಹಾದಿ ಹುಡುಕಿಕೊಂಡು ನಡೆದು ರೆಟಾಗಾ ಎಂಬ ನಡಗರದ ಳೆಯನ್ನು ತಲ್ಪಿದರು. (ಆದರೆ ಈ ಹೊಳೆಯು ಯಾವ ನಡಗರವೂ ಈಗ

ಉಳಿಯಲಿಲ್ಲ. ಅದೊಂದು ಬರಿದಾದ ನೀರಿಲ್ಲದ ಶೂನ್ಯ ಪಾತ್ರವಾಗಿದೆ !) ಅಲ್ಲಿ ಅವರು ಎತ್ತಿನ ಬಂಡಿಯನ್ನು ಬಿಟ್ಟು ದೋಣಿಯನ್ನು ಏರುವಂತಾಯಿತು. ದೋಣಿಯಲ್ಲಿ ಕುಳಿತು ಆ ಹೊಸ ಹೊಳೆಯ ಹೊನಲಗುಂಟ ಹಾಯುತ್ತ ಅವರು 'ಗಾವಿ' ಸರೋವರವನ್ನು ಸೇರಿದರು. ಆ ಸರೋವರವು ಲಿವ್ಹಿಂಗಸ್ಟನ್‌ನ ಮೊತ್ತ ಮೊದಲಿನ ಮಿಗಿಲಾದ ಶೋಧ. ಮಾನವನ ನಿಸರ್ಗ ವಿಜಯದ ಮಹಾಜಯೇತಿ ಹಾಸದಲ್ಲಿಯ ಲಿವ್ಹಿಂಗಸ್ಟನ್‌ನು ಬರೆಯಲಾರಂಭಿಸಿದ ಮೊದಲ ಮಾತು ಅಂದು ಬರೆದಂತಾಯಿತು. ಅಂದಿನಿಂದ ಅವನ ಸಮಗ್ರ ಜೀವನವೆಲ್ಲ ಆಫ್ರಿಕೆಯ ಶೋಧದಲ್ಲಿ ಹೋಯಿತು.

ಮರುವರ್ಷ ಲಿವಿಂಗಸ್ಟನ್‌ನು ಮತ್ತೆ ಉತ್ತರಾಭಿಮುಖನಾದನು. ಈ ಸಲ ಅವನು ಸಕುಟುಂಬ ಈ ಯಾತ್ರೆಗೆ ಹೊರಟನು. ಆದರೆ 'ಸೆಟ್ಸೀ' ನೊಣಗಳು ಅವನ ಪ್ರವಾಸಕ್ಕೆ ಪ್ರತಿಬಂಧವನ್ನು ತಂದೊಡ್ಡಿದವು. ಅವನ ಮಕ್ಕಳು ಆ ನೊಣಗಳ ಉಪಹತಿಗೆ ಬೇನೆ ಬಿದ್ದರು. ಆದ್ದರಿಂದ ಅವನು ಕೊಲೊಬೆಂಗಕ್ಕೆ ಹಿಂದಿರುಗಬೇಕಾಯಿತು. 'ಸೆಟ್ಸೀ' ನೊಣಗಳ ಮೂಲಕ ದನಕರುಗಳು ಸಾಯುತ್ತಿದ್ದದರಿಂದ ಆ ಝಾಂಬೇಜಿ ನದಿಯ ಮೇಲೆ ವಸಾಹತುಗಳನ್ನು ಸ್ಥಾಪಿಸಬೇಕೆಂಬ ಲಿವಿಂಗಸ್ಟನ್‌ನ ಯೋಜನೆಯು ಹುಸಿಯಾಯಿತು.

ಝಾಂಬೇಜಿ ಮಹಾನದಿಯನ್ನು ಮೊತ್ತ ಮೊದಲು ಕಂಡುಕೊಂಡ ಭಗೀರಥನು ಲಿವ್ಹಿಂಗಸ್ಟನ್‌ನೇ ೧೮೫೧ ರಲ್ಲಿ ಲಿವ್ಹಿಂಗಸ್ಟನ್ ತನ್ನ ಶಿಕಾರಿ ಸ್ನೇಹಿತ ಅಸ್ವೇಲನೊಡನೆ ಶೆಶೇಕೇ ಎಂಬಲ್ಲಿ ಹೋಗಿದ್ದನು. ಅಲ್ಲಿಯೇ ಲಿನಿಯಾಂತಿಯೆಂಬಲ್ಲಿ ಮಾಕೊಲೊಲೋ ಬಣದ ಮುಖ್ಯನು ಅವರನ್ನು ಒಳ್ಳೇ ಅನುಗ್ರಹದಿಂದ ಸ್ವಾಗತಿಸಿ ಸತ್ಕರಿಸಿದನು. ಆಗ ಲಿವ್ಹಿಂಗಸ್ಟನ್‌ನು ತನ್ನ ಹೆಂಡತಿಯನ್ನು ನಾಲ್ವರು ಮಕ್ಕಳನ್ನು ಇಂಗ್ಲಂಡಿಗೆ ಕಳಿಸುವ ಸಂಕಲ್ಪವನ್ನು ಮಾಡಿದನು. ಅವರನ್ನು ಕೇಪಟೌನಿಗೆ ಒಯ್ದು ತಲ್ಪಿಸಿದನು. ಅವನ ಮಿಶನ ಸಂಸ್ಥೆಯು ಅವನಿಗೆ ಸಲ್ಲಿಸುತ್ತಿದ್ದ ಸಂಬಳ, ಬರೇ ವರ್ಷಕ್ಕೆ ೧೦೦ ಪೌಂಡು. ಕೇವಲ ಅಸ್ವೇಲನ ಔದಾರ್ಯವೇ ತನ್ನ ಪ್ರಿಯಜನರನ್ನು ಮಾತೃಭೂಮಿಗೆ ಕಳುಹಿಸಲು ಅನುಕೂಲವನ್ನೊದಗಿಸಿಕೊಟ್ಟಿತು.

ಆನಂತರ ೧೮೫೨ ರ ಜೂನ ತಿಂಗಳಲ್ಲಿ ಲಿವ್ಹಿಂಗಸ್ಟನ್‌ನು ಕೈಕೊಂಡ ಶೋಧ ಸಂಚಾರವೇ ಅವನ ಹೆಸರು ಮೊಳಗುವಂತೆ ಮಾಡಿತು. ಮೊದಲು ಅವನು ಕೊಲೊಬೆಂಗಕ್ಕೆ ಹೋದನು. ಆದರೆ ಅಲ್ಲಿ ಏನಿತ್ತು ? ಆಫ್ರಿಕಾದಲ್ಲಿ ನೆಲಸಿದ 'ಬೋರ' ಎಂದೆನಿಸಿಕೊಳ್ಳುವ ಡಚ್ಚ ಜನರು, ಆ ಊರನ್ನು ಸುಟ್ಟು ಬಿಟ್ಟಿದ್ದರು.

ಲ್ಲಿಯ ನಿಗ್ರೋ ಜನರಲ್ಲಿ ಅನೇಕರನ್ನು ಕೊಂದುಹಾಕಿದ್ದರು. ಲಿವ್ಹಿಂಗಸ್ಟನ್‌ನ ಮನೆಯನ್ನು ಆ ಕೊಳ್ಳೆಗಾರರು ಲೂಟಿಮಾಡಿದ್ದರು. ಮಡದಿ ಮಕ್ಕಳನ್ನು ದೂರ ಡಲಾಚೆಗೆ ಕಳುಹಿಸಿ ಬಂದ ಲಿವ್ಹಿಂಗಸ್ಟನ್‌ನಿಗೆ ತನ್ನ ಶೂನ್ಯ ಮನೆಯು ಮತ್ತು ುತ್ತಲಿನ ವಸತಿಯ ಇಂಥ ಕ್ರೂರವಾದ ಸರ್ವ ನಾಶವನ್ನು ನೋಡಿ ಏನೆನಿಸಿರ ೀಕು ? ಅವನು ಉದಾಸೀನನಾಗಿ, ಅಜ್ಞಾತವನ್ನು ಅರಸುತ್ತ ಉತ್ತರಕ್ಕೆ ರಳಿದನು.

ವನ ಮುಂದಿನ ನಿಲ್ದಾಣ ಲಿನಿಯಾಂತಿ ಆಯಿತು. ಅಲ್ಲಿ ಹಿಂದೆ ಹೇಳಿದ ಾಕೊಲೊಲೋ ಬಣವು ಅವನಿಗೆ ಆಶ್ರಯವಿತ್ತಿತು. ಅಲ್ಲಿ ಮುಂದಿನ ಶೋಧ ಾತ್ರೆಯ ಸನ್ನಾಹವನ್ನು ಮಾಡಿಕೊಳ್ಳಲು, ಅವನು ಒಂದು ತಿಂಗಳು ತಂಗಿದನು. ವನ ಮೊದಲನೆಯ ಯೋಜನೆ, ಝಾಂಬೇಜಿಯ ಜವಳು ಭೂಮಿಯನ್ನು ದಾಟಿ, ನ್ನ ಮಿಶನ್ ಕಾರ್ಯಕ್ಕೆ ಯೋಗ್ಯ ಕೇಂದ್ರಗಳನ್ನು ಕಲ್ಪಿಸಿಕೊಳ್ಳಬೇಕೆಂದಿತ್ತು. ವಿಚಾರದಿಂದ ಅವನು ಆ ನದಿಯ ದಂಡೆಹಿಡಿದು ಕ್ಯಾಪೊಂಬೋ ಎಂಬಲ್ಲಿಯ ಂಗಮದನಕ ಸಾಗಿದನು. ಹಾದಿಯುದ್ದಕ್ಕೂ ಅವನು ಕಂಡದ್ದು ಅನಾರೋಗ್ಯ ರವಾದ ಜವಳು. ಭಯಂಕರವಾದ ಸೆಟ್ಸೀ ನೊಣದ ಉಪಟಳ. ಈ ರೀತಿ ಾಶೆಪಟ್ಟು ಲಿವ್ಹಿಂಗಸ್ಟನ್‌ನು ಒಳನಾಡಿನ ಶೋಧಕ್ಕಾಗಿಯೇ ಮುಂದೆ ನುಗ್ಗ ತೆದನು. ಉತ್ತರ ಬೆಚುವನಲ್ಯಾಂಡಿನಿಂದ ಪಶ್ಚಿಮ ದಂಡೆಗೆ ಮುಟ್ಟಲು ವಹಾರಕ್ಕೆ ಯೋಗ್ಯವಾದ ದಾರಿಯನ್ನೊಂದು ಹುಡುಕಿ ತೆಗೆಯಲು ಅವನು ಿಪಟ್ಟನು.

ಾಕೊಲೊಲೋ ಬಣದ ಮುಖ್ಯನಾದ ಸೆಕೆಲೆತುವು ಲಿವ್ಹಿಂಗಸ್ಟನ್‌ನ ಜತೆಗೆ ೨೭ ರನ್ನು ಕೊಟ್ಟನು. ಅವರೊಡನೆ ತೀರ ಕನಿಷ್ಠ ಪೂರೈಕೆ ಸಿದ್ಧತೆಯೊಂದಿಗೆ ್ಹಿಂಗಸ್ಟನ್ನನು ಹೊರಟನು—ಅಂಗೊಲಾ ದಂಡೆಯ ಲೋಅಂಡಾ ಎಂಬ ನವನ್ನು ತಲ್ಪುವ ಗುರಿ ಇಟ್ಟುಕೊಂಡು ಆ ಅಜ್ಞಾತ ಅರಣ್ಯಾಂತರದಲ್ಲಿ ೊಸ ಹಾದಿಯನ್ನು ಹಣೆಬರಹವನ್ನೂ ಹುಡುಕಿಕೊಂಡು. ಅವನ ಆ ಮಹಾ ಸ್ಥಾನದ ಸಲಕರಣೆ ಸಿದ್ಧತೆಗಳ ವರ್ಣನೆಯನ್ನು ಅವನ ಬಾಯಿಯಿಂದಲೇ ಳಿರಿ :—

ನ್ನ ಮಂದಿಯ ರಕ್ಷಣೆಗಾಗಿ ಮೂರು ಮಸ್ಕೇಟ್—ತುಬಾಕಿಗಳಿದ್ದವು, ನನ್ನ ುವಾಗಿ ಒಂದು ರೈಫಲ್ ಮತ್ತು ಜೋಡುಕೊಳವೆಯ ಬಂದೂಕು ಇದ್ದವು. ದೊಮ್ಮೆ ಝಾಂಬೇಜಿಯ ಮೇಲ್ಪಟ್ಟದಲ್ಲಿ ಲಿಬಾಕ್ಕೆ ಹೋದಾಗ ಅಡವಿಗಳಲ್ಲಿ ುಲವಾದ ಬೇಟೆಯನ್ನು ನೋಡಿದ್ದೆನು. ಆದ್ದರಿಂದ ನಮ್ಮ ಮಂಡಳಿಯ

ಆಹಾರದ ಕೊರತೆಯನ್ನೆಲ್ಲ ನಾನೂ ಸಹಜವಾಗಿ ಪೂರೈಸಬಹುದೆಂದು ಊಹಿಸಿದ್ದೆನು. ಅಲ್ಲದೆ, ಭಾರವಾದ ಒಜ್ಜೆಗಳನ್ನು ಹೊರಬೇಕಾದರೆ ನನ್ನ ಜತೆಗಾರರು ಇದುರಿಸ ಬಹುದಾದ ಅಡೆತಡೆಗಳ ನಿರುತ್ಸಾಹವನ್ನು ಹೋಗಲಾಡಿಸಲು ನಾನು ಕೆಲವೇ ಬಿಸ್ಕಿಟುಗಳನ್ನು ಕೆಲವೇ ರತ್ತಲು ಚಹ, ಸಕ್ಕರೆಗಳನ್ನು, ಬರೆ ೨೦ ರತ್ತಲು ಕಾಫಿಯನ್ನು ಸಂಗಡ ತೆಗೆದುಕೊಂಡಿದ್ದೆನು. ಅರಬರ ಅನುಭವದಂತೆ ಕಾಫಿಯು, ಬಿಸಿಲಲ್ಲಿ ಬಳಲಿದ ಅಥವಾ ಬಹಳ ದಣಿದನಂತರ ಹಾಲು ಸಕ್ಕರೆಗಳು ಇಲ್ಲ ದಿದ್ದಾಗ್ಯೂ ಅತ್ಯಂತ ಉತ್ತೇಜಕ ಪೇಯವು. ಒಂದು ಸಣ್ಣ ತವರಿನ ಡಬ್ಬಿಯಲ್ಲಿ ಹೆಚ್ಚಿನ ಶರ್ಟು, ಚಣ್ಣ ಮತ್ತು ಬೂಟುಗಳನ್ನು ತುಂಬಿಕೊಂಡು ಒಯ್ದೆವು,- ಮುಂದೆ ನಾಗರಿಕ ಜೀವನದ ಸೀಮೆಯನ್ನು ಮುಟ್ಟಿದಾಗ ತೊಟ್ಟುಕೊಳ್ಳಲಿಕ್ಕೆಂದು. ದಾರಿಯಲ್ಲಿ ತೊಟ್ಟು ಸವೆದೊಗೆಯಲಿಕ್ಕೆಂದು ಉಳಿದ ಬಟ್ಟೆಗಳನ್ನೆಲ್ಲ ಒಂದು ಚೀಲದಲ್ಲಿ ತುರುಕಿದ್ದೆವು. ಇನ್ನೊಂದು ಚೀಲ, ಮದ್ದುಗಳ ಸೀಸೆಗಳಿಗಾಗಿಯೂ, ಮತ್ತೊಂದು ಪುಸ್ತಕಗಳಿಗಾಗಿಯೂ ತೆಗೆದುಕೊಂಡಿದ್ದೆವು. ಕೇವಲ ಪಂಚಾಂಗದ ಪಟ್ಟಿ, ಥೊಮ್ಸನ್ನನ ದಶಾಂಶ ವರ್ಗಮೂಲದ ಕೋಷ್ಟಕಗಳು ಮತ್ತು ಬೈಬಲ್ಲು- ಇವಿಷ್ಟು ನನ್ನ ಪುಸ್ತಕಗಳಾಗಿದ್ದವು. ನಾಲ್ಕನೆಯ ಪೆಟ್ಟಿಗೆಯಲ್ಲಿ ಮಾಯಾದೀಪ ವನ್ನು ತಂದಿದ್ದೆವು. ಅದು ನಮಗೆ ಬಹಳ ಉಪಯೋಗಕ್ಕೆ ಬಿದ್ದಿತು. ಕೋನ ಮಾಪಕ, ಉಷ್ಣತಾಮಾಪಕ ಮತ್ತು ಹೋಕಾಯಂತ್ರಗಳನ್ನು ಬಿಡಿಯಾಗಿ ಒಯ್ದಿದ್ದೆವು. ನನ್ನ ಮದ್ದು ಗುಂಡುಗಳ ಸಂಗ್ರಹವು ಎಲ್ಲ ಒಜ್ಜೆಗಳಲ್ಲಿ ಹಂಚಿ ತುಂಬಲಾಗಿತ್ತು. ಒಂದು ಒಜ್ಜೆಯು ಅಪಘಾತಕ್ಕೆ ಈಡಾಗಿ ಕಳೆದು ಹೋದರೂ ನಾವು ಬಳಸಲಿಕ್ಕೆ ಇನ್ನೂ ಒಜ್ಜೆಗಳಲ್ಲಿಯ ಗುಂಡುಗಳು ಸಿಗಬೇಕೆಂದು ಹಾಗೆ ಮಾಡಲಾಗಿತ್ತು. ನಮ್ಮ ಆಹಾರದ ಮುಖ್ಯ ಆಶೆಯು ಆ ಮದ್ದು ಗುಂಡುಗಳನ್ನೇ ಅವಲಂಬಿಸಿತ್ತು. ಆದರೂ ಆಹಾರ ಸಿಗದಿದ್ದ ಪಕ್ಷಕ್ಕೆಂದು ೨೦ ಪೌಂಡು ಕಾಳನ್ನು ಒಯ್ದಿದ್ದೆನು. ಜತೆಗೆ, ಮಲಗಲು ಸಾಕಾಗುವಷ್ಟು ಚಿಕ್ಕ ಲಮಾಣಿಯರ ಡೇರೆ, ಕಂಬಳಿಯಂತೆ ಬಳಿಸಲು ಕುರಿದೊಗಲಿನ ಬುರುಕಿ ಮತ್ತು ಹಾಸಿಕೊಳ್ಳಲು ಕುದುರೆಯ ಥಡಿಯ ಕಂಬಳಿ ಇವಿಷ್ಟನ್ನು ನಾನು ತೆಗೆದುಕೊಂಡಿದ್ದೆನು.'

೧೮೫೨ ನೇ ನವಂಬರ ೧೧ ಕ್ಕೆ ಲಿವ್ವಿಂಗಸ್ಟನ್ನನು ಲಿಯಾಂತಿಯನ್ನು ಬಿಟ್ಟನು. ಆ ಮಂಡಳಿಯು ಒಂದು ದೋಣಿಯಲ್ಲಿ ಝಾಂಬೇಜಿಯಗುಂಟ ಪ್ರವಾಸಮಾಡಿತು. ಈ ಪ್ರವಾಸವು ಅವರನ್ನು ಮಾಕೊಲೊಲೋ ಬಣದ ಪ್ರದೇಶದಿಂದ ಲಿಬೊಂತಾ ಪ್ರದೇಶಕ್ಕೆ ಒಯ್ಯಿತು. ಅಲ್ಲಿಂದ ಅವರು ಆ ವಿಚಿತ್ರವಾದ, ಹಲವೊಮ್ಮೆ ವಿರೋಧಿಗಳಾದ ಬಣಗಳ ಪ್ರದೇಶಗಳೊಳಗಿಂದ ಹಾಯಬೇಕಾಯಿತು. ಆದರೆ ಲಿವ್ವಿಂಗಸ್ಟನ್‌ನ ಮುಂದಾಳುತನದ ತಾಳ್ಮೆ ಜಾಣ್ಮೆಗಳಿಂದ ದಾರಿಯು

...ಗಮವಾಯಿತು. ಬಾರೊತ್ಸೇ ಕೊಳ್ಳದೊಳಗಿಂದ ನಡೆಯುವಾಗೆಲ್ಲ ಅವನನ್ನು
...ರವು ಹಣ್ಣು ಮಾಡಿತು. ಅಲ್ಲಿಯ ಜವಳು ಭೂಮಿಯೊಳಗಿಂದ ನಡೆಯುತ್ತ
...ಲೊಲೊ ಸರೋವರದಗುಂಟ ಹಾಯ್ದನು. ಈ ಸರೋವರದ ಜಲಸ್ರೋತಗಳು
...ಝಾಂಬೇಜಿ ಮತ್ತು ಕಾಂಗೊ ನದಿಗಳಲ್ಲಿ ಹರಿದು ಬಂದು ಕೂಡುತ್ತವೆ. ಅಲ್ಲಿಂದ
...ನನು ಕಿಯೋಕೊ ಪ್ರದೇಶವನ್ನು ಪ್ರವೇಶಿಸಿದನು. ಮಹಾರಣ್ಯಗಳ ವೈಭವ
...ಲಿಯಾದ ವನಸ್ಪತಿ ವೈಪುಲ್ಯದೊಳಗಿಂದ ಪ್ರವಾಸ ಮಾಡುವಾಗ ಆ ಭವ್ಯ
...ಂದರ್ಯವನ್ನು ಕಂಡು ಆ ಲಿವ್ಹಿಂಗಸ್ಟನ್ನನು ಆನಂದಮುಗ್ಧನಾದನು.

...ರರ ಪರಿಣಾಮ ವಿಪರೀತವಾಯಿತು. ಅವನ ಜತೆಯ ಮಾಕೊಲೊಲೋ ಜನರೆಲ್ಲ
...ರಿಗೆಟ್ಟರು. ಅವನ ಅಪ್ಪಣೆಯನ್ನು ಮೀರಿ ಬಂಡನ್ನೆಬ್ಬಿಸಿದರು. ಆದರೂ
...ಹ್ಹಿಂಗಸ್ಟನ್ನನು ವಿಚಲಿತನಾಗಲಿಲ್ಲ. ದೃಢವಾದ ಇಚ್ಛಾ ಶಕ್ತಿಯ ಪ್ರಭಾವಕ್ಕೆ
...ರನ್ನೇ ಮಣಿಸಿದನು. ಆ ಕುರಿತು ಅವನೇ ಅನ್ನುವದನ್ನು ಓದಿ ನೋಡಿ :-

... ಬಂಡನ್ನು ತಗ್ಗಿಸದಿದ್ದರೆ ಶಿಸ್ತು ಹೇಳ ಹೆಸರಿಲ್ಲದಂತಾಗುತ್ತಿತ್ತು; ಮತ್ತು
...ಸ್ಮ ಬಲ ನಮ್ಮ ಶಿಸ್ತನ್ನೇ ಅವಲಂಬಿಸಿ ಇತ್ತು. ಇದನ್ನು ಮನಗಂಡು ನಾನು
...ದೂಕನ್ನು ಎತ್ತಿಕೊಂಡು ಅವರ ಕಡೆಗೆ ಧಾವಿಸಿದೆನು. ನನ್ನ ಮುದ್ರೆಯೇ
...ಿ ಅತಿ ಉಗ್ರವಾಗಿ ಕಂಡಿರಬೇಕು. ಕಾರಣ ಬಂಡುಗಾರರು ಕಂಗೆಟ್ಟು ಕಾಲ್ಕಿತ್ತು
...ರಿ ಹೋದರು. ಕೆಲವರು ಕೂಗಳತೆಯಲ್ಲಿಯೇ ಇರುವಾಗ ಅವರಿಗೆ ಕೇಳಿಸುವಂತೆ
...ನು ಅಂದೆನು : 'ಶಿಸ್ತು-ಶಾಸನವನ್ನು ನಾನು ಕಾಪಾಡಿಕೊಳ್ಳಲೇಬೇಕು;
...ಕ್ಕಾಗಿ ಕೆಲವರ ಕೈಕಾಲುಗಳು ಹೋದರೂ ಅಡ್ಡಿಯಿಲ್ಲ. ನಾವೆಲ್ಲ ಕೂಡಿ
...ಯಲ್ಲಿ ಸಂಚರಿಸುತ್ತಿರುವ ತನಕವೂ ನಾನೇ ಸ್ವಾಮಿಯು, ಹೊರತು ನೀವಲ್ಲ.'
... ನಿರ್ಧಾರದ ಬಗ್ಗೆ ಸಂದೇಹಪಡಲು ಅವರಿಗೆ ಸಮಯವು ಸ್ವಲ್ಪವೇ ಇತ್ತು.
...ರಿಂದ ಅವರು ಕೂಡಲೇ ನಿರ್ಧಾರಕ್ಕೆ ಬಂದರು. ಅತ್ಯಂತ ವಿಧೇಯರಾದರು.

...ಿಯೊಂದು ಬಗೆಯ ತೊಂದರೆಯನ್ನೂ ಪ್ರತಿಘಟಿಸುತ್ತ ಲಿವ್ಹಿಂಗಸ್ಟನ್‌ನ
...ಂಡಳಿಯು ಪಶ್ಚಿಮನಿಟ್ಟಿನಲ್ಲಿ ಸಾಗಿತು. ಕೊನೆಗೆ ಪಶ್ಚಿಮ ಕರಾವಳಿಯನ್ನು
...ಪಿಸಿತು, ಆಗ ಅವನಿಗೆ ಅಲ್ಲಿ ಅಂಗೋಲಾ ಸೀಮೆಯ ಪೋರ್ತುಗೀಜ
...ಗಳಿಂದ ಕೆಲವು ನೆರವು ದೊರೆಯಿತು ಮತ್ತು ಕಟ್ಟ ಕಡೆಗೆ ಮಾಕೊಲೊಲೋ
...ದವರು ಪರಮಾಶ್ಚರ್ಯಪಡುವಂತೆ, ಲಿವ್ಹಿಂಗಸ್ಟನ್‌ನು ತನ್ನ ಕೊನೆಯ
...ಣವಾದ ಲೊಆಂಡಾಕ್ಕೆ ೧೮೫೪ ರ ಮೇ ೩೧ ನೇ ದಿನ ತಲ್ಪಿದನು.

ಅವನಿಗೆ ಇಂಗ್ಲಂಡಕ್ಕೆ ಮರಳಿ ಹೋಗಲು ಅನುವು ಅನಾಯಾಸವಾಗಿ

ದೊರಕಿತ್ತು. ಒಂದು ಹಡಗದಲ್ಲಿ ಅವನಿಗಾಗಿ ಸ್ಥಳವು ಸಿಗುವಂತಿತ್ತು–ಗೆಳೆಯರ ಆಗ್ರಹದಿಂದ. ಆದರೆ ಲಿವ್ಹಿಂಗಸ್ಟನ್‌ನು ಅದನ್ನು ನಿರಾಕರಿಸಿದನು. ತನ್ನ ಜತೆಗೆ ಬಯಲು ಬೆಟ್ಟಗಳನ್ನು ಬಳಸಿ ಬಂದ ಮಾಕೊಲೊಲೋ ಬಣದವರನ್ನು ಅವರ ನಾಡಿಗೆ ತಿರುಗಿ ಒಯ್ಯುವದಿತ್ತು; ಅದಕ್ಕೂ ಮಹತ್ವದೆಂದರೆ, ಇದೀಗ ಮುಗಿಸಿದ ದೀರ್ಘ ಪ್ರವಾಸದ ಫಲವಾಗಿ ಉದಿಸಿದ ಧೈರ್ಯವು ಲಿವ್ಹಿಂಗಸ್ಟನ್‌ನನ್ನು ಆಫ್ರಿಕೆಯನ್ನೇ ಪೂರ್ವಾಭಿಮುಖವಾಗಿ ದಾಟಲು ಸ್ಫೂರ್ತಿಯನ್ನು ಕೊಟ್ಟಿತು. ಝಾಂಬೇಜಿಯನ್ನು ಸಮುದ್ರದವರೆಗೂ ಹಿಂಬಾಲಿಸಿ ಹೋಗಬೇಕೆಂಬ ಹಟವು ಅವನಲ್ಲಿ ಹುರಿಗೊಂಡಿತು. ಅವನು ಸಮುದ್ರದಾಚೆಗೆ ಏಕಾಕಿನಿಯಾಗಿ ನಿರೀಕ್ಷೆಯಲ್ಲಿ ನಿಂತ ಹೆಂಡತಿಗೆ ಬರೆದು ತಿಳಿಸಿದನು.–'ನಾನು ಹಿಂದಿರುಗುತ್ತಿದ್ದೇನೆ; ಏಕೆಂದರೆ ನಾನು ಸಾಧಿಸಲು ಅಂಗೀಕರಿಸಿದ ಕಾರ್ಯವು ಇನ್ನೂ ಅರೆವಾಸಿ ಮುಗಿದಿದೆ'

ಲೋಅಂಡಾದಿಂದ ಅವನು ಹೊರಡುವದು ಆಮಶಂಕೆಯ ವಿಕಾರದ ಮೂಲಕ ಮುಂದೆ ಬಿತ್ತು. ಆದರೆ ಕೊನೆಯದಾಗಿ ಅವನು ಪುಂಗೊಲಿಂಡೊಂಗೊ ಎಂಬಲ್ಲಿಗೆ ಹೊರಟನು. ಅಲ್ಲಿ ತನ್ನ ಮಹಾಯಾತ್ರೆಯ ಸನ್ನಾಹಕ್ಕಾಗಿ ಕೆಲವು ತಿಂಗಳು ತಂಗಿ, ೧೮೫೫ ನೇ ವರ್ಷಾರಂಭದ ದಿನ ಮತ್ತೆ ಹೊರಟನು. ತಾನು ಬಂದ ಮಾರ್ಗವನ್ನೇ ಅನುಸರಿಸಿದನು. ದೀರ್ಘ ಪ್ರವಾಸವನ್ನು ಮುಗಿಸಿ ಅವನು ಲಿಬೊಂತಾಕ್ಕೆ ಬಂದನು. ಮಾಕೊಲೊಲೋ ಬಣವು ಅವನನ್ನೂ ಅವನ ಒಡನಾಡಿಗಳಾಗಿ ಹೋಗಿ ಬಂದ ತನ್ನವರನ್ನೂ ಎಣೆಯಿಲ್ಲದ ಉತ್ಸಾಹ–ಉಲ್ಹಾಸಗಳಿಂದ ಬರಮಾಡಿಕೊಂಡಿತು. ಲಿನಿಯಾಂತಿಯನ್ನು ತಲ್ಪಿದಾಗ ಅವನಿಗೆ ಈ ನಿಗ್ರೋ ಬಣದ ನಂಬಿಗಸ್ತಿಕೆಯ ನಿದರ್ಶನವು ಚೆನ್ನಾಗಿ ಆಯಿತು. ಅವನು ಬಿಟ್ಟುಹೋದ ಬಂಡಿಯನ್ನು ಒಂದು ಅಂಗುಲವಾದರೂ ಸರಿಸಿದ್ದಿಲ್ಲ, ನಿಂತಲ್ಲಿಂದ–ಅವನು ಹೇರಿಟ್ಟ ಸಾಮಾನುಗಳೆಲ್ಲ ಇದ್ದಂತೆಯೇ ಇದ್ದವು. ಮುಂದಿನ ಪ್ರಯಾಣಕ್ಕಾಗಿ ಹೊಸ ಜನರ ಸಿಬ್ಬಂದಿಯನ್ನು, ಅನ್ನ ಸಾಮುಗ್ರಿ, ಪಶುಬಲ ಮುಂತಾದುದನ್ನು ಅವರ ಮುಖ್ಯಸ್ಥನು ತುಂಬ ಪೂರೈಸಿದನು.

ಅದೇ ವರ್ಷದ ನವ್ಹೆಂಬರದಲ್ಲಿ ಲಿವ್ಹಿಂಗಸ್ಟನ್‌ನು ಮುಂದಡಿ ಇಟ್ಟನು. ೧೫ ದಿನಗಳ ಪಯಣದಕೊನೆಗೆ ಅವನು ಒಂದು ಅದ್ಭುತ ಶೋಧವನ್ನು ಮಾಡಿ, ಜಗತ್ತಿನ ಚಿರಕಾಲದ ಬೆರಗಿಗೆ ಕಾರಣನಾದನು. ಅದೆಂದರೆ ವಿಕ್ಟೋರಿಯಾ 'ತಡಸಲಿನ ಶೋಧ. ಈ ತಡಸಲಿಗೆ ಆದಿವಾಸಿಗಳು ಕೊಟ್ಟ ಮೂಲ ಹೆಸರು ಮೊಸಿಯೊತುನ್ಯಾ ತಡಸಲು. (ಈ ವಿಚಿತ್ರ ಶಬ್ದದ ಅರ್ಥವು 'ಮೊಳಗುವ ಹೊಗೆ' ಎಂದು, ಎಂಥ ಕಾವ್ಯಮಯ ಉತ್ಪ್ರೇಕ್ಷೆ ನೋಡಿ, ಕಾಡು ವಿಂದುಳಿನದು !)

ಲ್ಲಿಂದ ಮುಂದೆ ಪ್ರತಿಕೂಲ ಪ್ರದೇಶದಲ್ಲಿ ಸಾಗುತ್ತ ಕೇವಲ ಕಂದಮೂಲ ಮತ್ತು ಾಡುಜೇನಿನ ಮೇಲೆ ಜೀವಿಸುತ್ತ ಲಿವ್ಹಿಂಗಸ್ಟನ್‌ನು ೧೮೫೬ ರ ಮಾರ್ಚ ೨ ನೇ ಾನ ತಿತೇ ಎಂಬ ಒಂದು ಚಿಕ್ಕ ಬಸತಿಯನ್ನು ಸೇರಿದನು. ಆಗ ಅವನು ಾಯುವಷ್ಟು ಸೋತುಹೋಗಿದ್ದನು. ಪೋರ್ತುಗೀಜ ಠಾಣ್ಯದವರು ಅವನಿಗೆ ಶ್ರಯೋಪಚಾರವನ್ನು ನೀಡಿದರು. ಅಲ್ಲಿಂದ ಅವನು ಮೇ ತಿಂಗಳ ೨೨ ಕ್ಕೆ ್ಯಲಿಮನೆ ಎಂಬ ಸ್ಥಾನವನ್ನು ಮುಟ್ಟಿದನು.-ಅದು ಒಂದು ದೊಡ್ಡ ಕೆಸರ ಬ್ಬದ ಮೇಲಿನ ನರಹತ್ಯೆಯ ಸ್ಥಾನವೆನಿಸಿಕೊಂಡಿತ್ತು.

ವರ್ಷದ ಅಂತ್ಯಕ್ಕೆ ಅವನು ಇಂಗ್ಲಂಡಕ್ಕೆ ಮರಳಿದನು. ಇಂಗ್ಲಂಡದಿಂದ ೊರಟಾಗ, ಒಬ್ಬ ಗೊತ್ತುಪತ್ತೆ ಇಲ್ಲದ ಗೋಸಾವಿಯಂತ ಧರ್ಮ ಪ್ರಚಾರಕ ಾಗಿದ್ದ ಲಿವ್ಹಿಂಗಸ್ಟನ್‌ನು ಹಿಂದಿರುಗಿ ಬಂದಾಗ ಒಬ್ಬ ರಾಷ್ಟ್ರೀಯ ಮಹಾಪುರುಷ ನಿಸಿಕೊಂಡನು. ಬ್ರಿಟಿಶ ರಾಯಲ್ ಜಿಯೊಗ್ರಫಿಕಲ್ ಸೊಸಾಯಿಟಿಯು ಅವನಿಗೆ ಕ್ಟೋರಿಯಾ ಪದಕವನ್ನು ಅರ್ಪಿಸಿತು. ಇದಕ್ಕೂ ಮಿಗಿಲಾದ ಗೌರವವೆಂದರೆ ಕ್ಸಫರ್ಡ ಮತ್ತು ಕೇಂಬ್ರಿಜ ವಿಶ್ವವಿದ್ಯಾಲಯಗಳು ಅವನಿಗೆ ಗೌರವದ ಪದವಿ ಳನ್ನು ಅನುಗ್ರಹಿಸಿದವು. ಇನ್ನೂ ವಿಶೇಷವೆಂದರೆ, ಎಡಿನ್‌ಬರ್ಗ ಮತ್ತು ಗ್ಲಾಸ್ಗೊ ನಗರಗಳು ತಮ್ಮ ನಗರದ ಸ್ವಾತಂತ್ರ್ಯ ಸನದುಗಳನ್ನು ಅವನಿಗೆ ಂಭಾವನೆಯಾಗಿ ನೀಡಿದವು. (ಇದೊಂದು ಗೌರವಾರ್ಹ ನಾಗರಿಕರಿಗೆ ನಗರದ ದಸ್ಯತ್ವದ ವಿಶೇಷ ಮನ್ನಣೆಯನ್ನು ಕೊಡುವ ಸಂಭಾವನೆಯ ವಿಧಿಯು.) ದೆಲ್ಲ ಸನ್ಮಾನ ಸತ್ಕಾರಗಳ ಸುರಿಮಳೆಯಲ್ಲಿಯೂ ಧರ್ಮ ಪ್ರಚಾರಕನೂ ಂಯಮಿಯೂ ಆದ ಲಿವ್ಹಿಂಗಸ್ಟನ್‌ನ ತಲೆಯು, ನಮ್ರವಾಗಿಯೇ ಇತ್ತು. ಜಯದುಂದುಭಿಯ ಒಂದು ಬಿಡಿ ಸದ್ದಿಗೂ ನಾನು ಪಾತ್ರನೆಂದು ಸೋಗು ಾಡಲಾರೆ. ಎಂದು ನುಡಿದನು. 'ಕವಚವನ್ನು ತೆಗೆದಿಡುವಾಗ ಯಾರೊಬ್ಬನು ಂಭಕೊಚ್ಚಿಕೊಳ್ಳಬಹುದು. ಆದರೆ ನಾನು ನನ್ನದನ್ನು ಇದೀಗ ತೊಟ್ಟು ೊಳ್ಳುತ್ತಿದ್ದೇನೆ!' ಎಂದು ಆ ವಿನಯಶೀಲ ಕ್ರೈಸ್ತ ಕಿಂಕರನು ಉದ್ಗರಿಸಿದನು. ಂಬ್ರಿಜದಲ್ಲಿ ಅವನು ಇತ್ತ ಉಪನ್ಯಾಸದ ಫಲವಾಗಿ ಮಧ್ಯ ಆಫ್ರಿಕಾಕ್ಕೆ ಹೋಗಿ ಡಿಯಲು, ವಿಶ್ವವಿದ್ಯಾಲಯದ ಮಿಶನರಿ ಸಂಸ್ಥೆಯು ಸ್ಥಾಪಿತವಾಯಿತು. ದರೆ ಲಿವ್ಹಿಂಗಸ್ಟನ್‌ನಿಗೆ ಇಂಥ ಆಡಂಬರದ ಸಂಸ್ಥೆಗಳಲ್ಲಿ ನಂಬಿಕೆ ಇದ್ದಿಲ್ಲ. ದ್ದರಿಂದ ಲಂಡನ ಮಿಶನರಿ ಸೊಸಾಯಿಟಿಯಿಂದಲೂ ಅವನು ್ನ ಸದಸ್ಯತ್ವವನ್ನು ಬಿಟ್ಟುಕೊಟ್ಟನು! ಅವನನ್ನು ಬ್ರಿಟಿಶ ಸರಕಾರವು ಕ್ವಿಲಿ ನೆಯಲ್ಲಿ ತಮ್ಮ ರಾಯಭಾರಿಯಾಗಿ ನೇಮಿಸಿ, ಪೂರ್ವ ಮತ್ತು ಮಧ್ಯ ್ರಿಕೆಯ ಪರಿಶೋಧನೆಗಾಗಿ ಕಳಿಸುವ ಒಂದು ಸಂಚಾರಿದಲಕ್ಕೆ ನಾಯಕನಾಗಿ ್ಟಿಗಟ್ಟಿ ಬೀಳ್ಕೊಟ್ಟಿತು.

ಮಿಶನರಿ ಸಂಸ್ಥೆಯನ್ನು ಬಿಟ್ಟುಕೊಟ್ಟ 'ತಪ್ಪಿ'ಗಾಗಿ ಅವನನ್ನು ಒಬ್ಬರು ತೀವ್ರವಾಗಿ ನಿಷೇಧಿಸಿದರು. ಅವರಿಗೆ ಲಿವ್ವಿಂಗಸ್ಟನ್‌ನ ಉತ್ತರವಿದು.

'ದೇವರ ಒಬ್ಬ ಸೇವಕನೆಂದಲ್ಲದೆ ಇನ್ನ್ಯಾವ ರೂಪದಲ್ಲಿಯೂ ನಾನು ಎಲ್ಲಿಯೂ ಎಂದಿಗೂ ಕಾಣಿಸಿಕೊಂಡಿಲ್ಲ. ಆ ಪ್ರಭುವಿನ ಹಸ್ತದ ದಿಗ್ದರ್ಶನವನ್ನೇ ನಾನು ಕೇವಲ ಹಿಂಬಾಲಿಸುತ್ತ ಬಂದಿದ್ದೇನೆ. ಕಂಕುಳಲ್ಲಿ ಬಾಯಿಬಲ್ ಇಟ್ಟುಕೊಂಡು ಅಲೆದಾಡುವ ಡಾಂಭಿಕ ಧರ್ಮೋಪದೇಶಕನಂತೆ ಧರ್ಮಪ್ರಚಾರದ ಕುರಿತು ಅಭಿಪ್ರಾಯಗಳು ಸಂಕುಚಿತವಾಗಿಲ್ಲ. ನಾನು ಇಟ್ಟಿಗೆಗಾರೆಗಳಲ್ಲಿ ಕಮ್ಮಾರನ ತಿದಿಯ ಬಳಿಗೆ, ಬಡಿಗನ ಬೆಂಚಿನ ಮೇಲೆ ದುಡಿದಿರುತ್ತೇನೆ-ಜತೆಗೆ ಧರ್ಮ ಪ್ರವಚನ ದಲ್ಲಿಯೂ, ಔಷಧೋಪಚಾರಗಳ ಚಿಕಿತ್ಸೆಯಲ್ಲಿಯೂ ಕೆಲಸ ಮಾಡಿದ್ದೇನೆ. 'ನಾನು ನನ್ನವನಲ್ಲ'ವೆಂದೇ ನನಗೆ ಅನಿಸುತ್ತದೆ. ನನ್ನ ಮುಂದಿಯ ಸಲುವಾಗಿ ಕಾಡು ಕೋಣವನ್ನು ಗುಂಡಿಕ್ಕಿ ಕೊಲ್ಲುವಾಗ, ಗ್ರಹ-ತಾರೆಗಳನ್ನು ಅವಲೋಕಿಸಿ ಗಣಿತ ಹಾಕುವಾಗ, ನಾನು ಕ್ರೈಸ್ತನ ಸೇವೆಯನ್ನೇ ಸಲ್ಲಿಸುತ್ತೇನೆ ಮತ್ತು ಆಫ್ರಿಕೆಯ ಮೇಲೆ ಇದುವರೆಗಿನಕ್ಕಿಂತ ಹೆಚ್ಚು ವಿಪುಲವಾದ ಕಲ್ಯಾಣಗಳ ಅನುಗ್ರಹವಾಗ ಬಹುದೆಂದು ನಾನು ಆಶೆಪಡುವಷ್ಟು ವಿವರ ವೃತ್ತಾಂತಗಳು ಆ ಪ್ರಭುವಿನ ಸಹಾಯದಿಂದಲೇ ದೊರಕಿಸಿದ ಮೇಲೆ, ಅದನ್ನು ಕೆಲವರು ಸಾಕಷ್ಟು ಅಥವಾ ಎಳ್ಳಷ್ಟೂ ಮಿಶನರಿ ಕೆಲಸವಲ್ಲವೆಂದು ಭಾವಿಸುವರೆಂದು ನಾನು ಆ ಬೆಳಕನ್ನು ಒಂದು ಬುಟ್ಟಿಯಲ್ಲಿ ಬಚ್ಚಿಡಲೇ ?'

ಈ ಮಾತುಗಳ ಹುರುಳೆಷ್ಟು ! ಬಿಗುವೆಷ್ಟು ? ದೃಢವೂ ಸಾತ್ವಿಕವೂ ಆದ ಅಂತಃಕರಣದ ಸುಗಂಧವೆಷ್ಟು !

ಲಿವ್ವಿಂಗಸ್ಟನ್‌ಸ ಎರಡನೆಯ ಝಾಂಬೇಜಿ ಶೋಧ ಸಂಚಾರದಲ್ಲಿ ಅವನ ಸಹೋದರ ರಾಪ ಚಾರ್ಲಸನೂ, ಡಾ. ಜೋನ ಕರ್ಕನೂ ಜತೆಗೆ ಬಂದರು. ಈ ಸಂಚಾರವು ೧೮೫೮ರಲ್ಲಿ ಆರಂಭವಾಯಿತು; ಆದರೆ ಆದ್ಯಂತವೂ ಅದು ವಿಪತ್ತುಗಳಿಂದ ಕೇಡಿಗಿಟ್ಟಿತು. ಈ ಸಲದ ಸನ್ನಾಹ ಸರಂಜಾಮುವು ದೊಡ್ಡದಿತ್ತು. ಅದಕ್ಕೆ ತಕ್ಕ ತೊಡಕುಗಳೂ ದೊಡ್ಡವಾದವು. ಅಧಿಕಾರಿಗಳಲ್ಲಿ ತೀವ್ರ ಮತಭೇದಗಳು, ಸಾಕಷ್ಟು ಉಗಿಯ ದೋಣಿಗಳ ಕೊರತೆ, ಆದಿವಾಸಿಗಳ ದುಷ್ಪ್ರವೃತ್ತಿ ಈ ಎಲ್ಲ ಸಂಕಟಗಳ... ದೊಡ್ಡದೆಂದರೆ ಅವನ ಪತ್ನಿಯು ೧೮೬೨ರಲ್ಲಿ ಶುಪಾಂಗಾ ಎಂಬಲ್ಲಿ ತೀರಿಕೊಂಡ... 'ಆಕೆಯನ್ನು ಮದುವೆಯಾಗುವಾಗ ನಾನು ಆಕೆಯಲ್ಲಿ ಪ್ರೀತಿಯಿಟ್ಟಿದ್ದೆನು; ಮತ್ತು ಆಕೆಯೊಡನೆ ಹೆಚ್ಚು ಹೆಚ್ಚು ಸಮಯ ಬಾಳಿವಂತೆ ನಾನು ಆಕೆಯನ್ನು ಇನ್ನೂ ಹೆಚ್ಚು ಪ್ರೀತಿಸುತ್ತಲೇ ಹೋದೆನು.' ಎಂದು ತನ್ನ ಹೆಂಡತಿಯ ಹಂಬಲ...

ಲಿವ್ಹಿಂಗಸ್ಟನ್‌ನು ಎದೆಯಾಳದಿಂದಲೂ ಉದ್ಗಾರವನ್ನು ತೆಗೆದಿದ್ದಾನೆ. ಯಾವ ದುಃಖ ಎಷ್ಟು ಎಷ್ಟು ಮರ್ಮಘಾತಕವಾದರೇನು ? ಕಾಲನ ಕೈಗುಣವು ಮನದ ಗಾಯಗಳನ್ನೆಲ್ಲ ಮಾಯಮಾಡಿ ಬರಿದಾದ ಬಾಳನ್ನು ಮತ್ತೆ ಮೈದುಂಬಿಸುವಂತಹದು. ಕಾಲಗತಿಯ ಕರಸ್ಪರ್ಶದಿಂದ ಪತ್ನಿ ವಿಯೋಗದ ಆಘಾತದ ತೀವ್ರತೆಯು ಹಗುರಾದ ಕೂಡಲೆ ಹೊಸ ಚೈತನ್ಯವೂ ಉತ್ಸಾಹವೂ ಲಿವ್ಹಿಂಗಸ್ಟನ್‌ನಲ್ಲಿ ಮತ್ತೆ ಉಕ್ಕಿ ಬಂದಿತು,- ಅವನನ್ನು ಹೊಸ ಸಾಹಸದ ದಾರಿಯಲ್ಲಿ ಅಟ್ಟಿತು.

ಅವನು ಶಿರೇ ಎಂಬ ನದಿಯನ್ನು ಎರಡನೆಯ ಸಲ ಕಂಡುಕೊಂಡನು. ನ್ಯಾಸಾ ಸರೋವರವನ್ನು ಪರಿಶೋಧಿಸಿದನು ಮತ್ತು ಬಂಗವ್ಯಲೂ ಎಂಬ ಸರೋವರದ ದಾರಿಯಲ್ಲಿ ೧೦ ದಿನಗಳ ಪ್ರವಾಸವಷ್ಟೇ ಉಳಿದಿತ್ತು. ಆಗ ಸರಕಾರವು ಅವನ ಈ ಪ್ರಚಾರ ಮಂಡಳಿಯನ್ನೇ ತಿರುಗಿ ಕರೆಯಿಸಿಕೊಂಡಿತು. ಗುಲಾಮರ ವ್ಯಾಪಾರಕ್ಕಾಗಿ ಪಾಶ್ಚಾತ್ಯರು ಆಫ್ರಿಕೆಯಲ್ಲಿ ನಡೆಯಿಸಿದ ಹಿಂಸ್ರದಾಳಿಗಳನ್ನೂ ಲೋಭಿಗಳಾದ ವ್ಯಾಪಾರಿಗಳು ನಡೆಯಿಸಿದ ಗಂಡು ಹೆಣ್ಣುಗಳ ಅಮಾನುಷ ದೇಹ ವಿಕ್ರಯವನ್ನೂ ಕಂಡು ಲಿವ್ಹಿಂಗಸ್ಟನ್‌ನ ಆತ್ಮಕ್ಕೇ ಬರೆಕೊಟ್ಟಂತಾಯಿತು. ಈ ಭೀಕರ ವ್ಯವಸಾಯದ ಬೆನ್ನಿಗೆ ಪೋರ್ತುಗೀಜ ಅಧಿಕಾರಿಗಳು ಇದ್ದರೆಂಬುವದು ಸ್ಪಷ್ಟವಿತ್ತು. ಆದರೆ ಲಿವ್ಹಿಂಗಸ್ಟನ್ ಏನು ಮಾಡುವಂತಿತ್ತು ? ಇದೇ ಸಮಯ ಅರ್ಲರಸೆಲ್ಲರಿಂದ ಮರಳಲು ಕರೆಬಂದಿತು.

ಈ ನಡುವೆ ಸರೋವರಗಳ ಪರಿಶೋಧಕ್ಕೆಂದು 'ಲೆಡಿನ್ಯಾಸಾ' ಎಂಬ ಚಿಕ್ಕದೊಂದು ಮಚವೆಯನ್ನು ಲಿವ್ಹಿಂಗಸ್ಟನ್ ಕಟ್ಟಿಕೊಂಡಿದ್ದನು. ಆ ಅದ್ಭುತ ಪ್ರವಾಸಿಯು ಹಿಂದೂ ಮಹಾಸಾಗರವನ್ನು ದಾಟಿ, ಆ ಸಣ್ಣ ಮಚವೆಯಲ್ಲಿ ೨೫೧ ಮೈಲುಗಳ ಕಡಲುಪಯಣವನ್ನು ಮಾಡಿ ಮುಂಬೈಗೆ ಬಂದನು ! ಅಲ್ಲಿಂದ ಹಡಗವೇರಿ ೧೮೬೪ ರಲ್ಲಿ ಜುಲೈ ತಿಂಗಳಲ್ಲಿ ಇಂಗ್ಲಂಡಕ್ಕೆ ತೆರಳಿದನು. ಮನೆಗೆ ಮರಳಿದಮೇಲೆ ಅವನು ತನ್ನ ಝಾಂಬೇಜಿ ಪ್ರವಾಸಗಳ ವರ್ಣನೆಯನ್ನು ಬರೆದು ತೆಗೆದನು. ಆದರೆ ಆ ಪುಸ್ತಕವು ಪ್ರಕಟವಾಗುವಷ್ಟರಲ್ಲಿಯೇ ಅವನು ಆಫ್ರಿಕಾಕ್ಕೆ ಹಿಂದಿರುಗಿದ್ದನು. ಈ ಪುನರಾಗಮನದ ಉದ್ದೇಶವು ಎರಡು ತೆರನಾಗಿದ್ದಿತ್ತು–ಒಂದು, ನೀಲನದಿಯ ಉಗಮವನ್ನು ಹುಡುಕಿ ತೆಗೆಯುವದು; ಇನ್ನೊಂದು, ಗುಲಾಮರ ಮಾರಾಟವನ್ನು–ಕೊನೆಗಾಣಿಸಿ ನಾಗರಿಕತೆಯ ನಿಧಿಯನ್ನು ನಿಗ್ರೋ ಜನಾಂಗಕ್ಕೆ ಹಂಚುವದು.

ಕೆಲವು ಸೈನಿಕರನ್ನೂ ಕ್ರೈಸ್ತರಾದ ಕೆಲವು ನಿಗ್ರೋಜನರನ್ನೂ ಜತೆಗೆ ತೆಗೆದುಕೊಂಡು ಜಾಂಜಿಬಾರದಿಂದ ಹೊರಟು ರೊವುಮಾ ಎಂಬ ಹೊಳೆಯ ಮುಖಕ್ಕೆ ಇಳಿದನು.

ಅವನು ರೊವುಮಾನದಿಯಲ್ಲಿ ಸಾಗಿದನು. ವೈಯೋ ಪ್ರದೇಶವನ್ನು ಹಾಯ್ದು, ನ್ಯಾಸಾ ಸರೋವರದ ದಕ್ಷಿಣ ಬದಿಯನ್ನು ಬಳಸಿ ನಡೆದನು. ಇಲ್ಲಿ ಅವನ ಕೆಲವು ಜನ ಫರಾರಿಯಾದರು. ಅಷ್ಟೇ ಅಲ್ಲ, ಕರಾವಳಿಗೆ ಓಡಿಬಂದು ಲಿವ್ಹಿಂಗಸ್ಟನ್ ಸತ್ತನೆಂದು ಸುದ್ದಿ ಹಬ್ಬಿಸಿದರು. ಈ ಸುದ್ದಿ ಇಂಗ್ಲಂಡಿಗೂ ತಲ್ಪಿ, ಅವನು ಹೇಗೆ ಎಲ್ಲಿ ಕೊಲೆಯಾದನೆಂಬುದನ್ನು ಕಂಡು ಹಿಡಿಯಲು ಹೊಸದೊಂದು ಶೋಧಕ ಮಂಡಳಿಯನ್ನು ಕಳಿಸಿದರು. ಆ ಮಂಡಳಿಯ ಮುಖಂಡ ಎಡ್ವರ್ಡಯಂಗ ಎಂಬಾತನು ಬಂದು ಹುಡುಕಿ, ೧೮೬೭ ರಲ್ಲಿ ಆ ಸುದ್ದಿ ಪೂರ್ತಿ ಸುಳ್ಳೆಂದು ಸಿದ್ಧ ಮಾಡಿದನು. ಇತ್ತ ಲಿವ್ಹಿಂಗಸ್ಟನ್‌ನು ನಿಧಾನವಾಗಿ ಮುಂದೆ ನಡೆದು ಉತ್ತರಕ್ಕೆ ಸಾಗಿ, ಟ್ಯಾಂಗಾ ನಿಕಾ ಸರೋವರವನ್ನು ಕಂಡುಕೊಂಡನು. ಅದೆಂಥ ದೈತ್ಯ ಸರೋವರ ! ಅದರ ವಿಸ್ತಾರ ೧೨೭೦೦ ಚದುರು ಮೈಲು. ಅಂದರೆ ಬೆಲ್ಜಿಯಮ್ ದೇಶಕ್ಕಿಂತ ದೊಡ್ಡ ಕ್ಷೇತ್ರ. ಈ ಪ್ರವಾಸದಲ್ಲಿ ಒಬ್ಬ ನಿಗ್ರೋ ಕೂಲಿಯಾಳು ಓಡಿಹೋಗುವಾಗ ಲಿವ್ಹಿಂಗಸ್ಟನ್‌ನ ಔಷಧದ ಪೆಟ್ಟಿಗೆಯನ್ನು ಕದ್ದೊಯ್ದನು! ಲಿವ್ಹಿಂಗಸ್ಟನ್‌ನು ಜ್ವರದಿಂದ ವಿಪರೀತ ಕಾಯಿಲೆ ಬಿದ್ದನು.

ಲಿವ್ಹಿಂಗಸ್ಟನ್‌ನು ಹೊಸ ಮದ್ದು, ಅನ್ನಸಾಮಗ್ರಿಗಳ ಪೂರೈಕೆಗಾಗಿ ಹೇಳಿ ಕಳಿಸಿ ಕೊಟ್ಟನು. ಪೂರೈಕೆಯು ಮುಂದೆ ಉಜೀಜೀ ಎಂಬಲ್ಲಿಗೆ ಬಂದು ಸಿಗಬೇಕೆಂದಿತ್ತು. ಸ್ವಲ್ಪ ಗುಣವಾದೊಡನೆ ಪಶ್ಚಿಮಕ್ಕೆ ತಿರುಗಿ ಮೇರೂ ಎಂಬ ಸರೋವರವನ್ನು ಸಂದರ್ಶಿಸಿದನು. ಆ ಅವಕಾಶದಲ್ಲಿ ಇನ್ನೂ ಅನೇಕ ಜನ ಅವನ ಗುಂಪಿನಿಂದ ಓಡಿ ಹೋದರು. ಅವನು ದಕ್ಷಿಣಕ್ಕೆ ಹೊರಳಿ ಬಂಗವ್ಯುಲೂ ಸರೋವರವನ್ನು ಕಂಡು ಹಿಡಿದನು. ೧೮೬೮ ನೇ ಜುಲೈ ತಿಂಗಳಲ್ಲಿ ಅವನ ಪ್ರಕೃತಿ ವಿಪರೀತ ಕೆಟ್ಟಿತು. 'ದೈವವಶಾತ್' ಅರಬರ ಒಂದು ಗುಂಪು ಅವನೊಡನೆ ಟ್ಯಾಂಗಾನಿಕಾಕ್ಕೆ ಮತ್ತು ಅಲ್ಲಿಂದ ಉಜೀಜಿಗೆ ನಡೆಯಿತು. ಅವರ ಕನಿಕರದ ಉಪಚಾರ-ಶುಶ್ರೂಷೆಗಳು ಅವನನ್ನು ಉಳಿಸಿಕೊಂಡವು.

ಸಾಕಷ್ಟು ವಿಶ್ರಾಂತಿಯನ್ನೂ ಶಕ್ತಿಯನ್ನೂ ಪಡೆದುಕೊಂಡು ಲಿವ್ಹಿಂಗಸ್ಟನ್‌ನು ಮತ್ತೆ ಹೊರಟನು. ಈಸಲ ಅವನ ಉದ್ದೇಶವು ಲುವಾಲಬಾ ನದಿಯನ್ನು ತಲ್ಪುವದಿತ್ತು. ಪಶ್ಚಿಮಕ್ಕೂ ಉತ್ತರಕ್ಕೂ ಪ್ರವಾಸಮಾಡಿ ಅವನು ಆ ನದಿಯ ತೀರವನ್ನು ತಲ್ಪಿದನು. ಅಲ್ಲಿಂದ ಅವನಿಗೆ ಅಮಾಂಶ ವಿಕಾರವೂ ಜ್ವರವೂ ಮತ್ತೆ ಬಾಧಿಸಿದವು. ಕಾಡುಜನರ ಬಣಗಳು ಅವನ ಮೇಲೆ ಆಕ್ರಮಣವನ್ನು ಮಾಡಿದವು. ಹಾಗೂ ಹೀಗೂ ಉಜೀಜೀಕ್ಕೆ ಬಂದು ತಲ್ಪಿದಾಗ ತನಗಾಗಿ ಕಳುಹಿಸಿದ ವಸ್ತು ಸರಕು ಸಾಮಾನುಗಳು ಕಳುವಾಗಿಯೂ ಮಾರಾಟವಾಗಿಯೂ ಹೋಗಿರುವವೆಂದು

ನನಿಗೆ ತಿಳಿಯಿತು. ಅವನ ಎಲ್ಲ ಕಷ್ಟಗಳಿಗೂ ಇದು ಕಳಸವಿಟ್ಟಂತಾಯಿತು.

ಜೀಜೀಯಲ್ಲಿ ಬೇನೆ ಬಿದ್ದಿರುವಾಗ ಆತನನ್ನು ಬದುಕಿಸಿದ ಶಕ್ತಿ, ಕೇವಲ ನನ ವಿನೋದ ಬುದ್ಧಿಯು. ಅಕಸ್ಮಾತ್ತಾಗಿ ಅವನಿಗೆ ಸಹಾಯವು ಒದಗಿ ದಿತು.—ಅದೂ ಅಷ್ಟೇ ಅಕಲ್ಪಿತ ದಿಕ್ಕಿನಿಂದ, 'ನ್ಯೂಯಾರ್ಕ ಹೆರಾಲ್ಡ' ಎಂಬ ್ರಿಕೆಯ ಒಡೆಯನಾದ ಜೇಮ್ಸ ಗಾರ್ಡನ್ ಬೆನ್ನೆಟ್ಟನು ಒಂದು ಪರಿಹಾರ ಕವನ್ನು ಲಿವ್ವಿಂಗಸ್ಟನ್‌ನ ಶೋಧಕ್ಕಾಗಿ ರವಾನಿಸಿದ್ದನು. ಆ ಪಥಕದ ನಾಯಕ ್. ಎಮ್. ಸ್ಟಾನ್ಲೀ ಎಂಬವನು ನಮ್ಮ ಚರಿತ್ರ ನಾಯಕನನ್ನು ಕಂಡು ಂಡನು. 'ಅತಿ ಪೂಜ್ಯರಾಗಿ ತೋರುವ ಅರಬರ ಗುಂಪು ಒಂದು ಅಲ್ಲಿ ಇತ್ತು. ನ್ನು ಸಮೀಪಿಸಿದಂತೆ ನಾನು ಅವರ ನಡುವೆ ಒಬ್ಬ ಮುದಿಮನುಷ್ಯನ ಬಿಳಿಯ ಖವನ್ನು ಕಂಡೆನು. ಅವನ ತಲೆಗೆ ಜರತಾರಿಯ ಪಟ್ಟೆಯುಳ್ಳ ಒಂದು ಪ್ಪಿಗೆ, ಅವನ ತೊಡಿಗೆ, ಕೆಂಪು ಕಂಬಳಿಯ ಗಿಡ್ಡ ಜಾಕೀಟು, ಅವನ ಚಣ್ಣ— ಲಿ ನಾನು ಅದನ್ನೆಲ್ಲ ಪೂರ್ತಿ ನೋಡಿಕೊಳ್ಳಲೇ ಇಲ್ಲ. ಆ ಮೊದಲೇ ಆ ಮೊಗದ ಮುದುಕನೊಡನೆ ಕೈ ಕುಲುಕ ತೊಡಗಿದೆನು. ನಾವು ನಮ್ಮ ಪ್ಪಿಗೆಗಳನ್ನು ಎತ್ತಿ, ಒಬ್ಬರಿಗೊಬ್ಬರೂ ಅಭಿವಂದಿಸಿದೆವು. 'ಡಾ. ಂಗಸ್ಟನ್‌ರೆಂದು ತಿಳಿಯೋಣವೇ ?' ಎಂದು ನಾನು ಅಂದೆನು. 'ಅಹುದು' ದು ಅವನು ಅಂದನು.' ಈ ಭೆಟ್ಟಿಯಿಂದ ಲಿವ್ವಿಂಗಸ್ಟನ್‌ನ ಎದೆಯಲ್ಲಿ ನವ ತನ್ಯವು ಚೇತರಿಸಿ ಬಂದಿತು.

ನ್ಲೀ, ಲಿವ್ವಿಂಗಸ್ಟನ್ ಇಬ್ಬರೂ ಕೂಡಿ ಟ್ಯಾಂಗಾನಿಕಾದ ಉತ್ತರ ತುದಿಯನ್ನು ಶೋಧಿಸಿದರು. ಅನಂತರ ಲಿವ್ವಿಂಗಸ್ಟನ್‌ನು ಆಫ್ರಿಕೆಯನ್ನು ಬಿಟ್ಟು ಕದಲುವ ದೆಂಬ ಹಟವನ್ನು ತೋರಿದ್ದರಿಂದ ಅವರು ಒಬ್ಬರನ್ನೊಬ್ಬರು ಅಗಲಿದರು. ್ಲೀಯು ಝಾಂಝಿಬಾರದಲ್ಲಿ ಲಿವ್ವಿಂಗಸ್ಟನ್‌ನಿಗಾಗಿ ಬ್ರಿಟಿಶರು ಏರ್ಪಡಿಸಿದ್ದ ಹಾರ ಪಥಕವನ್ನು ಸಂದರ್ಶಿಸಿದನು. ಅವನಿಂದ ಉನ್ಯಾಮುಮೆಝಿ ಎಂಬಲ್ಲಿ ಲಿವ್ವಿಂಗಸ್ಟನ್‌ನಿಗೋಸ್ಕರ ಕೂಲಿಯಾಳುಗಳ ಪಡೆಯನ್ನು ಕಳುಹಿಸುವ ವ್ಯವಸ್ಥೆ ನ್ನು ಮಾಡಿಸಿದನು.

ದ ಆ ಮಹಾ ಶೋಧಕನು ೧೮೭೨ ರ ಆಗಸ್ಟ ತಿಂಗಳಲ್ಲಿ ನೀಲ ನದಿಯ ಮವೆಂದು ಆತನು ಭಾವಿಸಿದ ಸ್ಥಾನಕ್ಕಾಗಿ ಪ್ರವಾಸ ಕೈಕೊಂಡನು.

ಗನ್ನಲೂ ಸರೋವರದ ದಕ್ಷಿಣ ದಂಡೆಯ ಜವಳುಭೂಮಿಯೊಳಗಿಂದ ಅವನು

ಸಾಗಿದನು. ಆದರೆ ಅದಾಗಲೇ ಅವನು ಸಾವನ್ನು ಸಮೀಪಿಸಿದ್ದನು. ಶರೀರದಲ್ಲಿ ಶಾಶ್ವತವಾದ ವೇದನೆಗಳು ಏಳುತ್ತಿದ್ದವು. ಆಗಾಗ್ಗೆ ರಕ್ತಸ್ರಾವವಾಗುತ್ತಿತ್ತು. ಅಲ್ಲಲ್ಲಿ ಮೂರ್ಛೆಹೋಗಿ ಬೀಳುತ್ತಿದ್ದನು. ಅವನನ್ನು ಮೆಲ್ಲಗೆ ಮೃದುವಾಗಿ ಎತ್ತಿ ಹೊತ್ತು ಒಯ್ಯಬೇಕಾಗುತ್ತಿತ್ತು,–ಅದೂ ಅಲ್ಲಲ್ಲಿ ತಡೆದು, ತಂಗಿ. ಅವನಿಗೆ ಸೆಟೆದು ಕೂಡ್ರುವ ಕಸುವು ಕೂಡ ಇದ್ದಿಲ್ಲ. ದೋಣಿಗಳಲ್ಲಿ ಹೋಗುವಾಗ ಅವನು ಅಂಗಾತ ಮಲಗಿರಬೇಕಾಗುತ್ತಿತ್ತು. ಆದರೂ ಆ ದೃಢಪ್ರತಿಜ್ಞ ಸತ್ವಧೀರನು ಹಿಂದಡಿ ಇಡಲಿಲ್ಲ. ಹಾಗೆಯೇ ಮುಂದಕ್ಕೆ ನಡೆದನು. ಕಟ್ಟ ಕಡೆಗೆ ವೇದನೆಗಳ ಪೆಟ್ಟನ್ನು ತಾಳದಾದನು.

ಆದ್ದರಿಂದ ಅವನು ಇಲ್ಲಾಲಾ ಎಂಬಲ್ಲಿಗೆ ಬಂದನು. ಅದೇ ವರ್ಷದ ಎಪ್ರಿಲ ೨೭ ನೇ ದಿನಕ್ಕೆ ಅವನ ದಿನಚರಿಯಲ್ಲಿ ಕೊನೆಯ ಟಿಪ್ಪಣಿಯು ಬರೆದದ್ದು ಕಂಡುಬರುತ್ತದೆ. ಅಡ್ಡತಿಡ್ಡ ಗೀಚಿ ಬರೆದ ಆ ಸಂದೇಶವು ಲೇಖಕನ ಅಸಾಧ್ಯ, ಅಸಹ್ಯ ಯಾತನೆಯ ನರಳುವಿಕೆಯನ್ನು ನೆತ್ತರದಲ್ಲಿಯೇ ಅರಳಿಸಿ ಬರೆದಂತಿದೆ. 'ಸ್ವಲ್ಪ ಶಾಂತತೆಯನ್ನು ಹೇಗೋ ಪಡೆದನು ...ಉಳಿಯುವ......ಗುಣವಾಗುವ ...... ಹೈನಿನ ಆಡುಗಳನ್ನು ತರಲು ಕಳಿಸಲಾಗಿದೆ.....ನಾವು ಮೊಲಿಲಾಮೋ ಹೊಳೆಯ ದಂಡೆಗೆ ಇದ್ದೇವೆ.'

ಮರುದಿನ ಅವನು ಏನೂ ಮಾಡಲಾರದಷ್ಟು ನಿತ್ರಾಣನಾದನು. ಕೇವಲ ತನ್ನ ಗಡಿಯಾರಕ್ಕೆ ಕೀಲಿ ಸುತ್ತುವಷ್ಟೇ ಅವನ ಕಸುವಿತ್ತು. ಆನಂತರ ೧೮೭೩ ರ ಮೇ ೧ ನೇ ದಿನ ನಸುಕಿನ ಜಾವದಲ್ಲಿ, ಲಿವ್ಹಿಂಗಸ್ಟನ್‌ನು ತನ್ನ ಹಾಸಿಗೆಯ ಮಗ್ಗುಲಲ್ಲಿಯೇ ಪ್ರಾರ್ಥನೆಗಾಗಿ ಮೊಣಕಾಲೂರಿ ಕೂತದ್ದು ಕಂಡುಬಂದಿತು- ಕೂತಲ್ಲಿಯೇ ಅವನು ಸತ್ತಿದ್ದನು.

ಅವನ ಆದಿವಾಸಿಗಳಾದ ಆಳುಗಳು ತಮ್ಮ ಧರ್ಮ ಭ್ರಮೆ ಮೂಢ ಭೀತಿಗಳನ್ನು ಲೆಕ್ಕಿಸದೆ, ಅಪ್ರತಿಮ ಧೈರ್ಯದಿಂದ ಅವನ ಶವವನ್ನು ಬಿಸಿಲಿನಲ್ಲಿ ಇಟ್ಟು ಒಣಗಿಸಿ, ಆದಷ್ಟು ನಿರ್ದ್ರವವಾಗಿ ಮಾಡಿ, ಅವನ ಕಾಗದ ಪತ್ರ ಪುಸ್ತಕ ಉಪಕರಣ ಗಳೊಡನೆ ಹೊತ್ತುಕೊಂಡು ೧,೦೦೦ ಮೈಲು ನಡೆದು ಆಫ್ರಿಕೆಯೊಳಗಿನ ಹಾಯ್ದು ಬಂದು ಝಂಝಿಬಾರವನ್ನು ತಲ್ಪಿದರು. ಲಿವ್ಹಿಂಗಸ್ಟನ್ನನ ಕ ಬರವನ್ನು ಲಂಡನ್ನಿನ ಜಗತ್ಪ್ರಸಿದ್ಧ ಕ್ರೈಸ್ತ ಚೈತ್ಯಾಲಯವಾದ ವೆಸ್ಟಮಿನಿಷ್ಟ ಅಬ್ಬೆ ಎಂಬಲ್ಲಿ ಹೂಳಲಾಯಿತು. ಆದರೆ ಅವನ ಹೃದಯವನ್ನು ಆಫ್ರಿಕೆಯಲ್ಲಿಯೇ ಹುಗಿಯಲಾಯಿತು. ಅದಕ್ಕಿಂತ ಸುಯೋಗ್ಯವಾದ ಸಮಾಧಿಸ್ಥಾನವು ಆ ಧ ಧರ್ಮದ ಶೋಧಕ ಹೃದಯಕ್ಕೆ ಇನ್ನೆಲ್ಲಿ ಸಿಕ್ಕೀತು ?

# ಅಬ್ರಹಮ ಲಿಂಕನ್

'ನಾನು ಬದುಕಿ ಇದ್ದೆನೆಂಬುದನ್ನು ಯಾವುದೇ ಮನುಷ್ಯನಿಗೆ ನೆನಪಿಗೆ ತಂದು ಕೊಡುವಂಥ ಯಾವ ಕೃತ್ಯವನ್ನೂ ನಾನು ಮಾಡಿಲ್ಲ. ಆದಾಗ್ಯೂ ನನ್ನ ತಲೆ ಮಾರಿನ ಘಟನೆಗಳೊಂದಿಗೆ ನನ್ನ ಹೆಸರು ಸಂಬಂಧಪಟ್ಟಿರಬೇಕು. ನನ್ನ ಬಾಂಧವರ ಮೆಚ್ಚಿಗೆಗೆ ವಿಷಯವಾಗುವಂಥ ಏನಾದರೊಂದು ಸಂಗತಿಯೊಂದಿಗೆ ನನ್ನ ಹೆಸರು ಸಂಲಗ್ನವಾಗಿರಬೇಕು–ಇದೇ ನಾನು ಏಕೆ ಬದುಕಿರಬೇಕೆಂಬುದರ ಇಚ್ಛೆ.'

೩೨ ವರುಷದ ಒಬ್ಬ ತರುಣನು ಮೇಲಿನಂತೆ ಉದ್ಗರಿಸುವಾಗ ಆಗತಾನೇ ಅಸಾಧ್ಯ ಉದಾಸೀನತೆಯ ಹಾಗೂ ಉದ್ವೇಗದ ಒಂದು ಉಲ್ಬಣದಿಂದ ಚೇತರಿಸಿಕೊಂಡು ಹೊಸ ಆಶೆ, ಹೊಸ ಸಂಕಲ್ಪಗಳಿಂದ ಚೈತನ್ಯವನ್ನು ಪಡೆದಿದ್ದನು. ಆ ಉಲ್ಬಣದಲ್ಲಿ ಆತನು ಆತ್ಮಹತ್ಯೆಯ ವಿಚಾರವನ್ನು ಕೂಡ ಮಾಡಿದ್ದನು. ಆಗಿನ ಉದ್ಗಾರಗಳು ಇವು. ಆದರೆ ಆ ಉದ್ಗಾರಗಳು ಬರೆ ಉಸಿರ ಉಗಿಯಾಗಿ ಆರಿಹೋಗಲಿಲ್ಲ. ನಿಜವಾಗಿ ಅದ್ಭುತರಮ್ಯ ಸತ್ಯವಾಗಿ ಇತಿಹಾಸದ ಮೂರ್ತಿಯಾಗಿ ಮಾಸವ್ಯದ ಕೀರ್ತಿಯಾಗಿ ಒದಗಿ ಬಂದವು. ಅವನ ಬದುಕಿನಲ್ಲಿ ಒಂದು ಜನಾಂಗ, ಅಭ್ಯುದಯವನ್ನು ಕಂಡಿತು; ಒಂದು ರಾಷ್ಟ್ರದ ಘನತೆಯನ್ನು ಕಟ್ಟಿತು. ಇದಕ್ಕೂ ಹೆಚ್ಚಿನ ಸಾರ್ಥಕತೆ ಬಾಳಿಗೆ ಇನ್ನಾವದು ಬೇಕು ? ಆ ತರುಣನು ಕಾಡು ಕೊಂಪೆಯ ಕಟ್ಟಿಗೆಯ ಕೋಣೆಯೊಂದರಲ್ಲಿ ಹುಟ್ಟಿದವನು. ಬಡವನ ಗುಡಿಸಲಿನ ಹಣತೆಯಾಗಿ ಬೆಳೆದವನು. ಕಟ್ಟಿಗೆ ಕೊಯ್ಯುವವ, ತಾರಿದೋಣಿಕಾರ, ನೆಲದ ಅಳತೆ ಮಾಡುವ ಸರ್ವೇಗುಮಾಸ್ತ, ಹಳ್ಳಿಯ ಅಂಚೆಯ ಮೇಸ್ತ್ರಿ, ಜಿಲ್ಹಾ ಕೋರ್ಟಿನಲ್ಲಿ ವಕೀಲ. ಕಾಯದೆಯ ತಜ್ಞ, ಅಮೇರಿಕೆಯ ಕಾಂಗ್ರೆಸಿಗೆ (ಶಾಸನ ಸಭೆಗೆ) ಪ್ರತಿನಿಧಿ, ಕೊನೆಗೆ ಅದೇ ರಾಷ್ಟ್ರದ ಅಧ್ಯಕ್ಷ. ಭಾಗ್ಯವಿಧಾತ. ಹೀಗೆ ಅನುಕ್ರಮವಾಗಿ ಶ್ರಮದಿಂದ ಶ್ರೇಯಸ್ಸಿಗೆ, ತಮದಿಂದ ತೇಜಸ್ಸಿಗೆ, ಏರಿದವನು. ಆತನ ಹೆಸರು ಅಬ್ರಹಮ ಲಿಂಕನ್. ಇವನ ಹಿರಿಮೆಯ ಮೂಲ ಅವನ ಆ ಏರಿಕೆಯಲ್ಲಿ ಮಾತ್ರ ಇಲ್ಲ; ಅವನು ತನ್ನ ದೇಶಕ್ಕಾಗಿ ಮಾನವತೆಗಾಗಿ ದುಡಿದ ಕಾರ್ಯದಲ್ಲಿಯೇ ವಿಶೇಷವಾಗಿ ಇದೆ. ಸರಿಯಾಗಿ ಓದಿದರೆ ಅವನ ಚರಿತ್ರವು ಒಂದು ಮಹಾಕಾವ್ಯ. ಅಂಥ ಕಾವ್ಯದ ಭವ್ಯತೆ, ಭಾವಿಕ ಸರಳತೆ, ಹಾರ್ದಿಕ ವಿಶಾಲತೆ ಆ ಚರಿತ್ರದಲ್ಲಿ ಇವೆ. ಅವನ ದಾರ್ಢ್ಯ ಅವನ ಧೈರ್ಯ, ಅವನ ಧ್ಯೇಯ ಧಾರಣೆ, ಅವನ ಧರ್ಮ ಧೋರಣೆ, ಅವನ ಸತ್ವ ಸ್ಫುರಣೆ, ಇವು ಮಾನವನ ಸೇವಾ ವ್ರತಕ್ಕೆ ಆದರ್ಶವಾದವು. ಅಮೇರಿಕೆಯ ಅಖಂಡ ಐಕ್ಯಕ್ಕೆ ಆಧಾರವಾದವು.

೦೯ ರಲ್ಲಿ ಫೆಬ್ರುವರಿ ೧೨ ನೇ ದಿನ ಅಬ್ರಾಹಮ ಹುಟ್ಟಿದನು. ಅಮೇರಿಕೆಯ
ಟಕೀ ಪ್ರಾಂತದ ಹಾರ್ಡಿನ್ ಜಿಲ್ಹೆಯಲ್ಲಿ ನೋಲಿನ್‌ಕ್ರಿಕ್ ಎಂಬುದು ಈತನ
ಟ್ಟಿದೂರು. ಇವನ ತಂದೆ ಥೋಮಸ ಲಿಂಕನ್ ಬಡಿಗ ಕಸಬಿನವನು, ಸದಾ
ಚಲ ಆಸಾಮಿ. ಒಂದೆಡೆಗೆ ಒಂದು ಕೆಲಸಕ್ಕೆ ಅಂಟಿ ಕೂಡ್ರುವವನಲ್ಲ. ಅಬ್ರಹಮ
ವರ್ಷದವನಿದ್ದಾಗ ತಂದೆ ಥಾಮಸ್ ಮಡದಿಮಕ್ಕಳೊಂದಿಗೆ ಅಲ್ಲಿಂದ ೧೧
ಲು ಉತ್ತರಕ್ಕೆ ನೊಚಕ್ರೀಕ ಎಂಬಲ್ಲಿಗೆ ತಳಕಿತ್ತು ಹೋದನು. ಅಲ್ಲಿಯೂ
ಗೆ ಕೆಲಸಮಾಡಿ ಥಾಮಸ ಬೇಸತ್ತನು-ಕೆಲಸಕ್ಕೆ ಅಲ್ಲ, ಸ್ಥಳಕ್ಕೂ ಅಲ್ಲಿಂದ
ತ್ತೆ ಇಂಡಿಯಾನ ಎಂಬಲ್ಲಿಗೆ ಕಂಬಿಕಿತ್ತನು. ಅಲ್ಲಿ ಒಂದು 'ಕೂಪು' ಹಿಡಿದನು.
ಒಂದು ವರ್ಷಕಾಲ ಲಿಂಕನ್ ಪರಿವಾರ ಬೀಡು ಮಾಡಿತು. ಅವರ ಮನೆ
ಪ್ರ ಮಂಟಪ. 'ಬಾಗಿಲ'ವನ್ನು ಮುಚ್ಚಲು ಕಾಡುಮಿಕಗಳ ತೊಗಲು ತೂಗು
ದ್ದು. ಅಬ್ರಹಮನ ತಂದೆ ಬಡಿಗತನಕ್ಕಿಂತ ಬೇಟೆ ಆಡುವದರಲ್ಲಿಯೇ ಹೆಚ್ಚು
ತ್ತು ಕಳೆಯುತ್ತಿದ್ದುದರ ಕುರುಹು ಆ ತೊಗಲುಗಳು. ಕ್ರಮೇಣ ಥಾಮಸನು
ು ಅಚ್ಚುಕಟ್ಟಾದ ಕಟ್ಟಿಗೆಯ ಕಟ್ಟಡವನ್ನೇ ಸಿದ್ಧಪಡಿಸಿದನು. ಆದರೆ ಅಲ್ಲಿಯ
ುಕು ಕಷ್ಟವಾಯಿತು. ಭೂಮಿ ಜವಳು; ದನ ಕುದುರೆಗಳು ಜೀವಹಿಡಿಯು
ಲ್ಲ; ನರಪ್ರಾಣಿಗಳೂ ಮಲೆಜ್ವರಕ್ಕೆ ಬಲಿಯಾಗಹತ್ತಿದರು. ಆದರೆ ತರುಣ
ಹಮ ತನ್ನ ವಯಸ್ಸನ್ನು ಮೀರಿ ಗಟ್ಟಿಗನಿದ್ದನು. ಹೊರಗೆ ತಂದೆಯ ಕಸಬಿ
ಯೂ ಒಳಗೆ ತಾಯಿಯ ಮನೆಗೆಲಸದಲ್ಲಿಯೂ ಕೈಕೊಡಬೇಕಿತ್ತು.

ಕುವರ್ಷ ಪಿಜನ್‌ಕ್ರೀಕಿನಲ್ಲಿ ಲಿಂಕನ ಪರಿವಾರ ಉಳಿಯಿತು. ಆಗ ಅಬ್ರಹಮನ
ು ಅಸಾಧ್ಯ ಕಾಯಿಲೆಗೆ ಬಿದ್ದಳು. ಆ ಕಾಯಿಲೆಗೆ ಆ ಸೀಮೆಯಲ್ಲಿ
ಲಬೇನೆ' ಅನ್ನುತ್ತಿದ್ದರು. ತೀರ ಹತ್ತಿರದ ಡಾಕ್ಟರನು ಅಲ್ಲಿಂದ ೩೫ ಮೈಲಿಗೆ.
ಲ್ಲಿ ಆಗುವಂತಹದೇ ಆಯಿತು. ಒಂದು ವಾರದ ಕೊನೆಗೆ ಆ ತಾಯಿ
ರಟು ಹೋದಳು.

ಯು ಸತ್ತ ಒಂದು ವರ್ಷದ ನಂತರ, ವಿಧುರ ಲಿಂಕನ್‌ನು ಮತ್ತೆ ತನ್ನ ಭಾಗ್ಯ
ರ್ಣನಕ್ಕೆ ಹೊರಟನು. ಹೋದವನು ಒಂದು ವರ್ಷಕಾಲ ಹಿಂದಿರುಗಲೇ ಇಲ್ಲ.
ರಲ್ಲಿ ಒಂದು ಸಂಜೆಗೆ ಒಂದು ಗಾಡಿ ಆ ಕಟ್ಟಿಗೆ ಕಟ್ಟಡದ ಇದುರಿಗೆ ಬಂದು
ತು. ತಂದೆ ಥಾಮಸನು ಕೆಳಗಿಳಿದನು. ಅವನು ತಂದ ಸಂಪತ್ತಿನಲ್ಲಿ ಅಲವಾರು
. ಬಟ್ಟೆಗಳನ್ನಿಡುವ ದೊಡ್ಡ ಬೀರು ಇತ್ತು. ಎರಡು ಹಾಸಿಗೆಗಳಿದ್ದವು.
ಕ ತರಳ ಅಬ್ರಹಮನೂ ತಂಗಿ ಸರ್‍ರಾಳೂ ಹಾಸಿಗೆಯೆಂಬುದನ್ನೇ ಕಂಡಿದ್ದಿಲ್ಲ.
ತಂದ ಸಾಮಾನು ಇಷ್ಟೇ ಇದ್ದಿಲ್ಲ; ಹೃಷ್ಟಪುಷ್ಟ ಒಳ್ಳೇ ಮುಖ ವರ್ಚಸ್ಸುಳ್ಳ

ಹೆಂಗಸು, ಮೂರುಮಕ್ಕಳೊಡನೆ ಗಾಡಿಯಿಂದ ಕೆಳಗಿಳಿದಳು. ಇವೆಲ್ಲಿಯ ಮಕ್ಕಳನ್ನು ಅಪ್ಪ ತಂದಿರಬಹುದು ?' ಎಂದು ಅಬ್ರಹಮ, ಸರ್‍ರಾ ಎಣಿಕೆ ಹಾಕುತ್ತಿದ್ದರು. ಆಕೆ ಅಬ್ರಹಮ ಸರ್‍ರಾರಿಗೆ ಮಲತಾಯಿಯಾಗಿ ಬಂದಿದ್ದಳು. ಆಕೆ ಮೊದಲು ಒಬ್ಬ ವಿಧವೆ, ಥಾಮಸ ಲಿಂಕನ್‌ನ ಹಳೆಯ ಪ್ರೇಯಸಿ. ಆಕೆಯ ಹೆಸರೂ ಸರ್‍ರಾ.–ಸರ್‍ರಾ ಬುರ್ ಜಾನಸನ್. ಹೊಸ ಸಂಸಾರಕ್ಕೆ ಬರುವಾಗ ಹಳೆಯ ದಾಂಪತ್ಯದ ಮೂರು ಫಲಗಳನ್ನು ತಂದಿದ್ದಳು.

ಹೊಸದೊಂದು ಜೀವನ ಆರಂಭವಾಯಿತು. ಥಾಮಸನ ಎರಡನೆಯ ಹೆಂಡತಿಯು ಆರೋಗ್ಯ, ಕಾರ್ಯಶಕ್ತಿ ಮತ್ತು ಚಟುವಟಿಕೆಗಳನ್ನು ತುಂಬ ಪಡೆದಿದ್ದಳು. ಆಕೆಗಾಗಿ ಥಾಮಸನು ಕಟ್ಟಿಗೆಯ ಗೋಡೆಗಳಿಗೆ ಮಣ್ಣು ಮೆತ್ತಿದನು; ಕೋಣೆಗಳಿಗೆ ನೆಲಮಾಡಿಸಿದನು. ಮಲತಾಯಿ ಮನೆಗೆ ಬರುವತನಕ ತರಳ ಅಬ್ರಹಮನಿಗೆ ಓದುಬರಹಕ್ಕೆ ಯಾವ ಅನುಕೂಲವು ಇದ್ದಿಲ್ಲ. ತಂದೆ ಆ ವಿಷಯಕ್ಕೆ ತೀರ ವಿರುದ್ಧನಿದ್ದನು. ಆದರೆ ಹೊಸ ತಾಯಿಯು ಎಲ್ಲ ಮಕ್ಕಳನ್ನು ಒತ್ತಾಯದಿಂದ ಶಾಲೆಗೆ ಹಾಕಿಸಿದಳು. ಅಬ್ರಹಮನ ದೈವ ನಿಜವಾಗಿಯೂ ಒಳಿತು. ದ್ವಿತೀಯ ಶ್ರೀಮತಿ ಲಿಂಕನ್‌ಳು ಅಬ್ರಹಮನನ್ನು ವಾತ್ಸಲ್ಯದಿಂದ ಕಂಡಳು. ಅವರೀರ್ವರ ನಡುವಿನ ವಾತ್ಸಲ್ಯದ ಮಧುರ ಬಂಧವು ಅವನ ಕೊನೆಯವರೆಗೂ ಕೊನರಿ ನಿಂತಿತು. ತಾಯಂದಿರು ಹಡೆಯುಥನ್ಯವಾಗಬಹುದಾದ ಉತ್ತಮ ಪುತ್ರ ಅಬ್ರಹಮನು–ಎಂದು ಆಕೆ ಹೇಳುತ್ತಿದ್ದಳು.

ಅಬ್ರಹಮನ ಶಾಲೆಯ ಜೀವನ ಅವ್ಯಾಹತವಾಗಿ ಸಾಗಲಿಲ್ಲ. ತಪ್ಪಿ,ತಾಗಿ ಆತ ಒಂದು ವರ್ಷಮಾತ್ರ ಒಟ್ಟು ಶಾಲೆಯಲ್ಲಿ ಕಲಿತಿರಬಹುದು. ಅಲ್ಲಿ ಆತ ಕಲಿತದ್ದು ಓದಲು ಬರೆಯಲು ಅಂಕಿಗಳು ಮತ್ತು ತ್ರೈರಾಶಿಕ. ಅವನ ಭಾಷಾ ಪ್ರಭುತ್ವ ಅವನ ಕಾಲದ ಮಹಾನ ಅಕ್ಷರಗಳನ್ನು ತಿದ್ದುವ ಮಟ್ಟಿಗೆ ಸಾರ್ಥಕವಾಯಿತು.

ಅಂದಿನಿಂದ ಅಬ್ರಹಮ ಕೈಗೆ ಬಂದ ಪುಸ್ತಕಗಳನ್ನೆಲ್ಲ ಓದುತ್ತ ನಡೆದನು. ಅವನ ವಾಚನಾಭಿರುಚಿಯು ಸರ್ವಭಕ್ಷಕವೂ ಸದಾ ಜಾಗ್ರತವೂ ಆಗಿ ಉಳಿಯಿತು. ಹತ್ತೊಂಬತ್ತು ವರ್ಷದ ಆ ಹುಡುಗ ಮೈಕಟ್ಟಿನಲ್ಲಿ ಒಳ್ಳೇ ಜಟ್ಟಿಗನಾಗಿ ಬೆಳೆದು ನಿಂತಿದ್ದನು. ಎರಡು ನಾಟಿನ ತುಂಡುಗಳನ್ನು ನಿರಾಯಾಸವಾಗಿ ಎತ್ತಿ, ಹೊತ್ತು ನಡೆಯುವ ಬಲ ಆತನ ದೀರ್ಘ ಬಾಹುಗಳಲ್ಲಿ ತುಂಬಿತ್ತು. ಅವನು ಆರು ಅಡಿ ಎರಡು ಅಂಗುಲ ಎತ್ತರವಿದ್ದನು. ತೂಕದಲ್ಲಿ ೧೫೦ ಪೌಂಡು ಇದ್ದನು. ಅವನ ತಂದೆಯ ಪರಿಭಾಷೆಯಲ್ಲಿ ಹೇಳುವದಾದರೆ 'ಅವನ ಮೂರ್ತಿ ಕೈಗೊಡ್ಡಿ ನಿಂ

ುರುಬುರುಕಾಗಿ ಕೆತ್ತಿದ್ದು. ಅದಕ್ಕೆ ಉಜ್ಜುಗೊರಡಿನ ಇಲ್ಲವೆ ಕಡಾವಿನ ಸುಣುಪು
ಾಡುವದೊಂದು ಉಳಿದು ಹೋಗಿತ್ತು.' ಊರಜನ ಅವನ ಮಾತುಕತೆಗಳನ್ನು
ುಚ್ಚಿಗೆಯಿಂದ ಕೇಳುತ್ತಿದ್ದರು. ಏಕೆಂದರೆ ಅವನ ಬುದ್ಧಿಗೆ ವಿನೋದದ 'ತಿರುಪು'
ತ್ತು. ಅಲ್ಲಿಯ ಪಾದ್ರಿಗಳ ಅಥವಾ ಮೋಜುಗುದ್ದುವ ಕಸಬಿನ ಮಾತುಗಾರರ
ಕಲಿ'ಯನ್ನು ಅಭಿನಯಿಸುವದರಲ್ಲಿ ಅವನಿಗೆ ಸರಿಪಾಟಿ ಯಾರೂ ಇದ್ದಿಲ್ಲ.

೨೮ ರಲ್ಲಿ ಅವನಿಗೆ ಹೊರಜಗತ್ತನ್ನು ನೋಡುವ ಯೋಗ ಮೊದಲನೆಯ ಸಲ
ನಿಸಿತು. ನ್ಯೂಓರ್ಲಿಯನ್ಸಕ್ಕೆ ಒಂದು ದೋಣಿತುಂಬ ಹೊಲದ ಬೆಳೆಯ ಸರಕು
ನ್ನು ಹೇರಿಕೊಂಡು ಒಯ್ಯುವ ಕೆಲಸ ಅವನಿಗೆ ಬಂದಿತು. ಆ ಮೊದಲು ಆತ
್ನ ಮನೆಯ ಹೊರಗೆ ಕಾಲಿಟ್ಟಿದ್ದಿಲ್ಲ. ನ್ಯೂಓರ್ಲಿಯನ್ಸಕ್ಕೆ ಹೋದಾಗ ಅವನು
್ನ ಬಾಳಿನಲ್ಲಿಯೇ ಮೊದಲ ಸಲ ಗುಲಾಮಗಿರಿಯ ರೀತಿ ನೀತಿಗಳನ್ನು
ೀಡಿದನು.

ೇ ಪಟ್ಟಣಕ್ಕೆ ಇನ್ನೊಂದು ಬಾರಿ ಆತ ಸರಕು ಒಯ್ಯುವ ಪ್ರಸಂಗವು ಬಂದಿತು.
ಗ ಅಬ್ರಹಮನು ಅಲ್ಲಿ ಒಂದು ತಿಂಗಳು ಉಳಿಯಬೇಕಾಯಿತು. ಆ ಸಂದರ್ಭ
್ಲಿ ನಿಗ್ರೋ ಗುಲಾಮರ ಸ್ಥಿತಿಗತಿಗಳನ್ನು ಹತ್ತಿರದಿಂದ ಅಭ್ಯಾಸಿಸುವಂತಾಯಿತು.
ಗಲೇ ಆತನು ಪಣತೊಟ್ಟನು; ಸಂಧಿಯು ದೊರೆತರೆ, ಗುಲಾಮಗಿರಿಯನ್ನು
ಡೆದು ಹಾಕಬೇಕು, ಎಂದು.

ಲದೊಡೆಯನಾದ ಓಫಟ್ಟನೆಂಬಾತನು ಅವನನ್ನು ಹೊಸತೊಂದು ಕೆಲಸಕ್ಕೆ
ಮಿಸಿದನು. ನ್ಯೂಸೆಲಿಮ ಎಂಬಲ್ಲಿ ಅವನು ತನ್ನದೊಂದು ಉಗ್ರಾಣವನ್ನು
ಯುವವನಿದ್ದನು. ಅದಕ್ಕೆ ಮೇಲ್ವಿಚಾರಕನೆಂದು ಅಬ್ರಹಮನನ್ನು ಆತ ತೆಗೆದು
ಂಡನು. ಅಲ್ಲಿಗೆ ಹೋದ ಮೇಲೆ ಉಗ್ರಾಣವು ಕಟ್ಟಿ ಸಿದ್ಧವಾಗುವ ತನಕ
ಣ ಅಬ್ರಹಮನು ಅದೇ ತಾನೇ ಜರುಗ ತೊಡಗಿದ ಚುನಾವಣೆಯಲ್ಲಿ ಮತ
ಸೆಯ ಕಾರಕೂನನಾದನು. ಇದು ರಾಜಕಾರಣದಲ್ಲಿ ಪ್ರಥಮ ಪ್ರವೇಶ. ಇಂಥ
ಚಿತ್ರ ಉಗ್ರಾಣದ ಅಧಿಕಾರಿಯನ್ನು ಅಲ್ಲಿಯ ಜನ ಎಂದೂ ನೋಡಿರಲಿಕ್ಕಿಲ್ಲ.
ರೊಡನೆಯೂ ಹಟ ಹರಟೆ ಇಲ್ಲ; ಚಾಡಿ ಚರ್ಚೆಗಳಿಲ್ಲ. ದಿನವೆಲ್ಲ ಒಂದು
್ಟಿಯ 'ಥಾನು' ತಲೆದಿಂಬಿಗೆ ಇಟ್ಟುಕೊಂಡು ಕಾಲುಮಣೆಯ ಹಲಿಗೆಯ
ದ್ದಕ್ಕೂ ತನ್ನ ಉದ್ದಕಾಲುಗಳನ್ನು ಚಾಚಿ, ಕೈಯಲ್ಲಿ ಒಂದು ಪುಸ್ತಕವನ್ನು
್ತಕೊಂಡು ಆತ ಅಡ್ಡ ಬಿದ್ದಿರುತ್ತಿದ್ದನು. ಅಪರೂಪದ ಗಿರಾಕಿ ಯಾರಾದರೂ
ಗೆ ಬಂದರೆ ಎದ್ದು ಮಾತನಾಡಿಸಿ ಮತ್ತೆ ಹಲಿಗೆಯೇರಿ ಪುಸ್ತಕದಲ್ಲಿ ತಲೆ ತುಕ್ಕಿ
ಾಗುತ್ತಿದ್ದನು ! ಆಗ ಅವನಿಗೆ ಓದಲು ತುಂಬ ವಿರಾಮ.

ಆ ಸುತ್ತಿನ ಎಲ್ಲ ಊರುಗಳಿಗೆ ಅವನೇ 'ಪಂಡಿತ.' ಯಾವದೇ ಸ್ಥಾನಿಕ ರಾಜಕೀಯ ಚರ್ಚೆಯ ಕೂಟಗಳಲ್ಲಿ ಅವನೂ ಸ್ವಾಭಾವಿಕವಾಗಿ ಭಾಗವಹಿಸುತ್ತಿದ್ದನು. ಅವನ ಆ ಚರ್ಚೆಯ ರೀವಿ–ಸವಿಗಳನ್ನು ಕಂಡು ಊರ ಗಡಂಗದ ಮುನಿಯ ರಟಲೆಜ ಎಂಬುವನು ಅವನಿಗೆ ರಾಜಕೀಯ 'ಪುಢಾರಿ' ತನದ ವ್ಯವಸಾಯವನ್ನೇ ಚರಿತಾರ್ಥಕ್ಕಾಗಿ ಇಟ್ಟುಕೊಳ್ಳಲು ಸೂಚಿಸಿದನು !

ಚರಿತಾರ್ಥದ ವಿಚಾರ ಹೇಗೂ ಇದ್ದರೂ, ಆ ಮುನಿಯನ ಮನೆಯಲ್ಲಿ ಆತನಿಗೆ ಮೂರನೆಯ ಪುರುಷಾರ್ಥದ ಮಧುರ ಪರಿಚಯಕ್ಕೆ ಆಸ್ಪದ ದೊರೆಯಿತು. ರಟಲೆಜನ ಮಗಳು ಎನ್ನ ತಿಳು ಮೈಯ ಚಲುವೆ, ಕಪಿಲ ಕುಂತಲೇ, ಕೋಮಲೆ. ಆಕೆಯನ್ನು ಕಂಡಾಕ್ಷಣಕ್ಕೆ ಅಬ್ರಹಮ ಪ್ರೇಮದಲ್ಲಿ 'ತಲೆಕೆಳಗಾಗಿ ಬಿದ್ದುಬಿಟ್ಟ.' ಕಂಡಾಕ್ಷಣಕ್ಕೆ ಅಬ್ರಹಮ ಪ್ರೇಮದಲ್ಲಿ 'ತಲೆಕೆಳಗಾಗಿ ಬಿದ್ದುಬಿಟ್ಟ.' ಆದರೆ ಅದು ಅಶಕ್ಯ ಪ್ರಣಯವಾಯಿತು. ಆಕೆ ಆ ಮೊದಲೇ ನ್ಯೂಯಾರ್ಕದ ಒಬ್ಬ ಸುದೈವಿಗೆ ವಾಗ್ದತ್ತ ವಧುವಾಗಿದ್ದಳು !

ಇತ್ತ ರಟಲೆಜನ ಸಲಹೆ ಅವನಿಗೆ ಯೋಗ್ಯವೇ ಅನಿಸಿತ್ತು. ಆದರೆ ಅವನ ರಾಜಕೀಯ ಮಹತ್ವಾಕಾಂಕ್ಷೆಗೆ ಹೊರಗಿನದೊಂದು ಆಘಾತ ಬಿದ್ದಿತು. ಅದೇ ಸುಮಾರಿಗೆ, ಕೆಂದು ಇಂಡಿಯನ್ನರ ಕೊನೆಯ ಬಂಡಾಯ ಭುಗಿಲ್ಲನೆ ಎದ್ದಿತು. ಭಗ್ನ ಹೃದಯನಾದ ಅಬ್ರಹಮನು ನೇರವಾಗಿ ಆ ಯುದ್ಧದ ಮೊದಲನೆಯ ಸ್ವಯಂಸೇವಕ ಪಥಕದಲ್ಲಿ ಹೆಸರು ಹಚ್ಚಿಸಿದನು. ಶೀಘ್ರದಲ್ಲಿಯೇ ಆತನು ಒಂದು ದಲದ ಕಪ್ತಾನನಾಗಿ ಆರಿಸಲ್ಪಟ್ಟನು. 'ನಾನು ಹಿಂದೆ ಎಂದೂ ಭೋಗಿಸದಿದ್ದಂಥ ಸುಖವನ್ನು ಆ ಯಶಸ್ಸು ನನಗೆ ಕೊಟ್ಟಿತು' ಎಂದು ಆತ ಆ ಕುರಿತು ಮುಂದೆ ಬರೆದನು. ಆದರೆ ಅವನು ಯುದ್ಧರಂಗವನ್ನೇ ನೋಡಬೇಕಾಗಿ ಬರಲಿಲ್ಲ. ೧೮೩೨ ರ ಜುಲೈ ತಿಂಗಳಲ್ಲಿ ಆತ ಮರಳಿ ಬಂದನು. ನ್ಯೂಸೆಲೆಮ ಜಿಲ್ಲೆಗೆ ತನ್ನ ಸ್ವಯಂಸೇವಕತ್ವದ ಶ್ರೇಯವನ್ನು ರಾಜಕೀಯ ರಂಗದಲ್ಲಿಯಾದರೂ 'ಮುರಿಸಿ' ಕೊಳ್ಳೋಣವೆಂದು ಆತ ನಿರ್ಣಯಿಸಿರಬೇಕು. ಆ ವರ್ಷದ ಇಲ್ಲಿನೋಯ್ಸ್ ಪ್ರಾಂತದ ಶಾಸನಸಭೆಯ ಚುನಾವಣೆಯಲ್ಲಿ ಒಬ್ಬ ಹುರಿಯಾಳಾಗಿ ನಿಂತನು. ಚುನಾವಣೆಯಲ್ಲಿ ಸೋತನು.

ಈ ನಡುವೆ ಅಬ್ರಹಮನನ್ನು ನೇಮಿಸಿಕೊಂಡ ವರ್ತಕ ಓಫಟ್ಟನೂ 'ದಿವಾಳಿ' ತೆಗೆದನು. ಆಗ ಬೇರಿ ಎಂಬವನೊಡನೆ ಕೂಡಿ ಲಿಂಕನ್‌ನು ತನ್ನದೊಂದು ಸ್ಟೋರ್‍ಸ್ ತೆರೆದನು. ಈ ಸ್ಟೋರ್‍ಸ್ ದಿವಾಳಿ ತೆಗೆಯಿತು.

ರಂತರ ನ್ಯೂಸೆಲೆಮದಲ್ಲಿ ಅಬ್ರಹಮನು ಸ್ವಲ್ಪಕಾಲ ಅಂಚೆಮೇಸ್ತ್ರಿ ಆಗಿ ಕೆಲಸ
ಾಡಿದನು. ಅಂಚೆಮೇಸ್ತ್ರಿ, ಅಂಚೆಜವಾನನ ಕೆಲಸವನ್ನು ಮಾಡಬೇಕಿತ್ತು. ಬಂದ
ತ್ರಗಳನ್ನೆಲ್ಲ ಹ್ಯಾಟಿನಲ್ಲಿ ತುರುಕಿಕೊಂಡು ಹಂಚಲು ಹೊರಡುತ್ತಿದ್ದನು. ಊರಿಗೆ
ುವ ವೃತ್ತಪತ್ರಿಕೆಗಳನ್ನೆಲ್ಲ ಇಂದಿನ ನಮ್ಮಲ್ಲಿಯ ಹಳ್ಳಿಯ ಅಂಚೆಕಟ್ಟೆಯ
ಜಮಾನನಂತೆಯೇ !- ತಾನು ಒದೆಯ ಓದಿಮುಗಿಸಿಯೇ ಮುಂದಿಗೆ ಹಂಚು
ದ್ದನು. ಜತೆಗೆ ಲಿಂಕನ್‌ನು ಸರ್ವೆ ಅಧಿಕಾರಿಯ ಅಸಿಸ್ಟಂಟನಾದನು. ಇದು
ೇ 'ಸ್ಟಂಟ'ಲ್ಲ. ನಕಾಶೆ ಪೆಟ್ಟಿಗೆ ಮುಕ್ಕಾಲುಮಣೆ ಹೊತ್ತುಕೊಂಡು ಜಿಲ್ಹೆ
ಲ್ಲೆಲ್ಲ ಅಲೆದನು; ಹೆರವರ ಆಸ್ತಿಪಾಸ್ತಿಗಳನ್ನು ಹೆರವರಿಗಾಗಿ ಅಳೆದು
ಟ್ಟನು! ಇದೂ ಒಂದು ಜನಸಂಪರ್ಕದ ಅಮೂಲ್ಯ ಅನುಭವ.
೩೪ ರಲ್ಲಿ ಮತ್ತೆ ಚುನಾವಣೆಗೆ ನಿಂತನು. ಈ ಸಲ ಆರಿಸಿ ಬಂದನು. ಆ
ಂತ ರಾಜ್ಯದ ಶಾಸನ ಸಭೆಗೆ ಹೋದ ಮೇಲೂ ಸಭೆಯ ಕಾರ್ಯ ಕಲಾಪ
ಂದ ದೊರೆತ ಬಿಡುವನ್ನೆಲ್ಲ ಆತ ಆ ರಾಜಧಾನಿಯ ಪುಸ್ತಕಾಲಯದಲ್ಲಿ
ಯುತ್ತಿದ್ದನು. ಬೆಟ್ಟದ ಕಟ್ಟೆಗೆ ಮನೆಯಲ್ಲಿ, ಉಗ್ರಾಣದ ಅಂಗಡಿಯ
ಗೆಯ ಮೇಲೆ, ಲೋಕಸಭೆಯ ವಿರಾಮಗೃಹದಲ್ಲಿ, ಎಲ್ಲಿಯೂ ಅವನ ಕೈಯ
ಕ. ಪುಸ್ತಕದ ಅಭಿರುಚಿ; ಅಭಿರುಚಿಯ ಉತ್ಕಟತೆ, ಅವನನ್ನು ಬಿಡಲಿಲ್ಲ.

ನಡುವೆ ಶಾಸನಸಭೆಯ ಪ್ರತಿನಿಧಿಗೆ, ಶಾಸನ ಶಾಸ್ತ್ರದ ವ್ಯಾಸಂಗ ಅವಶ್ಯವೆನಿಸಿತು.
ಕನ್‌ನು ಕಾನೂನಿನ ಅಭ್ಯಾಸ ಆರಂಭಿಸಿದ್ದನು. ಅತ್ತ ಪ್ರಾಂತದ (ಇಲ್ಲಿನೊಯ್ಸದ)
ಧಾನಿಯು ಸ್ಪ್ರಿಂಗಫೀಲ್ಡ ಎಂಬಲ್ಲಿಗೆ ಕದಲಿಸಲ್ಪಟ್ಟಿತ್ತು. ಇತ್ತ ಅಬ್ರಹಮ
ೂನಿನ ಅಭ್ಯಾಸ ಮುಗಿಸಿ ವಕೀಲ ಸನದನ್ನು ಪಡೆದು ಸ್ಪ್ರಿಂಗಫೀಲ್ಡಿನಲ್ಲಿಯೇ
ಕಚೇರಿ ತೆರೆದನು, ಮನೆ ಮಾಡಿದನು. ಹೊಸ ಮನೆಗೆ ಲಿಂಕನ್ ತನ್ನ ಎಲ್ಲ
ಮಾನು ಸೊತ್ತುಗಳನ್ನು ಕೆಲವು ಥಡಿಯ ಪಕ್ಕದ ಚೀಲಗಳಲ್ಲಿ ತುಂಬಿತಂದನು.

ಸ ಮನೆಗೆ ಬರುವಾಗ ಮನೆಯಾಕೆಯನ್ನೂ ಆತ ತರಲಿದ್ದನು. ಮೇರಿ ಓವೆನ್ಸ
ತರುಣಿಯೊಡನೆ ಆತನ ನಿಶ್ಚಿತಾರ್ಥವಾಗಿತ್ತು. ಲಿಂಕನ್‌ನ ಮಾತಿನಲ್ಲಿಯೇ
ಸುವದಾದರೆ 'ಆಕೆ ಶೆಕ್ಸಪಿಯರ್‌ನ ಪ್ರಸಿದ್ಧ ವಿನೋದೀ ಪಾತ್ರವಾದ
ತ್ಯಾಯ ಫಾಲ್‌ಸ್ಟಾಫನಿಗೆ 'ಅನುರೂಪ' ವಧು;- ವಯಸ್ಸಿನಲ್ಲಿಯೂ
ದ್ಧಕುಮಾರಿ'ಯ ಅವಸ್ಥೆಯನ್ನು ತಲ್ಪಿದವಳು'. ಲಿಂಕನ್ ತನ್ನ ಭಾವೀಪತ್ನಿಗೆ,
ರ್ಣಯಾಗಿ ತಿಳಿಸಿದನು. ತನ್ನ ಕೈ ಹಿಡಿದು ಸುಖಾಸೀನವಾದ ನಿರಾಯಾಸ ಜೀವನ
ಅಪೇಕ್ಷಿಸಕೂಡದೆಂದು. ವಕೀಲಿಯಲ್ಲಿ, ಲಿಂಕನ್ ಜೋನ್ ಟಿ. ಸ್ಟುಅರ್ಟ
ತನ್ನ ಗೆಳೆಯನೊಡನೆ ಪಾಲುಗಾರಿಕೆಯನ್ನು ಆರಂಭಿಸಿದನು. ಆ ವಕೀಲಿ
ಯೂ ಅವರೀರ್ವರೂ ವ್ಯವಸಾಯಕ್ಕಿಂತ ರಾಜಕಾರಣದ ಆಲೋಚನೆಯನ್ನೇ

ಹೆಚ್ಚು ಮಾಡುತ್ತಿದ್ದರು. ಅಂದಮೇಲೆ ಅವರ ವಕೀಲಿಯವೃತ್ತಿ ಊರ್ಜಿತ ವಾಗುವದೆಂತು ? ಆದರೆ ರಾಜಕೀಯದಲ್ಲಿ ಮಾತ್ರ ಆತ ಮುಂದುವರಿದನು. ೧೮೩೮–೧೮೪೦ ರಲ್ಲಿ ಆತನು ಶಾಸನ ಸಭೆಗೆ ಆರಿಸಿಹೋದನು.

ಇದೇ ಕಾಲಖಂಡದಲ್ಲಿ ಇನ್ನೊಬ್ಬ ವ್ಯಕ್ತಿ, ಅವನ ಬದುಕಿನ ದಾರಿಯಲ್ಲಿ ಅಡ್ಡ ಬಂದನು. ಅವನ ಹೆಸರು ಸ್ಟೀಫನ್ ಎ. ಡಗ್ಲಸ. ಇವನು ಮುಂದೆ ೨೫ ವರ್ಷ ರಾಜಕಾರಣದಲ್ಲಿ ಲಿಂಕನ್‌ನ ಪ್ರತಿಸ್ಪರ್ಧಿಯಾಗಿ ಹೋರಾಡಿದನು. ಬಹಿರಂಗದಂತೆ ಅಂತರಂಗ ಜೀವನದಲ್ಲಿಯೂ ಡಗ್ಲಸ ಆತನಿಗೆ ಇದುರಾಳಿಯಾದನು. ಮೇರಿ ಟೊಡ್ಡ ಎಂಬಾಕೆಯ ಕೈಗಾಗಿ ಇಬ್ಬರೂ ಕೆಲಕಾಲ ಸ್ಪರ್ಧಿಸಿದ್ದರು. ಮೇರಿ ಒಂದು ಸಿರಿವಂತ ಕುಲದ ಹೆಣ್ಣು ಮಗಳು. ಐಸಿರಿಯೊಂದಿಗೆ ಮೈಸಿರಿಯೂ ಕೂಡಿ ಕರೆಯುವಾಗ ಯಾರಿಗೆ ಬೇಡ ? ಆಕೆ ಡಗ್ಲಸನಿಗಿಂತ ಲಿಂಕನ್‌ನನ್ನೇ ಮೆಚ್ಚಿದಳು. ಲಿಂಕನ್‌ನಲ್ಲಿ ಆಕೆ ಭಾವೀರಾಷ್ಟ್ರಾಧ್ಯಕ್ಷನನ್ನು ಕಂಡಳು ಎಂದು ಹೇಳುವಂತಿಲ್ಲ. ಆಕೆಗೆ ಅಷ್ಟೊಂದು ದೂರಾಲೋಚನೆ ಎಲ್ಲಿಂದ ಬರಬೇಕು ? ಆದರೂ ದರ್ಪ, ದಾಕ್ಷಿಣ್ಯಗಳ ಆಕರ್ಷಕ ಠೀವಿಯ ಡಗ್ಲಾಸನನ್ನು ಧಿಃಕರಿಸಿ ಮೇರಿಯು ಈ ಬಡಕಲು ಮೈಯ ಅಂದಗೇಡಿ ಬಡ ವಕೀಲನನ್ನೇ ವರಿಸಿದಳು. ಆಕೆ ಸದ್ದು ಮುದ್ದಾಗಿ ದಪ್ಪ, ದುಂಡಗಿನ ಆಕಾರದವಳು; ಮಾತುಕತೆಯಲ್ಲಿ ತುಂಬ ಜೀವಕಳೆಯು ಹಿಗ್ಗು. ಆದರೆ ಮೌನವಾಗಿದ್ದಾಗ ಮುಖಭಾವ ಕಠೋರ.

ಅವರ ಈ ಪ್ರಿಯಾರಾಧನೆ ಲಲಿತವಾಗಿ ಸಾಗಲಿಲ್ಲ. ಮೇರಿಟೊಡ್ಡ ಪ್ರಭುತ್ವ ನಡಿಸುವಂಥವಳು. ರೂಪ ಗರ್ವಿತೆ, ಒಣ ಆಢ್ಯತೆಯ ಬಿಂಕದಾಕಿ, ಹುಚ್ಚು ಅಸೂಯೆಯ ಹೆಣ್ಣು. ಅವರೀರ್ವರಲ್ಲಿ ಕಲಹಗಳು ನಿತ್ಯದ ಘಟನೆಗಳಾಗಿದ್ದವು. ಕೊನೆಗೆ ಅವರ ಮದುವೆಯ ದಿನ ಗೊತ್ತಾಯಿತು. 'ಮುಹೂರ್ತ'ಕ್ಕೆ ಸರಿಯಾಗಿ ವರ ಲಿಂಕನ್ ಬ ರ ಲೇ ಇಲ್ಲ ! ಇದು 'ಸುಲಗ್ನ'ವಲ್ಲವೆಂದು ಲಿಂಕನ್ 'ಸುಮುಹೂರ್ತ'ಕ್ಕೆ 'ಸಾವಧಾನ'ನಾಗಿರಬೇಕು. ಅನಂತರ ಆತ ವಿಪರೀತ ಬೇನೆಬಿದ್ದ ; ಬೇನೆಯಲ್ಲಿ ಆತ್ಮಹತ್ಯೆಯ ವಿಚಾರವನ್ನು ಕೂಡ ಮಾಡಿದ. ಬೇನೆಯಿಂದ ಎದ್ದಮೇಲೆ ಮತ್ತೆ ಮೇರಿಟೊಡ್ಡ ಮತ್ತು ಲಿಂಕನ್ ಹತ್ತಿರ ಬಂದರು. ಮತ್ತೆ ಪ್ರಣಯಕೋಪ, ಈರ್ಷೆ, ಕಲಹ, ಆಕರ್ಷಣೆ, ಮನಸ್ತಾಪ ಆರಂಭವಾದವು. ಆದಾಗ್ಯೂ ಈ ಸಲ ಎಂಥ ಸಂದೇಹಗಳಿದ್ದರೂ, ಮನಸ್ಸು ಗಟ್ಟಿ ಮಾಡಿ ಲಿಂಕನ್ ಈ ಮೇರಿಯನ್ನು ಮದುವೆಯಾದನು. ಕುಮಾರಿಟೊಡ್ಡಳು ಎಷ್ಟೇ ಅಸಹನೆ–ಅಸೂಯೆ ಅಭಿಮಾನಗಳ ಅಟವಟವಿದ್ದರೂ ಮೂಲದಲ್ಲಿ ಅಬ್ರಹಾಮ ನನ್ನು ಬಲವಾಗಿ ಪ್ರೀತಿಸಿದ್ದಳು. ಆದ್ದರಿಂದ ಅವರ ವಿವಾಹ ಸಂಘಟಿಸಿತು.

ುಂದಿನ ವರ್ಷವೇ ಲಿಂಕನ್, ವಿಲಿಯಮ ಹರ್ನಡನ್ ಎಂಬ ಮಿತ್ರನೊಡನೆ
ಕೀಲಿಯ ಹೊಸ ಪಾಲುಗಾರಿಕೆಯನ್ನು ಆರಂಭಿಸಿದನು. ಈ ಹರ್ನಡನ್‌ನೇ
ುಂದೆ ಲಿಂಕನ್‌ನ ಜೀವನ ಚರಿತ್ರವನ್ನು ಬರೆದು ಹೆಸರಾದನು. ಈ ಪಾಲು
ರಿಕೆ ಆಮರಣ ಅಬಾಧಿತವಾಗಿ ನಡೆಯಿತು. ಶ್ರೀಮತಿ ಲಿಂಕನ್‌ಳು ತನ್ನ
ಭಾವಕ್ಕೆ ಸರಿಯಾಗಿ ಈ ಹೊಸ ಮಿತ್ರನ ಕುರಿತು ಎಷ್ಟೋ ವೈರ ವೈಮನಸ್ಸು
ಅನ್ನು ತಪ್ಪದೆ ತೋರಿಸತೊಡಗಿದ್ದಳು. ಆದರೂ ಲಿಂಕನ್ ಪಾಲುಗಾರನ ಕೈ
ಡಲಿಲ್ಲ. ಮೇರಿ ಲಿಂಕನ್‌ಳಿಗೆ ತನ್ನ ಗಂಡನ ಸತ್ವಗುಣ ಸರಿಯಾಗಿ ಗೊತ್ತಿತ್ತು.
ತ ಸ್ಪ್ರಿಂಗಫೀಲ್ಡದ ಮೂಲೆಯಲ್ಲಿ ಮಲೆತು ನಿಲ್ಲಬಾರದೆಂದು ಆಕೆಯ ಆಗ್ರಹ.
ಕೆ ಆತನಲ್ಲಿ, ಹೆಚ್ಚಿನ ಆಕಾಂಕ್ಷೆಯನ್ನು ಹುಟ್ಟಿಸಿದಳು; ಕೇಂದ್ರದ ಕಾಂಗ್ರೆಸ್ಸಿಗೆ
ತಿನಿಧಿಯಾಗಿ ಹೋಗಲು ಹುರಿದುಂಬಿಸಿದಳು. ೧೮೪೬ ರಲ್ಲಿ ಆತ ಕಾಂಗ್ರೆಸ್ಸಿಗೆ
ನ್ನ ಪ್ರಾಂತೀಯ ಸಭೆಯಿಂದ ನೇಮಿಸಲ್ಪಟ್ಟು, ವಾಶಿಂಗಟನ್ನಿಗೆ ಹೋದನು.
ುಂದಿನ ವರ್ಷ ಅವನು 'ಕಾಂಗ್ರೆಸ್ಸಿಗ'ನಾದನು.

ಂಗ್ರೆಸ್ಸಿನಲ್ಲಿ ಕೂತ ಸ್ವಲ್ಪವೇ ಕಾಲದಲ್ಲಿ ಲಿಂಕನ್ 'ಕತೆ ಹೇಳುವದರಲ್ಲಿ ಹಿರೇ
ಂದ್ದರಿ' ಎನಿಸಿಕೊಂಡನು. ಈ ಹೆಸರನ್ನು ಇತರ ಪ್ರತಿನಿಧಿಗಳು ತುಸು ಮೂದಲಿಕೆ
ುಂದಲೇ ಕೊಟ್ಟಿದ್ದರು. ಆದರೂ ಆತ ತನ್ನ ಜೀವನ ಕಾರ್ಯವನ್ನು ಆಗಲೇ
ರ್ಧರಿಸಿ ಬಿಟ್ಟಿದ್ದನು ಅದನ್ನು ಗಂಭೀರವಾಗಿಯೆ ನಡೆಸಲು ಟೊಂಕಕಟ್ಟಿದ್ದನು.
ಕುರಿತು ಆಡಬೇಕಾದ ಮಾತುಗಳನ್ನು ಜನ ಏನೆಂದು ಕರೆದರೂ ಆತನಿಗೆ
ರಿವೆ ಇದ್ದಿಲ್ಲ. ಆ ಕಾರ್ಯವೆಂದರೆ ಗುಲಾಮರ ಬಿಡುಗಡೆ ನಿಗ್ರೋ
ಸ್ವತಂತ್ರ್ಯದ ಸಮಸ್ಯೆ. ಈ ಗುಲಾಮರ ಸಮಸ್ಯೆ ಅನುದಿನವೂ ಲಿಂಕನ್‌ನ
ರಿಯ ತಳದಲ್ಲಿ, ಮನಸ್ಸಿನ ಹಿನ್ನಲೆಯಲ್ಲಿ ಕೊರೆಯುತ್ತಿತ್ತು. ಕಾಂಗ್ರೆಸ್ಸಿನ
ರಡನೆಯ ಅಧಿವೇಶನದಲ್ಲಿಯೇ ಆತನು ಕೊಲಂಬಿಯಾ ಪ್ರಾಂತದಲ್ಲಿಯ
ಲಾಮಗಿರಿಯ ಉಚ್ಚಾಟನೆಯ ಕುರಿತು ಒಂದು ಮಸೂದೆಯನ್ನು ಮಂಡಿಸಿದನು.
ು ಬಹುಮತದಿಂದ ತಿರಸ್ಕರಿಸಲ್ಪಟ್ಟಿತು. ಲಿಂಕನ್ ನಿರಾಶನಾಗಿ ಸ್ಪ್ರಿಂಗಫೀಲ್ಡಿಗೆ
ದಿರುಗಿದನು ಮತ್ತೆ ತನ್ನ ವಕೀಲಿ ವ್ಯವಸಾಯಕ್ಕೆ ಆತ ತೊಡಗಿದನು.

ತ್ತಮ ವಕೀಲನೆಂದು ಆತ ಶೀಘ್ರದಲ್ಲಿಯೇ ಹೆಸರಾದನು. ಇಲ್ಲಿನೊಯ್ಸಿ
ಗಣೆಯಲ್ಲಿ ಎಲ್ಲ ನ್ಯಾಯಸ್ಥಾನಗಳಲ್ಲಿಯೂ ಲಿಂಕನ್‌ನ 'ಲಾಯರಿ'
ೇಕಮಾನ್ಯವಾಯಿತು. ಆಕಾಲದ ಅತಿಪ್ರಸಿದ್ಧ 'ಕೇಸು'ಗಳಲ್ಲಿ ಲಿಂಕನ್‌ನನ್ನೇ
ೀಲನಾಗಿ ಕಟ್ಟುತ್ತಿದ್ದರು. ಈ ಸೆಳೆತ ಹೆಚ್ಚುದಂತೆ ಆತನ ರಾಜಕಾರಣದ
ಕ್ತಿ ಕಡಿಮೆ ಆಗತೊಡಗಿತು. ಆದರೆ ೧೮೫೪ ರಲ್ಲಿ ಗುಲಾಮ ಗಿರಿಯ

ಸಮಸ್ಯೆಯು ಲಿಂಕನ್‌ನನ್ನು ಮತ್ತೆ ಬಡಿದೆಬ್ಬಿಸಿತು. ಆತ ಗರ್ಜಿಸಿದನು· 'ಈ ರಾಷ್ಟ್ರವು ಅರ್ಧ ಗುಲಾಮ, ಅರ್ಧ ಸ್ವಾತಂತ್ರ್ಯವಾಗಿ ಬದುಕುಳಿಯಲಾರದು!' ಡಗ್ಲಸ ಅವನ ಹಳೆಯ ಪ್ರತಿಸ್ಪರ್ಧಿ. ಈ ಹೊಸ ಯುದ್ಧದಲ್ಲಿಯೂ ಇದುರಾಳಿಯಾಗಿ ನಿಂತನು. ಆತನೂ ಈಗ ಸಿನೇಟರ ಆಗಿ ಆರಿಸಿ ಬಂದಿದ್ದನು. ಲಿಂಕನ್‌ನ ಗರ್ಜನೆ ಮುಖ್ಯವಾಗಿ ಅವನ ಪ್ರತಿಭಟನೆಯಾಗಿತ್ತು. ಆ ವರ್ಷ ಲಿಂಕನ್ ತನ್ನ ಪ್ರಾಂತದ ಶಾಸನಸಭೆಗೆ ಅವನ ಒಪ್ಪಿಗೆ ಇಲ್ಲದೆಯೂ ಆರಿಸಲ್ಪಟ್ಟನು. ಆದರೆ ಕೂಡಲೇ ತನ್ನ ಸ್ಥಾನಕ್ಕೆ 'ರಾಜೀನಾಮೆ' ಸಲ್ಲಿಸಿ ಆತನು ಕೇಂದ್ರದ ಸಿನೇಟಿಗೆ ಹುರಿಯಾಳಾಗಿ ನಿಂತನು. ಆದರೆ ಅಲ್ಲಿ ಪರಾಭವ ಹೊಂದಿದನು.

ಅನಂತರ ಬಂದಿತು ಯುದ್ಧ ಕಾಲ. ಅದೂ ಎಂಥ ಯುದ್ಧ? ನರಬಲಿಯ ನಿವಾರಣೆಯ ಧರ್ಮಯುದ್ಧ. ಅದು ದಕ್ಷಿಣದ ಸಂಸ್ಥಾನಗಳು ತಮ್ಮ ಬಲಿಷ್ಠ ಸ್ವಾರ್ಥಕ್ಕಾಗಿ ಹೂಡಿದ ಯಾದವೀ ಕಲಹ. ಆ ಸಂಸ್ಥಾನಗಳು ಗುಲಾಮರ ಯಜಮಾನರ ರಾಜ್ಯಗಳು. ಸಿನೇಟರ ಡಗ್ಲಸ ಈಗ ಅವರ ಪರವಾಗಿ ಡೆಮೋಕ್ರ್ಯಾಟಿಕ್ ಪಕ್ಷದ ಮುಂದಾಳಾಗಿ ಕಣಕ್ಕೆ ಇಳಿದಿದ್ದನು. ಅವನೊಡನೆ ಲಿಂಕನ್‌ನ ವಿರೋಧವು ವೈಯಕ್ತಿಕವೂ ಇತ್ತು, ರಾಜಕೀಯವೂ ಇತ್ತು. ಲಿಂಕನ್ ಆ ಪಕ್ಷದ ಹಾಗೂ ಅದರ ಮುಂದಾಳಿನ ವಿರುದ್ಧ ಉಗ್ರವಾದ ಮತಪ್ರಚಾರ ಆರಂಭಿಸಿದನು. ಇದರ ಪರಿಣಾಮವಾಗಿ ಹೊಸ ಪಕ್ಷ ತಲೆ ಎತ್ತಿ ಭುಜತಟ್ಟಿ ನಿಂತಿತು. ಅದೇ ರಿಪಬ್ಲಿಕನ್ ಪಕ್ಷ. (ಅಂದಿನಿಂದ ಇಂದಿಗೂ ಇವೆರಡು ಪಕ್ಷಗಳ ಏರಾಟ ಮೇಲಾಟಗಳಿಂದ ಅಮೇರಿಕೆಯ ರಾಜಕಾರಣ ನಡೆಯುತ್ತದೆ.) ೧೮೫೮ರಲ್ಲಿ ಈ ಹೊಸ ಪಕ್ಷದ ಇಲಿನೊಯ್ಸಿನ ಸದಸ್ಯರೆಲ್ಲ ಸಭೆಗೂಡಿ ಗೊತ್ತುವಳಿಯನ್ನು ಮಾಡಿ ಪ್ರಕಟಿಸಿದರು; –'ಮಾನ್ಯ ಅಬ್ರಹಮ ಲಿಂಕನ್ ಇವರೋರ್ವರೇ ನಮ್ಮ ಕೇವಲ ಸಿನೇಟ ಪ್ರತಿನಿಧಿ' ಎಂದು. ಆದರೂ ಲಿಂಕನ್ ಸಿನೇಟಿಗೆ ಆರಿಸಿ ಬರಲಿಲ್ಲ. ಡಗ್ಲಸನೇ ಮತ್ತೆ ಆರಿಸಿ ಬಂದನು.

ಲಿಂಕನ್ ತೀವ್ರ ನಿರಾಶೆಗೊಂಡನು. ಆದರೂ ಈ ಬಿದ್ದ ಪೆಟ್ಟಿಗೆ ತಾನೇ ನಕ್ಕು ನಗೆ ಮಾತನಾಡಿದನು. 'ತನ್ನ ಕಾಲ ಹೆಬ್ಬೆರಳನ್ನೇ ತಾನು ಜಜ್ಜಿಕೊಂಡ ಹುಡುಗನಂತೆ' ನನ್ನ ಅವಸ್ಥೆ ಆಗಿದೆ. ಆದಾಗ್ಯೂ ಹತಾಶನಾಗಿ ಸಾರ್ವಜನಿಕರಿದುರಿನಿಂದ ಅದೃಶ್ಯನಾಗುವಂಥವನಲ್ಲ. ಅಂಥ ಉದ್ವಿಗ್ನ ಅವಸ್ಥೆಯಲ್ಲಿಯೂ ಆತನು ನ್ಯೂಯಾರ್ಕದಲ್ಲಿ ಒಂದು ಭಾಷಣ ಮಾಡಿದನು. ಆ ಭಾಷಣ ಅವನಿಗೆ ಅಖಿಲ ರಾಷ್ಟ್ರದ ಪ್ರಶಂಸೆಯನ್ನು ತಂದಿತು. ಕೇಳಲು ಬಂದ ಜನಸಮುದಾಯವನ್ನು ತನ್ನ ವಾಣಿಯಿಂದ ಭಾವಪರವಶವಾಗಿಸಿ ತೂಗಿಸಬಲ್ಲ ಇವನ್ಯಾವ ವಡುವ

ಮೆಯ ವಕೀಲನು ? ಎಂದು ಎಲ್ಲೆಡೆಯಲ್ಲಿಯೂ ಜನ ಸೋಜಿಗಪಟ್ಟು
ಂಡಿತ್ತು.

೬೦ ನೇ ವರ್ಷ ಚಿಕಾಗೋ ಶಹರದಲ್ಲಿ ರಿಪಬ್ಲಿಕನ್ ಪಕ್ಷದ ರಾಷ್ಟ್ರೀಯ
ಹಾಅಧಿವೇಶನವು ನೆರೆಯಿತು. ಆ ಅಧಿವೇಶನವು ಲಿಂಕನ್‌ನನ್ನು ಅಧ್ಯಕ್ಷಪದಕ್ಕೆ
್ಮಪಕ್ಷದ ಹುರಿಯಾಳೆಂದು ಆರಿಸಿತು. ಈ ಸಮಾಚಾರ ಅಬ್ರಹಮನಿಗೆ
ದಾಗ ಆತನು ಸ್ಪ್ರಿಂಗಫೀಲ್ಡದಲ್ಲಿ ಕೈಚೆಂಡು ಆಡುತ್ತಿದ್ದನು. ಬಂದ ತಂತಿಯನ್ನು
ದು ಕ್ಷಣ ದಿಟ್ಟಿಸಿ, 'ಅಲ್ಲಿ ಇಂಗ್ಲೀಷ ಸ್ಟ್ರೀಟ ಕೇರಿಯಲ್ಲಿ ಒಬ್ಬ ಗಿಡ್ಡ ಪುಟ್ಟ
ಗಸಿದ್ದಾಳೆ. ಆಕೆ ಈ ಸುದ್ದಿ ಕೇಳಿ ಮನವಾರೆ ಹಿಗ್ಗುವಳು' ಎಂದನು.
ಡಲೇ ಹುರುಪಿನಿಂದ ಮನೆಗೆ ಬಂದು ಗೆಲುವಿನಿಂದ ಹೆಂಡತಿಯನ್ನು ಹಿಗ್ಗಿಸಿದ
ವೇ 'ಗೃಹ ಪ್ರವೇಶ'ಗಳಲ್ಲಿ ಅದೊಂದು !

ರೂ ಅವನ ವಿನಯ ನೋಡಿ. ಈ ಪಕ್ಷದ ಆಯ್ಕೆಗೆ ತನ್ನ ಸಮ್ಮತಿಯನ್ನು
ದು ಕಳಿಸುವಾಗ, ಲಿಂಕನ್‌ನು ತಾನು ಬರೆದ ಆ ಸಮ್ಮತಿ ಪತ್ರವನ್ನು ಆ
ಂತದ ಶಿಕ್ಷಣಾಧಿಕಾರಿಗೆ ಕಾಣಿಸಲು ಒಯ್ದನು ! ಏಕೆ ಗೊತ್ತೇ ? ಅದು
ಯಾಗಿದೆಯೋ ಒಕ್ಕಣೆ ಚೆನ್ನಾಗಿದೆಯೋ ತಿಳಿದುಕೊಳ್ಳಲಿಕ್ಕೆ. ಆ
ಣಾಧಿಕಾರಿಗೂ ಆಶ್ಚರ್ಯವಾಯಿತು. 'ಅಲ್ಲ ಸ್ವಾಮಿ, ಅದರಲ್ಲಿ ಏನು ತಪ್ಪು
ದರೂ ನನಗೆ ಸೇರದು' ಅಂದನು. ಅಬ್ರಹಮ ಅಧಿಕಾರಿಯು ಆ ಕರಡನ್ನು
ನೋಡಿದನು. ಅವನು ಒಂದೇ ತಿದ್ದುಪಡಿಯನ್ನು ಸೂಚಿಸಿದನು. ಬರೆದ
ಸನದ ವಾಕ್ಯದಲ್ಲಿಯ ಪಕ್ಷದ ಆಜ್ಞೆಯನ್ನು ಭಂಗಪಡಿಸಲಿಕ್ಕಿಲ್ಲ ಎಂಬ
ದಲ್ಲಿಯ ನಿಷೇಧಪದವನ್ನು ಯೋಗ್ಯಸ್ಥಾನದಲ್ಲಿ ಇಟ್ಟನು. ಶಿಕ್ಷಣಾಧಿಕಾರಿಯು
ರಿಸಿದ ಪ್ರಮಾದವನ್ನು ಲಿಂಕನ್‌ನು ಮರುಮಾತಿಲ್ಲದೆ ಸರಿಪಡಿಸಿದನು.

ನ ಆಯ್ಕೆ ಮತ್ತು ನೇಮಕ ಇವೆರಡರ ನಡುವಿನ ಕಾಲವನ್ನು ಲಿಂಕನ್
ಗಫೀಲ್ಡದಲ್ಲಿಯೇ ಕಳೆದನು. ಡೆಮೋಕ್ರೆಟಿಕ್ ಪಕ್ಷದ ವಿರುದ್ಧ ಪ್ರಚಾರ ಆತನ
ತು ಅತಿ ಕ್ರೂರವಾಯಿತು. 'ಅವನು ಒಬ್ಬ ಮೂರನೆಯ ತರಗತಿಯ ಲಾಯರು'
ಂಚಿನ ಕುಪದಾರ್ಥ', 'ಅಸಡ್ಡಾಳ ಒರಟು ನಗೆಚಾಟಿಕೆ ಮಾಡುವ ಹಾಸ್ಯಗಾರ'
ಕರಣ ಶುದ್ಧವಾಗಿ ಮಾತನಾಡಲೂ ಬರದ ವಾಚಾಳಿ' 'ಬರೇ ಶರ್ಟುತೊಟ್ಟು,
ಳು ಸಡಿಲು ಬಿಟ್ಟು ಕುರ್ಚಿಯನ್ನು ಹಿಂಗಾಲುಗಳ ಮೇಲೆ ತೂಗಿ ಸೊಟ್ಟಾಗಿ
ತ್ತುವ ಅಂದಗೇಡಿ' ಹೀಗೆಲ್ಲ ಸಹಸ್ರನಾಮಗಳ ಸುರಿಮಳೆ ಆಯಿತು. ಅವನು
ಗೃಹಸ್ಥನಲ್ಲವೆಂದೂ ಗೊರಿಲ್ಲಾ ಮಂಗನನ್ನು ಹೋಲುವ ಹೊಲ್ಲನೆಂದೂ
ರು.

ಈ ಚುನಾವಣೆಯ ಪ್ರಚಾರದ ಭರದಲ್ಲಿ ದಕ್ಷಿಣದ ಸಂಸ್ಥಾನಗಳ ದ್ವೇಷವು ಉತ್ತರದವರ ವಿರುದ್ಧ ಉರಿದೆದ್ದಿತು. ಉತ್ತರದ ಸಂಸ್ಥಾನದ ಜನವೆಲ್ಲ 'ಮೈ ಕೈಗೆ ಮಸಿಯೆಣ್ಣೆ ಬಳಿದ ಯಾಂತ್ರಿಕರು, ಹೊಲಸು ಮೇಸ್ತ್ರಿಗಳು, ಮಂಗ ಮುಷ್ಠಿಯ ಒಕ್ಕಲಿಗರು ಮತ್ತು ಹುಣ್ಣಿವೆಗೆ ಹುಚ್ಚೆದ್ದ ಹಟವಾದಿ ಸಿದ್ಧಾಂತಿಗಳು ಎಂದು ಮುಂತಾಗಿ ದಕ್ಷಿಣದ ಗುಲಾಮರ ದಡ್ಡಿಗಳನ್ನು ಸಾಕುವ ಸಿರಿವಂತ ಕುಳಗಳು ನಂಜು ಕಾರತೊಡಗಿದರು.

ಆದರೂ ಅಬ್ರಹಮ ಲಿಂಕನ್ ಅಧ್ಯಕ್ಷಪದಕ್ಕೆ ಆರಿಸಿ ಬಂದನು. ನಾಲ್ಕು ದಿನ ನಂತರ ದಕ್ಷಿಣದ ಸಂಸ್ಥಾನಗಳು ಸಂಯುಕ್ತ ಸಂಸ್ಥಾನಗಳ 'ಗಣ ರಾಜ್ಯ' ಘಟನೆಯಿಂದ ಸಿಡಿದು ಹೊರಬೀಳುವ ಗದ್ದರಿಕೆಯಂತೆ ನಡೆಯಲು ಆರಂಭಿಸಿದವು. ದಕ್ಷಿಣದ ಪತ್ರಿಕೆಗಳಲ್ಲಿ ಲಿಂಕನ್‌ನ ಅಧ್ಯಕ್ಷತನದ ಸುದ್ದಿ ವಿದೇಶಿ ವಾರ್ತೆಗಳೆಂಬ ತಲೆಬರಹದೊಂದಿಗೆ ಪ್ರಸಿದ್ಧವಾಯಿತು! ದಕ್ಷಿಣ ಕ್ಯಾರೊಲಿನಾ ಸಂಸ್ಥಾನದ ಸರಕಾರವು ತಮ್ಮ ಬಂದರಕ್ಕೆ ಬಂದ, ಒಂದು ಉತ್ತರದ ಹಡಗದ ಮೇಲೆ ಗುಂಡುಹಾರಿಸಿತು!

೧೮೬೧ ರ ಫೆಬ್ರುವರಿ ತಿಂಗಳಲ್ಲಿ ಲಿಂಕನ್ ಅಮೇರಿಕೆಯ ರಾಜಧಾನಿ ವಾಶಿಂಗಟನ್ ನಗರಕ್ಕೆ ಹೋದನು. ಮಾರ್ಚ ೪ ಕ್ಕೆ ಆತನ ಅಧಿಕಾರ ಗ್ರಹಣ ಸಮಾರಂಭವಾಯಿತು. ಲಿಂಕನ್‌ನ ಕೊಲೆಯಾಗಲೂಬಹುದೆಂಬ ಆತಂಕದ ವಾರ್ತೆ ಆಗಲೇ ಹಬ್ಬಿತ್ತು. ಆ ಸಮಾರಂಭಕ್ಕೆ ಕೂಡಿದ ಜನ ಸಮುದಾಯವೂ ಚಿಕ್ಕದಿತ್ತು. ಲಿಂಕನ್ ಹೊಸ ಬಟ್ಟೆಗಳಲ್ಲಿ ನಾಚಿ ಅಳುಕಿದಂತೆ ಕಂಡನು. ಒಂದು ಕೈಯಲ್ಲಿ ಹ್ಯಾಟು ಇನ್ನೊಂಡರಲ್ಲಿ ತನ್ನ ಕೋಲನ್ನು ಹಿಡಿದುಕೊಂಡು, ಅಂದಗೇಡಿನ ರೀತಿಯಲ್ಲಿಯೇ ನಿಂತುಕೊಂಡನು. ಅವನ ಚಿರ ಪ್ರತಿಸ್ಪರ್ಧಿ ಡಗ್ಲಸನು ರೂಢಿಯಂತೆ ಮುಂದೆ ಬಂದು ಲೋಕಾಭಿರಾಮವಾಗಿ ಅವನ ಕೈಗಳಿಂದ ಹ್ಯಾಟು ಕೋಲುಗಳನ್ನು ತೆಗೆದುಕೊಂಡು ಪ್ರತಿಜ್ಞಾವಿಧಿಯೆಲ್ಲ ಮುಗಿಯುವತನಕ ನಿಂತನು. ಲಿಂಕನ್ ತನ್ನ ಭಾಷಣದಲ್ಲಿ ಗುಲಾಮಗಿರಿಯ ಪದ್ಧತಿಯಲ್ಲಿ ಕೈ ಹಾಕುವ ಉದ್ದೇಶ ತನ್ನದಿಲ್ಲವಾಗಿ ಸಾರಿದನು; ಆದರೆ ಸಂಯುಕ್ತ ರಾಜ್ಯಘಟನೆಯ ಅಭೇದ್ಯ ಪಾವಿತ್ರ್ಯವನ್ನು ಎತ್ತಿ ಹಿಡಿದು ದೃಢವಾಗಿ ಮಾತನಾಡಿದನು.

ಆದರೂ ದಕ್ಷಿಣ ಸಂಸ್ಥಾನಗಳ ಭೀತಿ ಕಡಿಮೆ ಆಗಲಿಲ್ಲ. ಅವರ ಆತಂಕ ನೀತಿಯು ತಡೆಯಲಿಲ್ಲ. ದಕ್ಷಿಣ ಕಾರೊಲಿನಿಯನ್ ಜನರು ಅಲ್ಲಿಯ ಭದ್ರತೆಯ ಕೇಂದ್ರವಾದ ಫೋರ್ಟಸಂಟರ ಎಂಬ ಠಾಣ್ಯದ ಮೇಲೆ ದಾಳಿಮಾಡಿದರು. ಆಗ ಆ ಠಾಣ್ಯದಲ್ಲಿಯ

ನ್ನ ಸಾಮಗ್ರಿ ಎಲ್ಲ ತೀರುತ್ತ ಬಂದಿತ್ತು. ಯಾದವೀ ಯುದ್ಧಕ್ಕೆ ಹೀಗೆ ಾರಂಭವಾಯಿತು. ಲಿಂಕನ್ ಗುಲಾಮಗಿರಿಯನ್ನು ಮನಸ್ವಿಯಾಗಿ ದ್ವೇಷಿಸುತ್ತಿದ್ದನು; ದರೂ ಆದರ ನಾಶಕ್ಕಾಗಿ ಒಂದು ಪ್ರಾಣವನ್ನು ಕೂಡ ಬಲಿತೆಗೆದುಕೊಳ್ಳಲು ಂದೂ ಸಿದ್ಧನಿದ್ದಿಲ್ಲ. ಆದರೆ ಈಗ ದಕ್ಷಿಣದವರು ಅಖಿಲ ಅಮೇರಿಕೆಯ ವ್ರತೆಯ ವಿರುದ್ಧವೇ ಬಂಡಾಯ ಹೂಡಿದ್ದರು. ತಾವು ಸಿಡಿದು ಪ್ರತ್ಯೇಕರೆಂದು ರಿ, ಸಂಯುಕ್ತ ರಾಜ್ಯಘಟನೆಗೆ ಗಂಡಾಂತರವನ್ನು ಒಡ್ಡಿದರು. ಆಗ ರಾಷ್ಟ್ರದ ಕ್ಯ ಸಂಘಟನೆಗಾಗಿ. ರಾಷ್ಟ್ರೀಯ ಸಂರಕ್ಷಣೆಗಾಗಿ ಲಿಂಕನ್ ಯುದ್ಧದ ಕಹಳೆಯನ್ನು ಊದಬೇಕಾಯಿತು. ಜನರಿಗೆ ಸೈನ್ಯಕಟ್ಟಲು ಕರೆಯಬೇಕಾಯಿತು. ಫೋರ್ಟಸೆಂಟರದ ತನದ ಪರಿಣಾಮವು ತತ್ಕಾಲವೇ ಆಯಿತು. ದಕ್ಷಿಣವು ಯುದ್ಧಾಪರಾಧವನ್ನು ಮಾಡಿತ್ತು. ಉತ್ತರವು ಒಂದು ಮೆಟ್ಟಿಗೆ ಆಹ್ವಾನವನ್ನು ಸ್ವೀಕರಿಸಿ ಎದ್ದು ನಿಂತಿತು.

ಂಕನ್‌ನಿಗೆ ಅಧ್ಯಕ್ಷನಾದೆನೆಂಬ ಬಿಂಕದ ಬಡಿವಾರಕ್ಕೆ ಯಾವ ವೇಳೆಯೂ ದೊರೆಯ ಂತಿಲ್ಲ. (ಅಂಥ ಬಿಂಕದಿವನೂ ಆತನಲ್ಲ!) ಅವನ ಮನಸ್ಸು ಖಿನ್ನವಾಯಿತು. ಕ್ಷಿಣದ ಸಂಸ್ಥಾನಗಳು ಅನ್ಯಾಯವಾಗಿ ದಕ್ಷಿಣ ಕಾರೊಲಿನಾವನ್ನು ಅನು ರಿಸುತ್ತಾರೆಂದು ಆತ ಹಳಹಳಿಸಿದನು. ಆ ಸಂಸ್ಥಾನಗಳು ಸಿಡಿದು ಹೋಗದಂತೆ ಗ ದೈತ್ಯ ಪ್ರಯತ್ನಮಾಡಿದನು. ಕಣ್ಣಿನಲ್ಲಿ ಎಣ್ಣೆಹಾಕಿ ಘಟನೆಗಳನ್ನು ನಿರೀಕ್ಷಿಸಿ ನು. ಆಶಯ ಕಿರಣ. ಒಪ್ಪಂದದ ಎಳೆ, ಮತ್ತೈಕ್ಯದ ಅಂಶ ಏನಾದರೂ ೂರೆಯುವದೇ ಯುದ್ಧ ತಡೆಯುವದೇ ಜನಾಂಗ ಉಳಿಯುವದೇ ಎಂದು ಂಬಲಿಸಿದನು. ಅನೇಕ ಅಧಿಕಾರಿಗಳ ಸಲಹೆ ಕೇಳಿದನು. ಸೈನಿಕರಿಗೆ ಭೆಟ್ಟಿಕೊಟ್ಟು ುರಿದುಂಬಿಸಿದನು. ಆದರೆ ಅತ್ತ ಹೆಂಡತಿ ಮೇರಿಯು ಅವನೊಡನೆ ಸಮರಸ ಾಗಲೇ ಇಲ್ಲ. ಈ ಯುದ್ಧವನ್ನು ಗಂಡ, ತನ್ನ ಸುಖಸಂತೋಷವನ್ನು ತಿಸಲಿಕ್ಕೇ ಹೂಡಿರುವನೆಂದು ಭಾವಿಸಿದಳು. ಅಧ್ಯಕ್ಷನ ಹೆಂಡತಿ ತಾನು; ಷ್ಟ್ರದ ಪ್ರಥಮ ಮಹಿಳೆ ತಾನು ಎಂಬ ಅಹ್ಮತೆಯಲ್ಲಿ ಸತ್ಕಾರ ಸಮಾರಂಭ ನ್ನೇರ್ಪಡಿಸಿ ಸಡಗರದಿಂದ ಮೆರೆದಾಡಬೇಕೆಂದು ಆಕೆಯ ಆಸೆ. ಅದಕ್ಕೆ ಈ ಳು ಯುದ್ಧ ಅಡ್ಡ ಬಂತಲ್ಲ !–ಎಂಬ ವಿಚಾರ ಕೆರಳಿಸುತ್ತಿತ್ತು.

ತ್ತರದ ಸೈನ್ಯಕ್ಕೆ ಬುಲ್‌ರನ್ ಎಂಬಲ್ಲಿ ಒಮ್ಮೆ ಅಪಜಯವಾಯಿತು. ಅದು ಂಕನ್‌ನಿಗೆ ಬಲವಾದ ಪೆಟ್ಟಾಯಿತು. ಆತ ಬಹಳ ನೊಂದುಕೊಂಡನು. ಆದರೆ ತ್ತರದವರಿಗೆ ಈ ಪೆಟ್ಟಿನಿಂದ ಪರಿಣಾಮ ಒಳಿತೇ ಆಯಿತು. ಅವರ ಧೋರಣೆ ಯಲ್ಲಿ ಹೆಚ್ಚಿನ ಗಾಂಭೀರ್ಯ ಮತ್ತು ಸ್ಥೈರ್ಯ ಬಂದವು. ಯುದ್ಧದ ಕುರಿತು ಚ್ಚು ಗಮನವೀಯಬೇಕೆಂದು ಅವರು ತಿಳಿದರು. ದಕ್ಷಿಣದವರ ಬಲದ ಹಾಗೂ

ಕಟಿನ ಪರಿಚಯವು ಅವರಿಗೆ ಒಮ್ಮೆಲೆ ಆಯಿತು. ಅಧ್ಯಕ್ಷನೆಂಬ ಅಧಿಕಾರದಿಂದ ಲಿಂಕನ್‌ನೇ ಎಲ್ಲ ಸೇನೆಗಳಿಗೆ ಸೇನಾಪತಿಯಾಗಿದ್ದನು. ಆದರೆ ಕೈಕೆಳಗಿನ ವ್ಯವಸಾಯಿಕ-ಲಷ್ಕರಿ ತರಬೇತಿಯ-ಸೇನಾಪತಿಗಳಿಂದ ಕೆಲಸ ತೆಗೆದುಕೊಳ್ಳುವದು ಮಕ್ಕಳಿಂದ ಮಾತುಕೇಳಿಸುವದಕ್ಕಿಂತ ಕಷ್ಟವೆಂದು ಆತನು ಮನಗಂಡನು. ಈ ಸೇನಾಪತಿಗಳಲ್ಲಿ ಯುಲಿಸಿಸ್. ಎಸ್. ಗ್ರ್ಯಾಂಟ್ ಇವನೊಬ್ಬನು ಮಾತ್ರ ಅಪವಾದ. ಸೇನಾನಿ ಇರಲಿ, ಸೈನಿಕನಿರಲಿ ಲಷ್ಕರಿ ಅಧಿಕಾರಿಯ ಕರ್ತವ್ಯ ಹೋರಾಡುವದು, ಯುದ್ಧ ಮಾಡುವದು-ಎಂದು ಆತ ಬಲ್ಲ. ಲಿಂಕನ್‌ನಿಗೆ ಗ್ರ್ಯಾಂಟನ ಮೇಲೆ ಬಹಳ ವಿಶ್ವಾಸ. ಮಿಕ್ಕ ಮಿಲಟರಿ ಅಧಿಕಾರಿಗಳು ಹೊಟ್ಟೆ ಕಿಚ್ಚು ಪಟ್ಟು, ಗ್ರ್ಯಾಂಟನನ್ನು ಕಿತ್ತುಹಾಕಿಸಲು ಬಹಳಷ್ಟು ಪೇಚಾಡಿದರು. ಲಿಂಕನ್‌ನ ಬಳಿಗೆ ಅವನ ಕುರಿತು ದೂರಿಕೊಂಡರು. ಆದರೆ ಲಿಂಕನ್‌ನ ಉತ್ತರ ಒಂದೇ. 'ಗ್ರ್ಯಾಂಟ ಹೋರಾಡುತ್ತಾನೆ.' ಆಗ 'ಆತ ಕುಡಿಯುತ್ತಾನೆ' ಎಂದರು ದೂರುವ ಜನ. ಲಿಂಕನ್ ಕೂಡಲೇ ಕೇಳಿದ, 'ಅಹುದೆ, ಯಾವ ಹೆಸರಿನ ವ್ಹಿಸ್ಕಿ ಅದು-ಆತ ಕುಡಿಯುವದು ?' ಅವರು ತಬ್ಬಿಬ್ಬಾದರು. ಲಿಂಕನ್ ಮುಂದರಿದನು. 'ಆ ವ್ಹಿಸ್ಕಿಯ ಒಂದೊಂದು ಪೀಪಾಯಿ ನನ್ನ ಇತರ ಕೆಲಸಗೇಡಿ ಸೇನಾಪತಿಗಳಿಗೆ ಕಳಿಸಿಕೊಡಬೇಕೆಂದನಿಸುತ್ತದೆ !'

ಲಿಂಕನ್ ಅತ್ಯುತ್ತಮ ವಾಗ್ಮಿ. ಅಪ್ರತಿಮ ಪ್ರತ್ಯುತ್ಪನ್ನ ಮತಿ. ತತ್ಕ್ಷಣ ಸಮರ್ಪಕವಾಗಿ ಮಾರ್ಮಿಕವಾಗಿ ಮರ್ಮಭೇದಕ ಉತ್ತರವೀಯ ಬಲ್ಲವಾಕ್ಪಟು. ಅವನ ಅಂಥ ಮಿಂಚಿದ ಮಾತುಗಳು ಇತಿಹಾಸ ಪ್ರಸಿದ್ಧವಾಗಿವೆ. ಇದೇ ಯುದ್ಧ ನಡೆಯುವಾಗ ಲಿಂಕನ್ ಪ್ರಚಾರಾರ್ಥವಾಗಿ ದೇಶದಲ್ಲೆಲ್ಲ ಸಂಚಾರ ಮಾಡುತ್ತಿದ್ದ. ಒಮ್ಮೆ ಒಂದು ಹಳ್ಳಿಗೆ ಹೋದಾಗ, ಹಾದಿಯಲ್ಲಿ ಒಬ್ಬ ಮುದುಕಿ ಆತನನ್ನು ಕೇಳಿದಳು. 'ಸ್ವಾಮೀ, ಈ ಯುದ್ಧದಲ್ಲಿ ಯಾವ ಪಕ್ಷಕ್ಕೆ ದೇವರಿದ್ದಾರೆ ?' ಕೂಡಲೇ ಖಂಡಿತವಾದ ಉತ್ತರ ಬಂದಿತು. 'ಅಮ್ಮಾ, ನಾವು ದೇವರ ಪಕ್ಷಕ್ಕೆ ಇದ್ದೇವೆ !' ಎಂಥ ಘನವಾದ ಮಾತು ನೋಡಿ ಇದು. ಒಂದು ಮಾತಿನಲ್ಲಿ ಆ ಯುದ್ಧದ ಉದ್ದೇಶದ ಉದಾತ್ತತೆಯೂ ಅದಕ್ಕೆ ವಿಧೇಯವಾಗಿ ನಡೆಯುವ ಲಿಂಕನ್‌ನ ವಿನಮ್ರ ವೃತ್ತಿಯೂ ತನ್ನ ಭೂಮಿಕೆಯ ಕುರಿತ ಅವನ ಅಚಲ ಶ್ರದ್ಧೆಯೂ ಒಂದೇ ಮಿಂಚಿಗೆ ವ್ಯಕ್ತವಾಯಿತು, ಆ ಚಿಕ್ಕಮಾತಿನಲ್ಲಿ ! ಹಾಗೆಯೇ ಇನ್ನೊಂದು ಪ್ರಸಂಗ. ಬ್ರಿಟಿಶ ರಾಯಭಾರಿಯು ಅಮೇರಿಕೆಯ ಅಧ್ಯಕ್ಷನನ್ನು ಸಂದರ್ಶಿಸಲು ಲಿಂಕನ್‌ನ ಭವನಕ್ಕೆ ಹೋದನು. ಆಗ ಲಿಂಕನ್ ಒಂದೆಡೆಗೆ ಕೂತು ತದೇಕಧ್ಯಾನದಿಂದ ತನ್ನ ಬೂಟಿಗೆ ಬಣ್ಣ ಉಜ್ಜುತ್ತಿದ್ದನು. ರಾಯಭಾರಿ ಆಶ್ಚರ್ಯ ಮೂಢನಾದ. ಅಮೇರಿಕೆಯ ಅಧ್ಯಕ್ಷ ತನ್ನ ಬೂಟಿಗೆ ತಾನೇ ಪಾಲಿಶ ತಿಕ್ಕುತ್ತಿದ್ದಾನೆ ! ಬ್ರಿಟಿಶರಿಗೇ ಮೀಸಲಾದ ತನ್ನ ವ್ಯಂಗಮಿಶ್ರಿತ ವಿನೋದದ

ವಿನಯದ ದನಿಯಲ್ಲಿ ಆತ ಉದ್ಗರಿಸಿದನು. 'ಅಲ್ಲ ಸ್ವಾಮೀ, ನಮ್ಮ ಮುಖ್ಯ
ಂತ್ರಿ ತನ್ನ ಬೂಟಿಗೆ ತಾನೇ ಪಾಲಿಶ ಹಚ್ಚುವದಿಲ್ಲ!' ಕ್ಷಣದ ವಿಲಂಬವಿಲ್ಲದೆ
ಾಸ್ಯ ಮುಖಮುದ್ರೆಯಿಂದ ಲಿಂಕನ್ ಕೇಳಿ ಬಿಟ್ಟ. 'ಹಾಗಾದರೆ ಸ್ವಾಮೀ,
ರು ಯಾರ ಬೂಟಿಗೆ ಪಾಲಿಶ ಹಚ್ಚುತ್ತಾರೆ?' ವಿಸ್ಮಿತ ಮೋರೆಯು, ಸಸ್ಮಿತ
ುಖವನ್ನು ನೋಡಿ ಕಪ್ಪಿಟ್ಟು ತಣ್ಣಗಾಯಿತು!

ೀ ಸುಮಾರಿಗೆ ಲಿಂಕನ್‌ನ ತೊಡಕುಗಳನ್ನು ಹೆಚ್ಚಿಸುವಂಥ ಘಟನೆಯೊಂದು
ಾಗಿತು. ಈ ಘಟನೆಯೂ ವಿದೇಶನೀತಿಗೆ ಸಂಬಂಧಪಟ್ಟ ಒಂದು ಅಚಾತುರ್ಯ.
ಮೂಲಕ ಇಂಗ್ಲಂಡದೊಡನೆಯೂ ಯುದ್ಧ ಉಂಟಾಗಬಹುದಿತ್ತು.
ೇರಿಕೆಯ ಯುದ್ಧ ಹಡಗ ಒಂದು–ಬ್ರಿಟಿಶ ಟಪಾಲು ಹಡಗದಲ್ಲಿದ್ದ ಟ್ರೆಂಟ,
ಣ ಸಂಸ್ಥಾನಗಳ ಇಬ್ಬರು ಅಧಿಕಾರಿಗಳನ್ನು (ಬ್ರಿಟನಕ್ಕೆ ಯಾವುದೋ
ಾನಕ್ಕೆ ಹೊರಟವರನ್ನು) ಬ್ರಿಟಿಶ ಹಡಗಕ್ಕೆ ಗುಂಡುಹಾರಿಸಿ ಅದನ್ನು ತಡೆದು
ಹೋಗಿ ಅವರನ್ನು ಸೆರೆಹಿಡಿಯಿತು. ಇದನ್ನು ಬ್ರಿಟಿಶ ಸರಕಾರವು ಸ್ವಾಭಾವಿಕ
ಯೂ ಅತಿಕ್ರಮವೆಂದು ಭಾವಿಸಿತು. ಅಂದಿನ ಬ್ರಿಟಿಶ ಮುಖ್ಯಮಂತ್ರಿ
ರ್ಡಪಾಮರ್‌ಸ್ಟನ್, ಅಮೇರಿಕೆಯು ಆ ಸೆರೆಯಾಳುಗಳನ್ನು ತಿರುಗಿ ಒಪ್ಪಿಸಿ
ಬೇಡಬೇಕೆಂದು ಆಗ್ರಹ ಹಿಡಿದನು. ಕೆರಳಿದ ಅಮೇರಿಕೆಯ ಜನಾಭಿಪ್ರಾಯ
ಕ್ಕೆ ಪ್ರತಿಕೂಲವಿತ್ತು. ಆದರೆ ಲಿಂಕನ್ ಪ್ರಸಂಗಾವಧಾನಿ. ದೂರದರ್ಶಿ, ಅದಕ್ಕೂ
ಾಗಿ ನ್ಯಾಯಪ್ರಿಯ. ಆತನು ಸಾರ್ವಜನಿಕರ ಸಂತಾಪವನ್ನು ಲೆಕ್ಕಿಸದೆ ಬ್ರಿಟಿಶ
ರವ ಬೇಡಿಕೆಯನ್ನು ಮನ್ನಿಸಿದ. ಎರಡೂ ರಾಷ್ಟ್ರಗಳಲ್ಲಿ ಅನಾಹುತವಾಗಿ
ತೋರಬಹುದಾದ ಯುದ್ಧದ ಅನಾಹುತವು ಇದರಿಂದ ತಪ್ಪಿತು.

ರಗೆ ಯುದ್ಧದ ಬಿಕ್ಕಟ್ಟು. ಅತ್ತ ಸೇನಾಪತಿಗಳ ತಲೆಬೇನೆ. ನಡುವೆ ಹಡಗು
ದು ಅಚಾತುರ್ಯ. ಎಲ್ಲಿಯೂ ಚಿತ್ತಸ್ವಾಸ್ಥ್ಯದ ಆಶೆಯೇ ಇಲ್ಲ. ಅಂಥಲ್ಲಿ
ಮಂತ್ರಿ ಮಂಡಲವೂ ಸಾಕಷ್ಟು ತೊಂದರೆ ಕೊಡತೊಡಗಿತು. ಕೆಲವು
ತ್ರಿಗಳು ಲಿಂಕನ್‌ನು ತಮಗೆ ವಶವರ್ತಿಯಾಗಬಹುದೆಂದು ಭಾವಿಸಿ, ಹಾಗೆ
ೊಡನೆ ವರ್ತಿಸಲು ಆರಂಭಿಸಿದರು. ಅವರಿಗೆ ಯಾರ ವಶವರ್ತಿ ಯಾರು,
ಂದನ್ನು ಅಧ್ಯಕ್ಷ ನಿಷ್ಠುರವಾಗಿ ಮನಗಾಣಿಸಬೇಕಾಗಿ ಬಂದಿತು. ಸಜ್ಜನನನ್ನು
ರ್ಬಲನಾಗಿ ತಪ್ಪು ತಿಳಿಯುವ ಜನ, ಯಾವ ದೇಶದಲ್ಲಿಯೂ ಯಾವ ಕ್ಷೇತ್ರ
ಯೂ ಇದ್ದೇ ಇರುತ್ತಾರೆ. ಶೀಲಕ್ಕಿಂತ ಬಲವನ್ನೇ ಗುರುತಿಸುವ ಹಾಗೂ
ವಿಸುವ ಪ್ರವೃತ್ತಿ ಇರುವ ತನಕವೂ ನ್ಯಾಯಕ್ಕೆ ನಿಷ್ಠುರ ತಪ್ಪಿದ್ದಲ್ಲ. ಇವೆಲ್ಲ
ರ್ವಜನಿಕ ರಾಜಕೀಯ ತೊಡಕು ತೋದರೆಗಳ ನಡುವೆ, ಲಿಂಕನ್‌ನ ಮನೆಯಲ್ಲಿ

ಮನಃಶಾಂತಿ ಇತ್ತೇ? ಅದೂ ಇಲ್ಲ. ಅಲ್ಲಿಯೂ ದಾಂಪತ್ಯ ಕಲಹಗಳು ಅವನ ಸತ್ವಪರೀಕ್ಷೆಯನ್ನೇ ನಡೆಸಿದ್ದವು. ಅಬ್ರಹಮ ಲಿಂಕನ್ ಅಮೇರಿಕೆಯ ಉದ್ಧಾರಕ್ಕಾಗಿ ಧರ್ಮಯುದ್ಧಕ್ಕೆ ಅಣಿಯಾದ ರಾಷ್ಟ್ರದ ಪ್ರಥಮ ಸೇವಕ, ಶ್ರೇಷ್ಠ ಸೇನಾಪತಿ ಎಂದು ನೋಡದೇ, ಇಡೀ ದೇಶವನ್ನು ಆಳುವ ಅಧಿಕಾರ, ಅಧ್ಯಕ್ಷತೆಯ ಪದವಿಗೆ ಏರಿಯೂ ತನ್ನನ್ನು ಸಿರಿಯಾದ ಸಡಗರದಲ್ಲಿ ಇಡಲೊಲ್ಲದ ಅನ್ಯಾಯಿ ಗಂಡನೆಂದೇ ಆಕೆ ಆತನನ್ನು ಕಂಡಳು! ಅತ್ತ ಆತನ ಇಬ್ಬರು ಹುಡುಗರು ವಿಲ್ಲಿ ಮತ್ತು ಟೆಡ್, ವಿಷಮ ಜ್ವರದಿಂದ ಬಿದ್ದಿದ್ದರು. ಅವರಲ್ಲಿ ವಿಲ್ಲಿಯ ಅಕಾಲಿಕ ಅಪಮೃತ್ಯುವು, ಆತನ ಕುಟುಂಬ ವತ್ಸಲ ಕರುಳಿಗೆ ಕೊಳ್ಳಿ ಇಟ್ಟಿತು. ಮನೆಯ ದೈವಕ್ಕೆ ಮುದ್ದು ಮಗನ ಬಲಿಯನ್ನು ಕೊಟ್ಟು ಸೋಲು ಒಪ್ಪಿಕೊಂಡ ಧೀರನು, ದೇಶದ ದೈವವನ್ನೇ ಸಂರಕ್ಷಿಸಲು ಧುರವೀಳ್ಯವನ್ನು ಎತ್ತಿದ್ದನು!

ಯಾದವೀಯುದ್ಧ ನಡೆದದ್ದು ಸಂಯುಕ್ತ ರಾಜ್ಯಘಟನೆಯ ರಕ್ಷಣೆಗಾಗಿ, ದೇಶದ ಒಕ್ಕೂಟವನ್ನು ಕಾದಿಡುವದಕ್ಕಾಗಿ. ಆದರೆ ಇದು ಬರೇ ಬಹಿರಂಗದ ಉದ್ದೇಶ. ಅಂತರಂಗದ ಹೇತು ಎಲ್ಲರಿಗೂ ಗೊತ್ತಿತ್ತು. ಗುಲಾಮಗಿರಿಯ ಪ್ರಶ್ನೆಯೇ ಈ ಸಾಮೂಹಿಕ ರಕ್ತಪಾತದ ಮೂಲದ ಪಣವೆಂದು ಪ್ರತಿಯೊಬ್ಬರೂ ಅರಿತಿದ್ದರು. ಲಿಂಕನ್‌ನ ಸಲಹೆಗಾರರಲ್ಲಿಯೂ ಇವೆರಡೂ ಉದ್ದೇಶಗಳ ಕುರಿತು ಮತೈಕ್ಯವುಳ್ಳವರು ಎಲ್ಲರೂ ಇದ್ದಿಲ್ಲ. ಆದರೆ ಜನತೆಯ ಅಭಿಪ್ರಾಯವು ಕ್ರಮೇಣ ಗುಲಾಮಗಿರಿಯ ನಾಶದ ಕುರಿತು ಒಲಿಯುತ್ತಿತ್ತು. ಅದನ್ನು ಅರಿತು, ಅಧ್ಯಕ್ಷನು ಮೊದಲು ಗುಲಾಮರ ದಾಸ್ಯವಿಮೋಚನೆಯನ್ನು ಕ್ರಮಶಃ ಸಾಧಿಸಬೇಕೆಂಬ ವಿಧಾನವನ್ನು ಸೂಚಿಸಿದನು. ಆದರೆ ಕೊನೆಗೆ ಸಂಪೂರ್ಣ ವಿಮೋಚನೆಯ ಘೋಷಣಾ ಪತ್ರಿಕೆಗೆ ಸಹಿ ಹಾಕಿದನು.

ಲಿಂಕನ್‌ನ ಅಧಿಕಾರದ ಅವಧಿಯು ಮುಗಿಯುತ್ತ ಬಂದಿತ್ತು. ಆದರೆ ಅವನ ಅಂಗೀಕೃತ ಕಾರ್ಯವು ಇನ್ನೂ ಮುಗಿಯತಕ್ಕದ್ದಿತ್ತು. ಅದಕ್ಕಾಗಿ ಆತ ಮತ್ತೆ ಆಯ್ದು ಆರಿಸಿಬಂದನು. ಹೀಗೆ ಎರಡನೆಯ ಸಲ ಅಧ್ಯಕ್ಷ ಪದಕ್ಕೆ ಬಂದು ಅಧಿಕಾರವನ್ನು ವಹಿಸಿಕೊಳ್ಳುವಾಗ ಆತ ಮಾಡಿದ ಭಾಷಣವು ವಿಶ್ವಸಾಹಿತ್ಯದಲ್ಲಿಯೇ ಉತ್ತಮ ವಾಗ್ಮಿತೆಯ ಉದಾಹರಣೆಯೆಂದು ಅಮರವಾಗಿದೆ. ಅದಕ್ಕೂ ಮಿಗಿಲಾಗಿ ಗೆಟ್ಟಿಸ್‌ಬರ್ಗ ಎಂಬಲ್ಲಿ ಹೋರಾಡಿ ದೇಹವಿಟ್ಟ ಸೈನಿಕರ ಸ್ಮಾರಕವನ್ನು ತೆರೆಯುವ ಸಂದರ್ಭದಲ್ಲಿ ಆತನು ಮಾಡಿದ ಭಾಷಣ, ಮಾತುಗಾರಿಕೆಯ ಎಣೆ ಇಲ್ಲದ ಮಾದರಿಯಾಗಿದೆ. ಭಾಷಣದ ವಿಶೇಷವೆಂದರೆ ಅದು ಪೂರ್ಣ ಆಶು ಭಾಷಣ. ಅಂದಿನ ಮುಖ್ಯಮಾತುಗಾರರು ಬೇರೆಯೇ ಇದ್ದರು. ಅಕಸ್ಮಾತ್ ಹಾದು

ೋಗುವಾಗ ಮಾಡಿದ ಹಾಗೂ ಅವರಲ್ಲಿ ಪ್ರತಿಪಾದ್ಯವಾದ ಲೋಕಸತ್ತೆಯು ್ಯಖ್ಯೆ. ಅದು ಈಗ ಎಲ್ಲ ರಾಜಕಾರಣಿಗಳ ಅಭ್ಯಾಸದ ಘೋಷವಾಕ್ಯವಾಗಿದೆ. ) ಗವ್ಹರ್ನಮೆಂಟ ಬಾಯ್ ದ ಪೀಪಲ್, ಆಫ್ ದಿ ಪೀಪಲ್, ಆ್ಯಂಡ್ ರದ ಪೀಪಲ್) ಅಂದರೆ ಜನತೆಯಿಂದ ಜನತೆಯ ಮತ್ತು ಜನತೆಗೋಸ್ಕರ ತೆಯುವ ಆಡಳಿತವೇ ಪ್ರಜಾಪ್ರಭುತ್ವ-ಎಂಬ ಮಾತು ಆ ವೈಭವಶಾಲಿಯಾದ ಗ್ಯೆ ಖರಿಯ ಮುಗಿತಾಯದಲ್ಲಿ ಬರುತ್ತದೆ. ಆ ಭಾಷಣವನ್ನು ಮೂಲದಲ್ಲಿಯೇ ರಬೇಕು.

ಾಕಾರ ಗ್ರಹಣದ ಆ ಉತ್ಕೃಷ್ಟ ಭಾಷಣದಲ್ಲಿ ಯಾದವೀ ಯುದ್ಧದ ಬಂಧು ಶಕ ವೃತ್ತಿಯ ಕೊನೆ, ಇನ್ನೂ ಕಂಡಿಲ್ಲವೆಂಬ ಕಳವಳಿಸಿದ ಆತನ ಹೃದಯವು ತಮೂಡಿತ್ತು. ಈ ರಕ್ತಪಾತದಲ್ಲಿಯೂ ತನ್ನ ಘನವಾದ ಉದ್ದೇಶವನ್ನು ಧಿಸಿಕೊಳ್ಳುವ ದೈವೀ ಶಕ್ತಿಯಲ್ಲಿಯ ಲಿಂಕನ್‌ನ ಅಚಲ ಶ್ರದ್ಧೆಯೂ ಅಷ್ಟೇ ಳವಾಗಿ ಪಡಿಮೂಡಿತ್ತು.

್ನು ಒಂದು ವರ್ಷ ಯುದ್ಧವು ನಡೆಯಲಿತ್ತು. ಶಾಂತಿಯ ಬಗ್ಗೆ ಲಿಂಕನ್ ೇ ತಳಮಳಿಸುತ್ತಿದ್ದರೂ, ಯುದ್ಧ ಪ್ರಯತ್ನದಲ್ಲಿ ಆತ ದೃಢವಾಗಿಯೇ ಗೆಡದೆಯೇ ಇದ್ದನು; ಆ ಕುರಿತು ಆತನ ನಿಲುಮೆಯು ಅವನು ಕಾಂಗ್ರೆಸ್ಸಿಗೆ ಿದ ಸಂದೇಶದಲ್ಲಿ ಸ್ಪಷ್ಟವಾಗಿತ್ತು; 'ಯುದ್ಧವನ್ನು ಆರಂಭಿಸಿದವರು ಅದನ್ನು ಗಿಸಿದಾಗಲೇ ಸರಕಾರವೂ ಯುದ್ಧವನ್ನು ಮುಗಿಸುವದು.' ಈ ನಡುವೆ, ೩೫ ರಲ್ಲಿ ಆತ ಅಮೇರಿಕೆಯ ಸಂಯುಕ್ತ ರಾಜ್ಯಘಟನೆಗೆ ೧೩ ನೇ ತಿದ್ದುಪಡಿ ್ನು ಕಾಂಗ್ರೆಸ್ಸಿನಿಂದ ಸ್ವೀಕೃತಪಡಿಸಿಕೊಂಡನು. ಆ ಕಲಮಿನಂತೆ ಾಮಗಿರಿಯು ಶಾಶ್ವತವಾಗಿ ರದ್ದು ಆಯಿತು.

ಸಂಧಾನದ ಮಾತುಕತೆಗಳು ಆರಂಭವಾದವು. ದಕ್ಷಿಣದ ಯುಧ್ಯಮಾನ ್ಥಾನಗಳ ಪ್ರತಿನಿಧಿಗಳನ್ನು ಲಿಂಕನ್ ಹಾಮ್ಟನ್ ರೋಡ್ಸ ಎಂಬಲ್ಲಿ ಭೆಟ್ಟಿ ದನು. ಆದರೆ ಎಂದಿನ ತನಕ ಆ ಸಂಸ್ಥಾನಗಳು ಕೇಂದ್ರ ಒಕ್ಕೂಟ ರಾಜ್ಯದ ದ್ಧ ವಿದ್ರೋಹದ ಖಡ್ಗ ವೆತ್ತಿದ್ದರೋ ಅಂದಿನತನಕ ಯಾವ ಶಾಂತಿಪ್ರಸ್ತಾಪವೂ ್ಯವಿತ್ತು. ಒಕ್ಕೂಟವನ್ನು ಒಪ್ಪಿದ ಮೇಲೆಯೇ ಒಪ್ಪಂದದ ಮಾತು ವಲಾಗಬೇಕೆಂದು ಲಿಂಕನ್‌ನ ತತ್ವನಿಷ್ಠ ಆಗ್ರಹ. ಕೊನೆಗೂ ಕೊನೆಯು ತು. ಕದನ ಕೊನೆಗೊಂಡಿತು. ದಕ್ಷಿಣ ಸಂಸ್ಥಾನಗಳ ಸೇನಾಪತಿ ಜನರಲ್ ಯು ಶರಣು ಬಂದನು. 'ಅವರನ್ನು ಸಲೀಸವಾಗಿ ನಡೆಯಿಸಿಕೊಳ್ಳಿ' ಮಹಾತ್ಮಾ ನ್‌ನು ತನ್ನ ಸೇನಾಪತಿಗಳಿಗೆ ಸೂಚನೆಕೊಟ್ಟನು.

ಫೋರ್ಟ ಸೆಂಟರದ ಮೇಲೆ ಮತ್ತೆ ನಕ್ಷತ್ರ ಖಚಿತ ಸ್ವಾತಂತ್ರ್ಯಧ್ವಜವು ಏರಿ, ಗಾಳಿಗೆ ತೇಲಾಡಿತು. ಎಪ್ರಿಲ್ ೧೪ಕ್ಕೆ ಮತ್ತೆ ತೋಫುಗಳು ಆ ಕೋಟೆಯಿಂದ ಅಬ್ಬರಿಸಿದವು. ಆದರೆ ಈಗ ಅಬ್ಬರದಲ್ಲಿ ಬರೆ ಸದ್ದು ಮದ್ದು ಇದ್ದಿಲ್ಲ! ವಿಜಯೋತ್ಸವದ 'ಸಲಾಮಿ' ಅದು. ವಾಶಿಂಗ್ಟನ್, ಉತ್ಸವದಲ್ಲಿ ಅಲಂಕರಿಸಿ ಹಿಗ್ಗಿನಲ್ಲಿ ಅರಳಿ ನಿಂತಿತು. ಲಿಂಕನ್ ಅರಮನೆಯಲ್ಲಿ-ಅಲ್ಲಿ ಅಧ್ಯಕ್ಷಭವನವಾದ 'ಬಿಳಿಮನೆ' (ವ್ಹಾಯಿಟ ಹೌಸ)ದಲ್ಲಿ ತನ್ನ ಮೇಜಿನ ಬಳಿಗೆ ಕೂತಿದ್ದನು. ಅವನ ಇದುರಿಗೆ ಜನರಲ್ ಲೀಯ ಭಾವಚಿತ್ರವು ಗೋಡೆಗೆ ತೂಗಿತ್ತು. ಅದರ ಅಭ್ಯಾಸವನ್ನು ಆತ ನಡೆಸಿದ್ದನು. ಲೀಯ ಕುರಿತು ಆತನಲ್ಲಿ ಯಾವ ತ್ವೇಷ-ದ್ವೇಷಗಳೂ ಇಲ್ಲ. 'ಇದು ಭದ್ರಮುಖ' ಅವನು ಉದ್ಗರಿಸಿದನು. 'ಈ ಮುಖ ಒಬ್ಬ ಧಿರೋದಾತ್ತನ, ಶೂರೋತ್ತಮನ ಮುಖ. ಕೊನೆಗೂ ಯುದ್ಧ ಮುಗಿದುದಕ್ಕಾಗಿ ನಾನು ಸಂತೋಷಪಡುತ್ತೇನೆ. !'

ಶ್ರೀಮತಿ ಲಿಂಕನ್ ? ಆಕೆಗೆ ಕೊನೆಗೂ ಒಂದು ಮಹಾವಿಜೃಂಭಣೆಯ ಸಂದರ್ಭ ದೊರೆಯಿತು. ಅಧ್ಯಕ್ಷಪತ್ನಿಯಾಗಿ ಐಶ್ವರ್ಯದಲ್ಲಿ ಮೆರೆದಾಡಲಿಕ್ಕೆ ವಿಜಯೋತ್ಸವದ ಪ್ರೀತ್ಯರ್ಥ, ಆಕೆ ಆ ಸಂಜೆಗೆ ಒಂದು ನಾಟಕವನ್ನು ಏರ್ಪಡಿಸಿದ್ದಳು. ಲೋರಾಕೀನ್ ಎಂಬ ವಿಖ್ಯಾತ ನಟಿಯು 'ಅವರ ಅಮೇರಿಕನ್ ಕಝಿನ್' ('ನಮ್ಮ ಅಮೇರಿಕೆಯ ಭಾವ') ಎಂಬ ನಾಟಕದಲ್ಲಿ ಅಭಿನಯಿಸುವವಳಿದ್ದಳು. ನಾಟಕ ಪ್ರಯೋಗ ಫೋರ್ಡರ ರಂಗಮಂದಿರದಲ್ಲಿ ಜರುಗಲಿತ್ತು. ಲಿಂಕನ್ ಪರಿವಾರ ಇಷ್ಟಮಿತ್ರರೊಡನೆ ಅದನ್ನು ನೋಡಲು ಹೋಗುವವರಿದ್ದರು. ಭವ್ಯ ಪ್ರದರ್ಶನಕ್ಕಾಗಿ ಎಲ್ಲ ಸಿದ್ಧತೆ ಆಗಿತ್ತು. ಅಂದಿನ ಉತ್ಸವಮೂರ್ತಿ ಅಖಿಲ ರಾಷ್ಟ್ರದ ಕೊಂಡಾಟದ ವ್ಯಕ್ತಿ. ರಾಜ್ಯ ನೌಕೆಯನ್ನು ಯುದ್ಧದ ಬಿರುಗಾಳಿ, ಬಂಡೆ, ಬಡಿತಗಳೊಳಗಿಂದ ಕ್ಷೇಮದಿಂದ ಬಂದರಕ್ಕೆ ತಂದ. ಧನ್ಯ ಕಪ್ತಾನ ಲಿಂಕನ್. ಅವನ ಅಂಗರಕ್ಷಣೆಗಾಗಿ ಯೋಗ್ಯ ಕಾವಲು ಇಟ್ಟುಕೊಳ್ಳಬೇಕೆಂದು ಅನೇಕ ಹಿತೈಷಿಗಳು ಬಿನ್ನವಿಸಿಕೊಂಡಿದ್ದರು. ಆದರೆ ಇನ್ನೇತರ ಭಯ ? ದೇಶಕ್ಕೇ ಅಭಯವಿತ್ತ ಕ್ಷಣಕ್ಕೆ ರಾಷ್ಟ್ರಪ್ರಿಯ ಅಧ್ಯಕ್ಷನಿಗೆ ಯಾವ ಭಯ ? ಲಿಂಕನ್ ಬರೇ ನಸುನಕ್ಕು ಸುಮ್ಮನಾದ. ಮಿತ್ರರ ಗಾಬರಿ, ಅವರ ಸ್ನೇಹದ ದೌರ್ಬಲ್ಯ. ತನ್ನನ್ನು ಕೊಲ್ಲುವ ಮೂರ್ಖರು ಯಾರು ? ಈಗಂತೂ ಶಾಂತಿಯ ಯುಗ ಆರಂಭವಾಗಿದೆ. ಎಂದು ಅಬ್ರಹಮ ಲಿಂಕನ್ ಸಹಜ ಧೈರ್ಯದಲ್ಲಿ ಅಲೆದಾಡುತ್ತಿದ್ದನು.

ಆ ಕೊನೆಯ ದೃಶ್ಯವನ್ನು ನೋಡೋಣ.

ಅಧ್ಯಕ್ಷನ ಪರಿವಾರ ರಂಗಮಂದಿರವನ್ನು ಪ್ರವೇಶಿಸಿದಾಗ, ನಾಟಕ ಆರಂಭವಾಗಿತ್ತು.

ಂಗಭೂಮಿಯಲ್ಲಿ ನೆಟ್ಟ ಸಾವಿರಾರು ಕಣ್ಣುಗಳು ಪ್ರವೇಶದ್ವಾರದತ್ತ ಹೊರಳಿದವು. ಚಂಡ ಧನ್ಯವಾದ ಹರ್ಷೋದ್ಗಾರಗಳ ಕೋಲಾಹಲದ ಮಹಾಕಲಕವು ನಾಟಕ ನ್ನೇ ಮರೆಯಿಸಿ, ರಾಷ್ಟ್ರದ ಚಿಂತಾಜರ್ಜರ ಪಿತನನ್ನು ಸ್ವಾಗತಿಸಲು ಮಂದಿರ ಲ್ಲೆಲ್ಲ ಅಟ್ಟದಿಂದ ತಳಮನೆಯ ತನಕ ಮಾರ್ಮೊಳಗಿತು. ಲಿಂಕನ್‌ನು ನಮಸ್ಕರಿಸಿ ುಂದೆಸಾಗಿ ತನ್ನ ಸ್ಥಾನದಲ್ಲಿ ಕೂತನು. ನಾಟಕ ಮುಂದರಿಯುವದು. ನಟರು ಡುತ್ತಿರುವ ಮಾತುಕತೆಗೆ ಲಿಂಕನ್ ಕಿವಿಗೊಡುತ್ತಿರುವನೇ ? ಯಾರಿಗೆ ಗೊತ್ತು ? ರಡು ತಾಸು ಕಳೆಯುವವು. ೧೦ ಘಂಟೆ ಬಡಿಯಲು ಬಂತು. ಮೆಲ್ಲಗೆ ಒಂದು ಕೃತಿ ಲಿಂಕನ್ ಕುಳಿತ 'ಬಾಕ್ಸಿನ' ಬಾಗಿಲಿಗೆ ಬರುವದು. ಮಂದಿರದಲ್ಲಿ ಂಗಭೂಮಿಯೊಂದು ಬಿಟ್ಟು, ಉಳಿದ ಭಾಗವೆಲ್ಲ ಅರೆಗತ್ತಲೆಯಲ್ಲಿ ಮುಳುಗಿದೆ. ಕೃತಿಯು ಕೈಯೊಡ್ಡಿ ಬಾಗಿಲ ಬಳಿಯ ಕಾವುಲಿನವನ ಕಣ್ಣಿಗೆ ತನ್ನ ಪರಿಚಯದ ರ್ಡು ಹಿಡಿಯುವದು. ತನಗೆ ಅಧ್ಯಕ್ಷರಲ್ಲಿ ಮಹತ್ವದ ಸಂದೇಶವನ್ನೊಂದು ಲ್ಪಿಸುವದಿದೆಯೆಂದು ಆ ವ್ಯಕ್ತಿ ಹೇಳುವನು. ವ್ಯಕ್ತಿಗೆ ಒಳಗೆ ಪ್ರವೇಶ ಸಿಗುವದು. ಲ್ಲಿ ಬಾಗಿಲ ಬಳಿಯಲ್ಲಿಯೇ ಅಧ್ಯಕ್ಷ ಕೂತಿರುವನು. ಆಚೆಗೆ ಅವನ ಪತ್ನಿ, ಚೆಗೆ ಅವನ ಬಲಕ್ಕೆ ಒಬ್ಬ ತರುಣ ಸೇನಾಧಿಕಾರಿ ಮತ್ತು ಅವನ ನವಪರಿಣಿತ ತ್ನಿ. ಯಾರೂ ಆ ಕಡೆಗೆ ತಲೆ ತಿರುಗಿಸಿ ನೋಡುವ ಮೊದಲೇ, ಒಳ ನುಗ್ಗಿ ದ ವ್ಯಕ್ತಿಯು ಲಿಂಕನ್‌ನ ಕಿವಿಗೆ ಪಿಸ್ತೂಲನ್ನು ಒತ್ತಿ ಹಿಡಿದು ಅದರ ದುರೆ'ಯನ್ನು ಎಳೆಯುವನು. ಪಕ್ಕದ ಸೇನಾಧಿಕಾರಿಯು ತನ್ನ ಕಡೆಗೆ ನೆ ಎದ್ದು ಜಿಗಿಯುವದನ್ನು ಆ ವ್ಯಕ್ತಿ ನೋಡುವನು. ಆದರೆ ಅವನ ನ್ನೊಂದು ಕೈಯಲ್ಲಿ ಕಠಾರಿ ಇದೆ. ಅದನ್ನು ಆತ ಉಪಯೋಗಿಸುವನು. ಕೂಡಲೇ ದು ನೆಗೆತಕ್ಕೆ ಆತ 'ಬಾಕ್ಸದ' ಕಟಾಂಜನವನ್ನೇರಿ ರಂಗಭೂಮಿಗೆ ಧಿಮ್ಮಿಕ್ಕಿ ಗ್ಗಿ ಓಡುವನು. ಒಂದು ಹೆಣ್ಣು ಕರ್ಕಶವಾಗಿ ಕಿರುಚಿಕೊಳ್ಳುವಳು, ರಂಗ ಂದಿರವನ್ನು ಭೇದಿಸುವಂತೆ. 'ಆತ ಅಧ್ಯಕ್ಷರಿಗೆ ಗುಂಡಿಕ್ಕಿದನು !'

ಗವನ್ನೇರಿ ಓಡುವ ಕೊಲೆಗಡಕನು ಕಠಾರಿಯನ್ನು ಎತ್ತಿ ಝಳಪಿಸಿದನು. ಗಭೂಮಿಯ ಮೇಲೆ ಆತನಿಗೆ ಹಾಗೆ ಝಳಪಿಸಿ ವಾಡಿಕೆ. 'ದಬ್ಬಾಳಿಕೆ ಯಿತು'–ಎಂದು ಆತ ನಾಟಕೀಯವಾಗಿ ಘೋಷಿಸಿದನು. ಕೂಡಲೆ, ರಂಗದ ಲಿನ ನಟವರ್ಗವನ್ನು ಒದಿಗೆ ಸರಿಸಿ ತೆರೆಯ ಮರೆಗೆ ಮಾಯವಾದನು.

ಲಿಂಕನ್‌ನನ್ನು ರಂಗಮಂದಿರದ ಇದುರಿನ ಮನೆಗೆ ಎತ್ತಿ ಒಯ್ದರು. ಅಲ್ಲಿ ನನ್ನು ಉಪಚರಿಸಲಾಯಿತು. ಆದರೆ ಅವನು ಮತ್ತೆ ಎಚ್ಚರಕ್ಕೆ ಬರಲೇ ಇಲ್ಲ. ರುದಿನ ಮುಂಜಾನೆ ಏಳು ಘಂಟೆಗೆ ಯುದ್ಧ ಮಂತ್ರಿ ಸ್ಟಾಟಿನ್ ಎಂಬವನು

ವಂದನೆಗೆ ನಿಂತಂತೆ ಸಜ್ಜಾಗಿ ಸೆಟೆದು ನಿಂತು ಘೋಷಿಸಿದನು. 'ಇನ್ನು ಅವನು ಯುಗಗಳನ್ನು ಸೇರಿದನು.'

ಕೊಲೆಗಡಕನಿಗಾಗಿ ರಂಗಮಂದಿರದ ಹೊರಗೆ ಒಂದು ಕುದುರೆ ಕಾದಿತ್ತು. ಅವನ ಹೆಸರು, ಜೋನ್ ವಿಲ್ಕ್ಸಬೂಥ. ಅವನೊಬ್ಬ ನಟ. ಮತಾಂಧ ಭಾವನಾಮಯ ವ್ಯಕ್ತಿ. ದಕ್ಷಿಣದ ಪಕ್ಷಪಾತಿ. ಆತ ಕುದುರೆಯನ್ನೇರಿ ಮೇರಿಲ್ಯಾಂಡ ಎಂಬಲ್ಲಿಗೆ ದೌಡು ಮಾಡಿದನು. ಆದರೆ ಇತ್ತ ಆಶ್ಚರ್ಯಕರ ರಾಜವೈಭವದ ಪ್ರೇತಯಾತ್ರೆಯು ವಾಶಿಂಗ್ಟನ್‌ದಿಂದ ಸ್ಪ್ರಿಂಗಫೀಲ್ಡಿಗೆ ತಲ್ಪುವಷ್ಟರಲ್ಲಿಯೇ, ಒಂದು ಬಣಿವೆಯಲ್ಲಿ ಅಡಗಿದ್ದ ಆ ಕೊಲೆಗಡಕನನ್ನು ಗೊತ್ತುಹಚ್ಚಲಾಯಿತು. ಅಲ್ಲೇ ಬಣಿವೆಗೆ ಹೊತ್ತಿಸಿದ ಬೆಂಕಿಯ ಜ್ವಾಲೆಗಳ ನಡುವೆ ಆತನಿಗೆ ಗುಂಡಿಕ್ಕಿ ಕೊಲ್ಲಲಾಯಿತು.! ಮಹಾತ್ಮಾ ಮತ್ತೂ ಆತನನ್ನು ಹುತಾತ್ಮನನ್ನಾಗಿ ಮಾಡಿದ ಮೋಹಾತ್ಮ, ಇಬ್ಬರ ಇಹಯಾತ್ರೆಯೂ ಕೂಡಿಯೇ ಮುಗಿಯಿತು. ಅಬ್ರಹಮ ಲಿಂಕನನ್ನು ಕೊಲೆಮಾಡಿ ಜೋನ್‌ಬೂಥನೆಂಬ ತಲೆತಿರುಕನೂ ಇತಿಹಾಸದಲ್ಲಿ ಅಮರನಾದನು !

ಲಿಂಕನ್‌ನ ಹತ್ತಿರದ ಗೆಳೆಯ ಹಾಗೂ ಸಹಕಾರಿಯಾದ ಜೋನ್ ಸಿ. ನಿಕೋಲೆ ಎಂಬವನು ತನ್ನ ಮಿತ್ರವರ್ಯನ ಚಾರಿತ್ರ್ಯ ಮತ್ತು ಆದರ್ಶಗಳನ್ನು ಹೀಗೆ ಬಣ್ಣಿಸಿರುವನು.

'ಅಮೇರಿಕೆಯ ಸ್ವಾತಂತ್ರ್ಯ ಘೋಷಣೆಯು ಮಹಾ ಶಾಸನವು ಆತನ ರಾಜಕೀಯ ಕಡಲು ಪಯಣದ ನಕಾಶೆಯೂ ಸ್ಫೂರ್ತಿಯೂ ಆಗಿತ್ತು. ಅವನು ಮಾನವೀ ಹಕ್ಕು ಬಾಧ್ಯತೆಗಳ ಸಾರ್ವಭೌಮ, ಸಾರ್ವತ್ರಿಕ ಸಮಾನತೆಯನ್ನು ಒಪ್ಪಿಕೊಂಡನು. ಸ್ವಾಯತ್ತತೆಯಲ್ಲಿ 'ಸ್ವರಾಜ್ಯ'ದಲ್ಲಿ ಆತನಿಗೆ ನಿಶ್ಚಲವಾದ ಶ್ರದ್ಧೆ ಇತ್ತು. ಅಮುಖ್ಯವಾದ ಅಂಶಗಳ ಹಾಗೂ ವಿಷಯಗಳ ಕುರಿತು ಹಟಹಿಡಿಯದೇ ಹೊಂದಿಸಿಕೊಂಡು ಹೋಗುವಂಥವನಾಗಿದ್ದರೂ, ಬುದ್ಧಿ ಪೂರ್ವಕವಾಗಿ ಸ್ವೀಕರಿಸಿದ ತತ್ವ ಅಥವಾ ಭೂಮಿಕೆಯಲ್ಲಿ ಆತನು ಅಚಲನಾಗಿ ಅಜೇಯನಾಗಿ ದೃಢವಿರುತ್ತಿದ್ದನು. 'ನ್ಯಾಯವೇ ಶಕ್ತಿಯನ್ನುಂಟುಮಾಡುವದೆಂಬ ಶ್ರದ್ಧೆ ನಮಗಿರಲಿ ಮತ್ತು ಆ ಶ್ರದ್ಧೆಯಲ್ಲಿ, ಕೊನೆಯವರೆಗೂ, ನಾವು ತಿಳಿದಿರುವಂತೆ ನಮ್ಮ ಕರ್ತವ್ಯ ವನ್ನು ನೆರವೇರಿಸುವ ಸಾಹಸ ನಮ್ಮದಿರಬೇಕು.' ಎಂದು ಆತನು ಅನ್ನುತ್ತಿದ್ದನು. ಅನುಗ್ರಹ ಮತ್ತು ಕ್ಷಮಾಗುಣ ಇವೆರಡೂ ಆವನ ಚಾರಿತ್ರ್ಯದ ಅಡಿಗಲ್ಲಾಗಿದ್ದವು. ವಿಶ್ವವ್ಯಾಪಿಯಾದ ಅವನ ಮಾನವ್ಯಭಾವನೆಯು ಅವನ ಎರಡನೇ ಅಧ್ಯಕ್ಷೀಯ ಅಧಿಕಾರ ಗ್ರಹಣದ ಭಾಷಣದಲ್ಲಿ 'ಯಾರೊಡನೆಯೂ ದ್ವೇಷವಿಡದೆ, ಎಲ್ಲರೊಡನೆ

ರ್ಮದಿಂದ' –ಈ ಮಾತಿನಿಂದ ವ್ಯಕ್ತವಾಗಿದೆ. ಅವನ ಸ್ವಭಾವವು ಅತ್ಯಂತ ಸ್ತಿಕವೂ ಧಾರ್ಮಿಕವೂ ಆಗಿತ್ತು. ಆದರೆ ಅವನು ಯಾವ ಧರ್ಮಸಂಸ್ಥೆಗೂ ೇರಿದವನಿದ್ದಿಲ್ಲ. ದೇವರ ಸನಾತನ ನ್ಯಾಯದಲ್ಲಿಯೂ, ಅಪಾರ ಕರುಣೆಯಲ್ಲಿಯೂ ವನಿಗೆ ನಂಬಿಗೆ ಇತ್ತು. ಅವನು ಕ್ರೈಸ್ತನ ಸುವರ್ಣ ನಿಯಮವನ್ನು ತನ್ನ ್ಯವಹಾರದ ಸೂತ್ರವನ್ನಾಗಿ ಮಾಡಿದನು. ಇತಿಹಾಸವು ಆತನಲ್ಲಿ ಕಾಣಬೇಕಾದ ಶೇಷ ಗುಣಗಳೆಂದರೆ–ಒಂದು ವಿಶಾಲ ಜನಾಂಗವನ್ನು ಪ್ರಚಂಡ ಕ್ರಾಂತಿಯ ಂಕಟ, ವ್ಯೂಹದೊಳಗಿಂದ ದಾರಿ ಕಾಣಿಸಿದ ಅಪೂರ್ವ ದೂರದರ್ಶಿತ್ವ, ನುಕರಣೀಯವೂ ಆದರಣೀಯವೂ ಆದ ಧ್ಯೇಯದ ಏಕಾಗ್ರತೆ, ಚಾತುರ್ಯ ರ್ಣವಾದ ವಿವೇಕ ದೃಷ್ಟಿ. ದಾಸ್ಯ ವಿಮೋಚನೆಯ ಮೂಲಕ ತನ್ನ ರಾಷ್ಟ್ರದ ಲಂಕ ನಿವಾರಣೆ ಮಾಡಲು ಸಂಧಿಯನ್ನು ಸಾಧಿಸುವ ಸಾಹಸದ ಹಟ, ಕಾಯಿದೆಯ ರಿತು ನೇಮದ ನಿಷ್ಠೆ. ಸತ್ತೆಯ ಉಪಯೋಗದಲ್ಲಿ ಅಂತಃಕರಣಯುಕ್ತವಾದ ವ್ಯ ಹಾಗೂ ಸಮವಾದ ಧೋರಣೆ. ಪ್ರಾಮಾಣಿಕತೆ ಹಾಗೂ ಪಾವಿತ್ರ್ಯದ ಜ್ವಲ ಚಾರಿತ್ರ್ಯಕ ಉದಾಹರಣೆ, ಇವೆಲ್ಲಕ್ಕೂ. ಮೇಲಾಗಿ, ತನ್ನ ದೇಶಕ್ಕೆ ಟನಾ ಬದ್ಧ ಸತ್ತೆ ಹಾಗೂ ಸ್ವಾಸ್ಥ್ಯವನ್ನೂ ೪೦ ಲಕ್ಷ ಮಾನವ ಪ್ರಾಣಿಗಳಿಗೆ ್ವತಂತ್ರ್ಯದ ನಿಧಿಯನ್ನೂ ದಯಪಾಲಿಸುವ ಮಹತ್ಕಾರ್ಯಕ್ಕೆ, ದೇಶದ ಪ್ರಕ್ಷುಬ್ಧ ಚಂಡ ಮತ್ತೂ ಪ್ರಮಾಥಿಯಾದ ವಿಕೃತ ಸೈನಿಕ ಹಾಗೂ ರಾಜಕೀಯ ಶಕ್ತಿ ನ್ನು ತನ್ನ ಪ್ರಭಾವಕ್ಕೆ ಒಲಿಸಿ, ಮಣಿಸಿ ಏಕಮುಖವಾಗಿ ಹೂಡುವ ರ್ವಚನೀಯವೂ ಅತಿ ಸೂಕ್ಷ್ಮವೂ ಆದ ಆತನ ಆತ್ಮಿಕ ಆಕರ್ಷಣೆ. ಇವುಗಳಲ್ಲಿ ಂದೊಂದು ವೈಶಿಷ್ಟ್ಯವೂ ಹಿರಿಮೆಗೆ ಸಾಕು. ಎಲ್ಲವೂ ಒಂದಾಗಿ ಸಲ್ಲಕ್ಷಣವಾಗಿ ್ಫೂರ್ತಿಗೊಂಡ ಅಬ್ರಹಮ ಲಿಂಕನ್‌ನ ವ್ಯಕ್ತಿ ಮಹಾತ್ಮ್ಯಕ್ಕೆ ಯಾವ ಎಣೆ? ಥವನ ಚರಿತ್ರ ಇತಿಹಾಸಕ್ಕೆ ಗೌರವ, ದೇಶಕ್ಕೆ ದೈವಾನುಗ್ರಹ, ಮಾನವತೆಗೆ ಕುಟ ಪ್ರಾಯ, ಭವಿತವ್ಯತೆಗೆ ದೀಪಸ್ತಂಭ.

್ಟ ಭಾಗ್ಯಕ್ಕೆ ತಾನೇ ಶಿಲ್ಪಿಯಾಗಿ, ಪ್ರತಿ ಸಂಧಿಗೂ ಮಹಿಮೆಯನ್ನು ಸಾಧಿಸಿ, ತಿ ಬಿಕ್ಕಟನ್ನು ಪ್ರಭುತ್ವದಿಂದ ಗೆದ್ದು, ಪ್ರತಿಯೊಂದು ಕರ್ತವ್ಯವನ್ನೂ ನಃಪೂತವಾಗಿ ಪರಿಪೂರ್ಣವಾಗಿ ಪೂರೈಸಿ ಅಬ್ರಹಮ ಲಿಂಕನ್‌ನು ತನ್ನ ದೇಶಕ್ಕೆ, ಕಾಲಕ್ಕೆ, ಅಂಥ ರಾಷ್ಟ್ರೀಯ ಆಯುಕಟ್ಟಿನ ಪ್ರಸಂಗಕ್ಕೆ ಯೋಗ್ಯತಮನೂ ್ರತಿಮನೂ ಆದ ಧುರೀಣನೆಂದು ಸಿದ್ಧನಾದನು. ಇಷ್ಟೇ ಅಲ್ಲ. ಭವಿತವ್ಯವೇ ಣಿಯಾಗಿ ನೆನೆಯಬೇಕಾಗಿ ಕಲ್ಯಾಣಕರ್ತನೆಂದು ಪ್ರಸಿದ್ಧನಾದನು, ಜಕಾರಣಿಯೆಂದು, ಧೀರ ಶಾಸಕನೆಂದು, ಸ್ವಾತಂತ್ರ್ಯ ವೀರನೆಂದು, ಗರಿಕತೆಯು ನಿರಂತರವೂ ಅವನಿಗೆ ಅಭಿವಂದನೆಯನ್ನು ಸಲ್ಲಿಸುವದು.

ಅಮೇರಿಕೆಯ ರಾಷ್ಟ್ರೀಯ ಮಹಾಕವಿ ವಾಲ್ಟ್‌ವ್ಹಿಟ್ಮನ್‌ನು 'ಓ ಕಪ್ತಾನ ! ನನ್ನ ಕಪ್ತಾನ !' ಎಂಬ ಹೆಸರಿನ ಒಂದು ಶೋಕಗೀತವನ್ನು ಲಿಂಕನ್‌ನ ದುರಂತ ಮರಣದ ಕುರಿತು ಬರೆದದ್ದು ವಿಶ್ವ ಸಾಹಿತ್ಯದಲ್ಲಿ ಒಂದು ಉತ್ತಮ ಕೃತಿಯೆನಿಸಿ ಕೊಂಡಿದೆ. ತನ್ನ ಆಯುಷ್ಯವೆಲ್ಲ ಒಂದು ಆದರ್ಶಕ್ಕಾಗಿ–ಅದೂ ಆರ್ತ ಪರಿತ್ರಾಣದ ಆದರ್ಶಕ್ಕಾಗಿ–ದುಡಿದು ಹೋರಾಡಿ, ಆ ಮಹಾಸಾಧನೆಯು ಸಿದ್ಧಿಯನ್ನು ಪಡೆದ ದಿವ್ಯ ಕ್ಷಣದಲ್ಲಿಯೇ, ತನ್ನ ದೇಹವನ್ನು ಅದಕ್ಕಾಗಿ ಸಹಜವಾಗಿ ಮುಡಿಪಿಟ್ಟ, ಮನುಕುಲದ ಕೆಲವೇ ಉದ್ಧಾರಕ ಮಹಾತ್ಮರಲ್ಲಿ, ಅಬ್ರಹಮ ಲಿಂಕನ್ ಒಬ್ಬನು-ಅವನ ನಂತರ ಹಾಗೆ ಮಡಿದು ಅಮರನಾದವರು, ನಮ್ಮ ರಾಷ್ಟ್ರದ ತಂದೆ ಮಹಾತ್ಮಾಗಾಂಧಿಯೇ !

●

# ಗ್ಯಾರಿಬಾಲ್ಡಿ

ಪಂಗಿ, ಕಪ್ಪಂಗಿ, ಖಾಕಿ–ಅಂಗಿ–ಹೀಗೆ 'ಅಂಗೀಕೃತ ರಾಷ್ಟ್ರಕಾರ್ಯದ ಯುಗವೂ ಕಾರ್ಯದ ಬಲದಿಂದ ಅಧಿಕಾರಕ್ಕೇರುವ ಸರ್ವಾಧಿಕಾರಿಗಳ ಯೋಗವೂ ಧುನಿಕವೆಂದು ನಿಮ್ಮ ನಂಬಿಕೆ, ಅಲ್ಲವೆ ? ನಾವು ನೀವು ನೆನಪಿಟ್ಟ ಮಟ್ಟಿಗೆ ಈ ಾವೇಷ ಭಾವಾವೇಶಗಳ ದೇಶಭಕ್ತಿಯ ಅವತಾರವು ಇಟಲಿಯ ಸರ್ವಾಧಿಕಾರಿ ಟೋ ಮುಸಲೋನಿಯಿಂದ ಮೊದಲಾಗಿ, ಖಾಕಸಾರರ ಅಲ್ಲಾಮಾ ಮಿಸ್ರಿಯ ೆಗೂ 'ಅಂಗಿಭಂಗಿ'ಗಳ ವಿವಿಧ ರಂಗುಗಳ ರೂಪದಲ್ಲಿ ನಡೆದು ಬಂದಿದೆಯೆಂದು ಮಾನ್ಯ ತಿಳುವಳಿಕೆ. ಆದರೆ ಮುಸಲೋನಿಗೂ ಮುಂಚೆ–೮೦ ವರ್ಷಗಳಾಚೆಗೆ– ೇ ಇಟಲಿಯಲ್ಲಿ ಇಂಥ ಉಗ್ರದೇಶಭಕ್ತರ ಒಂದು ಚಳವಳಿಯು ಉದ್ಭವಿಸಿ ್ಯಪಿಸಿತು. ಆ ಜ್ವಾಲಾಮುಖಿಯ ಜಾಗೃತಿಯಿಂದ ದೇಶದ ಹಲವಾರು ಸಿಡಿದು ತ ರಾಜ್ಯಗಳೆಲ್ಲ ಕರಗಿ ಒಂದಾಗಿ, ಎರಕಹೊಯ್ದು ಏಕರಾಷ್ಟ್ರೀಯತ್ವದ ಾತಲವು ನಿರ್ಮಾಣವಾಯಿತು, ಎಂಬ ಮಾತು ಎಷ್ಟು ಜನ ತಿಳಿದಿರುವರು ?

ುಸಲೋನಿಯ ಸೈನಿಕದಲವು ಕಪ್ಪಂಗಿಯ ಕೂಟ. ಆದರೆ ೮೦ ವರ್ಷ ಪೂರ್ವ ್ಲಿ ಇಟಲಿಯಲ್ಲಿ ಉದಯ ಹೊಂದಿದ ದಲವು ಕೆಂಪಂಗಿಯದು. ಆಗ ಇಟಲಿ ಂಬುವದು ಈಗಿನ ಭೂಪಟದ ಆಕೃತಿಯಲ್ಲ. ಅದು ಬರೇ ನಾಮ ಮಾತ್ರ. ಿನ ನಮ್ಮ ಕರ್ನಾಟಕ ಪ್ರಾಂತದಂತೆ ! ಅಂದಿನ ಅಪ್ರಿಯವಾದ ಪ್ರಗತಿವಿರೋಧಿ ಾದ ಮುತ್ಸದ್ದಿ ಮೆಟ್ಟರ್ನಿಚ್‌ನು ತುಚ್ಛತೆಯಿಂದ ಮೂದಲಿಸಿದಂತೆ 'ಇಟಲಿ ೇಲ ಭೂ ಚರಿತ್ರದ ಅರ್ಥವಿಲ್ಲದ ಪದ. ಬರೇ ಭೌಗೋಲಿಕ ಶಬ್ದಪ್ರಯೋಗ' ತ್ತು.

೦೭ ರಲ್ಲಿ ಗ್ಯೂಸಪ್ಪೆಗ್ಯಾರಿಬಾಲ್ಡಿಯು ಹುಟ್ಟಿದಾಗ ಇಟಲಿಯು ಕೆಲವು ಪುಟ್ಟ ್ಯಗಳ ಮತ್ತೂ ಮಾಂಡಲಿಕ ಸಂಸ್ಥಾನಗಳ ಒಂದು ಸಮುದಾಯವಾಗಿತ್ತು. ಿಬಾಲ್ಡಿ ಹೊಸ ಇಟಲಿಯ ವಿಶ್ವಕರ್ಮನು. ಅಖಂಡ ಸಂಯುಕ್ತ ಸ್ವತಂತ್ರ ರ್ವಭೌಮ, ಇಟಲಿಯ ರಾಷ್ಟ್ರೋದಯಕ್ಕಾಗಿ ಪ್ರಾಣ ಪಣವಾಗಿ ಹೆಣಗಿದ ್ರದೇಶ ಭಕ್ತರ ಅಗ್ರಣಿ, ಈ ಕಡುಗಲಿ ಗ್ಯಾರಿಬಾಲ್ಡಿ. ಇಟಲಿಯು ಅಂದು ಯಾ, ಫ್ರಾನ್ಸ, ಸ್ಪೇನ ಈ ರಾಷ್ಟ್ರಗಳ ಪಾಲಾಗಿತ್ತು. ಬೋರಬೋನ ವಂಶದ ಸೊತ್ತಾಗಿತ್ತು. ಚಿಕ್ಕ ಪುಟ್ಟ ರಾಜರುಗಳು ಹಂಚಿ ನುಂಗಿದ ್ಯಯಾಗಿತ್ತು !

ಆದರೆ ಹೊಸದೊಂದು ಆಂದೋಲನವು, 'ರಿಸೋರ್ಜಮೆಂಟೋ' ಎಂಬ ಹೆಸರಿನಿಂದ ರಾಷ್ಟ್ರೀಯ ಪುನರುತ್ಥಾನದ ಕ್ರಾಂತಿಕಾರಕ ಚಳವಳಿಯು ತಲೆ ಎತ್ತಿತು. ಅದು ವರೆಗೆ ನಾಮಶೇಷವಾಗಿಬಿದ್ದ–ಎಲ್ಲ ಪೃಥ್ವೀಪತಿ ವಿಷ್ಣುಗಳಿಗೆ ಆದಿಶೇಷನಂತೆ ಆಧಾರವಾಗಿದ್ದ–ಜನತೆ, ಸಾವಿರ ಹೆಡೆಗಳಿಂದ ಎದ್ದು ಫೂತ್ಕರಿಸಿತು. ಹಾಗೆ ತನ್ನ ಮಂತ್ರಶಕ್ತಿಯಿಂದ ಆ ಮಹಾಶೇಷನನ್ನು ಎಬ್ಬಿಸಿದ ಗಾರುಡಿಗ, ದೇಶಭಕ್ತ ಮ್ಯಾಝಿನಿ. ಆದರೆ ಅದನ್ನು ಸರ್ಪಾಸ್ತ್ರದಂತೆ ಅಭಿಮಂತ್ರಿಸಿ, ದಬ್ಬಾಳಿಕೆಯ ವಿರುದ್ಧ ವಿಜಯಿಯಾಗಿ ಎಸೆದ ಗಾಂಡೀವಿ, ಗ್ಯಾರಿಬಾಲ್ಡಿ. ಅವನು ಬಂಡಾಯದ ಹಿಂದೆ ಬಂಡಾಯವನ್ನು ಎಬ್ಬಿಸಿದನು. ಸಂಯುಕ್ತವೂ ಸ್ವತಂತ್ರವೂ ಆದ ಹೊಸ ಇಟಲಿಯ ನಿರ್ಮಾಣವನ್ನು ಮಾಡುವ ವಿಜಯಗಳು ಪ್ರಾಪ್ತವಾಗುವವರೆಗೂ ಆತನು ಯುದ್ಧಭೂಮಿಯೊಳಗಿಂದಲೇ ತನ್ನ ಮಾರ್ಗವನ್ನು ಕಂಡುಕೊಂಡನು.

ಗ್ಯಾರಿಬಾಲ್ಡಿಯು ನೀಸ ಎಂಬಲ್ಲಿ ಹುಟ್ಟಿದನು. ಆಗ ಅದಕ್ಕೆ ನಿಝಾ ಎಂಬ ಹೆಸರು. ಆಗ ಇಟಲಿಯೆಂಬ ರಾಜ್ಯಸಂಸ್ಥಾನಗಳ ಸಮೂಹವು ೧ನೇ ನೆಪೋಲಿಯನ್‌ನ ಅಧಿರಾಜ್ಯದಲ್ಲಿ ಒಂದುಗೂಡಿತ್ತು. ಆದರೆ ಈ ಅಧಿರಾಜ್ಯವು ಒಂದು ಚಂಚಲ ಅವಸ್ಥೆಯದಾಯಿತು. ಆ ಜಗಜ್ಜೇತ ಕಾರ್ಸಿಕಾದ ಕಡುಗಲಿಯ ಕೊನೆಯಾದನಂತರ, ಅವನ ಇಟಾಲಿಯನ್ ಅಧಿರಾಜ್ಯವೂ ಸಿಡಿಯಿತು. ಮತ್ತೆ ಇಟಲಿ ಛಿನ್ನಭಿನ್ನವಾಯಿತು.

ಫ್ರಾನ್ಸ್, ಆಸ್ಟ್ರಿಯಾ, ಸ್ಪೇನ ಮತ್ತು ಜರ್ಮನಿಗಳು ಕಾಲಕಾಲಕ್ಕೆ ಅಕ್ರಮಿಸಿ ಇಟಲಿಯನ್ನು ಗಿಳಂಕೃತಮಾಡಿಕೊಂಡಿದ್ದವು. ರೋಮ ಸಾಮ್ರಾಜ್ಯದ ವಜ್ರ ಬಾಹುವು ಸೊರಗಿಹೋದಂದಿನಿಂದಲೂ ಇಟಲಿಯು ವಿಧ್ವಂಸಕ ವಿಪ್ಲವಕಾರಿಗಳಿಗೆ ತವರಾಯಿತು. ಗ್ಯಾರಿಬಾಲ್ಡಿಯು ಹುಟ್ಟಿ ಬೆಳೆದ ಆ ನಾಡಿನ ಬಲು ಭಾಗವು ಆರೇಳು ವಿಭಿನ್ನ ಅರಸರ ನಡುವೆ ಹಂಚಿಹೋಗಿತ್ತು ಮತ್ತು ಧರ್ಮಗುರುಗಳ ಅಥವಾ ವಿದೇಶೀ ಶಾಸಕರ, ಇಲ್ಲವೆ ದೇಶೀಯ ದಬ್ಬಾಳಿಕೆಗಾರರ ನಿರಂಕುಶ ಸತ್ತೆಗೆ ಇಂಬಾಗಿತ್ತು. ಇವರೆಲ್ಲರೂ ಒಂದು ಮುಮ್ಮಡಿ ಬಾಂಧವ್ಯದಲ್ಲಿ ಮಾತ್ರ ಒಟ್ಟಾಗಿದ್ದರು. ಆ ಬಾಂಧವ್ಯವೆಂದರೆ ಜನಸಾಮಾನ್ಯರ ಹಕ್ಕುಗಳು ವೈಯಕ್ತಿಕ ಸ್ವಾತಂತ್ರ್ಯದ ಹಾಗೂ ಇಟಲಿಯ ವಿಮೋಚನೆಯ ವಿರುದ್ಧ ಹೂಡಿದ ರೋಷಣೆಯ ಒಳಸಂಚು.

ತರುಣ ಗ್ಯಾರಿಬಾಲ್ಡಿ ಸುಭಾಸಚಂದ್ರರಂತೆ; ದಾರ್ಶನಿಕ ಆದರ್ಶದರ್ಶಿಯಾಗಿದ್ದೂ ಬಲವಾದ ಕ್ರಿಯಾಶೀಲ. ದೃಢವಾದ ಕಾರ್ಯಕರ್ತ. ಇಂಥ ಸಂಯೋಗ, ಪ್ರಪಂಚ ದಲ್ಲಿ ಅಪರೂಪ. ಕವಿಯ ದೃಷ್ಟಿಗೆ ಕಲಿಯ ಹೃದಯ; ಹೃದಯದ ಉಕ್ಕಿನೊಡನೆ

ಉಕ್ಕಿನ ಹೃದಯವನ್ನೂ ಎರಕಹೊಯ್ದ ಕೃತಿಕಲ್ಪಕ ವ್ಯಕ್ತಿತ್ವ. ಅವನು ಸಂಯುಕ್ತ ಸ್ವತಂತ್ರ ಹಾಗೂ ಸಮರ್ಥ ಇಟಲಿಯ ಅರಸುಗನಸನ್ನು ಚಿಕ್ಕಂದಿನಲ್ಲಿಯೇ ಕಂಡು; ಅದರ ಹೊಂಬೆಳಕಿನಲ್ಲಿಯೇ ಆ ತರಳನು ಅರಳಿ, ತರುಣನಾಗಿದ್ದನು. ಆದರೆ ಶತಮಾನಗಳ ಅನೈಕ್ಯ ಹಾಗೂ ಅಂತಃಕಲಹಗಳನ್ನು ನೋಡಿ ಆ ಕನಸು ಬರೇ ಕನಸಾಗಿಯೇ ಉಳಿಯುವದೋ ! ಎಂದು ಆತನು ಯೋಚಿಸುತ್ತಿದ್ದನು.

ಗ್ಯಾರಿಬಾಲ್ಡಿಯ ತಂದೆತಾಯಿ ಮಗನನ್ನು ಧರ್ಮಾಧಿಕಾರಿಯಾಗಿ ತರಬೇತಿಗೊಳಿಸಬೇಕೆಂದು ಸಂಕಲ್ಪಿಸಿದ್ದರು. ಆ ದೃಷ್ಟಿಯಿಂದ ಆತನಿಗೆ ಶಿಕ್ಷಣವನ್ನು ಕೊಡಲಾಗಿತ್ತು. ಆದರೆ ಗ್ಯಾರಿಬಾಲ್ಡಿಗೆ ಧರ್ಮಸಂಸ್ಥೆಯೆಂದರೆ ತಲೆಬೇಸರ. ಆತ ಕಡಲಿಗೆ ಹೋಗಲು ಹಂಬಲಿಸಿದನು. ಅವನ ರಕ್ತದಲ್ಲಿಯೇ ಮುನ್ನೀರಿನ ಒಗರು ಹರಿಯುತ್ತಿರಬೇಕು. ಅವನ ಪೂರ್ವಜರು ಜಿನೋವ್ಹಾದ ಜನ. ಜಿನೋವ್ಹಾ, ಗಟ್ಟಿಗರಾದ ಬೆಸ್ತರ ಹಾಗೂ ನಾವಿಕರ ತೊಟ್ಟಿಲು. ಜಗದ್ವಿಖ್ಯಾತ ಕೊಲಂಬಸನ ಜನ್ಮಸ್ಥಳ. ಅವನು ಸ್ವತಃ ನಾವಿಕರ ಮಗನೂ ಅಹುದು, ಮೊಮ್ಮಗನೂ ಅಹುದು. ಆದ್ದರಿಂದ ಕಡಲಿನ ಕರೆ ಅವನಿಗೆ ಪರವಶವಾಗಿ ಮಾಡಿತು. ಕೆಲಕಾಲ ಆತ ವ್ಯಾಪಾರಿ ಸಾರಿಗೆಯ ಹಡಗುಗಳಲ್ಲಿ ಚಾಕರಿಗೆ ನಿಂತನು. ಅನಂತರ ಸಾರ್ಡಿನಿಯಾ ರಾಜ್ಯದ ಹಡಗು ಪಡೆಯಲ್ಲಿ ಹೆಸರು ಹಚ್ಚಿಸಿದನು.

ಆಗಲೇ ಆತ ಇಟಲಿಯ ಏಕತಂತ್ರ ಸ್ವಾತಂತ್ರ್ಯದ ಚಳವಳಿಯ ಪಕ್ಷವಾದ 'ತರುಣ ಇಟಲಿ'ಯೆಂಬ ಆಂದೋಲನದಲ್ಲಿ ಒಳ್ಳೇ ಹುರುಪಿನ ಸದಸ್ಯನಾಗಿದ್ದನು.

ಆ ಹಡಗುಪಡೆಯಲ್ಲಿ ಕೆಲಸ ಮಾಡುವಾಗಲೇ ಗ್ಯಾರಿಬಾಲ್ಡಿಗೆ ಬಂಡಾಯದ ವೀರ ಸ್ವಪ್ನವು ಬಿದ್ದಿತು. ಸಂಯುಕ್ತ ಇಟಲಿಯ ಪ್ರೀತ್ಯರ್ಥ ಪ್ರಥಮಾಘಾತದ ಪ್ರಯತ್ನವನ್ನು ಮಾಡುವದು ಆತನಿಗೆ ತೋಚಿತು. ಅವನು 'ಯುರಿಡೈಸಿ' ಎಂಬ ಹಡಗದಲ್ಲಿ ನಾವಿಕನಾಗಿದ್ದನು. ಅಲ್ಲಿಯೇ ಒಂದು ಸಂಚುಮಾಡಿ ಆಕಸ್ಮಿಕವಾಗಿ ಆಕ್ರಮಿಸಿ, ಆ ಹಡಗವನ್ನೇ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಆತ ಉದ್ಯುಕ್ತನಾದನು. ಹಡಗವನ್ನು ವಶಪಡಿಸಿಕೊಂಡು ಅದನ್ನು ಜಿನೋವ್ಹಾಕ್ಕೆ ಒಯ್ದು ಅಲ್ಲಿಯ ಮದ್ದುಗುಂಡಿನ ಕೋಠಾರ-ಕೇಂದ್ರವನ್ನು ಕೈವಶಮಾಡಿಕೊಳ್ಳುವ ಸಾಹಸದ ಯೋಜನೆ ಅವನದಿತ್ತು. ಅದೇ ಸಂದರ್ಭಕ್ಕೆ ಸೇವ್ಹೋಯ ಪ್ರಾಂತದಲ್ಲಿ ಮ್ಯಾಝಿನಿಯು ಸ್ವಾತಂತ್ರ್ಯದ ಧ್ವಜವನ್ನೆತ್ತಿ ಕ್ರಾಂತಿಯ ಶಂಖವನ್ನೂಡಿದ್ದನು. ಅಂದಿನ ರಾಜಸತ್ತೆಯ ಕೇಂದ್ರವಾದ ಪೀಡ್ಮೊಂಟಕ್ಕೆ ತನ್ನ ಪಡೆಗಳೊಡನೆ ಸಾಗುವವನಿದ್ದನು. ಆದರೆ ಇದೆಲ್ಲ ಸಂಚು ಹುಸಿಯಾಯಿತು. ಇತ್ತ ಗ್ಯಾರಿಬಾಲ್ಡಿಯ 'ಯುರಿಡಾಯಿಸ್' ಒಳಸಂಚೂ ಗೊತ್ತಾಯಿತು. ಗ್ಯಾರಿಬಾಲ್ಡಿಯು

ದೇಶಬಿಟ್ಟು ಪಲಾಯನ ಮಾಡಬೇಕಾಗಿಬಂದಿತು. ದಂಡ ತಪ್ಪಿಸಿಕೊಳ್ಳಲಿಕ್ಕೆ ದಂಡವಾದರೂ ಎಂಥಹದು ? ೧೮೩೪ ರ ಜೂನ ೩ ನೇ ದಿನಾಂಕಕ್ಕೆ ಆತನಿಗೆ-ಅವನ ಪರೋಕ್ಷದಲ್ಲಿಯೇ ಮರಣದಂಡನೆ ವಿಧಿಸಲ್ಪಟ್ಟಿತು! ಹೀಗೆ ಸಾವಿನ ಆವ್ಹಾನೆಯಿಂದ ಆರಂಭವಾಯಿತು ಸ್ವಾತಂತ್ರ್ಯ ಸಮರ.

ದೇಶದಿಂದ ನಿರ್ವಾಸಿತವಾಗಿ ಗ್ಯಾರಿಬಾಲ್ಡಿ ದಕ್ಷಿಣ ಅಮೇರಿಕೆಯನ್ನು ಸೇರಿದನು. ದಕ್ಷಿಣ ಅಮೇರಿಕೆ ಯಾವಾಗಲೂ ಜಗತ್ತಿನ ಕೋಳಿಯಂಕದ ಕಣ. ಅಲ್ಲಿ ಕತ್ತಿಯಿಂದ ಶತ್ರುಗಳ ಎದೆಯ ಮೇಲೆ ತನ್ನ ಭಾಗ್ಯ ಲೇಖವನ್ನು ನೆತ್ತರಿನಿಂದ ಬರೆಯುವ ಸಾಹಸಿಗರಿಗೆಲ್ಲ ಅದು ಆಶ್ರಯ ಸ್ಥಾನ. ಎರಡು ವರ್ಷಗಳ ನಂತರ ಅಲ್ಲಿ ಗ್ಯಾರಿಬಾಲ್ಡಿಯು ಸೈನಿಕನೆಂತಲೂ ನಾವಿಕನೆಂತಲೂ ಬ್ರಾಝಿಲದ ವಿರುದ್ಧ ನಡೆಯುತ್ತಿದ್ದ ರಿಯೋಗ್ರಾಂಡೇದ ಬಂಡಾಯದಲ್ಲಿ ಜನತೆಯ ಪಕ್ಷಕ್ಕೆ ಸೇರಿದನು. ಸ್ವಾತಂತ್ರ ವೀರನಿಗೆ ವಿಶ್ವದಲ್ಲಿ ಎಲ್ಲಿ ದಬ್ಬಾಳಿಕೆ ನಡೆದರೂ ಅದು ಸ್ವಂತ ಶತ್ರುವೆ! ಅದರ ವಿರುದ್ಧ ಯಾವ ರಂಗದಲ್ಲಿ ಹೋರಲಿಕ್ಕೂ ಆತ ಸದಾಸಿದ್ಧ. ಸತ್ಯ ಮತ್ತು ನ್ಯಾಯಗಳಿಗೆ ಸರಹದ್ದುಗಳಿಲ್ಲ. ಕ್ರಾಂತಿಪ್ರಿಯ ಗ್ಯಾರಿಬಾಲ್ಡಿಗೆ ಇಟಲಿಯಂತೆಯೇ ದಕ್ಷಿಣ ಅಮೇರಿಕೆಯ ಬಂಡುಗಾರರು ಸ್ವಕೀಯರಾಗಿ ಕಂಡರು. ಅವನು ಅವರ ದಂಡನಾಯಕನಾದನು. ಬಂಡಾಯವು ಯಶಸ್ವಿಯಾಗಿ ಕ್ರಾಂತಿ ಎಂಬ ಕೀರ್ತಿಯನ್ನು ಪಡೆದಿತ್ತು. ದೊಡ್ಡ ಪ್ರಜಾರಾಜ್ಯವು ಸ್ಥಾಪಿತವಾಯಿತು. ಇದರ ಬಹಳಷ್ಟು ಶ್ರೇಯ ಗ್ಯಾರಿಬಾಲ್ಡಿಯ ಯುದ್ಧ ಪ್ರತಿಭೆಗೆ ಸಲ್ಲಬೇಕು.

ಹಾಗೆಯೇ ಸಾಂತಾಕೆಥೆರೀನಾ ಪ್ರಜಾರಾಜ್ಯದ ಸ್ವಾತಂತ್ರ್ಯ ರಕ್ಷಣೆಗಾಗಿಯೂ ಆತನು ಹೋರಿದನು. ಆ ಸಂದರ್ಭದಲ್ಲಿ ನಾವೆಯೊಡೆದು ಆತ ಅನಾಹುತಕ್ಕೆ ಗುರಿಯಾಗಬೇಕಾಯಿತು. ಆದರೆ ಆ ಅನಾಹುತದೊಳಗಿಂದಲೇ ಅವನಿಗೆ ದೈವದ ಅನುಗ್ರಹವು ದೊರೆಯಿತು. ಆಗಲೇ ಆತನು ಅನೀತಾ ರಿಬೆರಾಸ ಎಂಬಾಕೆಯನ್ನು ಕಂಡು ಅದೇ ಕ್ಷಣಕ್ಕೆ ಆಕೆಯ ಪ್ರೇಮಕ್ಕೆ ಮನಸೋತನು.

ಅನೀತಾ ಬೇರೊಬ್ಬನಿಗೆ ವಾಗ್ನಿಶ್ಚಿತಳಾಗಿದ್ದಳು. ಆತ ಧನಿಕನಿದ್ದರೂ ಆಕೆಗೆ ಆತನಲ್ಲಿ ಪ್ರೀತಿ ಇದ್ದಿಲ್ಲ. ಗ್ಯಾರಿಬಾಲ್ಡಿಯು ಪರಾಕ್ರಮಿ. ಪ್ರಿಯಾಹರಣವೇ ಆತನಿಗೆ ತನ್ನ ಪ್ರೀತಿ-ಶಕ್ತಿಗಳಿಗೆ ಯುಕ್ತವೆನಿಸಿತು. ಆಕೆಯು ಅವನಷ್ಟೇ ಸಾಹಸ ಪ್ರಿಯೆ. ಅವನ ಪ್ರೇಮಕ್ಕಾಗಿ, ಸಾನ್ನಿಧ್ಯಕ್ಕಾಗಿ, ಎಲ್ಲಿಗೂ ಹೋಗಲು, ಹೇಗೂ ಇರಲು ಸಿದ್ಧಳು. 'ನನ್ನಾಕೆಗೆ ಕಾಳಗಗಳೆಂದರೆ ವಿನೋದ; ಮತ್ತು ಶಿಬಿರದ ಕಷ್ಟಗಳೆಂದರೆ ಒಂದು ಸೊಗಸಿನ ಕಾಲಕ್ಷೇಪ' ಎಂದು ಆಕೆಯ ವೀರಪತಿಯೇ ಬರೆದಿಟ್ಟಿದ್ದಾನೆ.

ಪ್ರಣಯಿಗಳಿಬ್ಬರೂ ಮೊಂಡಿವಿಡೊದಲ್ಲಿ ಕೆಲಕಾಲ ಸುಖವಾಗಿ ವಾಸಿಸಿದರು. ಆದರೆ ಆ 'ಮಧುಚಂದ್ರ'ಕ್ಕೆ ಗ್ರಹಣಕಾಲಬಂದಿತು. ಅರ್ಜೆಂಟೀನಾ ಯುದ್ಧ ಸಾರಿತು. ಸೇನಾಪತಿಯಾಗೆಂದು ಮನ್ನಣೆಯ ಕರೆಯುಬಂದರೂ ಅದನ್ನು ತ್ಯಜಿಸಿ ದೈವದ ಸ್ರೋತ್ರೀಪ ಜೀವಿಯಾದ ಗ್ಯಾರಿಬಾಲ್ಡಿಯು ಯುರಗ್ವೇದ ಸೇವೆಯಲ್ಲಿ ಸೈನಿಕ ನಾದನು. ಇಟಾಲಿಯನ್ ಪಡೆಯನ್ನೊಂದು ನಿರ್ಮಿಸಿ ಆತ ತನ್ನ ವಿಜಯಾವೇಶ ದಿಂದ ೧೮೪೬ ರ ಲ್ಲಿಆ ಹೊಸ ಪ್ರಜಾರಾಜ್ಯದ ಸ್ವಾತಂತ್ರವನ್ನು ಭದ್ರಗೊಳಿಸಿದನು. ಹೀಗೆ ದಕ್ಷಿಣ ಅಮೇರಿಕೆಯ ಪಂಪಾ ಕ್ಷೇತ್ರದಲ್ಲಿಯ ಆತನ 'ಕಿಷ್ಕಿಂಧಾ' ಯುದ್ಧದಗತ್ತು ಮುಂದೆ ಆತನಿಗೆ ಬಹಳ ಉಪಯೋಗವಾಯಿತು. ಅವನೂ ಅವನೊಡನೆ ಪಡೆಗಟ್ಟಿದ ಇತರ ನಿರ್ವಾಸಿತರೂ ಎತ್ತಿಕೊಂಡ ಧ್ವಜವು ಅವರ ವೃತ್ತಿಯ ದ್ಯೋತಕವೇ ಆಗಿತ್ತು. ಕಪ್ಪು ಹಿನ್ನಲೆಯ ಮೇಲೆ ಉರಿಯುವ ಜ್ವಾಲಾಮುಖಿಯ ಚಿತ್ರ ಬಿಡಿಸಿದ ಧ್ವಜವು ಅದು. ಇಟಲಿಯ ದಾಸ್ಯ ಸೂತಕದ ಸ್ಥಲಂತ ಸ್ಮಾರಕವದು. ತನ್ನ ಕಳೆದುಹೋದ ಸ್ವಾತಂತ್ರ್ಯದ ಸೌಭಾಗ್ಯಕ್ಕಾಗಿ ದುಃಖಿಸುತ್ತ ಹೃದಯದಲ್ಲಿ ಪ್ರತಿಭಟನೆಯ ಪವಿತ್ರ ಜ್ವಾಲೆಯನ್ನು ಧಗಧಗಿಸಿ ಕೊಂಡಿರುವ ಜಾಗ್ರತ ಇಟಲಿಯ ಪ್ರತೀಕವಾಗಿತ್ತು ಧ್ವಜಾಂಕಿತ. ಆ ಕೆಂಪು ಅಂಗಿಗಳ ಒಳಗೆ, ಕೆಚ್ಚೆದೆಗಳು ಕ್ರಾಂತಿಯ ರಕ್ತಸ್ಪಂದನಕ್ಕೆ ಹಾರುತ್ತಿದ್ದವು. ಸ್ವಾತಂತ್ರ್ಯ ಯುದ್ಧದಲ್ಲಿ ಭಾಗವಹಿಸಲು ಹುಚ್ಚೆದ್ದು ಬಂದ ಈ ಸ್ವಯಂ ಸೇವಕ ರಿಗೆ ಆ ಪ್ರಜಾರಾಜ್ಯದ ಸರಕಾರವು ಆ ಗೊತ್ತುಗೇಡು ಪತ್ತುಗೇಡುಗಳ ಹೊತ್ತಿನಲ್ಲಿ ಕಲೆಗಡಕರ ಕೆಂಪು ಸಮವಸ್ತ್ರಗಳನ್ನು ಕೊಟ್ಟಿದ್ದರು. ಅವೇ ಅವರ ಕ್ರಾಂತಿವ್ರತದ ದೀಕ್ಷಾಕವಚಗಳಾದವು. ಮಹಾತ್ಮರು ಜೇಲಿನ ಉಡುಪಿನ ಕುರುಹಾದ ಟೊಪ್ಪಿಗೆ ಯನ್ನೇ ದೇಶಭಕ್ತಿಯ ರಾಜಮುಕುಟವಾಗಿ ಮಾಡಿದಂತೆ !

೧೮೪೮ ನೇ ವರ್ಷ ಯುರೋಪಕ್ಕೆ ವಿಪ್ಲವ ಸಂವತ್ಸರ. ಸಿಂಹಾಸನಗಳು ಉರುಳಿಯುತ್ತಿದ್ದವು. ಕ್ರಾಂತಿಯ ಬಿರುಗಾಳಿ ಅಂತರರಾಷ್ಟ್ರೀಯ ಅಂತರಿಕ್ಷವನ್ನು ವ್ಯಾಪಿಸಿತ್ತು. ಈ ಅನುಕೂಲ ಸಂಧಿಯನ್ನೇ ನಿರೀಕ್ಷಿಸುತ್ತಿದ್ದ ಗ್ಯಾರಿಬಾಲ್ಡಿಯು ಅವನ ಸಂಗಡಿಗರೂ ಯುರೋಪಕ್ಕಾಗಿ ಹಾಯ ಬಿಚ್ಚಿದರು. ಅವರು ನೀಸ್ ಬಂದರದಲ್ಲಿ ಇಳಿದರು. ಇದೇ ಕ್ರಾಂತಿವೀರನ ಜನ್ಮಸ್ಥಾನವಾಗಿತ್ತು. ತನ್ನ ಸಂಗಡಿಗರೊಡನೆ ಆತನು ೨೦೦೦ ಸೈನಿಕರ ಪಡೆಯನ್ನೊಂದು ಕಟ್ಟಿನಿಲ್ಲಿಸಿದ್ದನು. ಅದನ್ನು ಸಾರ್ಡಿನಿಯಾದ ಅರಸ ಚಾರ್ಲಸ ಅಲ್ಬರ್ಟನ ವಶಕ್ಕೆ ಕೊಡಲು ಬಯಸಿದನು. ಈ ಅಲ್ಬರ್ಟನ ಮಗ ವ್ಹಿಕ್ಟರ ಇಮ್ಯಾನುಲನೇ ಸಂಯುಕ್ತ ಇಟಲಿಯ ಪ್ರಥಮ ಸಮ್ರಾಟನಾಗಲಿದ್ದನು. ಆದರೆ ಅಲ್ಬರ್ಟನು ಗ್ಯಾರಿಬಾಲ್ಡಿಗೆ ಯೋಗ್ಯ ಸ್ವಾಗತವನ್ನು ಮಾಡಲಿಲ್ಲ. ಮೇಲಾಗಿ ಇವನ ಈ ಹೊಸ ಉಪದ್ಯಾಪವನ್ನು

ಸಂದೇಹದಿಂದಲೇ ನೋಡಿದನು. ಆದ್ದರಿಂದ ಗ್ಯಾರಿಬಾಲ್ಡಿಯು ತನ್ನ ದಲಬಲ ದೊಡನೆ ಮಿಲಾನದ ಬಂಡುಗಾರರನ್ನು ಸೇರಿಕೊಂಡನು. ಆದರೆ ಅವರಿಗೆ ಕಸ್ಟೋಝಾ ಎಂಬಲ್ಲಿ ಸೋಲಾಯಿತು ಮತ್ತು ಗ್ಯಾರಿಬಾಲ್ಡಿಯು ಮತ್ತೆ ಹೊಸಹೋರಾಟಕ್ಕೆ ಕಾಲಹದವಾಗುವತನಕ ದೇಶದಿಂದ ಕಾಲುಕೀಳಬೇಕಾಗಿಬಂತು. ಈ ಸಲ ಆತ ಸ್ವಿಟ್ಝರ್ಲಂಡಿಗೆ ಪಲಾಯನ ಮಾಡಿದನು.

ಅಂಥ ಕಾಲ ಶೀಘ್ರದಲ್ಲಿಯೇ ಹದಗೂಡಿ ಬಂದಿತು. ಇಟಲಿಯ ಉತ್ತರ ಪ್ರಾಂತ ಗಳು ಹೊಸ ರೋಮನ್ ಪ್ರಜಾರಾಜ್ಯವನ್ನು ಸಾರಿದವು. ಅದಕ್ಕೆ ಸ್ಫೂರ್ತಿದಾಯಕರೂ ಧೂರ್ತನಾಯಕರೂ ಮ್ಯಾಝಿನಿ ಮತ್ತು ಗ್ಯಾರಿಬಾಲ್ಡಿ. ಹೊಸ ರಾಜ್ಯವು ತನ್ನ ಸ್ವಾತಂತ್ರ್ಯ ರಕ್ಷಣೆಗಾಗಿ ಶಸ್ತ್ರವೆತ್ತಿತು. ಆ ಶಸ್ತ್ರ ಗ್ಯಾರಿಬಾಲ್ಡಿಯ ಸಂಘಟನಾಶಕ್ತಿ. ಸಾನ್ ಪಾಂಕ್ರೈರ್ಝೊ ಎಂಬುದು ಈ ಪ್ರಜಾರಾಜ್ಯದ ಕೇಂದ್ರವಾಗಿತ್ತು. ಅವನ್ನು ಕಾದಿಡಲು ಕಾದಾಡುವ ಕೆಲಸಕ್ಕೆ ಗ್ಯಾರಿಬಾಲ್ಡಿಯು ಕಂಕಣ ಕಟ್ಟಿದ್ದನು. ಆತ ಅಸಮ ಸಾಹಸದಿಂದ ಅಚಲ ವಿಶ್ವಾಸ ದಿಂದ ಹೋರಾಡಿದನು. ಆಶೆಯ ಆಚೆಯವರೆಗೂ ಆವೇಶದಿಂದ ಹೆಣಗಿದನು. ಆದಾಗ್ಯೂ ಫ್ರೆಂಚರ ಮಹಾ ಶಕ್ತಿಯ ಮುಂದೆ ಈ ಅಲ್ಪ ಸೈನ್ಯವು ಹಿಂಜರಿಯಲೇ ಬೇಕಾಯಿತು. ಗ್ಯಾರಿಬಾಲ್ಡಿಯೂ ಅವನ ಎಂಟೆದೆಯ ಬಂಟರೂ ಹೆಸರನ್ನು ಪಡೆದರೂ; ಗೆಲುವನ್ನು ಗಳಿಸಲಿಲ್ಲ.

ಗ್ಯಾರಿಬಾಲ್ಡಿಯನ್ನು ಇಟಲಿಯ ಶತ್ರುಗಳು ಹಿಮ್ಮೆಟ್ಟಿದರು, ಬೆನ್ನಟ್ಟಿದರು. ಅವನ ಹಿಮ್ಮೆಟ್ಟು ಯಾವ ವೀರನ ಮುನ್ನಡೆಗೂ ಕಡಿಮೆ ಇದ್ದಿಲ್ಲ. ಆಧುನಿಕ ಯುದ್ಧವಲ್ಲಿ ಕೈ ಬಿಟ್ಟ ಕಣದಿಂದ ಹಿಂದೆಗೆಯುವದೂ ಒಂದು ಪರಾಕ್ರಮದ ಪವಾಡವಾಗುತ್ತದೆ. ದೂರದ ಗೆಲುವನ್ನೇ ಗುರಿಯಾಗಿಟ್ಟು ದಾರಿಯಲ್ಲಿಯ ಯಾವ ಹಿರಿಯ ಸೋಲನ್ನೂ ಕಂಗೆಡದೇ ಸಹಿಸಿಕೊಂಡು, ಸುತ್ತಲೆಲ್ಲ ಹಗೆಗಳು ಏರಿಬರುವಾಗ, ದಾರಿಕಟ್ಟುವಾಗ. ಅವರನ್ನು ತಪ್ಪಿಸಿಕೊಂಡು, ತನ್ನನ್ನು ಜಪ್ಪಿಸಿ ಕೊಂಡು, ತಾಳ್ಮೆಹಿಡಿದು ಶಿಸ್ತಿನಿಂದ ಹಿಂದಕ್ಕೆ ಸರಿಯುತ್ತ, ತನ್ನವರ ಹಾನಿಯನ್ನು ತಡೆದು. ಆಯಕಟ್ಟಿನ ಆಶ್ರಯಗಳನ್ನು ಪಡೆದು, ಮುಂದಿನ ಬಿಡುಗಡೆಗೆ ದಾರಿ ತೆರೆದಿಡುವ ಹೊಂಚಿನ ಹೋರಾಟವು 'ಗತ್ತುಗಾರಿಕೆ' ಎನಿಸಿಕೊಳ್ಳುತ್ತದೆ. ಗ್ಯಾರಿಬಾಲ್ಡಿಗೆ ಈ ಗತ್ತುಗಾರಿಕೆ ದಕ್ಷಿಣ ಅಮೇರಿಕೆಯಲ್ಲಿಯೇ ಗೊತ್ತು. ಅದು ಈಗ ಪರಾಜಯದ ಆಪತ್ತಿನಲ್ಲಿ, ಪಲಾಯನದ ಹೊತ್ತಿನಲ್ಲಿ ಅವನ ಬೆಂಬಲಕ್ಕೆ ಬಂದಿತು. ಉತ್ತರದಿಂದ ಕಾಲ್ದೆಗೆದ ಗ್ಯಾರಿಬಾಲ್ಡಿಯು ಮಧ್ಯ ಇಟಲಿಯ ಇಕ್ಕಟ್ಟಿ ನೊಳಗಿಂದ ಹಿಂದಕ್ಕೆ ಸರಿಯುತ್ತ, ಸುತ್ತುಗಟ್ಟಲು ಬೆನ್ನುಹತ್ತಿಬರುವ ಫ್ರಾನ್ಸ,

ಆಸ್ಟ್ರಿಯಾ, ಸ್ಪೇನ ಮತ್ತು ನೇಪಲ್ಸ ರಾಜ್ಯಗಳ ದಂಡುಗಳನ್ನು ಒಂಟಿಯಾಗಿ ಇದಿರಿಸುತ್ತ, ಉಪಾಯವಾಗಿ ಚದುರಿಸುತ್ತ ಯಶಸ್ವಿಯಾದ ಹಿನ್ನಡೆಯನ್ನು ಕಾದಿ ಕಾಣಿಸಿದನು. ಸಾನ್ ಮೇರಿನೋಕ್ಕೆ ಬಂದು ಮುಟ್ಟಿದೊಡನೆ ಅವನ ಪಡೆಯವರು ಚದುರಿದರು. ಗ್ಯಾರಿಬಾಲ್ಡಿಯೊಬ್ಬನೇ ಪ್ರತಾಪವಡಗಿದ ಸಿಂಹನಂತೆ, ಅಡಗಿ ಅಲೆಯುವ ಪ್ರತಾಪಸಿಂಹನಂತೆ ಹಾಗೂ ಹೀಗೂ ಪೀಡಮೊಂಟವನ್ನು ಸೇರಿ, ಅಲ್ಲಿಂದ ನ್ಯೂಯಾರ್ಕಿಗೆ ಮತ್ತೆ ಪಯಣ ಬೆಳೆಸಿದನು. ಅವನ ತಲೆಗೆ ಬೆಲೆಕಟ್ಟಿದ್ದರು ! ಬದುಕಿರಲಿ, ಸತ್ತಿರಲಿ ಅವನನ್ನು ಹಿಡಿದುಕೊಟ್ಟವರಿಗೆ ದೊಡ್ಡ ಪಾರಿತೋಷಕವನ್ನು ಸರಕಾರವು ಇಟ್ಟಿತ್ತು. ಹೀಗೆ ಜೀವಕ್ಕೆ ಸಂಚುಕಾರ ಬಿದ್ದು, ಆತ ಏಕಾಕಿಯಾಗಿ ಶೋಕಾಕುಲನಾಗಿ ದೇಶವನ್ನು ಬಿಟ್ಟನು. ದೇಶದಲ್ಲಿ ಅವನದಾಗಿ ಏನಿತ್ತು ? ಅವನ ಧ್ಯೇಯದ ಸಿದ್ಧಿ ತಡೆದುಹೋಗಿತ್ತು; ಅವನ ಧ್ಯಾನದ ಮೂರ್ತಿ ಒಡೆದುಹೋಗಿತ್ತು. ಅವನ ಪ್ರಿಯತಮೆ ಅನೀತಾ ಮಡಿದುಹೋಗಿದ್ದಳು. ಅವನ ಹೃದಯ, ಹಕ್ಕಿ ಇಲ್ಲದ ಗೂಡು. ಅವನ ಜೀವನ, ದೇವರಿಲ್ಲದ ಗುಡಿ. ಅದರಲ್ಲಿ ಮತ್ತೊಮ್ಮೆ ತನ್ನ ಆದರ್ಶದ ಪ್ರಾಣ ಪ್ರತಿಷ್ಠೆಯನ್ನು ಮಾಡಲಿಕ್ಕೆಂದು ಗ್ಯಾರಿಬಾಲ್ಡಿ ಅಮೇರಿಕೆಯ ಸ್ವತಂತ್ರ ದಂಡೆಗೆ ಪಯಣವನ್ನು ಬೆಳೆಸಿದನು. ಆಗ ನ್ಯೂಯಾರ್ಕವು ಯುರೋಪದ ದಬ್ಬಾಳಿಕೆಯ ದೇಶಗಳಿಂದ ನಿರ್ವಾಸಿತರಾದ ಅನೇಕ ಅಗತಿಕರಿಗೆ ಆಶ್ರಯವಾಗಿತ್ತು. ಗ್ಯಾರಿಬಾಲ್ಡಿಯು ದಂಡೆಗಿಳಿದೊಡನೆಯೇ ಸಂಭ್ರಮದ ಸತ್ಕಾರ ಸಮಾರಂಭವನ್ನು ಏರ್ಪಡಿಸಲಾಯಿತು. ಅವನು ಅವನಿಗಾಗಿ ಸತ್ಕಾರವನ್ನು ಒಪ್ಪಲಿಲ್ಲ.

ತನ್ನಂತೆಯೇ ಅಲ್ಲಿಗೆ ಹೋಗಿ ಸ್ಥಾಯಿಕನಾದ ಇಟಾಲಿಯನ್‌ನ ಕಾರಖಾನೆಯೊಂದರಲ್ಲಿ ಆತನು ಚಾಕರಿಗೆ ನಿಂತನು. ಅದೂ ಎಂಥ ಚಾಕರಿ ? ಮೇಣಬತ್ತಿಗಳನ್ನು ತಯಾರಿಸುವ ಕೆಲಸ. ಕ್ರಾಂತಿಯ ಜ್ವಾಲಾಮುಖಿಯನ್ನೇ ಸೊತ್ತಿಸುವ ಬೆಂಕಿಯ ಪಿಂಡನಾದ ಗ್ಯಾರಿಬಾಲ್ಡಿಯು ಮೇಣಬತ್ತಿಯನ್ನು ಉಂಟುಮಾಡುವ ಕಸಬಿಗೆ ಕೈ ಹಾಕಿದನು ! ಗ್ಯಾರಿಬಾಲ್ಡಿಯ ಹಿರಿಯ ಗುಣಗಳಲ್ಲಿ ಇದೊಂದು ಮುಖ್ಯವಿತ್ತು. ತನ್ನ ತ್ಯಾಗ-ತಪಶ್ಚರ್ಯೆಗಳನ್ನು, ಸೇವೆ ಸಮರ್ಪಣೆಗಳನ್ನಾಗಿಯೇ ಆತ ಭಾವಿಸುತ್ತಿದ್ದನು. ಅನುಕೂಲ ಕಾಲಬಂದಾಗ ಹಿಂದಿನ 'ರಾಷ್ಟ್ರಕಾರ್ಯ'ವನ್ನು ಹುಂಡಿಯಂತೆ ಮುರಿಸಿಕೊಳ್ಳುವ ಧೂರ್ತಸ್ವಾರ್ಥವು ಅವನದಿದ್ದಿಲ್ಲ. ದಕ್ಷಿಣ ಅಮೇರಿಕೆಯಲ್ಲಿ ಅವನಿಂದ ಉಪಕೃತರಾಗಿ ತಮ್ಮ ಹೊಸರಾಜ್ಯಗಳನ್ನು ರಕ್ಷಿಸಿಕೊಂಡ ಸರಕಾರಗಳು ಅನೇಕವಿದ್ದವು. ಅವು ಗ್ಯಾರಿಬಾಲ್ಡಿಯನ್ನು ಯಾವ ವೈಭವಕ್ಕೂ ಏರಿಸಲು ಸಿದ್ಧವಿದ್ದವು. ವೀರಕರ್ಮದ ಕುರಿತು ಮಾತ್ರ ಆತ ತನ್ನ ಅಧಿಕಾರ ವೆಂದು ತಿಳಿದಿದ್ದನು. ಹಣವೆಂದರೆ ಅವನಿಗೆ ಕ್ಷುಪದಾರ್ಥವಾಗಿತ್ತು. ತನ್ನ ಆದರ್ಶವೇ ಅವನ ಸಕಲ ಸ್ವಾರ್ಥವೂ ಪರಮಾರ್ಥವೂ ಆನಿಸಿತ್ತು.

ಈ ಕೆಲಸದಲ್ಲಿ ಆತ ಹತ್ತು ವರ್ಷ ಕಳೆದನು. ಮತ್ತೆ ತನ್ನ ಕಡಲ ಬಾಳಿನ ಕುರಿತು ಆತ ಹೊರಳಿದನು. ಒಂದು ವ್ಯಾಪಾರಿ ಹಡಗಕ್ಕೆ ಆತ ಕಪ್ತಾನನಾದನು. ಅಮೇರಿಕೆ ಆತನಿಗೆ ಆಶ್ರಯವಿತ್ತಿತು; ಆದರೆ ಅದು ಎಂದೂ ಆತನಿಗೆ ತನ್ನ ಮನೆಯೆಂದೆನಿಸಲಿಲ್ಲ. ರಾಕಿ ಪರ್ವತದ ನೆರಳಲ್ಲಿ ನಿಂತರೂ ಆತನ ಕಣ್ಣಿಗೆ ಆಲ್ಪಸ್ ಪರ್ವತದ ಬೆಳ್ಳಿ ದಿಬ್ಬಗಳೇ ಹೊಳೆಯುತ್ತಿದ್ದವು. ಎಲ್ಲಿದ್ದರೂ ಅವನ ಹೃದಯದ ಸೂಜಿಗಲ್ಲಿಗೆ ಇಟಲಿಯೇ ಧ್ರುವವಾಗಿತ್ತು. ಸ್ವಾತಂತ್ರ್ಯದ ಸಮರ ಭೇರಿಯ ಕರೆಯು ಬರುವದು ಖಂಡಿತವೆಂದು ಆತನ ಆಂತರಿಕ ಶ್ರದ್ಧೆ ಇತ್ತು.

ಆದರೆ ೧೮೫೪ ರಲ್ಲಿ ನಾಗರಿಕನಂತೆ ಆತ ಸ್ವಸ್ಥವಾಗಿಯೇ ಇಟಲಿಯನ್ನು ಬಂದು ಸೇರಿದನು. ಆದರೂ ಇಟಲಿಯು ಅವನಿಗೆ ಸೇರಿಬರಲಿಲ್ಲ. ಹತ್ತಿರವೇ ಕೆಪ್ರೆರಾ ಎಂಬ ಒಂದು ದ್ವೀಪದಲ್ಲಿ ಆತನು ನೆಲಿಸಿದನು. ಸಾರ್ಡಿನಿಯಾದ ಅರಸು ವ್ಹಿಕ್ಟರ ಇಮ್ಯಾನುಲ, ಗ್ಯಾರಿಬಾಲ್ಡಿಗೆ ಆಶ್ರಯವನ್ನು ನೀಡಿದನು. ಅದಕ್ಕೆ ಕಾರಣ ಗ್ಯಾರಿಬಾಲ್ಡಿಯಲ್ಲಿ ಒದಗಿ ಬಂದ ಮತಪರಿವರ್ತನೆ. ಇಟಲಿಯ ಬಿಡುಗಡೆಯ ಅವನ ಕನಸು ಕೊಂಚ ಮಾರ್ಪಾಟವಾಯಿತು. ಮೊದಲು ಅವನು ಅರಾಜಕ ಪ್ರಜಾಪ್ರಭುತ್ವದ ಪಕ್ಷಪಾತಿಯಾಗಿದ್ದನು. ಈಗ ಆತ ಕೆವ್ಹೋರನ ಮರ್ಯಾದಿತ ರಾಜಸತ್ತೆಯ ಸಂಯುಕ್ತ ಇಟಲಿಯ ಗುರಿಯನ್ನು ಒಪ್ಪಿಕೊಂಡನು. ಈ ಸಂಯುಕ್ತ ಇಟಲಿಗೆ ರಾಜನಾಗುವ ಮರ್ಯಾದೆ ಇಮ್ಯಾನುಲನಿಗೆ ಸಲ್ಲತಕ್ಕದಿತ್ತು. ಲೋಕ ನಿಯುಕ್ತ ಮಂತ್ರಿಮಂಡಳದ ಇಚ್ಛೆಗೆ ರಾಜನ ಅಧಿಕಾರ ತಲೆಬಾಗಬೇಕಿತ್ತು.

ಆದರೆ ಈ ಹಂತದಿಂದಲೂ ಇಟಲಿ ಹಲವು ಗಾವುದ ದೂರವೇ ಇತ್ತು. ಇಟಲಿಯಲ್ಲಿ ಅಂತಃಕಲಹವು ಉಗ್ರರೂಪದಲ್ಲಿ ನಡೆದಿತ್ತು. ಆಸ್ಟ್ರಿಯಾದ ಬಿಳಿಯಂಗಿಯರು ವೇನೀಸ್‌ವನ್ನು ತುಳಿದುನಿಂತಿದ್ದರು. ರೋಮದ ವ್ಯಾಟಿಕನ್ ಪೀಠದ ಪೋಪನ ದಂಡುಗಳು ಪ್ರಜೆಗಳ ಸ್ವಾತಂತ್ರ್ಯವನ್ನು ಹೆಡಮುರಿಗೆ ಕಟ್ಟಿದ್ದವು. ಹಾಗೆಯೇ ೨ ನೇ ಫ್ರೆಡ್ರಿಕನಂತನು ದಕ್ಷಿಣ ಇಟಲಿಯನ್ನು ದಬ್ಬಾಳುತ್ತಿದ್ದನು. ಆದರೆ ಯಾರ ದಬ್ಬಾಳಿಕೆಯು ನಡೆದರೂ 'ಸ್ವತಂತ್ರ ಇಟಲಿ'ಯ ಆಂದೋಲನವು ಸೆರೆ, ಸಿಡಿಗುಂಡು, ಚಿತ್ರಹಿಂಸೆಗಳನ್ನು ಲೆಕ್ಕಿಸದೆ ಮುಂದರಿಯಿತು.

ರಾಷ್ಟ್ರದ ಆತ್ಮವು ಜಾಗ್ರತವಾಯಿತೆಂದರೆ–ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ ‖ ನಚೈನಂ ಕ್ಲೇದಯಂತಾಪೋ । ನಶೋಷಯತಿ ಮಾರುತಃ ‖ ಸತ್ತೆಯ ಶಸ್ತ್ರಗಳು, ವೈರದ ಬೆಂಕಿ, ಗೋಳಾಟದ ಕಣ್ಣೀರು, ಯಾತನೆಯ ನಿಡಿಸುಯ್ಯಲು–ಯಾವದೂ ಆತ್ಮದ ಶಕ್ತಿಯನ್ನು ತಡೆಯದು, ತೊಡೆಯದು.

ವಿಶೇಷತಃ ಇಂಗ್ಲಂಡದಿಂದ ಈ ಆಂದೋಲನಕ್ಕೆ ಸ್ಫೂರ್ತಿ ಬರುತ್ತಿತ್ತು. ಆ ಸ್ಫೂರ್ತಿಯ ಕೇಂದ್ರ ಮ್ಯಾಝಿನಿ ಅಲ್ಲಿ ಆಶ್ರಯ ಪಡೆದಿದ್ದನು. ನ್ಯೂಯಾರ್ಕಿನಂತೆ ಇಂಗ್ಲಂಡವೂ ಅಂದು ನಿರ್ವಾಸಿತರ ಕ್ಷೇಮಧಾಮವಾಗಿತ್ತು. ಲೋಕಸತ್ತೆಯ ಅನನ್ಯ ಉಪಾಸಕರಾದ ಇಂಗ್ಲಿಷಜನ ಇಟಲಿಯ ಆಂದೋಲನವನ್ನು ಸ್ನೇಹದ ಕಣ್ಣಿನಿಂದ ನೋಡುತ್ತಿದ್ದರು. ಇದಕ್ಕೆ ಉದಾಹರಣೆಯೆಂದರೆ,–ಇಟಲಿಯ ಕ್ರಾಂತಿಕಾರರನ್ನು ಉಗ್ರವಾಗಿ ಪ್ರತಿಭಟಿಸಿದ್ದ ಆಸ್ಟ್ರಿಯಾದ ಸೇನಾಪತಿ ಜನರಲ್ ಹೈನೌ ಎಂಬುವನು–ಲಂಡನ್ನಿಗೆ ಹೋದಾಗ, ಅಲ್ಲಿಯ ಕೂಲಿಕಾರರೆಲ್ಲ ಒಟ್ಟಾಗಿ ಅವನನ್ನು ನಡುಬೀದಿಯಲ್ಲಿ ಮುತ್ತಿಗೆ ಹಾಕಿ ಚೆನ್ನಾಗಿ ಥಳಿಸಿದ್ದರು !

೧೮೫೯ ರಲ್ಲಿ ಗ್ಯಾರಿಬಾಲ್ಡಿಯು ತನ್ನ ಸೇವಾನಿವೃತ್ತಿಯ ಸ್ವಯಂಸನ್ಯಾಸದಿಂದ ಹೊರಗೆ ಬಂದನು. ಆಗ ಸಾರ್ಡಿನಿಯಾ ಹಾಗೂ ಆಸ್ಟ್ರಿಯಾಗಳ ನಡುವೆ ಯುದ್ಧಕ್ಕೆ ಮೊದಲಾಗಿತ್ತು. ಆ ಯುದ್ಧರಂಗದಲ್ಲಿ ಈ ಯೋಧನು ಅಲ್ಪಾಯಿನ್ ಕಾಲಾಳುಗಳ ಸೇನಾಪತಿತ್ವವನ್ನು ಸ್ವೀಕರಿಸಿದನು. ಆಸ್ಟ್ರಿಯದ ದಂಡುಗಳನ್ನು ಟಿರೋಲದ ತನಕ ಹಿಮ್ಮೆಟ್ಟಿಸಿದನು.

ಈ ವಿಜಯ ಯಾತ್ರೆ ಮುಗಿದನಂತರ, ಗ್ಯಾರಿಬಾಲ್ಡಿ ಯುದ್ಧರಂಗದಿಂದ ಅನಿರುದ್ಧನ ರಂಗಕ್ಕೆ ಬಂದನು. ರೈಮೊಂಡಿ ಎಂಬ ಒಬ್ಬ ಮನ್ನೆಯ ಮನೆತನದ ಕನ್ನೆಯನ್ನು ವರಿಸಿದನು. ಆದರೆ, ನವವಲ್ಲಭೆಯನ್ನು ಒಡನೆಯೇ ಅಗಲಿ, ಆತನು ದಕ್ಷಿಣಕ್ಕೆ ದಂಡೆತ್ತಿ ಹೋಗಬೇಕಾಯಿತು. ಆದರೆ ಅಷ್ಟರಲ್ಲಿ ಸಾರ್ಡಿನಿಯಾಕ್ಕೆ ಸಹಾಯ ಸಲ್ಲಿಸಿದ ೩ ನೇ ನೆಪೋಲಿಯನ್‌ನು ಆಸ್ಟ್ರಿಯಾದವಲೊಡನೆ ಒಪ್ಪಂದ ಮಾಡಿಕೊಂಡನು. ಗ್ಯಾರಿಬಾಲ್ಡಿಯು ಮುಂದೆ ಸಿಸಿಲಿಯ ರಾಜ್ಯದ ವಿರುದ್ಧ ಕ್ರಾಂತಿಯ ಒಳಸಂಚಿನಲ್ಲಿ ಭಾಗವಹಿಸಿದನು.

೧೮೬೦ ರಲ್ಲಿ ಅವನು ಹಾರೈಸುತ್ತಿದ್ದ ಹೊತ್ತು ಬಂದಿತು. ಥಾಮಸ್ ಕಾರ್ಲಾಯಿಲ್ ಎಂಬ ವಿಶ್ವವಿಖ್ಯಾತ ಮೇಧಾವಿಯು ಫ್ರೆಂಚರಾಜ್ಯಕ್ರಾಂತಿಯ ಚರಿತ್ರವನ್ನು ಬರೆದನು. ಆತ ಒಂದೆಡೆಯಲ್ಲಿ ಅಂದಿದ್ದಾನೆ ಒಂದು ಇಡಿಯ ಜನಾಂಗಕ್ಕೆ ಶ್ರದ್ಧೆ ಎಂಬುದಾದರೂ ಇರುವದೆನ್ನುವುದು ವಿರಳವೇ. ಇರುವುದೇ ಆದರೆ ಅಂಥ ಶ್ರದ್ಧೆಯನ್ನು ಪಡೆದಾಗ ಆ ಜನಾಂಗದ ಇತಿಹಾಸವು ಸ್ಫೂರ್ತಿದಾಯಕವೂ ಉಲ್ಲೇಖನೀಯವೂ ಆಗುತ್ತದೆ. ಗ್ಯಾರಿಬಾಲ್ಡಿಯು ತನ್ನ ಅಮರ ಸೈನಿಕರಾದ ಒಂದು ಸಾವಿರ ಕೆಂಪಂಗಿಯವರೊಡನೆ ಮರ್ಸಾಲಾ ಎಂಬಲ್ಲಿ ಇಳಿದಾಗ, ಆತನು ಇಟಲಿಗೆ ಒಂದು ಶ್ರದ್ಧಾ ದೀಕ್ಷೆಯನ್ನೇ ತಂದನು. ಹಿಂದೆ ಇಂಗ್ಲಂಡದ ಕೆಂಟ

ಪರಗಣಿಯಲ್ಲಿ ಬರ್ಬರ ಬ್ರಿಟನ್ನರ ಬಾಳಿಗೆ ಸಾಧು ಅಗಸ್ಟೈಯಿನ್, ಭಾರತಕ್ಕೆ, ದಾಂಡಿಯಾತ್ರೆಯಿಂದ ಬಾಪೂಜಿ ಇಂಥ ಶಕ್ತಿ ಕೊಟ್ಟರು. ಆಗ ಈ ಧೀರನಾಯಕನು ಸಿಸಿಲಿಯ ವಿಜಯಕ್ಕಾಗಿ ಮುನ್ನಡೆದು ಸಾಗುವಾಗ ಅಖಿಲ ಜಗತ್ತೇ ವಿಸ್ಮಯಾದರದಿಂದ ನೋಡಿತು. ಇಟಲಿಯ ದಾಸ್ಯವಿಮೋಚನೆಯಲ್ಲಿಯ ಆತನ ಶ್ರದ್ಧೆ ಸಾಮರ್ಥ್ಯ-ಸಾರ್ಥಕ್ಯಗಳನ್ನು ಪಡೆಯಲಿತ್ತು.

ಸರ್ ಜೇಮ್ಸ್ ಹಡ್ಸನ್‌ನು ಗ್ಯಾರಿಬಾಲ್ಡಿಗೆ ಕಾರ್ಯದಲ್ಲಿ ಸಹಾನುಭೂತಿ ತೋರಿಸಿದನು ಮತ್ತು ೧೮೬೦ ರ ಮೇ ೧೧ ಕ್ಕೆ ಆತನು ಮರ್ಸಾಲಾದಲ್ಲಿ ಇಳಿದಾಗ, ಎರಡು ಬ್ರಿಟಿಶ ಯುದ್ಧ ನೌಕೆಗಳು ಸಂರಕ್ಷಣೆಯನ್ನು ಕೊಟ್ಟವು. ಇದಕ್ಕಿಂತ ಹೆಚ್ಚಿನ ಸಕ್ರಿಯ ಸಹಾನುಭೂತಿ ಇನ್ನೇನುಬೇಕು ? ೨೧ ನೇ ಮೇ ದಿನ ಸಲೇಮಿಯಲ್ಲಿ ಗ್ಯಾರಿಬಾಲ್ಡಿಯು ತಾನು ಸಿಸಿಲಿಯ ಸರ್ವಾಧಿಕಾರಿಯೆಂದು ಸಾರಿದನು ಮತ್ತು ಮೂರು ದಿನಗಳಲ್ಲಿ ಕಲಾತಾಫಿಮಿ ಎಂಬಲ್ಲಿ ಅವನ ಸಾವಿರದ ಪಡೆಯು ಅದಕ್ಕೂ ಮಿಗಿಲಾದ ಸಂಖ್ಯೆಯ ಫ್ರೆಂಚ ದಂಡುಗಳನ್ನು ದಂಡಿಸಿ ಸೋಲಿಸಿ ಶ್ರೇಯವನ್ನು ಪಡೆಯಿತು. ಗ್ಯಾರಿಬಾಲ್ಡಿಯ ಕೆಂಪಂಗಿ ಸೈನಿಕರ ಶಸ್ತ್ರಾಸ್ತ್ರಗಳು ಕೆಳತರಗತಿಯವಿದ್ದರೂ ಅವರಿಗೆ ತಮ್ಮ ಆದರ್ಶದಲ್ಲಿದ್ದ ಶ್ರದ್ಧೆ, ತಮ್ಮ ನಾಯಕರ ಬಗ್ಗೆ ಇದ್ದ ಅತ್ಯಂತ ಭಕ್ತಿಗಳು ಪ್ರಬಲಶಕ್ತಿಗಳಾಗಿದ್ದವು. ಇಂಥ ಭಾವನಾವೇಶ ಭಕ್ತಿಗಳಿಂದ ಮೂರುವಾರಗಳಲ್ಲಿ ಪಾಲೆರ್ನೋವನ್ನೇ ವಶಪಡಿಸಿಕೊಂಡರು.

ಗೆಲುವಿನಂಥ ಯಶೋದಾಯಕಯುಕ್ತಿ ಬೇರೊಂದಿಲ್ಲ. ಸೋತ ಕ್ರಾಂತಿಕಾರನು ಬಂಡುಗಾರನೆನಿಸಿಕೊಳ್ಳುತ್ತಾನೆ,-ಗಲ್ಲಿಗೇರುತ್ತಾನೆ. ಗೆದ್ದ ಬಂಡುಗಾರನು ಕ್ರಾಂತಿವೀರನೆನಿಸಿಕೊಳ್ಳುತ್ತಾನೆ,-ಗದ್ದುಗೆಯನ್ನೇರುತ್ತಾನೆ. ವಿಜಯವೇ ಸತ್ಯವೆಂದು ನಂಬುವದು ಲೋಕದ ಲುಬ್ಧವೃತ್ತಿಯ ರೀತಿ. ಗ್ಯಾರಿಬಾಲ್ಡಿಯ ಪಕ್ಷಕ್ಕೆ ಈಗ ಜನತೆ ಸ್ವಸ್ತಿ ಎಂದಿತು. ಇಟಲಿಯ ಎಲ್ಲೆಡೆಗಳಿಂದಲೂ ಸಾವಿರಾರು ಸ್ವಯಂ ಸೇವಕರೂ ಪೀಡ್‌ಮೊಂಟಕ್ಕೆ ತಂಡಗಟ್ಟಿ ಬಂದರು. ಏಕೆ ? ವ್ಹಿಕ್ಟರ ಇಮ್ಯಾನುಲಿನ ತ್ರಿವರ್ಣ ಧ್ವಜದ ನೆರಳಿನಲ್ಲಿ ತಮ್ಮ ತಾಯಿನಾಡನ್ನು ದಬ್ಬಾಳಿಕೆಗಾರರಿಂದ ಬಿಡುಗಡೆಗೊಳಿಸಲಿಕ್ಕೆ. ಸುಮಾರು ೨೦,೦೦೦ ಸ್ವಯಂ ಸೇವಕರು ಜಿನೋವಾದಿಂದ ಲೆಗ್‌ಹಾರ್ನದಿಂದ ಸಿಸಿಲಿಗಾಗಿ ದಕ್ಷಿಣ ಸಮುದ್ರವನ್ನು ಲಂಘಿಸಿದರು. ಇವರಿಗೆ ಸಂಬಳದ ಆಶ್ವಾಸನವಿದ್ದಿಲ್ಲ. ಸನ್ಮಾನದ ಸಂಚುಕಾರ ಸಿಕ್ಕಿದ್ದಿಲ್ಲ. ಕೇವಲ ಸಾಹಸ, ಸೇವೆ ಅವರೆದುರಿಗೆ ನಿಂತಿದ್ದವು. ದೇಶವನ್ನು ಬಿಡುಗಡೆಗೊಳಿಸಬೇಕಿತ್ತು. ಅವರ ವೇತನವೊ ? ಅಧಿಕಾರಿಗಳಿಗೆ ಎರಡು ಫ್ರೆಂಕುಗಳು. ಮಿಕ್ಕವರಿಗೆ ಒಂದು ಇಲ್ಲವೆ ಅದಕ್ಕೂ ಕಡಿಮೆ ಫ್ರಾಂಕು. ಇದು ಅವರ ದಿನಗೂಲಿ-ವಿಜಯ ಯಾತ್ರೆಯ ವೀರಶುಲ್ಕ !

ತನ್ನ ದಳಪತಿಯೊಬ್ಬನಿಗೆ ಗ್ಯಾರಿಬಾಲ್ಡಿ ಕೇಳಿದನು. 'ನಿನಗೆ ಸಂಬಳದಿಂದ ಏನಾಗಬೇಕು ?' ದೇಶ ಭಕ್ತನು ತನ್ನ ಗಂಜಿಯು ಬಟ್ಟಲನ್ನು ಕುಡಿದು ದೇಶದ ಕಾರ್ಯವು ಸುಸೂತ್ರ ಸಾಗುವಂತಾದರೆ ಸಾಕು, ಇನ್ನೇನು ಬೇಕು ?

ಸ್ವಾರ್ಥದ ಸಂಧಾನಕ್ಕಿಂತ ಆದರ್ಶದ ಅನುಸಂಧಾನ, ಸಾರ್ಥಕತೆಯ ಸಮಾಧಾನ ಇವೇ ಜೀವನದ ಸೌಖ್ಯಸಾರಕ್ಕೆ ನಿಜವಾದ ನಿಧಾನ. ಮಿಕ್ಕುದೆಲ್ಲದರ ಕುರಿತು ಸಾವಧಾನ !

ಗ್ಯಾರಿಬಾಲ್ಡಿಯ ದಂಡು ತಮ್ಮ ಮೂರು ಪಟ್ಟು ಸಂಖ್ಯೆಯ ಶಸ್ತ್ರಸಜ್ಜ ಸುಸಂಘಟಿತ ದಂಡುಗಳನ್ನು ಎದುರಾಗಿ ತಾಗಿ ಸದೆಬಡಿಯಿತು.

ಗ್ಯಾರಿಬಾಲ್ಡಿಯ ಕ್ರಾಂತಿಕಾರ್ಯ ಪೂರ್ತಿಯಾಗಲಿಕ್ಕೆ ಪೋಪನ ಸಂಸ್ಥಾನಗಳ ಮೇಲೂ ದಾಳಿಮಾಡುವದು ಅವಶ್ಯವಿತ್ತು. ಅರಸ ಇಮ್ಯಾನುಲನ ಮಂತ್ರಿ ಕಾವೋರನು ಗ್ಯಾರಿಬಾಲ್ಡಿಯ ಯೋಜನೆಗೆ ಅಡ್ಡಾಗಾಲು ಹಾಕಿದನು. ಆತನಿಗೆ ತನ್ನ ಅರಸನ ಸ್ವಾರ್ಥವನ್ನು ಸಾಧಿಸುವದಿತ್ತು. ಈ ಕ್ರಾಂತಿಯ ಕಾರ್ಯ ಅದಕ್ಕೆ ಸಾಧನವಾಗಿ ಆತ ನೋಡುತ್ತಿದ್ದನು. ಗ್ಯಾರಿಬಾಲ್ಡಿಯು ಸಿಸಿಲಿಯನ್ನು ಪೀಡ ಮೊಂಟದ ರಾಜಪೀಠಕ್ಕೆ ಪಾದಪೀಠವಾಗಿ ಮಾಡಲೆಂದು ಗ್ಯಾರಿಬಾಲ್ಡಿಯನ್ನು ಕಾವೋರನು ಒತ್ತಾಯಪಡಿಸಿದನು. ಆದರೆ ಕೆಂಪಂಗಿಯ ಕಲಿಯ ಕನಸುಗಳು ಬೇರೆಯೇ ಇದ್ದವು. ಅರಸನ ಕಟ್ಟಪ್ಪಣೆಯನ್ನು ಲೆಕ್ಕಿಸದೆ ಆತನು ಮೆಸ್ಸಿನಾದ ಸಾಮುದ್ರಧುನಿಯನ್ನು ದಾಟಿದನು ಮತ್ತು ರೆಗ್ಗಿಯೋದ ಪ್ರಸಿದ್ಧ ಕಾಳಗವನ್ನು ಗೆದ್ದನು. ೧೮೬೦ ರ ಸಪ್ಟೆಂಬರದ ೭ ನೇ ದಿನ ಗ್ಯಾರಿಬಾಲ್ಡಿಯ ವಿಜಯವಾಹಿನಿಯು ನೇಪಲ್ಸ ನಗರವನ್ನು ಪ್ರವೇಶಿಸಿತು. ಗ್ಯಾರಿಬಾಲ್ಡಿಯನ್ನು ಧಿಃಕರಿಸಿದ ಅರಸನೂ ಅವರ ಮಂತ್ರಿಯೂ ಕಾವೋರನೂ ಅವನನ್ನು ಹೊಗಳುತ್ತ ಎರಡೂ ಸಿಸಿಲಿಗಳ ಕಿರೀಟಗಳನ್ನು ಪೀಡಮೊಂಟದ ಮುಕುಟದೊಡನೆ ಕೂಡಿಸಲಿಕ್ಕೆ ನೇಪಲ್ಸಕ್ಕೆ ತಾನೇ ಆಗಮಿಸಿದನು.

ಇಟಲಿಯ ಅಮೇರಿಕೆಯು ೧೮೬೦ ರಲ್ಲಿ ಗ್ಯಾರಿಬಾಲ್ಡಿಯ ವಿಜಯ ಯಾತ್ರೆಯಿಂದ ಪ್ರಾರಂಭವಾಗಿ ನೇಪಲ್ಸವನ್ನು ಅವನು ವಶಮಾಡಿಕೊಳ್ಳುವವರೆಗೆ ನಡೆಯಿತು. ಅವನ ದಾಳಿಗಳು ಇಟಾಲಿಯನ್ನರಿಗೆ ಹಾಗೂ ಆ ಕಾಲದ ಜಗತ್ತಿನ ತರುಣರಿಗೆ ಸ್ಫೂರ್ತಿದಾಯಕವಾದುದರಲ್ಲಿ ಆಶ್ಚರ್ಯವೇನು ? ೪೦೦೦೦ ಫ್ರೆಂಚರು ಸೈನ್ಯವನ್ನು ಸದೆಬಡಿದ ಅವನ ವೀರವಿಕ್ರಮವು ತರುಣರನ್ನು ಮುಗ್ಧಗೊಳಿಸಿತು.

[illegible] ನಂತರ ಗ್ಯಾರಿಬಾಲ್ಡಿಯ ಸೇವಾನಿವೃತ್ತಿಯು ಕೇವಲ ತಾತ್ಕಾಲಿಕ [illegible] ೧೮೬೧ ರಲ್ಲಿ ಹೊಸಸರಕಾರ ಸ್ಥಾಪಿತವಾಗಿ ಆತನಿಗೆ ಪ್ರಾತಿನಿಧ್ಯ [illegible] ಬಿ[illegible]ಡೆಯ ಹಿಗ್ಗಿನಲ್ಲಿ ಹೊಸಹುರುಪಿನ ಹೆಮ್ಮೆಯಲ್ಲಿ ಅರ [illegible]ೊತ್ತಿ[illegible] ಕೊಣೆಗೇಡಾಯಿತು. ಗ್ಯಾರಿಬಾಲ್ಡಿಗೆ ಪ್ರಾತಿನಿಧ್ಯವಿತ್ತ ಮಾತ್ರಕ್ಕೆ ಸ್ವಾತಂತ್ರ್ಯದ ಸ್ವಯಂಸೇವಕರಿಗೆ ಯೋಗ್ಯ ಪುರಸ್ಕಾರ ಕೊಟ್ಟಂತಾಯಿತೇ ? ಜಗತ್ತಿನ ರೀತಿಯಿದು. ಕ್ರಾಂತಿಯ ಬಿರುಗಾಳಿಯಾಗುವದೆಂತು ? ಬಿರುಗಾಳಿ ಎದ್ದು, ಧೂಳು ತರಗು, ಕಸ–ಕಡ್ಡಿಗಳಿಂದ ತುಂಬಿ ಎತ್ತಲೋ ಒಯ್ದು ನೆಲ ಮುಗಿಲನ್ನು ಹಸನಗೊಳಿಸಿದಮೇಲೆ ಮುಂದಿನ ಒಳಿತಿನ ಪೈರನ್ನು ಬೆಳೆಸಲು ಬೇಕಾದ ಶಾಸನದ ಸಂತತ ಧಾರೆಯು ಹಿಂದಿನ ಬಿರುಗಾಳಿಯ ವಿಪ್ಲವಕ್ಕೆ ಮತ್ತೆ ತಲೆ ಎತ್ತದಂತೆ ಮಾಡುತ್ತದೆ.

ಸೈನ್ಯದ ಸ್ವಯಂಸೇವಕ ದಲಗಳು ಕ್ರಾಂತಿಯಶಸ್ವಿಯಾದೊಡನೆ ಒಂದು ರಾಷ್ಟ್ರದ ಹೊಸ ಸೇನಾಬಲದ ಅಂಗವಾಗಿ ಅರಗಿ ಹೋಗಬೇಕು ಅಥವಾ ಅನವಶ್ಯಕ ಅಂಶ ವೆಂದು ಚವರಿ ಕರಗಬೇಕು. ಅದು ಕ್ರಾಂತಿಯ ಸ್ವರೂಪವನ್ನೇ ಹೊಂದಿ ಕೊಂಡಿರುತ್ತದೆ. ಭಾರತಕ್ಕೆ ಸ್ವರಾಜ್ಯ ಸತ್ತೆ ಬಂದಿತು. ಆದರೆ ಸುಭಾಸರ ಅಝಾದ ಹಿಂದೆ ಸೇನೆಯ ಗತಿ ಏನಾಯಿತು ? ಹಾಗೂ ಹಿಟ್ಲರ ಅಧಿಕಾರ ಪಟ್ಟವನ್ನೇರಿದ ನಂತರ ಆತನ ಬಿರುಗಾಳಿ ಬಂಟರ ಗತಿ ಏನಾಯಿತು ? ಹಾಗೆಯೇ ಗ್ಯಾರಿಬಾಲ್ಡಿಯ ಪಡೆಗಳ ಭವಿತವ್ಯಕ್ಕೆ ಭೀತಿ ಉಂಟಾಯಿತು. ಅವುಗಳ ಪ್ರೇರಣೆಯ ತತ್ವವೇ ಅವುಗಳ ಮುಂದಿನ ಅಸ್ತಿತ್ವಕ್ಕೆ ಬಾಧಕವೆನಿಸುವದು ಸ್ವಾಭಾವಿಕ. ವಿದ್ರೋಹ, ಪ್ರತಿಭಟನೆ, ಪ್ರತಿಷ್ಠಿತ ಸತ್ತೆಗೆ ಆವ್ಹಾನ. ಇ ನೇ ಕ್ರಾಂತಿಸೇನಾದಲಗಳ ಜೀವಾಳದ ತತ್ವಗಳಾಗಿದ್ದವು. ಅವನ್ನು ಇನ್ನು ಘಟನಾತ್ಮಕವಾಗಿ ಸ್ವೀಕರಿಸುವದೆಂತು ? ಆ ಸೈನಿಕದಲಗಳನ್ನು ಪುರಸ್ಕರಿಸುವದೆಂತು ? ಈ ಕುರಿತು ಮಂತ್ರಿ ಕಾವೋರ ಮತ್ತು ಕ್ರಾಂತಿವೀರ ಗ್ಯಾರಿಬಾಲ್ಡಿ ಇವರೀರ್ವರಲ್ಲಿ ತೀವ್ರ ಭೇದ ಉಂಟಾಯಿತು. ತನ್ನ ಕೆಂಪಂಗಿಯವರನ್ನು ಸರಕಾರವು ಸರಿಯಾಗಿ ನಡೆಸಿಕೊಂಡಿಲ್ಲ. ಅವರೊಡನೆ ಅನ್ಯಾಯದ ವರ್ತನೆ ಕಂಡಿತೆಂದು ಗ್ಯಾರಿಬಾಲ್ಡಿ ದೂರಿಕೊಂಡನು. ಮುಂದೆ ಕಾವೋರನ ಉತ್ತರಾಧಿಕಾರಿಯಾಗಿ ಮಂತ್ರಿಪದಕ್ಕೆ ಬಂದ ರಿಕ್ಯಾಸೊಲಿ ಎಂಬವನು ಈ ಕೆಂಪುಪಡೆಗಳನ್ನು ಸರಕಾರದ ಸೈನ್ಯದಲ್ಲಿ ನಿಯಮಾನುಸಾರವಾಗಿ ಸೇರ್ಪಡೆಮಾಡಿ [illegible]ದ ಅನ್ಯಾಯ ದೂರಮಾಡಿದನು.

ಇನ್ನು ಸಮಗ್ರ ಇಟಲಿ ಒಂದಾಗಿದ್ದಿಲ್ಲ. ಮರುವರ್ಷವೇ ಗ್ಯಾರಿಬಾಲ್ಡಿಯು ರೋಮ ನಗರದ ಮೇಲೆ ದಾಳಿ ಮಾಡಿದನು. ಆ ದಾಳಿಯಲ್ಲಿ ಅವನಿಗೆ ಗಾಯವಾಯಿತು.

ಅವನನ್ನು ಎಸ್ಪ್ರೊವೊಂಟೇ ಎಂಬಲ್ಲಿ ಸೆರೆಹಿಡಿಯಲಾಯಿತು. ಅಷ್ಟರಲ್ಲಿ ಎಲ್ಲ ಯುದ್ಧ ಕೈದಿಗಳನ್ನು ಬಿಡುಗಡೆಮಾಡಬೇಕೆಂಬ ಸಾರ್ವತ್ರಿಕ ಆಜ್ಞೆ ಹೊರಟಿತು. ಆ ಮೂಲಕ ಆತನೂ ಬಿಡುಗಡೆಯಾದನು. ಮತ್ತೆ ಕಾಪ್ರೇರಾಕ್ಕೆ ಹೋಗಿ ಉಳಿದನು. ೧೮೬೪ ರಲ್ಲಿ ಲಂಡನಿಗೆ ಭೆಟ್ಟಿಕೊಟ್ಟನು. ಅನಂತರ ಆಸ್ಟ್ರೀಯಾದೊಡನೆ ಇಟಲಿಯ ಯುದ್ಧ ಆರಂಭವಾಯಿತು. ಆಗ ತನ್ನ ದೇಶದ ರಕ್ಷಣೆಗಾಗಿ ಹೋರಾಡಲು ಅವನ ಕತ್ತಿಗೆ ಕೆಲಸ ದೊರೆಯಿತು. ಆಸ್ಟ್ರಿಯಾವು ಇಟಲಿಯ ಭಾಗವಾದ ವೇನೀಶಿಯಾವನ್ನು ಇನ್ನೂ ಆಳುತ್ತಿತ್ತು. ೧೮೬೬ ರ ದಂಡಯಾತ್ರೆಯಲ್ಲಿ ಆ ಭಾಗವು ಸಂಯುಕ್ತ ಇಟಲಿಗೆ ಸೇರಿಸಲ್ಪಟ್ಟಿತು.

ಅನಂತರ ಫ್ರಾನ್ಸ್, ಪ್ರುಸಿಯಾಗಳ ನಡುವೆ ಯುದ್ಧ ಆರಂಭವಾಯಿತು. ಈ ಸಲ ಫ್ರಾನ್ಸದ ಪಕ್ಷದಲ್ಲಿ ಒಂದು ಸ್ವಯಂಸೇವಕ ಸೇನೆಯನ್ನು ನಿರ್ಮಿಸಿ ನೇತೃತ್ವ ವಹಿಸಿ, ಗ್ಯಾರಿಬಾಲ್ಡಿಯು ಹೋರಾಡಿದನು. ಗ್ಯಾರಿಬಾಲ್ಡಿಗೆ ಸ್ವಾತಂತ್ರ್ಯದ ಮೇಲೆ ಎಲ್ಲಿಯೇ ಆಕ್ರಮಣವಾದರೂ ಅದು ತನ್ನ ಆದರ್ಶದ ಮೇಲೆ ಆಘಾತವೆಂದೇ ಅನಿಸುತ್ತಿತ್ತು.

೧೮೭೧ ರಲ್ಲಿ ಗ್ಯಾರಿಬಾಲ್ಡಿಯ ಯಾವಜ್ಜೀವನದ ಪರಿಶ್ರಮಕ್ಕೆ ಸಾಫಲ್ಯದ ಕಳಸವಿಟ್ಟಿತು. ವ್ಹಿಕ್ಟರ ಇಮ್ಯಾನುಯೆಲ್ಲನು ಸಂಯುಕ್ತ ಇಟಲಿಯ ಅಧಿಪತಿ ಯಾದನು. ಯೋಧನ ಖಡ್ಗ ಒರೆಗಂಡಿತು. ದೇಶಭಕ್ತನ ದೀಕ್ಷೆ ಕೊನೆಗೊಂಡಿತು. ರಾಷ್ಟ್ರನಿರ್ಮಾಪಕನು ತನ್ನ ಹೊಸ ರಾಷ್ಟ್ರದ ಪ್ರತಿಷ್ಠೆ ಮಾಡಿದನು.

೧೮೭೪ ರಲ್ಲಿ ಗ್ಯಾರಿಬಾಲ್ಡಿಯು ರೋಮದ ಪ್ರತಿನಿಧಿಯಾಗಿ ಆರಿಸಿ ಬಂದನು. ಅವನ ಇಳಿವಯಸ್ಸಿನ ಒಂದು ಘಟನೆಯು ಆತನ ವ್ಯಕ್ತಿತ್ವದ ಹಾಗೂ ಆದರ್ಶದ ಒಳ್ಳೇ ಪರಿಚಾಯಕವಾಗಿದೆ. ಅಂದಿನ ಮಂತ್ರಿಮಂಡಳವು ಈ ಮಹಾದೇಶಭಕ್ತನಿಗೆ ಅವನ ಸೇವೆಯ ಸ್ಮರಣೆಯಲ್ಲಿ ೪೦,೦೦೦ ಪೌಂಡಿನ ಹಮ್ಮಿಣಿಯನ್ನು ೨೦,೦೦೦ ಪೌಂಡುಗಳ ವರ್ಷಾಶನವನ್ನು ಅರ್ಪಿಸಲು ಬಯಸಿತು. ಆ ಮಂತ್ರಿಮಂಡಳವು ಜನತೆಯದಿದ್ದಿಲ್ಲ. ಅದು ಮೇಲ್ವರ್ಗದ ಸಾಂಪ್ರದಾಯಿಕ ಅಭಿಪ್ರಾಯದವರದಾಗಿತ್ತು. ಗ್ಯಾರಿಬಾಲ್ಡಿ ಈ ಉದಾರ ಕೊಡುಗೆಯನ್ನು ಅಷ್ಟೇ ಔದಾರ್ಯದಿಂದ ನಿರಾಕರಿಸಿ ಬಿಟ್ಟನು. ಮುಂದೆ ಜನತೆಯ ಎಡಪಕ್ಷವು ಅಧಿಕಾರಕ್ಕೆ ಬಂದಿತು. ಆಗ ಅದೇ ನಿಧಿ ಸಮರ್ಪಣೆಯ ಸಂಕಲ್ಪವನ್ನು ಮತ್ತೆ ಮಾಡಿತು. ಆಗ ಮಾತ್ರ ಗ್ಯಾರಿಬಾಲ್ಡಿಯು ಗೌರವ ಧನವನ್ನು ಹರ್ಷದಿಂದ ಸ್ವೀಕರಿಸಿದನು.

ಒಂದು ಹಿಡಿಯಷ್ಟು ಪುಟ್ಟ ರಾಜ್ಯಗಳೊಳಗಿಂದ ಪೆಟ್ಟುತಿಂದು ನಷ್ಟಪಟ್ಟ ಸಂಸ್ಥಾನ ಗಳಿಂದ ಏಕಮುಖವಾದ, ಐಕ್ಯಯುಕ್ತವಾದ ಇಟಲಿಯ ರಾಷ್ಟ್ರವನ್ನು ನಿರ್ಮಿಸಲು

ಮೂರ್ತಿವೇತ್ರ, ಸ್ಫೂರ್ತಿ ಇತ್ರ, ಮಹಾಶಕ್ತಿಗಳಲ್ಲಿ ಗ್ಯಾರಿಬಾಲ್ಡಿಯು ಮಿಕ್ಕವರಿಗಿಂತ ಮಿಗಿಲಾದ ಮಹಿಮೆಯವನು. ಈ ಕೆಂಪಂಗಿಯ ಕಡುಗಲಿಯು ತನ್ನ ಜ್ವಾಲಾಮುಖಿಯ ಅಗ್ನಿ ಲಾಂಛನವನ್ನೆತ್ತಿದ ಕಪ್ಪು ಧ್ವಜದ ಚಂಚಲ ಛಾಯೆಯಲ್ಲಿ ನಿಂತು, ಶಾಲಿವಾಹನನಂತೆ ಮಣ್ಣಿನ ಗೊಂಬೆಗಳಲ್ಲಿ ಗಂಡು ಕೆಚ್ಚಿನ ಪ್ರಾಣಪ್ರತಿಷ್ಠೆ ಮಾಡಿ, ಶತ್ರುಗಳನ್ನು ಸವರಿ ಶಕಕರ್ತನಾದನು. ಅವನಿಗಿಂತ ಹೆಚ್ಚು ಬುದ್ಧಿಶಕ್ತಿಯ, ಸಿದ್ಧಿಯುಕ್ತಿಯ ಮುತ್ಸದ್ದಿಗಳು ಇದ್ದಿಲ್ಲವೆ ? ಇದ್ದರು. ಕಾವೂರ, ಮಹಾತ್ಮಾ ಮ್ಯಾಝಿನಿ, ವಿಕ್ಟರ ಇಮ್ಯಾನುಯೆಲ್ ಮುಂತಾದವರು ಏನು ಕಡಿಮೆ ಕೆಚ್ಚಿನವರೇ ? ಆದರೆ ಅವರು ಹೊಂಚು ಸಂಚುಗಳ ಪ್ರಪಂಚದಲ್ಲಿ ತೊಡಗಿ ಹೆಣಗುತ್ತಿದ್ದಾಗ ಈ ಕಡಲಿನಿಂದೆದ್ದು ಬಂದ ಕಲಿಯು ಸುತ್ತಲೂ ದಾರಿಕಡಿದು ವಿಜಯಗಳಿಗೆ ಮುನ್ನುಗ್ಗಿ ನಡೆದನು. ಆ ಮುನ್ನಡೆಯೇ ಮ್ಯಾಝಿನಿಯೇ ಮುಂತಾದ ಮುತ್ಸದ್ದಿಗಳ ಕೈಗೆ ಸಾಮರ್ಥ್ಯವನ್ನು ತಂದು ಕೊಟ್ಟಿತು.

ಟ್ರೆವೆಲಿಯನ್ ಎಂಬ ಮೇಧಾವಿಯು ಅವನ ಕುರಿತು ಹೀಗೆ ಸಾರ್ಥಕವಾಗಿ ಬರೆದಿಟ್ಟಿದ್ದಾನೆ. 'ಬಾಯಕನ್ ಕವಿಯ ಗ್ರೀಸದಲ್ಲಿಯ ಕೆಲವು ವಾರಗಳ ವೀರ ಚರಿತ್ರವನ್ನು ಬಿಟ್ಟರೆ, ಇವನದೊಬ್ಬನದೇ ಕಾರ್ಯವೀರನಾದುದರ ಕವಿಯ ಅದ್ವಿತೀಯ ಉದಾಹರಣೆಯಾಗಿರುತ್ತದೆ. ಕಾರ್ಯರೂಪದಲ್ಲಿ ಬರೆದ ಕವಿತೆಯೇ ಲಕ್ಷಾಂತರ ಲೋಕಕೋಟಿಯ ಹೃದಯದಲ್ಲಿ ಜೀವಂತವಾಗಿ ಉಳಿಯುತ್ತದೆ. ಅಂಥ ಲೋಕಕ್ಕೆ ಇತಿಹಾಸದ ಪಾಠಾಕ್ಷರಗಳೂ, ಕಾವ್ಯದ ಪದ್ಯಾಕ್ಷರಗಳೂ ಕೂಡಿಯೇ ತೆರೆಯದ ಹೊತ್ತಿಗೆಯಾಗಿರುತ್ತವೆ.' ಇಂಥ ಮಹಾತ್ಮರು ಕೃತಿಕವಿಗಳು. ಜೀವನವನ್ನೇ ಕಾವ್ಯವಾಗಿ, ಸಮಾಜವನ್ನೇ ರಸಮತ್ತಾಗಿ, ಇತಿಹಾಸವನ್ನೇ ನಾಟ್ಯರೂಪಕವಾಗಿ ಆಚರಣದಲ್ಲಿಯೇ ನಿರೂಪಿಸಿ, ಕಾಲದ ಶಿಲೆಯನ್ನೇ ಕೊರೆದು, ಸಜೀವ ಸ್ಮೃತಿಯ ವಾಸ್ತವದ ವಾಸ್ತುಶಿಲ್ಪವನ್ನು ನಿರ್ಮಿಸಿ ಧನ್ಯರಾಗುವರು.

ಗ್ಯಾರಿಬಾಲ್ಡಿಯ ಅಂತ್ಯಕಾಲದ ಚಿತ್ರವನ್ನು ಅದೇ ಪ್ರಭಾವಶಾಲಿ ಲೇಖಕನು ಹೀಗೆ ಬಣ್ಣಿಸಿದ್ದಾನೆ. '೧೮೮೨ರಲ್ಲಿ ಕಪ್ರೇರಾದಲ್ಲಿ ಅವನ ಬಿಳಿಯ ಮನೆಯಲ್ಲಿ ಜ್ಯೂನತಿಂಗಳ ಒಂದು ಸಂಜೆಗೆ, ಆ ನಿರ್ಯಾಣದ ನಿಮಿಷವು ಬಂದಿತು. ಆ ಹಳೆಯ ನಾವಿಕನೂ, ಒಕ್ಕಲಿಗನೂ, ಯೋಧನು ಆದ ಮುದಿ ಜೀವಿಯು ತಲೆಗಿಂಬುಗಳ ರಾಶಿಯಲ್ಲಿ ತಲೆಯನ್ನು ಸಾವರಿಸಿ ಎತ್ತಿ ಇಟ್ಟು, ಹೊರಗೆ ನೋಟ ಹೊರಳಿಸಿ ಬಿದ್ದಿದ್ದನು. ಕಡಲಿನ ತೆರೆಗಳನ್ನು, ಕಲ್ಲು ಬಂಡೆಗಳನ್ನು, ಚಿನ್ನದ ಲೇಪದಿಂದ ಥಳಕಿಸುವ ಬಿಸಿಲನ್ನು ನೋಡಲಿಕ್ಕೆ. ಅವನ ಜೀವನವು ಸಾವಕಾಶವಾಗಿ ಇಳಿತದ ನೀರಿನಂತೆ ಹರಿದು ಹೋಗುತ್ತಿರುವಾಗ ಎರಡು ಪುಟ್ಟ ಹಕ್ಕಿಗಳು–ಅವುಗಳನ್ನು

ಆತ ಈಲುಮಾಡಿದ್ದನು; ತನಗೆ ಹೆದರದಂತೆ ಹೊರಬಯಲಿನಿಂದ ಹಾರಿ ಒಳಗೆ ಬಂದು, ಕಿಡಕಿಯ ಚೌಕಿನಲ್ಲಿ ಚಿಲಿಪಿಲಿಗೈಯುತ್ತ ಕೂತವು. ಹತ್ತಿರನಿಂತ ಪರಿಚಾರಕರು ಮುದಿ ಯಜಮಾನನಿಗೆ ಕಾಯಿಲೆಯಲ್ಲಿ ವಿಶ್ರಾಂತಿಸಿಗಬೇಕೆಂದು ಜಾಗ್ರತೆವಹಿಸುತ್ತ, ಆ ಸದ್ದನ್ನು ಅಡಗಿಸಲು ಆ ಹಕ್ಕಿಗಳ ಜತೆಯನ್ನು ಅಡ್ಡಿ ಹಾರಿಸಲು ಮುಂದಾದರು. ಆಗ ಆ ಮುದಿಕಂಠದಿಂದ ಲೋಕ ಪರಿಚಿತವಾದ ವಿನಯ ಧ್ವನಿಯು ಮತ್ತೆ ಕೇಳಿಸಿತು.' 'ಆ ಚಿಕ್ಕ ಹಕ್ಕಿಗಳು ಒಳಗೆ ಬರಲಿ; ನಾನು ಹೋದಮೇಲೆಯೂ ಅವುಗಳಿಗೆ ಯಾವಾಗಲೂ ಕಾಳು, ನೀರು ಕೊಡಿರಿ' ಅನೇಕ ದಂಡಾಳುಗಳಿಗೆ ಆಜ್ಞಾಪಿಸುವ ಆ ಧೀರ ಧ್ವನಿಯು, ಹೀಗೆ ಕೊನೆಯ ನಿರೂಪ ವನ್ನು ತಿಳಿಸಿಹೇಳಿದನಂತರ, ಆತನು ತನ್ನ ಕೊನೆಯ ಉದಂಡ ದಂಡಯಾತ್ರೆಗಾಗಿ ಹೊರಟನು. ●

# ಬಿಸ್ಮಾರ್ಕ

೧೯೪೭ ನೆಯ ಅಗಷ್ಟ ೧೫ ನೇ ದಿನಾಂಕದಿಂದ 'ಬಿಸ್ಮಾರ್ಕ' ಎಂಬ ಹೆಸರು, ನಮ್ಮಲ್ಲಿಯ ಓದಬಲ್ಲ ಜನಕ್ಕೆ ಒಮ್ಮೆಲೇ ವಿಶೇಷ ಪರಿಚಯದ್ದಾಗತೊಡಗಿತು. ಏಕೆಂದರೆ ನಮ್ಮ ಹೊಸ ಸ್ವರಾಜ್ಯದ 'ಉಕ್ಕಿನ ಮನುಷ್ಯ' ಭಾರತದ ಗಣ ರಾಜ್ಯದ ವಿಘ್ನಹರ್ತ ಗಣೇಶನೆನಿಸಿದ, ಶ್ರೀ ವಲ್ಲಭಭಾಯಿ ಪಟೇಲರಿಗೆ 'ಬಿಸ್ಮಾರ್ಕ' ಎಂದು ಕರೆಯಿಸಿಕೊಳ್ಳುವ ಯೋಗ ಪ್ರಾಪ್ತವಾಯಿತು. ದೇಶದ ಭೂಪಟದ ಮೇಲೆ ಹಳದಿಯ ಬಣ್ಣದ ಸಂಸ್ಥಾನಗಳನ್ನೆಲ್ಲ ಕರಗಿಸಿ, ಅಖಂಡ ಭಾರತದ ಸ್ವಾಯತ್ತವಾದರೂ ಸ್ವಚ್ಛಂದವಲ್ಲದ ಘಟಕಗಳಾಗಿ ಅವುಗಳನ್ನೆಲ್ಲ ಎರಕಹೊಯ್ದು, ನಮ್ಮ ಸ್ವತಂತ್ರ ರಾಷ್ಟ್ರದ ರಚನೆಯು ಸಮರ್ಥವಾಗುವಂತೆ ಮಾಡಿದ ವಲ್ಲಭ ಭಾಯಿಯುವರನ್ನು ಯಥಾರ್ಥ ಪ್ರಶಂಸಕರು 'ಭಾರತದ ಬಿಸ್ಮಾರ್ಕ' ಎಂದು ಕೊಂಡಾಡಿದರು.

ಆದರೂ ಅವರಿಗೆ 'ಬಿಸ್ಮಾರ್ಕ' ಎಂದು ಕರೆಯುವದರಲ್ಲಿಯೇ ಒಂದು ವಿಧದ ಔಚಿತ್ಯವಿತ್ತು. ನಮ್ಮ ರಾಷ್ಟ್ರೀಯತೆಯ ಆದರ್ಶಕ್ಕೆ ಜರ್ಮನಿ ಜಪಾನಗಳ ರಾಷ್ಟ್ರಸಂಘಟನಾ ಚಾತುರ್ಯವು, ತುಂಬ ಸ್ಫೂರ್ತಿಯನ್ನು ಕೊಟ್ಟಿದೆ. ರಾಷ್ಟ್ರದ ಅಖಂಡತೆಯನ್ನು ಸಾಧಿಸಿಕೊಳ್ಳುವ ಕಾರಣಪುರುಷನೆಂದು 'ಬಿಸ್ಮಾರ್ಕ'ನ ಪ್ರತಿಮೆ ಯಾಗಿ ಪ್ರಸಿದ್ಧಿ ಪಡೆಯುವದು, ನಮ್ಮ ಮಹಾ ಮುಖಂಡರಿಗೆ ಹೆಚ್ಚು ಭೂಷಣ.

ಆದರೆ ಈ ಬಿಸ್ಮಾರ್ಕನು ಯಾರು ? ಪ್ರಾಚೀನ ಭಾರತದಲ್ಲಿ ಹೆಸರಾದ ನಿಂಬಾರ್ಕನ ಸಂಬಂಧಿಕನೇ ? ಅಥವಾ 'ಸುವಾರ್ತೆ'ಯನ್ನು ಬೀರಿದ ಮಾರ್ಕನ ಗೋತ್ರದವನೇ ? ಹೀಗೆಲ್ಲ ತರ್ಕದ ನಾಗಾಲೋಟವು ನಡೆಯಬಹುದು; ಆದ್ದರಿಂದ ಬಿಸ್ಮಾರ್ಕನ ಪರಿಚಯವನ್ನು ಮಾಡಿಕೊಂಡರೆ, ಅವನ ಹೋಲಿಕೆ ಯಾರಿಗೆ ಎಷ್ಟು ಸನ್ಮಾನನೀಯ, ಎಷ್ಟು ಸಮಂಜಸ ಎಂಬುದನ್ನು ನಾವು ತಿಳಿಯಬಹುದು ತಾನೇ ?

ಅವನ ಪೂರ್ತಿ ನಾಮಧೇಯ, ಓಟ್ಟೊ ಎಡು ಅರ್ಡ ವ್ಹಾನ್ ಬಿಸ್ಮಾರ್ಕ ಎಂದು. ಜರ್ಮನ್ ಸಾಮ್ರಾಜ್ಯದ ನಿರ್ಮಾಪಕರಲ್ಲಿ ಇವನೇ ಅಗ್ರಣಿಯೆಂದು ನಿರ್ದಾಯ ವಾಗಿ ಹೇಳಬಹುದು. ಅವನು ಅಚ್ಚುಕಟ್ಟಿನ ಪ್ರುಸಿಯನ್‌ನು. ಪ್ರುಸಿಯಾ, ಜರ್ಮನ್ ಜನಾಂಗದ ಮೂಲ ಕಂದ. ಅವನು ನಿರ್ದಯ ನಿರ್ಧಾರ ವೃತ್ತಿಯ, ವೀರ ನಿದ್ದನು. ಅವನ ವೀರಾವೇಶಕ್ಕೆ ಸರಿಯಾಗಿ ಅವನಲ್ಲಿ ಸೈನಿಕ ಪ್ರಜ್ಞೆಯ

ಉತ್ಸಾಹವೂ, ಉಚಿತವೂ ನಿಶ್ಚಿತವೂ ಆದ ಚಟುವಟಿಕೆಗಳ ಕುರಿತು ತತ್ಪರತೆಯೂ ಅವನ ಜೀವನದ ಜೀವಾಳವಾಗಿತ್ತು. ಕೆಲವು ಅಂಶಗಳಲ್ಲಿ, ಕೆಲವು ಪ್ರಸಂಗಗಳಿಂದ ಆತ ಸಹಾನುಭೂತಿ ಶೂನ್ಯನಾದ 'ಕ್ಷಾತ್ರಹೃದಯ ಕಾರ್ಕಶ್ಯ'ದವನೆಂದು ಕಂಡು ಬಂದನು. ಆದರೆ ಈ ಲಷ್ಕರಿ ರೂಕ್ಷತನಕ್ಕೆ ಪ್ರತಿಯಾಗಿ, ಸಾರ್ವಜನಿಕ ಸದ್ವರ್ತನೆಯ ಶುಷ್ಕತನಕ್ಕೆ ಪೂರಕವಾಗಿ, ಆತನಿಗೆ ಇನ್ನೊಂದು ವ್ಯಕ್ತಿತ್ವವೂ ಇತ್ತು. ಅವನು ಏಕನಿಷ್ಠ ಪತಿಯಾಗಿದ್ದನು; ಹಾಗೇ ಕುಟುಂಬವತ್ಸಲ ತಂದೆಯಾಗಿದ್ದನು. ಕಲೆ ಮತ್ತು ಸೌಂದರ್ಯದ ಸೊಗಸನ್ನು ಆತ ಸವಿಯಬಲ್ಲನು. ಎಲ್ಲಕ್ಕೂ ಮೀರಿ ಆತನ ಚರಿತ್ರದ ಜಾಡಿನಲ್ಲಿ, ಚಿನ್ನದ ನೂಲಿನಂತೆ ಅನನ್ಯ ರಾಜನಿಷ್ಠೆಯು ಉದ್ದಕ್ಕೂ ಹೆಣೆದು ಮಿರುಗುವದನ್ನು ನಾವು ನೋಡಬಹುದು. ಅವನಿಗೆ ರಾಷ್ಟ್ರದಲ್ಲಿ ಎಷ್ಟೋ, ಅಷ್ಟೇ ಶ್ರದ್ಧೆ ರಾಜನಲ್ಲಿಯೂ ಇತ್ತು. ಇದರ ಉತ್ತಮ ಉದಾಹರಣೆಯೆಂದರೆ :–ಮುದುಕನಾದಮೇಲೆ ಸಾವಿನಸವಿಯನ್ನು ಹಾರೈಸುತ್ತಿದ್ದಾಗ, ಆತನು ತನ್ನ ಸಮಾಧಿಯ ಕಲ್ಲಿನ ಮೇಲೆ ಕೊರೆದಿಡಲು ಕೆಳಗಿನ ವಾಕ್ಯವನ್ನು ಆಯ್ದುಕೊಂಡನು. 'ಪ್ರಾಮಾಣಿಕ ಜರ್ಮನನೂ, ಚಕ್ರವರ್ತಿ ೧ನೇ ವಿಲಿಯಮನ ಸೇವಕನು.'

ಬಿಸ್ಮಾರ್ಕ–ಕೌಂಟ ಕುಟುಂಬದ ಮನ್ನೆಯವನು; ಅರಸುಕುಲದ ಕುವರ. ಜರ್ಮನಿಯ ಮಹಾಮಾತ್ಯ-(ಚಾನ್ಸೆಲರ) ಉಕ್ಕಿನ ಮನುಷ್ಯ. ಜರ್ಮನ ಸಾಮ್ರಾಜ್ಯದ ಭಾಗ್ಯವಿಧಾತ. ತನ್ನ ಅರಸನನ್ನು ಚಕ್ರವರ್ತಿಯ ಘನತೆಗೇರಿಸಿದ ಸ್ವಾಮಿನಿಷ್ಠ ಸೈನಿಕ–ಒಬ್ಬ ವ್ಯಕ್ತಿಯ ಜೀವಮಾನಕ್ಕೆ ಇಷ್ಟು ಕಾರ್ಯ ಸಾಧಿಸುವದು ಅಲ್ಪ ಸಾಹಸವೇನೂ ಅಲ್ಲ. ಅವನ ಪ್ರಾರಂಭದ ಜೀವನದಲ್ಲಿ ಭಾವೀ ಭಾಗ್ಯೋದಯದ, ಬರಲಿರುವ ವೀರ ಚರಿತದ ಯಾವ ಮುಂಗುರುಹೂ ಕಂಡು ಬಂದಿದ್ದಿಲ್ಲ.

ಬ್ರೆಂಡೆನ್‌ಬರ್ಗದ ಮಾರ್ಕ ಎಂಬಲ್ಲಿ ನೂರಾರು ವರ್ಷಗಳಿಂದಲೂ ಬಿಸ್ಮಾರ್ಕನ ಮನೆತನವು ಜಮೀನದಾರರಾಗಿ ಸ್ಥಾಯಿಕರಾಗಿದ್ದರು. ಅವನ ತಾಯಿಯ ತವರೂ ಒಳ್ಳೇ ವಿದ್ಯಾಪಾಂಡಿತ್ಯಕ್ಕೂ ತವರಾಗಿತ್ತು. ೧೭–೧೮ ನೇ ಶತಮಾನಗಳಲ್ಲಿ ಜರ್ಮನಿಯ ಸಾಂಸ್ಕೃತಿಕ ವಿಕಾಸಕ್ಕೆ ಈ ಮನೆತನವು ತಮ್ಮ ಪಾಲಿನ ಪ್ರಭಾವವನ್ನು ಸಲ್ಲಿಸಿತ್ತು.

ಓಟ್ಟೊವ್ಹಾನ್ ಬಿಸ್ಮಾರ್ಕನು ೧೮೧೫ ರಲ್ಲಿ ಎಪ್ರಿಲ್ ೧ ನೇ ದಿನಾಂಕಕ್ಕೆ ಸ್ಕೊನ್ ಹೊಸೆನ್ ಎಂಬ ತಮ್ಮ ಹಳ್ಳಿಯಲ್ಲಿ ಹುಟ್ಟಿದನು. ಬರ್ಲಿನ್ ನಗರದಲ್ಲಿ ಅವನನ್ನು ಶಾಲೆಗೆ ಹಾಕಲಾಯಿತು. ಶಾಲೆಯೊಂದಿಗೆ ವ್ಯಾಯಾಮ ಶಾಲೆಗೂ ಆತ ಹೋಗಹತ್ತಿದನು.

ಆದರೆ (ಹಸ್ತಿನಾಪುರಕ್ಕೆ ಬಂದ ಶಾರದ್ವತನಂತೆ) ಈ ಕುಮಾರನಿಗೆ ಬರ್ಲಿನ್ ಪಟ್ಟಣದ ಜೀವನ ಅಸಹ್ಯವೆನಿಸಿತು. ತನ್ನ ಹುಟ್ಟೂರಿನ ಸ್ವತಂತ್ರ ವಾತಾವರಣಕ್ಕಾಗಿ ಅವನ ಜೀವ ಬಾಯಿಬಿಟ್ಟಿತು. ಆದರೆ ವಿದ್ಯೆ, ಉಗ್ರ ಯಜಮಾನಿನಿ. ಆಕೆಯ ಅಂಕುಶಕ್ಕೆ ಸಿಕ್ಕವರಿಗೆ ಸುಖವೂ ನಿದ್ದೆಯೂ ಇಲ್ಲದಿರುವಂತೆ ಸ್ವಾತಂತ್ರ್ಯವೂ ಉಳಿಯುವದಿಲ್ಲ. ಬರ್ಲಿನ್‌ದಿಂದ ಆತ ಗೊಟ್ಟಿಂಜಿನ್ ವಿಶ್ವವಿದ್ಯಾಲಯಕ್ಕೆ ಹೋದನು. ಅಲ್ಲಿ ಆತ ಕಾನೂನು ಕಲಿಯಬೇಕಾಗಿತ್ತು. ಆತನ ಹಿರಿಯರು ಆತನಿಗಾಗಿ ಸರಕಾರೀ ಅಧಿಕಾರದ ಭವಿಷ್ಯವನ್ನು ಕಲ್ಪಿಸಿದ್ದರು, ಅದಕ್ಕೆ ಕಾನೂನು ಅವಶ್ಯವಿತ್ತು.

ಅವನು ಸ್ವತಃ ಹೀಡೆಲ್ಬರ್ಗ ವಿಶ್ವವಿದ್ಯಾಲಯವನ್ನು ಸೇರಲು ಅಪೇಕ್ಷಿಸಿದ್ದನು. ಆದರೆ ಆ ವಿಶ್ವವಿದ್ಯಾಲಯದ ಕೀರ್ತಿ ಪರಿಮಳವು, ಬೀರ ಮದ್ಯದ ಗಂಧದಿಂದ ನಾರುತ್ತಿತ್ತು. ಅಲ್ಲಿ ಹೋದರೆ ತನ್ನ ಮಗ ಬೀರು ಬಗ್ಗಿಸುವದರಲ್ಲಿಯೇ ಬೀರನಾಗಬಹುದೆಂದು ಅಂಜಿ, ಅವನ ತಾಯಿ ಅದಕ್ಕೆ ವಿರೋಧಿಸಿದಳು. ಆದರೆ ಈ 'ಬೀರಬಲ್ಲ' ತನದಲ್ಲಿ ಯಾವ ವಿಶ್ವವಿದ್ಯಾಲಯವೂ ಒಂದನ್ನೊಂದು ಹಿಂದೆ ಹಾಕುವಂತೆ ಇರಲಿಲ್ಲ. ಈ ಮದ್ಯಪಾನದ ಕಲೆಯಲ್ಲಿಯೂ ಕಲಹ, ದ್ವಂದ್ವ ಯುದ್ಧಗಳಲ್ಲಿಯೂ ಗೊಟ್ಟಿಂಜಿನದಲ್ಲಿ ಬಿಸ್ಮಾರ್ಕ ಎಲ್ಲರಿಗೂ ಮಿಕ್ಕಿ ಮೆರೆದನು. ಅಲ್ಲಿ ಓದುವಾಗ ಆತ ಇಪ್ಪತ್ತಾರು ದ್ವಂಧ್ವ ಯುದ್ಧಗಳನ್ನು ಹೋರಾಡಿದನು; ಆದರೆ ಒಮ್ಮೆಯೇ ಮಾತ್ರ ಗಾಯಗೊಂಡಿದ್ದನೆಂದು ಉಲ್ಲೇಖವಿದೆ.

ಗೊಟ್ಟಿಂಜಿನ್ ವಿಶ್ವವಿದ್ಯಾಲಯದಲ್ಲಿ ಕಲಿಯುತ್ತಿದ್ದಾಗ, ಅವನ ಕೋಣೆಯ ಪಾಲುಗಾರನಾಗಿ ಮೊಟ್ಲೇ ಎಂಬ ವಿದ್ಯಾರ್ಥಿ ಇದ್ದನು. ಆತನು ಅಮೇರಿಕೆಯ ತರುಣ. ಮುಂದೆ ದೊಡ್ಡ ಇತಿಹಾಸಕಾರನೂ ಕಾದಂಬರೀ ಲೇಖಕನೂ ಎಂದು ಆತನು ಹೆಸರಾದನು. ವಿಶೇಷತಃ 'ಡಚ್ಚ ಪ್ರಜಾರಾಜ್ಯದ ಉದಯ' ಎಂಬ ಇತಿಹಾಸದ ಗ್ರಂಥವನ್ನು ಬರೆದು, ಆತನು ಹೆಚ್ಚು ಕೀರ್ತಿಗಳಿಸಿದನು. ಬಿಸ್ಮಾರ್ಕನು ಜೀವಮಾನವೆಲ್ಲ ನಿಷ್ಠುರನೂ ಯುದ್ಧ, ರಾಜಕಾರಣಗಳ ಸಂಭ್ರಮದಲ್ಲಿದ್ದರೂ ಏಕಾಕಿಯೂ ಆಯಿತು. ಆದರೆ ಅವನ ಜೀವದ ಏಕಾಂತ ಉಗ್ರವೃತ್ತಿಯ ಕಲ್ಲೆದೆಯನ್ನು ಭೇದಿಸಿಯೂ ಈ ಸಹಪಾಠಿ ಮೊಟ್ಲೆಯೊಡನೆ ಆತನು ಮುಂದೆಯೂ ಸಲಿಗೆಯ ಸ್ನೇಹವನ್ನು ಜೀವಂತ ಸೆಲೆಯಾಗಿ ಹರಿಯಿಸಿದನು. ಆ ಸ್ನೇಹದಿಂದ ಅವನ ಬಾಳಿನ ಅಷ್ಟು ಅಂಶ ಹಸಿಯಾಯಿತು, ಹಸುರಾಯಿತು.

ಗೊಟ್ಟಿಂಜಿನ್‌ದಿಂದ ಆತ ಅಭ್ಯಾಸವನ್ನು ಮುಗಿಸಿ ಬರ್ಲಿನಿಗೆ ಮರಳಿದನು. ಅಲ್ಲಿ ತನ್ನ ಕಾನೂನಿನ ವ್ಯಾಸಂಗವನ್ನು ಮುಗಿಸಿದನು. ೧೮೩೫ ರಲ್ಲಿ 'ಕಾಯಿದೆ ಪಂಡಿತ'

ತನದ 'ಡಾಕ್ಟರ ಅಫ ಲಾ' ಪದವಿಯನ್ನು ಪಡೆದನು ಮತ್ತು ನೇರವಾಗಿ ಅಂದಿನಿಂದಲೇ ಸಿವ್ಹಿಲ್ ಸರ್ವೀಸ್ ಸರಕಾರಿ ಮೇಲಧಿಕಾರಿ ವರ್ಗವನ್ನು ಸೇರಿದನು.

ಆಶೆನ್ ಎಂಬಲ್ಲಿ ನ್ಯಾಯಖಾತೆಯಲ್ಲಿ ಆತನ ಚಾಕರಿಯೂ ಆರಂಭವಾಯಿತು. ಆದರೆ ಒಂದು ವರ್ಷದಲ್ಲಿಯೇ ಅವನು ತನ್ನನ್ನು ವರ್ಗಮಾಡಬೇಕೆಂದು ಬೇಡಿಕೊಂಡನು. ಆತನ ವಯಸ್ಸಿನ ಯಾವದೇ ಯುವಕನಂತೆ, ಅಶೆನ್‌ದಲ್ಲಿ ಬಿಸ್ಮಾರ್ಕನು ಸಾಮಾಜಿಕ ಅಮೋದ ಪ್ರಮೋದದಲ್ಲಿ ಹೆಚ್ಚಿನ ವೇಳೆಯನ್ನು ಕಳೆದನು. ಆ ಸ್ಥಾನವೇ ಅಂತಹದಿತ್ತು. ಸ್ನಾನಕೇಂದ್ರವೆಂದು ಲೋಕಪ್ರಿಯವಾದ ಆ ಸ್ಥಾನವು, ವಿಲಾಸಿಕತೆಯ ಆಸ್ಥಾನವಾಗಿತ್ತು. ಇಂಥ ಬೆಡಗಿನ ಬದುಕು ಯಾವ ಗುರಿಗೆ ಮುಟ್ಟೀತು ? ಅಲ್ಲಿಂದ ವರ್ಗವಾದ ಬಿಸ್ಮಾರ್ಕನಿಗೆ ಪೊಟ್ಸಡಾಮಕ್ಕೆ ಹೋಗಿ ಅಧಿಕಾರವಹಿಸಲು ಅಪ್ಪಣೆ ಬಂದಿತು. ಪೊಟ್ಸಡಾಮದಲ್ಲಿ ನೇಮಕವಾಗಿರುವಾಗಲೇ ಅವನು ತಾಯಿಯನ್ನು ಕಳೆದುಕೊಂಡನು.

ತಾಯಿ ತೀರಿದ ಸಂದರ್ಭದಲ್ಲಿಯೇ ತಂದೆ ಆತನ ಮನಸ್ಸಿಗೆ ಇನ್ನೊಂದು ಅಘಾತವನ್ನು ಕೊಟ್ಟನು. ಅವರ ಮನೆತನದ ಸಾಂಪತ್ತಿಕ ಸ್ಥಿತಿಯು ಶೋಚನೀಯವಾಗಿ ಕೆಟ್ಟಿದೆಯೆಂದು ತಂದೆಯಿಂದ ತಿಳಿಯಿತು. ಆಗ ಬಿಸ್ಮಾರ್ಕನು ತನ್ನ ಪದಾಧಿಕಾರವನ್ನು ಬಿಟ್ಟುಕೊಟ್ಟು ಒಂದು ಬಿಡುಗಡೆಯ ಭಾವನೆಯಿಂದಲೇ ಮನೆಗೆ ಬಂದನು. ಆಗ ಆತನು ಬರೆದ ಪತ್ರ ಈಗಲೂ ದೊರೆಯುತ್ತದೆ. ಅದರಿಂದ ಬಟ್ಟು ಸಂಗತಿ ವ್ಯಕ್ತವಾಗುತ್ತದೆ. ಅಂದಿನ ಸರಕಾರೀ ಚಾಕರಿವಂತಿಕೆಯ ಹಾಗೂ ಅಧಿಕಾರೀ ವರ್ಗಗಳ ಇಡಿಯ ಪದ್ಧತಿಯ ಕುರಿತೇ ಅವನಿಗೆ ತೀವ್ರ ಜಿಗುಪ್ಸೆ ಉಂಟಾಗಿತ್ತು. ವಯಸ್ಸೇ ವರಿಷ್ಠತೆಯ ಮಾನದಂಡವೆಂದು ಆ ಸಿವ್ಹಿಲ್ ಸರ್ವಿಸಿನ ಲಕ್ಷಣವಾಗಿತ್ತು. ಗುಣಕ್ಕೆ ಗೌರವವಿಲ್ಲದ ಈ ಹುದ್ದೇದಾರಿಕೆಯ ಹೆದ್ದಾರಿಗೆ, ಆತ ಬೇಸಿ ಹೋಗಿದ್ದನು. ಕುಟುಂಬದ ಸಂಕಟವು ಒಂದು ಅನುಕೂಲವಾಗಿಯೇ ಬಂದಿತು. ಬಿಸ್ಮಾರ್ಕ ತನ್ನ ಮನೆಯ ಕಡೆಗೆ ಹೊರಳಿದನು.

ಹೀಗೆ ೨೪ ನೇ ವಯಸ್ಸಿಗೇ 'ಸೇವಾನಿವೃತ್ತನಾಗಿ' ಬಿಸ್ಮಾರ್ಕ ಹೊಲದೊಡೆಯನಾಗಿ ಊರಿನ 'ರಾಯ'ರೆನಿಸಿಕೊಳ್ಳಲಿಕ್ಕೆ ಬಂದು ನೆಲಿಸಿದನು. ಊರಿಗೆ ಬಂದರೂ ಚಟೆಯ ಚಟಗಳು, ಗೊಟ್ಟಿಂಜಿನ್‌ದಲ್ಲಿ ಮೈಯುಂಡ ವ್ಯಸನ, ಹವ್ಯಾಸಗಳು ಆತನನ್ನು ಬಿಟ್ಟಿದ್ದಿಲ್ಲ. ಅವನ ಮದ್ಯ ಮತ್ತು ಕಲಹದ ರಾತ್ರೆಯ ಕೂಟಗಳ ಸುದ್ದಿ, ಸುತ್ತಲಿನ ಹಳ್ಳಿಗಳಲ್ಲಿಯೂ ಮೊಳಗತೊಡಗಿತು. ಹತ್ತಿರ, ದೂರ, ಆ ಸುತ್ತಲಿನ ಸೀಮೆಯಲ್ಲೆಲ್ಲ ಆತ 'ಹುಚ್ಚ ಬಿಸ್ಮಾರ್ಕ'ನೆಂದು ಖ್ಯಾತಿವೆತ್ತನು !

ಆದರೆ ಹೀಗೆ ಹೆಂಡದ ಬಲದಿಂದ ಹುಚ್ಚನೆನಿಸಿಕೊಂಡರೂ ಬಿಸ್ಮಾರ್ಕ್ ತುಂಬ ಸಮರ್ಥ ಆಡಳಿತಗಾರನಾಗಿ ದುಡಿದ. ಅವನೂ ಅವನ ಸಹೋದರನೂ ಎಡಬಿಡದೆ ಪರಿಶ್ರಮಿಸಿ ತಮ್ಮ ತಂದೆಯ ವತನದ ವ್ಯವಹಾರವನ್ನೆಲ್ಲ ಸರಿಪಡಿಸಿ ಒಂದು ಹದಕ್ಕೆ ತಂದರು. ಆ ಕೆಲಸ ಮುಗಿಯುವತನಕವೂ ಬಿಸ್ಮಾರ್ಕನ ಉದ್ದಂಡ ಕಾರ್ಯಶಕ್ತಿಗೆ ಒಂದು ಗುರಿಯಿತ್ತು. ಆದರೆ ಕುಟುಂಬದ ಆಸ್ತಿಪಾಸ್ತಿಗಳ ಸುವ್ಯವಸ್ಥೆ ಸ್ಥಿರವಾದಮೇಲೆ, ಬಿಸ್ಮಾರ್ಕನ ಚಿತ್ತ ಚಂಚಲವಾಯಿತು. ಅವನಲ್ಲಿ ಪುಟಿಯುತ್ತಿರುವ ಶಕ್ತಿಗಳಿಗೆ ಯಾವ ದ್ವಾರವೂ ಇಲ್ಲದಾಯಿತು. ಆತನು ಪ್ರಭಾವ ಶಾಲಿ ವ್ಯಕ್ತಿ. ಒಂದು ಪ್ರಚಂಡ ಕಾರ್ಯಶಕ್ತಿಯ ಕೇಂದ್ರ. ಪ್ರವಾಸದಿಂದಾದರೂ ಚಿತ್ತ ಚಾಂಚಲ್ಯವನ್ನು ಕಳೆದುಕೊಳ್ಳಲಿಕ್ಕೆಂದು ಆತ ಊರುಬಿಟ್ಟು ಹೊರಟನು. ಮೊದಲು ಲಂಡನ್ನಿಗೆ ಬಂದನು. ಅಲ್ಲಿಂದ ತನ್ನ ತಂದೆಗೆ ಆತ ಬರೆಯುತ್ತಾನೆ :

'ಸಾಮಾನ್ಯವಾಗಿ ಹೇಳುವದಾದರೆ, ಈ ಇಂಗ್ಲಿಷ ಜನರ ಅಸಾಮಾನ್ಯದಯೆ, ದಾಕ್ಷಿಣ್ಯಗಳನ್ನು ನಾನು ಎಷ್ಟು ಹೊಗಳಿದರೂ ಕಡಿಮೆಯೆ. ನಾನು ಕಲ್ಪಿಸಿದಕ್ಕಿಂತ ಎಷ್ಟೋ ಪಟ್ಟು ಮಿಗಿಲಾಗಿ, ಅವರ ಈ ಗುಣ ವ್ಯಕ್ತವಾಗುತ್ತದೆ. ತೀರ ಬಡ ಮಂದಿಯೂ ಕೂಡ, ಪ್ರಸನ್ನವೃತ್ತಿಯವರೂ ಅಕೃತಿಮ ವರ್ತನೆಯವರೂ, ಒಡ ನಾಟಕ್ಕೆ ಯಾವ ಆವಿರ್ಭಾವವೂ ಇಲ್ಲದೆ ಸಲಿಸವಾಗಿ ಒಲಿಯುವಂತಹರೂ ಆಗಿದ್ದಾರೆ. ಹಾಗೆಯೇ ನಾನು ಭಾವಿಸಿದ್ದಕ್ಕಿಂತ ಇಲ್ಲಿಯ ಜೀವನವು ಹೆಚ್ಚು ಅಗ್ಗವೂ ಆಗಿದೆ.'

ಇಂಗ್ಲಿಷರ ದಯೆ, ದಾಕ್ಷಿಣ್ಯ ಹೆಚ್ಚಾಗಿಯೋ ಏನೋ ಬಿಸ್ಮಾರ್ಕನು ಅಲ್ಲಿಯವಳನ್ನೇ ತನ್ನ ದಯಿತೆಯನ್ನಾಗಿ ವರಿಸಲಿದ್ದನೆಂದು ಸುದ್ದಿಯೂ ಹಬ್ಬಿತು.

ಆದರೆ ಅದೇನೇ ಇರಲಿ, ಬಿಸ್ಮಾರ್ಕ ಮನೆಗೆ ಮರಳಿದೊಡನೆ ಪೂರ್ತಿ ಮಾರ್ಪಾಟ ಹೊಂದಿದನು. ಕಡಲಾಚೆಯ ಆಂಗ್ಲ ಪ್ರಣಯದ ಪ್ರಳಯಾ ನಂತರದ ವೈರಾಗ್ಯ ಪ್ರತಿಕ್ರಿಯೆಯೋ ಏನೋ. ಆತ ಒಮ್ಮೆಲೆ ಕಡು ಧಾರ್ಮಿಕನಾಗಿ ಬಿಟ್ಟನು. ಆಳವಾದ ಧರ್ಮ ಶ್ರದ್ಧೆಯುಳ್ಳ ಕೆಲವು ಭಾವಿಕ ಸ್ತ್ರೀ ಪುರುಷರ ಒಂದು ಆಧ್ಯಾತ್ಮ ಮಂಡಳವನ್ನು ಅವನು ಸೇರಿದನು. ಈ ಹೊಸ ಶ್ರದ್ಧೆಯ ಭಾವಿಕರು ಮೂಲ ಕ್ರೈಸ್ತತತ್ವಗಳ ಚರ್ಚೆ, ಚರ್ಯೆಗಳನ್ನು ಪುರಸ್ಕರಿಸಿ, ಸರಳ ಸಾತ್ವಿಕ ನಿಷ್ಠೆಯಲ್ಲಿ ನಡೆಯಬೇಕೆಂದು ವ್ರತವಿಟ್ಟುಕೊಂಡವರು. ಆ ಸಂಘವನ್ನು ಸೇರುವಾಗ ಬಿಸ್ಮಾರ್ಕನು ಸಂಶಯಾತ್ಮನೇ ಆಗಿದ್ದನು. ಆದರೆ ಅಲ್ಲಿಯ ಶ್ರದ್ಧಧಾನ ಸದಸ್ಯರ ಆವೇಶ, ಅಭಿ ನಿವೇಶಗಳನ್ನು ಕಂಡು ತುಂಬ ಪ್ರಭಾವಿತನಾದನು. ಹೀಗೆ ಪ್ರಭಾವಿತನಾಗುವದರಲ್ಲಿ

ಒಂದು 'ಪ್ರಭಾವತಿವಿಜಯು'ವೂ ಸಂಘಟಿಸಿತ್ತು. ಆ ಆಧ್ಯಾತ್ಮ ಮಂಡಳದ ಓರ್ವ ಸದಸ್ಯೆ, ಜೋಹಾನಾ ವ್ಹಾನ್ ಪುಟ್ಕಾಮರ ಎಂಬ ಯುವತಿಯ ಪ್ರಭಾವವೂ ಅವನ ಆತ್ಮವನ್ನು ಆಳವಾಗಿ ಆವರಿಸಿತ್ತು ! ಆಕೆಯ ಸಾಹಚರ್ಯವೂ ಈ ಹೊಸ ಧರ್ಮ ಸಂಘದ ದಿನಚರ್ಯೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸಲು ಬಿಸ್ಮಾರ್ಕನನ್ನು ಪ್ರೇರೇಪಿಸಿತು.

೧೮೪೭ ರ ಸುಮಾರಿಗೆ ಬಿಸ್ಮಾರ್ಕನ ತಂದೆಯೂ ತೀರಿಕೊಂಡನು. ಅದೇ ವರ್ಷ ಅಗಸ್ಟತಿಂಗಳಲ್ಲಿ ಬಿಸ್ಮಾರ್ಕನು ತನ್ನ ಸಹಚಾರಿಣಿಯನ್ನು ಸಹ–ಧರ್ಮಚಾರಿಣಿಯನ್ನಾಗಿ ಪರಿಗ್ರಹಿಸಿದನು. ಜೋಹಾನಾಳನ್ನು ಮದುವೆಯಾಗಿ ಸ್ಕೊನಹೌಸೆನ್‌ದಲ್ಲಿ ಗಾಹ್ರಾಪತ್ಯದಲ್ಲಿ ನೆಲೆಸಿದನು. ಇನ್ನು ಮನೆವಾರ್ತೆ, ಮಡದಿಮಕ್ಕಳು. ವತನದ ವ್ಯವಸ್ಥೆ ಇವುಗಳಲ್ಲಿಯೇ ಮನದಣಿ ಮಗ್ನನಾಗಿ ಹಳ್ಳಿಯ ಜಮೀನದಾರನೆಂಬ ಸುರಕ್ಷಿತ ಆಢ್ಯತೆಯ ಸಪ್ಪಗೆಯ ಸದ್ಗೃಹಸ್ಥತನಕ್ಕೆ ತನ್ನ ಶೇಷಾಯುಷ್ಯವನ್ನು ಮೀಸಲು ಇಡುವದೆಂದು ಬಿಸ್ಮಾರ್ಕ ಬಯಸಿದ್ದನು. ಆದರೆ ದೈವವು ಬೇರೆಯದನ್ನೇ ಬಯಸಿತು.

೧೮೪೮ ರಲ್ಲಿ ಫ್ರಾನ್ಸದಲ್ಲಿ ರಾಜ್ಯಕ್ರಾಂತಿಯು ಭುಗಿಲೆದ್ದು ಉರಿಯಿತು. ಅದರ ಬೇಗೆ, ದಳ್ಳುರಿಯಂತೆ ಜರ್ಮನಿಯ ತನಕವೂ ಹಬ್ಬಿ ಬಂದಿತು. ಕೆಲವು ದಿನಗಳಲ್ಲಿಯೇ, ವಿಯೆನ್ನಾದಲ್ಲಿ ರಾಜಕ್ರಾಂತಿ ಒದಗಿಬಂದಿತೆಂದು ವರದಿ ಬಂದಿತು. ಜರ್ಮನಿಯಲ್ಲಿ ಜನಿಸಿದ ಈ ಕ್ರಾಂತಿಯ ಅವತಾರಕ್ಕೆ ಎರಡು ಮುಖಗಳಿದ್ದವು; ಅದು ಒಂದೆಡೆ, ಉದಾರ ಮತವಾದಿಯಾಗಿತ್ತು. ಪ್ರಜಾಪ್ರಭುತ್ವ, ವ್ಯಕ್ತಿಸ್ವಾತಂತ್ರ್ಯ, ಮುಕ್ತ ವ್ಯಾಪಾರ–ಮುಂತಾದ ತತ್ವಗಳನ್ನೂ ಪುರಸ್ಕರಿಸುವದರ ಕಡೆಗೆ ಒಲವಿದ್ದುದು. ಇನ್ನೊಂದೆಡೆ, ಅದು ರಾಷ್ಟ್ರೀಯವಾದಿ ಏಕಮುಖವಾದ ಪ್ರಬಲ ಕೇಂದ್ರ ಸತ್ತೆಯನ್ನು ಸ್ಥಾಪಿಸಿ, ರಾಜ್ಯದ ಯಾವ ಘಟಕವನ್ನೂ ಸಿಡಿದು ಸ್ವಾಯತ್ತವಾಗಿ ನಿಲ್ಲುವ ಸ್ವಾತಂತ್ರವನ್ನು ಕೊಡದೆ, ಶಕ್ಯವಿರುವಷ್ಟೆಲ್ಲ ರಾಷ್ಟ್ರದ ಸರಹದ್ದುಗಳನ್ನು ವಿಸ್ತರಿಸಿ, ಸಾಮ್ರಾಜ್ಯ ಕಟ್ಟುವ ಹಂಬಲವಿದ್ದುದು. ಪ್ರುಸಿಯಾದ ಜನಮನದ ಪ್ರವೃತ್ತಿ ಸೈನಿಕ ವೃತ್ತಿಗೆ, ಏಕಸತ್ತಾಧಿಕಾರಕ್ಕೆ ಒಳಪಡುವಂತಹದಿದ್ದುದರಿಂದ ರಾಷ್ಟ್ರೀಯವಾದಕ್ಕೆ ಹೆಚ್ಚಿನ ಪ್ರಾಶಸ್ತ್ಯ, ಪ್ರಾಬಲ್ಯಗಳು ದೊರೆತವು. ಅಖಂಡ ಜರ್ಮನಿಯು, ನಿಷ್ಠೆಯಿಂದ ತಲೆಬಾಗಬಹುದಾದ ಸರಕಾರವನ್ನು ಸ್ಥಾಪಿಸುವದಕ್ಕಾಗಿ, ಕ್ರಾಂತಿಯ ಕಾಲವನ್ನು ಉಪಯೋಗಿಸಬಹುದೆಂದು ಸಾರ್ವತ್ರಿಕವಾಗಿ ಆರಿಸಲಾಗಿತ್ತು. ಅರಸನು ಹೊಸರಾಜ್ಯಘಟನೆಯನ್ನು ಕೊಡುವದಾಗಿ ಆಶ್ವಾಸನವಿತ್ತಿದ್ದನು. ಬೀದಿಬೀದಿಗಳಲ್ಲಿ ಉಗ್ರವಾದ ಕಾದಾಟಗಳು ಎಸಗುತ್ತಿದ್ದವು.

ಜನರ ಕ್ಷೋಭಕ್ಕೆ ಅರಸನು ಅಂಜಿದನು. ಪುಂಡಾಟಿಕೆಯನ್ನು ದಂಡಿಸಲು ಹೊರಡಿಸಿದ ದಂಡುಗಳನ್ನು ಹಿಂದೆಗೆದುಕೊಂಡನು. ಅರಸನ ಈ ಅವಸಾನಗೇಡಿ ತನಕ್ಕೆನೇ ತಮ್ಮ ಗೆಲುವೆಂದು ಹಿಗ್ಗಿ, ಜರ್ಮನಿಯ ಜನಜಂಗುಳಿ ಬೊಬ್ಬೆರಿಯಿತು. ಜನತೆ ಕ್ರಾಂತಿಯನ್ನು ಸಾಧಿಸಿತ್ತು ! ಅಥವಾ ಹಾಗೆ ಜನತೆಗೆ ಭ್ರಾಂತಿ ಆಯಿತು !

ಬಿಸ್ಮಾರ್ಕನು ಚಿಂತಿತನಾದನು. ಅವನ ಅಗಾಧ ರಾಜನಿಷ್ಠೆ ಅಂತರಾಳದವರೆಗೂ ಕಲುಕಿತು. ಪ್ರುಸಿಯಾದ ರಾಜನು ಜನಜಂಗುಳಿಯ ಕಲ್ಲು ಕೆಸರುಗಳಿಗೆ ತುತ್ತಾಗುವ ದೆಂದರೇನು ? ಜರ್ಮನ ಜನತೆಯಷ್ಟೇ ಅಲ್ಲ, ಅಖಿಲ ಯುರೋಪವೇ ರಾಜನ ಕೃತಿಗೆ ನಗಹತ್ತಿತು. ಈ ಸಂಗತಿಯು ಪಾಶ್ಚಾತ್ಯ ಜಗತ್ತಿನ ಅಪಹಾಸ್ಯಕ್ಕೂ ಬಿಸ್ಮಾರ್ಕನ ಪಶ್ಚಾತ್ತಾಪಕ್ಕೂ ಕಾರಣವಾಯಿತು. ಇದೀಗ ಕಾರ್ಯಾರಂಭದ ಸಂದುಗಟ್ಟು, ರಾಜನ ತೇಜವನ್ನು ಕುದುರಿಸಿ, ಪ್ರಜೆಯ ಹೃದಯದ ಕುರಿತು ಆತನಲ್ಲಿ ಧೈರ್ಯವನ್ನೂ ವಿಶ್ವಾಸವನ್ನೂ ಪುನರುಜ್ಜೀವನಗೊಳಿಸಬೇಕು. ರಾಜನ ತೇಜೋವಧದ ಪರಿಮಾರ್ಜನೆ ಆಗಲೇಬೇಕು...

ಅದಕ್ಕಾಗಿ ಬಿಸ್ಮಾರ್ಕ ಮೊದಲು ರಾಜನಿಗೆ ಒಂದು ಬಿನ್ನಹ ಪತ್ರವನ್ನು ಬರೆದನು. ಅಂಥ ದುರ್ದಿನದಲ್ಲಿಯೂ ಕೆಲವು ಏಕನಿಷ್ಠ ರಾಜಭಕ್ತರು, ಜರ್ಮನಿಯ ರಾಷ್ಟ್ರೀಯ ಐಕ್ಯವನ್ನು ಕಾಣುವ ಸ್ವಾಮಿನಿಷ್ಠರು ಇದ್ದಾರೆಂಬುದನ್ನು ರಾಜನ ಲಕ್ಷ್ಯಕ್ಕೆ ತರಲು ಆತ ಈ ಪತ್ರವನ್ನು ಬರೆದು ತನ್ನ ಶ್ರದ್ಧಾ ಭಕ್ತಿಗಳನ್ನು ವ್ಯಕ್ತಮಾಡಿದನು. ಆ ಪತ್ರವು ಕಂಗೆಟ್ಟ ರಾಜನಿಗೆ ಒಂದು ಅಭಿಮಂತ್ರಿತ ತಾಯಿತದಂತೆ ಅನಿಸಿತು. ಮುಂದೆ ತಿಂಗಳುಗಟ್ಟಲೆ ಕಾಲ ಆತನು ಅದನ್ನು ತನ್ನ ಕಣ್ಣೆದುರು ಮೇಜಿನ ಮೇಲೆ ತೆರೆದೇ ಇಟ್ಟನು !

ತಿಂಗಳ ಹಿಂದೆ ತಿಂಗಳು ಕಳೆಯಿತು. ಬರ್ಲಿನ್ನಿನಲ್ಲಿ ಅರಾಜಕತೆ ಬೆಳೆಯುತ್ತ ನಡೆಯಿತು. ಇದಕ್ಕೆ ತಡೆಹಾಕಲೇ ಬೇಕು-ಎಂದು ನಿರ್ಧರಿಸಿ ಬಿಸ್ಮಾರ್ಕನು ಕೆಲವು ಸಂಗಡಿಗರೊಂದಿಗೆ ಒಂದು ಸಂಘಟಿತ ಯತ್ನವನ್ನು ಮಾಡಲು ಟೊಂಕ ಕಟ್ಟಿದನು. ೧೮೪೮ ರ ಜುಲೈ ತಿಂಗಳಲ್ಲಿ ಈ ಸಂಘದ ಮುಖಪತ್ರವಾದ 'ನವಪ್ರುಸಿಯನ್ ಗೆಝೆಟು' ಪ್ರಕಟವಾಯಿತು. ಈ ಪತ್ರಿಕೆಯೂ ಸಂಘವೂ ಕ್ರಿಶ್ಚನ್ ರಾಜಸತ್ತೆಯ ತತ್ವಗಳನ್ನು ಪ್ರತಿಪಾದಿಸಲು ಹೊರಟ ಸಂಸ್ಥೆಗಳು ಬಿಸ್ಮಾರ್ಕನು ಇವುಗಳ ಮೂಲ ಸಂಚಾಲಕರಲ್ಲಿ ಒಬ್ಬನಾಗಿದ್ದು, ಆಗಾಗ್ಗೆ ಪತ್ರಿಕೆಯಲ್ಲಿ ಬರೆಯುತ್ತಿದ್ದನು. ಅಂಥ ಮಹಾ ಸಂಕಟದ ಸಮಯದಲ್ಲಿಯೇ ಬಿಸ್ಮಾರ್ಕನೂ ಅವನ ಸಹಕಾರಿಗಳೂ ಸ್ಥಿತಿ ಪಾಲಕ ಪ್ರತಿಷ್ಠಿತ ವರ್ಗದ ಪಕ್ಷವನ್ನೊಂದು ಸ್ಥಾಪಿಸಿದರು.

ಈ ಪಕ್ಷದ ಪ್ರಭಾವದ ವಲಯು ಇನ್ನೂ ಅಲ್ಪವೇ ಇತ್ತು. ಆದರೂ ಬರುವ ಭಾಗ್ಯದ ಕ್ಷಣಕ್ಕಾಗಿ ಬಿಸ್ಮಾರ್ಕನು ಅವ್ಯಾಹತವಾಗಿ ಸುವ್ಯವಹಾರ್ಯವಾಗಿ ಹವ್ಯಾಸದಿಂದ ದುಡಿಯುತ್ತಿದ್ದನು. ರಾಜ್ಯದಲ್ಲಿಯ ಪ್ರಭಾವಿಯಾದ ವ್ಯಕ್ತಿಗಳಿಗೆ ಉತ್ಸಾಹವನ್ನು ನೀಡುತ್ತ ಆತನು ಒಡನಾಡತೊಡಗಿದನು.

ಇದೇ ಸಮಯ, ಸಿಂಹಾಸನವು ತನ್ನ ಅಧಿಕಾರದಿಂದಲೇ ಹೊಸರಾಜ್ಯ ಘಟನೆಯನ್ನೊಂದು ಪ್ರಸಿದ್ಧಗೊಳಿಸಿತು. ಅದನ್ನು ಸಮಾಲೋಚಿಸಿ ಸಮ್ಮತಿಸಲಿಕ್ಕೆ ಹೊಸ ಶಾಸನಸಭೆಯನ್ನು ಕರೆಯಿಸಿತು. ಸೈನ್ಯದ ಅನುಶಾಸನದ (ಶಿಸ್ತಿನ) ಆಧಾರದ ಮೇಲೆ ರಾಜನು ತನ್ನ ಸತ್ತಾಸಾಮರ್ಥ್ಯವನ್ನು ಮತ್ತೆ ಪಡೆದನು. ಈ ಹೊಸ ಅಸೆಂಬ್ಲಿಯಲ್ಲಿ ಬಿಸ್ಮಾರ್ಕ ಚುನಾವಣೆಗೆ ನಿಂತನು. ಅವನು ಕ್ರಾಂತಿಯ ವಿರೋಧಿಯೆಂದು ಮುಂದೆ ಬಂದಿದ್ದನು,

ಈ ಸಂದರ್ಭದ ಅವನದೊಂದು ಆಖ್ಯಾಯಿಕೆಯಿದೆ. ಒಂದು ದಿನ, ಒಂದು ಉಪಹಾರಗೃಹದಲ್ಲಿ ಬಿಸ್ಮಾರ್ಕನು ದ-ಇಸ್ಟರನ ಹತ್ತಿರವೇ ನಿಲ್ಲಬೇಕಾಯಿತು. ದ-ಇಸ್ಟರ ರಿಪಬ್ಲಿಕನ್ ಪಕ್ಷದ ಉಗ್ರವಾದಿಗಳಲ್ಲಿ ಒಬ್ಬ ಧುರೀಣ. ಇಬ್ಬರಲ್ಲಿ ಮಾತುಕತೆ ಮೊದಲಾಯಿತು. ಆಗ ದ-ಇಸ್ಟರನು ಒಂದು ಒಡಂಬಡಿಕೆಯನ್ನು ಸೂಚಿಸಿದನು. ಯಾವ ಪಕ್ಷವೇ ಇರಲಿ, ಹೋರಾಟದಲ್ಲಿ ಗೆದ್ದು ಅಧಿಕಾರಕ್ಕೆ ಬಂದರೆ, ಒಬ್ಬನು ಇನ್ನೊಬ್ಬನನ್ನು ಉಳಿಯಗೊಡಬೇಕು-ರಿಪಬ್ಲಿಕ ಪಕ್ಷವು ಗೆದ್ದರೆ, ಬಿಸ್ಮಾರ್ಕನನ್ನು ಗಲ್ಲಿಗೇರಿಸಬಾರದು, ರಾಜಪಕ್ಷವು ಗೆದ್ದರೆ, ದ-ಇಸ್ಟರನಿಗೆ ಮರಣ ಶಿಕ್ಷೆ ಆಗಬಾರದು. ಸೂಚನೆಯೇನೋ ಆತ್ಮ ಸಂರಕ್ಷಣವಿತ್ತು.

ಆದರೆ ಈ ಅನಾಕ್ರಮಣ ಒಪ್ಪಂದವನ್ನು ಬೀರ ಬಂಟ ಬಿಸ್ಮಾರ್ಕನು ಒಪ್ಪಲಿಲ್ಲ. 'ಛೀ' ಆತನು ಅಂದನು 'ಅದಾಗದು, ನೀವು ಅಧಿಕಾರಕ್ಕೆ ಬಂದರೆ, ಬದುಕುಳಿಯುವದರಲ್ಲಿ ನನಗೆ ಸ್ವಾರಸ್ಯವಿಲ್ಲ. ನಾವು ಬಂದರೆ ನಿಮ್ಮಂಥವರಿಗೆ ಉಳಿಯುಗೊಟ್ಟರೆ ಕ್ಷೇಮವಿಲ್ಲ. ಹೇಗೂ ಗಲ್ಲಿಗೇರಲೇ ಬೇಕು. ಆದರೆ ಗಲ್ಲಿನ ಪಾವಟಿಗೆಗಳ ತನಕವೂ ಶಿಷ್ಟ ಸೌಜನ್ಯವನ್ನು ಇಟ್ಟುಕೊಳ್ಳೋಣ !' ವಜ್ರಮುಷ್ಠಿಯ ಪಕ್ಷಪಾತಿಯಿಂದ ಹೊರಟ ಎಂಥ ಉದಾರ ವಿನಯದ ಉದ್ಗಾರವಿದು !

ಮುಂದೆ ಬಿಸ್ಮಾರ್ಕನು ಶಾಸನಸಭಾಪದ್ಧತಿಯ ಸರಕಾರಕ್ಕೆ ಪ್ರಬಲ ವಿರೋಧಿಯೆಂದು, ಲೋಕಸತ್ತೆಯ ಕಡುವೈರಿಯೆಂದು ಹೆಸರಾದನು. ಇದಕ್ಕೆ ಕಾರಣ. ಆತ ಲೋಕಸಭೆಯಲ್ಲಿ ವಾದವಿವಾದಗಳಲ್ಲಿ ತನ್ನ ಪಕ್ಷದ ಪ್ರತಿಪಾದನೆಗೆ ಅಸಮರ್ಥನಿದ್ದನೆಂತಲ್ಲ. ನಿಸರ್ಗಸಿದ್ಧ ವಾಗ್ಮಿಯ ಗುಣಗಳು ಅವನಲ್ಲಿ ಇದ್ದಿಲ್ಲ; ಅವನ ಕಂಠವು

ದುರ್ಬಲವಿತ್ತು, ಸೀರಾಗಿತ್ತು. ಅವನ ಮೈಕಟ್ಟು ಬಲಿಷ್ಠವೂ ಪ್ರಭಾವಶಾಲಿಯೂ ಆಗಿತ್ತು. ಅವನಲ್ಲಿ ಉತ್ತಮ ಮಾತುಗಾರಿಕೆಗೆ ಅಥವಾ ಪ್ರಭಾವ ಬೀರಲಿಕ್ಕೆ ಬೇಕಾಗುವ ಯಾವ ಅಭಿನಯ ಮುದ್ರೆಯೂ ಇದ್ದಿಲ್ಲ. ಅವನ ವಾದದ ವಿಷಯಗಳು ಯಾವಾಗಲೂ ಉಗ್ರ ಚರ್ಚೆಗೆ ಇಂಬು ಕೊಡುತ್ತಿದ್ದವು. ಆದಾಗ್ಯೂ ಆತನು ಉತ್ತಮ ವಾದಪಟುವಾಗಿದ್ದನು. ವಾದದಲ್ಲಿ ಆತನು ಬ್ರಿಟಿಶ ಪಾರ್ಲಿಮೆಂಟಿನ ವ್ಯವಹಾರ-ಪರಿಪಾಠಗಳನ್ನು ಆಗಾಗ್ಗೆ ಉದಾಹರಿಸುತ್ತಿದ್ದನು. ಯುರೋಪದ ಮುತ್ಸದ್ದಿಗಳಲ್ಲಿ ಬ್ರಿಟಿಶ ಪಾರ್ಲಿಮೆಂಟಿನ ರೀತಿನೀತಿಗಳ ವಿಷಯ ಅವನಷ್ಟು ತಜ್ಞರು, ಅಂದು ಬೇರೆ ಯಾರೂ ಇದ್ದಿಲ್ಲ. ಅವನ ಕಾರ್ಯಶಕ್ತಿಯೂ ಅದ್ಭುತ ವಿತ್ತು. ಅವನ ಕೈಯೊಳಗಿಂದ ಅತ್ಯಂತ ಮಹತ್ವದ ಅಷ್ಟೇ ಜಟಿಲವಾದ ವ್ಯವ ಹಾರಗಳ ಸೂತ್ರಗಳು ನಡೆದಾಡುತ್ತಿದ್ದವು. ನಡುರಾತ್ರಿ ಮೀರಿಯೂ ಆತ ದುಡಿಯುತ್ತಿದ್ದನು-ನಸುಕು ಹರಿಯುವಾಗ ಅಂಚೆಯಗಾಡಿ ಹೊರಟು ಹೋಯಿತೆಂದರೆ, ಆಗ ತನ್ನ ಮೇಜಿನಿಂದೆದ್ದು ಕುದುರೆಯನ್ನೇರಿ ಗಾಳಿಸವಾರಿಗೆ ನೇರವಾಗಿ ನಡೆದು ಬಿಡುತ್ತಿದ್ದನು. ಇದೇ ಅವನ ವಿಶ್ರಾಂತಿ. ಅವನಿಗೆ ಶಿಕಾರಿಯ ಹುಚ್ಚು ಬಹಳವಿತ್ತು. ಆ ಮೆಚ್ಚಿನಾಟದಲ್ಲಿ ಅವನ ಒಡನಾಡಿ ಅಂದಿನ ಬ್ರಿಟಿಶ ರಾಯಭಾರಿ ಸರ್ ಅಲೆಕ್ಝಾಂಡರ ಮಾಲೆಟ್.

೧೮೫೫ ರಲ್ಲಿ ಅವನ ಹಳೆಯ ಶಾಲೆಯ ಗೆಳೆಯ ಮೊಟ್ಲೆ ಅವನಿಗೆ ಭೆಟ್ಟಿಕೊಟ್ಟನು. ಆ ಭೆಟ್ಟಿಯಲ್ಲಿ ಆತನು ಬಿಸ್ಮಾರ್ಕ ಕುಟುಂಬದ ವಾತ್ಸಲ್ಯದ ಆದರಾತಿಥ್ಯದ ಕುರಿತು ತನ್ನ ಹೆಂಡತಿಗೆ ಬರೆದನು. ಅವರ ಮನೆಯನ್ನು ವರ್ಣಿಸಿ, ಅಲ್ಲಿ ಅತಿಥಿಗಳು ತಮ್ಮ ಮನೆಯಲ್ಲಿಯಂತೆಯೆ ಬೇಕಾದಂತೆ ಒಡನಾಡಬಹುದು, ನಡೆದಾಡಬಹುದು. ಬಿಸ್ಮಾರ್ಕನು ರಾಯಭಾರಿ ಪದವನ್ನು ಸ್ವೀಕರಿಸಿದ ವಿಚಿತ್ರ ಪರಿಯನ್ನು ಆತ ಬಣ್ಣಿಸಿದ್ದಾನೆ. 'ಒಂದು ದಿನ ಒಮ್ಮೆಲೆ ಮಂತ್ರಿ ಮಂಟ್ಯುಫೆಲ್ ಅವನನ್ನು ಕರೆದು, ಫ್ರಾಂಕಫೋರ್ಟದಲ್ಲಿ ರಾಯಭಾರಿಯ ಸ್ಥಾನವನ್ನು ಸ್ವೀಕರಿಸಲು ಕೇಳಿಕೊಂಡನೆಂದು ಆತ ನನಗೆ ಹೇಳಿದನು. ಅದಕ್ಕೆ ಆತನು ಕೆಲ ಗಳಿಗೆ ಸುಮ್ಮನಿದ್ದು ಪರ್ಯಾಲೋಚಿಸಿ ಉತ್ತರವಿತ್ತನು-'ಸರಿ' ಎಂಬ ಒಂದು ಶಬ್ದದಿಂದ. ರಾಜನೂ ಅದೇ ದಿನ ಅವನನ್ನು ಕರೆಯಿಸಿಕೊಂಡು ರಾಯಭಾರಿಯಾಗುವಿರಾ-ಎಂದು ಅದೇ ವಿಷಯವನ್ನು ಕೇಳಿದನು. ಅದಕ್ಕೂ ಆತನು ಒಂದೇ ಮಾತಿನಲ್ಲಿ 'ಸರಿ' ಎಂದನು. ಆಗ ರಾಜನಿಗೇ ಕೊಂಚ ಆಶ್ಚರ್ಯವಾಯಿತು. ಹೊಸ ಪದಾಧಿಕಾರದ ವಿದ್ಯಮಾನಗಳೇನು ? ವಿಧಿ ನಿಯಮಗಳೇನು ?-ಏನೊಂದೂ ವಿಚಾರಿಸದೆ ಈತ ಒಮ್ಮೆಲೇ ಒಹ್ಮಾತಿನಲ್ಲಿ ಸಮ್ಮತಿಸಿಬಿಟ್ಟನಲ್ಲ !-ಎಂದು ಆಶ್ಚರ್ಯವನ್ನು ವ್ಯಕ್ತ ಮಾಡಿದನು. ಅದಕ್ಕೆ ಬಿಸ್ಮಾರ್ಕನು ವಿಲಂಬವಿಲ್ಲದೆ ಉತ್ತರಿತ್ತನು. 'ರಾಜರು ಯಾವದೊಂದು

ಕಾರ್ಯವನ್ನು ನನಗೆ ಒಪ್ಪಿಸುವಷ್ಟು ಸಮರ್ಥರೆನಿಸಿದಾಗ, ನಾನೂ ಅದನ್ನು ಅಂಗೀಕರಿಸುವಷ್ಟು ಸಮರ್ಥನಿರಬೇಕೆಂದೇ ಭಾವಿಸುತ್ತೇನೆ.' ನಿರುತ್ತರ ನಿಷ್ಠೆಯ ನಿರಂತರ ವಿಧೇಯ ಇದಕ್ಕೂ ಮಿಗಿಲಾದ ಮಾದರಿ ಬೇರೊಂದಿದೆಯೇ ?'

ಫ್ರಾಂಕಫೋರ್ಟಿಗೆ ರಾಯಭಾರಿಯಾಗಿ ಹೊರಟಾಗ, ಬಿಸ್ಮಾರ್ಕನು ೩೬ ವರ್ಷದವ ನಿದ್ದನು. ಈ ಅಧಿಕಾರದಲ್ಲಿದ್ದಾಗ ಆತನು ರಾಜಕೀಯ ಕೂಟನೀತಿಯ ಹಾಗೂ ಮುತ್ಸದ್ದಿತನದ ನಿಜವಾದ ಶಿಕ್ಷಣವನ್ನು ಪಡೆಯಲು ಅವನಿಗೆ ಅನುವಾಯಿತು.

ಫ್ರಾಂಕಫೋರ್ಟಿಗೆ ಹೋಗುವ ಮೊದಲು ಬಿಸ್ಮಾರ್ಕನು ಬಗೆದಿದ್ದನು, ಪ್ರುಸಿಯಾ ಹಾಗೂ ಆಸ್ಟ್ರಿಯಾದ ಹಿತಸಂಬಂಧಗಳು ಒಂದೇ ಎಂದು. ಆದರೆ ಫ್ರಾಂಕಫೋರ್ಟಕ್ಕೆ ಹೋದ ಮೇಲೆ, ಪ್ರುಸಿಯಾವನ್ನು ತನ್ನ ಸರಿಕಟ್ಟಿನ ರಾಜ್ಯವೆಂದು ತಿಳಿಯುವದಿರಲಿ, ಆಸ್ಟ್ರಿಯಾ ಆ ದೇಶದ ಸಾಮರ್ಥ್ಯವನ್ನು ಕಡಿಮೆ ಮಾಡಲು ಎಲ್ಲ ರೀತಿಯಿಂದಲೂ ಹವಣಿಸುತ್ತಿದೆ, ಎಂದು ಅವನಿಗೆ ಕಂಡಿತು. ಆದ್ದರಿಂದ ಬಿಸ್ಮಾರ್ಕ ತನ್ನ ಧೋರಣೆ ಯನ್ನು ಪಲ್ಲಟಿಸಿದನು. ಆಸ್ಟ್ರಿಯಾದೊಡನೆ ಐಕ್ಯವೆಂದರೆ ಆಸ್ಟ್ರಿಯಾದಲ್ಲಿಯೇ ವಿಲಿನೀಕರಣ. ಅದು ಪ್ರುಸಿಯಾದ ಭವ್ಯ ಭವಿತವ್ಯದ ಅಭಿಮಾನಿಯಾದ ದೇಶ ಭಕ್ತನಿಗೆ ಸರ್ವಥಾ ಇಷ್ಟವಿದ್ದಿಲ್ಲ. ಆದ್ದರಿಂದ ಆಸ್ಟ್ರಿಯಾದ ಸರಕಾರವು ಪ್ರುಸಿಯಾ ವನ್ನು ತನ್ನ ಸ್ವಾರ್ಥಕ್ಕಾಗಿ ಬಳಿಸದಿರುವಂತೆ ಜಾಗ್ರತೆಯಾಗಿ ನೋಡಿಕೊಳ್ಳುವದೇ ಆತನ ಹೊಸ ಧೋರಣೆ ಆಯಿತು. ಕ್ರಿಮಿಯಾದಲ್ಲಿ ಯುದ್ಧ ಆರಂಭವಾಯಿತು. ಆಗ ಜರ್ಮನ ದಂಡುಗಳನ್ನು ಆಸ್ಟ್ರಿಯಾ ಪೂರ್ವಪ್ರದೇಶದಲ್ಲಿಯ ತನ್ನ ಆಶೋತ್ತರಗಳನ್ನು ಸಾಧಿಸಿಕೊಳ್ಳಲಿಕ್ಕೆ ಉಪಯೋಗಿಸದಂತೆ ಆತ ವಿಶ್ವ ಪ್ರಯತ್ನವನ್ನು ಮಾಡಿದನು.

೧೮೫೮ ರಲ್ಲಿ ಪ್ರುಸಿಯಾದ ರಾಜನ ಶರೀರ ಸ್ವಾಸ್ಥ್ಯವು ಕೆಟ್ಟಿತು. ಆಗ ರಾಜ್ಯದ ಆಡಳಿತವನ್ನು ನಿರ್ವಹಿಸುವದು ಆತನಿಗೆ ದುಷ್ಕರವಾಯಿತು. ಆಗ ತನ್ನ ತಮ್ಮನನ್ನು ಆತ, ರಾಜ್ಯರಕ್ಷಕನೆಂದು ನೇಮಿಸಬೇಕಾಗಿ ಬಂದಿತು. ಅದೇ ವರ್ಷ ಅನೇಕ ದೊಡ್ಡ ಸ್ಥಿತ್ಯಂತರಗಳು ಒದಗಿ ಬಂದವು. ಬಿಸ್ಮಾರ್ಕನನ್ನು ಫ್ರಾಂಕಫೋರ್ಟದಿಂದ ಎತ್ತಿ, ಸೆಂಟಪಿಟರ್ಸ್‌ಬರ್ಗಕ್ಕೆ ಪ್ರುಸಿಯಾದ ಮಂತ್ರಿಯೆಂದು ಕಳುಹಿಸಲಾಯಿತು. ಅಲ್ಲಿ ಚಳಿಯಲ್ಲಿ ತನ್ನನ್ನು ಒಣಗಲು ಬಿಟ್ಟರೆಂದು ಆತ ಅಂದನು. ಆದರೆ ಪ್ರತಿಷ್ಠೆಯ ಸ್ಥಾನಮಾನದ ದೃಷ್ಟಿಯಿಂದ ಈ ಹೊಸ ಅಧಿಕಾರಪದವು ಒಂದು ಪ್ರಗತಿಯೇ ಆಗಿತ್ತು. ಆದರೆ ಇಲ್ಲಿಯೇ ಆತನ ಪ್ರಕೃತಿ ವಿಪರೀತಕೆಟ್ಟಿತು. ವಾತವಿಕಾರದಿಂದಲೂ ಕರುಳಿನ ರೋಗದಿಂದಲೂ ಆತ ಬಹಳ ಬಳಲಿದನು. ರಜೆಯನ್ನು ಪಡೆದು ಬರ್ಲಿನಿಗೆ

ಬಂದನು. ಅವನ ಹೆಂಡತಿಯನ್ನು ಕರೆಯಿಸಿಕೊಳ್ಳಲಾಯಿತು. ಆಕೆಯ ಆರೈಕೆಯಲ್ಲಿ ಆತ ಸುಧಾರಿಸತೊಡಗಿದನು. ಆದರೆ ಪಿಟರ್ಸ್‌ಬರ್ಗಕ್ಕೆ ಮರಳುವಾಗ ಮಾರ್ಗದಲ್ಲಿ ಮತ್ತೆ ಆ ವ್ಯಾಧಿಯು ಮರುಕಳಿಸಿತು. ಅಂದಿನಿಂದ ಆತ ತನ್ನ ತಾರುಣ್ಯದ ಶಕ್ತಿ ಚೈತನ್ಯಗಳನ್ನು ಮುಂದೆ ಎಂದೂ ಪಡೆಯಲಿಲ್ಲ. ದೇಹ ದೌರ್ಬಲ್ಯದ ಪ್ರಭಾವ ಮನಃಸ್ವಾಸ್ಥ್ಯದ ಮೇಲೂ ಬಿದ್ದಿತು. ಅವನು ಸಿಡುಕಿನ, ಚಂಚಲ ವೃತ್ತಿಯವ ನಾದನು. ಹಿಂದೆ ಹೆಸರಾದ ಅವನ ವಿನೋದ ಬುದ್ಧಿಯೂ ಪ್ರಸನ್ನತೆಯೂ ಮಾಯವಾದವು.

೧೮೬೦ ರ ಬೇಸಿಗೆಯಲ್ಲಿ ಬಿಸ್ಮಾರ್ಕ ರಸಿಯಾಕ್ಕೆ ಮರಳಿ ತನ್ನ ಅಧಿಕಾರವನ್ನು ವಹಿಸಿಕೊಂಡನು. ರಸಿಯಾದ ಆಸ್ಥಾನದಲ್ಲಿ ಆತನು ಬಲು ಮೆಚ್ಚಿಗೆಯನ್ನು ಸಂಪಾದಿಸಿದನು. ಚಕ್ರವರ್ತಿಯ ಹಾಗೂ ಆತನ ಕುಲದ ವಿಶ್ವಾಸಕ್ಕೆ ಪಾತ್ರನಾದನು. ರಸಿಯನ್ ಭಾಷೆಯನ್ನು ಕಲಿತನು. ಆತ್ಮೀಯತೆಯಿಂದ ಅಲ್ಲಿ ಸಮರಸನಾಗಿ ಹೋದನು.

ಆದರೆ ಈಗ ತಾಯ್ನಾಡಿನಲ್ಲಿ ಒಂದು ಬಿಕ್ಕಟ್ಟು ಉಂಟಾಯಿತು. ವಿಲಿಯಮ ಅರಸನು ಸೈನ್ಯವನ್ನು ಸಂಘಟಿಸಿ ವಿಸ್ತರಿಸಲು ಬಯಸಿದನು. ಅವನು ಆ ಕುರಿತು ಸೂಚಿಸಿದ ಕೆಲವು ಕ್ರಮಗಳನ್ನು ಪಾರ್ಲಿಮೆಂಟು ತೀವ್ರವಾಗಿ ವಿರೋಧಿಸಿತು. ತಮಗೆ ಸಮ್ಮತವಿದ್ದ ತಮ್ಮೊಂದಿಗೆ ಒಮ್ಮತವಿದ್ದ ಕೆಲಜನರನ್ನೆ ಅರಸನು ಮಂತ್ರಿಗಳನ್ನಾಗಿ ನೇಮಿಸಿಕೊಳ್ಳಬೇಕೆಂದು ಆ ಸಭೆಯ ಹಟ. ಅರಸನು ಅದನ್ನು ಒಪ್ಪಲಿಲ್ಲ. ಆದರೆ ಅರಸ ಲೋಕಮತವನ್ನು ನಿರಾಕರಿಸಿದ ತನ್ನ ಈ ಧೈರ್ಯಕ್ಕೆ ತಾನೇ ಅಂಜಿದನು. ಘಟನೆಗೆ ವಿರುದ್ಧವಾದ ಕೃತ್ಯಗಳೇನಾದರೂ ತನ್ನಿಂದ ಜರುಗಿ ದೇಶಕ್ಕೆ ದುರಂತವು ಒದಗಬಹುದೆಂದು ವಿಪರೀತ ಚಿಂತೆಗೊಂಡು, ಸಿಂಹಾಸನವನ್ನೇ ಬಿಟ್ಟುಕೊಟ್ಟು ಮಗನಿಗೆ ಪಟ್ಟಬರುವಂತೆ ಮಾಡಿದನು. ಈ ಬಿಕ್ಕಟ್ಟಿನ ಸಂದರ್ಭದಲ್ಲಿ ಬಿಸ್ಮಾರ್ಕನೇ ನೆರೆನಂಬಲಿಕ್ಕೆ ಸರ್ವಥೈವ ಯೋಗ್ಯನೆಂದು ಆತನಿಗೆ ಹಲವರು ಸಲಹೆಯಿತ್ತರು.

ಆದರೆ ಬಿಸ್ಮಾರ್ಕನಿಗೆ ಆಡಳಿತವನ್ನು ಒಪ್ಪಿಸಲು ಅರಸನಿಗೆ ಇನ್ನೂ ಅನುಮಾನ. ಆದ್ದರಿಂದ ಬಿಸ್ಮಾರ್ಕನನ್ನು ರಾಜಧಾನಿಗೆ ಹೆಚ್ಚು ಹತ್ತಿರದಲ್ಲಿಡಲು ಯೋಚಿಸಿದನು. ಈ ಕರೆಯೂ ಹೊಸ ನೇಮಕವೂ ಬಿಸ್ಮಾರ್ಕನಿಗೆ ಅತ್ಯಂತ ಆಕಸ್ಮಿಕವಾದವು. ಅವನದೆಲ್ಲವೂ ಅವ್ಯವಸ್ಥೆಯಾಯಿತು. ಆತ ತನ್ನ ಗೆಳೆಯನೊಬ್ಬನಿಗೆ ಆ ಕುರಿತು ಬರೆದಿದ್ದಾನೆ :

'ನನ್ನ ಗೃಹೋಪಸ್ಕರಗಳೆಲ್ಲ ಪಿಟರ್ಸಬರ್ಗದಲ್ಲಿ ಬಿದ್ದಿವೆ. ಅವು ಅಲ್ಲಿಯೇ ಚಳಿಗೆ

ಕೊರಡಾಗಲಿವೆ. ನನ್ನ ಸಾರೋಟು ಗಾಡಿಗಳೆಲ್ಲ ಸ್ಟೆಟ್ಟೀನದಲ್ಲಿ ಇವೆ. ನನ್ನ ಕುದುರೆಗಳು ಬರ್ಲಿನದಲ್ಲಿ ಉಳಿದಿವೆ. ನನ್ನ ಕುಟುಂಬ ಪೊಮೆರಾನಿಯಾದಲ್ಲಿ ಮತ್ತು ನಾನು ರಾಜಮಾರ್ಗದಲ್ಲಿ ಬಿದ್ದಿದ್ದೇನೆ. !'

ಅವನು ಹೆಚ್ಚು ಹೆಚ್ಚು ಚಂಚಲನಾದನು. ಕೊನೆಗೆ ರಜೆತೆಗೆದುಕೊಂಡು ಸೆಂಟಸೆಬಾಸ್ಟೀನಕ್ಕೆ ಹೋದನು. ಅಲ್ಲಿ ಆತ ಪೂರ್ತಿ ವಿಶ್ರಾಂತಿ ಪಡೆದನು.

ಈ ಸಮಯದಲ್ಲಿ ಅರಸನು ಬಿಸ್ಮಾರ್ಕನನ್ನು ಕರೆಯಿಸಿ, ಅವನಿಗೆ ಅಧ್ಯಕ್ಷ ಮಂತ್ರಿಪದವಿಯನ್ನು ಕೊಟ್ಟನು.

ಈ ಅಧಿಕಾರಪದವು, ಕರೆದುಕಟ್ಟಿಕೊಂಡ ಮುಳ್ಳಿನ ಮುಕುಟವಾಗಿತ್ತು. ಅದರ ಕಾರ್ಯವೇನೂ ಸುಗಮವಿದ್ದಿಲ್ಲ. ಅರಸನಿಗೆ ಬೆಂಬಲವೀಯಲು ಆತ ಪಣ ತೊಟ್ಟಿದ್ದನು. ಅರಸನ ಸರಕಾರವನ್ನು, ಸಾರ್ವಜನಿಕರಿಂದ ರಕ್ಷಿಸುವದು ಆತನ ಕರ್ತವ್ಯವಾಗಿತ್ತು. 'ನರಪತಿ ಹಿತಕರ್ತಾ ದ್ವೇಷ್ಯತಾಂ ಯಾತಿಲೋಕೇ.' ಎಂಬ ಸುಭಾಷಿತ ಯಾವ ದೇಶಕ್ಕೂ ನಿಜವಲ್ಲವೇ ? ಸುಭಾಷಿತವು ಕಲ್ಪಿಸದಂಥ ಇನ್ನೊಂದು ತೊಡಕೂ ಅವನನ್ನು ಕಾಡಿತ್ತು. ನರಪತಿಹಿತಕರ್ತೃವಿಗೂ ನರಪತಿಯ ಹತ್ತಿರದ ಹಿತ ಶತ್ರುಗಳು ಕಾಡುತ್ತಾರೆ. ಆಸ್ಥಾನದಲ್ಲಿ ಆತನ ಪತ್ತುಗೇಡುಮಾಡಿ ತಮ್ಮ ಕೈ ಮೇಲೆ ಮಾಡಲಿಕ್ಕೆ ಹವಣಿಸುವ ಕೆಲವು ಕುತಂತ್ರಿಗಳು ಅರಸನ ಸುತ್ತಲು ಸುಳಿಯುತ್ತಿರುವಾಗ ಅವರ ನಡುವೆ ಬಿಸ್ಮಾರ್ಕ ಜಾಗರೂಕನಾಗಿ ನಡೆಯಬೇಕಾಗುತ್ತಿತ್ತು.

ಅಧ್ಯಕ್ಷಮಂತ್ರಿಯಾದ ಕೆಲವು ತಿಂಗಳು ದೇಶದೊಳಗಿನ ರಾಜಕಾರಣದಲ್ಲಿ ಆತನು ತೊಡಗಿ ಕಳೆದನು. ಈ ರಾಜಕಾರಣವೆಂದರೆ ಪಾರ್ಲಿಮೆಂಟಿನೊಂದಿಗೆ ಕಲಹ. ಆದರೆ ೧೮೬೩ ರಲ್ಲಿ ಆತನು ಮೊತ್ತ ಮೊದಲಿಗೆ ಮಹತ್ವದ ನಿರ್ಣಯವನ್ನು ತೆಗೆದುಕೊಳ್ಳುವ ಪ್ರಸಂಗವು ಬಂದಿತು. ಆಸ್ಟ್ರಿಯಾದ ಚಕ್ರವರ್ತಿಯು ಎಲ್ಲ ಜರ್ಮನ ಸಂಸ್ಥಾನಿಕರನ್ನು ಫ್ರಾಂಕಫೋರ್ಟಿನಲ್ಲಿ ಕರೆದು ಜರ್ಮನ ರಾಜಮಂಡಳದ ಸುಧಾರಣೆಗಾಗಿ ತನ್ನದೇ ಆದ ಕೆಲವು ಸೂಚನೆಗಳನ್ನು ಚರ್ಚಿಸಿ ನಿರ್ಣಯಕ್ಕೆ ಬರಲು ಒಂದು ಸಭೆಯನ್ನು ಕೂಡಿಸಿದನು. ಬಿಸ್ಮಾರ್ಕನು ಈ ಸಭೆಯ ಆಮಂತ್ರಣವನ್ನು ತನ್ನ ರಾಜನು ನಿರಾಕರಿಸುವಂತೆ ಮಾಡಿದನು. ಕೇವಲ ಸಂಸ್ಥಾನಿಕರೆಲ್ಲ ಕೂಡಿ ವೈಯಕ್ತಿಕ ಮಾತುಗಳನ್ನು ಆಡಿ ತಲೆದೂಗಿದರೆ ಆಗಲಿಲ್ಲ; ಅವರವರ ಸರಕಾರಗಳು ಆ ಮುಂಚಿತವಾಗಿ ತತ್ವತಃ ಆ ಸುಧಾರಣೆಗಳನ್ನು ಒಪ್ಪಿಕೊಳ್ಳಬೇಕು; ಅಂದರೆ ಮಾತ್ರ ಅಂಥ ನಿರ್ಣಯಗಳು ಕಾರ್ಯಗತವಾಗುವವು–ಎಂದು ಬಿಸ್ಮಾರ್ಕನು ರಾಜನಿಗೆ

ಕಾರ್ಯಶಕ್ತಿ ಇನ್ನೂ ದಣಿಯದ ಬುಗ್ಗೆ ಆಗಿತ್ತು. ಆದರೆ ಅವನ ರಾಜಕೀಯ ಆಯುಷ್ಯವೇ ಮುಗಿದಿತ್ತು. ಅವನೀಗ ಏಕಾಕಿ-ಏಕಾಂತ ಜೀವಿ. ಅವನ ಒಡನಾಡಿ ಜೀವ, ಅವನ ಜೀವನ ಸಹಚಾರಿಣಿ ಎಂದೋ ಮಡಿದಿದ್ದಳು ಅವನ ಸಹೋದರನೂ ಮಡಿದಿದ್ದನು. ಅವನ ಹಳೆಯುಗೆಳೆಯರೂ 'ಆಚೆಯ ದಂಡೆ'ಯಲ್ಲಿ ಆತನ ದಾರಿನೋಡುತ್ತಿದ್ದರು. ಅವನು ತನ್ನ ಹಳ್ಳಿಯ ಮನೆಗೆ ಮರಳಿದನು. ಆದರೆ ಅವನ ಹೃದಯ ಆತ್ಮ ಅತ್ತ ಬರ್ಲಿನಿನಲ್ಲಿ ರಾಜಕಾರಣದ ಕೇಂದ್ರದಲ್ಲಿ ಸಂಚರಿಸುತ್ತಿತ್ತು. ಅವನಿಗೂ ಹೊಸ ರಾಜನಿಗೂ ೨ವರ್ಷ ಕಾಲ ಕಲಹ ನಡೆಯಿತು. ಆದರೆ ಕೊನೆಗೂ ಬಿಸ್ಮಾರ್ಕನ ೮೦ ನೇ ವರ್ಷದ ಹುಟ್ಟುಹಬ್ಬದ ದಿನ ರಾಜನೇ ಆ ಸಮಾರಂಭಕ್ಕೆ ಬಂದನು. ಅವರೀರ್ವರಲ್ಲಿ ಒಡಂಬಡಿಕೆ ಒದಗಿತು. ರಾಷ್ಟ್ರಕ್ಕೆ ರಾಷ್ಟ್ರವೇ ಅದನ್ನು ಕೇಳಿ ಹಿಗ್ಗಿತು. ರಾಷ್ಟ್ರಪಿತಾಮಹನಂತಿದ್ದ ಭೀಷ್ಮ ಬಿಸ್ಮಾರ್ಕನು ಈಗ ನಿಶ್ಚಿಂತನಾಗಿ ಸ್ವಸ್ಥಚಿತ್ತದಿಂದ ಅಂತ್ಯಕಾಲವನ್ನು ನಿರೀಕ್ಷಿಸಹತ್ತಿದನು. ರಾಜನೊಡನೆ ಬಿಸ್ಮಾರ್ಕನು ಪುನರ್ಮೈತ್ರಿಯನ್ನು ಮಾಡಿಕೊಂಡನೆಂಬ ಸುಖದ ಸುದ್ದಿ, ಕೃತಜ್ಞ ಜನತೆಗೆ ಕೃತಕೃತ್ಯರನ್ನಾಗಿ ಮಾಡಿತು. ಸಾವು ಸಮೀಪಿಸುತ್ತಿತ್ತು. ಅವನ ಗಡ್ಡ ಹಿಂಜಿದ ಬೆಳ್ಳಿ ಆಯಿತು. ಆದರೆ ಆತ ರಾಜಕೀಯ ಅಭಿರುಚಿ ಎಂದಿಗೂ ಕಂದಲಿಲ್ಲ, ಕುಂದಲಿಲ್ಲ. ಅವನ ಮನಸ್ಸು, ಅವನ ತೇಜಸ್ಸು ಕೆಚ್ಚು ಇಳಿಯದೆ, ಅಚ್ಚಳಿಯದೇ ನಿಂತಿದ್ದವು. ಆದರೂ ಪೂರ್ಣವಿರಾಮದ ಚಿನ್ಹವನ್ನು ಕಾಲವು ಆತನ ಜೀವನದ ವಾಕ್ಯಕ್ಕೆ ಬರೆಯಿತು. ೧೮೯೮ ರ ಜುಲೈತಿಂಗಳ ಕೊನೆಯ ದಿನವು, ಅವನ ಕೊನೆಯ ದಿನವೂ ಆಯಿತು. ●

# ನವ್ಯದ ನಾಲ್ಕು ನಾಯಕರು

* ಎಝ್ರಾ ಪೌಂಡ
* ಡಬ್ಲ್ಯೂ. ಬಿ. ಯೇಟ್ಸ
* ಟಿ. ಎಸ್. ಇಲಿಯಟ್
* ಒಡೆನ್ ವಿಸ್ಟ್ಯಾನ ಹ್ಯೂ

# ನವ್ಯದ ನಾಲ್ಕು ನಾಯಕರು

ಪ್ರಾಮುಖ್ಯವಾಗಿ ಈ ೨೦ ನೆಯ **ಶತಮಾನದ ಅರ್ಧಕ್ಕಿಂತ** ಮಿಕ್ಕಭಾಗ (೧೯೩೫-೧೯೬೫) **ಇಲಿಯಟ್ ಯುಗ**ವೆಂದೇ ಇಂಗ್ಲಿಷ ಸಾಹಿತ್ಯದ ಇತಿಹಾಸದಲ್ಲಿ ಪ್ರಸಿದ್ಧ. 'Concise Cambridge History of English Literature' ಇದನ್ನು ಹಾಗೆಯೇ ಹೆಸರಿಸಿದೆ. ಟಿ. ಎಸ್. ಇಲಿಯಟನಿಗೆ ಅವಷ್ಟಂಭಕವಾಗಿ ಇನ್ನು ಮೂರು ಹೆಸರುಗಳೂ ಇಲ್ಲಿ ಸೇರಿವೆ–ವಯೋಮಾನದ ಹಿರಿತನದ ದೃಷ್ಟಿಯಿಂದ. ಇದು ನಿಜವಾಗಿಯೂ ಇಂಗ್ಲಿಷ ಹಾಗೂ ಆ ಮೂಲಕವಾಗಿ ಪ್ರಪಂಚ ಸಾಹಿತ್ಯದಲ್ಲಿ ಆಧುನಿಕ ಕಾವ್ಯ. ಕನ್ನಡದಲ್ಲಿ ಇದನ್ನು ನಾವು **'ನವ್ಯ'**ವೆಂದು ಗುರುತಿಸುತ್ತೇವೆ,–ಇದಕ್ಕೂ ಹಿಂದಿನ ಬಿಂ. ಎಂ. ಶ್ರೀ, ಬೇಂದ್ರೆ, ಕುವೆಂಪು ಅವರ ಕಾವ್ಯದ ಯುಗವಾದ '**ನವೋದಯ**'ದಿಂದ ಬೇರೆಯಾಗಿ. 'ಕಾವ್ಯ' ವೆಂಬ ಹೆಸರೇ ಮುಖ್ಯ. 'ಯುಗ'ವೆಂಬುದು ಒಂದು ಮಾತಿನ ಮುಸಲತ್ತು !

## ಎರ್ಝ್ರಾ ಪೌಂಡ (೧೮೮೫ – ೧೯೭೨)

ಎರ್ಝ್ರಾ ಪೌಂಡನ ಜನನ ೧೮೮೫ ರಲ್ಲಿ. ಅವನ ಹೆಸರು ಇಂಗ್ಲಿಷ ಕಾವ್ಯಕ್ಕಿಂತ ಹೆಚ್ಚಾಗಿ ಅಮೇರಿಕೆಯ ಕಾವ್ಯಪ್ರಪಂಚದಲ್ಲಿ ಸ್ಥಾನವನ್ನು ಪಡೆಯುತ್ತದೆ. ಆದಾಗ್ಯೂ ೨೦ ನೆಯ ಶತಮಾನದ ಇಂಗ್ಲಿಷಕಾವ್ಯದಲ್ಲಿ ಆಯ್ಕೆ ಮಾಡುವ ಸಂದರ್ಭದಲ್ಲಿ, ಆಯ್ಕೆಯು ಎಷ್ಟೇ ತಾರತಮ್ಯದ ವಿವೇಕವುಳ್ಳದಾದರೂ ಪೌಂಡನು ಬರೆದಕಾವ್ಯ, ಅವನ ಚಟುವಟಿಕೆಗಳು, ಅವುಗಳ ಹಿಂದಿನ ಅವನ ವ್ಯಕ್ತಿತ್ವ ಯಾವುದನ್ನೂ ಅಲಕ್ಷಿಸುವಂತಿಲ್ಲ. ೧೯೦೮ ರಿಂದ ೧೯೨೦ ರ ತನಕವೂ ಪೌಂಡನು ಲಂಡನ ನಗರವನ್ನು ತನ್ನ ಕೇಂದ್ರವಾಗಿ ಮಾಡಿಕೊಂಡು ಅಂದು ಇಂಗ್ಲಿಷ ಸಾಹಿತ್ಯಿಕ ಪ್ರಪಂಚದಲ್ಲಿ ಹೋರಲ್ಪಡುತ್ತಿದ್ದ ಆಯಕಟ್ಟಿನ ಸಾಹಿತ್ಯದ ಹಾಗೂ ಕಲಾತ್ಮಕದ ಸಮರಗಳಲ್ಲಿ ಹಿರಿಹುದ್ದರಿಯಾಗಿ ನಿರ್ಣಾಯಕವಾಗಿ ಭಾಗವಹಿಸಿದನು.

ವಿಶೇಷವಾಗಿ ಹಲವಾರು ವರ್ಷ ಆತ ತರುಣ ಟಿ. ಎಸ್. ಇಲಿಯಟನ ಪ್ರೋತ್ಸಾಹಕನಾಗಿ, ಮಾರ್ಗದರ್ಶಕನಾಗಿ ನಡೆದನು. ಅದೇ ಕಾಲ ಖಂಡದಲ್ಲಿ

ಪೌಂಡನ ಮುಖ್ಯಕೃತಿಗಳು 'Homage to Sextus Properitus' (1917) ಮತ್ತು 'Hugh Selwyn Manberly' ಆಗಿನ ಬ್ರಿಟಿಷ ಸಂಸ್ಕೃತಿಯ ವಿಚಿಕಿತ್ಸೆ ಮತ್ತು ಚಿತ್ರಣಕ್ಕಾಗಿ ಮಾಡಿದ ಸ್ಪಷ್ಟವಾದ ಪ್ರಯತ್ನಗಳಾಗಿದ್ದವು. ಇವೆರಡರಲ್ಲಿ ಹೂಸಿಲ್ವಿನ್ ಮೊಬರ್ಲಿ ಎಂಬ ಕಾವ್ಯವು, ಆ ಕವಿಯೂ ಅಮೇರಿಕನನಾಗಿದ್ದರೂ,-ಇಂಗ್ಲಿಷ ಕಾವ್ಯ ಸಂಪ್ರದಾಯದಲ್ಲಿ ಸ್ವೀಕರಿಸಲ್ಪಟ್ಟಿದೆ. ಆದ್ದರಿಂದ ಆತನನ್ನು ಕಡೆಗಣಿಸುವಂತೆ ಇಲ್ಲ. ಮುಂದೆ ಪ್ರತಿಯೊಬ್ಬ ಬ್ರಿಟಿಷ ಕವಿಯೂ ತನ್ನ ವೃತ್ತಿಯ ಬಗೆಗೆ ಗಂಭೀರವಾಗಿ ಆಲೋಚಿಸುವವನಾಗಿದ್ದರೆ ಈ ಕಾವ್ಯದೊಂದಿಗೆ ಹೊಂದಿಕೊಳ್ಳುವ ಅಗತ್ಯವನ್ನು ಒಪ್ಪಿಕೊಂಡಿದ್ದಾನೆ. ಅದರ ನಿರ್ಣಾಯಕ ಅಭಿಪ್ರಾಯಗಳನ್ನು ಪುರಸ್ಕರಿಸಿಯೋ ತಿರಸ್ಕರಿಸಿಯೋ ಬ್ರಿಟಿಷ ಸಂಸ್ಕೃತಿಯನ್ನು ಅರ್ಥೈಸಿಕೊಂಡಿದ್ದಾನೆ.

ಇಲ್ಲಿ ಒಂದು ಮಾತನ್ನು ಒತ್ತಿ ಹೇಳಬೇಕು. ಪೌಂಡ ಮತ್ತು ಇಲಿಯಟ ಇಬ್ಬರೂ ಅಮೇರಿಕೆಯ ಮೂಲದವರು. ಇಬ್ಬರೂ ಸಮಕಾಲಿಕರು. ಅನ್ಯೋನ್ಯರು. ಇಬ್ಬರ ಕವನ ಶೈಲಿಯಲ್ಲಿಯೂ ಒಂದು ವಿಧದ ಸಾರೂಪ್ಯವಿದೆ. ಆದರೆ ಸಾಮ್ಯವಿಲ್ಲ. ಆದರೂ ಎಝ್ರಾ ಪೌಂಡ ಇಲಿಯಟನಿಗೆ ಒಂದು ರೀತಿ ಪಥಪ್ರದರ್ಶಕ. ಇಲಿಯಟನ Waste Land ಕಾವ್ಯವನ್ನು ಸಂಪಾದಿಸಿ ಪ್ರಕಟಿಸಲು ಮುಂದೆ ಬಂದವನು. ಹಾಗೆಯೇ ಸ್ಥೂಲವಾಗಿ ಕಾವ್ಯ ಸಂಯೋಜನೆಯಲ್ಲಿ ಸಂಕೀರ್ಣವಾದ ಸಂಪರ್ಕ ಸಂಯೋಜನೆಗಳಿಂದ ಹತ್ತಿರದ ದೂರದ ಹಳೆಯ ಹೊಸ ಉಕ್ತಿ ಉದಾಹರಣೆಗಳನ್ನು ಉದ್ಧರಿಸಿ ಹೆಣೆದು ಇಡುವ ತಂತ್ರದಿಂದ ಒಂದೇ ರೀತಿಯ ತಂತ್ರವನ್ನು ಉಪಯೋಗಿಸಿದವರು. ಆದಾಗ್ಯೂ ಈ ರೀತಿ ತಂತ್ರಗಳ ಉದ್ದೇಶ ಉಪಯೋಗಗಳು ಇಬ್ಬರಿಗೂ ಬೇರೆ ಬೇರೆ. ಆದರೆ ಇಬ್ಬರಲ್ಲಿಯೂ ಈ ಬಗೆಯ ದುರೂಹವಾದ ದೂರಾನ್ವಯವನ್ನು ಬಳಸುವ ಕೈಚಳಕವು ಒಂದು ಮಹತ್ವದ ಸಮಾನಧರ್ಮ.

ಅದೇನೇ ಇರಲಿ, ಎಝ್ರಾ ಪೌಂಡ ಒಬ್ಬ ಅಮೇರಿಕನ್ ಕವಿ. ಕವಿಯೆಂದು ಅವನ ಬಗೆಗೆ ಭವಿತವ್ಯದ ನಿರ್ಣಯವು ಏನೇ ಆಗಿರಲಿ, ಒಂದು ಸತ್ಯವನ್ನು ಅವನ ಬಗೆಗೆ ಯಾರೂ ಅಲ್ಲಗಳೆಯಲಾರರು. ಪೌಂಡನು ೨೦ ನೆಯ ಶತಮಾನದ ಆಧುನಿಕ ಆಂದೋಲನವಾದ ನಮ್ಮ ಮಾತಿನಲ್ಲಿ 'ನವ್ಯ'ಕಾವ್ಯವೆಂದು ಎಣಿಸಲಾದ ಸಾಹಿತ್ಯ ಚಟುವಟಿಕೆ ಅಥವಾ ಚಳವಳಿಯ ನೇರ ಮಧ್ಯಬಿಂದುವೇ ಆಗಿದ್ದನು. ಅವನು ಅಮೇರಿಕೆಯ ವಾಯುವ್ಯ ಭಾಗದಿಂದ ಬಂದವನು. ಪೆನ್‌ಸಿಲವೇನಿಯಾ ವಿಶ್ವವಿದ್ಯಾಲಯದಲ್ಲಿ ಶಿಕ್ಷಣಪಡೆದವನು ಮತ್ತು ೧೯೦೭ ರಲ್ಲಿ ಕಾವ್ಯದ ಧರ್ಮ ವೀರನಂತೆ ವಿದೇಶಗಳಲ್ಲಿ ಹೋಗಿ ಹೊಸ ಬಗೆಯ ಕಾವ್ಯಕ್ಕಾಗಿ ಹೋರಾಡಿದವನು.

ಇದರಲ್ಲಿ ಆತ ಆಧುನಿಕರೆನಿಸಿಕೊಂಡ ಗಣ್ಯ ಕವಿಗಳೊಂದಿಗೆ ಮುಖಾಮುಖಿಗೊಂಡನು.

ಪೌಂಡ ಹೊಸ ಎಳೆವರೆಯದ ಕವಿಗಳಿಗೆ ಸಹಾಯ ಮಾಡುತ್ತ ಕಾವ್ಯಕರ್ಮದ ಬಗೆಗೆ ಆಳವಾದ ಆಸಕ್ತಿಯನ್ನು ತಾಳಿದವನಾಗಿ ಅಂದಿನ ಹಿರಿಯ ಪ್ರೌಢಕವಿಗಳ ಗೆಳೆತನವನ್ನೂ ಗಳಿಸಿದನು. ಇವರಲ್ಲಿ ಡಬ್ಲ್ಯೂ. ಬಿ. ಯೇಟ್ಸನೂ ಒಬ್ಬನು. (ಪೌಂಡನು ಇಟಲಿಯಲ್ಲಿ ಇದ್ದಾಗ ಕಾವ್ಯದ ಕುರಿತು ಅವನೊಂದಿಗೆ ವಿಚಾರ ವಿನಿಮಯ ಮಾಡಲಿಕ್ಕೆ ಯೇಟ್ಸನೂ ಇದ್ದನು.) ಇಂಥ ಒಡನಾಟಕ್ಕೆ ಅನುಕೂಲ ವಾದದ್ದು–ಪೌಂಡನು Poetry A Masazine of Verse ಎಂಬ–ಕಾವ್ಯಕ್ಕೇ ಮೀಸಲಾದ ನಿಯತಕಾಲಿಕಕ್ಕೇ ವಿದೇಶೀ ಸಂಪಾದಕನಾಗಿದ್ದುದು. ಆ ಮೂಲಕ ಪೌಂಡ ತರುಣ ಕವಿಗಳಾದ ರಾಬರ್ಟ ಫ್ರಾಸ್ಟ, ಟಿ. ಎಸ್. ಇಲಿಯಟ ಮುಂತಾದವರ ಗೆಳೆಯನಾದನು. ಇಲಿಯಟನ ಪ್ರಮುಖ ಕವನ Waste Land ಸಂಪಾದಿಸಿ ಪ್ರಕಟಿಸಲೂ ಕಾರಣನಾದನು. ಇಲಿಯಟನೂ ತನ್ನ ಕವನ ಸಂಕಲನ ವೊಂದನ್ನು ಎಝ್ರಾ ಪೌಂಡನಿಗೆ ಸಮರ್ಪಿಸಿವನು. ಹಾಗೆಯೇ ವಿಂಡ್ಯಾಂ ಲಿವೀಸನಿಗೂ ನೆರವಾದನು. ಜೇಮ್ಸ ಜಾಯ್ಸನ ಬೃಹತ್ಕಾದಂಬರಿ 'ಯುಲಿಸಿಸ್'ದ ಪ್ರಕಾಶನಕ್ಕೆ ತನ್ನ ವ್ಯವಹಾರಿಕ ಸಲಹೆ ನೀಡಿ ನೆರವಾದನು. ಹೀಗೆ ಇಂಗ್ಲಿಷಿನಲ್ಲಿ–ಇಂಗ್ಲಂಡದ ಕಾವ್ಯ ಪ್ರಪಂಚದಲ್ಲಿ ನವಯುಗದ ಹುಟ್ಟಿಗೆ ಸೂಲಗಿತ್ತಿ ಆದನು !

ಪೌಂಡನು Imagist ಪಂಥದ ಕಾವ್ಯ ಬರೆದನು. ಪುರಸ್ಕರಿಸಿದನು. ಈ ಪಂಥದ ಮೂಲವೂ ಫ್ರೆಂಚಕವಿಗಳಲ್ಲಿಯೇ ಆಯಿತು. ಮುಖ್ಯವಾಗಿ ಪೌಂಡನೇ ಅಂದಂತೆ ಈ ಕಾವ್ಯದಲ್ಲಿ, ಕಾವ್ಯದ ರಚನೆಯಲ್ಲಿ ಮಾತ್ರಾಲಯಗಳಿಗಿಂತ ನಾದ (ಗೀತ) ಲಯಕ್ಕೆ ಹೆಚ್ಚಿನ ಪ್ರಾಧಾನ್ಯ. ('stress in the sequence of the musical phrase, not in the sequence of a metronome') ಪೌಂಡನ ಆರಂಭದ ಕವನ ಸಂಕಲನ Homage to Sextus Properitus (೧೯೧೭). ಅವರ ನಂತರ ಬಂದದ್ದು Hugh Selwyn Manberly (೧೯೨೦). ಇದು ಆಧುನಿಕ ಬದುಕಿನ ಅಸ್ವಸ್ಥತೆಯ ಕುರಿತೇ ಆಗಿತ್ತು. ಈ ಕಾವ್ಯ ಅಂದಿನ ಕವಿಗಳ ಪ್ರಪಂಚದ ಗಮನ ವನ್ನೂ ಸೆಳೆಯಿತು–ಇಲಿಯಟನ Waste Land ದಂತೆ. ಮುಂದೆ ಪೌಂಡನು ಹಲವು ವರ್ಷ Contos ಎಂಬ ಕವನ ಸಂಪುಟಗಳನ್ನು ರಚಿಸಿವನು. ಅವುಗಳಲ್ಲಿ ದೂರಾನ್ವಯ ದುರೂಹತೆಗಳ ಅವತರಣಿಕೆಗಳು, ಆಡುಮಾತಿನ ಜಾಡು, ಚೀನೀ ಮುಂತಾದ ಹಲವು ಭಾಷೆಗಳ ಹಾಗೂ ಶೈಲಿಗಳ ಪ್ರಯೋಗಗಳು–ಇವುಗಳ ಮೇರೆ ಕಟ್ಟಿದಂತೆ ಇರುವವು. ಆಧುನಿಕ ಜಗತ್ತಿನ ಸಂಸ್ಕೃತಿಯ ಹಾಗೂ ಬದುಕಿನ ಭೇದಗಳು

ಕವಿಯ ಮನೋವೇದಿಕೆಯಲ್ಲಿ ಹಾದುಹೋದಂತೆ, ಪೌರಾತ್ಯ, ಪಾಶ್ಚಾತ್ಯ ಈ Cantos ಅಧ್ಯಾಯಗಳು ಒಂದು ಬೌದ್ಧಿಕ ಇತಿಹಾಸದ ಕಾವ್ಯಮಯ ದರ್ಶನವೇ ಆಗಿದೆ.

ಎರ್ಝ್ರಾ ಪೌಂಡನ ಪ್ರಬಂಧಗಳು ಅಲಂಕಾರ ಮತ್ತು ವಾಗ್ಮಿತೆಗಳಿಂದ ಕೂಡಿವೆ. ಅವನ ಪತ್ರಗಳು ೧೯೫೦ ರಲ್ಲಿ ಪ್ರಸಿದ್ಧವಾದವು. ಅವು ತುಂಬ ಜಗಳಗಂಟ ಮತ್ತು ಸೂಟಿಯಾಗಿವೆ. ಪೌಂಡನ ಮನಸ್ಸು ಚಂಚಲ. ದುಡುಕಿನದು. ಬುದ್ಧಿ ಮತ್ತೆ ಮತ್ತು ಕಾವ್ಯ ಕಲೆಯ ಕುರಿತು ಮೇಲ್ಮೆಯ ಆದರ್ಶ ಆಶೋತ್ತರಗಳಿದ್ದವರನ್ನು ಪ್ರೋತ್ಸಾಹಿಸಲು, ಸಂರಕ್ಷಿಸಲು ಅವನು ಯಾವಾಗಲೂ ತತ್ಪರನಿದ್ದನು.

ಆದರೆ ಅವನ ಬದುಕಿನಲ್ಲಿ ಒಂದು ಅಚಾತುರ್ಯವು ಘಟಿಸಿತು. ೨ ನೆಯ ಮಹಾ ಯುದ್ಧದ ಸಂಧಿಕಾಲದಲ್ಲಿ ಆತ ಫ್ಯಾಸಿಸ್ಟ್ ರಾಷ್ಟ್ರಗಳ ಹಾಗೂ ವಿಚಾರಧಾರೆಯ ಪರವಾಗಿ, ಇಟಲಿಯ ಬೆನಿಟೊ ಮುಸೊಲಿನಿಯನ್ನು ಪುರಸ್ಕರಿಸಿ ಬಾನುಲಿಯಲ್ಲಿ ಪ್ರಚಾರಗೈದನು. ಆದರೆ ಅದಕ್ಕಾಗಿ ವಿಚಾರಣೆ ಮತ್ತು ದಂಡನೆಗಳಿಂದ ಪಾರಾದನು. ಪೌಂಡ ಆ ಕಾಲಕ್ಕೆ ಮಾನಸಿಕವಾಗಿ ಅಸ್ವಸ್ಥನೂ ಭ್ರಾಂತನೂ ಎಂದು ತೀರ್ಮಾನ ವಾಯಿತು. ಶತ್ರುಗಳಿಗೆ ಸಹಾಯವನ್ನೂ ಅಥವಾ ಸಾಂತ್ವನೆಯನ್ನೂ ನೀಡುವ ಶಕ್ತಿ ಅವನಲ್ಲಿ ಇಲ್ಲವೆಂದಾಯಿತು. ೧೯೪೬ ರಿಂದ ೧೯೫೮ ರ ವರೆಗೆ ಪೌಂಡ ವಾ ಶಿ ಂ ಗ ಟ ನ್ (ಅಮೇರಿಕೆ)ದಲ್ಲಿ ಸಂತ ಎಲಿಝಾಬೆಥ್ ಆಸ್ಪತ್ರೆಯಲ್ಲಿಯೇ ಉಳಿದನು–ಚಿಕಿತ್ಸೆಗಾಗಿ. ಅಲ್ಲಿಂದ ಬಿಡುಗಡೆಯಾದ ಮೇಲೆ ಪೌಂಡ ತಿರುಗಿ ಇಟಲಿಗೆ ಬಂದನು. ಇಟಲಿಯಲ್ಲಿಯೇ ಆತ ಬಹಳಷ್ಟು ವರ್ಷ ವಾಸಿಸಿದ್ದನು. ಎರ್ಝ್ರಾ ಪೌಂಡನ ಖಾಸಗೀ ಚರಿತ್ರೆ ಏನೇ ಆಗಿರಲಿ, ಆತನ ಕಾವ್ಯ ಉನ್ನತ ಸಾಮರ್ಥ್ಯದ್ದೂ ಆದರೆ ಅವನ ಕವನಗಳು ವಿಕ್ಷಿಪ್ತ ಚಿ ತ್ತ ವ ನ್ನು ಚಂಚಲ ಪ್ರತಿಭೆಯನ್ನೂ ಪ್ರಕಟಿಸುವುದುಂಟು. ಅದೇ ರೀತಿ ಅವನ ತೀವ್ರವಾದ ಕಾವ್ಯ ಪ್ರಜ್ಞೆಯ 'ಕಿವಿ' ಯನ್ನೂ ಅವು ವ್ಯಕ್ತಪಡಿಸುತ್ತವೆಂದೂ ಉಂಟು.

ನಮಗೆ ಗೊತ್ತಾದ ಮೊತ್ತಮೊದಲಿನ ಇಂಗ್ಲಿಷ ಕವಿ ೬ ನೆಯ ಶತಮಾನದ ಒಬ್ಬ ಅಲೆಮಾರಿ. ಸಂಚಾರಿ ಕವನಗಾರ. ಅವನ ಅಡ್ಡ ಹೆಸರೊ, ಇಟ್ಟ ಹೆಸರೋ 'ವಿಡ್ಸಿಥ್' (Widsith). ಅವನ ಕೃತಿ ೧೫೦ ಸಾಲುಳ್ಳ 'ಎಕ್ಸೆಟರ್ ಪುಸ್ತಕ' (Exeter Book). ಈ ಪುಸ್ತಕದಲ್ಲಿ ಬರುವ ಹೆಸರುಗಳೆಲ್ಲ ಏನೋ, ಎಲ್ಲಿಯವೋ ಗೊತ್ತಿಲ್ಲ. ಆದರೆ ಈ ಕವನಗಳಲ್ಲಿಯ ಹರ್ಷಶೋಕಗಳು ಆ ಶತಮಾನದಾಚೆ ಯಿಂದಲೂ ಇಂದಿಗೂ ಸ್ಪಂದಿಸುತ್ತವೆ. ಇಲ್ಲಿಯ Deors' Lament, The Wanderer, The Seafarer ಮುಂತಾದ ಕವನಗಳ ರೂ ಪಾ ಂ ತ ರ ಗ ಳು

ಭಾವಾರ್ಥಗಳು ಆಧುನಿಕ ಇಂಗ್ಲಿಷನಲ್ಲಿಯೂ ಕಾಣಿಸಿಕೊಂಡಿವೆ. ಅಂಥವುಗಳಲ್ಲಿ ಎರ್ಝ್ರಾ ಪೌಂಡ ಬರೆದದ್ದು ಮೊದಲಿನದು, ರಿಪೋಸ್ಟ್ಸ (Repostes-೧೯೧೨)

'ಚಿಂತೆಯ ದುರ್ದಶೆ-ಹಿಮಾಚಳಿ ಕಡಲುಟ್ಟ
ಚಳಿಗಾಲ ಕಳೆದೆವು. ಕಂಗೆಟ್ಟು ನಾಡುಗೆಟ್ಟ
ನನ್ನ ಬಳಗದವರೆಲ್ಲ ಕೈಬಿಟ್ಟ
ಬರ್ಫದ ತುಣುಕು ತೂಗಾಡುತ್ತ, ಆವಿ ಆಲಿದಟ್ಟ'

ತನ್ನ ಯುಗದ ಅತಿ ಹಿರಿಯ ಕವಿ ಯೇಟ್ಸನೇ ಎಂದು ಪೌಂಡನೂ ಒಪ್ಪಿದಂತಿತ್ತು. ಯೇಟ್ಸನೂ ಎರ್ಝ್ರಾ ಪೌಂಡನಿಗೆ ತನ್ನ ಒಂದು ಪ್ರಬಂಧ ಸಂಕಲನವನ್ನು ಅರ್ಪಿಸಿದನು. ಅಮೇರಿಕೆಯಲ್ಲಿ ಇಡಾಹೋ ( Idaho ) ಪಟ್ಟಣದಲ್ಲಿ ಹುಟ್ಟಿದ ಪೌಂಡನ ಇಂಗ್ಲಿಷ ಅಕ್ಷರ ಜೋಡಣೆ (Spelling) ಕೆಲವೆಡೆಗೆ ತನ್ನದೇ ಆಗಿತ್ತು. ಆತ 'Culture' ಶಬ್ದವನ್ನು 'kulcher' ಎಂದು ಬರೆಯುತ್ತಿದ್ದನು. ಯೇಟ್ಸನಂತೆ ಟಿ. ಎಸ್. ಇಲಿಯಟನನ್ನೂ ಪೌಂಡ ತುಂಬ ಪ್ರೀತ್ಯಾದರಗಳಿಂದ ಕಾಣುತ್ತಿದ್ದನು. ಇಲಿಯಟ್ ಅಂದಿನ ಪ್ರಮುಖ ವಿಮರ್ಶಕನೆಂದು ಪೌಂಡ ಒಪ್ಪಿಕೊಂಡಿದ್ದನು. ಹಿಂದೊಮ್ಮೆ ಹೇಳಿದಂತೆ ಪೌಂಡನು ಇಲಿಯಟನನ್ನು 'ಇಂಗ್ಲಿಷ ಸಾಹಿತ್ಯದ ಕುಲಪತಿ' ಎಂದೂ ಕರೆದನು. (Dean of English Letters) ನಿಜವಾಗಿಯೂ ಇವರಿಬ್ಬರೂ ಇಂಗ್ಲಿಷ ಕಾವ್ಯದಲ್ಲಿ-ಮತ್ತು ಆ ಮೂಲಕ ಪೂರ್ವ ಪಶ್ಚಿಮಗಳ ಕಾವ್ಯ ಲೋಕದಲ್ಲಿ ಒಂದು ಕ್ರಾಂತಿಯನ್ನೇ ತರುವಂಥವರಾದರು. ಆದರೂ ೧೯೨೨ಕ್ಕಿಂತ ಮೊದಲು ಇವರಿಬ್ಬರ ಕವನಗಳು, ಅಮೇರಿಕೆಯ ಮಟ್ಟಿಗೆ ಹೇಳುವುದಾದರೆ, ತೀರ ಕಡಿಮೆ ವಾಚಕರ ವಲಯವನ್ನು ಮುಟ್ಟಿದವು. (ನಮ್ಮ ಕನ್ನಡದಲ್ಲಿಯಂತೂ ಅವು ಕವಿಜನರಿಗೆ ಪ್ರಿಯವಾದದ್ದು ೨ ನೆಯ ಮಹಾ ಯುದ್ಧವು ಮುಗಿದ ಮೇಲೆಯೇ !) ಇಂಗ್ಲಂಡ ಅಮೇರಿಕೆಗಳಲ್ಲಿಯೂ ಇವರಿಬ್ಬರ ಹೊಸಕಾವ್ಯ ಯುವ ಜನಾಂಗದ ಕಣ್ಮನಗಳನ್ನು ಆಳವಾಗಿ ಸೆಳೆದದ್ದು ೨ ನೆಯ ಮಹಾಯುದ್ಧದ ನಂತರ ಉದ್ವಸ್ಥ ತಲೆಮಾರುಗಳಲ್ಲಿಯೇ. ಎರ್ಝ್ರಾ ಪೌಂಡನ ಹ್ಯೂ ಸೆಲ್ವಿನ್ ಮೊಬರ್ಲಿ ಮತ್ತು ಇಲಿಯಟನ ವೇಸ್ಟ್‌ಲ್ಯಾಂಡ್, ಆ ಹಿಂದಿನ ಜಾರ್ಜಿಯನ್ ಮಾದರಿಯ ಕಾವ್ಯದಿಂದ ತೀರಭಿನ್ನವಾಗಿ ಪರಿಣಾಮ ಮಾಡಿದವು. ಒಂದು ಸಂಕೀರ್ಣ ಸಾಹಿತ್ಯಿಕ ಸಂಪರ್ಕಗಳ ನೆಯ್ಗೆಯ ಸಾಮ್ಯವನ್ನು ಮರೆತರೆ ಇಲಿಯಟನ ಕಾವ್ಯ ಪೌಂಡನ ಕೃತಿಯಿಂದ ಶೈಲಿ, ಆಶಯ ಮತ್ತು ಅಭಿವ್ಯಕ್ತಿ ಯಲ್ಲಿ ತೀರ ಭಿನ್ನವೂ ಮೌಲಿಕವೂ ಆಗಿದೆ. ಇಲಿಯಟನ ಕೃತಿಗಳಲ್ಲಿ ರೂಪಗೊಂಡ ಆಧುನಿಕ ಯುಗದ ಪ್ರಜ್ಞೆ ಅಷ್ಟು ವ್ಯಾಪಕವಾಗಿ ನೇತ್ರ ದೀಪಕವಾಗಿ ಎರ್ಝ್ರಾ ಪೌಂಡನ ಕೃತಿಗಳಲ್ಲಿ ಮೂಡಿಲ್ಲ. ಇವು ತಮ್ಮ ವ್ಯಾಮಿಶ್ರ ವಾಙ್ಮಯೀನ ಯೋಜನೆ

( allusions ) ಗಳಿಂದ ಜಡವಾಗಿದೆ. ಅಲ್ಲದೆ ಇಂಥ ನವ್ಯ ಶೈಲಿ ಓದುಗರಿಂದ ವಿಶೇಷ ಹಾಗೂ ವೈವಿಧ್ಯಮಯ ಪಾಂಡಿತ್ಯವನ್ನು ಅಥವಾ ಬಹುಶ್ರುತ ಪ್ರಜ್ಞೆಯನ್ನು ಅಪೇಕ್ಷಿಸುತ್ತದೆ. ಅದಿಲ್ಲದೆ ಪೌಂಡನ-ಹಾಗೆಯೇ ಇಲಿಯಟನ ಕಾವ್ಯದ ಆಸ್ವಾದನೆ, ರಸಾನುಭವ ಸಾಧ್ಯವಾಗುವಂತಿಲ್ಲ. ಇದರ ವಿವೇಚನೆಗೆ ಈ ಪುಟ್ಟ ಪ್ರಬಂಧದಲ್ಲಿ ಸ್ಥಳವಿಲ್ಲ.

ಪೌಂಡನ ಸಾಹಿತ್ಯ ವಿಮರ್ಶೆಯಲ್ಲಿ ಆತ ಆಧುನಿಕ ಕಾದಂಬರಿ ತಂತ್ರದ ಕ್ರಾಂತಿ ಪುರುಷ ಜೇಮ್ಸ್ ಜಾಯ್ಸನ (James Joyce) ಕುರಿತು ಬರೆದ ಪ್ರಬಂಧಗಳು ಮುಖ್ಯ. ಜೇಮ್ಸ್ ಜಾಯ್ಸನು ತನ್ನ 'ಯುಲಿಸಿಸ್' ಕಾದಂಬರಿಯಲ್ಲಿ,-ಇದರಲ್ಲಿ ಎಲ್ಲೂ ವಿರಾಮ ಚಿನ್ಹೆಗಳೇ ಇಲ್ಲ!-ಸರ್ವೇ ಸಾಮಾನ್ಯ ಮನುಷ್ಯನನ್ನು (The Average Man) ಚಿತ್ರಿಸುವುದರಲ್ಲಿಯೇ ಯಶಸ್ವಿಯಾಗಿದ್ದಾನೆಂದು ಹೊಗಳಿದ್ದಾನೆ. ಕವಿಯಿರಲಿ, ಕಥೆ-ಕಾದಂಬರಿ ಲೇಖಕರಿರಲಿ ಇವರೆಲ್ಲ ಆಧುನಿಕ ನವ್ಯ ಯುಗ ಪ್ರವರ್ತಕರು. ಸ್ವಚ್ಛಂದ ಮುಕ್ತ ಮನೋವ್ಯಾಪಾರದ ಪ್ರವಾಹವನ್ನು ಪುರಸ್ಕರಿಸುವವರು !

ಇನ್ನು ಟಿ. ಎಸ್. ಇಲಿಯಟನಂತೆಯೇ ಎಝ್ರಾ ಪೌಂಡನ ಕಾವ್ಯಶೈಲಿ ಅಥವಾ ಕವನ ರಚನಾ ತಂತ್ರದ ಬಗೆಗೆ ಸ್ವಲ್ಪದರಲ್ಲಿ ಹೀಗೆ ಹೇಳಬಹುದು :

೧. ಕವನದ ಸೊಲ್ಲುಗಳಲ್ಲಿ ಭಾರವಾದ ಅವತರಣಿಕೆಗಳು. ಅನೇಕಸಲ ಅವು ಯಾರದೆಂದು ಹೇಳಲಾಗದವು. ನಿಬಿಡವಾಗಿ ನೆಯ್ದು ಬರುವುದು. ಇಂಥವು ಹೆಚ್ಚಾಗಿ ಹಳೆಯ ಅಥವಾ ಹಿಂದಿನ ಕವಿಗಳ ಕೃತಿಗಳಿಗೆ ಸೇರಿದವು.

೨. ನೇರ ಅವತರಣಿಕೆಗಳು ಎತ್ತಿಕೊಟ್ಟ ವಚನ ಉಕ್ತಿಗಳು ಅಲ್ಲದಿದ್ದರೂ ಇತರ ಗಣ್ಯ ಕೃತಿಗಳ ಹಾಗೂ ಅವುಗಳಲ್ಲಿ ಬರುವ ವ್ಯಕ್ತಿ-ಸಂದರ್ಭಗಳ ಉಲ್ಲೇಖ, ಸಂಯೋಜನೆ ಇತ್ಯಾದಿಗಳನ್ನು ಅಲ್ಲಲ್ಲಿ ಬಳಸುವದು. ಈ ತಂತ್ರವು ಇಲಿಯಟನ ಕೃತಿಗಳಿಗಿಂತ ಪೌಂಡನ ಕೃತಿಗಳಲ್ಲಿ ಹೆಚ್ಚು ದಟ್ಟವಾಗಿ ಬರುತ್ತವೆ. ಅವನ ಇಂಥ ಕೃತಿ ಸಂಯೋಜನೆಗಳು( Allusions )ಹೆಚ್ಚು ವಕ್ರ. ಊಹಿಸಲು ಕಷ್ಟವಾಗಿ ಇರುತ್ತವೆ (ಇದರಿಂದ ಬಡ ಓದುಗ ಸಹಜವಾಗಿಯೇ ತಾಳ್ಮೆಗೆಡುತ್ತಾನೆ.) ಇದರಿಂದ ಇಲಿಯಟನಿಗಿಂತ ಪೌಂಡನು ಹೆಚ್ಚು ಆಕ್ಷೇಪಕ್ಕೆ ಗುರಿಯಾಗುತ್ತಾನೆ. ಆದ್ದರಿಂದ ಪೌಂಡನ ಈ ಪಾಂಡಿತ್ಯ ಪ್ರದರ್ಶನ ಇಲಿಯಟನಿಗಿಂತಲೂ ಹೆಚ್ಚು ತುಂಟತನದ್ದಾಗಿದೆ ಎಂದು ಆರೋಪಕ್ಕೆ ಬಲಿಯಾಗುತ್ತದೆ.

ಇಂಥ 'ಶ್ರುತಯೋಜನೆ' (Literary Allusions) ಗಳಲ್ಲಿ ಶಬ್ದಗಳನ್ನು ಸರಿಯಾಗಿ ಅರ್ಥೈಸಲು ಫ್ರೆಂಚ್ ನಿಘಂಟು ಬೇಕಾಗುತ್ತದೆ. ಮೂರ್ತಿಶಿಲ್ಪದ ಪರಿಭಾಷೆ ತಿಳಿದಿರಬೇಕಾಗುತ್ತದೆ. ಬೇರೆಕವಿ-ಕಲಾವಿದರ ಕೃತಿಗಳ ಯೋಗ್ಯಪರಿಚಯ ಇರಬೇಕಾಗುತ್ತದೆ. ಹೋಮರನ ಗ್ರೀಕ ಕಾವ್ಯ, ವೇದೋಪನಿಷತ್ತುಗಳ ವಚನ, ಸಂಗೀತದ ಸ್ವರಪ್ರಸಾರ, ರಾಗವಿಸ್ತಾರ, ಪುರಾಣೇತಿಹಾಸಗಳಲ್ಲಿಯ ಪ್ರಸಂಗ, ಪಾತ್ರಗಳ ಪರಿಜ್ಞಾನ-ಇತ್ಯಾದಿ ಇತ್ಯಾದಿ ಅರ್ಹತೆಯ ಅಧಿಕಾರವುಳ್ಳವರೇ ಈ ಕವಿಗಳ ಕೃತಿಯನ್ನು ಓದಬಲ್ಲರು. ಅಂದಾಗ ನಮ್ಮ ನಿಮ್ಮಂಥ ಸಾಮಾನ್ಯ ರಸಿಕರು, ಇಂಥ ವಿಶೇಷಜ್ಞತೆ ಇಲ್ಲದವರು ಈ ಕೃತಿಗಳನ್ನು ಕೈಗೆತ್ತಿಕೊಳ್ಳುವುದಾದರೂ ಹೇಗೆ ? ಮತ್ತು ಏಕೆ ? ಈ ಬಗೆಯ ಪೂರ್ವಯೋಜಿತ ಪಾಂಡಿತ್ಯವನ್ನು, ತಾಂತ್ರಿಕ ಚಾಕಚಕ್ಯವನ್ನು ಬಿಟ್ಟು ಈ ಕವಿಗಳು ಹೇಳತಕ್ಕದ್ದನ್ನು ಇಂಥ 'ದ್ರಾವಿಡ ಪ್ರಾಣಾಯಾಮ'ದ ಆಡಂಬರ-ಪ್ರದರ್ಶನವೊ, ಹಗರಣವೋ ಇಲ್ಲದೆ ನೇರವಾಗಿ, ಸರಳವಾಗಿ, ಸುಬೋಧವಾಗಿ ಹೇಳಬಾರದೇಕೆ ? ಈ ಪ್ರಯುಕ್ತ ಇಲಿಯಟನ ಕುರಿತು ಹೇಗೋ, ಎಝ್ರಾ ಪೌಂಡನ ಕುರಿತೂ ಪ್ರಸ್ತುತವಾಗುತ್ತದೆ.

ಆದರೆ ಇದಕ್ಕೆ ಪೌಂಡನ ಉತ್ತರ ಹೀಗಿದೆ : ಇಂಥ ಪಾಂಡಿತ್ಯ, ವಿಶೇಷತೆ, ವಿಶಾಲ ವಿವಿಧ ವಾಚನಗಳ ನೆನಪು ಇಂದಿನ ವಾಚಕನಿಗೆ ಅಗತ್ಯವಿದ್ದರೆ ಅದು ಅನಿವಾರ್ಯ. ಹೀಗೆ ಕೃತಿಗಳ ಕವಿಗಳ ವಿಖ್ಯಾತ ವ್ಯಕ್ತಿಗಳ ನಾಮೋಚ್ಚಾರಣೆ (Name dropping) ಇಲ್ಲವಾದರೆ ಬರಹಕ್ಕೆ ಯೋಗ್ಯವಾದ ಅರ್ಥಗೌರವ, ಗಾಂಭೀರ್ಯ ಬರುವುದಿಲ್ಲ. ಇಂಥ ಸ್ಥಲನಾಮಾವಳಿಗಳು ಅವುಗಳಿಗೆ ಹೊಂದಿಕೊಂಡಿದ್ದ ಅನುಭವಗಳನ್ನು ಪ್ರತಿನಿಧಿಸುತ್ತವೆ,-ಶಿಲುಬೆ ಕ್ರಿಸ್ತನನ್ನೂ ಧರ್ಮವನ್ನೂ ಕೊಳಲು ಕೃಷ್ಣನನ್ನೂ ಭಗವದ್ಗೀತೆಯನ್ನೂ ಪ್ರತಿನಿಧಿಸುವಂತೆ. ಇಂಥ ಸಂದರ್ಭಗಳ ಉಲ್ಲೇಖದ ನಿಮಿತ್ತವಾಗಿ ನಾವು ಆಯಾ ಸ್ಥಲಕ್ಕೆ ಅಥವಾ ನಾಮಕ್ಕೆ ವಿಶಿಷ್ಟವಾದ ಭಾವಾನುಭೂತಿಯ ಕೋಶವನ್ನು ಹೊಕ್ಕುವಂತೆ ಆಗುತ್ತದೆ,- ಆಗಬೇಕು. ಇಂಥ ಸುಸ್ಪಷ್ಟವಾದ ಕಣ್ಣು ಕುಕ್ಕುವ ನಾಮ ನಿರ್ದೇಶನಗಳಿಂದ ಕಾವ್ಯದಲ್ಲಿ ಒಂದು ಕೇವಲ ಊಹಾಗಮ್ಯವಾದ ಸಂಕ್ಷೇಪದ ವ್ಯಂಗ್ಯ ಅಭಿವ್ಯಕ್ತಿಯು ಸಿದ್ಧವಾಗುತ್ತದೆ. 'Not the full smile of His art / but an art / In Profile' ಪೌಂಡನೇ ಹೇಳಿದಂತೆ, ಒಂದು ಮಗ್ಗಲು ನೋಟದಿಂದ ಇಡಿಯನಗುವನ್ನು ಕಂಡುಕೊಂಡಂತೆ ಆಗುತ್ತದೆ. ಅವನಲ್ಲಿ ಒಂದಂಶದಲ್ಲಿ ಶಾಲಾ ಮೇಷ್ಟ್ರನ ಚಟವಿತ್ತು. ಇದೂ ಒಂದು ಕಾರಣ, ಅವನ ಸಂಪರ್ಕದಲ್ಲಿ ಬಂದವರಿಗೆಲ್ಲ- ಆತ ಯೇಟ್ಸನಂಥ ಹಿರಿಯನಿರಲಿ, ಕಾದಂಬರಿಕಾರ ಜೇಮ್ಸ್ ಜಾಯ್ಸನಿರಲಿ- ಇವರಿಗೆಲ್ಲ ಆತ ಬೋಧನೆಯನ್ನೂ ಕೊಡುತ್ತಿದ್ದನು. ತನ್ನ ಬರಹಗಳಲ್ಲಿ (ಕಾವ್ಯದಲ್ಲಿ)

ಇಂಥ ನಿದರ್ಶನಗಳಿಂದ ಓದುಗರು ಎಂಥ ಶಿಲ್ಪಚಿತ್ರ. ಕಟ್ಟಡ ಮತ್ತು ಗ್ರಂಥ ವನ್ನು ಆಸ್ವಾದಿಸಬೇಕೆಂದು ಪರ್ಯಾಯವಾಗಿ ಸೂಚಿಸುತ್ತಿದ್ದನು. ಅಂಥ ವಿಶಿಷ್ಟ ಉಲ್ಲೇಖ–ಯೋಜನೆಗಳ ಹಿಂದೆ ಈ ಸೂಚನೆಯ ಇಂಗಿತವೂ ಇರುತ್ತಿತ್ತು. ಇಂಥ ದುರೂಹ ಉಲ್ಲೇಖ ಅವತರಣಿಕೆಗಳಿಗೆ ಇದೂ ಒಂದು ಕಾರಣವೆನ್ನಬಹುದು.

ಇಂಥ ಒಂದು ಸಾಂಸ್ಕೃತಿಕ. ಶ್ರೀಮಂತಿಕೆ. ಬೇರೆ ಪ್ರಯೋಜನವಿಲ್ಲದೆ ತಾನೇತಾನಾಗಿ ಸುಸಂಸ್ಕೃತ ಸಂಸ್ಕಾರವಂತ ಮನಸ್ಸಿಗೆ ಯೋಗ್ಯ ಮತ್ತು ಶ್ಲಾಘ್ಯ ಎಂದು ಕವಿ ಪೌಂಡನ ಭಾವನೆಯಾಗಿತ್ತು. ಮಾನವ ಜೀವನದಲ್ಲಿ ಇಂಥ ಒಂದು ನಿರುದ್ದೇಶ ಆಸಕ್ತಿ ಅವನಿಗೆ ಅವನ ಗುರುಸ್ಥಾನದಲ್ಲಿದ್ದ ಕವಿ ರಾಬರ್ಟ ಬ್ರೌನಿಂಗನಿಂದ ಬಂದಿತ್ತು. ಮನುಷ್ಯನ ಆಗುಹೋಗುಗಳನ್ನು ಅವುಗಳಿಗಾಗಿಯೇ ಆಸಕ್ತಿಯಿಂದ ಕಾಣುವ ಹವ್ಯಾಸವಿದು. ಇದು ಕೇವಲ ತನ್ನ ಅನಿಸಿಕೆ ಅನುಭವಗಳ ಇಕ್ಕಟ್ಟು ಬಿಕ್ಕಟ್ಟುಗಳ ಪ್ರತಿಬಿಂಬವಾಗಿಯೇ ಅಲ್ಲ. ಇಲಿಯಟ ಚಿತ್ರಿಸಿದ waste Land ಮತ್ತು ಪೌಂಡ ಚಿತ್ರಿಸಿದ ಹ್ಯೂ ಸೆಲ್ವಿನ ಮಾಬರ್ಲೀಗಳು ಮಾಡುವ ಪಾಶ್ಚಾತ್ಯ ಕ್ರೈಸ್ತ ಸಂಸ್ಕೃತಿಯ ವಿಧಾನ ಒಂದೇ ಬಗೆಯಲ್ಲ. ಅವನ ಈ ಕಾವ್ಯದಲ್ಲಿ ೧೮೬೦ ರಿಂದ ೧೯೨೦ರ ತನಕದ ಇಂಗ್ಲಿಷ ಸಂಸ್ಕೃತಿಯ ಇತಿಹಾಸದ ಓದು ಅದ್ಭುತವಾಗಿಯೇ ಸಮರ್ಪಕವಾಗಿದೆ.

ಆದರೆ ಈ ಮಾಬರ್ಲೀ ಕಾವ್ಯದಲ್ಲಿ ಈ ಇತಿಹಾಸ ಚಿತ್ರಣದೊಂದಿಗೇ ಕವಿ ಪೌಂಡನ ಸ್ವಂತ ಮನಃಸ್ಥಿತಿಯ ಹಾಗೂ ಅದರ ಪೇಚುಗಳ ವಿದಾನವನ್ನೂ ನಾವು ಗುರುತಿಸ ಬೇಕು. ಆ ಕಾವ್ಯದ ನಾಯಕಪಾತ್ರ ಸ್ವಯಂ ಎಝ್ರಾ ಪೌಂಡ ಅಲ್ಲ. ಆದರೆ ಈ ಮಾಬರ್ಲೀಯೂ ಒಬ್ಬ ಕವಿ. ಕಾವ್ಯದಲ್ಲಿ ಕವಿಯಾದ ಈ ಮಾಬರ್ಲೀ ತುಸು ಭೀರು ಅಳುಕಿನ ವ್ಯಕ್ತಿ. ರಸಿಕ ವ್ಯಕ್ತಿ. ಭೂತಕಾಲದ ಎಲ್ಲ ಸ್ಥಿತ್ಯಂತರಗಳನ್ನು ಮಿಡುಕುವ ಹೃದಯದಿಂದ ಬಲ್ಲವನು. ಆದರೆ ಈತ ಸಮಾಜದ, ತನ್ನ ಯುಗದ ದೊರಗುಗ್ರಾಮ್ಯಸ್ಥಿತಿಗತಿಗಳೊಂದಿಗೆ ಹೊಂದಿಕೊಳ್ಳಲಾರ. ಆದ್ದರಿಂದ ಈತ ತನ್ನದೇ ಖಾಸಗಿ ಸ್ವಾರಸ್ಯದ ಸಂವೇದನೆಗಳ ಪ್ರಪಂಚದಲ್ಲಿಯೇ ಆತ್ಮ ಸಂರಕ್ಷಣೆಹೊಂದಲು ಹವಣಿಸುವನು. ನಿಜವಾಗಿಯೂ ಈ ಕಾವ್ಯನಾಯಕ ಕವಿ ಮಾಬರ್ಲೀ ಕಾವ್ಯಕರ್ತೃ ಕವಿ ಪೌಂಡನ ಸಮಾನ ಧರ್ಮಿಯಲ್ಲ. ಏಕೆಂದರೆ ಪೌಂಡನು ಅಂಥ ಭೀರುವಲ್ಲ. ತನ್ನೊಳಗೆ ತಾನು ಹುದುಗಿಕೊಳ್ಳಲು ಹವಣಿಸುವವನಲ್ಲ. ಕವಿ ಬ್ರೌನಿಂಗನಂತೆಯೇ ಈತ ಮಾನವೀಯ ವ್ಯಕ್ತಿತ್ವದ ಮತ್ತು ಚಟುವಟಿಕೆಯ ವಿಪುಲವಾದ ವಿವಿಧತೆಯನ್ನು ರುಚಿಯಿಂದ ಆಸ್ವಾದಿಸುವ ಕವಿ. ಅಷ್ಟರಿಂದ ಮಾಬರ್ಲೀ ಪೌಂಡನ ಪ್ರತಿನಿಧಿಯೇ ಅಲ್ಲ.

ಆದರೆ ಕಾವ್ಯದ ನಾಯಕ ಪಾತ್ರವೇ ಪೌಂಡನೆಂಬ ಭ್ರಮೆ ಹುಟ್ಟಿತು ಹೇಗೆ ?–

ಅವಕ್ಕೆ ಕಾರಣ ಕಾವ್ಯದ ಆರಂಭದ ಈ ನುಡಿಗಳೇ. ಇವು ಪೌಂಡನ ಕುರಿತೇ ಆಗಿವೆ! ಆದರೆ ಈ ನುಡಿಗಳಲ್ಲಿ ಬಿಂಬಿತನಾದ ಪೌಂಡ ತಾನೇ ಅಲ್ಲ. ಆತ ಇತರರಿಗೆ ಹೇಗೆ ಕಾಣುವನೋ, ಇತರರು ಆತನನ್ನು ಹೇಗೆ ಭಾವಿಸುವರೊ ಅದರ ಪ್ರತಿಮೆ. ಇಲ್ಲಿ ಒಂದು ಮಾತು ವಿಚಾರಣೀಯವು. ಒಂದು ಕಾವ್ಯದಲ್ಲಿ ಪ್ರಮುಖನಾಗಿ ಕಾಣುವ ಯಾವದೇ ಕವಿನಿರ್ಮಿತ ಪಾತ್ರವು ಕವಿ ಮತ್ತು ರಸಿಕ ಸಹೃದಯ ಇವರ ನಡುವೆ ನಿಂತು ಕೆಲಸ ಮಾಡುತ್ತದೆ. ಅನೇಕ ಸಲ ಈ ಪಾತ್ರದ ಮಾತು ಕವಿಯದೇ ಮಾತಾಗಿ ತೋರುವ ಭಯವಿರುತ್ತದೆ. ಈ ಬಗೆಯ ಪಾತ್ರವನ್ನು, ಪಾತ್ರದ ಮುಖದಿಂದ ಕವಿಯೇ ಮಾತಾಡುವುದನ್ನು ರಾಬರ್ಟ ಬ್ರೌನಿಂಗ್ ತನ್ನ ಏಕಪಾತ್ರಾಭಿನಯದ ನಾಟಕೀಯ, 'Mono Logue' ಕೃತಿಗಳಲ್ಲಿ. ಪೌಂಡನ ಕೃತಿಯ ಮಾಬರ್ಲೀಯನ್ನು ಕವಿ 'Persona' ಎಂದು ಕರೆದನು. ಇಂಥ ಪಾತ್ರವನ್ನು ಯೇಟ್ಸನೂ Mask ಎಂದನು. (ಇವೆರಡೂ ಶಬ್ದಗಳು ಮುಖವಾಡಗಳನ್ನೇ ಸೂಚಿಸುವಂಥವು; 'Persona' ಲ್ಯಾಟಿನ್‌ದಲ್ಲಿ ಮತ್ತು Mask ಫ್ರೆಂಚ ಭಾಷೆಯಲ್ಲಿ. 'ಮಾಸ್ಕ'ಕ್ಕೆ ನಮ್ಮ 'ಮುಸುಕು' ಮೂಲವೇ ?) ಇವೆರಡಕ್ಕೂ ಈ ಬ್ರೌನಿಂಗನ ಮಾದರಿಯೇ ಆಧಾರವಿರಬೇಕು. ಇಲಿಯಟನ Pruforck ... ಮತ್ತು Gerontion ಮತ್ತು ಅವನ Waste Land ದಲ್ಲಿ ಬರುವ Tiresias ಇವೇ ಪೌಂಡನ ಮಾರ್ಬೀಲಿಯನ್ನು ಹೋಲುವಂತಿವೆ. ಈ ಮೂರೂ ಕವಿಗಳಿಗೆ ಈ ತಂತ್ರವು ಅನುಕೂಲವೆನಿಸಿತು. ಇದರಿಂದ ತಮ್ಮ ಕೆಲವು ತಟಸ್ಥ ನಿರ್ಲಿಪ್ತ ಅಭಿಪ್ರಾಯಗಳಿಗೆ ಇಂಥ ಮುಖಪಾತ್ರ ನಿರ್ಮಿಸುವುದರಿಂದ ಭಿನ್ನ ಸನ್ನಿವೇಶದಲ್ಲಿ, ಭಿನ್ನ ಕಾರಣಗಳಿಗಾಗಿ ಇವರಿಗೆ ಅಪೇಕ್ಷಿತವಾದ ಇಷ್ಟವಾದ ಅಪೌರುಷೇಯತೆ, ಅಂದರೆ ವ್ಯಕ್ತಿ ನಿರಪೇಕ್ಷತೆಯ (Impersonality) ಪರಿಣಾಮವನ್ನು ಮೂಡಿಸಲು ಬರುತ್ತದೆ. ಆದರೆ ಹೀಗೆ ಆಗಲಿಕ್ಕೆ ಆ ಪಾತ್ರವು ನಿಜವಾಗಿಯೂ ನಿಚ್ಚಳವಾಗಿಯೂ ಕವಿಯಿಂದ ಪ್ರತ್ಯೇಕವೆನಿಸಬೇಕು. ಹಾಗೆ ಆಗದಿದ್ದರೆ ಅಲ್ಲಿ ಕಾವ್ಯದ ವ್ಯಂಗ್ಯಧ್ವನಿಯು ಲೋಪವಾಗುತ್ತದೆ. ಆಗ ಓದುಗರು ಆ ಪಾತ್ರದ ಪ್ರತ್ಯೇಕತೆಯನ್ನು ಮರೆಯುತ್ತಾರೆ. ಇದು ಕೆಲಸಲ ಎಝ್ರಾ ಪೌಂಡನ ಈ ಮಾಬರ್ಲೀಯ ಕುರಿತು ಸಂಭವಿಸುತ್ತದೆ. ಅದೇ ರೀತಿ ಹೆಚ್ಚು ಅಪಾಯಕಾರಿಯಾಗಿ ಇಂಥ ಗೊಂದಲ ಇಲಿಯಟನ ಗೆರೊನಶನ್ ( Gerontion ) ಪಾತ್ರದ ಬಗೆಗೂ ಆಗುತ್ತದೆ.

ಒಂದು ಸಂದರ್ಭದಲ್ಲಿ ಪೌಂಡ ಮತ್ತು ಇಲಿಯಟ ಜತೆಜತೆಯಾಗಿಯೇ ಕೆಲಸ ಮಾಡಿದರು. ಆಗ ಅವರಿಗೆ ಅನಿಸಿತು: ಸ್ವಚ್ಛಂದ ಛಂದಸ್ಸಿನ ವ್ಯವಹಾರ ತುಸು ಅತಿಯಾಗುತ್ತಿದೆ. ಕಾವ್ಯಶಿಥಿಲವಾಗುತ್ತಿದೆ. ಅಷ್ಟುದೂರ ಅದು ಸಡಿಲಾಗಿ ಹರಿಯ

ಕೂಡದು. ಅದಕ್ಕೆ ಪ್ರತಿಯಾದ ಪ್ರವಾಹವನ್ನು ಬಿಡತಕ್ಕದ್ದು. ಇದನ್ನು ಎರ್ಝ್ರಾ ಪೌಂಡನೇ ತನ್ನ criterion ದಲ್ಲಿ (೧೯೩೨ರಲ್ಲಿ) ಬರೆದಿದ್ದಾನೆ. ಪೌಂಡ ಮತ್ತು ಇಲಿಯಟ ಇಬ್ಬರೂ ಇಂಗ್ಲಿಷಿನಲ್ಲಿ ಮುಕ್ತ ಅಥವಾ ಸ್ವಚ್ಛಂದ ಛಂದಸನ್ನು ಜನರ ಪರಿಚಯಕ್ಕೆ ತರಲಿಕ್ಕೆ ಅತ್ಯಂತ ಪ್ರಯತ್ನಮಾಡಿದರು. ಆದರೆ ಅವರು ೧೯೧೮ ರಲ್ಲಿಯೇ ಲಯಬದ್ಧ ಚರಣಗಳನ್ನು ಮತ್ತೆ ಬರೆಯಬೇಕೆಂಬ ಅಗತ್ಯವನ್ನು ಕಂಡರು. ಇದಕ್ಕಾಗಿಯೇ ಅವರು ಮಾದರಿಗಳನ್ನು ಅಂದು ಅಷ್ಟು ಬಳಕೆಯಲ್ಲಿ ಇಲ್ಲದ ಪ್ರಾರ್ಥನಾ ಪುಸ್ತಕದ ಪ್ರಾದೇಶಿಕ ಪ್ರತಿಗಳನ್ನು ಆಯ್ದುಕೊಂಡರು. ಅವರು ಆಯ್ದುಕೊಂಡ ಮಾದರಿಗಳೂ ವಿಶೇಷ 'ಫ್ಯಾಶನೇಬಲ್' ಇದ್ದಿಲ್ಲ.

ಒಟ್ಟಿನಲ್ಲಿ ಎರ್ಝ್ರಾ ಪೌಂಡ ಒಬ್ಬ ಸಲೀಸಾದ ಸರಾಗನಾದ ಕವಿಯಲ್ಲ. ಆತ ಸಾಮಾನ್ಯ ಸಹೃದಯ ಓದುಗನಿಗೆ ಸಲ್ಲ. ಆತ ಬರೆದದ್ದು ವಿಪುಲವಿಲ್ಲ. ಆದರೆ ಟಿ.ಎಸ್. ಇಲಿಯಟನ ಜತೆಗೆ ಪೌಂಡ ಕಾವ್ಯದಲ್ಲಿ ಒಂದು ಮನ್ವಂತರಕ್ಕೆ ಗುರುವಾದ,–'ಕಾವ್ಯಕ್ಕೆ ಗುರುವೆನಲ್ಕೆ' ನಮ್ಮಲ್ಲಿ ಪೇಜಾವರ ಸದಾಶಿವರಾಯರಂತೆಯೇ. ಅವನ ಕಾವ್ಯಸೂಸುವ ಸಂದೇಶವೇನು ? ೧೯೨೦ರ ದಶಕದ ಇಂಗ್ಲಿಷ ಸಂಸ್ಕೃತಿ–ಸುಸಂಸ್ಕೃತ ಸಭ್ಯತೆ,– ಒಂದು ವ್ಯಾಪಾರೀ ಮನೋಭಾವನೆಯಿಂದ ವ್ಯಾಪ್ತವಾಗಿತ್ತು. (ಈ ಭಾವನೆ ಇಂದು ವಿಶ್ವವ್ಯಾಪಿಯೇ ಆಗಿದೆ !) ಅದು ಸುಳ್ಳು. ತಪ್ಪಿದ ನೆಲೆಬೆಲೆಗಳಿಂದ ಭಾವಮೌಲ್ಯಗಳಿಂದ ಕೂಡಿತ್ತು. ಇಂಥ ಶಿಷ್ಟಜೀವನದಲ್ಲಿ ಯಾವ ಕಲಾವಿದನೂ ಪೌಂಡನ ಮಾಬರ್ಲೀ ಕಾವ್ಯದ ನಾಯಕನಿಗಿಂತ ಬೇರೆ ಏನೂ ಮಾಡಲಾರ. ಇದರಲ್ಲಿಯೇ ಪೌಂಡನ ಕಾವ್ಯದ ಬಲವೂ ಮಾಬರ್ಲೀ ಕಾವ್ಯದ ದೌರ್ಬಲ್ಯವೂ ಅಡಗಿದೆ.



# ಡಬ್ಲ್ಯು. ಬಿ. ಯೇಟ್ಸ್

ವಿಲಿಯಂ ಬಟ್ಲರ ಯೇಟ್ಸ (೧೮೬೫-೧೯೩೯) ಆಂಗ್ಲಕಾವ್ಯದ ಸ್ಥಿತ್ಯಂತರದ ಯುಗದ ಅತಿದೊಡ್ಡ ಕವಿ. ಈ ಸ್ಥಿತ್ಯಂತರವು ಸುಗಮವಾಗುವದರಲ್ಲಿ ಈ ಕವಿಯ ಪಾತ್ರಹಿರಿಯದು. ಯೇಟ್ಸ ಆಯರ್ಲಂಡದ ವಿಖ್ಯಾತ ಇಂಗ್ಲಿಷ ಕವಿ. ನಾಟಕಕಾರ. ವಿಮರ್ಶಕ ಮತ್ತು ಆಯರ್ಲಂಡದ ಸಾಂಸ್ಕೃತಿಕ ಪುನರುಜ್ಜೀವನದ ಒಬ್ಬ ಕಾರಣ ಪುರುಷ. ಡಬ್ಲ್ಯು. ಬಿ. ಯೇಟ್ಸನೆಂದೇ ಲೋಕಪ್ರಿಯನಾದ ಈ ಕವಿವರ್ಯನಿಗೆ ಬರ್ನಾಡಶಾ ಮತ್ತು ಅಸ್ಕರವೈಲ್ಡ ಸಮಕಾಲೀನರು. ಆದರೂ ವಯಸ್ಸಿನಿಂದ ತುಸುಹಿರಿಯರು. ಇವರೆಲ್ಲ ಆಯರ್ಲಂಡಿನ ರಾಜಧಾನಿ ಡಬ್ಲಿನ್‌ದಲ್ಲಿ ಜನಿಸಿದರು. ಯೇಟ್ಸನ ತಂದೆ ತಾಯಿ ಪ್ರೊಟೆಸ್ಟಂಟ ಪಂಥದವರು. ಈತ ನವಯುವಕನಾಗಿ ಲಂಡನ್ನಿಗೆ ತೆರಳಿದನು,-ಸಾಹಿತ್ಯಿಕ ಸಾಧನೆಗಾಗಿ. ಆದರೆ ವೈಲ್ಡ ಮತ್ತು ಶಾ ಅವರಂತೆ ಪರಿಶುದ್ಧ ಆಂಗ್ಲ ಲೇಖಕನಾಗಲಿಲ್ಲ. ಇವನಿಗೆ ಕೆಲ್ಟಿಕ್ (celtic) ಅಭಿಮಾನ,ಅಭಿರುಚಿ ಪ್ರಬಲವಾಗಿ ಅಂಥ ವಿಷಯ-ವಿಚಾರಗಳ ವಾಂಙ್ಮಯದಲ್ಲಿಯೇ ತೊಡಗಿ ಇಂಗ್ಲಂಡನ್ನು ಬಿಟ್ಟು ತನ್ನ ತಾಯ್ನಾಡಿಗೆ ಮರಳಿದನು.

(ಕೆಲ್ಟಿಕ್ ಅಥವಾ ಸೆಲ್ಟಿಕ್ ಅಂದರೆ ಪಶ್ಚಿಮ ಯುರೋಪದ ಈ ಭಾಗದ ಪ್ರಾಚೀನ ಬುಡಕಟ್ಟಿನ ಜನರ ಬಾಯ್ನುಡಿ. ಈ ಜನಕ್ಕೆ ಗೌಲ [Gaul] ಎಂಬ ಹೆಸರು. ಬ್ರಿಟನ್, ವೆಲ್ಸ, ಐರಿಷ್, ಕಾರ್ನಿಶ್ ಜನಜಾತಿಗಳ ಹಳೆಯ ಭಾಷೆ. ಅವರಲ್ಲಿ ಬೆಳೆದು ಬಂದ ಅಂದಿನ ಜಾನಪದ ಸಂಸ್ಕೃತಿ, ಈ ನಾಡುನುಡಿಯ ಆಸಕ್ತಿ. ಇದು ಒಂದು ರೀತಿ ಬ್ರಿಟಿಷ ಸಾಮ್ರಾಜ್ಯವಾದೀ ವೃತ್ತಿಗೆ ವಿರೋಧಿಯಾದ ಸ್ವದೇಶಾಭಿಮಾನದ ತೀವ್ರ ಪ್ರತಿಕ್ರಿಯೆಯಾಗಿತ್ತು.)

ಆಯರ್ಲಂಡಿನಲ್ಲಿ ಯೇಟ್ಸ ಜರುಗಿಸಿದ ಒಂದು ಪ್ರಮುಖ ಚಟುವಟಿಕೆಯೆಂದರೆ, ೧೯೦೪ ರಲ್ಲಿ ಅಬೇಥಿಯೇಟರ ಎಂಬ ನಾಟ್ಯರಂಗದ ಸಂಸ್ಥೆ. ಹಾಗೆಯೇ ಯೇಟ್ಸ ಆಯರಿಶ್ ಸಾಹಿತ್ಯದ ಪುನರುಜ್ಜೀವನ ಚಳವಳಿಯ ಧುರೀಣನೂ ಆದನು. ಆಯರ್ಲಂಡ ಕುರಿತು ಶ್ರದ್ಧೆಯನ್ನು ಉತ್ಥಾನಗೊಳಿಸುವ ಅಗತ್ಯದಿಂದ ಇಂಗ್ಲಿಷ ಭಾಷೆ (ಸಾಹಿತ್ಯ)ಯನ್ನೇ ದೇಶದ ಹೊರಗೆ ಓಡಿಸುವ ಅಗತ್ಯಕ್ಕೆ ಬರಿ ಒಂದೇ ಹೆಜ್ಜೆಯ ಅಂತರ. ಹೀಗಾಗಿ ಆಯರಿಶ್ ದೇಶಭಕ್ತರು ಉರಿದೆದ್ದರು. ಇಂಗ್ಲಿಷ ಒಂದು ಹೊರಭಾಷೆ ವಿದೇಶಿ ಭಾಷೆ. ಅಲ್ಲದೆ ಆಯರ್ಲಂಡಕ್ಕೆ ಅರ್ಹವಾದ ಯಾವ ಸಾಹಿತ್ಯವನ್ನೂ ಆಯರಿಶ್ ಅಲ್ಲದ ಬೇರೆ ಯಾವ ಭಾಷೆಯಲ್ಲಿಯೂ

ಬರೆಯಲಾಗದು. ಇದೂ ಅಲ್ಲದೆ, ಮಾರ್ಗಬಿಟ್ಟು ದೇಸೀ ಸಾಹಿತ್ಯದ ಲಯ, ಪ್ರಾಸ ಮತ್ತು ಛಂದೋವೃತ್ತಗಳ ಎಲ್ಲ ಚೆಲುವುಗಳೂ ಆಯರಿಶ್ ಸಾಹಿತ್ಯ ದಿಂದಲೇ ಹೊರಬಂದವು. ಇನ್ನು ಇಂಥ ಪ್ರಚಾರದ ಅತಿರೇಕ ಪುನರುಜ್ಜೀವನದ ಉತ್ಕಟ ಪ್ರೇರಣೆಯು ಸಾಮಾನ್ಯ ಸ್ವರೂಪವೇ ಆಗಿತ್ತು.

ಈ ಹೊಸ ಉತ್ಸಾಹದಲ್ಲಿ ಹಲವಾರು ಸಂಘ-ಸಂಸ್ಥೆಗಳು ಸಾಹಿತ್ಯಿಕ ಕೂಟಗಳು ಹುಟ್ಟಿಕೊಂಡವು. ಅಂಥವುಗಳಲ್ಲಿ ಒಂದು ಒಟ್ಟಾಭಿಪ್ರಾಯದ ಪ್ರಕಟಣೆ 'ಪೋಯಟ್ಸ ಎಂಡ ಬ್ಯಾಲಡ್ಸ ಆಫ್ ಯಂಗ ಆಯರ್ಲಂಡ' (೧೮೮೮). ಇದರಲ್ಲಿ ತರುಣ ಯೇಟ್ಸನ ಕೃತಿಗಳೂ ಸೇರಿದ್ದವು. ಈ ಕೃತಿಕಾರರಲ್ಲಿ ಯೇಟ್ಸ ಅತಿ ಪ್ರಸಿದ್ಧ ಪುರುಷನಾಗಲಿದ್ದನು. ಆಗ ಅವನ ಮೊದಲ ಕೃತಿ 'ಮೊಸಾದ' ಒಂದು ನಾಟ್ಯಗವನ (೧೮೮೬). ಇದರಲ್ಲಿ ಆಯರಿಶ್ ಎಂಬುದೇನೂ ಇದ್ದಿಲ್ಲ. ಆದರೆ ಕವಿಯ ಮೌಲಿಕ ಸತ್ವಕ್ಕೆ ಅದು ಮುಂಗುರುಹಾಗಿತ್ತು. ಇಂಥ ಆಂದೋಲನಗಳಲ್ಲಿ ಕವಿಗಳು ಹುಟ್ಟುವುದಿಲ್ಲ. ಆದರೆ ಇವುಗಳಿಂದ ಕವಿಗಳು ಹುಡುಕಲ್ಪಡುತ್ತಾರೆ. ಯೇಟ್ಸ ಅಂಥ ಕವಿಯಾಗಿದ್ದನು. ತನ್ನ ಕೀರ ತರುಣ ವಯಸ್ಸಿನಲ್ಲಿಯೇ ಈ ಸ್ವದೇಶಿ ಭಾಷೆಯ ಉತ್ಥಾನದ ಪರ್ವದಲ್ಲಿ ಈ ಕವಿಯ ಭಾಗ್ಯವು ತೆರೆಯಿತು. ತಕ್ಕದಾರಿಯನ್ನೂ ದಿಕ್ಕನ್ನೂ ತೋರಿತು. ಅವನಿಗೇ ವಿಶಿಷ್ಟವಾದ ಮೋಹಕತೆ ಮತ್ತು ಪ್ರಕೃತಿಗೆ ಒಪ್ಪ ನೀಡಿತು.

ಯೇಟ್ಸನದು ಕೃತಕ ಇಂಗ್ಲಿಷ ಇದ್ದಿಲ್ಲ. ಮಾರ್ಗೀಯ ಚಟವಾಗಿದ್ದಿಲ್ಲ. ಅವನ ಮಹತ್ವದ ಪ್ರಥಮ ಸಂಕಲನ 'ಓಸಿನಿನ ಸಂಚಾರಗಳು' ೧೮೮೯ ರಲ್ಲಿ ಪ್ರಕಟ ವಾಯಿತು. ಅದಕ್ಕೆ ಸಹಜವಾಗಿಯೇ ಆಯರಿಶ್ ಮನೋಧ್ವನಿ ಇತ್ತು. ಅದು ಅವನ ಮುಂದಿನ ಕೃತಿಗಳ ರೂಪವನ್ನು ಗೊತ್ತುಪಡಿಸಿತು. ಯೇಟ್ಸನ ಆರಂಭದ ಕಾವ್ಯ-ಕೃತಿ ನಾಟಕೀಯ ತಿರುವನ್ನುಹೊಂದಿತ್ತು. ಅವನ ಕೃತಿ ಅಷ್ಟೇ ಮಹತ್ವದೂ- 'ದಿಕಾಂಟೆಸ-ಕ್ಯಾಥ್ಲೀನ ಎಂಡ ವೇರಿಯಸ್ ಲಿಜಂಡ್ಸ'. ಇದರಲ್ಲಿಯೂ ಮುಖ್ಯಭಾಗವು ನಾಟ್ಯರೂಪಕವೇ ಆಗಿದೆ. ಆತ ಮೊದಲೆಲ್ಲ ಆಯರಿಶ್ ರೈತರ ಸ್ಲಿಗೊ ಪ್ರದೇಶದಲ್ಲಿ ಅಲೆದಾಡಿದವನು. ಆ ರೈತರ ನೆನಪುಗಳಲ್ಲಿ ಹಳೆಯ ಅಖ್ಯಾಯಿಕೆಗಳೂ ಹಾಡುಗಳೂ ಶೇಖರಿಸಿದ್ದವು. ಯೇಟ್ಸ ಅದರಲ್ಲಿ ಆಸಕ್ತಿ ತಾಳಿದನು. ಅದು ಮೌಖಿಕ ಸಾಹಿತ್ಯವಾಗಿತ್ತು. ಯೇಟ್ಸ ನಮ್ಮ ಕವಿವರ್ಯ ಬೇಂದ್ರೆಯವರಂತೆಯೇ ಇಂಥ ಜಾನಪದದಲ್ಲಿ ಅಂದವನ್ನು ಸವಿದವನು. ಹಾಡುಗಬ್ಬಿಗನು. ಚಾರಣ (Bard )ನು. ಕಾವ್ಯವೆಂದರೆ ಹಾಡುವದೇ ಹೊರತು ಅಚ್ಚು ಹಾಕುವ ಕೆಲಸವಲ್ಲವೆಂದೇ ಆತ ನಂಬಿದವನು. ಅನಂತರ ಬಂದದ್ದು 'ಜಾನ ಶರ್ಮನ್ ಎಂಡ ಧೋಯ್' (೧೮೯೧) ಇದರ ಮೊದಲ ಭಾಗ ಒಂದು

ಕಿರುಕಾದಂಬರಿ. ಕವಿಯ ಆತ್ಮಕಥನದಂತಹ ಬರವಣಿಗೆ. ಅದರ ಬೆನ್ನಿಗೇ ಬಂತು 'ದ ಕೆಲ್ಟಿಕ್ ಟ್ವಾಯ್‌ಲೈಟ' (೧೮೯೩). ನಿಚ್ಚಳವಾದ ಶೈಲಿಯ ಸೊಗಸಾದ ಕತೆಗಳೂ ಶಬ್ದ ಚಿತ್ರಗಳೂ ಕೂಡಿದ ಸಂಪುಟ.

ಹೀಗೆ ಆರಂಭದಿಂದಲೂ ಯೇಟ್ಸನ ಬರಹ ಕವನ, ನಾಟಕ ಮತ್ತು ಗದ್ಯಕ್ಕೆ ಸರಿಯಾಗಿ ಹಂಚಿಹೋಗಿದೆ ಮತ್ತು ಆರಂಭದಿಂದಲೂ ಅವನ ಸಾರವತ್ತಾದ ಸತ್ವವು ಕಾಣಿಸಿಕೊಂಡಿದೆ–ಇವೆಲ್ಲ ಪ್ರಕರಣಗಳಲ್ಲಿ ೧೯೧೦ರ ರೊಳಗೇ ಅವನು ಯಶಸ್ವಿಯಾದ ಸಾಹಿತ್ಯಿಕ ಚರಿತ್ರೆ ಪೂರ್ತಿಸಿದನು. ತನ್ನ ೪೩ ರ ಪ್ರಾಯದಲ್ಲಿಯೇ ಯೇಟ್ಸ ಆಯರ್ಲಂಡದ ಜನವಿಖ್ಯಾತ ಕವಿ ಮತ್ತು ನಾಟಕಕಾರ. ಆಗಲೆ ಆತ ೧೦೦ ಕ್ಕಿಂತ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದನು. ಅವುಗಳಲ್ಲಿ ಅವನದೇ ಕಾವ್ಯದ ೬ ಸಂಪುಟಗಳು. ಇವುಗಳಲ್ಲಿ ಅವನ ನಾಟಕಗಳೂ ಗದ್ಯಲೇಖನಗಳೂ ಸೇರಿ ಕೊಂಡಿದ್ದವು. ಆಗಲೇ ತನ್ನ ಸಮಗ್ರ ಕೃತಿಗಳ ಸಂಕಲನ ೮ ಸಂಪುಟಗಳಲ್ಲಿ ಪ್ರಕಟಿಸಿದನು. ಆದಾಗ್ಯೂ ಅವನ ಕಾರ್ಯ ಮುಗಿಯಲಿಲ್ಲ. ಅವನ ಉತ್ತಮ ಕೃತಿಗಳು ಇನ್ನೂ ಬರೆದಿರಲಿಲ್ಲ. ಆಗಲೆ ಆತ ತನ್ನ ಕಾವ್ಯ–ಕಾರ್ಯದ ಹೊಸ ಮಟ್ಟದಲ್ಲಿ ಹೆಜ್ಜೆಯೂರುತ್ತಿದ್ದನು.

ಯೇಟ್ಸನಲ್ಲಿ ಅನುಭಾವ (ರಹಸ್ಯವಾದ) ಮತ್ತು ಪ್ರತೀಕವಾದ (Symbolism) ಸ್ವಯಂಸ್ಫೂರ್ತಿಯಿಂದ ಸ್ವಂತ ಅನುಭವದಿಂದ ಬಂದವು. ಅವನ್ನು ಆತ ಬೇರೆ ಲೇಖಕರಿಂದ ಪಡೆದವನಲ್ಲ. ಇದಕ್ಕೆ ಅವನ ಆರಂಭದ ಕೃತಿಗಳೇ ಸಾಕ್ಷಿ. ಅವನಿಗೆ ಹೋಲುವ ಅಂಥ ಲೇಖಕರು ಫ್ರೆಂಚ ಸಾಹಿತ್ಯದಲ್ಲಿ ಅಂದು ಇದ್ದಿರಬಹುದು. ಆದರೆ ಅವರು ಸಮಾನಧರ್ಮಿಗಳು. ಅಂಥವರಿಂದ ಆತ ಅನುಭಾವಿಯಾಗಿದ್ದಿಲ್ಲ. ಆ ಕಾಲಮಾನದಲ್ಲಿ ಈ Mysticism ಮತ್ತು Symbolism ವಾತಾವರಣದಲ್ಲಿಯೇ ಪಸರಿಸಿತ್ತು. ಯೇಟ್ಸ ಬ್ಲೇಕ (Blake) ನಂಥ ಅನುಭಾವಿ ಕವಿಗೆ ಸಂಪಾದಕ ನಾದನು. ನಮ್ಮ ರವೀಂದ್ರನಾಥರ ಗೀತಾಂಜಲಿಗೆ ಪ್ರಸ್ತಾವನೆ ಬರೆದನು. ಇದು ಅವನಿಗೆ ಒಂದು ರೀತಿ ಅನಿವಾರ್ಯವಾಗಿತ್ತು. ಆತ ಶ್ರೀ ಲೇಲೇ ಎಂಬ ಭಾ ರ ತೀ ಯ ನಿಂ ದ ಯೋಗಾಭ್ಯಾಸವನ್ನೂ ಕಲಿತನು. (ನಮ್ಮ ಸಾಹಿತಿ ಡಾ. ಶಂಕರ ಮೊಕಾಶೀ ಪುಣೇಕರರು ಅವರೀರ್ವರ ಪತ್ರವ್ಯವಹಾರದ ಕುರಿತೇ ತಮ್ಮ ಡಾಕ್ಟರೇಟ ಪ್ರಬಂಧ ಬರೆದಿದ್ದಾರೆ.) ಅವನು ಐಡಿಯಾಸ್ ಆಫ್ ಗುಡ್ ಎಂಡ ಈವಿಲ್ (The Ideas of Good and Evil) ಎಂಬ ಪ್ರಬಂಧ ಸಂಕಲನ ಬರೆದನು. ಅವನಿಗೆ ಮೈಗೊಂಡ ಈ ಅನುಭಾವ ಮತ್ತು ಪ್ರತೀಕವಾದವು ಅವನನ್ನು ಅತೀಂದ್ರಿಯ ಪ್ರಜ್ಞೆ (Occultism) ಅಪರೋಕ್ಷಾನುಭವದ ಕಡೆಗೆ

ಒಲಿಯುವಂತೆಯೂ ಮಾಡಿದ್ದು ಸಹಜವೇ. ಈ ವಿಚಾರದಲ್ಲಿ ಆತ ಮೂರು ಗದ್ಯಗ್ರಂಥಗಳನ್ನು ಬರೆದನು. The Secret Rose (೧೮೦೩), The Tables of the Law (೧೮೦೭) ಮತ್ತು The wind among the Reeds (೧೮೯೯).

ಆತ ಒಟ್ಟಿನಲ್ಲಿ ೧೯೫೦ ರ ತನಕ ೨೦ ಕ್ಕೆ ಮೇಲ್ಪಟ್ಟು ಕೃತಿಗಳನ್ನು ಪ್ರಕಟಿಸಿದನು. ಇವುಗಳಲ್ಲಿ ಕವನ ಸಂಕಲನಗಳೂ, ಪ್ರಬಂಧಗಳೂ, ನಾಟಕಗಳೂ, ಆತ್ಮ ಕಥನ ಗಳೂ, ಹಲವರಿಂದ ಸಂಪಾದಿತ ಸಂಕಲನಗಳೂ ಒಳಗೊಂಡಿವೆ. ೧೯೨೦ ರಿಂದ ಈಚಿನ ಕೃತಿಗಳು ಯೇಟ್ಸನ ಆರಂಭದ ಕಲ್ಪನಾರಮ್ಯ ಭಾವಗಮ್ಯ ಕೆಲ್ಟಿಕ್, ಸಂಜೆಮಬ್ಬಿನ ಬೆಳಕಿನಿಂದ ಹೊರಬಿದ್ದು ಹಾಡೆಹಗಲ ಬಿಸಿಲಿಗೆ ನಮ್ಮನ್ನು ತರುತ್ತವೆ. ಅವು ಕೆಲಸಲ ಕಹಿರುಚಿಯನ್ನೂ ನೀಡುತ್ತವೆ. ಆದರೆ ಜತೆಗೆ ಪ್ರಾಮಾಣಿಕತೆಯನ್ನೂ ಧೈರ್ಯವನ್ನೂ ಮನೋಬಲವನ್ನೂ ತುಂಬುತ್ತವೆ. The Second Coming By Zantium, Reda the Swan ಮುಂತಾದ ವಿಶಿಷ್ಟ ಕವನಗಳು ೨೦ ನೆಯ ಶತಮಾನದ ಆರಂಭಕಾಲದ ಅತ್ಯುತ್ತಮ ಕೃತಿ ಗಳೆಂದು ಮನ್ನಣೆಪಡೆದಿವೆ. ಇದೇ ರೀತಿ ಅವನ Innis free. ಮತ್ತು Mangun ೧೯ ನೆಯ ಶತಮಾನದ ಉತ್ತರಾರ್ಧದ ಅತಿ ಸುಂದರ ಕವನಗಳಲ್ಲಿ ಎಣಿಸಲ್ಪಡುತ್ತಿದ್ದವು. ಒಬ್ಬ ಕವಿ ಇತರರಿಗೆ ಇಳಿವಯಸ್ಸೆಂದು ತೋರುವ ಕಾಲ ದಲ್ಲಿಯೂ ನಿಲುವಿನಲ್ಲಿ ಎತ್ತರಕ್ಕೇರುತ್ತಲೇ ತಲೆಮಾರುಗಳನ್ನು ಜೋಡಿಸಿ ನಿಲ್ಲುವ ಸೇತುವೆಯಾಗುವದು ಸಾಮಾನ್ಯವಲ್ಲ. ನಮ್ಮಲ್ಲಿ ಬೇಂದ್ರೆ ಕುವೆಂಪು ಅಡಿಗರು ಇಂಥ ತ್ರಿವಿಕ್ರಮರೆನಿಸಿಕೊಂಡರು,-ತಮ್ಮ ತಮ್ಮದೇ ರೀತಿಯಲ್ಲಿ. ಟಿ. ಎಸ್. ಇಲಿಯಟ, ಡಬ್ಲ್ಯು. ಬಿ. ಯೇಟ್ಸನ ಕುರಿತ ತನ್ನ ಪ್ರಸಿದ್ಧ ಉಪನ್ಯಾಸದ ಕೊನೆಗೆ ಅನ್ನುವುದು ಹೀಗೆ : 'ಕೆಲವೇ ಪುರುಷರಿರುತ್ತಾರೆ. ಅವರ ಇತಿಹಾಸವೇ ಅವರ ಕಾಲಮಾನದ ಇತಿಹಾಸವಾಗಿರುತ್ತದೆ. ಇಂಥವರು ತನ್ನ ಯುಗದ ಪ್ರಜ್ಞೆಯದೇ ಭಾಗವಾಗಿರುತ್ತಾರೆ. ಅವರನ್ನು ಬಿಟ್ಟರೆ ಈ ಯುಗವನ್ನು ಅರಿತು ಕೊಳ್ಳುವುದು ಶಕ್ಯವಿಲ್ಲ. ಇಂಥ ಕೆಲವೇ ವಿಭೂತಿಗಳಲ್ಲಿ ಒಬ್ಬ ಯೇಟ್ಸ'. ಅಂದರೆ ಒಂದು ಅರ್ಥದಲ್ಲಿ ಯೇಟ್ಸ ಆಯರ್ಲಂಡದ ರಾಷ್ಟ್ರೀಯ ಕವಿಯಾಗಿದ್ದಂತೆ ಆತ ವಿಶ್ವಕವಿಯೂ ಆಗಿದ್ದನು. ಅವನಿಗೆ ಅಂಥ ಜಾಗತಿಕ ಮಹತ್ವದ ಕಾವ್ಯ ವ್ಯಕ್ತಿತ್ವವಿತ್ತು. ಅವನಿಗೆ ನೋಬೆಲ್ ಬಹುಮಾನ ದೊರೆತಾಗ (೧೯೨೩) ಮತ್ತು ಸತ್ತಾಗ (೧೯೩೯) ಅವನು ಪಡೆದ ಅಂತರಾಷ್ಟ್ರೀಯ ಪ್ರಶಂಸೆ, ಮನ್ನಣೆಗಳಿಂದ ಇದು ಸಿದ್ಧವಾಯಿತು. ಅವನ ಅನುಭಾವದ ಚಳವಳಿಯು ಅಂದಿನ ರಾಷ್ಟ್ರೀಯ ಪ್ರಜ್ಞೆಯ ಜಾಗೃತಿಯ ಆಂದೋಲನದೊಂದಿಗೆ ಹೊಂದಿಯೇ ಸಾಗಿತ್ತು ಮತ್ತು ಇವೆರಡೂ ಚಟುವಟಿಕೆಗಳ ಒಂದು ಸಾಮಾನ್ಯವಾದ ಸಂಧಿಯು ಜೀವನದ ದೃಶ್ಯ

ಸ್ವರೂಪದ ಹಿಂದಿನ, ಆಚೆಯ ಶಕ್ತಿಗಳ ಶೋಧದಲ್ಲಿ ಇತ್ತು

ನಿಜವಾಗಿಯೂ ಯೇಟ್ಸ ರೊಮ್ಯಾಂಟಿಕ (ರಮ್ಯ) ಕವಿಗಳ ಹಂಗಾಮಿನ ತುಸು ತಡವಾದ ಪೈರು. ಆದರೂ ಆತ ಇದ್ದಕ್ಕಿದ್ದಂತೆ, 'ಆಧುನಿಕ' ಕವಿಯಾಗಿಬಿಟ್ಟನು. ಇದು ಅವನ ಪ್ರಶಂಸಕರಲ್ಲಿ ಹಲವರಿಗೆ ಸೋಜಿಗವಾದಂತೆ ಕೆಲವರಿಗೆ ಬೇಸರವೂ ಆಯಿತು. (ನಮ್ಮಲ್ಲಿ 'ಮೈಸೂರುಮಲ್ಲಿಗೆ' ಬರೆದ 'ಪುಷ್ಪಕವಿ' ಕೆ. ಎಸ್. ಎನ್. ಗಡಿಯಾರದಂಗಡಿಯ ಎದುರಿನ ಕುದುರಿಯ ಕುರಿತು ಬರೆದಂತೆ!) ಈ ಪರಿವರ್ತನೆಗೆ ಕೆಲಮಟ್ಟಿಗೆ ಕಾರಣನು. ಅಮೇರಿಕನ ಕವಿ ಎಝ್ರಾ ಪೌಂಡನು. ಈತ ಅಂದು ಆಧುನಿಕ ಕವಿಗಳ 'ಕುಲಪತಿ'ಎನಿಸಿಕೊಂಡನು. ಅನಂತರ ಪೌಂಡನ ಪ್ರಭಾವವು ಟಿ. ಎಸ್. ಇಲಿಯಟನ ಮೇಲೂ ಆಯಿತು. ಇಲಿಯಟನನ್ನು ಆಧುನಿಕ ಕವಿಗಳ 'ಉಪಕುಲಪತಿ' ಎಂದು ಗುರುತಿಸಲಾಯಿತು.

ಅದೇನೇ ಇರಲಿ ೧೯೦೮ ರಲ್ಲಿ ಕಾವ್ಯವನ್ನು ಹೇಗೆ ಬರೆಯಬೇಕೆಂಬುದನ್ನು ಕಲಿಯಲು ಎಝ್ರಾ ಪೌಂಡನು ಯೇಟ್ಸನಿಂದ ಕಲಿಯಬೇಕೆಂದು ಲಂಡನ್ನಿಗೆ ಬಂದನು-ಅಮೇರಿಕೆಯಿಂದ! ಆಗ ಪೌಂಡನ ವಯಸ್ಸು ೨೩. ಯಾರ ಪ್ರಭಾವವು ಯಾರ ಮೇಲೆ ಬಿತ್ತೋ, ಯೇಟ್ಸನ ಮುಂದಿನ ಎರಡು ಕವನ ಸಂಕಲನಗಳು 'ಗ್ರೀನ ಹೆಲ್ಮೆಟ' (೧೯೧೦) ಮತ್ತು ರೆಸ್ಪೋನ್ಸಿಬಿಲಿಟಿಸ್ (೧೯೧೪). ಅವನ ಹಲವಾರು 'ಹೊಸ' ಜಾಡಿನ ಕೃತಿಗಳನ್ನು ಒಳಗೊಂಡವು. ಪೌಂಡನ ಮತ್ತು ಅವನ 'Imagist' ಪ್ರಕಾರದ ಕವಿಮಿತ್ರರ ಅಭಿವ್ಯಕ್ತಿಗಳ ಛಾಯೆಯನ್ನು ಹೊಂದಿಕೊಂಡಿದ್ದವು. ಈ ಕೆಲವು ಲಕ್ಷಣಗಳೆಂದರೆ: ಕವನ ವಸ್ತುವಿನ ನೇರ ಅಳವಡಿಕೆ, ವಿಷಯದ ಅಭಿವ್ಯಕ್ತನೆಗೆ ಪೂರ್ತಿಸ್ವಾತಂತ್ರ್ಯ. ಮಾತಿನ ಮಿತವ್ಯಯ ಮತ್ತು ಮಾತಿನ ಉತ್ಕಟತೆ ವಾಚಾಳಿತನಕ್ಕೆ ಎಡೆಗೊಡದಂಥ ಏಕಾಗ್ರತೆ ಮತ್ತು ಕಾವ್ಯವನ್ನು ಪ್ರಾಸದ ಹಾಗೂ ಲಯದ ವ್ಯಾಮೋಹಕ್ಕೆ ಬಲಿಯಾಗಿ ಒಳ್ಳೆಯ ಗದ್ಯದ ಪಾತಳಿಗೂ ಕೆಳಗೆ ಜಾರಸಂತೆ ಹದನೋಡಿಕೊಳ್ಳುವುದು, ಇತ್ಯಾದಿ.

'ರೊಮ್ಯಾಂಟಿಕ (ರಮ್ಯವಾದೀ) ಆಯರ್ಲಂಡ ಆಗಿ ಹೋಯಿತು.' ಎಂದು ಯೇಟ್ಸ ಉದ್ಗರಿಸಿದನು ೧೯೧೩ ರಲ್ಲಿ. ತನ್ನ ಹಿಂದಿನ ಶೈಲಿಯನ್ನು ಅನುಕರಿಸುವವರನ್ನು ಯೇಟ್ಸ ಹೀಯಾಳಿಸಿದನು. ಹಿಂದಿನ ತನ್ನ ಹಳೆಯ ಆಖ್ಯಾಯಿಕೆ, ಕಥಾನಕಗಳನ್ನೂ ಕೈಬಿಟ್ಟನು. ೧೯೧೭ ರಲ್ಲಿ ಆತ ಬರೆದ 'ಕೂಲದಲ್ಲಿಯ ಕಾಡುಅಂಚೆಗಳು' [wild swans at coole] ಎಂಬ ಕವನ ಸಂಕಲನದಲ್ಲಿ ಒಂದು ಪದ್ಯ ಹೀಗಿದೆ: 'ಮುದುಕನಾಗುವ ಮುನ್ನ । ನಾನು ಅವನಿಗಾಗಿ । ಕವನವೊಂದು ಬರೆಯುವೆನು ।

ಅದು ಮುಂಜಾವಿನಂತೆ ತಂಪು ಮತ್ತು ಭಾವನಿರ್ಭರ !' ಅವನ ಈ ಆಕಾಂಕ್ಷೆಯು ಫಲಿಸಿತು. ಮುಂದೆ ಆತ ನಾಟಕಗಳನ್ನೂ ಬರೆದನು. ಎಝ್ರಾ ಪೌಂಡನ ಆಸಕ್ತಿಯಂತೆ ಜಪಾನೀ ಮಾರ್ಗ ಸಾಹಿತ್ಯದ ಬಗೆಯ ನಾಟಕಗಳನ್ನು ರಚಿಸಿದನು. ಅದಕ್ಕಾಗಿ ತನ್ನ ಹಿಂದಿನ ರಂಗಮಂದಿರದ ದಾರಿಯನ್ನು ತೊರೆದನು. ನರ್ತಕರಿಗಾಗಿ ಖಾಸಗಿ ರಂಗ ಶಾಲೆಗಳಿಗಾಗಿ ಈ ರೂಪಕಗಳನ್ನು ರಚಿಸಿದನು.

೧೯೧೭ ರಲ್ಲಿ,–ಅದು ಈ ಯೇಟ್ಸನ ಮದುವೆಯ ಕಾಲ,–ಅವನ ಕಾವ್ಯ ಇನ್ನೊಂದು ದಿಕ್ಕು ಹಿಡಿಯಿತು. ಹೊಸದಾಂಪತ್ಯದ ಆರಂಭದ ದಿನಗಳಲ್ಲಿ ತನ್ನ ಹೆಂಡತಿಯ 'ಮಾಧ್ಯಮ'ದೊಳಗಿಂದ ಆತ ಹೊಸತೊಂದು ವಿಶ್ವವ್ಯಾಪಿಯಾದ 'ಪುರಾಣ'ವನ್ನೇ ಪಡೆದನು. ಈ ಪುರಾಣ ಅಥವಾ ಪುರಾತನ ಆಖ್ಯಾಯಿಕೆ ಆತ ೧೯೨೫ ರಲ್ಲಿ ಬರೆದು ೧೯೩೭ ರಲ್ಲಿ ಪುನರಾವೃತಿಗೊಳಿಸಿದ 'ಒಂದು ದರ್ಶನ' [A Vision] ಎಂಬ ಗ್ರಂಥದಲ್ಲಿ ನಿರೂಪಿಸಿದನು. ಈ ಹೊಸ ಪುರಾಣವು ಕೆಲವೊಂದು ಶೈಲಬದ್ಧ ಅನುಭವದ ವ್ಯವಸ್ಥೆ ಇದರಿಂದ ತನ್ನ ಹೊಸ ಕಾವ್ಯಕ್ಕೆ ರೂಪಕಗಳನ್ನು ಆತ ಆಯ್ದುಕೊಂಡನು. ಈ ಹೊಸ ಪುರಾಣ ಆತನ ಹಳೆಯ ಆಯರಿಶ್ ಪೌರಾಣಿಕ ಕಥೆಗಳಿಗಿಂತ ಹೆಚ್ಚು ಸಂಘಟಿತ, ವ್ಯವಸ್ಥೆಗೊಂಡ, ಖಾಸಗಿ, ಸಂಕೀರ್ಣರೂಪದ ಪುರಾಣವಾಗಿದೆ. ಇದು ಚಂದ್ರನ ೨೮ 'ಕಲೆ'ಗಳೊಂದಿಗೆ ಸಂಬಂಧಗೊಂಡಿದೆ. ಈ ಸಂಬಂಧ ಮಾನವನ ವ್ಯಕ್ತಿತ್ವದೊಂದಿಗೂ ಇದೆ. ಹಾಗೆಯೇ ನಾಗರಿಕತೆಯ ಇತಿಹಾಸದೊಂದಿಗೂ ಇದೆ. ಈ ಸಂಬಂಧ ಪರಸ್ಪರ ಪೂರಕವಾದ ಪ್ರಚಂಡ ಚಕ್ರವ್ಯೂಹಗಳಿಗಾಗಿ ಕಂಡುಬರುತ್ತದೆ. ೧೯೨೪ ರಲ್ಲಿ ಪ್ರಕಟವಾದ ಯೇಟ್ಸನ 'ಲೇಡಾ ಮತ್ತು ಹಂಸ' [Leda and the Swan] ಕವನ (ಅಷ್ಟಷಟ್ಪದಿ) ಪ್ರಸಿದ್ಧವೆ ಇದೆ. ಯೇಟ್ಸ ಕವಿಗೆ ಪಾಶ್ಚಾತ್ಯ ಇತಿಹಾಸದ ಪ್ರತಿಯೊಂದು ಮಹಾಚಕ್ರ(ವ್ಯೂಹ)ವೂ ಪ್ರಾಚೀನವಿರಲಿ, ಹೊಸಯುಗದಿರಲಿ. ಆರಂಭವಾದದ್ದು ಒಂದು ಗರ್ಭಧಾರಣೆಯಿಂದ, ಒಬ್ಬ ಮರ್ತ್ಯಹೆಣ್ಣಿನಲ್ಲಿ ಪಕ್ಷಿಯ ರೂಪ ಧರಿಸಿ ಬಂದ ದೇವಶಿಸುವಿನಿಂದ. ಇದಕ್ಕೆ ಆತ ಕಾಣಿಸುವ ದಾಖಲೆ, ಲೇಡಾ ಮತ್ತು ಮೇರೀಮಹಾಮಾತೆ, ಝೀಯಸ್ ಮತ್ತು ದೇವರು, ಹಂಸ ಮತ್ತು ಪಾರಿವಾಳ. ಹಾಗೆಯೇ ಟ್ರಾಯ್‌ರಾಜ್ಯದ ಹೆಲನ್ ಮತ್ತು ಯೇಸೂಕ್ರಿಸ್ತ. ಇದೇ ರೀತಿಯಲ್ಲಿ ಯೇಟ್ಸನ ಇನ್ನೊಂದು ಮಹತ್ವದ ಕವನ 'ಪುನರಾಗಮನ' (The Second Coming) ೧೯೨೦ ರಲ್ಲಿ ಪ್ರಕಟವಾದದ್ದು,– ಈ ಕ್ರೈಸ್ತಯುಗದ ಚಕ್ರ ಕರಗಿ ಹೋಗಿ ಹೊಸದೊಂದು ಮನ್ವಂತರದ ಆರಂಭವನ್ನು ದರ್ಶನಗೊಳಿಸುತ್ತದೆ. 'ಯಾವ ದೊರಗು ಪಶು ಅದರ ಕಾಲ ಮುಗಿಯಲು ಬಂದು ! ಬೆಥ್ಲೆಹೆಂದತ್ತ ಕದ್ದು ಸರಿಯುತ್ತದೆ ? ಹುಟ್ಟಲು ? what rough 'beast, its hour come round at last / slouches towards Bethlehem to be born ?'

ಯೇಟ್ಸ ಕವಿಯ ಎರಡು ಉತ್ಕೃಷ್ಟ ಕವನಗಳು ಅವನ ಈ ಹೊಸದರ್ಶನದ (A Vision) ಪುರಾಣಕ್ಕೆ ಹೊಂದಿಕೊಂಡಿವೆ. ಅವು Sailing to Byzantium (೧೯೨೮ ರ Tower ಸಂಕಲನದಿಂದ) ಮತ್ತು Byzantum [Words for Music Perhaps, 1932 ರ ಸಂಕಲನದಿಂದ). ನಮ್ಮ ಕವಿವರ್ಯ ಬೇಂದ್ರೆ ಕೂಡ ಇಂಥ ಸ್ವಪ್ನಾಟ್ಟರರಾಗಿದ್ದರು. ಕೆಲವು ಅಂಶಗಳಲ್ಲಿ ಇವರೂ ಯೇಟ್ಸನನ್ನು ಹೋಲುತ್ತಿದ್ದರು–ಅವನ ಪೂರ್ವಾರ್ಧ ಕಾವ್ಯ ಪ್ರಜ್ಞೆಯಲ್ಲಿ–ಜಾನಪದ ಸಂಸ್ಕೃತಿ. ಸ್ವಪ್ನದರ್ಶನ, ಸಾಕ್ಷಾತ್ಕಾರ, ಆಖ್ಯಾಯಿಕೆ ಮುಂತಾದ ಅಂಶಗಳಲ್ಲಿ. ಯೇಟ್ಸನಿಗೆ ೧೧ ನೆಯ ಶತಮಾನದ ಬೆಝಂಟೈನ ಸಂಸ್ಕೃತಿ ಕ್ರೈಸ್ತ–ಕಾಲಚಕ್ರದ ಅತ್ಯುತ್ತಮ ಅಥವಾ ಶಿಖರಪ್ರಾಯವಾದ ಭಾಗವಾಗಿ ಕಂಡಿತು. ಈ ಯುಗಖಂಡವನ್ನು ಆತ ಕ್ರಿಸ್ತಪೂರ್ವ ೫ ನೆಯ ಶತಮಾನದ ಪರ್ಶಿಲಿಯನ್ ಅಥೆನ್ಸ ಕಾಲಕ್ಕೆ ಸರಿಸಮ ವೆಂದು ಪರಿಗಣಿಸಿದನು. ಅತ್ತ ಟಿ. ಎಸ್. ಇಲಿಯಟ Waste Land ಕಾವ್ಯದಲ್ಲಿ ಉದ್ವಸ್ತ ಮತ್ತು ಅಸ್ವಸ್ಥ ಮಾನವನ ತುಂಡು–ತುಣುಕುಗಳನ್ನು ಶೇಖರಿಸಿ ಕೊಡುತ್ತಿರುವಾಗ, ಇತ್ತ ಯೇಟ್ಸ ಅದೇ ಅವಶೇಷಗಳಿಂದ ತನ್ನದೇ ಶೋಧದ ಹೊಸಭವ್ಯಭವನವನ್ನು ಕಟ್ಟುತ್ತಿದ್ದ. ಮೇಲೆ ಹೇಳಿದ ಎರಡು ಕವನಗಳೊಂದಿಗೆ ಜೀವ ಮತ್ತು ಆತ್ಮಗಳ ಸಂವಾದ [A Dialogue of Self and Soul, ೧೯೩೯ ರ The Winding Stair ಸಂಕಲನದಿಂದ) ಈ ಕವಿತೆಯೂ ಕೂಡ ಅವನ ಸ್ವಂತ ದರ್ಶನವನ್ನು ಸಮರ್ಥಿಸುತ್ತದೆ. ಹಾಗೆಯೇ ಅವನ ಅನೇಕ ಕವನಗಳೂ ಕಾವ್ಯಾಂಶಗಳೂ ಇದೇ ಜಾಡಿನಲ್ಲಿ ಹೆಣೆದಿರುತ್ತವೆ.

೧೯೨೮ ರ ಸಮೀಪಕ್ಕೆ ಯೇಟ್ಸ ಕಾವ್ಯದ ನಾಲ್ಕನೆಯ ಮತ್ತು ಕೊನೆಯ ಮನ್ವಂತರ ಒದಗಿ ಬಂತು. ಆಗ ಇಂಗ್ಲಂಡವ ಆಧುನಿಕ ಕವಿಗಳ ಎರಡನೆಯ ತಲೆಮಾರು–ಅಡೆನ್, ಸ್ಟೀಪನ್ ಸ್ಪೆಂಡರ್, ಸಿ. ಡೆ. ಲಿವೀಸ್ ಇತ್ಯಾದಿ. ಇವರಿಗೆ ಇಲಿಯಟ, ಯೇಟ್ಸರು ಹಿರಿಯರು. ಆಗ ಇಲಿಯಟ ಬ್ರಿಟಿಷ ಪ್ರಜೆಯಾಗಿದ್ದನು. ಎರಝಾ ಪೌಂಡ ಇಟಲಿಯಲ್ಲಿ ಇದ್ದನು. ತನ್ನ 'ಕ್ಯಾಂಟೊ' ಕಾವ್ಯ ಬರೆಯುತ್ತ– ಯೇಟ್ಸ ಅವನನ್ನು ಭೆಟ್ಟಿಯಾಗಲು ಹೋಗಿ ಸಕ್ತ ಕಾಯಿಲೆಬಿದ್ದನು.

ಈ ಸುಮಾರಿಗೆ ಯೇಟ್ಸ ತನ್ನ ಪುರಾಣದರ್ಶನವನ್ನು ಬಿಟ್ಟಂತೆ ಇತ್ತು. ಆದರೂ ಆಗಲೂ ಅವನು ಬರೆದ ಕಾವ್ಯವೆಲ್ಲ ಸುಶ್ರಾವ್ಯ. ಧ್ವನಿಪೂರ್ಣ ಸಮೃದ್ಧವಾಗಿ ಹೆಣೆದ ಶಬ್ದಪಟವಾಗಿತ್ತು. ಅದು ಸಂಕೀರ್ಣವೂ ಆಗಿತ್ತು. ದೇಹದ ಕಾಯಿಲೆ ಅವನ ಕಾವ್ಯ ದೇಹಕ್ಕೆ ಸೋಂಕಿದ್ದಿಲ್ಲ. ಅಲ್ಲಿ ಪುನಃ ಉತ್ಸಾಹ ಚೈತನ್ಯಗಳೇ ತುಂಬಿದ್ದವು. ಪ್ರತಿಭೆಗೆ ಹಳಸು, ಹ್ರಾಸ, ಕ್ಷಯ–ಏನೂ ಇದ್ದಿಲ್ಲ. ಅದು ೧೯೦೮-೧೭ ರ ಕಾಲದಲ್ಲಷ್ಟೇ ಶ್ರೀಮದೂರ್ಜಿತವಾಗಿ ಕೆಲಸ ಮಾಡುತಿತ್ತು. ಈ

ಸಲ ಆತ ಆಡು ನುಡಿಯ ನಿರಾಭರಣವಾದ ಸರಳ ನುಡಿಗಳಲ್ಲಿ ಹಳೆಯ ಲಾವಣಿ ಪದ್ಯಗಳಂತೆ ಕವನಿಸ ತೊಡಗಿದ್ದ. ಇವುಗಳಲ್ಲಿ ಅತಿ ಸತ್ವಯುತವಾದವು ಕ್ರೇಸೀಜೇನ್ (೧೯೩೦) ಎಂಬ ಹೆಸರಿನ ಎರಡು ಕವನಗಳ ಗುಚ್ಛ. ಇವುಗಳಲ್ಲಿ ಜೇನ್ ಎಂಬ ಒಬ್ಬ ಮುದಿ ಹುಚ್ಚಿ ತನ್ನ ಬಾಳಿನ ಕೇಂದ್ರವಾಗಿದ್ದ ಪ್ರಣಯದ ಅನುಭವ ಸ್ಮೃತಿಗಳನ್ನು ಕುರಿತು ಹಾಡುತ್ತಾಳೆ. ಅವಳ ಪ್ರಿಯಕರ ಜ್ಯಾಕ, ಒಬ್ಬ ಪಾತ್ರೆ ರಿಪೇರಿಯ ಅಲೆಮಾರಿ ಕಸಬುಗಾರ. ಅವರನ್ನು ಧರ್ಮಗುರು ಬಹಿಷ್ಕರಿಸುತ್ತಾನೆ. ಅದೊಂದು ದುರಂತ ನಾಯಿಕೆಯ ಕತೆ. ಅಲ್ಲಿಯ ಅನುಭವ ವಿವಿಧ. 'ಎಲೆಗಳು ಹಲವಾರು; ಆದರೆ ಒಂದೇ ಬೇರು'–ಯೇಟ್ಸ ಅನ್ನುತ್ತಾನೆ. ಅಂದರೆ ಈ ಕವನ ಗಳಲ್ಲಿ ತನ್ನ ಬದುಕಿನ ಈ ಭಾಗದಲ್ಲಿ ಯೇಟ್ಸ ಕೆಲವರೊಡನೆ ಬಹುಜನರೊಂದಿಗೂ ಒಂದೇ ದನಿಯಲ್ಲಿ ಮಾತಾಡುತ್ತಾನೆ. ಇಲ್ಲಿ ಗಾಢವಿದ್ದರೂ ಗೂಢವೇನೂ ಇಲ್ಲ.

ಯೇಟ್ಸನ ಕೊನೆಯ ಎರಡು ಕವನಗಳು,–Lapis Lazuli (೧೯೩೬) ಮತ್ತು Longlegged Fly (೧೯೩೮). ಇವೂ 'ಕ್ರೇಝೀ ಜೇನ್'ದಂತೆಯೇ ಕವಿಯ ಪರಿಪಕ್ವವಾದ ಸವಿಹಣ್ಣಾದ ಕಾವ್ಯದನಿಯನ್ನು ಮಿಡಿಯುತ್ತವೆ. ಬಾಳಿನ ವೈಭವೀ ಕರಣ ನಮ್ಮ ನಶ್ವರ ಪ್ರಪಂಚದ ದುರಂತಗಳನ್ನು ಅರ್ಥಗೌರವದಿಂದ ತುಂಬುತ್ತದೆ, 'ಎಲ್ಲವೂ ಬೀಳುವವು ಮತ್ತೆ ಕಟ್ಟುವೆವು। ಅವನ್ನು ಕಟ್ಟುವವರೆಲ್ಲರೂ ಹಿಗ್ಗುವೆವು॥' (All things Fall and are built again। And those that build are again gay!) ಅವನ ಎರಡನೆಯ ಕವನ 'Long Legged Fly.' 'ಮೌನದ ಹೊಳೆಯಲ್ಲಿ ತೇಲುವ ಮನಸ್ಸೆ ಈ ಉದ್ದಕಾಲಿನ ಸೊಳ್ಳೆ.' ಮೂರು ಪುಟ್ಟನುಡಿ (ಚರಣ)ಗಳಲ್ಲಿ ಯೇಟ್ಸ ಹೇಳುವದೇನು? ಸೀಝರನಿರಲಿ, ಹೆಲನ್ ಇರಲಿ, ಚಿತ್ರಕಾರ ಮೈಕೆಲ ಎಂಜೆಲೋ ಇರಲಿ,–ಅವರವರ ಬಾಳಿನಲ್ಲಿ ಒಂದು ಅರ್ಥಪೂರ್ಣವಾದ ಕ್ಷಣಉದಿಸುತ್ತದೆ. ಇವರು ವಿಧಾಯಕ / ವಿಧ್ವಂಸಕ, ತಾರಕ / ಮಾರಕ ಶಕ್ತಿಗಳನ್ನು ನಿರ್ಮಿಸುವವರು. ಈ ಕಲೆ ಅವರಿಗೆ ಸಿದ್ಧ. ಇದರಿಂದ ನಾಗರಿಕತೆ–ಸಂಸ್ಕೃತಿ ಮುಳುಗದೇ ಉಳಿಯುತ್ತದೆ. ಹೀಗೆ ಸೃಷ್ಟಿ ಮತ್ತು ಲಯಗಳು ಅವಿಭಾಜ್ಯ. ಅವೆರಡು ಅವಶ್ಯ ನಾಗರಿಕತೆಯನ್ನು ತೇಲಿಸಲಿಕ್ಕೆ. ಇದನ್ನು ಯೇಟ್ಸ ನಿಚ್ಚಳವಾಗಿ ನೋಡಿದನು. ಅವನ ಕಾವ್ಯ ಈ ನೋಟದ ಸಂಪನ್ನ ವೈವಿಧ್ಯ ಮಯವಾದ ಅಭಿವ್ಯಕ್ತಿ ಮತ್ತು ಬಹುದೂರಗಾಮಿಯಾದ ಶೋಧ. ಇಂಥ ನೋಟಕ್ಕಾಗಿ, ಇಲಿಯಟನಂತೆ ಯೇಟ್ಸನಿಗೂ ಗೊತ್ತು,–ನಮ್ಮ ಈ ಯುಗದ ಭ್ರಮನಿರಸನ ಮತ್ತು ವಿಘಟನೆ. ಅದನ್ನೇ ಆತ ಅಂತಿಮವಾಗಿ ಸೂಚಿಸಿದನು:

'Things fall apart the centre cannot hold;
Mere anarchy is loosened up on the world

The blood-dimmed Tide is loosened and every where
The ceremony of innocence is drowned
The best lack all conviction while the worst
are full of passionate intensity'

ಡಬ್ಲ್ಯು. ಬಿ. ಯೇಟ್ಸನ ಪ್ರತಿಭೆಯ ಹಾಗೂ ವ್ಯಕ್ತಿತ್ವದ ಇನ್ನೊಂದು ಮಗ್ಗಲನ್ನು ವೀಕ್ಷಿಸಿದ ಹೊರತು ಅವನ ಮಹತ್ವದ ಅರಿವು ಪೂರ್ತಿ ಆಗುವಂತಿಲ್ಲ. ಆ ಮಗ್ಗಲೆಂದರೆ ಅವನ ರಂಗರೂಪಕಗಳ ಕಾರ್ಯ. ಒಂದು ಶತಮಾನದ ಹಿಂದೆ ಆಯರ್ಲಂಡದಲ್ಲಿ ಒಂದು ಸಾಹಿತ್ಯಿಕ ಆಂದೋಲನವನ್ನು ಗುರುತಿಸಬಹುದಾಗಿತ್ತು. ಆಯರ್ಲಂಡ ಬ್ರಿಟಿಶ ನಡುಗಡ್ಡೆಗಳಲ್ಲಿ ಒಂದು. ನಾಟಕಕಾರ ಬರ್ನಾರ್ಡ ಶಾ ಅಂದಂತೆ ಅದು 'ಜಾನ್ ಬಟ್‌ನ ಇನ್ನೊಂದು ದ್ವೀಪ' ('John Butts other island') ಆದಾಗ್ಯೂ ಈ ಐರಿಶ್ ಜನ ಬ್ರಿಟಿಶ್‌ರಾಷ್ಟ್ರದ ಒಂದು ಅಂಶವೆಂದು ಎಂದೂ ಭಾವಿಸಿಕೊಂಡಿಲ್ಲ. ಜನಜಾತಿ, ಬುಡಕಟ್ಟು, ಧರ್ಮ, ಇತಿಹಾಸ ಅವುಗಳಿಂದ ಬೆಳೆದು ಬಂದ ಸಾಮಾಜಿಕ ಆರ್ಥಿಕ ವಿಕಾಸ ಎಲ್ಲವೂ ಇವೆರಡೂ ಜನಾಂಗಗಳನ್ನು ಬೇರೆಯೇ ಎಂಬಂತೆ ಇಟ್ಟಿವೆ. ಬಹುಸಂಖ್ಯ ಐರಿಶ್ ಜನ ಕ್ಯಾಥೊಲಿಕ ಪಂಥದವರೇ ಆಗಿದ್ದಾರೆ. ಆ ನಾಡಿನಲ್ಲಿ ವೈಯಕ್ತಿಕ ಹಾಗೂ ವರ್ಗೀಯ ಭೇದ ವೈಷಮ್ಯಗಳು ಅಷ್ಟೊಂದಿಲ್ಲ. ಜನ ಸಹಜವಾಗಿ ಕೂಡಾಡುತ್ತಾರೆ. ಅವರಿಗೆ ಪರಿಚಯದ ಉಪಚಾರ ಬೇಕಾಗುವದಿಲ್ಲ. ಕವಿ ಯೇಟ್ಸ ಇದನ್ನು ಆರಂಭದಲ್ಲಿಯೇ ಗುರುತಿಸಿದನು- ತನ್ನ 'ಜಾನಶರ್ಮನ್' (೧೮೮೯) ಕಾದಂಬರಿಯಲ್ಲಿ. ಅಲ್ಲಿಯ ಕಥಾನಾಯಕ ಅನ್ನುತ್ತಾನೆ. 'ನಿಮ್ಮ ದೊಡ್ಡ ಪಟ್ಟಣ ದಲ್ಲಿ ಜನಕ್ಕೆ ತನ್ನ ಅಲ್ಪ ಸಂಖ್ಯೆಗೊತ್ತು. ಅದರಾಚೆಗೆ ಆತನಿಗೆ ಏನೂ ಗೊತ್ತಿರುವುದಿಲ್ಲ. ಆದರೆ ಇಲ್ಲಿ ಹಾಗಲ್ಲ. ಒಬ್ಬ ಒಂದು ದಿನದಲ್ಲಿ ಇಡಿಯ ಜಗತ್ತಿನೊಂದಿಗೇ ಮಾತಾಡುತ್ತಾನೆ. ಒಂದು ತಿರುಗಾಟದಲ್ಲಿ ಆತ ಭೆಟ್ಟಿಯಾಗುವ ಪ್ರತಿಯೊಬ್ಬನೂ ಒಂದು ವರ್ಗವೇ !'

ಆಯರ್ಲಂಡ ೫ನೆಯ ಶತಮಾನದಲ್ಲಿ ಕ್ರಿಸ್ತಧರ್ಮವನ್ನು ಅಂಗೀಕರಿಸಿತು. ಅಲ್ಲಿಯ ಮೂಲದ ಗ್ಯಾಲಿಕ್ (ಕೆಲ್ಟಿಕ್) ಸಂಸ್ಕೃತಿಯು ೭ ರಿಂದ ೧೨ನೆಯ ಶತಮಾನದ ವರೆಗೆ ತನ್ನ ಪೂರ್ಣಯುಗವನ್ನು ಕಾಪಾಡಿಕೊಂಡಿತು. ಬ್ರಿಟಿಶರ ಆಧಿಪತ್ಯದಲ್ಲಿ ಅವರ ದೇಶೀಯ ಭಾಷೆ ಹೆಚ್ಚು ಹೆಚ್ಚು ಅಳಿಗಾಲ ಕಂಡಿತು. ೧೯ ನೆಯ ಶತಮಾನದ ಪೂರ್ವಾರ್ಧದಲ್ಲಿ ಐರಿಶ್ ಭಾಷೆ ಅಲ್ಲಿಯ ಕಲಿತವರ ಭಾಷೆಯಾಗಿ ಉಳಿಯಲಿಲ್ಲ.

ಇದ್ದರೆ ಅದು ಆ ನಡುಗಡ್ಡೆಯ ಪಶ್ಚಿಮ ಮತ್ತು ದಕ್ಷಿಣ ಪ್ರದೇಶಗಳಲ್ಲಿ ರೈತರ ವಿಭಿನ್ನ ಆಡುನುಡಿಗಳಾಗಿ ಉಳಿಯಿತು,– ಅದೂ ಕರಾವಳಿಯ ಗುಂಟ. ಆದರೆ ಈ ೨೦ ನೆಯ ಶತಮಾನದ ತಿರುವಿನಲ್ಲಿ ಮೂಲಭಾಷೆಯ ಪುನರುಜ್ಜೀವನದ ಚಟುವಟಿಕೆ ಶುರುವಾಯಿತು,–೧೯೨೧ ರಲ್ಲಿ ಆಯರ್ಲಂಡಿಗೆ ಒಂದು ಬಗೆಯ ಸ್ವಾಯತ್ತತೆ ಬಂದ ಮೇಲೆ, ಇರಲಿ.

ಆಯರ್ಲಂಡಿನ ತೊಂದರೆಗಳೇ ತುಂಬಿ ತೊಡಕಾದ ಇತಿಹಾಸದ ಫಲವಾಗಿ ಅಲ್ಲಿ ಒಂದು ಪ್ರತಿಷ್ಠಾಪಿತ ವ್ಯವಸ್ಥಿತ ಸಿರಿವಂತ ಮಧ್ಯಮ ವರ್ಗವೆಂಬುದು ಭದ್ರವಾಗಿರಲಿಲ್ಲ. ಈ ಆಶ್ರಯವಿಲ್ಲದೆ ಅಲ್ಲಿ ಚಿತ್ರಕಲೆ ಸಂಗೀತಕಲೆ ಬೆಳೆಯಲಿಲ್ಲ. ಇವುಗಳ ಸಂಪ್ರದಾಯಗಳೇ ತಲೆ ಎತ್ತಲಿಲ್ಲ. ಬ್ರಿಟಿಷ್ ಪ್ರದೇಶದ ಇನ್ನೊಂದು ಭಾಗ ವೇಲ್ಸದಲ್ಲಿ ವೆಲಿಶ್ ಭಾಷೆ ಆಡುವವರಿಗಿಂತ ಆಯರ್ಲಂಡದಲ್ಲಿ ಐರಿಶ್ ಭಾಷೆ ಆಡುವವರ ಸಂಖ್ಯೆ ಕಡಿಮೆ ಆಗಿತ್ತು. ಆಯರ್ಲಂಡಿನ ಜನಸಂಖ್ಯೆ ಗ್ರೇಟ ಬ್ರಿಟನ್ನಿನ ಜನರ ೧೦ ಕ್ಕೆ ಒಂದು ಪಾಲಿನಷ್ಟು ಇತ್ತು. ಆದರೂ ಅಲ್ಲಿ ಯೇಟ್ಸ ಮತ್ತು ಜೇಮ್ಸ ಜಾಯ್ಸ (James Joyce) ನಂಥ ಪ್ರತಿಭಾನ್ವಿತ ಕವಿಗಳು ಉದಿಸಿದರು. ಅಲ್ಲಿಯ ಅಂದಿನ ಹತ್ತೆಂಟು ಸಾಹಿತಿಗಳಲ್ಲಿ ಜಾಗತಿಕ ಖ್ಯಾತಿಯನ್ನು ಪಡೆದರು. ೧೯ ನೆಯ ಶತಮಾನದ ಬಹುಪಾಲುಕಾಲ ಆ ದೇಶದ ಉತ್ಸಾಹ ಮತ್ತು ಆದರ್ಶವಾದ ಸಾಹಿತ್ಯಕ್ಕಿಂತ ರಾಜಕಾರಣದ ಕಡೆಗೆ ಹೆಚ್ಚು ಒಲಿಯಿತು. ಅಂದು ಯೇಟ್ಸನ- ಹಾಗೆಯೇ ಜಾಯ್ಸನ–ಚಾರಿತ್ರ್ಯ ರೂಪಗೊಳ್ಳುವ ಪ್ರಾಯದಲ್ಲಿ ಅಲ್ಲಿಯ ರಾಷ್ಟ್ರೀಯ ಪ್ರವೃತ್ತಿ ಪ್ರಯತ್ನಗಳು ರಾಜಕೀಯದ ಹೊರತಾಗಿ ಅದರ ಹೊರಗೆ ತಮ್ಮ ಉಸಿರಾಟಕ್ಕೆ ದ್ವಾರ ಹುಡುಕುತ್ತಿದ್ದವು. ಆ ದ್ವಾರ ತೆರೆದದ್ದು ಅವರೆಲ್ಲ ಕಟ್ಟಿದ 'ಗ್ಯಾಲಿಕ್ ಲೀಗ'ದಲ್ಲಿ ದೇಶೀಯ ತಾಯ್ನುಡಿಯ ಪುನರುತ್ಥಾನ ಮತ್ತು ದೇಶೀಯ ರಂಗಮಂಚದ ಚಳವಳಿ ಅದರ ಫಲವಾಯಿತು.

ಹೊಸರಂಗ ಚಟುವಟಿಕೆಗಳ ಚಳವಳಿಯ ಧುರೀಣರು ೫–೬ ಮಂದಿ. ಅವರಲ್ಲಿ ಪ್ರಮುಖ ಪಾತ್ರ ಡಬ್ಲೂ. ಬಿ. ಯೇಟ್ಸನದಾಯಿತು. ಎಳೆವಯಸ್ಸಿನಿಂದಲೂ ಯೇಟ್ಸನಿಗೆ ನಾಟಕಗಳಲ್ಲಿ ಆಸಕ್ತಿ–ಪ್ರವೃತ್ತಿ ಇತ್ತು. ಅದೂ ಕಾವ್ಯರೂಪಕಗಳಲ್ಲಿ. ಆಗಲೇ ಅವನ ಒಂದು ಕಾವ್ಯನಾಟಕ ಲಂಡನ್ನಿನಲ್ಲಿ ಆಡಲ್ಪಟ್ಟಿತ್ತು. ಈ ಐರಿಶ್ ಥಿಯೇಟರ ಚಳವಳಿಯ ಇನ್ನೊಬ್ಬ ಕಾರ್ಯಕರ್ತ ಎಡ್ವರ್ಡ ಮಾರ್ಟಿನ (Edward Martyn.) ಆದರೆ ಈತನ ಒಲವು ಇಬ್ಸೆನ್‌ನ ಕೃತಿಗಳತ್ತ. ಯೇಟ್ಸನ ಒಲವಿನ ತೀರ ವಿರುದ್ಧ. ಇಬ್ಸನ್‌ನ (Ibsen) ನಾಟಕಗಳು ಗದ್ಯ. ಅಲ್ಲದೆ ಸ್ಥಾನಿಕ ರಾಜಕೀಯ ಸಮಸ್ಯೆಗಳನ್ನು ಒಳಗೊಂಡವು. ಆದರೆ ಮಾರ್ಟಿನ್‌ನ ಒಬ್ಬ ಬಂಧು

ಜಾರ್ಜ ಮೂರ್ (೧೮೫೨-೧೯೩೭) ಪ್ಯಾರಿಸ್ ಲಂಡನ್ನುಗಳಲ್ಲಿ ಕೆಲಮಟ್ಟಿಗೆ ನಾಟಕ ನಟ-ರಂಗಗಳ ವ್ಯವಹಾರಿಕ ಅನುಭವ ಹೊಂದಿದ್ದನು. ಇವನಿಗೆ ಈ ಹೊಸಚಳವಳಿಯ ಜಾನಪದ ಅಥವಾ ದೇಶೀಯ ರಂಗದ ಬಗೆಗೆ ಅಭಿರುಚಿ ಇತ್ತು. ಆತನೂ ಮಾರ್ಟಿನ್‌ನೂ ಯೇಟ್ಸನೊಂದಿಗೆ ಸೇರಿದರು. ಇವರು ಕ್ಯಾಥೊಲಿಕರು. ಆದರೆ ಇವರೆಲ್ಲ ರಸಿಕರು. ಕೂಡುವುದು ಒಬ್ಬ ಪ್ರತಿಷ್ಠಿತ ಸಿರಿವಂತ ಪ್ರಾಟೆಸ್ಟೆಂಟ ಮಹಿಳೆ,-ಲೇಡಿಗ್ರೇಗರಿ ಎಂಬವಳ ಮನೆಯಲ್ಲಿ (೧೮೫೨-೧೯೩೨). ಆಕೆ ಇವರ ಕೆಲಸಕ್ಕೆ ತುಸು ಹಣವನ್ನೂ ಪ್ರೋತ್ಸಾಹವನ್ನೂ ತನ್ನ ಕೆಲವು ಕಿರುನಾಟಕಗಳನ್ನೂ ಕೊಟ್ಟಳು. ಅಲ್ಲದೆ ತುಂಬ ಚಾಕಚಕ್ಯತೆ ಚಾತುರ್ಯಗಳಿಂದ ಈ ಗುಂಪಿನ ಕೆಲಸದಲ್ಲಿ ಕೈಯಾಡಿಸಿದಳು. ಇವರೆಲ್ಲ ಸುಶಿಕ್ಷಿತರು, ಸಂಭಾವಿತರು. ಇವರಿಗೆ ರಂಗ ಭೂಮಿಯ ಸಕ್ರಿಯ ಅನುಭವವಿದ್ದ ನಟಸೋದರರಾದ ವಿಲಿಯಂ ಮತ್ತು ಫ್ರಾಂಕ ಫೇ (Fay brothers) ಬಂಧುಗಳು ಬಂದು ಸೇರಿದರು. ಇನ್ನೊಬ್ಬ ಖ್ಯಾತ ಐರಿಶ್ ಕವಿ ಚಿಂತಕ A. E. (George Russell) ನ ಮುಖಾಂತರ.

ಐರಿಶ್ ನ್ಯಾಶನಲ್ ಥಿಯೇಟರ ಸ್ಥಾಪನೆ ಆದದ್ದು ೧೯೦೧ ರಲ್ಲಿ. ಅದಕ್ಕೆ ಯೇಟ್ಸನೇ ಅಧ್ಯಕ್ಷ. ಎರಡು ವರ್ಷಗಳ ತರುವಾಯ ಅವರು ೫೦೦ ಪ್ರೇಕ್ಷಕರು ಕೂಡ್ರಬಹುದಾದ ಒಂದು ಚಿಕ್ಕ ರಂಗಮಂದಿರವನ್ನೂ ಕೊಂಡರು,-ಒಬ್ಬ ಧನಿಕ ನಾಟಕ ಪ್ರೇಮಿಯಿಂದ. ಆಗ ಅವರ ಕೆಲಸ ಪ್ರಯೋಗಾವಸ್ಥೆಯ ನಾಟ್ಯ ವಿಲಾಸಿಗಳಂತೆಯೇ ಇತ್ತು. ಮುಂದೆ ಈ ಹೊಸ ಅಬೆಥಿಯೇಟರ್ ಅಸ್ತಿತ್ವದಲ್ಲಿ ಬಂತು-ಯೇಟ್ಸ, ಲೇಡಿಗ್ರೇಗರಿ ಮುಂತಾದವರ ಯತ್ನದಿಂದ. ಈ ರಂಗದಿಂದ ಹೆಸರಾದ ನಾಟಕಕಾರ ಜೆ. ಎಂ. ಸಿಂಜ (J. M. Synge). ಈತ ಯೇಟ್ಸನ ಕೊಡುಗೆ. ಆರಂಭದಲ್ಲಿ ಈ ಸಿಂಜ ಪ್ಯಾರೀಸಿನಲ್ಲಿ ಚಿಕ್ಕಸಂಪಾದನೆಯ ಒಂದು ಕೆಲಸಮಾಡುತ್ತಿದ್ದ. ಜತೆಗೆ ಇಂಗ್ಲಿಷ ಪಾಠಗಳನ್ನೂ ಫ್ರೆಂಚದಿಂದ ಅನುವಾದಗಳನ್ನೂ ಮಾಡುತಿದ್ದ. ಯೇಟ್ಸ ಅವನನ್ನು ಭೆಟ್ಟಿಯಾಗಿ ಸ್ವದೇಶಕ್ಕೆ ಮರಳುವಂತೆ ಹಾಗೂ ಐರಿಶ್ ಭಾಷೆಯಲ್ಲಿ ಬರೆಯುವಂತೆ ಮಾಡಿದನು. ಆತ ಆ ಮೂಲಕ ಯೇಟ್ಸನ ಗುಂಪಿನ ಹಲವು ನಾಟಕಕಾರರಿಗಿಂತ ಮುಂದೆ ಬಂದನು, ಮೇಲೇರಿದನು. ಆಗ ಯೇಟ್ಸನಿಗೆ ತಾನುಮಾಡಿದ ಉಪದೇಶ, ಉತ್ತೇಜನೆಗಳ ಕುರಿತು ಸಂಶಯ ತಾಳುವಂತೆಯೇ ಆಯಿತು. ಸಿಂಜನ ಕೃತಿಗಳಲ್ಲಿ ತೀರ ವಾಸ್ತವತೆ ಮತ್ತು ಅಷ್ಟೇ ತೀವ್ರ ಕಲ್ಪನೆಯ ಸಂಚಾರ ಕೂಡಿರುತ್ತದೆ. ಅವನ ಒಂದು ನಾಟಕ 'The play boy of the western world' ಯುರೋಪದ ೫-೬ ಭಾಷೆಗಳಲ್ಲಿ ಅನುವಾದವಾಯಿತು. ಹಾಗೆಯೇ-ಇನ್ನೊಂದು 'The Riders at sea'.

ಯೇಟ್ಸನ ಈ ರಂಗಸಂಸ್ಥೆ ಆರಂಭದಿಂದಲೂ ಜನರಲ್ಲಿ ಆಸಕ್ತಿಯಂತೆ ವಿವಾದಗಳನ್ನೂ

ಉಂಟುಮಾಡಿತು. ಆದರೆ ಹೊರಗೆ ಇಂಗ್ಲಂಡಿನಲ್ಲಿ-ಲಂಡನ, ಕೇಂಬ್ರಿಜ್, ಆಕ್ಸ್‌ಫರ್ಡ, ಮೆಂಚೆಸ್ಟರ್ ಮತ್ತು ಗ್ಲಾಸಗೊ ಮುಂತಾದ ಕಡೆಗೆ ಇವರ ನಾಟಕಗಳು ಖ್ಯಾತಿಯನ್ನು ಕಂಡವು, ಹಣವನ್ನೂ ತಂದವು. ನಾಟಕದ ವಸ್ತು ಐರಿಶ್, ನಾಟಕಕಾರರೂ ಐರಿಶ್. ಆದರೆ ಈ ನಾಟಕಗಳ ರಂಗತಂತ್ರ ನಾಟ್ಯಶೈಲಿ-ಎಲ್ಲ ಹೊಸತಾಗಿತ್ತು. ಅವು ಬ್ರಿಟಿಶ್ ಪ್ರೇಕ್ಷಕರನ್ನು ಸೂರೆಮಾಡಿದವು. ಈ ನಾಟಕ ಶೈಲಿಯ ಮುಖ್ಯ ಅಂಶಗಳೆಂದರೆ ದೃಶ್ಯ, ಲೇಖಾವೆಗಳಲ್ಲಿ ವಾಸ್ತವತೆ, ಇವುಗಳ ಭಾಷೆ ಯಾವದೇ 'ಸ್ಟಾರ' ನಟನ ಅಭಾವ. ಒಬ್ಬ 'ಹಿರಿಯ'ನೆಂಬ ನಟ ಇತರರ ಕೆಲಸವನ್ನೂ ಕಡೆಗಣಿಸಲು, ಹದಗೆಡಿಸಲು ಅವಕಾಶ ಸಿಗುತ್ತಿದ್ದಿಲ್ಲ. ಅಲ್ಲದೆ ಹಾವ ಭಾವಗಳಲ್ಲಿ ಪ್ರಯತ್ನಪೂರ್ವಕವಾಗಿ ಅತಿ ಅಭಿನಯವಿರದಿರುವದು. ಈ ಅನಗತ್ಯದ Over acting ತಪ್ಪಿಸಿ under acting ಸಾಧಿಸಲು ಯೇಟ್ಸ ಕೆಲಸಲ ನಟ-ನಟಿಯರನ್ನು ದೊಡ್ಡ ಪೀಪಾಯಿಗಳಲ್ಲಿ ನಿಲ್ಲಿಸಿ ನಟಿಸಲು ಹಚ್ಚುತಿದ್ದನಂತೆ! ಇದು ಫ್ರಾನ್ಸಿನಲ್ಲಿ ಹೊಸತಾಗಿ ರೂಪಿಗೆಬಂದ ನಟನಾ ಶೈಲಿ-ಮುಕ್ತರಂಗ (Theatre Libre). ಕೆಲಸಲ ಈ ತಂತ್ರವೂ ಅತಿಯಾಗುತ್ತಿತ್ತು. ಅತಿ ಸಂಕೋಚದ ಕೃತ್ರಿಯತೆ ಉಂಟಾಗುತ್ತಿತ್ತು. ಆದರೆ ಇವರ ಭಾಷಾ ಶುದ್ಧಿ ಮತ್ತು ಆಡುಮಾತಿನ ನೇರಶೈಲಿ ಮುಂದೆ ಇಂಗ್ಲಿಷ ನಾಟಕಗಳಿಗೆಲ್ಲ ಬೆಳವಣಿಗೆಯ ನಿತ್ಯಲಕ್ಷಣವಾಗಿ ಉಳಿಯಿತು.

ಈ ನಾಟಕಗಳ ಪ್ರಯೋಗದಿಂದ ಅನೇಕ ಕಡೆಗೆ ಕ್ಷೋಭೆಗಳೂ ಆದದ್ದುಂಟು. ಜನರ ಧರ್ಮಶ್ರದ್ಧೆಗೆ ಅಥವಾ ರಾಷ್ಟ್ರೀಯ ಭಾವನೆಗೆ ನೋವು ತಟ್ಟಿದ್ದುಂಟು. ಇವಕ್ಕೆ ಕಾರಣ ಯೇಟ್ಸನ ಕಲಾದೃಷ್ಟಿಯ ಪ್ರಾಮಾಣಿಕತೆ ಮತ್ತು ದಾರ್ಶನಿಕತೆ. ಆತ ಕೇವಲ ಪ್ರಯೋಗಪ್ರಿಯನಷ್ಟೇ ಅಲ್ಲ, ನಾಟ್ಯ ಪರಿಣತಿಯನ್ನೂ ಅಪೇಕ್ಷಿಸುತಿದ್ದನು. ಇವು ಅಂದಿನ ರಾಷ್ಟ್ರೀಯ ಮಾಸೆಯಲ್ಲಿ ಕೆಲಸಲ ಪೂರ್ತಿನೀಡಿಸುತಿದ್ದಿಲ್ಲ. ಆಯರ್ಲಂಡಿನ 'ಸಿನ್ ಫೇನ್' (Sinn Fain) ಚಳವಳಿಯ ನಾಯಕ ಆರ್ಥರ್ ಗ್ರಿಫಿಥ್ ಈ ರಂಗದ ಮೇಲೆ ಕೆಂಡಕಾರುತಿದ್ದನು. ಅಲ್ಲಿಯ ಶಾಂತಿಪ್ರಿಯ ಚಳವಳಿಗಾರರೂ ಹಾಗೆಯೇ-ಯೇಟ್ಸನ ಕಾಂಟೆಸ್ ಕೆಥಲೀನ ನಾಟಕದ ವಿರುದ್ಧ ನಿಷೇಧ ಪ್ರದರ್ಶನ ಮಾಡಿದರು. (ಆ ನಾಟಕದಲ್ಲಿ ಜನಹಿತಕಾರಿಯೊಬ್ಬಳು ಮಂದಿಯನ್ನು ಬರಗಾಲದಿಂದ ಉಳಿಸಲು ತನ್ನ ಶೀಲವನ್ನೆ 'ಸೈತಾನ'ನಿಗೆ ಮಾರುತ್ತಾಳೆ. ಒಮ್ಮೆ ರಂಗದ ನಾಯಕ ನಟಿಯೊಬ್ಬಳು ಸಿಂಜನ ನಾಟಕದ ವಸ್ತು. ಹೆಣ್ಣಿಗೇ ಅವಮಾನವೆಂದು ಹೊರಟೆದ್ದು ಹೋದಳು. ಆದರೆ ಐರಿಶ್ ಬಂಡಾಯಗಾರರು ಯೇಟ್ಸನ ರಂಗಲೀಲೆಗಳನ್ನು ಒಪ್ಪುತ್ತಿದ್ದರು. ಅಂಥವರಲ್ಲಿ ಪ್ಯಾಟ್ರಿಕ್ ಪಿಯರ್ಸ ಒಬ್ಬ. ಆತ ಮುಂದೆ ೧೯೧೬ ರ ಬಂಡಾಯದಲ್ಲಿ ಗಲ್ಲಿಗೇರಿಸಲ್ಪಟ್ಟನು.

ಅನೇಕಸಲ ಜನ ರೊಚ್ಚಿಗೆದ್ದು ಯೇಟ್ಸನ ರಂಗಮಂದಿರವನ್ನೇ ಮುಚ್ಚಲು ಹವಣಿಸಿದ್ದುಂಟು ಅಥವಾ ಪತ್ರಿಕಾ ಪ್ರಚಾರದಿಂದ ಬಹಿಷ್ಕಾರ ನಡೆಯಿಸಿದ್ದುಂಟು. Play boy ನಾಟಕ ನಡೆದಾಗ ಒಂದು ಪೋಲಿಸರ ಗುಂಪು ಒಂದುವಾರ ಕಾವಲಿಗೆ ಇಡಬೇಕಾಯಿತು. ಹಾಗೆಯೇ ಒಂದನೆಯ ಮಹಾಯುದ್ಧದ ನಂತರ ಇವರ ಪ್ರದರ್ಶನಗಳ ವಿರುದ್ಧ ಪುಂಡರ ದೊಂಬಿಗಳೇ ಎದ್ದವು. (ನಮ್ಮಲ್ಲಿ ಶ್ರೀರಂಗರ ಪ್ರಕ್ಷೋಭಕಾರಿಯಾದ ನಾಟಕಗಳ ವಿರುದ್ಧವೂ ಇಂಥ ಉಗ್ರ ಪ್ರತಿಭಟನೆ ಪಾಲಿಗೆ ಬಂದಂತಿಲ್ಲ). ಆದರೆ ಮುಂದೆ ಈ ಪರಿಸ್ಥಿತಿಯ ಚಕ್ರವೂ ಸುತ್ತು ತಿರುಗಿ ಯೇಟ್ಸನ ನಾಟಕ ಪ್ರಯೋಗಗಳು ಜನಪ್ರಿಯವಾದವು.

ಯೇಟ್ಸನ ನಾಟಕಗಳಲ್ಲಿ ಎರಡು ವಿಧ. ಒಂದೆರಡು ದೇಶಭಕ್ತಿಪರ. 'ಕೌಂಟೆಸ್ ಕ್ಯಾಥ್ಲೀನ' ಮತ್ತು 'ಕ್ಯಾಥ್ಲೀನ ಇನ್ ಹೌಲಿಹನ್' ಈ ಎರಡನೆಯ ನಾಟಕದಲ್ಲಿ ತಾಯ್ನಾಡಾದ ಆಯರ್ಲೆಂಡನ್ನು ಒಬ್ಬ ಮುದುಕಿಯ ರೂಪದಲ್ಲಿ ಕಾಣಿಸಿದ್ದು, ಆಕೆ ಜನರನ್ನು ಬ್ರಿಟಿಷರ ವಿರುದ್ಧ ರಾಷ್ಟ್ರೀಯ ಹೋರಾಟಕ್ಕಾಗಿ ಹುರಿದುಂಬಿಸುತ್ತಾಳೆ. ಇದು ಆವೇಶ ಪ್ರಭಾವಿಯಾದ ನಾಟಕ. ಆದರೆ ಅದು ಐರಿಶ್ ಪ್ರೇಕ್ಷಕರಿಗೆ ಮಾತ್ರ. ಹೊರಗೆ ಅದು ಕುಸಿಯಿತು. ಯೇಟ್ಸನ ಉಳಿದ ನಾಟಕಗಳು ಆಯರ್ಲಂಡದ ಹಳೆಯ ಆಖ್ಯಾಯಿಕೆ ಹಾಗೂ ನೀತಿಕಥೆಗಳಿಂದ ಆಧರಿತ. ಹೆಚ್ಚಾಗಿ ಗೀತರೂಪಕಗಳು, ಅವನ್ನು ನೋಡುವುದಕ್ಕಿಂತ ಓದುವದು ಹೆಚ್ಚು ಸೊಗಸು.

ಬಹುಶಃ ಯೇಟ್ಸನ ಉತ್ತೇಜನೆಯಿಂದಲೇ ಮಧ್ಯಮ ವಯಸ್ಸಿನ ಲೇಡಿ ಗ್ರೆಗರಿಯೂ ಕಿರುನಾಟಕಗಳನ್ನು ಬರೆಯತೊಡಗಿದಳು. ಇವಳ ಪೂರ್ತಿ ಹೆಸರು ಅಗಸ್ಟಾಪರ್ಸೀ ಗ್ರೆಗರಿ; ಕಾಲ ೧೮೫೨–೧೯೩೨. ಇವಳು ಧನಿಕಳು. ಮನೆ ಕೂಲ (Coole) ದಲ್ಲಿ. ಕವಿಗಳ ರಸಿಕರ ಗೂಡು. ರಂಗ ಪ್ರಯೋಗಗಳ ಕುರಿತಾಗಿ ಯೇಟ್ಸ ಅವರೊಂದಿಗೆ ಕೂಡಿಕೊಂಡನು. ಲೇಡಿ ಗ್ರೆಗರಿಯ ಪ್ರವೃತ್ತಿ ಹಾಸ್ಯಮಯ ಕಿರುನಾಟಕಗಳ ರಚನೆಯತ್ತ. ಆದರೆ ಯೇಟ್ಸನಿಗೆ ಅಂಥ ವಿನೋದ ಪ್ರವೃತ್ತಿ ಕಡಿಮೆ. ಅವನ ಒಲವು ಕಾವ್ಯಮಯ ಕೃತಿರಚನೆಯಲ್ಲಿ ಹೆಚ್ಚು, ಇರಲಿ. ಇದಕ್ಕೂ ಹೆಚ್ಚಿನ ವಿಸ್ತರಣೆ ಇಲ್ಲಿ ಅಗತ್ಯವಿಲ್ಲ.

ಆಯರ್ಲಂಡಿನ ಸ್ವಾತಂತ್ರ್ಯ ಆಂದೋಲನವು ಮಾತಿನಿಂದ ಕೃತಿಗೆ, ಭಯೋತ್ಪಾದಕ ಚಟುವಟಿಕೆಗೆ ಇಳಿಯುವ ಜಾಯಮಾನಕ್ಕೆ ಡಬ್ಲ್ಯು.ಬಿ. ಯೇಟ್ಸ. ತನ್ನ ಮಾನಸಿಕ ಪ್ರೌಢಪ್ರಗಲ್ಭತೆಗೆ ತಲುಪಿದ್ದನು. ಅವನ ಮಧ್ಯಮ ವಯಸ್ಸಿನಲ್ಲಿ ಅಂಥ ಐತಿಹಾಸಿಕ

ಜೀವಾಳದ ಘಟನೆಗಳು ದೇಶದಲ್ಲಿ ಒದಗಿರದಿದ್ದರೆ, ಅವನ ಮುಂದಿನ ಕೃತಿಗಳಲ್ಲಿ ಅಷ್ಟು ಪ್ರೌಢಿಮೆ ಮತ್ತು ಅರ್ಥಪೂರ್ಣ ಸತ್ವಬರುತ್ತಿರಲಿಲ್ಲ. ಅನಂತರದ ಅವನ ಹಲವಾರು ಅಂದಿನ (ಹಿಂದಿನ) ಕ್ರಾಂತಿಕಾರಿ ಅನುಭವಗಳ ಸತ್ವವನ್ನು ಹೀರಿ ಕೊಂಡಿವೆ, Easter ೧೯೧೬, ೧೯೧೯, ಯಾದವೀ ಕಲಹ (Civil war) ಕಾಲದ ಚಿಂತನೆಗಳು. ಇವು ಅಂಥವುಗಳಲ್ಲಿ ಉತ್ಕೃಷ್ಟ. ಹಾಗೆಯೇ 'ಅಂಡರ್‌ಬೆನ್ ಬಲ್ಬೆನ್' ಈ ಹಿರಿದಾದ ಚರಮಗೀತ (Epitaph) ದಲ್ಲಿ. ●

# ಟಿ. ಎಸ್. ಇಲಿಯಟ್

ಇಂಗ್ಲಿಷ ಕಾವ್ಯದ ಬೌದ್ಧಿಕ ಅಥವಾ ವೈಚಾರಿಕ ಗೌರವ-ಮಹತ್ವಗಳನ್ನು ಪುನಃ ಸ್ಥಾಪಿಸಿದ ಹಿರಿಯ ಕವಿ ಟಿ. ಎಸ್. ಇಲಿಯಟ್ (ಥಾಮಸ ಸ್ಟರ್ನ್ಸ ಇಲಿಯಟ್-೧೮೮೮-೧೯೬೫) ಆಧುನಿಕ ಆಂಗ್ಲ ಕಾವ್ಯದ ಪ್ರಮಾಣಪುರುಷ, ಒಂದು ಪಂಥದ ಪ್ರತಿಷ್ಠಾಪನೆಯ ಆಚಾರ್ಯ,-ವಿಶೇಷತಃ ಕವಿಯಾಗಿ ವಿಮರ್ಶಕನಾಗಿ, ಹಾಗೆಯೇ ನಾಟಕಕಾರನಾಗಿ. ಕಳೆದ ಎರಡು ಮಹಾಯುದ್ಧಗಳ ನಡುವಿನ ಜಾಯಮಾನದಲ್ಲಿ, ಕಾವ್ಯವನ್ನು ಗಂಭೀರವಾಗಿ ಗಮನಿಸುವವರೇ ಕಡಿಮೆಯಾದ ಕಾಲಮಾನದಲ್ಲಿ ಇಲಿಯಟ್ ಒಬ್ಬ ವಿಭೂತಿಯಾಗಿ ಮೂಡಿದನು. ಆತ ಜನಾಂಗದ ಮನಸ್ಸಿನ ಮೇಲ್ಪಾತಳಿ ಮತ್ತು ಆಳದ ಅಭಿವ್ಯಕ್ತಿಯನ್ನು ಕಾವ್ಯದಲ್ಲಿ ಸಮರ್ಥವಾಗಿ ಸಾರ್ಥಕತೆಯಿಂದ ಮಾಡುವ ಹೊಸಮಾಧ್ಯಮವನ್ನೋ ಸಾಧನವನ್ನೋ ಅಸಂದಿಗ್ಧವಾಗಿ ಪ್ರಬುದ್ಧವಾಗಿ ರೂಪಿಸಿದನು.

ಆಧುನಿಕ ಶಿಷ್ಟವೂ ವಿಶಿಷ್ಟವೂ ಆದ ಮನೋಲೋಕದ, ಅಂತರಂಗದ ಪರಿಸರವನ್ನು ಇತಿಹಾಸದಲ್ಲಿ ಅದರ ಸ್ಥಾನವನ್ನೂ ಇಲಿಯಟ್ ಗುರುತಿಸಿದನು,-ಅದೂ, ಉತ್ಕಟವಾಗಿ, ತಪ್ಪದೇ ತೀವ್ರವಾಗಿ. ಅದರೊಂದಿಗೆ ತನ್ನ ಮನಸ್ಸಿನ, ಆತ್ಮೀಯವಾದ ಪ್ರತಿಕ್ರಿಯೆಗಳನ್ನೂ ತಟಸ್ಥವಾಗಿ ಅಷ್ಟೇ ತಾತ್ಪರ್ಯದಿಂದ ರೂಪಿಸಿದನು. ತನ್ನ ಬಹುಭಾಷಾ ಪಾಂಡಿತ್ಯದಿಂದ, ಸಂಸ್ಕೃತಿ ಪರಂಪರೆಯ ಪರಿಶೀಲನೆಯ ಹಾಗೂ ಅಭಿಮಾನದ ಆಧುನಿಕ ಪ್ರಜ್ಞೆಯಿಂದ ಟಿ. ಎಸ್. ಇಲಿಯಟ್‌ನು, ಮಿಕ್ಕ ಯಾವುದೇ ಆಧುನಿಕ ಲೇಖಕರಿಗಿಂತ ಮಿಗಿಲಾಗಿ, ಮಾರ್ಮಿಕವಾಗಿ ನಮ್ಮ ವೈಚಾರಿಕ ಚೌಕಟ್ಟಿಗೆ ಸಂಪನ್ನ ವಿವರಗಳನ್ನು, ರೂಪರೇಖೆಗಳನ್ನು ತುಂಬಿದನು. ಇಂದು ಇಂಗ್ಲಿಷ ಕಾವ್ಯವನ್ನು ಈ ಚೌಕಟ್ಟಿನಲ್ಲಿ, ಹಿಂದಿನದೂ ಇಂದಿನದೂ ಕೂಡಿಯೇ ನಾವು ಓದುತ್ತೇವೆ, ಅರ್ಥೈಸುತ್ತೇವೆ. ಇದೊಂದು ನಿರ್ಣಾಯಕವಾದ ನಿಶ್ಚಿತ ಮತ್ತು ನಿಚ್ಚಳವಾದ ಸಾಧನೆ.

ಇಷ್ಟಾಗಿಯೂ ಅವನ ಈ ಸಾಹಿತ್ಯಿಕ ಸಿದ್ಧಿಯು ಅನ್ಯದ ಅಗ್ಗಳಿಕೆಯಲ್ಲ. ಇಲಿಯಟನಿಗೆ ಆಗದವರೂ ಹಾಗೆ ಭಾವಿಸುವುದಿಲ್ಲ. ಹಾಗಾದರೆ ಈ ಮಹಾಕವಿಯು ಇದಕ್ಕಾಗಿ ತೆತ್ತ ಬೆಲೆಯೇನು ? ಮೇಲೆ ಹೇಳಿದಂತೆ-ಇಲಿಯಟ್ ಕಾವ್ಯಜನಸಾಮಾನ್ಯರ ಕಾವ್ಯವೆನ್ನುವಂತಿಲ್ಲ. 'ಸುಲಿದ ಬಾಳೆಯ ಹಣ್ಣಿನಂದ'ವೇ ಅಲ್ಲ. ತಿಳಿದೂ ತಿಳಿದಂತೆ ಅನಿಸುವದಿಲ್ಲ ! 'ಕುರಿತೋದದೆಯುಂ' ಅವರ ಕಾವ್ಯ ಪ್ರಯೋಗ ಪರಿಣತ ಮತಿಗಳಿಗೂ ಸಹಸಾಹೊಳೆಯುವಂತಿಲ್ಲ. ಅದು ಬಹುಶಃ ಪ್ರಗಲ್ಭ,

ಪ್ರೌಢ ಪರಜ್ಞಾನಿಗಳಿಗೆ ಎಟಕುವ ಹಣ್ಣು. ಬಹುದೊಡ್ಡ ಪಾಲಿನ ಸಾಮಾನ್ಯ ಭಾವನೆಯನ್ನು ಅನುಭವವನ್ನೂ ಅಲಕ್ಷಿಸಿ ಹತ್ತಿಕ್ಕಿ ಇಲ್ಲವೆ ಒತ್ತಿಟ್ಟು ಬರೆದ ಕೃತಿ ಇಲಿಯಟನ ಕಾವ್ಯ. ಆತ ಸಾಮಾನ್ಯ ಬದುಕನ್ನೇ ಬಾಳಿದವನು–ಶಾಲಾ ಮೇಷ್ಟ್ರು ಆಗಿ, ಲಂಡನ್ನಿನ ಒಂದು ಬ್ಯಾಂಕಿನ ಕಾರಕೂನನಾಗಿ, ಒಂದು ಸುಪ್ರಸಿದ್ಧ ಪ್ರಕಾಶನ ಸಂಸ್ಥೆಯ ಸಲಹೆಗಾರನಾಗಿ. ಆದರೆ ಇದು ಅವನ ಮನಸ್ಸೆಂಬ ಬರ್ಫದ ಬಂಡೆಯು ತೋರುವ ತುದಿಯ ಅಂಗುಲಮಾತ್ರ. ಇದರ ಆಚೆಗೆ, ತಳದಲ್ಲಿ ಒಂದು ಪ್ರಚಂಡ ಬುದ್ಧಿಮತ್ತೆ, ಪ್ರತಿಭೆಯ ಪರ್ವತವೇ ಅಡಗಿತ್ತು.

ಕವಿ ಇಲಿಯಟನ ಜೀವನಾವಧಿ ೧೮೮೮ ರಿಂದ ೧೯೬೫ ರ ತನಕ. ಇಂಗ್ಲಂಡಿನಲ್ಲಿ ಉಳಿದು ಬೆಳೆದಿದ್ದರೂ ಈತ ಹುಟ್ಟಿದ್ದು ಅ ಮೇ ರಿ ಕೆ ಯ ಮಸೂರಿಯಲ್ಲಿ. ಹುಟ್ಟಿದೂರು ಸೆಂಟಲೂಯಿ. ಇದು ಮಿಸಿಸಿಪಿ ನದಿಯ ದಂಡೆ. ಈ ಮಹಾನದಿಯು ಅಮೇರಿಕೆಯ ಸಾಹಿತ್ಯದಲ್ಲಿಯೂ ಹಲವೆಡೆಗೆ ಹರಿದಿದೆ. ಇಲಿಯಟನ ಮೂಲ ಇನ್ನೂ ಹಳೆಯದು. ಅಮೇರಿಕೆಯ ಮೂಲ ವಸಾಹತುಗಾರರ ಕಟುಕ್ರೈಸ್ತ 'ಪ್ಯೂರಿಟನ್' ಕುಲಗಳಿಂದ ಅವನ ತಾಯ್ತಂದೆ ಬಂದವರು. ಅವನ ತಾತ ಎಂಡ್ರ್ಯೂ ಇಲಿಯಟ್ ೧೬೩೦ ರಲ್ಲಿಯೇ ಸಮರ್‌ಸೆಟ್ ಶಾಯರ್ ಈಸ್ಟ ಕೋಕ ಹಳ್ಳಿಯಿಂದ ಮೆಸಾಚುಸೆಟ್ಸ ನಗರಕ್ಕೆ ಬಂದು ಅಲ್ಲಿ ನೆಲೆಸಿದ್ದನು. (ಈ 'ಈಸ್ಟ ಕೋಕ' ಊರಿನ ಹೆಸರು ಟಿ. ಎಸ್. ಇಲಿಯಟ್‌ನ 'ಚತುಷ್ಕ ಚೌಪದಿ' (Four Quartrets) ಗಳಲ್ಲಿ ಒಂದು ಕವನದ ಹೆಸರಾಗಿ ಬಂದಿದೆ). ಥಾಮಸ ಇಲಿಯಟನ ತಾಯಿ ಐಸೆಕ್ ಸ್ಟರ್ನ್ಸ ಎಂಬವನ ಕುಲದವಳು. ಈ ಸ್ಟರ್ನ್ಸ ೧೯೩೦ ರಲ್ಲಿ ಅಮೇರಿಕೆಗೆ ವಲಸೆ ಬಂದು ನ್ಯೂಇಂಗ್ಲೆಂಡ ವಸಾಹತು ಮಾಡಿದವರಲ್ಲಿ ಒಬ್ಬ. ಆದರೆ ತಮಾಷೆಯ ಮಾತೆಂದರೆ ಟಿ. ಎಸ್. ಇಲಿಯಟ್ ಮುಂದೆ ಈ ಮಡಿವಂತ ಪ್ಯೂರಿಟನ್ ವಂಶಜನಾಗಿ ಉಳಿಯಲಿಲ್ಲ. ೧೯೨೭ ರಲ್ಲಿ ಆಂಗ್ಲ ಕ್ಯಾಥೊಲಿಕ ಪಂಥಕ್ಕೆ ಮತಾಂತರ ಹೊಂದಿದನು. ತಾನು ರಾಜಕೀಯದಲ್ಲಿ ರಾಜನಿಷ್ಠ (Aristrocratic) ಮತ್ತು ಕ್ರೈಸ್ತಮತದಲ್ಲಿ ಕ್ಯಾಥೊಲಿಕ್ ಎಂದು ಈ ಕವಿ ಸಾರಿದನು. ಆದಿಯಲ್ಲಿ ವಸಾಹತುಗಾರರಾಗಿ ವಲಸೆ ಬಂದ ಅನೇಕ ಪ್ಯೂರಿಟನ್ ಜನಕ್ಕೆ ೨೦ ನೆಯ ಶತಮಾನದಲ್ಲಿ ಬೋಸ್ಟನ್ ನಗರವು ಅಂದು ಅಮೇರಿಕೆಯಲ್ಲಿಯೇ ಅತಿ ಹೆಚ್ಚು ರೋಮನ್ ಕ್ಯಾಥೊಲಿಕ್ ನಾ ಗ ರಿ ಕ ರ ದಾ ಗಿ ತ್ತು. ಇದು ಆ ಮೂಲದ ವಸಾಹತುಗಾರ 'ಯಾತ್ರಿಕ'ರಿಗೆ ಅಚ್ಚರಿಯ ಸಂಗತಿಯೇ !

ಹೇಗೋ ಈ ಕವಿಗೆ ಪ್ಯೂರಿಟನ್ ಮತ್ತು ಮಾನವತಾವಾದಿ ಮನಸ್ಸಿನ ಕುರಿತೇ ತಿರಸ್ಕಾರ ಬೆಳೆಯಿತು. ಇದು ಇಲಿಯಟನ ಆರಂಭದ ಕಾವ್ಯದಲ್ಲಿ ವ್ಯಂಗ್ಯವಾಗಿ

ಮೂಡಿದೆ. ಆದಾಗ್ಯೂ ನೇರವಾಗಿಯೇ ವ್ಯಕ್ತವಾಗಿದೆ. (ಇದು ಅವನ ಆನುವಂಶಿಕ ನೀತಿ-ಸಂಸ್ಕಾರಕ್ಕೆ ಸಹಜ ಪ್ರತಿಕ್ರಿಯೆಯೇ ಎಂಬುದು ಒಂದು ಆಲೋಚಿಸ ಬಹುದಾದ ಅಂಶ. ನಮ್ಮಲ್ಲಿ ಕೋಟದ ಧಾರ್ಮಿಕ ಗ್ರಂಥಕರ್ತರಾದ ಎಂಜಿನಿಯರ್ ಕಾರಂತರ ಸೋದರ ಶಿವರಾಮ ಕಾರಂತರು ಕೇವಲ ವಿಚಾರವಾದಿಗಳು-'ಕೇವಲ ಮನುಷ್ಯರು' ಆದಂತೆ !) ಇಲಿಯಟ್ ಕವಿಯು ಮುಂದೆಲ್ಲ ಪ್ಯೂರಿಟನ ವಿಚಾರ ಹಾಗೂ ಉದಾರ (Liberal) ಮತವಾದದ ವಿರುದ್ಧನಾದರೂ ಮೂರು ತಲೆ ಮಾರುಗಳಿಂದಲೂ ಬಳುವಳಿಯಾಗಿ ಅದನ್ನೆ ಪಡೆದು ಬಂದ ಮನೆಯಲ್ಲಿಯೇ ಬೆಳೆದು ಬಂದ ಕೂಸು ಈ ಪ್ರಾಜ್ಞ ಕವಿ !

ಇಲಿಯಟ್‌ನ ಶಿಕ್ಷಣವೂ ಸಮ್ಮಿಶ್ರ ಉದಾರ ಸ್ವರೂಪದ್ದಾಯಿತು,-ಹಾರ್ವರ್ಡ, ಸೊರ ಬೋರ್ನ (ಪ್ಯಾರಿಸ ವಿಶ್ವವಿದ್ಯಾಪೀಠ) ಮತ್ತು ಆಕ್ಸಫೋರ್ಡ (ಇಂಗ್ಲಂಡ) ದಲ್ಲಿ. ೧೯೧೪ ರಲ್ಲಿ ತನ್ನ ೨೬ ನೆಯ ವರ್ಷಕ್ಕೆ ಇಲಿಯಟ್ ಇಂಗ್ಲಂಡಿನಲ್ಲಿ ನೆಲೆಸಿದನು. ಮೊದಲು ಶಾಲಾಶಿಕ್ಷಕನಾದನು. ಆಮೇಲೆ ೮ ವರ್ಷ ಬ್ಯಾಂಕಿನಲ್ಲಿ ಗುಮಾಸ್ತನಾದನು-ಲಂಡನ್ನಿನಲ್ಲಿ. ಈ ವಿಚಿತ್ರ ನೋಡಿರಿ. ಜೌಸೆಫ ಕಾನ್ರಾಡ ಪೋಲಂಡದ ನಾವಿಕ, ಕಾರ್ಮಿಕ. ಆದರೆ ಆತ ಲಂಡನ್ನಿನ ಬಂದರದ ವಾಣಿಜ್ಯ ನಾವೆಗಳ ಜೀವಂತ ನೈಜತೆಯ ಚಿತ್ರಣ ನೀಡಿದ್ದಾನೆ. ಹಾಗೆಯೇ ಈ ಅಮೇರಿಕೆಯ ಇಲಿಯಟ್ ಲಂಡನ್ನಿನ ಸೇತುವೆ ಮತ್ತು ಥೇಮ್ಸನದಿಯ ಚಿತ್ರಣಕ್ಕೆ ಹೇಳಿ ಮಾಡಿಸಿದಂತೆ ಕವಿಯಾಗಿ ಬಂದನು.

ಇಲಿಯಟ್‌ನ ಮೊದಲ ಸಂಕಲನ 'ಪ್ರೂಫ್ರೂಕ್ ಮತ್ತು ಇತರ ಗಮನಗಳು' ('Pru frock and other observations') ೧೯೧೭ ರಲ್ಲಿ ಪ್ರಕಟವಾಯಿತು. ೧೯೧೯ ರಲ್ಲಿ 'ಕವನಗಳು' [Poems] ಹೊರಬಂತು. ೧೯೨೦ ರಲ್ಲಿ ಇವೆರಡೂ ಸಂಕಲನಗಳನ್ನೂ ಇನ್ನಿತರ ಕವಿತೆಗಳನ್ನೂ ಒಳಗೊಂಡ ದೊಡ್ಡದೊಡ್ಡ ಸಂಕಲನ ಪ್ರಸಿದ್ಧವಾಯಿತು. ಇದರ ಹೊರತು ಅರಾವೊಸ್‌ಪ್ರೆಕ್ (Ara Vosprac) ಇದರಲ್ಲಿ ಅವನ ಗಿರೊನ್‌ಶನ್ (Gerontion) ಕಾವ್ಯವು ಸೇರಿತ್ತು. ಈ ಕವನ ಅವನ ಆವರೆಗಿನ ಕೃತಿಗಳಲ್ಲಿಯೇ ಹೆಚ್ಚಿನ ಪ್ರಭಾವದ್ದಾಗಿತ್ತು. ಇದೇ ಸಮಯ ಇಲಿಯಟ್ ಇಗೊಯಿಸ್ಟ (Egoist) ಪತ್ರಿಕೆಯ ಸಹಸಂಪಾದಕನೂ ಆಗಿದ್ದನು (೧೯೧೭-೧೯). ಆ ಪತ್ರಿಕೆಯಲ್ಲಿ ಅವನ ಪ್ರತಿಭೆಯು ಇನ್ನೊಂದು ಮುಖಬೆಳಗಿತು. ಅದು ಅವನ ಉತ್ತಮ ವಿಮರ್ಶಾ-ಲೇಖನ. ಅವುಗಳಲ್ಲಿ 'ಸಂಪ್ರದಾಯ ಮತ್ತು ವೈಯಕ್ತಿಕ ಪ್ರತಿಭೆ' ( Tradition and Individual Talent ) ಎಂಬ ಪ್ರಬಂಧ ತುಂಬಾ ವಿಖ್ಯಾತವಾಯಿತು.

೧೯೨೨ ರಲ್ಲಿ ಆತ 'ಕ್ರೈಟೇರಿಯನ್' (Critarian) ನಿಯತಕಾಲಿಕವನ್ನೂ ಆರಂಭಿಸಿದನು. ಇದರ ಮೊದಲ ಸಂಚಿಕೆಯಲ್ಲೇ ಅವನ ಜಗತ್ಪ್ರಸಿದ್ಧ ಕವನ 'ಪಡಭೂಮಿ' [Waste Land] ಪ್ರಕಟವಾಯಿತು. ಅದನ್ನು ಆತ ಇನ್ನೊಬ್ಬ ಸಮಕಾಲೀನ ಖ್ಯಾತ ಕವಿ ಎಝ್ರಾ ಪೌಂಡನಿಗೆ ಅರ್ಪಿಸಿದ್ದನು. (ಈ ಪೌಂಡ ಕವಿಯೇ ಈ ಕಾವ್ಯವನ್ನು ಸಂಪಾದಿಸಿ ಮರುವರ್ಷ ಬಿಡಿಯಾಗಿ ಪ್ರಕಟಿಸಲು ನೆರವಾದನು.) ೧೯೨೫ ರಲ್ಲಿ 'ಕವನಗಳು' (೧೯೦೯ ರಿಂದ ೧೯೨೫ ರ ತನಕ.) ಪ್ರಕಾಶನಗೊಂಡಿತು. ಇದರಲ್ಲಿ ಅದುವರೆಗಿನ ಅವನ ಎಲ್ಲ ಕವನಗಳೂ, ಜತೆಗೆ, 'ಪೊಳ್ಳುಮಂದಿ' [The Hollow Men] ಎಂಬ ಹೊಸ ಕವನವೂ ಸೇರಿದ್ದವು. ೧೯೨೨ ರಲ್ಲಿ 'ಕ್ರೈಟೇರಿಯನ್' ಸಂಚಿಕೆ 'ವೇಸ್ಟ ಲ್ಯಾಂಡ' ಪ್ರಕಟಿಸಿದಾಗಲೇ ಆ ದೀರ್ಘಕವನ ಅಮೇರಿಕೆಯಲ್ಲಿ ನ್ಯೂಯಾರ್ಕಿನ ಡೈಲ [Dial] ಪತ್ರಿಕೆಯಲ್ಲಿಯೂ ಅದು ಪ್ರಕಟಿತವಾಯಿತು.

ಇಲ್ಲಿಗೆ ಟಿ. ಎಸ್. ಇಲಿಯಟ್‌ನ ಕಾವ್ಯ ಚರಿತ್ರೆಯ ಪ್ರಥಮಪರ್ವ ಮುಗಿಯುತ್ತದೆ. ಸಾಮಾನ್ಯ ಓದುಗ ಸಾರ್ವಜನಿಕರ ಮೇಲೆ ಈ ಕವಿಯ ಪ್ರಥಮ ಪ್ರಭಾವದ ಕಾಂಡವೂ ಇದರೊಡನೆ ಹೊಂದಿಕೆ ಆಗುತ್ತದೆ. ಇಲಿಯಟ್ ೧೯೧೦ ಕ್ಕೂ ಹಿಂದೆಯೇ ಕವಿತೆ ಬರೆಯುತ್ತಿದ್ದನು. ಆದರೆ ೧೯೨೨ರ ಮೊದಲು ಅವನು ಕಾವ್ಯವನ್ನು ಓದುವವರ ಸಂಖ್ಯೆ ಪರಿಮಿತವೇ ಆಗಿತ್ತು. ಆದರೆ ಎರಡು ಮಹಾಯುದ್ಧಗಳ ಮಧ್ಯಂತರದಲ್ಲಿ ಪುಟಗೊಂಡು ಬೆಳೆದ ಈ ಆಧುನಿಕ ಅಥವಾ 'ನವ್ಯ' ಕವನವೆಂಬ ಸಾಹಿತ್ಯಿಕ ಕ್ರಾಂತಿ ಆಮೇಲೆ ಭದ್ರವಾಗಿ ಪ್ರತಿಷ್ಠೆ ಪಡೆಯಿತು,- ಹೊಸಜನಾಂಗದ ಮೆಚ್ಚಿಗೆಯಲ್ಲಿ.

ಸ್ಥೂಲವಾಗಿ ಒಟ್ಟಿನಲ್ಲಿ ಹೇಳುವದೆಂದರೆ, ಇದಕ್ಕೂ ಹಿಂದಿನ ಇಂಗ್ಲೀಷ ಕಾವ್ಯ- ಜಾರ್ಜಿಯನ್ ಕಾವ್ಯದ ಸಾಮಾನ್ಯ ಲಕ್ಷಣ : ಗ್ರಾಮೀಣ ಬದುಕು, ಗ್ರಾಮೀಣ ಮಾತುಗಳು, ವಸಂತಾಗಮನ, ನಿಸರ್ಗಪರಿಸರ, ತೆರೆದ ದಾರಿಗಳು,-ಅವು ಸಂಜೆ ಗಪ್ಪಿನಲ್ಲಿ. ಇಂಥ ನೋಟಗಳ ಇಲ್ಲಿಯ ನಡಾವಳಿಗಳ ಬಗೆಗೆ ಹಳಿವಂಡ, ಹಾದಿ ಮೂಲೆಗಳ ಖಾನಾವಳಿ-ಅಂಗಡಿ, ಹಳಿಯ ಗುಡಿ, ಬಣವೆ, ಕುರಿಹಿಂಡು ಮೇಯುವ ಹುಲ್ಲುಗಾವಲು, ಹಿಮಪಾತ, ಜಲಪಾತದ ಗಿರಣಿ, ಪವನಚಕ್ಕಿ, ಕಾಮನ ಬಿಲ್ಲು ಇತ್ಯಾದಿಗಳಲ್ಲಿ ರಮ್ಯತೆ ಕಾಣುವ ತವಕ ಮುಂತಾದವು. ಇದಕ್ಕೆ ಪ್ರತಿಯಾಗಿ ಈ ನವಕಾವ್ಯದ ರೀತಿಯಲ್ಲಿ ಆಸಕ್ತಿಯ ಒತ್ತು ಸಂಕೀರ್ಣಬದುಕಿನ ಸಮ್ಮಿಶ್ರ ಸಮಾಗಮದಲ್ಲಿ. ಶಹರದ ಬದುಕು, ಆಫೀಸು, ರಹದಾರಿ, ಮದ್ಯದಂಗಡಿ ಮುಂತಾದವು ವರ್ಣನೆಗೆ ಆಯುವ ಸಂದರ್ಭಗಳು.

ಇಲಿಯಟನ ಆರಂಭದ ಕಾವ್ಯದಲ್ಲಿ ಅವನ ಫ್ರೆಂಚ ಕಾವ್ಯಾವಲೋಕದ ನಳಲು ಇತ್ತು. ಫ್ರಾನ್ಸದ ಪ್ರತೀಕಪ್ರಧಾನ (Symbolised) ಕವಿಗಳ ಪ್ರಭಾವವಿತ್ತು. ಅಲ್ಲದೆ ಇಂಗ್ಲಂಡದ ಎಲಿಝಾಬೆತ್‌ಯುಗದ ನಾಟಕಕಾರರ ಹಾಗೂ ಅಂದಿನ ತಾತ್ವಿಕ-(Metaphysical) ಕವಿಗಳ ಕುರಿತು ಆಳವಾದ ಪ್ರಸಂಗದ, ೧೭ ನೆಯ ಶತಮಾನದ ವೈಚಾರಿಕ ವಾಙ್ಮಯದ ವರ್ಚಸ್ಸು ಇತ್ತು. ಈ ಛಾಯೆ ಕೊನೆಯ ವರೆಗೂ ಅವನನ್ನು ಬಿಟ್ಟು ಹೋಗಲಿಲ್ಲ, ಇರಲಿ.

ಟಿ. ಎಸ್. ಇಲಿಯಟ್‌ನ ಕಾವ್ಯಚರಿತ್ರೆಯ ಎರಡನೆಯ ಪರ್ವವು ಅವನ ಧಾರ್ಮಿಕ ಮತಾಂತರದ ಕಾಲದೊಂದಿಗೆ ಆರಂಭವಾಯಿತು. ಈ ಮತಾಂತರವೆಂದರೆ ತನ್ನ ಪರಿವಾರದ ಪ್ಯೂರಿಟನ್ ಪಂಥದಿಂದ ಹೊರಬಿದ್ದು ಇಂಗ್ಲಂಡದ ವರಾದರಿಯ ಕ್ಯಾಥೊಲಿಕ್ ಪಂಥಕ್ಕೆ ಆತ ತನ್ನ ಶ್ರದ್ಧೆಯನ್ನು ಬದಲಿಸಿದ್ದು. ಅಂದಿನಿಂದ ಅವನ ಕಾವ್ಯದಲ್ಲಿ ಶೇಕ್ಸಪೀಯರ, ದಾಂಟೆ ಮುಂತಾದವರೊಂದಿಗೆ ಅಥವಾ ಅವರಿಗಿಂತಲೂ ಹೆಚ್ಚಾಗಿ ಬೈಬಲ ಮತ್ತು ತತ್ಸಮ ಕ್ರೈಸ್ತಧರ್ಮಗ್ರಂಥಗಳಲ್ಲಿಯೂ ಉಲ್ಲೇಖ ಉದಾಹರಣೆಗಳು ಸ್ಫುಟವಾಗಿ ಕಾಣಿಸಿಕೊಳ್ಳಹತ್ತಿದವು.

ಇನ್ನು ಇಂಥ ಧಾರ್ಮಿಕ ಅಥವಾ ಆತ್ಮಿಕ ಉಲ್ಲೇಖನಗಳಲ್ಲಿ ಇಲಿಯಟ್‌ಸಿಗೆ ವಿಶೇಷವಾದ ಆಸಕ್ತಿ ಈ ಮತಾಂತರಕ್ಕೂ ಹಿಂಡಿನಿಂದಲೂ ಇತ್ತು. ಅದು ಈಗ ಬಲಿಯುತ್ತ ಬಂತು. ಮೊದಮೊದಲು ಅದು ಹೆಚ್ಚಾಗಿ ಮತೀಯವೆನ್ನುವುದಕ್ಕಿಂತ ಮಾನವೀಯ ಭಾವನೆಯ ಅಂಶವಾಗಿ ಬರುತಿತ್ತು. ಕ್ರೈಸ್ತ ಧರ್ಮದಲ್ಲಿ ಅವನ ಸ್ವಾರಸ್ಯ ತೀವ್ರವಾಗಿಯೇ ಇತ್ತು. ಅವನ 'ಗಿರೊನ್‌ಶನ್' ಕವನದಿಂದಲ್ಲಿ ಅದು ಮೂಡಿ ಬಂದಿದೆ. ಆದರೆ ಈ ಭಾವವು ಧರ್ಮಕಾಂಡಕ್ಕೆ, ಕ್ರೈಸ್ತದೈವೀಕರಣಕ್ಕೆ, ಹೊರತಾಗಿಯೇ ಸಾಮಾನ್ಯವಾಗಿತ್ತು. ಉದಾಹರಣೆಗೆ ಅವನ 'ಪಡಭೂಮಿ' [Waste Land] ಕಾವ್ಯದ ಕೊನೆಯ ಅನುಗ್ರಹವಚನ,-ಶಾಂತಿಪಾಠ-ಹಿಂದುವೇ ಆಗಿದೆ. ಹಾಗೆಯೇ ಆರಂಭದಲ್ಲಿ ಬರುವ 'ದತ್ತ, ದಯದ್ವಂ, ದಮ್ಯತ'-ಎಂಬ ಉಪನಿಷತ್ ವಚನ. ಮುಂದೆ 'ಪೊಳ್ಳುಮಂದಿ' [The Hollow Men] ಮತ್ತು ಅದಕ್ಕೂ ಹೆಚ್ಚಾಗಿ ಎಷ್ ಬುಧವಾರ [Ash Wednesday] ಇಂಥ ಕ್ರೈಸ್ತ ಪಂಥೀಯ ನಿದರ್ಶನಗಳು ಇನ್ನೂ ಸ್ಫುಟವಾದವು. ಅದೇ ರೀತಿ ಅವನ ಕಾವ್ಯರೂಪಕಗಳಾದ 'ಶಿಲೆ' [The Rock] ಮತ್ತು 'ಪ್ರಾರ್ಥನಾ ಮಂದಿರದಲ್ಲಿ ವಧೆ' [The Murder in the Cathedral] ಈ ಪ್ರವೃತ್ತಿಯ ಪ್ರಬಲ ನಿವರ್ಶನಗಳಾದವು. Ash Wednesday ಕವನದಿಂದ ಇಲಿಯಟನ ಕಾವ್ಯದಲ್ಲಿ ಬೈಬಲ ಮತ್ತು ಪ್ರಾರ್ಥನಾಪುಸ್ತಕದಿಂದ ಆಯ್ದ ವಚನಗಳ ವಿನಿಯೋಗ

ಬಲಿಯುತ್ತ ಅದೊಂದು ಯಾಂತ್ರಿಕ ತಂತ್ರವೇ ಆಯಿತು. ಅವನ ಅನೇಕ ಅನುಯಾಯಿಗಳೂ ಅದನ್ನು ಅನುಕರಿಸಿದರು. (ಇದನ್ನು ಬರೆಯುವಾಗ ನಮಗೆ ನಮ್ಮ ಬೇಂದ್ರೆ ತಮ್ಮ ಕಾವ್ಯ ಚರಿತೆಯ ಉತ್ತರಾರ್ಧದಲ್ಲಿ ಹೆಚ್ಚುಹೆಚ್ಚು ಸಾಮಛಂದಸ್ಸೆಂದು ವೇದಮಂತ್ರಗಳ ದ್ರುತ-ವಿಲಂಬಿತ ಲಯಗಳನ್ನು ಕನ್ನಡಕ್ಕೆ ಇಳಿಸುವ ಮೋಹಕ್ಕೆ ಮಣಿದದ್ದು ನೆನಪಾಗುತ್ತದೆ! ಅದೇ ರೀತಿ ನಮ್ಮ ನವ್ಯಯುಗದ ಮೂಲಕ ಮಹಾಶಯರೇ ಆದ ಕವಿವರ್ಯ ಅಡಿಗರೂ ತನ್ನ ಕಾವ್ಯದ ಕನ್ನಡವು ಇಲಿಯಟ್‌ನ ವಾಗ್ದೋರಣೆಯಂತೆಯೇ Liturgical Prose ಎಂದು ನನಗೆ ಹೇಳಿದ್ದೂ ಇಲ್ಲಿ ನೆನಪಾಗುತ್ತದೆ. ಅಂದರೆ ತಮ್ಮ ವೈಚಾರಿಕ ಪ್ರೌಢಿಮೆಯಲ್ಲಿ ನಿರಾಕರಿಸಿದ ಎಳೆವರೆಯದ ಧಾರ್ಮಿಕಶ್ರದ್ಧೆಯ ಈ ಸಂಸ್ಕಾರವು ಭಾವನಿಕವಾಗಿಯೇ ಎಂಬಂತೆ ಇವರ ವಾಣಿಯ ಪರಿಸ್ಪಂದವಾಗಿ ಮತ್ತೆ ಒಡಮೂಡಿದಂತೆ ಅನಿಸುತ್ತದೆ.)

ಇಲಿಯಟನ ಕಾವ್ಯಪರ್ವದ ಮೊದಲನೆಯ ಭಾಗದ ಮೇರು ಕೃತಿ ಅಥವಾ ಮಾನದಂಡವು 'ವೇಸ್ಟಲ್ಯಾಂಡ್' ಆದರೆ, ಆ ಪರ್ವದ ಎರಡನೆಯ ಭಾಗದ ಅಂಥ ಪ್ರಯಾಣವು ಅವನ 'ಫೋರ್‌ಕ್ವಾರ್ಟ್ರೆಟ್ಸ' ಎನ್ನಬಹುದು. ಇಲ್ಲಿ ನಮ್ಮ ವಿಮರ್ಶೆಯ ಮಾನದಂಡವಾಗುವದು ಕವಿಯ ಮನೋಗತದ ನಿರಂತರವಾದ, ಎಡೆಬಿಡದ ವಿಕಾಸ-ಪ್ರೌಢಿಮೆ. ಕವನಗಳ, ನಾಟಕಗಳ ವಸ್ತು ಮತ್ತು ಕಾವ್ಯತಂತ್ರಗಳು ಕವಿಯ ಭಾವನೆಗಳ ಆಗಾಗಿನ ಅವಸ್ಥೆಗಳು. ಈ ಅವಸ್ಥೆ ಅವುಗಳ ಪ್ರಬುದ್ಧತೆ, ಪರಿಪಕ್ವತೆಗೆ ಹೊಂದಿಕೊಂಡಿರುವಂತಹದು. ಇಲ್ಲಿ ಕೃತಿಯ ನಿರ್ಮಿತಿಯನ್ನು ಕೇವಲ ಕಾಲಮಿತಿಯಿಂದ ಅಳೆಯುವುದು ಸರಿಯಲ್ಲ.

ಇಲಿಯಟನ 'ಚೌಪದಿ ಚತುಷ್ಕ' [Four Quartrets] ಒಟ್ಟಾಗಿ ನ್ಯೂಯಾರ್ಕಿನಲ್ಲಿ ಪ್ರಕಟವಾದದ್ದು ೧೯೪೩ ರಲ್ಲಿ. ಅಂದರೆ ಈ ಕೃತಿಯ ರಚನೆಗೆ ದೀರ್ಘಕಾಲವು ಹಿಡಿಯಿತು. ಇಲ್ಲಿಯ ಒಂದೊಂದು ಭಾಗವೂ ಒಂದೊಂದು ಸ್ಥಳನಾಮವನ್ನು ಹೊಂದಿದೆ. ಬರ್ಂಟ ನಾರ್ಟನ್ ಗಲ್ಲಿ ಕೋಸ್ಟರಶಾಯರಿನ ಒಂದು ಹಳೆಯ ಹಳ್ಳಿಯ ಮನೆಕವನದ ರಚನೆ ೧೯೩೬ ರಲ್ಲಿ. ಈಸ್ಟ ಕೋಕರದ ಕಾಲ ೧೯೪೦. ಇದು ಹಿಂದೆ ಹೇಳಿದ ಇಲಿಯಟನ ಪೂರ್ವಜರು ಇದ್ದ ಹಳ್ಳಿ. ಡ್ರಾಯ ಸಾವೋಡ ಹುಟ್ಟಿದ್ದು ೧೯೪೧ ರಲ್ಲಿ. ಇದು ಮಾಸಾಚುಸೆಟ್ಸದ ಒಂದು ದ್ವೀಪಸಮೂಹ. ಕವಿಗೆ ಇದು ಚಿಕ್ಕಂದಿನಿಂದಲೂ ಗೊತ್ತು. 'ಲಿಟ್ಲ ಗಿಡಿಂಗ'ದ ಕಾಲ ೧೯೪೨. ನಾಲ್ಕು ಕವಿತೆಗಳಲ್ಲಿಯೇ ಇದು ಉತ್ತಮ. ಹಂಟಿಂಗಡನಶಾಯರದ ಒಂದು ಹಳ್ಳಿಯ ಹೆಸರು. ಇವುಗಳಲ್ಲಿ ಮೊದಲಿನ ಮೂರು ಬರೆದದ್ದು ಒಂದನೆಯ ಮಹಾ ಯುದ್ಧದ ಅವಧಿಯಲ್ಲಿ.

ಇವೆಲ್ಲ ಚಿಂತನಪರ ತಾತ್ವಿಕ ಅಭಿವ್ಯಕ್ತಿಯ ಕೃತಿಗಳು. ಇವುಗಳಲ್ಲಿ ಇಲಿಯಟ್ ದೊಡ್ಡದನಿಯಲ್ಲಿ 'ಜನಾಂತಿಕ'ವಾಗಿ ಮಾತಾಡುತ್ತಾನೆ. ಅದೂ ವಿಭಿನ್ನ ವಿಷಯಗಳ ಕುರಿತು : ರಾಷ್ಟ್ರದ ಇತಿಹಾಸ, ಮಹಾಯುದ್ಧ, ಕವಿಯಾಗಿ ಸ್ವಂತದ ಬೆಳವಣಿಗೆ. ಆಧುನಿಕ ಕವಿಯು ಎದುರಿಸಬೇಕಾಗುವ ಸಮಸ್ಯೆಗಳು- ಇಲ್ಲಿ ವಿಶೇಷವಾಗಿ ತನ್ನ ನಂಬಿಕೆಗಳನ್ನು ಖಚಿತವಾಗಿ ಒಡಮೂಡಿಸಲು ಸಮರ್ಥಿಸಲು ತಕ್ಕುದಾದ ಶಬ್ದ ಸಂಗ್ರಹವನ್ನು ಹುಡುಕುವುದರಲ್ಲಿ. ಈ ಬಗೆಗೆ ಇಲಿಯಟ್ ವ್ಯಗ್ರನಾಗುತ್ತಾನೆ. ಉದಾಹರಣೆಗೆ ಈಸ್ಟಕೋಕರ ಕವನದಲ್ಲಿ ಆತ ಉದ್ಗರಿಸುತ್ತಾನೆ : 'Trying to Learn to use words and every attempt a wholly and a different kind of failure.' ('ನುಡಿಯ ಉಪಯೋಗವನ್ನು ಕಲಿಯಲು ಜತನ / ಪ್ರತಿಯತ್ನ ಒಟ್ಟೂ ಹೊಸತು / ಮತ್ತು ಹೊಸ ಬಗೆಯ ಸೋಲು !').

ಈ ಕವನಗಳು ಒಂದನ್ನೊಂದು ಪತ್ತಿರವಾಗಿ ಹೊಂದಿಕೊಂಡಂತಿವೆ-ಅದನ್ನು ಮೊದಲಿಗೆ ರಚಿಸಿದ ಕಾಲ ಬೇರೆ ಬೇರೆ ಆಗಿದ್ದರೂ ಅಲ್ಲಿ ಇರುವ ಕೀಲದ ಪದಗಳು ಮತ್ತೆ ಮತ್ತೆ ಬರುತ್ತಿರುತ್ತವೆ,-ಆದರೆ ವಿಭಿನ್ನ ಸಂದರ್ಭಗಳಲ್ಲಿ. ಆದರೆ ಕವನಗಳ ಒಟ್ಟಿನ (ಇಡಿಯ) ಸಾಮಾನ್ಯ ಸಂದರ್ಭವು ಕ್ರೈಸ್ತ ಪಂಥ: 'ಅರ್ಧ ಊಹೆ ಇನ್ನರ್ಧ ಅರ್ಥೈಸಿದ ವರದಾನ' ['The hint half guessed, the gift half under stood'] ಇದು ಆ ದೇವರ ಪುನರಾಗಮನ [Incarnation] ತನ್ನ The Dry Salvage ಕವನದಲ್ಲಿ ಇಲಿಯಟ್ ಹೇಳುತ್ತಾನೆ ಮತ್ತು ಅವನ ಈ 'ದರ್ಶನ' ೧೭ ನೆಯ ಶತಮಾನದಲ್ಲಿ ಮಹಾಕವಿ ಮಿಲ್ಟನ್ ಕಾಣಿಸಿಕೊಂಡ ಧಾರ್ಮಿಕ ಶ್ರದ್ಧೆ ಮತ್ತು ವಿವಾದದ ನಿದರ್ಶನದಲ್ಲಿ ಮುಗಿಯುತ್ತದೆ. ಇಂಥ ಕವನಗಳು ಅವನ Waste Land ಮತ್ತು Purfrock ಕವನಗಳಿಂದ ಬಲು ದೂರ. ಆದರೂ ಅದೇ ಕವಿಯು ಅದೇ ಹಿಂದಿನ ಕಾವ್ಯದ ಪಡೆಮಡಿಗಳನ್ನು ಅಲ್ಲಲ್ಲಿ ಕ್ಷಣಕಾಲ ಈ ಉತ್ತರಾರ್ಧದ ತನ್ನ ಕಾವ್ಯ ಚರಿತ್ರದಲ್ಲಿಯೂ ಮಿಂಚುತ್ತಾನೆ.

ಆದಾಗ್ಯೂ ಈ 'ಫೋರ್‌ಕ್ವಾರ್ಟೆಟ್ಸ'ಗಳಲ್ಲಿ ಹಿಂದಿನ ತರುಣ ಇಲಿಯಟ್‌ನ ಚೈತನ್ಯವನ್ನು ವ್ಯಂಗ್ಯವನ್ನು ಅಷ್ಟು ತೀವ್ರವಾಗಿ ಕೆಲವರಿಗೆ ಕಂಡು ಬಂದಿರ ಬಹುದು. ಈ ಕಾವ್ಯ ಅಂದಿನ ಆ ಕಾವ್ಯದಷ್ಟೇ ವಿಶಿಷ್ಟವೂ ಹೆಸರುವಾಸಿಯೂ ಆಗಿದ್ದರೂ ಇದರ ಶುದ್ಧ್ಯೈವೇಗದಲ್ಲಿ ಚಪಲದಲ್ಲಿ ತುಸು ಕಡಿಮೆ ಮತ್ತು ಮಂದ ಗಂಭೀರವೆಂದೂ ಎಣಿಸಬಹುದು. ಆದರೂ ಇಲಿಯಟ್ ಕಾವ್ಯದ ಅಭ್ಯಾಸದ ಸಮಗ್ರತೆಗೆ 'ವೇಸ್ಟ ಲ್ಯಾಂಡ'ನಷ್ಟೇ 'ಫೋರ ಕ್ವಾರ್ಟೆಟ್ಸ'ಗಳ ಅವಲೋಕನೆಯಲ್ಲಿ ಏಕಾಗ್ರತೆಯೂ ಅಗತ್ಯ.

ಮೇಲೆ ಹೇಳಿದಂತೆ ಟಿ. ಎಸ್. ಇಲಿಯಟ್‌ನ ಕವಿಚರಿತ್ರೆಯ ಉತ್ತರಾರ್ಧ ೧೯೨೭ ರಿಂದ ಶುರುವಾಯಿತು. ಅದೇ ಸುಮಾರಿಗೆ ಆತನ ಮತಾಂತರವಾಯಿತು. ಆಗಲೇ ಅವನ ಎರಡನೆಯ ಮದುವೆಯೂ ಒದಗಿತು. ಆತ ಆಂಗ್ಲ ಕ್ಯಾಥೊಲಿಕ್ ಪಂಥಕ್ಕೆ ಸೇರಿದನು, ಅದೇ ವರ್ಷವೇ (೧೯೨೭) ಇಲಿಯಟ್ ಪೂರ್ತಿಯಾಗಿ ಬ್ರಿಟಿಶ್ ಪ್ರಜೆ ಆದನು. ೧೯೨೫ ರಲ್ಲಿ ಆತ ಫೇಬರ ಎಂಡ ಫೇಬರ ಪ್ರಕಾಶನ ಸಂಸ್ಥೆಯಲ್ಲಿ ಪಾಲುಗಾರನಾಗಿದ್ದು, ಅವರ ಅಧಿಕೃತ ಓದುಗರ ಸಲಹೆಗಾರ ನಾಗಿಯೂ ಕೆಲಸ ಮಾಡಹತ್ತಿದನು. ಇದೇ ಕಾಲಖಂಡದಲ್ಲಿ ಇಲಿಯಟ್ ಕಾವ್ಯ ರೂಪಕಗಳನ್ನು ಬರೆಯುವ ಪ್ರಯೋಗಗಳಲ್ಲಿ ತೊಡಗಿದನು.

ಟಿ. ಎಸ್. ಇಲಿಯಟ್ ರಚಿಸಿದ ನಾ ಟ ಕ ಗ ಳ ಬಗೆಗೆ ಪ್ರಸ್ತಾವನೆ ಹೀಗೆ ಮಾಡಬಹುದು. ೧೯೩೩ ರಲ್ಲಿ ಲಂಡನ್ನಿನಲ್ಲಿ ಮರ್ಕ್ಯುರೀ ಥೇಟರ್ ಸ್ಥಾಪಿತ ವಾಯಿತು ಮತ್ತು ಇಲಿಯಟ್‌ನ ಪ್ರಥಮ ರೂಪಕ (ನಾಟಕ) ೧೯೩೪-೩೫ ರಲ್ಲಿ ಅಲ್ಲಿ ಪ್ರದರ್ಶನಗೊಂಡಿತು,–ಅದೂ ಮೊದಲಿಗೆ ಕ್ಯಾಂಟಬರಿ ಉತ್ಸವದ ಸಂದರ್ಭದಲ್ಲಿ. ಇದೊಂದು ಇಂಗ್ಲಂಡಿನ ಇತಿಹಾಸದ ಮಧ್ಯಯುಗದ ದುರಂತ ಕಥೆ : ದೊರೆಯ ಇಚ್ಛೆಯನ್ನು ತಾವಾಗಿಯೇ ಮನ್ನಿಸಿ ಅವನ ದೂತರು ಅಂದಿನ ರಾಜಗುರು ಥಾಮಸ್ ಬೆಕೆಟ್‌ನೆಂಬ ಹಿರಿಯ ಬಿಶಪ್‌ನನ್ನು ಅವನ ಪ್ರಾರ್ಥನಾ ಮಂದಿರದಲ್ಲಿಯೇ ನುಗ್ಗಿ ಕೊಲೆಮಾಡಿದ ಪ್ರಸಂಗ. (ಹಿಂದೆ ಶೇಕ್ಸಪಿಯರನ ಒಂದು ನಾಟಕದಲ್ಲಿಯೂ ಈ ಅಂಶ ಬಂದಿತ್ತು. ಮುಂದೆ ಬೇರೆ ಅಧುನಿಕ ಖ್ಯಾತ ನಾಟಕಕಾರನೊಬ್ಬನು ಇದೇ ವಸ್ತುವಿನಿಂದ ನಾಟಕವನ್ನು ರಚಿಸಿದನು) ೧೯ ನೆಯ ಶತಮಾನದಲ್ಲಿ ಈ ಬಗೆಯ ಕಾವ್ಯ ನಾಟಕಗಳನ್ನು ಇಂಗ್ಲಂಡಿನಲ್ಲಿ ವರ್ಡ್ಸ್‌ವರ್ಥ ಬೈರನ್‌ರಂಥವರೂ ಅಮೇರಿಕೆಯಲ್ಲಿ ಲಾಂಗಫೆಲೂ ಮುಂತಾದವರೂ ಕೈಯಾಡಿಸಿ ಬಿಟ್ಟಿದ್ದರು. ಇಂಥ ನಾಟಕ ರಂಗಕ್ಕಿಂತ ವಾಚನಕ್ಕೆ ಯೋಗ್ಯವೆಂದು ಅಂದಿನ ಅಭಿಪ್ರಾಯವಿತ್ತು. ಸ್ವಯಂ ಇಲಿಯಟ್ ಕೂಡ ಈ ನಾಟಕ ಪ್ರಕಾರದ ಬಗೆಗೆ ವಿಶೇಷ ಉತ್ಸಾಹ ಇಟ್ಟುಕೊಳ್ಳಲಿಲ್ಲ.

ಈ ಕಾವ್ಯರೂಪಕಗಳಲ್ಲಿ ಅಂಥ ನಾಟ್ಯ ಅಥವಾ ರಂಗಕ್ರಿಯೆ ಏನೂ ಇರುತ್ತಿದ್ದಿಲ್ಲ ಮತ್ತು ರಂಗಚಟುವಟಿಕೆ ಒದಗುತ್ತಿರದಿದ್ದರೆ ಅದು ಯಶಸ್ವಿಯಾಗುವದಿಲ್ಲ. ಈ ದೃಷ್ಟಿಯಿಂದ ಇಲಿಯಟ್ ಶೇಕ್ಸಪಿಯರ ನಾಟ್ಯಕೃತಿಗಳ ಮಾದರಿಯನ್ನು ಬಿಟ್ಟು ಅವನಿಗೂ ಶತಮಾನ ಹಿಂದಿನ ನಾಟ್ಯಕ್ಕೆ ತಕ್ಕದಾದ ಭಾಷಾಶೈಲಿಯನ್ನು ಎತ್ತಿ ಕೊಂಡನು. ನಾಟಕದಲ್ಲಿ ಅಂಕಾರಂಭದ 'ಕೋರಸ್' (Chorus) ಆತ ಹಳೆಯ ಗ್ರೀಕನಾಟಕಗಳಿಂದ ಆಯ್ದುಕೊಂಡನು. ಗದ್ಯಭಾಷೆಯ ಜಾಡು ಬರ್ನಾಡಶಾರ

ಭಾಷೆಯನ್ನು ಪೋಲುತಿತ್ತು. ಈ ನಾಟಕ ಆ ಮಟ್ಟಿಗೆ ಯಶಸ್ವಿಯಾಯಿತು- ಅದರಲ್ಲಿ ಮೂರು ವಿಶಿಷ್ಟ ನಾಟ್ಯತಂತ್ರಗಳು ಒಳಗೊಂಡಿದ್ದವು. ಆದರೆ ಸ್ವತಃ ಇಲಿಯಟನಿಗೆ ಅದು ನಾಟಕ ರಚನೆಯ ಕೊನೆ [Dead-end] ಅನಿಸಿತು. ಈ ನಾಟಕದಲ್ಲಿ ಕೆಲವು ಶ್ರೇಷ್ಠ ಅಂಶಗಳಿದ್ದರೂ ಕಾವ್ಯ(ಪದ್ಯ)ದಲ್ಲಿ ಸಂಭಾಷಣೆಗಳ ಸಮಸ್ಯೆ ಬಗೆಹರಿಯಲಿಲ್ಲ, ಇರಲಿ.

ಇ ಲಿ ಯ ಟ ನ ಮುಂದಿನ ನಾಟಕ The Family Reunion (ಕುಟುಂಬದ ಪುನರ್ಮಿಲನ) ಅವನ ಮಹತ್ವದ ಕೃತಿ ಅನಿಸಿತು. ಆದರೆ ಅದು ಉತ್ತಮ ಕೃತಿಯಾಗಲಿಲ್ಲ. ಈ ನಾಟಕದಲ್ಲಿ ಆತ ತನ್ನ ಸಮಕಾಲೀನ ಪದ್ಯಾತ್ಮಕ ಮಾತಿನ ಶೈಲಿಯನ್ನು ಸುಧಾರಿಸಿಕೊಂಡನು. ಈ ನಾಟಕರಚನೆ ೧೯೩೯ ರಲ್ಲಿ. ಅನಂತರ ಅನುಕ್ರಮವಾಗಿ The Cocktail Party (೧೯೫೦). The Confidential Clark (೧೯೫೪) ಮತ್ತು The Elder Statesman (೧೯೫೮)-ಈ ಕ್ರಮ ದಲ್ಲಿ ಬಂದವು. ಈ ನಾಟಕ 'ಕಾವ್ಯಗಂಧಿಗದ್ಯ' ಸಾಮಾನ್ಯ ಆಧುನಿಕ ಇಂಗ್ಲಿಷಿಗೆ (ಆಡುನುಡಿಗೆ) ಸಮೀಪವಾಗಿದೆ. ಇಲಿಯಟ್‌ನ ಮಾತಿನಂತೆ ಈ ನಾಟ್ಯಗದ್ಯ ಅತಿ ಉತ್ಕಟ ಆಡುಮಾತು ಮತ್ತು ಅತಿಹಗುರಾದ ಸಂವಾದ ಇವುಗಳ ನಡುವೆ ಅವಿಚ್ಛಿನ್ನವಾಗಿ ಹ ರಿ ದಾ ಡು ತ್ತ ದೆ. (ನಮ್ಮ ಪೂಜ್ಯ ಮಾಸ್ತಿಜಿ ಅವರ ಕಾವ್ಯ ಭಾಷೆಯಂತೆ !) ಇಲಿಯಟ್‌ನು 'The Cocktail Party' ನಾಟಕದಲ್ಲಿ ಅತ್ಯಂತ ಕಟ್ಟುನಿಟ್ಟಿನ ನಾಟಕೀಯ (ರಂಗ) ಪ್ರಯೋಜನದ ಒರೆಗಲ್ಲಿಗೆ ಒಗ್ಗದ ಕಾವ್ಯದ ರೀತಿಯನ್ನು ಬಿಟ್ಟೇ ಕೊಡುವ ನಿಗ್ರಹ ತಾಳಿದನು. ಇದು ತುಂಬ ಯಶಸ್ವಿ ಯಾಯಿತು. ಎಷ್ಟೆಂದರೆ ಆ ನಾಟಕದಲ್ಲಿ ಕಾವ್ಯವೆಂಬುದೇನಾದರೂ ಇದೆಯೇ- ಎಂದು ಯಾರೂ ಶಂಕಿಸಬಹುದಾಗಿದೆ. ಇದು ಇಲಿಯಟ್ ತಾನೇ ಪ್ರಕಟಿಸಿದ ತನ್ನ ಕು ರಿ ತ ಅಭಿಪ್ರಾಯ. ಆತ ನಾಟಕ ಬರೆಯುವಾಗ ನೆನಪಿನಲ್ಲಿ ಇಟ್ಟು ಕೊ ಳ್ಳು ತ್ತಿ ರು ವು ದು ಇಷ್ಟೇ-ರಂಗದಲ್ಲಿ, ನಾಟಕದಲ್ಲಿ ಕಾಲಕಾಲಕ್ಕೆ ಏನಾದರೂ ಜರುಗುತ್ತಿರಬೇಕು.

ಹೀಗೆ ಆತ ಅಂದರೂ ಅರಿತಿದ್ದರೂ ಇಲಿಯಟ್ ಸಹಿಸಬೇಕಾಗಿ ಬಂದ ಮುಖ್ಯ ಟೀಕೆಯೆಂದರೆ, ಅವನ ನಾಟಕಗಳು ತೀರ ಜಡ, ಅಚಲ [Too Static]. ಆಧುನಿಕ ಕಾವ್ಯ ನಾಟಕದಲ್ಲಿ ನಾಟ್ಯಕ್ರಿಯೆಯ ಅನ್ಯೋನ್ಯ ಸಂಬಂಧದ ಸಮಸ್ಯೆಯನ್ನು ಆತ ಬಗೆಹರಿಸಲಾರದೇ ಹೋದ. ಇದು ಆಧುನಿಕ ನಾಟಕಕಾವ್ಯಗಳ ಅಥವಾ ಕವಿ ನಾಟಕ ಕರ್ತರ ಜಾಯಮಾನವೇ ಆಗಿರಬೇಕು. ಇದಕ್ಕೆ ಥಾಮಸ್ ಹಾರ್ಡಿಯ 'ಡೈನಾಸ್ಟ್' ಶ್ರೀ ಅರವಿಂದರ 'ಸಾವಿತ್ರಿ' ಕುವೆಂಪು ಅವರ ಶೇ ಕ್ಸ ಪಿ ಯ ರ ಕೃತಿಗಳ

ಅನುವಾದಗಳಲ್ಲದ ಸ ರ ಳ ರ ಗ ಳೆ ಯ ನಾಟಕಗಳು–ಇವೇ ಮುಂತಾದವು ಸಾಕ್ಷಿ. ಇದಕ್ಕೆ ಒಂದು ಬಲವಾದ ಕಾರಣ ಇಂಥ ಕೃತಿಕಾರರು ಮೂಲತಃ ಕವಿಗಳು. ವಸ್ತುಕಕ್ಕಿಂತ ವರ್ಣಕಕ್ಕೆ ಮಾ ಲಿ ದ ವ ರು, ಒಲಿದವರು. ಇದೂ ಅಲ್ಲದೆ ಇಂಥ ಕವಿಗಳಿಗೆ ಪ್ರತ್ಯಕ್ಷ ರಂಗಾನುಭವ, ನಾಟಕ ತಂತ್ರ (ಪ್ರಯೋಗ) ವಿಜ್ಞಾನದ ಅಭಾವ. ನಟನಾಗಿ ನಾಟಕದ ಪ್ರಯೋಗದಲ್ಲಿ ಒಳಹೊರಗೆ ಸುಳಿದಾಡುವ ಅನುಭವ ಇ ಂ ಥ ವ ರಿ ಗೆ ಕಡಿಮೆ. ಆದ್ದರಿಂದ ಟಿ. ಎಸ್. ಇಲಿಯಟ್ ಒಬ್ಬ ಹಿರಿಯಕವಿ. ಅವನಿಗೆ ನಾಟ್ಯೇತರ ಕೃತಿಗಳ ಉತ್ತಮತೆ ನಾಟಕ ಲೇಖನದಲ್ಲಿ ಕೈಗೆ ಎಟುಕಲಿಲ್ಲ. ಇಂದಿನ ಗದ್ಯಯುಗದಲ್ಲಿ ಕಾವ್ಯ ಮತ್ತು ಗದ್ಯ–ಪದ್ಯ ಮತ್ತು ವಚನ–ತೂಗಿಸಿ ಸಮತೋಲನ ಏರಕಹೊಯ್ಯುವದು ತುಸು ಬಿಗಿಯೇ. ಆದರೆ ಅದಕ್ಕೂ ಬಿಗಿಯಾದ ಮಣಿಹ ನಾಟ್ಯವನ್ನೂ ಕಾವ್ಯವನ್ನೂ-ರಂಗಾಭಿನಯುವನ್ನೂ ಕಾವ್ಯಾನುನಯುವನ್ನೂ–ಹ ದ ವಾ ಗಿ ಹೊಂದಿಸಿಕೊಳ್ಳುವದು. ದೃಶ್ಯ–ಕಾವ್ಯವೇ ನಾಟಕವೆಂದಿದ್ದಾರೆ. ಆದರೆ ಇಲ್ಲಿ ಅನೇಕಸಲ ದೃಶ್ಯದ ಕಳೆಕಟ್ಟುವ ಭರದಲ್ಲಿ ಕಾವ್ಯದ ಕಲೆ ಕೀಳಾಗುವ ಭಯವಿರುತ್ತದೆ. ಇಲಿಯಟನಿಗೂ ಈ ಭಯ ತಪ್ಪಲಿಲ್ಲ. !

ಒಟ್ಟಿನಲ್ಲಿ, ಸಂತ್ಸುನೋಟದಲ್ಲಿ, ಬೀಸುಮಾತಿನಲ್ಲಿ ಹೇಳುವದಾದರೆ ಟಿ. ಎಸ್. ಇಲಿಯಟ್ ಮುಖ್ಯವಾಗಿ ಆಧುನಿಕ ಪರಿಭಾಷೆಯಲ್ಲಿ, ಹೊಸಪ್ರಜ್ಞೆಯಲ್ಲಿ ಪರಿಷ್ಕೃತ ಭಾಷೆಯಲ್ಲಿ ಸಂಪ್ರದಾಯುವನ್ನು ಎತ್ತಿಹಿಡಿಯುುವವನು. ಅದರ ಮೌಲ್ಯಗಳನ್ನು ಒತ್ತಿಹೇಳಿದವನು,–ವಿಶೇಷವಾಗಿ ಸಾಹಿತ್ಯದಲ್ಲಿ, ರಾಜಕಾರಣದಲ್ಲಿ ಮತ್ತು ಧರ್ಮದಲ್ಲಿ ಸನಾತನೆಯೇ ಅಲ್ಲದಿದ್ದರೂ ಸಂಪ್ರದಾಯುವನ್ನು ವ್ಯಾಖ್ಯಾನಿಸಿದವನು. ಆದರೆ ಇದನ್ನು ಸಾಧಿಸುವಾಗ ಇಲಿಯಟ್ ತನ್ನ ಕಾವ್ಯದಲ್ಲಿ ಭಾಷೆಯ ಬಗೆಗೆ ಮತ್ತು ಪ್ರಕಾರದ ಬಗೆಗೆ ಸಂಪ್ರದಾಯವಾದಿಯಿದ್ದಿಲ್ಲ. ಈ ಕ್ಷೇತ್ರದಲ್ಲಿ ಆತ ತಂತ್ರಿಕ ಬದಲಾವಣೆಗಳನ್ನು ಪ್ರಯೋಗಗಳನ್ನು ಕ್ರಾಂತಿಕಾರಿಯಾಗಿ ಮಾರ್ಪಡಿಸಿದನು. ಇಲಿಯಟ್‌ನ ವಿಚಾರದ ಚೌಕಟ್ಟು, ಆಕಾರ ಒಂದರ್ಥದಲ್ಲಿ ಸ್ಥಿತಿಪಾಲಕ. ಆದರೆ ಆ ಚೌಕಟ್ಟಿನೊಳಗಿನ ಚಿತ್ರ ಅದ್ಭುತ, ನವನವೋನ್ಮೇಷಕ.

ಟಿ. ಎಸ್. ಇಲಿಯಟ್ ೨೦ ನೆಯ ಶತಮಾನದ ಪ್ರಮುಖ ಹಾಗೂ ಪರಮ ವಿಚಾರವಾದಿ ಮನುಷ್ಯ. ಅವನ ಬುದ್ಧಿಮತ್ತೆ, ವೈಚಾರಿಕ ವಿಶಿಷ್ಟತೆ ಅವನ ಅವನ ಭಾವಪ್ರಪಂಚವನ್ನು ಆಳುತಿತ್ತು. ಹೊಸ ಜಗತ್ತಿನ ನಿರಂಕುಶ ಪ್ರಜ್ಞೆ ಹಳೆಯ ಜಗತ್ತಿನ ಭಾವ ಲೋಕದಲ್ಲಿ ಮೊಳೆತು ಬಲಿತು ಬೆಳೆಯಿತು ಮಾತ್ರವಲ್ಲ ಇಲ್ಲಿಯ ಕ್ರೈಸ್ತ ಪರಂಪರೆಯ ಸ ಂ ಸ್ಕಾ ರ ಗ ಳ ಉತ್ತಮಾಂಶಗಳಿಗೆ ಮಾಗಿತು. ಅವನ ಅಂತರ್ಯವು ಉತ್ತಮತೆಯ ಆದರ್ಶವನ್ನು ಹಿ ಡಿ ಯಿ ತು. ಇದರಿಂದ

ಆತ ಸಮಾಜದಲ್ಲಿ ಶ್ರೇಷ್ಠವರ್ಗದ ಮಾರ್ಗೀಯ ಮೇಲ್ಮಟ್ಟದ (aristrocratic) ವ್ಯವಸ್ಥೆ ಹಾಗೂ ಶ್ರೇಣೀಬದ್ಧ ರಚನೆ-ಪದ್ಧತಿಗಳಲ್ಲಿ ಬಲವಾದ ಭವ್ಯವಾದ ನಂಬಿಕೆಯನ್ನು ಇಟ್ಟುಕೊಂಡಿತು. ಇವರ ಬೆಂಬಲಕ್ಕೆ ಇಂಗ್ಲಂಡಕ್ಕೆ ವಿಶಿಷ್ಟವಾದ ಕ್ಯಾಥೊಲಿಕ್ ಸಂಪ್ರದಾಯವನ್ನು ಅಂಗೀಕರಿಸಿತು. (ಸಂಪ್ರದಾಯಕ್ಕೆ ರೋಮದ ಪೋಪ ಜಗದ್ಗುರುವಲ್ಲ. ಬ್ರಿಟಿಷ ಚಕ್ರವರ್ತಿಯೇ ಧಾರ್ಮಿಕ ಪರಮೋಚ್ಚ ಅಧಿಕಾರಿ). ಹೀಗೆ ಕೆಲವು ವಿಸಂಗತಿ-ವಿರೋಧಾಭಾಸದ ಧಾರಣೆಗಳ ಒಳಗಿಂದಲೂ ಆತಕಾವ್ಯವನ್ನು ತನ್ನದೇ ಶಕ್ತಿ-ಸತ್ವಗಳಿಂದ ನವೀನಗೊಳಿಸಿದನು. ವಿಮರ್ಶೆಯನ್ನು ಮೂಲಗಾಮಿಯಾಗಿ ಮಾಡಿದನು.

ಇಲಿಯಟನು ಫ್ರೆಂಚರ 'ಪ್ರತೀಕ'ವಾದ [Symbolism] ದಿಂದ ಪ್ರಭಾವಿತನು. ಹಾಗೆಯೇ ಜೇಮ್ಸ್ ಜಾಯ್ಸಿನ 'ಯುಲಿಸಿಸ್' [Ulysses] ಎಂಬ ಬೃಹತ್ ಕಾದಂಬರಿಯಿಂದ ಮತ್ತು ತನ್ನ ಕವಿಮಿತ್ರ ಎರ್ಝಾ ಪೌಂಡನಿಂದ ಪ್ರಭಾವ ಗೊಂಡನು. ಅವನ 'ಪಡಭೂಮಿ'ಯ [Waste Land] ಪ್ರಕಾಶನ ಪೌಂಡ ನಿಂದಲೇ ಅನುಕೂಲವಾಯಿತು. ಈ ಕಾವ್ಯವು ಆಧುನಿಕ ಇಂಗ್ಲಿಷ ಕಾವ್ಯದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿತು. ಇದರಲ್ಲಿ James Joyce ನ ನಿರೂಪಣಾ ಶೈಲಿಯ ನಿಧಾನವಿದೆ. ಅದರಲ್ಲಿ ಮಾನವನ ಪ್ರಜ್ಞೆ ಅಥವಾ ಅರಿವನ್ನು ವಿಶಿಷ್ಟ ರೀತಿಯಲ್ಲಿ ರೂಪಿಸುವ ಪ್ರಯೋಗವಿದೆ. ಮನಸ್ಸು ತೋರಿಕೆಗೆ ತೀರ ಅಸಂಗತ ಅಸಂಬದ್ಧವೆನಿಸುವ ಸಂಗತಿಗಳಿಗೆ, ವೀಕ್ಷಣೆಗಳಿಗೆ ಅಂಟಿಕೊಳ್ಳುವುದರ ವಿವರಣೆ ಸೂಚನೆಗಳಿಂದ ಅದನ್ನು ಒಟ್ಟಾಗಿ ಹಿಡಿದು ಬಿಂಬಿಸುವ ಹೊಚ್ಚ ಹೊಸ ತಂತ್ರ ವ್ಯಕ್ತವಾಗಿದೆ. ವಾಚ್ಯಕ್ಕೂ ಹೆಚ್ಚಾಗಿ ಅವನ್ನೂ ಮೀರಿ ಸೂಚ್ಯವನ್ನೆ ಅವಲಂಬಿಸುವ ತಂತ್ರವಿದು.

ಇಲಿಯಟನ ಈ ಕಾವ್ಯವೈಖರಿಯು ಓದುಗರಿಗೆ ಕಠಿಣ. (ಇದನ್ನು ನಮ್ಮಲ್ಲಿ ಮಾನ್ಯ ಶ್ರೀ ಗೋಪಾಲಕೃಷ್ಣ ಅಡಿಗರು 'ನಡೆದು ಬಂದ ದಾರಿ'ಯನ್ನು ಬಿಟ್ಟು 'ಹಿಮಗಿರಿ ಕಂದರ' 'ಚಂಡೆಮದ್ದಳೆ'ಗಳಿಂದ ರೂಢಿಸಿದರು. ಈ ಬಗೆಯ ನವ್ಯ ಜಗತ್ತಿಗೆ ಅಡಿಗರೇ ನಮ್ಮ ಕೋಲಂಬಸರು ! ನನಗೂ ಇಲಿಯಟ್ ಕಾವ್ಯಾವ ಲೋಕನದ ದೀಕ್ಷೆ ಅಡಿಗರೇ ಕೊಟ್ಟರು !)

ಈ ಶೈಲಿಯ ಸ್ವರೂಪ, ವಿವಿಧ ದೂರದೂರದ್ದೆನಿಸುವ ಪ್ರತಿಮೆ ಪ್ರತೀಕಗಳ ಸಂಯೋಜನೆ ಪ್ರಚುರವಾಗಿದೆ. ವಾಚಕನೇ ತನ್ನ ಮನಸ್ಸಿನಲ್ಲಿ ಅವುಗಳ ಸಂಬಂಧ ಸಾಂಗತ್ಯಗಳನ್ನು ರೂಪಿಸಿಕೊಳ್ಳಬೇಕು. ಇದನ್ನು ಇನ್ನಷ್ಟು ಕ್ಲಿಷ್ಟಗೊಳಿಸುವ

ಸಂಗತಿಯೆಂದರೆ ಕಾವ್ಯದ ಓಘದಲ್ಲಿ 'ವ್ಯಾಸಗುಟ್ಟಿ'ನಂತೆ ನಮ್ಮ ಕಾಲಿಗೆ ತೊಡಕಾಗಬಲ್ಲ ಇತರ ಕವಿಗಳ, ಲೇಖಕರ ವಚನಗಳು, ಉದ್ಧರಣೆಗಳು, ಆಖ್ಯಾನ-ವ್ಯಾಖ್ಯಾನಗಳ ಚೂರುಗಳು ಭಾವಗರ್ಭಿತ ಹೆಸರುಗಳು, ಕಥಾಪ್ರಸಂಗಗಳು ಹೆಣೆದು ಕೊಳ್ಳುವದು. ಇದೂ ಅಲ್ಲದೆ ಇಲಿಯಟ್ ಕಾಲದ ಪರಿಕಲ್ಪನೆಯನ್ನು ಕೊಡಬಲ್ಲ ಹಲವಾರು ವಾಕ್ ಪ್ರಯೋಗಗಳನ್ನು, ಅರ್ಥಗೌರವದ ಪದವಿನ್ಯಾಸಗಳನ್ನು ಅಲ್ಲಲ್ಲಿ ಪೇರಿಸುವನು. ಇದೆಲ್ಲ ಸುಮಾರಾಗಿ ಯಾವ ಹಲ್ಲಿಗೂ ಕಬ್ಬಿಣದ ಕಡಲೆ. ಹಲ್ಲು ಇಲ್ಲದವರಿಗೆ ? ಯಾವ ಕಡಲೆಯೂ ಕಬ್ಬಿಣವೇ !

ಆದಾಗ್ಯೂ ಇಲಿಯಟ್‌ನ ಕಾವ್ಯವನ್ನು ತಿಳಿಯಲು ಎರಡು ಮೂಲಭೂತವಾದ ಪರಿಕಲ್ಪನೆಗಳನ್ನು ನಾವು ಮಾಡಿಕೊಳ್ಳಬೇಕು. ಒಂದು, ಅವನ ಕಾವ್ಯವು ಒಂದು ಅಖಂಡವಾದ ಹಾಗೆಯೇ ಸಂಕೀರ್ಣವಾದ ವಿಚಾರ ಪ್ರವಾಹ. ನಾವು ಹಿಂದೆ ಅನುಭವಿಸಿದ ನೆನಪುಗಳೆಲ್ಲ ಇಂದು ಅನುಭವಿಸುವ ಸಂಗತಿಗಳೊಂದಿಗೆ ಸತತವಾಗಿ ಅಥವಾ ಮತ್ತೆ ಮತ್ತೆ ಸೇರಿಕೊಳ್ಳುತ್ತ ಸಾಗುತ್ತವೆ. ಒಂದು ಉದಾಹರಣೆಯನ್ನು ಕೊಡುವದಾದರೆ, ನಾವು ಒಬ್ಬ ಕವಿಯ ಕೃತಿಯನ್ನು ಓದಿದರೆ ಅದರ ಕೆಲವು ಸಾಲು ತಾವಾಗಿಯೇ ನಮ್ಮ ಖಾಸಗಿ ಅನುಭವದ ಭಾಗವಾಗಿ ಬಿಡುತ್ತವೆ- 'ಅರಿವಿನಾಳದ ಅಣಿಮುತ್ತುಗಳಾಗಿ' ಅವನ್ನು ನಾವು ಆಗಾಗ್ಗೆ ಉದಾಹರಿಸುತ್ತೇವೆ. ಅದರಿಂದ ನಾವು ಆ ಪದಸಮುದಾಯದಿಂದ ಅವುಗಳ ಯೋಜನೆಯ ಕ್ರಮದಿಂದ ಕೆಲವೊಂದು ಭಾವನೆಯನ್ನು ಮತ್ತೆಮತ್ತೆ ಹೊಂದುತ್ತೇವೆ. ಇದೇ ಕ್ರಮವನ್ನು ಇಲಿಯಟ್ ತನ್ನ ನಿರೂಪಣೆಯಲ್ಲಿ ಅವಲಂಬಿಸುತ್ತಾನೆ. ತಾನು ಎತ್ತಿ ಹೇಳಿದ ಪದಪುಂಜಗಳನ್ನು ಮೆಲುಕುಹಾಕುತ್ತಾನೆ. ಆದೇ ಪದಪುಂಜವನ್ನು ಬಲ್ಲ ಓದುಗನಿಗೆ ಅದರ ಹಿಂದಿನ ಎಲ್ಲ ಭಾವಕೋಶವು ತಾವಾಗಿಯೇ ಆಂತರಿಕವಾಗಿಯೇ ನಿವೇದಿತ ವಾಗುತ್ತದೆ. ವೇದ್ಯವಾಗುತ್ತದೆ. ವಿಶೇಷ ಇಲ್ಲವೆ ವಿವರವಾದ ವ್ಯಾಖ್ಯಾನವಿಲ್ಲದೆ ಅದೊಂದು ನವಿರಾದ, ಆದರೂ ನೇರವಾದ ಸಂವಹನಕ್ರಿಯೆ.

ಇಲಿಯಟ್‌ನ ಎರಡನೆಯ ಹಳವಂಡವೆಂದರೆ, ಕಾಲದ ಸಮಸ್ಯೆ. ಇದು ಅಂದಿನ ಹಲವಾರು ಸಮಕಾಲೀನ ಸಾಹಿತಿಗಳ ವ್ಯಾಪೃತಿಯೂ ಆಗಿತ್ತು. ಕಳೆದ ಕಾಲ ಮತ್ತು ಇರುವ ಕಾಲ । ಇವೆರಡೂ ಬರುವ ಕಾಲದಲ್ಲಿ ವರ್ತಮಾನ । ಮತ್ತು ಬರುವ ಕಾಲವು ಕಳೆದಕಾಲದ ಒಳಸಮಾವೇಶ !' (The time present and the time past | Are both Present in the time future | And the time future contained in the time past !') ಇದರ ವ್ಯಾಖ್ಯೆ ಇಲ್ಲಿ ಅಸಾಧ್ಯ. ಕಾಲವು ಒಂದು ಚಕ್ರನೇ ವಿಕ್ರಮ. ಅದು ಬರಿ ಮುಂದುವರಿಯುತ್ತ ಸಾಗುವ

ಹಾದಿಯಲ್ಲ, ನದಿಯಲ್ಲ. ಪ್ರವಾಹದಲ್ಲಿ ಈಗಿದ್ದ ನೀರು ಮರುಕ್ಷಣಕ್ಕೆ ಇರುವುದಿಲ್ಲ. ಅದು ನಿಂತ ನೀರಲ್ಲ. ಆದರೂ ಅದು ಹರಿಯುವ ನೀರು. ಆ ಕುರಿತು ನಮ್ಮ ಗಂಗಾಧರ ಚಿತ್ತಾಲರು ಒಂದು ದೀರ್ಘಕವನವನ್ನೇ ಬರೆದದ್ದು ಪ್ರಸಿದ್ಧವಿದೆ. ಎಚ್. ಜಿ. ವೆಲ್ಸ ತನ್ನ ಒಂದು ಕಾದಂಬರಿಯನ್ನು ಪ್ರಿಸ್ಟ್ಲೆ ತನ್ನ ಕೆಲವು ನಾಟಕಗಳನ್ನು ಈ ಕಾಲದ ಆಯಾಮದ ಬಗೆಗೆ ಬರೆದದ್ದಿದೆ.

ಈ ಕುರಿತು ಟಿ. ಎಸ್. ಇಲಿಯಟ್ ಅನ್ನುವುದೇನೆಂದರೆ, ಕೆಲವು ಮನಸ್ಸುಗಳಲ್ಲಿ ಓದಿನಿಂದ ಬಾಳಿನ ಅನುಭವದಿಂದ ಕೆಲವಷ್ಟು ನೆನಪುಗಳು ಸಂಗ್ರಹಗೊಂಡಿರುತ್ತವೆ. (ಮನಸ್ಸಿಗೆ ಹಳೆಯದು ಹೊಸತು-ಎಂಬುದಿಲ್ಲ. ಅಲ್ಲಿ ಎಲ್ಲವೂ ಒಂದೇ, ಹಚ್ಚ ಹಸಿರೇ.) ಈ ನೆನಹುಗಳು ಭಾವವಿಕಾರಗಳಿಂದ ತುಂಬಿರುತ್ತವೆ.–ಮಿಂಚಿನ ತಂತಿಯಂತೆ [Charged] ಭಾವಾರ್ಥ ಹೊಂದಿರುತ್ತವೆ (ನಾವು ಗಂಗೆಯನ್ನೂ, ಲಂಡನಿಗನು ಥೇಮ್ಸ ನದಿಯನ್ನೂ ನೆನೆಮಕೊಂಡಾಗ ಈ ಭಾವಕೋಶ ತೆರೆಯುತ್ತದೆ--ಆ ನದಿಗಳ ಕುರಿತು.) ಕವಿಯು ಇವೆಲ್ಲವನ್ನೂ ಉಪಯೋಗಿಸುತ್ತಾನೆ. ಅದರಿಂದ ಕವನದಲ್ಲಿ ಉತ್ಕಟತೆ ತುಂಬುತ್ತದೆ; ಆದರೆ ಆ ಮಟ್ಟಿಗೆ ಸ್ಪಷ್ಟತೆ ಕಳೆದು ಹೋಗುತ್ತದೆ. ಇದು ಅನಿವಾರ್ಯ. ಈ ಪರಿಕಲ್ಪನೆಯನ್ನೆ ಇಲಿಯಟ್ ತನ್ನ ಸುಪ್ರಸಿದ್ಧ ಕಾವ್ಯ ಸಿದ್ಧಾಂತವಾಗಿ ಪ್ರತಿಪಾದಿಸಿದನು. ಅದನ್ನು ಆತ 'Objective Correlative' ಎಂದು ಕರೆದನು. (ಇದನ್ನು ಕನ್ನಡದಲ್ಲಿ 'ವಸ್ತು ಪ್ರತಿರೂಪ'ವೆಂದು ಅನುವಾದಿಸುತ್ತಾರೆ.) ಇದು ಒಂದು ರೀತಿಯಲ್ಲಿ 'ಪ್ರತಿಮಾ ವಿಧಾನ'–ನೇರ ಉಪಮೆಯಲ್ಲಾದ ಹೊಂದಿಕೆ ಹೋಲಿಕೆಯ ಸೂಚ್ಯ. ಇದು ಉಪಮಾನದಂತೆ ಒಂದೇ ವಸ್ತು ಕಲ್ಪನೆಯಲ್ಲ. ಹಲವು ವಸ್ತುಗಳ ಸಂಗತಿಗಳ ಸರಪಳಿ [a chain of events]. ಇದು ನಮ್ಮ ಕುವೆಂಪು ಅವರ 'ಮಹೋಪಮೆ'ಯೂ ಅಲ್ಲ. ಇದರಿಂದ ಕವಿಯು ಉದ್ದಿಷ್ಟ ಹಾಗೂ ನಿರ್ದಿಷ್ಟವಾದ ಒಂದು ಮನೋಭಾವ [Mood] ಉಂಟಾಗುವಂತಿದೆ,–ಒಂದು ವಿಶಿಷ್ಟ ಭಾವನೆಯ ಉದ್ರೇಕಕ್ಕೆ ಅಂದರೆ ಸರಳ ಮಾತಿನಲ್ಲಿ ಇಲಿಯಟ್‌ನ ಮತದಂತೆ ಭಾಷೆಯು ಕವಿಯ ಮಾತಿನ ಹಿಂದಿನ, ಮುಂಚಿನ ಮನೋಗತಕ್ಕೆ ಪ್ರತಿರೂಪ ಕೊಡುವ ವಸ್ತು ಅಥವಾ ವಸ್ತುರೂಪ ಸೂಚಿಸುವ ಮಾತು.

ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿಯೂ ಟಿ. ಎಸ್. ಇಲಿಯಟ್‌ನ ಕೃಷಿ ಹಿರಿದಾದ್ದು. ಕೆಲವು ಅಭಿಜಾತ [Classical] ಗ್ರಂಥಕರ್ತರ ಕುರಿತು ಆತ ಆಳವಾದ ವ್ಯಾಸಂಗ ಮತ್ತು ಮರು ಮೌಲ್ಯಮಾಪನವೆಸಗಿದನು. ಆಧುನಿಕ ಪ್ರಪಂಚಕ್ಕೆ, ತನ್ನ ಅಭಿರುಚಿಗೆ ಮತ್ತು ವೈಚಾರಿಕ ವೃತ್ತಿಗೆ ಅನಿವಾರ್ಯವೆನಿಸುವ ಮೌಲಿಕ ಪ್ರತಿಪಾದನೆ

ಅವನದು. ಇಂಗ್ಲಿಷಿನಲ್ಲಿ ಶೇಕ್ಸಪಿಯರನ ಕುರಿತು ಇಲಿಯಟ್‌ನ ವಿಮರ್ಶೆ ತುಂಬ ಉದ್ಬೋಧಕ. ಆತ ಮಹಾಕವಿ ಮಿಲ್ಟನ್‌ನ ವಿರುದ್ಧ ವಿಮರ್ಶಿಸಿದನು. ಆ ಕಾಲದ ಉಪೇಕ್ಷಿತ 'ಡನ್' ಕವಿಯನ್ನು ಎತ್ತಿಹಿಡಿದನು. ಡ್ರೈಡನ ಕವಿಯನ್ನು ಮನ್ನಿಸಿದನು. ಹಾಗೆಯೇ ಫ್ರೆಂಚಕವಿ ಬೊದಲೇರ್ [Baudelaire] ಮತ್ತು ಅಲ್ಲಿಯ Symbolist ಕಾವ್ಯ ಪಂಥವನ್ನು ಪ್ರಚುರಗೊಳಿಸಿದನು. ದಾಂತೆ [Dante] ಕವಿಯ ಪುನರ್ವಿಮರ್ಶೆ ಮಾಡಿದನು. ನಾಟಕ ರಂಗದಲ್ಲಿ ಕಾವ್ಯ ರೂಪಕವನ್ನು ಪುನಃ ಸ್ಥಾಪಿಸಿದನು.

ತನ್ನ ಮೂರುದಶಕಗಳ ಸಾಹಿತ್ಯಿಕ ಯುಗದಲ್ಲಿ ೫೦೦ ಕ್ಕೂ ಮಿಕ್ಕಿ ವಿಮರ್ಶಾ ಪ್ರಬಂಧಗಳನ್ನು ಪ್ರಕಟಿಸಿದ ಇಲಿಯಟ್ ಅದನ್ನಷ್ಟೇ ಮಾಡಿದ್ದರೂ ಅಮರ ನಾಗುತ್ತಿದ್ದನು. ಪ್ರಬಂಧ, ಸಮೀಕ್ಷೆ, ಭಾಷಣ, ಬಾನುಲಿ ಸಂದರ್ಶನ,–ಎಂದು ಮುಂತಾಗಿ ಗದ್ಯಲೋಕವನ್ನೂ ಈ ಹಿರಿಯ ಕವಿ ಗೆದ್ದು ಗರಿಮೆಯನ್ನು ಗಳಿಸಿದನು. ಇಲಿಯಟ್ ಆಗಿಹೋದ ಮೇಲೆ ಆಂಗ್ಲ,–ಅಲ್ಲ ಪ್ರಪಂಚದ–ಸಾಹಿತ್ಯ ಕಾವ್ಯ ಹಿಂದಿನಂತೆ ಉಳಿಯಲಿಲ್ಲ.

ಅವನ ವಿಮರ್ಶಾಗ್ರಂಥಗಳು ಇಂತಿವೆ : 'ಎಲಿಝಾಬೆಥನ ಪ್ರಬಂಧಗಳು' (೧೯೩೪), ಪ್ರಬಂಧಗಳು–'ಪ್ರಾಚೀನ ಮತ್ತು ಅರ್ವಾಚೀನ' (೧೯೩೬) 'ಕಾವ್ಯದ ಮತ್ತು ವಿಮರ್ಶೆಯ ಉಪಯೋಗ' (೧೯೩೩) 'ಆಫ್ಟರ್ ಸ್ಟ್ರೇಂಜ ನೋಡ್ಸ' (ಅದೇ ವರ್ಷ) 'ಕ್ರಿಶ್ಚನ್ ಸಮಾಜದ ಪರಿಕಲ್ಪನೆ' (೧೯೩೯). 'ಸಂಸ್ಕೃತಿಯ ವ್ಯಾಖ್ಯೆ'–ಟಿಪ್ಪಣಿಗಳು (೧೯೪೯). ಈ ಕವಿವರ್ಯನಿಗೆ ೧೯೪೮ ರ ನೊಬೆಲ್ ಬಹುಮಾನ ದೊರೆಯಿತು.

ಟಿ. ಎಸ್. ಇಲಿಯಟ್‌ನ ಕಾವ್ಯೋದ್ಯೋಗ ಗಾತ್ರದಲ್ಲಿ ಸಣ್ಣದು. ಆದರೆ ಗುಣಗೌರವದಲ್ಲಿ ? ಅಲ್ಪದಲ್ಲಿಯೂ ಅದು ಭೌಮವನ್ನು, ಮಹತ್ತಿನಿಂದಲೇ ಬೃಹತ್ತನ್ನುಗಳಿಸಿತು. ಅವನ ಕಾವ್ಯದ ಆರಂಭ ದುಃಖವಾದಿ ಮತ್ತು ನಿರಾಶೆ–ಭ್ರಮನಿರಶನಗಳ ದನಿ ಮೊಳಗಿಸಿತು. Waste Land ಅದರ ಸ್ಮಾರಕ. ಅಸ್ಪಷ್ಟ ಅರ್ಥಶೂನ್ಯ ಬಂಜೆಲೋಕದ ಆರ್ತ ಧ್ವನಿ. ಆದರೆ ಮುಂದೆ Four Quartets ದೈವೀಶ್ರದ್ಧೆಯನ್ನು ಚಿಮ್ಮಿಸಿತು.

ಟಿ. ಎಸ್ ಇಲಿಯಟ್‌ನ Waste Land ೧೯೨೨ ರಲ್ಲಿ ಹೊರಬಂತು. ಇಂಗ್ಲಿಷ ಮಾತ್ರವಲ್ಲ ಪ್ರಪಂಚದ ಆಧುನಿಕ ಯುಗಕ್ಕೆ ಇದೊಂದು ನಾಂದಿ. ಯುಗ

ಪ್ರವರ್ತಕ ಘಟನೆ. ಕಾವ್ಯದಲ್ಲಿ ಹೊಸಯುಗದ ಹಣೆಬರಹವನ್ನೇ ಬರೆಯಿತು. ಇದೊಂದು ಸುದೀರ್ಘ ಕಾವ್ಯ, ೪೦೩ ಸಾಲುಗಳ ನಿರೂಪಣೆ. ಇದಕ್ಕೆ ಕೆಲವು ಪುಟಗಳ ತುಂಬ ಟಿಪ್ಪಣಿಗಳೂ ಇವೆ. ನಮ್ಮ ಕಾಲದ ಕಾವ್ಯದಲ್ಲಿ ಇದಕ್ಕೆ ಒಂದು ವಿಶೇಷವಾದ, ವಿಶಿಷ್ಟವಾದ ಸ್ಥಾನ-ಮಾನ ಬಂದಿದೆ. ಇದಕ್ಕೆ ಒಂದು ಕಾರಣ. ಈ ಕಾವ್ಯದ ಕಲ್ಪನಾ ವೈಖರಿಯ ಶಕ್ತಿ ಅನೇಕ ಪುರಾಣದಂತಕತೆಗಳಿಂದ, ಉದಂತಗಳಿಂದ ಪಡೆದ ಮಾರ್ಮಿಕ ಅಂಶಗಳು. ಒಂದು ದೀರ್ಘಕಾವ್ಯ ಸಂಪ್ರದಾಯವನ್ನು ಜೀರ್ಣಿಸಿಕೊಂಡ ನೈಜಸತ್ವ, ಅಲ್ಲದೆ ಈ ಕುರಿತ ವಿವರವಾದ ಟೀಕೆ-ಭಾಷ್ಯ. ಅದೇನೋ ಪ್ರಾಚೀನ ಗ್ರಂಥವಿದ್ದು, ಅದರ ವಿವರಣೆ-ವ್ಯಾಖ್ಯಾನಗಳು ಆಧುನಿಕ ಓದುಗರಿಗೆ ಮಾಡಿಕೊಡಬೇಕೆಂಬ ವ್ಯವಧಾನ-ಇವೆಲ್ಲವೂ ಕೂಡಿ ಈ 'ಪಡಭೂಮಿ' ('ಹಾಳುಬಿದ್ದ ಭೂಮಿ') ಗೆ ನಮ್ಮ ಜಾಯಮಾನದ ಕಾವ್ಯದ ಇತಿಹಾಸವಲ್ಲಿ ಅತೀ ಫಲವತ್ತಾದ ಬೆಳೆ-ಬೆಲೆಗಳು ಬೆಳೆದು ಬಂದವು.

ಇಂದಂತು ನಮ್ಮ ಜಗತ್ತು ಅಕ್ಷರಶಃ ಹಾಳು ಬೀಳುತ್ತ ಬಂಜೆ ಆಗುತ್ತಿದೆ-ಪರಿಸರದ ಪ್ರದೂಷಣದಿಂದ, ಭ್ರಷ್ಟಾಚಾರದ ಪ್ರಸಾರದಿಂದ, ಸಜೀವ ಪ್ರಪಂಚ-ಪರಿಸರಗಳ ಅಸ್ತವ್ಯಸ್ತ ಏರು-ಪೇರುಗಳಿಂದ. ಇದರಿಂದ ಇಲಿಯಟ್ ಇಂದಿನ ಪ್ರಪಂಚದ ಕುರಿತು ಒಂದು 'ಭವಿಷೋತ್ತರ ಪುರಾಣ'ವನ್ನೇ ಬರೆದಂತಿದೆ! ಇಲ್ಲಿ ನಮಗಾಗಿ ಹೊಸ ಹೂರಣ ಹೊಸ ಹುರುಳು ತುಂಬಿವೆ.

'ವೇಸ್ಟ ಲಾಂಡ' ಕಾವ್ಯಕ್ಕೆ ೫ ಭಾಗಗಳು ಮೊದಲನೆಯದು 'ಸತ್ತವರ ಸಮಾಧಿ' [The Burial of the Dead] ಇಲ್ಲಿ ಇಲಿಯಟ್ ಬಣ್ಣಿಸುವದು, ವಸಂತದ ಆಗಮದೊಂದಿಗೆ ಉಂಟಾಗುವ ಜೀವ-ಜೀವನದ ಸ್ಪಂದನ. ಆಗ ಚಳಿಗಾಲದ ಬಂಜರ ಸ್ಥಿತಿಯಿಂದ ಮೇಲ್ಬಂದು ಫಲವತ್ತತೆಯು ವ್ಯಾಪಿಸುತ್ತದೆ. ನಂತರ ಬರುವುದು 'ಚದುರಂಗದಾಟ'. ['The Game of chess'] ಇದರಲ್ಲಿ ಪ್ರಾಚೀನ ಇಜಿಪ್ತದ ರಾಣಿ ಕ್ಲಿಯೊಪಾತ್ರಾಳ ಸಡಗರದ ವೈಭವಕ್ಕೆ ವಿರುದ್ಧವಾಗಿ ಇಂದಿನ ಅಸ್ವಸ್ಥತೆ ಮತ್ತು ವಿಷಣ್ಣತೆಗಳ ಚಿತ್ರಣ ಬರುತ್ತದೆ. ಆಮೇಲೆ: ಮುಂದಿನದು, 'ಅಗ್ನಿಪ್ರವಚನ' [ The Fire Sermon ]. ಇದು ನಗರ-ಶಹರಗಳ ಕುರೂಪ ವಿದ್ರೂಪತೆ ಮತ್ತು ಇಂದಿನ ಬದುಕಿನ ಹಾಗೂ ಭಾವನೆಗಳ ಯಾಂತ್ರೀಕರಣದ ಒರಟು-ಕಡು ನಂತರದ್ದು 'ಜಲಮರಣ' ['The Death by Water']. ಇದರ ಕಾವ್ಯಮಯ ಭಾವಗೀತೆಯಲ್ಲಿ ನೀರು ಮುಳುಗಿಸುವಂತೆ ತನ್ನ ಅರಬಿ ನಿಂದಲೂ ಕೊಲ್ಲಬಲ್ಲದು-ಎಂದು ಸೂಚಿಸುತ್ತದೆ ಮತ್ತು ಕೊನೆಯ ಭಾಗವು 'ಗುಡುಗು ಅಂದದ್ದು' ('What the Thunder said') ಇದು ಅರಬಿನ,

ನೀರಿಲ್ಲದ ದಾಹ. ಆಧುನಿಕ ಬದುಕಿನ ಹ್ರಾಸ ಮತ್ತು ಶೂನ್ಯತೆ-ಬರಿದಾದ ಹರಡೆ-ಹೌದಗಳಿಂದ, ಬತ್ತಿದ ಬಾವಿಗಳಿಂದ ಹೊರಹೊಮ್ಮುವ ಹಾಡಿನ ದನಿಗಳು. [ 'Voices Singing out of Empty Cisterns and Exhausted Wells' ].

ಈ ದೀರ್ಘ ಕವನವು ೧೯೨೦ ರ ಪಾಶ್ಚಾತ್ಯ ಹವಾಮಾನಕ್ಕೆ ಕೂಡಲೇ ಹಿಡಿಸಿತು. ಒಣ ಆರಬಿನ, ಬಲುಮಟ್ಟಿನ ಈ ಚಿತ್ರಣವು ೧ ನೆಯ ಮಹಾಯುದ್ಧದ ನಂತರದ ಮುಸುಕಿದ ಮಬ್ಬಿನ ಮನೋವೃತ್ತಿಯನ್ನು ಚೆನ್ನಾಗಿಯೇ ಪ್ರತಿಬಿಂಬಿಸಿತು. ಇದರಲ್ಲಿ ಕವಿಯ ವೈಯಕ್ತಿಕ ವಿಷಣ್ಣತೆಯ ಬಿಂಬವೂ ಮೂಡಿತ್ತು. ಈ ಪ್ರಭಾವಿಯಾದ ಕಾವ್ಯದಲ್ಲಿ ಎದೆತಟ್ಟುವ ಲಕ್ಷಣಗಳೂ ಇದ್ದವು : ಅನೇಕ ಲೇಖಕರಿಂದ ಆಯ್ದುಕೊಂಡ ವಿವಿಧ ಛಂದೋಲಯಗಳು, ವೃತ್ತಗಳು, ಪುರಾಖ್ಯಾನ [Legends] ಗಳ ವಸ್ತು ದ್ರವ್ಯಗಳು, ಯೇಸುವನ್ನು ಸಿಲುಬೆಗೇರಿಸಿದಾಗ ಅವನಿಂದ ಬಸಿದ ರಕ್ತವನ್ನು ಹಿಡಿದಿಟ್ಟ ಪಾತ್ರೆ, ಅವನ ಕೊನೆಯ ಊಟದಲ್ಲಿಯೂ ಈ ಪಾತ್ರೆಯಿಂದ ಆತ ಮದ್ಯಕುಡಿದಿದ್ದ. ಹೋಲಿಗ್ರೇಟ ಮತ್ತು ಫ್ರೇಝರನ ಸಂಸ್ಮರಣೀಯ ಮಾನವಶಾಸ್ತ್ರೀಯ ಗ್ರಂಥ 'The Golden Bough'.

ಇಲಿಯಟನು ಈ ಕಾವ್ಯದಲ್ಲಿ ಒಂದು ಗ್ರೀಕ ದುರಂತ ಆಖ್ಯಾನದ ಕುರುಡ ಪಾತ್ರ Tiresias ವನ್ನೂ ತಂದಿದ್ದಾನೆ. ಕವಿಯ ಅಭಿಪ್ರಾಯದಂತೆ ಆತ ಕಾವ್ಯದ ಕೇಂದ್ರ ಪ್ರಜ್ಞೆ.–ಈತ ಆ ಕಾವ್ಯದಲ್ಲಿ ಅತಿಮಹತ್ವದ ವ್ಯಕ್ತಿ. ಉಳಿದುದೆಲ್ಲವನ್ನೂ ಒಟ್ಟುಗೂಡಿಸುವ ಪಾತ್ರ ಎಂದು ಇಲಿಯಟನ ಅಂಬೋಣ.

ಈ ಇಡಿಯ ಕಾವ್ಯದ ಕೀಲದ ಪ್ರತಿಮೆ ಒಂದು ಚೇತನ [ Sterility ]. ಇಡಿಯ ಕಾವ್ಯಾಂಗಗಳಲ್ಲಿ ನೀರಿನ ಬರಗಾಲದ, ವಿಘಟನೆಯ, ಒಣಗಿನ, ಅಳಿಗಾಲದ, ಹ್ರಾಸದ ಪ್ರತಿಮೆಗಳು,–ಧೂಳಿತುಂಬಿದ ಪುರಗಳು, ರಾಡಿ ತುಂಬಿದ ಓಣಿಗಳು. ಮರುಭೂಮಿಯ ಬಂಡೆಗಳು, ಒಣಗಿಬಿದ್ದ ಎಲುಬುಗಳು, ಬರಿದಾದ ಕೊಡ–ಕೆರೆಗಳು, ಬತ್ತಿಹೋದ ಬಾವಿಗಳು. ನೀರು ಬರವನ್ನು ನೀಗಿಸುತ್ತದೆ. ಆದರೂ ನಾಶವನ್ನು ತರುತ್ತದೆ. ಬೆಂಕಿ ನಾಶಮಾಡುತ್ತದೆ. ಆದರೂ ಶುದ್ಧಮಾಡುತ್ತದೆ. ಕವಿ ಇಲಿಯಟ್ ಇಲ್ಲಿ ಸಾರ್ವತ್ರಿಕ ಪ್ರತಿಮೆಗಳನ್ನು, ಪ್ರತೀಕಗಳನ್ನು–ಹವೆ, ಭೂಮಿ, ಬೆಂಕಿ, ನೀರು–ಇದನ್ನೆಲ್ಲ ಇಲ್ಲಿ ಉತ್ತೇಜಿಸುವದು ಪ್ರಪಂಚದ ಬಂಜೆತನವನ್ನು ಚೇತರಿಸಲು. ಇದರಿಂದ ಇಲಿಯಟ್ ಚೇತರಿಸುವಂತೆ ಮಾಡುವುದು, 'ಚೇತನದ ಚೆಲುವ'ನಲ್ಲ, ಇಂದಿನ ಜನಾಂಗದ ಜಡಬದಿರ ಪ್ರಜ್ಞೆಯನ್ನು. ಇಂದು ಜನಾಂಗ ನಿದ್ದೆಯಲ್ಲಿ ಅರೆಮರೆವಿನಲ್ಲಿ ನಡೆನುಡಿ ದಾಟುವಂತೆ ಬದುಕುತ್ತಿದೆ.

ಗೊಂಬೆಯಾಟದ ಪುತ್ಥಳಿಗಳಂತೆ ಚಟುವಟಿಕೆಗೊಳ್ಳುತ್ತಿರುವದು. ಪ್ರೀತಿ ದ್ವೇಷ ಗಳನ್ನು ಮಾಡುತ್ತಿರುವರು. ಈ ವಾಡಿಕೆಯಿಂದ, ಕೃತಕ ವಹಿವಾಟಿನಿಂದ ಅವರನ್ನು ಒಡಿದೆಬ್ಬಿಸಿ, ಅವರು ಆಧುನಿಕ ನಗರಗಳ ಕರಾಳ ನೆರಳಿನಿಂದ ಹೊರಬರುವಂತೆ, ಕಣ್ಣು ತೆರೆಯುವಂತೆ ಮಾಡಲು ಇಲಿಯಟ್ ಈ ಕಾವ್ಯದ ಅಮೃತಾಂಜನವನ್ನು ನಮ್ಮ ಕಣ್ಣುಗಳಿಗೆ ಉಜ್ಜಿದನು. ಇದಕ್ಕಾಗಿ ಆತ ತನ್ನ ಕೃತಿಯ ಹಿನ್ನಲೆಯನ್ನು ಸನ್ನಿವೇಶವನ್ನು ಒಮ್ಮೆ ವರ್ತಮಾನಕ್ಕೆ, ಒಮ್ಮೆ ಭೂತಕ್ಕೆ ಬದಲಿಸುತ್ತ ಭವಿಷ್ಯ ದಲ್ಲಿಯೂ ಭೂತವನ್ನು ಗುರುತಿಸುತ್ತ ಆರಂಭದಲ್ಲಿಯೂ ಕೊನೆಯನ್ನು ಪರಿಕಿಸುತ್ತ ನಡೆಯುತ್ತಾನೆ.

Waste Land ಕಾವ್ಯಕ್ಕೆ ಉದ್ವೇಗವೇ ಉದ್ದೇಶ. ಆವೇಗವೇ ಆವೇಶ. ಇದು ಲಲಿತ ಮಧುರ ಕವನವಲ್ಲ. ಕಾವ್ಯದಲ್ಲಿ ಸಂದಿಗ್ಧವಿದೆ. ವಿದಗ್ಧತೆ ತುಂಬಿದೆ. ದುರೂಹತೆ ಇದೆ. ಗಡಚುಗಳಿವೆ. ಗಂಟುಗಳಿವೆ. ಆದಾಗ್ಯೂ ಈ ಕಾವ್ಯವು ಓದುಗನಲ್ಲಿ ಒಂದು ಗಂಭೀರ ಅಂತರ್ಮುಖಿಯಾದ ಮನೋವೃತ್ತಿಯನ್ನುಂಟು ಮಾಡುತ್ತದೆ. ಒಂದು ಗಮನಾರ್ಹವಾದ ಬಿಗಿತ-ಸೆಳೆತವನ್ನೂ ಹುಟ್ಟಿಸುತ್ತದೆ. ಇಲ್ಲಿಯ ಪಾಂಡಿತ್ಯದಲ್ಲಿಯೂ ಒಂದು ವ್ಯಂಗ್ಯದನಿ ಆಡುತ್ತದೆ. ಅವನ ಪೂರ್ತಿ ಅರ್ಥಹೊಳೆಯದಿದ್ದರೂ ಅದರ ಛಾಯೆಗಳಲ್ಲಿ ಒಂದು ಆಳವಾದ ಭಾವಾವೇಶಕ್ಕೆ ನಾವು ಒಳಗಾಗದೆ ಇರುವುದಿಲ್ಲ. ಈ ಕೃತಿಯ ಹಸ್ತಪ್ರತಿ ಕಾಣೆಯಾಗಿದೆಯೆಂದು ಭಾವಿಸಲಾಗಿತ್ತು. ಆದರೆ ಅದು ನ್ಯೂಯಾರ್ಕ ಪಬ್ಲಿಕ್ ಲೈಬ್ರರಿಯಲ್ಲಿದೆ,- ಬರ್ಗ‌ಕಲೆಕ್ಶನ್ ಎಂಬ ವಿಭಾಗವಲ್ಲಿ. ಅದರಲ್ಲಿ ಅಲ್ಲಲ್ಲಿ ಟಿಪ್ಪಣಿಗಳಿವೆ. ಅದನ್ನು ಸಂಪಾದಿಸಿದ ಕವಿ ಎರ್‌ಝ್ರಾ ಪೌಂಡನ ತಿದ್ದುಪಡಿಗಳೂ ಇವೆ. ●

# ಒಡೆನ್ ವಿಸ್ಟಾನ ಹ್ಯೂ

W. H. Auden ಇಂಗ್ಲಿಷ ಕವಿ. ಉತ್ತರ ಜೀವನದಲ್ಲಿ ಅಮೇರಿಕೆಯ ನಾಗರಿಕನಾದವನು. ಒಡೆನ್ ಟಿ. ಎಸ್. ಇಲಿಯಟ್ ಕವಿಯ ನಂತರದ ಮಹತ್ವದ ಕವಿ. ಇವನು ಹುಟ್ಟಿದ್ದು ೧೯೦೭ರಲ್ಲಿ. ಇಲ್ಲಿ ಇಲಿಯಟ್‌ನ 'ನಂತರ'ದ ಕವಿಯೆಂದರೇನು ? ಈ 'ನಂತರ' ಇಲಿಯಟ್‌ನಿಗೆ ಎಷ್ಟು ಹತ್ತಿರ ? ಈ ನಂತರದ ಮಹತ್ವವೆಷ್ಟು ? ಈ ಪ್ರಶ್ನೆಗೆ ಉತ್ತರ ಒಂದೇ ಬಗೆಯಾಗಿಲ್ಲ. ಇಲಿಯಟ್‌ನ Waste Land ನಂತೆ ಒಡೆನ್‌ನ ಒಂದು ಮೇರುಕೃತಿ ಯಾವದೆಂಬುದು ಖಚಿತವಿಲ್ಲ. ಅವನ ಕವನಗಳ ಬಗೆಗೂ ಯಾವುದು ಹೆಚ್ಚು ಯಶಸ್ವಿಯೆಂಬುದರ ಕುರಿತು ನಿಶ್ಚಿತ ಅಭಿಪ್ರಾಯವಿಲ್ಲ. ಅವುಗಳ ಸ್ವರೂಪವೂ ಇಂತಹದೇ ಎಂದು ಹೇಳುವಂತೆ ಇಲ್ಲ. ಕೆಲವರು ಒಡೆನ್ ಕಾವ್ಯದಲ್ಲಿ ಪಿಕಾಸೋನಂತೆ ಅಂದರು.

ಒಡೆನ್ ಮುಖ್ಯವಾಗಿ ವಿಚಾರಗಳ, ಅಭಿಪ್ರಾಯಗಳ ಕವಿ. ಪ್ರಾಥಮಿಕವಾಗಿ ಈತ ವ್ಯಂಗ್ಯ (Satire) ಲೇಖಕ. ಅವನ ಕಾವ್ಯ ಮೂಲತಃ ರಮ್ಯ-ರೊಮ್ಯಾಂಟಿಕ್. ಲಘು ಕವನದಲ್ಲಿ ಈತ ಹೆಚ್ಚು ಯಶಸ್ವಿ. ಇದಕ್ಕೆ ಒಂದು ಕಾರಣ ಅವನ ಮನೋಭೂಮಿಕೆ ಒಂದೇ ಹದ ಒಂದೇ ವಿಧವಾಗಿಲ್ಲ. ೩೦ ವರ್ಷಗಳಲ್ಲಿ ಅವನ ಮನೋವೃತ್ತಿ ಮನೋಗತಗಳು ಹಲವು ಅವಸ್ಥೆಗಳಲ್ಲಿ ಹಾಯ್ದು ಬಂದವು. ಅವುಗಳಿಗೆಲ್ಲ ಆತ ತಾತ್ಕಾಲಿಕವಾಗಿಯೇ ತೀವ್ರವಾಗಿ ಸ್ಪಂದಿಸುತ್ತ ಬಂದಿದ್ದಾನೆ. ಅವನ ಕೃತಿಗಳಲ್ಲಿ ಅದೆಷ್ಟೋ ಸಮಕಾಲೀನರೂ ನೇರವಾಗಿ ವೈಯಕ್ತಿಕವಾಗಿ ತೊಡಗಿಸಿಕೊಂಡಿರುವಂತೆ ಕಾಣುತ್ತದೆ. ಅವರಿಗೇ ಹಾಗೆ ಅನಿಸಿದೆ. ಈ ಬಗೆಯ ಪ್ರಸ್ತುತ ತೊಡಗುವಿಕೆ ಒಂದು ಬಗೆಯ ಸುಟಿಯಾದರೂ ಸಂದಿಗ್ಧವಾದ ಸ್ವಾರಸ್ಯವನ್ನು ಕೊಡಬಹುದು. ಆದರೆ ಮುಂದೆ ಅದು ಅವಧಿಬಾಹಿರವಾಗುತ್ತದೆ. ಗಾಳಿಮಾತಿನಂತೆ ಅನಿಸುತ್ತದೆ, ಮಹತ್ವವನ್ನೂ ಕಳೆದುಕೊಂಡು. ೩೦ ರ ದಶಕದ ಕಟ್ಟುಪಾಡು ಕಾಳಜಿಗಳ ಬಗೆಗೆ ಇಂದಿನ ಹರೆಯದ ಓದುಗರಿಗೆ ಸ್ವಾರಸ್ಯ ಉಳಿದಿಲ್ಲ. ಬೇಸಗವೂ ಬೋರುಗೊಳಿಸುತ್ತದೆ. ಏಕಂದರೆ ಅಂಥ ವಿಷಯಗಳು ಕಾವ್ಯಕ್ಕೆ ತಕ್ಕವಸ್ತುಗಳಾಗುವದಿಲ್ಲ. ಎಷ್ಟೇ ರೋಚಕವಿದ್ದರೂ ಅವು ತಾತ್ಕಾಲಿಕ ಕರಪತ್ರಗಳಿಗೆ ಖಾದ್ಯವಾಗಬಲ್ಲ ಮಹತ್ವದವು.

ಒಡೆನ್‌ನ ಕಾವ್ಯದಿಂದ ಪತ್ರಿಕೋದ್ಯಮಕ್ಕೆ ಒಪ್ಪಬಹುದಾದ ಅಂಶಗಳನ್ನು ವಿಂಗಡಿಸುವದೂ ಅಷ್ಟು ಸಲೀಸಾಗಿಲ್ಲ. ಈ ಸಮಸ್ಯೆಯೊಂದಿಗೆ ಅವನ ನಂಬಿಕೆಗಳೂ,-ನೈತಿಕ, ರಾಜಕೀಯ, ಧಾರ್ಮಿಕ ಹಾಗೂ ಮನೋವಿಜ್ಞಾನದ ಪ್ರಶ್ನೆಗಳೂ

ಹೊಂದಿಕೊಂಡಿವೆ. ಅಲ್ಲದೆ ತಾಂತ್ರಿಕ ಪಾತಳಿಯಲ್ಲಿಯೂ ಈ ಕವಿಯು ಯಾವಾಗಲೂ ಹೊಸಹೊಸ ಕವನ, ರೂಪಕಗಳ ಮತ್ತು ರೀತಿಗಳ ಪ್ರಯೋಗಗಳಲ್ಲಿಯೂ ತೊಡಗಿರುವಾತನು. ಅಲ್ಲದೆ ವಿಮರ್ಶಕನಿಗೆ ಗೊಂದಲಗೊಳಿಸುವ ಸಾರಭೂತವಾದ ಸಂಗತಿಯೆಂದರೆ ಈ ಕವಿಯಲ್ಲಿ ಉದ್ದಕ್ಕೂ ಅಂಟಿಕೊಂಡಿರುವ ಒಂದು ವಿಶೇಷವಾದ ಆಳವಾದ ಅಸಮಾನತೆ ಮತ್ತು ಪಾತಳಿಯ ತಾರತಮ್ಯ. ಇದು ಆ ಕವಿಯ ಎಲ್ಲ ವಿಚಾರ, ವಸ್ತು, ವಿಷಯ, ಒಟ್ಟೊ ಒಲವುಗಳನ್ನು ಭೇದಿಸುವಂತಿದೆ.

W. H. ಒಡೆನ್ ಆಕ್ಸ್‌ಫರ್ಡಿನಲ್ಲಿ ಶಿಕ್ಷಣ ಪಡೆದನು. ಅಲ್ಲಿ ಆತ ಸಾಹಿತ್ಯಿಕ ಆಸಕ್ತಿಗಳ ವಿಸ್ತಾರವನ್ನು ಆಳವಾಗಿ ಪಡೆದನು; ಬೆಳೆಸಿಕೊಂಡನು. ಅವುಗಳಲ್ಲಿ ಗ್ರೀಕ್ ಸಾಹಿತ್ಯದ ಒಲವು ಮುಖ್ಯ. ಹಳೆಯ ಇಂಗ್ಲಿಷ ಕಾವ್ಯ, ಐಸಲ್ಯಾಂಡಿನ ಜಾನಪದಗಾಥೆಗಳು–ಇವೆಲ್ಲ ಅವನ ಬರಹವನ್ನು ಪ್ರಭಾವಿತಗೊಳಿಸಿದವು. ೧೯೩೭ರಲ್ಲಿ ಒಡೆನ್ ಸ್ಪೇನಿಗೆ ಹೋದನು. ಅಲ್ಲಿ ನಡೆಯುತ್ತಿದ್ದ ಪ್ರಜಾವಾದಿ ಹೋರಾಟದಲ್ಲಿ ಫ್ರಾಂಕೋನ ವಿರುದ್ಧ ಎಡಪಕ್ಷದ ಬೆಂಬಲಕ್ಕೆ ಹೋರಿದನು. ಇವರು ಆಗ ಸರಕಾರಕ್ಕೆ ನಿಷ್ಠರಾಗಿದ್ದರು. ೧೯೩೯ರಲ್ಲಿ ಅವನು ಇಂಗ್ಲಂಡನ್ನು ಬಿಟ್ಟು ಅಮೇರಿಕೆಯ ನಾಗರಿಕನಾದನು. ಅಲ್ಲಿ ಈತ ಹಲವಾರು ವಿದ್ಯಾಪೀಠಗಳಲ್ಲಿ ಕಲಿಸಿದನು. ಅಲ್ಲಿಂದ ೧೯೫೬–೬೧ರ ಅವಧಿಯಲ್ಲಿ ಒಡೆನ್ ಆಕ್ಸ್‌ಫರ್ಡಿಗೆ ಮರಳಿದನು. ಮುಂದೆ ಅಲ್ಲಿಯೇ ಮನೆ ಮಾಡಿದನು.

ಅವನ ಆರಂಭದ ಕಾವ್ಯವು ಸಾಮಾಜಿಕ ಮತ್ತು ವೈಯಕ್ತಿಕ ಸಮಸ್ಯೆಗಳಿಗೆ ಒತ್ತು ನೀಡಿದೆ. ಆದರೆ ಮುಂದೆ ಆತ ಮಾರ್ಕ್ಸ್ ಮತ್ತು ಫ್ರಾಯ್ಡನ ಬಗೆಗೆ ಭ್ರಮನಿರಸನ ಮಾಡಿಕೊಂಡನು. (ಇವರಿಬ್ಬರೇ ಅವನ ಆರಂಭದ ನಿರ್ದೇಶಕರಾಗಿದ್ದರು.) ಒಡೆನ್‌ನ ಅನಂತರದ ಕಾವ್ಯ ಸಾರತಃ ತುಸು ವಿಚಿಕಿತ್ಸಿಕ. ಸಂಶಯಾತ್ಮಕ ಮತ್ತು ವ್ಯಂಗ್ಯವಾಗುತ್ತದೆ. ಕೆಲಸಲ ಅದು ಅರೆಧಾರ್ಮಿಕ ಶ್ರದ್ಧೆಯ ದನಿಯನ್ನು ಪ್ರಕಟಿಸುತ್ತದೆ.

ಆಧುನಿಕ ಲೇಖಕರಲ್ಲಿ ಒಡೆನ್‌ಬಹುಮುಖ ಪ್ರತಿಭೆಯ ಬಹುಬುದ್ಧಿವಂತ ಚುರುಕು ಕವಿ. ಕವನ ಸಂಕಲನಗಳು, ಕಾವ್ಯಸಂಗ್ರಹಗಳ ಸಂಪಾದನೆ, ಸಿನೇಮಾಚಿತ್ರಕತೆ ಇತ್ಯಾದಿಗಳೊಂದಿಗೆ ನಾಟಕಗಳನ್ನೂ, ಸಾಮಾಜಿಕ ವಿಮರ್ಶೆಗಳನ್ನೂ, ಪ್ರವಾಸ ಕಥನಗಳನ್ನೂ, ಯುದ್ಧವೃತ್ತಗಳನ್ನೂ ಅಲ್ಲದೇ ವ್ಯಂಗ್ಯ ಮತ್ತು ರಮ್ಯ ಭಾವಗೀತಗಳನ್ನೂ ಬರೆದನು. ಒಡೆನ್‌ನ ನಿಜವಾದ ಮಹತ್ವ ಇರುವುದು ಅವನ ಕಾವ್ಯದಲ್ಲಿ. ಇದು ಟಿ. ಎಸ್. ಇಲಿಯಟ್‌ನ ಸಂಪ್ರದಾಯದ್ದು. ಆದರೆ ಇಲ್ಲಿಯೂ ಅಂಧಾನುಯಾಯಿತನವಿಲ್ಲ. ತನ್ನದೇ ಆದ ಕಟಾಕ್ಷವಿದೆ. (ಅದಿಲ್ಲದೆ ನವ್ಯವು ನವ್ಯವೇ ಅಲ್ಲ. ಆಧುನಿಕವೇ ಅಲ್ಲ !).

ಇಲ್ಲಿಯೂ ಒಡೆನ್ ಹೆಸರು ಹೇಳುವಷ್ಟು ಬಹುದಾಯುಕ ಅಂದರೆ ಸವ್ಯಸಾಚಿ ಪ್ರತಿಭೆ ತೋರಿದ್ದಾನೆ. ಅವನ ಕವನ ರೂಪಗಳೂ ಹಾಗೆಯೇ. ಸ್ವಚ್ಛಂದ ಮುಕ್ತ ಛಂದಸ್ಸಿನ ಕೃತಿಗಳು ಮಾತ್ರವಲ್ಲ, ಪ್ರಾಸಬದ್ಧ ವೃತ್ತಗಳ ಕಟ್ಟುನಿಟ್ಟು ಚರಣ. ಹಳೆಯ (ಜಾನಪದ), ಇಂಗ್ಲಿಷ ಪದ್ಯಗಳ ಸ್ವೈರವಾದ ಅನುಪ್ರಾಸಸರಣಿಯ ಕವನಗಳನ್ನು ಅವನು ವಿವಿಧವಾಗಿ ನಿರ್ಮಿಸಿದ್ದಾನೆ. ಅವನ ಕಾವ್ಯದ ಧ್ವನಿಯೂ ಬನಿಯೂ ಗಂಭೀರ, ಕಟುಉತ್ಸಾಹಿ, ಹಗುರೂ ಆಗಬಲ್ಲದು. ಅಲ್ಲದೆ ಈ ದನಿ ಪಲ್ಲಟ ಕೆಲಸಲ ಒಮ್ಮೆಲೆ ಆಕಸ್ಮಿಕ ಆಘಾತದ್ದೂ ಆಗಬಲ್ಲದು. ತಾಂತ್ರಿಕವಾಗಿ ಒಡೆನ್ ತುಂಬ ಅರಿವಿನ ಕಲಾವಿದ. ಇದುಸ್ತುತಿಯಾಗಿಯೊ ಮಿತಿಯಾಗಿಯೊ ಇವನ ಕುರಿತು ಸಲ್ಲುವ ಮಾತು.

ಡಬ್ಲ್ಯೂ. ಎಚ್. ಒಡೆನ್‌ನ ಮಹತ್ವದ ಕೃತಿಗಳೆಂದರೆ 'Poems' (೧೯೩೦), 'The Orators' (೧೯೩೨), 'For The Time being' (೧೯೪೫), 'The Age of Anxiety' (೧೯೪೭) ಮತ್ತು 'A Baroque Ecologue' (೧೯೪೮). ಇದು ಶ್ರದ್ಧೆಯಾಗಲಿ ಸಂಪ್ರದಾಯವಾಗಲಿ ಇಲ್ಲದ ಅವಸ್ಥೆಯಲ್ಲಿಯ ಮಾನವನ ಏಕಾಕೀ ಜೀವನ ಸ್ಥಿತಿಯ ವ್ಯಂಗ್ಯವಾದ ಕಿರಿಕವನ ರೂಪಕ (Idyll). ಇದಕ್ಕೆ ಪುಲಿಟ್ಝರ ಪಾರಿತೋಷಕವೂ ಬಂತು. ೧೯೭೨ ರಲ್ಲಿ ಆತ ಬರೆದದ್ದು 'In Epistle to a Godson and Other Poems.' ಇದರಲ್ಲಿ ಕವಿಯ ಉಗ್ರನಾವೀನ್ಯಕ್ಕೆ ಪೋಷಕವಾಗಿ ಒಂದು ಸೌಮ್ಯ ಶೀಲದ ಸಭ್ಯತೆಯೂ ಸೇರಿ ಕೊಂಡಿದೆ. ಕವಿಯು ಮುದಿಯಾಗುತ್ತಲೇ ಹಣ್ಣಾಗಿದ್ದಾನೆ. ಅವನ ವಿಮರ್ಶಾ ಲೇಖನಗಳ ಸಂಗ್ರಹವು, 'The Dyers hand' (೧೯೬೩) ಮತ್ತು 'A Certain World! A Common place Book' (೧೯೭೦). ಇದು ಅಷ್ಟು Common place ಸರ್ವೇಸಾಮಾನ್ಯವಲ್ಲ. ಇದು ಕವಿಯು ಅಲ್ಲಲ್ಲಿ ಟಿಪ್ಪಣಿ ಪಡೆದ ಆತ್ಮಕಥನ ಸಂಗ್ರಹ. ಅವನ ಮನೋಭೂಮಿಯ ನಕಾಶೆ.

ಆಧುನಿಕ ಕವಿಗೋತ್ರದಲ್ಲಿ ಒಡೆನ್‌ನ ಪ್ರವರ ಯೇಟ್ಸ ಇಲಿಯಟ್‌ರದು. ಆದರೂ ಕೆಲವು ವಿಮರ್ಶಕರ ಮತದಂತೆ ಒಡೆನ್ ಇವರೀರ್ವರಷ್ಟು ಮೂಲಗಾಮಿ, (Radical) ಅಲ್ಲ ಮತ್ತು ಅವರನ್ನು ಈತ ಹೋಲುವದಾದರೂ ಮೇಲ್ನೋಟದಲ್ಲಿ. ಇವನು ಕೆಲವು ನಾಟಕಗಳನ್ನು ಬರೆದನು. ಅವುಗಳಲ್ಲಿ ಮೂರು ಎಡಪಕ್ಷದವು. ಅವೂ ಕವನ ರೂಪದವು. ಅಲ್ಲದೆ ಬರೆದವನು ಒಬ್ಬನೇ ಅಲ್ಲ. ಒಡೆನ್ ಕ್ರಿಸ್ತಫರ್ ಇಶರ್‌ವುಡ್‌ನೊಂದಿಗೆ ಸೇರಿ ಬರೆದನು. ಇವರಿಬ್ಬರೂ ಮಾರ್ಕ್ಸವಾದಿಗಳಾಗಿದ್ದರು. ಆದರೆ ಮುಂದೆ ಕಿಸ್ತಫರ್ ಆಧ್ಯಾತ್ಮಕ್ಕೆ ಒಲಿದನು,-ಭಗವದ್ಗೀತೆಯನ್ನು ಓದಿ

ಪ್ರಭಾವಿತನಾಗಿ. ಆತ ಭಗವದ್ಗೀತೆಯನ್ನು ಇಂಗ್ಲಿಷಿನಲ್ಲಿ ಅನುವಾದವನ್ನೂ ಮಾಡಿದನು-೧೯೪೭ ರಲ್ಲಿ. (ಸ್ವಾಮಿ ಪ್ರಭವಾನಂದರ ನೆರವಿನಿಂದ).

ಇವರ ನಾಟ್ಯಕೃತಿಗಳು 'The Dog beneath the skin'(೧೯೩೫). ಇದಕ್ಕೂ ಹೆಚ್ಚು ನಾಟ್ಯಮಯಕೃತಿ 'The Ascent of F.6(೧೯೩೬) ಮತ್ತು 'On the Frontier' (೧೯೩೮). ಈ ನಾಟಕಗಳಲ್ಲಿ ಮಾರ್ಕ್ಸವಾದವಿದ್ದರೂ ನಾಟ್ಯರಂಗದ ಸಮಸ್ಯೆಗಳನ್ನು ಇದಿರಿಸುವ ವಿಶೇಷಯತ್ನವೇನೂ ಇರಲಿಲ್ಲ. ಆದರೆ ರಂಗ ಪ್ರದರ್ಶನದ ಸ್ವಾರಸ್ಯದ ಗುಣಗಳು ಇವುಗಳಲ್ಲಿ ಇದ್ದವು.

ಒಡೆನ್‌ನ ಮೊದಲನೆ ಕವನ ಸಂಕಲನವು ೧೯೩೦ರಲ್ಲಿ ಹೊರಬಂತು ಮತ್ತು ಕೂಡಲೇ ಪರಿಣಾಮಮಾಡಿತು. ಇಲ್ಲಿ ಪ್ರಕಟವಾದ ಹೊಸಪ್ರತಿಭೆ ಪ್ರಶ್ನಾತೀತವಾಗಿತ್ತು. ಆಂತರಿಕ ಸಂವೇದನೆಯ ದನಿ ಊರ್ಜಿತವಿತ್ತು. ಅಭಿವ್ಯಕ್ತಿಯೂ ಶಕ್ತಿಯುತವಾಗಿತ್ತು. ನೆನಪಿನಲ್ಲಿ ಸುಳಿಯಬಲ್ಲ ಉಕ್ತಿಗಳು ಹೇರಳವಾಗಿದ್ದವು. ಆದರೂ ಅಲ್ಲಲ್ಲಿ ಇಲಿಯಟ್ ಮತ್ತು ಇನ್ನಿತರ ಕವಿಗಳ ಪ್ರತಿಧ್ವನಿಗಳೂ ಕೇಳಿ ಬರುತ್ತಿದ್ದವು. ಆದರೆ ಕೇವಲ ಖಾಸಗಿ ಬದುಕಿನ ಸಂಪರ್ಕಗಳ ಹಾಗೂ ಖಾಸಗಿ ಹಾಸ್ಯದ ಉಕ್ತಿಗಳ ಹಾಗೂ ಸಂದರ್ಭಗಳ ಬಳಕೆ ತುಸು ಹೆಚ್ಚಾಗಿ ಸಂವಹನ ಬಿಗಿ ಆಗುವಂತಿತ್ತು. ವ್ಯಾಕರಣದಂತೆಯೂ ಅಧ್ಯಾಹಾರವಾದ ಪದಪವಣಿಕೆ ಮತ್ತು ಅಂದು ಒಡೆನ್‌ನ ಆಸಕ್ತಿಯ ವಿಷಯವಾದ ಮನೋವಿಶ್ಲೇಷಣಾತ್ಮಕ ಲೇಖನದ ಪರಿಣಾಮ-ಇವು ಕವನದ ದುರೂಹತೆಗೆ ಕಾರಣವಾಗಿದ್ದವು. ಇದೂ ಅಲ್ಲದೆ ಅವನ ಕವಿಮಿತ್ರ ಕ್ರಿಸ್ಟಫೊರ್ ಇಷರ್‌ವುಡ್ (Christsper Isherwood) ಅಂಸಂತೆ, ಒಡೆನ್‌ನಿಗೆ ಒಂದು ಚಟವಿತ್ತು. ಅವನ ಗೆಳೆಯರು ನಿಂದಿಸಿದ ಕವನಗಳಿಂದಲೇ ಅಲ್ಲಲ್ಲಿಯ ಸಾಲುಗಳನ್ನು ಆಯ್ದುಕೊಂಡು ಹೊಸಕವನಗಳನ್ನು ರಚಿಸುವದು. ಇವೆಲ್ಲ ಆ ಪ್ರೌಢಿಮೆಯ ಪ್ರಕಟಣೆಯ ಕುಂದುಗಳಾಗಿದ್ದವು. ಆದರೂ ಅಲ್ಲಿಯ ಶಬ್ದಗಳ, ರೂಪಕಗಳ ಕುರಿತ ಸ್ಪಂದನ ಹೆಚ್ಚಿನ ಸಂಘಟನೆ ಮತ್ತು ಆಳದ ನಿರ್ವಹಣೆ ಪಡೆದರೆ ಆ ಕೃತಿಯು ಇನ್ನೂ ಸಂಸ್ಮರಣೀಯವಾಗಬಹುದಿತ್ತು.

ಒಡೆನ್‌ನ ಕಾವ್ಯದ ವಸ್ತುಗಳು ಅವನ್ನು ಆಡಳಿಸುವ ರೀತಿ ಹೊಸದಾಗಿದ್ದವು. ಲವಲವಿಕೆಯವೂ ಇದ್ದವು. ಆದರೆ ಅದರಲ್ಲಿ ಅಪರಿಪಕ್ವತೆ, ಒಂದು ಕಿಶೋರಭಾವವಿತ್ತು. ಅವುಗಳಲ್ಲಿ ಒಂದು ದೈವಗೇಡಿನಾಗರಿಕತೆಯ ಭಾವವಿತ್ತು. ಅವನ 'Paid on Both Sides' ಸಂಕಲನದಲ್ಲಿ ಧೀರೋದಾತ್ತ ಮತ್ತು ಆಧುನಿಕ ಪ್ರಜ್ಞೆಗಳು ಕಲಬೆರಕೆ ಆಗಿವೆ. ಕೆಲಸಲ ಕಾವ್ಯವು ವಿಶ್ವವ್ಯಾಪಿ ಸಾರ್ವತ್ರಿಕ ದುರಂತದ ಭಾವವನ್ನು

ಆಳವಾಗಿ ತಟ್ಟುತ್ತದೆ. ಇದರ ಕೆಲವು ಅಂಶಗಳಲ್ಲಿ ಪ್ರೌಢಿಮೆ-ಪರಿಪಕ್ವತೆ ಮತ್ತು ಅಸಾಮಾನ್ಯ ಪ್ರಾಮಾಣಿಕ-ಪ್ರಾಂಜಲತೆಗಳಿವೆ.

೧೯೩೨ ರಲ್ಲಿ ಬಂದ'Orators' ಸಂಕಲನದಲ್ಲಿ ಕವಿಯ ವಿಷಯ ಮತ್ತು ಪಾತಳಿಯ ವ್ಯತ್ಯಾಸಪಡುವ 'ಗುಣ'ವು ಹೆಚ್ಚು ಕಾಣಿಸಿಕೊಂಡಿದೆ. ಇಲ್ಲಿ ಒಳ್ಳೆಯ ಭಾವಗಳೂ ಅಪೂರ್ಣವಾಗಿ ಮೂಡಿ ಬಂದಿವೆ. (ಇದು ಕವಿಯದೇ ಅಂಬೋಣ). ಆದಿ-ವ್ಯಾಧಿಗಳ ಎಲ್ಲ ಉಗಮ ಮಾನವನ ಮನಸ್ಸೇ. ಇದು ವ್ಯಕ್ತಿಯಲ್ಲಿಯೂ ಸಮಾಜ ದಲ್ಲಿಯೂ ನಿಜ. ಇಲ್ಲಿ ಬರುವ ಪ್ರತಿಮೆಗಳ ಸಂಕೀರ್ಣತೆ-ಸೈನಿಕದಾಳಿ, ಒಳಸಂಚು, ಬಂಡಾಯ, ಸತ್ವದ ಅಸ್ಥಿರೀಕರಣ (ಜಡಭಾವ)-ಇವೆಲ್ಲ ಕೌತುಕಕ್ಕಾಗಿಯೇ ಬಂದಂತೆ ಅನಿಸುತ್ತದೆ. ಒಡೆನ್ನನ ಕವಿಮನಸ್ಸು ಶಾಲೆಯ ವಿದ್ಯಾರ್ಥಿ ಕುತೂಹಲವನ್ನು ತಾಳಿದಂತೆ.

ಮುಂದಿನ ಹಂತದಲ್ಲಿ ಕವಿಯು ರಾಜಕೀಯನಾಗುತ್ತಾನೆ. ಇಲ್ಲಿ ಆತ ಜನಪ್ರಿಯ ಹಗುರಾದ ವೃತ್ತಗಳನ್ನು ಬಳಸುತ್ತಾನೆ-ಕವನಗಳು ಹೆಚ್ಚಿನ ಜನರನ್ನು ಮುಟ್ಟ ಬಹುದೆಂದು. ಜತೆಗೆ ಈಗ ಆತ ರಂಗಭೂಮಿಗಾಗಿಯೂ ಬರೆದಿದ್ದಾನೆ. ಆಗ ಬರೆದದ್ದು 'The Dance of Death' (೧೯೩೩). ಇದರಲ್ಲಿ ನೇರವಾದ ಮಾರ್ಕ್ಸವಾದವಿದೆ. ಬರೆ ಶಬ್ದ ಜೋಡಣೆಯ 'ಅಗತ್ಯ'ವಿದೆ. ಇಂದಿನ ಯಾವ ಕವನ ಸಂಕಲನವೂ ಇದನ್ನು ಎತ್ತಿಕೊಂಡಿಲ್ಲ. ಒಡೆನ್ ನಾಟಕದಲ್ಲಿ ಕಾವ್ಯವನ್ನು ಪ್ರಯೋಗಿಸುವಾಗ ಅದು ಕೆಲಸಲ ಶೇಕ್ಸಪಿಯರನ ಅನುಕರಣವಾಗಿ ಭಾರ ವೆನಿಸುತ್ತದೆ. ಅದು ವಿಮರ್ಶೆಗೆ ಒಳನೋಟಕ್ಕೆ ತಾಳುವದಿಲ್ಲ.

ಒಬ್ಬ ಗಂಭೀರ ಕವಿ ಮಂದಿಮೆಚ್ಚುವ ಹಾಡುಗಬ್ಬಕ್ಕೆ ಇಳಿದರೆ ಅನೇಕಸಲ ಅವನ ಪ್ರಕೃತಿಯು ತಾನು ಕೆಲಸಕ್ಕೆ ಆಯ್ದುಕೊಂಡ ಪರಿಮಿತಿಗೆ ಒಗ್ಗಬೇಕಾಗುತ್ತದೆ. ಅದರ ಜಾಡಿಗೆ ಜೋಡಿಸಿಕೊಳ್ಳಬೇಕಾಗುತ್ತದೆ. ಸವೆದ ಪ್ರಾಸಗಳು ಸಡಿಲಾದ ವೃತ್ತಗಳ ಲಯಗಳೂ ಕವಿಯ ವಿಶೇಷ ಹಾಗೂ ಹೆಚ್ಚು ಶಿಷ್ಟ ಅರ್ಥಗಳನ್ನು ಭಾವನೆಗಳನ್ನು ಆ ಭಾಷೆ ನಿರ್ವಹಿಸಲಾರವು. ಅದೊಂದು ಬಿಟ್ಟಿಯ ಕಗ್ಗವಾಗುತ್ತದೆ. ಅಂಥ ಆಪತ್ತು ಒಡೆನ್ನನ ಪಾಲಿಗೂ ತಪ್ಪಲಿಲ್ಲ. ಇಂಥ ಕವನಗಳ ಚಪಲ-ಚದುರು ಗಳೂ ಆಪ್ಯಾಯಮಾನವಾಗುವದಿಲ್ಲ.

ಇಂಥ ಕೃತಿಗಳ 'ಕರ್ಮಕೌಶಲ' ಮೇಲ್ಪಾತಳಿಯದು. ಇದರ ಸಲೀಸಾದ ಲಾಲಿತ್ಯವೂ ಅನೇಕ ಸಲ ಕವಿಯ ಹೊಣೆಗೇಡಿತನವನ್ನೂ ಆಳದ ಸತ್ವ-ಸಂಘಟನೆಯ ಕೊರತೆಯನ್ನು ಮುಚ್ಚುವ ಅಗ್ಗದ ಬಿನ್ನಾಣವಾಗಿ ಕಾಣುತ್ತದೆ.

ಈ ತಾಂತ್ರಿಕ ಕೌಶಲ್ಯ ಮತ್ತು ಲಾಲಿತ್ಯಗಳೇ ಉತ್ತಮ ಕವಿಗೆ ತಾವರೆಯ ಬಳ್ಳಿಗಳಂತೆ ಕಾಲ್ತೊಡಕೇ ಆಗುತ್ತವೆ. ಕವಿತೆಯ ಹಿಂದೆ ಕವಿತೆ ಶಕ್ತಿಯುತವಾದ, ಪ್ರಭಾವಮಯವಾದ ಸಾಲುಗಳನ್ನು ಕಣ್ಣುಕುಕ್ಕಿಸುವಂತೆ ತಂದರೂ, ಅವು ತಮ್ಮ ಹೆಚ್ಚಳದಿಂದಲೇ ಅಯಶಸ್ವಿಯಾಗುವ ಭಯವಿದೆ-ಲಾಡುವಿನಲ್ಲಿ ದ್ರಾಕ್ಷಿಗಳೇ ಹೆಚ್ಚಾದಂತೆ. ಇದು ಹಲವು ಮೊಲಗಳನ್ನು ಒಮ್ಮೆಲೆ ಬೇಟೆಯಾಡುವಂತೆ. ಒಡೆನ್ ಒಂದು ಪ್ರಸಂಗದ ಹಲವು ಸಾಧ್ಯತೆಗಳನ್ನು ಒಮ್ಮೆಲೇ ಅಳವಡಿಸಿಕೊಳ್ಳಲು ಹೆಣಗುತ್ತಾನೆ. ಶ್ಲೇಷೆ, ಸೂಕ್ತಿ, ವರ್ಣನೆ, ಅಲಂಕರಣ, ಮಾತಿನ ಮೋಡಿಯನ್ನೆಲ್ಲ ಕೂಡಿಯೇ ಸಾಧಿಸುವ ಮೋಹದ ಫಲ ಅಸಂಗತ ಅಪ್ರಸ್ತುತ ವಿವರಣೆ ವ್ಯಾಖ್ಯಾನ ವಾಗಿ ಬಿಡುತ್ತದೆ. ಒಂದು ಸಾಮಾನ್ಯ ವೃತ್ತಿಯನ್ನೋ ಭಾವವನ್ನೋ ಬೆಳಗಲಿಕ್ಕೆ ವಿವರ ವಿವರವಾದ ಪ್ರತ್ಯೇಕ ವರ್ಣನೆಗಳ ಬಣ್ಣಣೆಯು ಒಂದು ಪರಿವಿಡಿಯೇ ಆಗಿ ಬಿಡುತ್ತದೆ.

ಒಡೆನ್‌ನ ಇನ್ನೊಂದು ಲಕ್ಷಣವೆಂದರೆ ವರ್ಣನೆಯ ಸಂದರ್ಭದಲ್ಲಿ ಈ ಕವಿಯು ಒಂದು ಸಂಗತಿಯ ಕುರಿತಾದ ಎಲ್ಲ ಅರ್ಥ ಭಾವದ ಹೆಚ್ಚಿನ ಅಂಶವನ್ನೆಲ್ಲ ಅದರ ವಿಶೇಷಣದಲ್ಲಿ ತುಂಬುತ್ತಾನೆ. ಅಂದಾಗ, ಕವಿ ಒಂದು ರೀತಿಯಾಗಿ ಸಂಗತಿಯ ಕುರಿತ ತನ್ನ ಸಂದಿಗ್ಧವೃತ್ತಿಯನ್ನು ಅದರ ಕುರಿತಾದ (ವಿಶೇಷಣ) ಶಬ್ದಗಳಲ್ಲಿ ವ್ಯಕ್ತಮಾಡುವ ರೀತಿಯದು. ಈ ವಿಶೇಷಣ ರೂಪದ ಟೀಕೆ ಬುದ್ಧಿ ಮತ್ತು ವ್ಯಂಗ್ಯಗಳ ಅಂಶವನ್ನು ಅನುಭವದೊಂದಿಗೆ ಹೊಸ ಸಂಬಂಧದಲ್ಲಿ ತರುವ ಚಿನ್ನಾಟವಿದು. ಇಂಥಲ್ಲಿ ವಿಶೇಷಣ ಅರ್ಥಸಂಪನ್ನತೆಯು ವಾಕ್ಯದ ಆಖ್ಯಾತ ಭಾಗ [Predicute] ದ ಜಡತನಕ್ಕೆ ಕಾರಣವೂ ಆಗುವಂತಿದೆ, ಇರಲಿ.

ಒಡೆನ್ ಕೆಲವು ಕವನಗಳಲ್ಲಿ ಯೇಟ್ಸನಿಗೆ-ಋಣಿಯಾದಂತಿದೆ. ಆದರೆ ಇದು ಬಹುಶಃ ಪ್ರಜ್ಞಾಪೂರ್ವಕವಾದ ಕ್ರಿಯೆಯಲ್ಲ. ಈ ಕವಿಗೆ ಇನ್ನೊಂದು ಚಟವಿದೆ. ತನ್ನ ಸಂಕಲನಗಳ ಮರುಮುದ್ರಣವಾಗುವಾಗೆಲ್ಲ ಈತ ಕವನಗಳಲ್ಲಿ ಆಗಾಗ್ಗೆ ಮೂಲ ಪಾಠದಲ್ಲಿಯೇ ಹಲವಾರು ಬೇರ್ಪಾಟ-ತಿದ್ದುಪಡಿ, ಹೆಚ್ಚು ಕಡಿಮೆ ಮಾಡುತ್ತಿರುತ್ತಿದ್ದ, ಇದೊಂದು ಓದುಗರಿಗೆ ಹೇಗೋ ವಿಮರ್ಶಕರಿಗೂ ತಲೆಬೇನೆ.

ಕವಿ ಒಡೆನ್ ಒಂದು ಪ್ರಶ್ನೆಯನ್ನು ಉಂಟುಮಾಡುತ್ತಾನೆ. ಇಂದಿನ ಅನ್ಯೋನ್ಯ ಸಂಬಂಧಗಳ ನಡುವೆ ಕವಿ, ಅವನ ವಿಮರ್ಶಕರು ಮತ್ತು ಸಾರ್ವಜನಿಕರು ಇವರ ಸಂಬಂಧದ ಒಂದು ವಿಪಾಕವೆಂದರೆ ನಿಜವಾದ ಪ್ರತಿಭೆ ತನ್ನ ಪೂರ್ಣ ಎತ್ತರಕ್ಕೆ ಬೆಳೆಯುವದು ಸಾಧ್ಯವಾಗುತ್ತಿಲ್ಲವೇಕೆ ? ಈ ಮೂರೂ ಅಭಿಪ್ರಾಯಗಳ ಒಂದು ಹೊಂದಾಣಿಕೆ ಸುಲಭವಾಗುವದಿಲ್ಲವೇಕೆ ? ●

ಮನುಷ್ಯನ ಆಸ್ಥೆಗೆ ಯೋಗ್ಯವಾದುದೆಲ್ಲವೂ, ಮನುಷ್ಯರಾಗಿ ಬಿಚ್ಚಿಕೊಳ್ಳಲು ನಮಗೆ ನೆರವಾಗಬಲ್ಲುದೆಲ್ಲವೂ ಗೌರೀಶ ಸಾಹಿತ್ಯಕ್ಕೆ ಮೂಲವಸ್ತುವಾಗಿವೆ. ಇಲ್ಲಿ ಕೆಲಸ ಮಾಡಿರುವುದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗುತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆಯಲ್ಲ.

ಕೇವಲ ಬುದ್ಧಿ ಆಗಿದ್ದದ್ದು ಮನಸ್ಸಾಗಿ, ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವದರ ಕಡೆಗೆ ಗೌರೀಶ ಸಾಹಿತ್ಯದ ತುಡಿತವಿದೆ ಎನ್ನುವುದೇ ಅದರ ಹೆಚ್ಚುಗಾರಿಕೆ ಆಗಿದೆ. ಮಾನವ ವಿಕಾಸದ ಪರಮೋಚ್ಚ ಮೌಲ್ಯಗಳಾದ 'ಸ್ವಾತಂತ್ರ್ಯ' ಮತ್ತು 'ನೈತಿಕತೆ' ಪ್ರಜ್ಞಾವಂತ ಸ್ಥಿತಿಯಲ್ಲಷ್ಟೇ ಸಾಧ್ಯವೆಂಬುದೇ ಅದರ ಮುಖ್ಯ ನಂಬಿಕೆಯಾಗಿದೆ.

'ಪ್ರಶ್ನೆ' ಸ್ವತಃ ತಾನೇಪ್ರಜ್ಞೆಯಲ್ಲ, ಆದರೆ ಪ್ರಜ್ಞೆಯಸ್ಥಿತಿ ಮುಟ್ಟಿ ಬೆಳಕು ಕಾಣುವ, ತಾನೇ ಬೆಳಕಾಗುವ ಅಭೀಪ್ಸೆವುಳ್ಳದ್ದು. ಗೌರೀಶ ಸಾಹಿತ್ಯದ ಅಭೀಪ್ಸೆ ಚಿಂತನವೂ ಅದೇ. ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಭೂಗತ ತಡಕಾಟ ಪ್ರಜ್ಞೆಯ ಹಂಬಲವಾಗುತ್ತ, ಬೆಳಕಿನ ಹಂಬಲವಾಗುತ್ತ ಉತ್ತರೋತ್ತರವಾಗಿದೆ. ವಿಚಾರವಾದಿಯೊಬ್ಬ, ಶ್ರೇಷ್ಠ ಮಾನವತಾವಾದಿಯಾಗುವ ಈ ಅಂಥ ಬಗೆ ಕನ್ನಡದಲ್ಲಿ ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು.

ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆ ಒಯ್ಯುವ ಹಂಬಲಹೊತ್ತು ಹುಟ್ಟಿ ಬಂದ ಸಂಗತಿಯೊಂದು ತಾನೇ ಕತ್ತಲಲ್ಲಿ ಅಡಗಿರಬೇಕಾಗಿ ಬಂದಂಥ ದುರಂತ ಇನ್ನೊಂದಿರಲಾರದು ಎನ್ನುವುದನ್ನು ಒಪ್ಪಿಕೊಂಡರೆ ಈ 'ಪ್ರಕಾಶನ'ದ ಪ್ರಚಂಡ ಜವಾಬ್ದಾರಿಯ ನಿಜವಾದ ಮಹತ್ವ ನಮಗೆ ಹೊಳೆಯಬಹುದು.

– ಯಶವಂತ ಚಿತ್ತಾಲ